ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೭

# ಶ್ರೀ ಲಲಿತೋಪಾಖ್ಯಾನಂ

(ಕನ್ನಡದ ಅನುವಾದ ಸಹಿತ)

ಅನುವಾದಕ

ನೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



೧೯೪೩

# ಅರಿಕೆ

ನಮ್ಮನ್ನಾಳುವ ಮಹಾಸ್ವಾಮಿಯವರಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರ ಅಪ್ಪಣೆಯ ಮೇರೆಗೆ, ಸಮಸ್ತ ಜನರಿಗೂ ಪಠನ ಪಾರಾಯಣಾದಿಗಳಿಗೆ ಅನುಕೂಲವಾಗಬೇಕೆಂಬ ಸದುದ್ದೇಶದಿಂದ ಬ್ರಹ್ಮಾಂಡ ಪುರಾಣಾಂತರ್ಗತವಾದ ಈ ಶ್ರೀಲಲಿತೋಪಾಖ್ಯಾನವು ಕನ್ನಡದ ಸರಳಾನುವಾದದೊಡನೆ ಪ್ರಕಟವಾಗಿರುತ್ತದೆ.

ಹಲವು ಮಾತೃಕೆಗಳ ನೆರವಿನಿಂದ ಸಾಧ್ಯವಾದಮಟ್ಟಿಗೆ ಮೂಲವನ್ನು ಪರಿಶೋಧಿಸಿಕೊಂಡು ನಾನು ಈ ಗ್ರಂಥವನ್ನು ಯಥಾಮತಿ ಕನ್ನಡದಲ್ಲಿ ಅನುವಾದಮಾಡಿರುತ್ತೇನೆ. ಮಹಾಸ್ವಾಮಿಯವರ ಅಪ್ಪಣೆಯ ಮೇರೆಗೆ ಪ್ರಕಟವಾಗಿರುವ ಈ ಗ್ರಂಥವು ಕನ್ನಡಿಗರೆಲ್ಲರಿಗೂ ಉಪಯೋಗವಾಗಿ ಇದರ ಪ್ರಕಟನೆಯ ಉದ್ದೇಶವು ಸಾರ್ಥಕವಾಗಲೆಂದು ನಾನು ಶ್ರೀಲಲಿತಾಪರಮೇಶ್ವರಿಯಲ್ಲಿ ಮೊರೆಯಿಡುತ್ತೇನೆ. ಅಲ್ಲದೆ, ಇಂಥ ಸೇವಾವಕಾಶವನ್ನು ಕಲ್ಪಿಸಿಕೊಟ್ಟು ನನ್ನನ್ನು ಕೃತಾರ್ಥನನ್ನಾಗಿ ಮಾಡಿರುವ ನಮ್ಮನ್ನಾಳುವ ಮಹಾಸ್ವಾಮಿಯವರಿಗೆ ರಾಜಭಕ್ತಿಪುರಸ್ಸರವಾದ ನನ್ನ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ.

ಶ್ರೀ ಲಲಿತೋಪಾಖ್ಯಾನದ ಮುದ್ರಿತವಾದ ಮತ್ತು ಅಮುದ್ರಿತವಾದ ಮಾತೃಕೆಗಳ ವಿಚಾರದಲ್ಲಿ ಒಂದೆರಡು ಮಾತುಗಳನ್ನು ಬಿನ್ನವಿಸಬೇಕಾಗಿದೆ. ನಾನು ಉಪಯೋಗಿಸಿಕೊಂಡಿರುವ ಮಾತೃಕೆಗಳು ನಾಲ್ಕು: ೧. ಪರಂಪರೆಯಾಗಿ ನಮ್ಮ ಮನೆಯಲ್ಲಿ ಪಾರಾಯಣಕ್ಕಾಗಿ ಉಪಯೋಗಿಸುತ್ತಿರುವ ಲಿಖಿತ ಪ್ರತಿ. (ಇದು ಸುಮಾರು ಒಂದುನೂರು ವರ್ಷದ್ದು.) ೨. ಮುಂಬಯಿ ಶ್ರೀ ವೆಂಕಟೇಶ್ವರ ಸ್ಟೀಂ ಪ್ರೆಸ್ಸಿನ ಪ್ರಕಟನೆ (ಬ್ರಹ್ಮಾಂಡ ಪುರಾಣ—೧೯೧೨). ೩. ಅದೇ ಮುದ್ರಣಾಲಯದಲ್ಲಿ ಪ್ರತ್ಯೇಕವಾಗಿ ಅಚ್ಚಾಗಿರುವ ಶ್ರೀಲಲಿತೋಪಾಖ್ಯಾನ ಭಾಗ. ೪. ಮುಂಬಯಿ ನಿರ್ಣಯ ಸಾಗರ ಮುದ್ರಣಾಲಯದ ಪ್ರಕಟನೆ (೧೯೨೯).

ಲಿಖಿತ ಪ್ರತಿಯಲ್ಲಿ ಮೂವತ್ತೆರಡು ಅಧ್ಯಾಯಗಳು ಮಾತ್ರವೇ ಇರುತ್ತವೆ. ಈ ಅಧ್ಯಾಯ ಸಂಖ್ಯೆಗೂ 'ದ್ವಾತ್ರಿಂಶಿಕಾಶಾಸ್ತ್ರ' ಎಂದು

ಈ ಗ್ರಂಥದಲ್ಲಿಯೇ ಅನೇಕ ಸಲ ಉಕ್ತವಾಗಿರುವ ಹೆಸರಿಗೂ ತಾಳೆಯಾಗುತ್ತದೆ. ಫಲಶ್ರುತಿಯಲ್ಲಿ,

'ತಸ್ಮಾದ್ದ್ವಾತ್ರಿಂಶಿಕಾಶಾಸ್ತ್ರಂ ಬ್ರಹ್ಮಾಂಡೋತ್ತರ ಕೀರ್ತಿತಂ'
'ಪಠನ್ ದ್ವಾತ್ರಿಂಶಿಕಾಪಾಠಂ ಸರ್ವಪಾಪೈಃ ಪ್ರಮುಚ್ಯತೇ'
'ದ್ವಾತ್ರಿಂಶಿಕಾಯಾ ಅಸ್ಯಾಸ್ತು ಸಕೃದಾವರ್ತನಾದಪಿ ।
ಚಂಡಿಕಾಕೋಟಿಪಾಠಸ್ಯ ಸದೃಶಂ ಫಲಮುದ್ಭವೇತ್ ॥'

ಎಂದು ಮುಂತಾಗಿ ಹಲವು ಬಾರಿ 'ದ್ವಾತ್ರಿಂಶಿಕಾಶಾಸ್ತ್ರ' ಎಂಬ ಹೆಸರು ಪ್ರಯುಕ್ತವಾಗಿರುತ್ತದೆ.

ಪೂರ್ವದಲ್ಲಿ ಕಾರ್ವೇಟನಗರದಲ್ಲಿಯೂ, ಮದರಾಸಿನಲ್ಲಿಯೂ ಅಚ್ಚಾಗಿದ್ದ ತೆಲುಗುಲಿಪಿಯ ಪುಸ್ತಕಗಳಲ್ಲಿಯೂ ಮುವತ್ತೆರಡೇ ಅಧ್ಯಾಯಗಳಿದ್ದುವೆಂದು ಅವುಗಳನ್ನು ನೋಡಿರುವ ನನ್ನ ಹಿರಿಯರೂ ಮಿತ್ರರೂ ನನಗೆ ಹೇಳಿರುತ್ತಾರೆ. ಆದುದರಿಂದ ಲಿಖಿತಪ್ರತಿಯೇ ಸರಿಯಾದ ಮಾತೃಕೆಯೆಂದು ನಾನು ಗ್ರಹಿಸಬೇಕಾಯಿತು.

ಈ ಲಿಖಿತ ಪ್ರತಿಯಲ್ಲಿ, ಪ್ರತಿ ಅಧ್ಯಾಯದ ಆರಂಭದಲ್ಲಿಯೂ ಹಿಂದಿನ ಅಧ್ಯಾಯದ, ಕೆಲವೆಡೆ ಅದೇ ಅಧ್ಯಾಯದ ಕಥಾಸೂಚನೆಯನ್ನೊಳಕೊಂಡು ಸ್ತೋತ್ರರೂಪವಾಗಿರುವ ಶ್ಲೋಕಗಳಿರುತ್ತವೆ. ಅವು ಗಳಿತವಾಗಿರುವ ಕಡೆಯಲ್ಲಿಯೂ, ಅವು ಇಲ್ಲದೆಯೇ ಅಧ್ಯಾಯವು ಪ್ರಾರಂಭವಾಗುವ ಕಡೆಯಲ್ಲಿಯೂ ಅವುಗಳನ್ನು ತಿದ್ದಿ ಅಥವಾ ಹೊಸದಾಗಿ ರಚಿಸಿ ಸೇರಿಸಿರುತ್ತೇನೆ. ಈ ಶ್ಲೋಕಗಳನ್ನು ಮೂಲದಿಂದ ಬೇರ್ಪಡಿಸಿ ಸಣ್ಣಕ್ಷರದಲ್ಲಿ ಕೊಟ್ಟಿದೆ.

ದೇವನಾಗರೀಲಿಪಿಯಲ್ಲಿ ಅಚ್ಚಾಗಿರುವ ಮುಂಬಯಿಯ ಪ್ರತಿಗಳಲ್ಲೆಲ್ಲಾ ಅಧ್ಯಾಯಕ್ರಮವು ವ್ಯತ್ಯಾಸವಾಗಿರುವುದು ಮಾತ್ರವಲ್ಲದೆ ಅಧ್ಯಾಯಸಂಖ್ಯೆಯು ನಲ್ವತ್ತಕ್ಕೂ ಏರಿದೆ. ಆದಕಾರಣ ಇಲ್ಲಿ ಸ್ವಲ್ಪ ಪ್ರಕ್ಷಿಪ್ತಭಾಗವಿರಬಹುದೆಂದು ಊಹಿಸಲು ಅವಕಾಶವುಂಟು.

ನಿರ್ಣಯಸಾಗರದ ಪ್ರತಿಯಲ್ಲಿ, ಶ್ರೀ॥ ಟಿ. ಎನ್. ಕೆ. ತಿರುಮುಲಪಾಡ್, ಬಿ.ಎ. ಅವರು ತಮಗೆ ದೊರೆತ ಎರಡು ಪ್ರತಿಗಳಲ್ಲಿ ಒಂದು, ಮೂವತ್ತನಾಲ್ಕು ಅಧ್ಯಾಯಗಳದೆಂದೂ, ಇನ್ನೊಂದು, ನಲವತ್ತು ಅಧ್ಯಾಯಗಳದೆಂದೂ — ಇದು ಅಷ್ಟು ಶುದ್ಧವಾದುದಲ್ಲವೆಂದೂ— ಅಭಿಪ್ರಾಯ ಪಟ್ಟಿರುತ್ತಾರೆ.

**ಪೂಜಾವಿಧಾನಮಖಿಲಂ ಶಾಸ್ತ್ರೋಕ್ತೇನೈವ ವರ್ತ್ಮನಾ ।**
**ಖಂಡಾಂತರೇ ವದಿಷ್ಯಾಮಿ ತದ್ವಿಲಾಸಂ ಮಹಾದ್ಭುತಂ ॥**

(ಫಲಶ್ರುತಿಯಲ್ಲಿಯೂ ಹೀಗೆಯೇ ಇದೆ;

**ಪೂಜಾವಿಧಾನಮಖಿಲಂ ಶಾಸ್ತ್ರೋಕ್ತೇನೈವ ವರ್ತ್ಮನಾ ।**
**ಖಂಡಾಂತರೇ ವದಿಷ್ಯಾಮಿ ತದಾಕರ್ಣಯ ಕುಂಭಜ ॥)**

ಎಂದು ಗ್ರಂಥವು ಮುಗಿದು ಫಲಶ್ರುತಿಯಿರಬೇಕಾದುದರ ಬದಲು, ಅಲ್ಲಿಗೇ ಮೂವತ್ತನಾಲ್ಕು ಅಧ್ಯಾಯಗಳಾಗಿ ಗ್ರಂಥವು ಬೆಳೆದು, ಜೊತೆಗೆ ಕೆಳಗೆ ಸೂಚಿಸಿರುವಂತೆ ಆರು ಅಧ್ಯಾಯಗಳ ಹೆಚ್ಚಿನ ವಿಷಯಗಳನ್ನೊಳಕೊಂಡಿದೆ:

೧. ಕಾಂಚೀಮಾಹಾತ್ಮ್ಯವರ್ಣನಂ; ೨. ಶ್ರೀಮತ್ತ್ರಿಪುರಸುಂದರ್ಯಾ ದಶರಥಾಯ ಪುತ್ರವರದಾನಂ; ೩. ಶ್ರೀಯಂತ್ರಪ್ರಕಾರೋಪಾಸನಾದಿ ಕಥನಂ; ೪. ಮುದ್ರಾಲಕ್ಷಣ ಪ್ರಕಾರಾದಿ ಕಥನಂ; ೫. ದೇವೀ ದರ್ಶನದೀಕ್ಷಾವರ್ಣನಂ; ೬. ಮಂತ್ರೋಪಾಸನಪ್ರಕಾರಕಥನಂ.

ಇವಾದಮೇಲೆ ಫಲಶ್ರುತಿಯ ಶ್ಲೋಕಗಳಿವೆ.

ಇಷ್ಟೇ ಅಲ್ಲದೆ, ನಿರ್ಣಯಸಾಗರದ ಪ್ರತಿಯನ್ನು ಬಿಟ್ಟರೆ, ಉಳಿದೆರಡು ಮುದ್ರಿತಪ್ರತಿಗಳಲ್ಲಿ ಸ್ಖಾಲಿತ್ಯಗಳೂ ಹೇರಳವಾಗಿವೆ. ಈ ಎಲ್ಲ ಕಾರಣಗಳಿಂದ ನಾನು ನಮ್ಮ ಮನೆಯ ಲಿಖಿತಪ್ರತಿಯನ್ನೇ ಅನುವಾದಕ್ಕೆ ಬಳಸಿಕೊಂಡಿದ್ದೇನಾದರೂ, ಇದರಲ್ಲಿಯೂ ಸ್ಖಾಲಿತ್ಯಗಳಿರುವುದರಿಂದ ಅಚ್ಚಾದ ಆ ಗ್ರಂಥಗಳಿಂದಲೂ ಶುದ್ಧಪಾಠಕ್ಕೆ ಬಹಳ ಸಹಾಯವನ್ನು ಪಡೆದಿದ್ದೇನೆ. ಶ್ಲೋಕಸಂಖ್ಯೆಯನ್ನು ಅನುವಾದದ ಸೌಕರ್ಯಕ್ಕಾಗಿ ಅನ್ವಯಾನುಸಾರ ವಿಭಾಗಮಾಡಿಕೊಂಡಿದ್ದೇನೆ.

ಶ್ರೀಲಲಿತೋಪಾಖ್ಯಾನವು, ಸುಪ್ರಸಿದ್ಧವಾಗಿರುವುದೂ, ಹಲವರು ಶಿಷ್ಟರು ಪೂಜೆಗಾಗಿ ಉಪಯೋಗಿಸುತ್ತಿರುವುದೂ ಆದ ಶ್ರೀಲಲಿತಾ ಸಹಸ್ರನಾಮದ ಪ್ರತಿನಾಮಕ್ಕೂ ಕಥಾಸಂದರ್ಭವನ್ನೂ, ಅರ್ಥಸೂಚನೆಯನ್ನೂ ಒದಗಿಸಿಕೊಡುವ ಪರಮಪವಿತ್ರಗ್ರಂಥವಾಗಿದೆ. ಇದು ದೇವೀ ಸಪ್ತಶತೀ, (ದುರ್ಗೋಪಾಖ್ಯಾನ?) ದೇವೀಮಾಹಾತ್ಮ್ಯ ಮೊದಲಾದ ಗ್ರಂಥಗಳಂತೆಯೇ ಪಠನೀಯವಾದುದು ಮಾತ್ರವಲ್ಲದೆ ಜಾಪಕೋತ್ತಮರಿಗೆ ಅನಂತಫಲದಾಯಕವಾದುದೂ ಆಗಿರುತ್ತದೆಯೆಂಬ ವಿಚಾರವನ್ನು ಫಲಶ್ರುತಿಯಲ್ಲಿ ಶ್ರೀ ಹಯಗ್ರೀವ ಮುನಿಗಳೇ ವಿಸ್ತಾರವಾಗಿ ಅಪ್ಪಣೆ ಕೊಡಿಸಿರುವುದರಿಂದ ಇಲ್ಲಿ ಹೆಚ್ಚಾಗಿ ಪ್ರಸ್ತಾಪಿಸಬೇಕಾಗಿಲ್ಲ.

ಈ ಗ್ರಂಥಪ್ರಕಟನೆಯ ಕಾರ್ಯದಲ್ಲಿ ನನಗೆ ಬಹುವಿಧವಾಗಿ ಉಪಕರಿಸಿರುವ ಮಹನೀಯರನ್ನೆಲ್ಲಾ ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ನೆನೆಯುತ್ತೇನೆ. ಮೂಲದಲ್ಲಿಯಾಗಲಿ, ಅನುವಾದದಲ್ಲಿಯಾಗಲಿ ಇರಬಹುದಾದ ಲೋಪದೋಷಗಳನ್ನು ಸಹೃದಯರು ಕೃಪೆಯಿಟ್ಟು ತಿಳಿಸಬೇಕಾಗಿ ಬೇಡುತ್ತೇನೆ. ಅವರ ಈ ಮಹೋಪಕೃತಿಯನ್ನು ಕೃತಜ್ಞತೆಯಿಂದ ನೆನೆದು ತಿದ್ದಿಕೊಳ್ಳಲು ಸರ್ವದಾ ನಾನು ಸಿದ್ಧನಾಗಿರುತ್ತೇನೆಂದು ವಿನಯದಿಂದ ಬಿನ್ನವಿಸಿಕೊಳ್ಳುವೆನು.

ಬೆಂಗಳೂರು :
ಸ್ವಭಾನು ಸಂ॥ ಆಷಾಢ ಶುಕ್ಲ
ಪೂರ್ಣಿಮಾ, ಸ್ಥಿರವಾಸರಃ
೧೭–೭–೧೯೪೩

**ನೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

ಪುಟ ಸಂಖ್ಯೆ

॥ ಶ್ರೀಃ ॥

**ಅಥ ಮಂಗಲಾಚರಣಶ್ಲೋಕಃ**

**ಅಸ್ತು ವಃ ಶ್ರೇಯಸೇ ನಿತ್ಯಂ ವಸ್ತು ವಾಮಾಂಗಮೈಶ್ವರಂ ।**
**ಯತಸ್ತೃತೀಯೋ ವಿದುಷಾಂ ತುರೀಯಂ ತತ್ಪರಂ ಮಹಃ ॥**

ತಾತ್ಪರ್ಯ

ಶ್ರೀಮತ್ಪರಶಿವನ ವಾಮಾಂಗ ರೂಪವಾಗಿ, ವಿದ್ವಜ್ಜನರಿಗೆ
ಇಷ್ಟಾರ್ಥಗಳನ್ನು ಸಲ್ಲಿಸುವುದಾಗಿ, ಮುಕ್ತಿಯನ್ನು
ದೊರಕಿಸಿಕೊಡುವುದಾಗಿರುವ ಪರಮ ತೇಜೋ
ರೂಪವಾದ ಶ್ರೀ ಲಲಿತಾಪರಮೇಶ್ವರಿ
ಎಂಬ ಪರವಸ್ತುವು ನಿಮಗೆ
ಯಾವಾಗಲೂ
ಶ್ರೇಯಸ್ಸನ್ನುಂಟುಮಾಡಲಿ

॥ ಶ್ರೀಃ ॥

॥ ಶ್ರೀ ಲಲಿತಾಂಬಿಕಾಯೈನಮಃ ॥

## ಅಥ ಶ್ರೀಲಲಿತೋಪಾಖ್ಯಾನ ಪಾರಾಯಣವಿಧಿಃ ಪ್ರಾರಭ್ಯತೇ

ಅಥ ಶಿಷ್ಯಃ ಪ್ರಾತರುತ್ಥಾಯ, ಶ್ರೀಮದ್ಗುರುಂಧ್ಯಾತ್ವಾ, ತತೋ ಬಹಿರ್ವಿನಿರ್ಗತ್ಯ ಶೌಚಾದಿಕಾಃ ಕ್ರಿಯಾಃ ಕೃತ್ವಾಽಗತ್ಯ ಶುದ್ಧೇನೋಷ್ಣೇನ ವಾರಿಣಾ ಸುಸ್ನಾತಃ— ಅಪೋ ನಿಸರ್ಗತಃ ಪೂತಾಃ ಕಿಂಪುನರ್ವಹ್ನಿಸಂಯುತಾಃ । ತಸ್ಮಾದುಷ್ಣೋದಕೇ ಸ್ನಾಯಾತ್ತದಭಾವೇ ಯಥೋದಕಂ ॥ ಇತ್ಯತಃ —ಶುದ್ಧ ವಸ್ತ್ರೇ ಪರಿಧಾಯ, ಆಚಮ್ಯ ಪ್ರಯತಃಸನ್ ಪರಾಂಬಿಕಾಂ ಧ್ಯಾಯನ್, ಊರ್ಧ್ವ ಪುಂಡ್ರಂ ತ್ರಿಪುಂಡ್ರಂ ಯಥಾಚಾರಚಿಹ್ನಂ ವಾ ಭಾಲೇ ಧೃತ್ವಾ, ಶುದ್ಧಾತ್ಮಾ ಸಂಧ್ಯಾವಂದನಮಾಚರೇತ್. ತತಶ್ಚ ಮಾರ್ತಾಂಡಾಯಾರ್ಘ್ಯಂ ಸಮುತ್ಕ್ಷಿಪೇತ್. ತತಃಸಂಕಲ್ಪ್ಯ, ಅಂಗನ್ಯಾಸ ಕರನ್ಯಾಸಾದಿಪೂರ್ವಕಂ ಗುರೂಪದಿಷ್ಟಂ ಮೂಲ ಮನುಂ ಸಹಸ್ರಂ, ತ್ರಿಶತಂ, ಶತಂವಾ ಯಥಾಶಕ್ತಿ ಜಪ್ತ್ವಾ, ಶ್ರೀ ಲಲಿತೋ ಪಾಖ್ಯಾನಂ ಸಮ್ಯಕ್ ಧ್ಯಾತ್ವಾ ಯತಚಿತ್ತಃಪಠೇತ್. ತದನಂತರಂ ಚ ಪುನಃ ಮೂಲಮನುಂ ಪೂರ್ವೋಕ್ತಸಂಖ್ಯಾಕ್ರಮೇಣೈವ ಜಪ್ತ್ವಾ ಉತ್ತರನ್ಯಾಸಾದಿಕಂ ಕೃತ್ವಾಽಂಬಿಕಾಯೈ ಸಮ್ಯಗರ್ಘ್ಯಂ ದದ್ಯಾತ್.

### ತಾತ್ಪರ್ಯ

ಶಿಷ್ಯನು ಬ್ರಾಹ್ಮೀಮುಹೂರ್ತದಲ್ಲೆದ್ದು ಶ್ರೀಸದ್ಗುರುವನ್ನು ಧ್ಯಾನಿಸಿದ ಬಳಿಕ, ಹೊರಗೆ ಹೋಗಿ ಶೌಚಾದಿಕ್ರಿಯೆಗಳನ್ನೆಲ್ಲಾ ಮುಗಿಸಿಕೊಂಡು ಬಂದು, ವಿಧ್ಯುಕ್ತವಾಗಿ ಬಿಸಿನೀರಿನಿಂದ ಸ್ನಾನಮಾಡಬೇಕು—ನೀರು ಸ್ವಾಭಾವಿಕವಾಗಿಯೇ ಪವಿತ್ರವಾದುದು ; ಅದು ಕಾದಮೇಲೆ ಹೇಳತಕ್ಕುದೇನು ! ಇನ್ನೂ ಪವಿತ್ರ ವಾಗುತ್ತದೆ. ಆದುದರಿಂದ ಬಿಸಿನೀರಿನಿಂದಲೇ ಸ್ನಾನಮಾಡಬೇಕು. ಅದು ದೊರೆಯದಿದ್ದರೆ ತಣ್ಣೀರಾದರೂ ಆಗಬಹುದು ; ಎಂದಿರುವುದು—ತರುವಾಯ, ಶುದ್ಧ (ಮಡಿ) ವಸ್ತ್ರಗಳನ್ನುಟ್ಟು ಆಚಮನಮಾಡಿ ಶ್ರದ್ಧಾವಂತನಾಗಿ ಪರಾಂಬಿಕೆ ಯನ್ನು ಧ್ಯಾನಿಸುತ್ತ, ಹಣೆಯಲ್ಲಿ ಊರ್ಧ್ವಪುಂಡ್ರವನ್ನೋ, ತ್ರಿಪುಂಡ್ರವನ್ನೋ ಅಥವಾ ಸಂಪ್ರದಾಯದಂತೆ ಇತರ ಚಿಹ್ನೆಗಳನ್ನೋ ಧರಿಸಿ ಶುದ್ಧಾತ್ಮನಾಗಿ ಸಂಧ್ಯಾವಂದನೆಯನ್ನು ಮಾಡಬೇಕು. ಇದಾದಮೇಲೆ ಸೂರ್ಯಭಗವಂತನಿಗೆ ಅರ್ಘ್ಯವನ್ನು ಕೊಟ್ಟು ಸಂಕಲ್ಪಮಾಡಿ ಅಂಗನ್ಯಾಸ ಕರನ್ಯಾಸಾದಿಪೂರ್ವಕವಾಗಿ, ಗುರುವು ತನಗೆ ಉಪದೇಶಿಸಿರುವ ಮೂಲಮಂತ್ರವನ್ನು ಸಾವಿರಸಲವೋ, ಮುನ್ನೂರು ಅಥವಾ ನೂರುಸಲವೋ ಜಪಮಾಡಿ ಶ್ರೀಲಲಿತೋಪಾಖ್ಯಾನವನ್ನು ಧ್ಯಾನಿಸಿ ಸ್ಥಿರಮನಸ್ಕನಾಗಿ ಪಠನಮಾಡಬೇಕು. ಇದಾದಮೇಲೆಯೂ ಸಹ, ಮೂಲಮಂತ್ರವನ್ನು ಹಿಂದೆ ಹೇಳಿದ ಸಂಖ್ಯೆಯ ಕ್ರಮದಿಂದಲೇ ಜಪಮಾಡಿ, ಆಮೇಲೆ ಉತ್ತರನ್ಯಾಸಾದಿಗಳನ್ನು ಮುಗಿಸಿ ಪರಾಂಬಿಕೆಗೆ ಶುದ್ಧಮನಸ್ಸಿನಿಂದ ಅರ್ಘ್ಯವನ್ನು ಕೊಡಬೇಕು.

ಶ್ರೀಃ

ಶ್ರೀ ಲಲಿತಾಂಬಿಕಾಯೈ ನಮಃ
ಶ್ರೀ ಮಹಾಗಣಾಧಿಪತಯೇ ನಮಃ

# ಅಥ ಶ್ರೀ ಲಲಿತೋಪಾಖ್ಯಾನ ಪ್ರಾರಂಭಃ

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಅಸ್ತು ವಃ ಶ್ರೇಯಸೇ ನಿತ್ಯಂ ವಸ್ತು ವಾಮಾಂಗಮೈಶ್ವರಂ ।
ಯತಸ್ತೃತೀಯೋ ವಿದುಷಾಂ ತುರೀಯಂ ತತ್ಪರಂ ಮಹಃ ॥

## ಅಥ ಪ್ರಥಮೋಽಧ್ಯಾಯಃ

[ಅಗಸ್ತ್ಯಮಹರ್ಷೇಃ ತೀರ್ಥಯಾತ್ರಾ— ಕಾಂಚೀನಗರ್ಯಾಂ ಹಯಗ್ರೀವಮೂರ್ತಿ ಸಾಕ್ಷಾತ್ಕಾರಃ— ಜಗದುದ್ಧಾರ ಪ್ರಶ್ನಃ— ಹಯಗ್ರೀವಕೃತ ಪರಾಶಕ್ತಿಪೂಜೋಪದೇಶಃ]

**ಅಗಸ್ತ್ಯೋ ನಾಮ ದೇವರ್ಷಿರ್ವೇದವೇದಾಂಗಪಾರಗಃ ।**
**ಸರ್ವಸಿದ್ಧಾಂತಸಾರಜ್ಞೋ ಬ್ರಹ್ಮಾನಂದೋ ದಯಾತ್ಮಕಃ ॥ ೧ ॥**
**ಚಚಾರಾದ್ಭುತಹೇತೂನಿ ತೀರ್ಥಾನ್ಯಾಯತನಾನಿ ಚ ।**
**ಶೈಲಾರಣ್ಯಾಪಗಾಮುಖ್ಯಾಃ ಸರ್ವಾನ್ ಜನಪದಾನಪಿ ॥ ೨ ॥**

---

### ಕನ್ನಡದ ಅನುವಾದ

[ಅಗಸ್ತ್ಯಮಹರ್ಷಿಯ ತೀರ್ಥಯಾತ್ರೆ— ಕಾಂಚೀನಗರದಲ್ಲಿ ಆತನಿಗೆ ಹಯಗ್ರೀವ ಮೂರ್ತಿಯ ದರ್ಶನವಾಗುವುದು — ಜಗದುದ್ಧಾರದ ಪ್ರಶ್ನೆ — ಹಯಗ್ರೀವಮೂರ್ತಿ ಯೆಸಗಿದ ಪರಾಶಕ್ತಿಪೂಜೋಪದೇಶ]

೧-೨. ವೇದಗಳಲ್ಲಿಯೂ, ವೇದಾಂಗಗಳಲ್ಲಿಯೂ ಪಾರಂಗತನಾಗಿ, ಎಲ್ಲ ಸಿದ್ಧಾಂತಗಳ ಸಾರವನ್ನೂ ತಿಳಿದು, ಬ್ರಹ್ಮಾನಂದವುಳ್ಳವನೂ, ದಯಾವಂತನೂ ಆಗಿರುವ ಅಗಸ್ತ್ಯನೆಂಬ ದೇವರ್ಷಿಯು ಅದ್ಭುತಗಳಾದ ಅನೇಕ ದೇಶಗಳನ್ನೂ, ತೀರ್ಥಕ್ಷೇತ್ರಗಳನ್ನೂ, ಅಲ್ಲಲ್ಲಿಯ ದೇವಾಲಯ ಗಳನ್ನೂ, ಶೈಲಾರಣ್ಯಗಳನ್ನೂ, ಮುಖ್ಯ ಮುಖ್ಯಗಳಾದ ನದ ನದಿಗಳನ್ನೂ, ಸಮಸ್ತ ಜನಪದಗಳನ್ನೂ ಸಂಚರಿಸಿಕೊಂಡು ಬಂದನು.

**ತೇಷು ತೇಷ್ವಖಿಲಾನ್‌ಜಂತೂನಜ್ಞಾನತಿಮಿರಾವೃತಾನ್ ।**
**ಶಿಶ್ನೋದರಪರಾನ್ ದೃಷ್ಟ್ವಾ ಚಿಂತಯಾಮಾಸ ತಾನ್‌ಪ್ರತಿ ॥ ೩ ॥**
**ಚಿರಂ ಚಿಂತಯಮಾನಸ್ಯ ಚರತೋ ವಸುಧಾಮಿಮಾಂ ।**
**ಪ್ರಾಪ್ತಮಾಸೀನ್ಮಹಾಪುಣ್ಯಂ ಕಾಂಚೀನಗರಮದ್ಭುತಂ ॥ ೪ ॥**
**ತತ್ರ ವಾರಣಶೈಲೇಂದ್ರಮೇಕಾಮ್ರನಿಲಯಂ ಶಿವಂ ।**
**ಕಾಮಾಕ್ಷೀಂ ಕಲಿದೋಷಘ್ನೀಮಪೂಜಯದಥಾತ್ಮವಾನ್ ॥ ೫ ॥**
**ಲೋಕಹೇತೋರಥಾರ್ದ್ರಸ್ಯ ಚಿಂತಯಾನಸ್ಯ ಧೀಮತಃ ।**
**ಚಿರಕಾಲೇನ ತಪಸಾ ತೋಷಿತೋಽಭೂಜ್ಜನಾರ್ದನಃ ॥ ೬ ॥**
**ಹಯಗ್ರೀವಾಂ ತನುಂ ಕೃತ್ವಾ ಸಾಕ್ಷಾಚ್ಚಿನ್ಮಾತ್ರವಿಗ್ರಹಾಂ ।**
**ಶಂಖಚಕ್ರಾಕ್ಷವಲಯ ಪುಸ್ತಕೋಜ್ಜ್ವಲ ಬಾಹುಕಾಂ ॥ ೭ ॥**
**ಪೂರಯಿತ್ರೀಂ ಜಗತ್ಕೃತ್ಸ್ನಂ ಪ್ರಭಯಾ ದೇಹಜಾತಯಾ ।**
**ಪ್ರಾದುರ್ಬಭೂವ ಪುರತೋ ಮುನೇರಮಿತತೇಜಸಃ ॥ ೮ ॥**

---

೩. ತಾನು ಸಂಚರಿಸಿದ ಎಲ್ಲೆಡೆಗಳಲ್ಲಿಯೂ ವಾಸಮಾಡುತ್ತಿರುವ ಪ್ರಾಣಿಗಳೆಲ್ಲವೂ ಅಜ್ಞಾನವೆಂಬ ಕತ್ತಲೆಯಲ್ಲಿ ಸಿಕ್ಕಿಬಿದ್ದು, ಕೇವಲ ಹೊಟ್ಟೆಹೊರೆದುಕೊಳ್ಳುವುದರಲ್ಲಿಯೂ, ಕಾಮಪುರುಷಾರ್ಥದಲ್ಲಿಯೂ ಆಸಕ್ತವಾಗಿರುವುದನ್ನು ಕಂಡು ಆ ಮುನಿಯು ಬಹಳವಾಗಿ ಚಿಂತಿಸ ತೊಡಗಿದನು.

೪. ಹೀಗೆ ಚಿಂತಿಸುತ್ತಲೇ ಭೂಸಂಚಾರ ಮಾಡುತ್ತಿರುವಲ್ಲಿ ಆ ಮಹರ್ಷಿಗೆ ಮಹಾಪುಣ್ಯಕ್ಷೇತ್ರವೂ ಅದ್ಭುತವೂ ಆದ ಕಾಂಚೀನಗರವು ಸಿಕ್ಕಿತು.

೫. ಆತ್ಮಜ್ಞಾನಿಯಾದ ಆ ಮಹಾಮುನಿಯು ಆ ಪುಣ್ಯಕ್ಷೇತ್ರ ದಲ್ಲಿರುವ ಹಸ್ತಿಗಿರಿನಾಥನೂ, ಏಕಾಮ್ರನಿಲಯನೂ ಆದ ಪರಮೇಶ್ವರ ನನ್ನೂ, ಕಲಿದೋಷಘ್ನಿಯಾದ ಕಾಮಾಕ್ಷೀದೇವಿಯನ್ನೂ ಭಕ್ತಿಭಾವದಿಂದ ಪೂಜಿಸಿದನು.

೬. ಲೋಕಹಿತಾರ್ಥವಾಗಿಯೇ ದಯಾರ್ದ್ರಹೃದಯನಾಗಿ ಚಿಂತಿಸು ತ್ತಿದ್ದ ಆ ಮಹಾಮುನಿಯು ಆಚರಿಸಿದ ಚಿರಕಾಲದ ತಪಸ್ಸಿಗೆ ದೇವ ದೇವನಾದ ಜನಾರ್ದನನು ಸಂತುಷ್ಟನಾದನು.

೭-೮. ಆತನು ಸಾಕ್ಷಾತ್ ಚಿನ್ಮಾತ್ರವಿಗ್ರಹನೂ, ಶಂಖ ಚಕ್ರ ಅಕ್ಷ ವಲಯ ಪುಸ್ತಕಾದಿಗಳಿಂದ ಬೆಳಗುತ್ತಿರುವ ಬಾಹುಗಳುಳ್ಳವನೂ, ತನ್ನ

**ತಂ ದೃಷ್ಟ್ವಾಽನಂದಭರಿತಃ ಪ್ರಣಮ್ಯ ಚ ಮುಹುರ್ಮುಹುಃ ।**
**ವಿನಯಾವನತೋ ಭೂತ್ವಾ ಸ ತುಷ್ಟಾವ ಜಗತ್ಪತಿಂ ॥ ೯ ॥**
**ಅಥೋವಾಚ ಜಗನ್ನಾಥಸ್ತುಷ್ಟೋಽಸ್ಮಿ ತಪಸಾ ತವ ।**
**ವರಂ ವರಯ ಭದ್ರಂ ತೇ ಭವಿತಾ ಭೂಸುರೋತ್ತಮ ॥ ೧೦ ॥**
**ಇತಿ ಪೃಷ್ಟೋ ಭಗವತಾ ಪ್ರೋವಾಚ ದ್ವಿಜಸತ್ತಮಃ ।**
**ಯದಿ ತುಷ್ಟೋಽಸಿ ಭಗವನ್ನಿಮೇ ಪಾಮರಜಂತವಃ ॥ ೧೧ ॥**
**ಕೇನೋಪಾಯೇನ ಮುಕ್ತಾಃ ಸ್ಯುರೇತನ್ಮೇ ವಕ್ತುಮರ್ಹಸಿ ।**
**ಇತಿ ಪೃಷ್ಟೋ ದ್ವಿಜೇನಾಹ ದೇವದೇವೋ ಜನಾರ್ದನಃ ॥ ೧೨ ॥**
**ಏಷ ಏವ ಪುರಾ ಪ್ರಶ್ನಃ ಶಿವೇನ ಕಥಿತೋ ಮಮ ।**
**ಅಯಮೇವ ಕೃತಃ ಪ್ರಶ್ನೋ ಬ್ರಹ್ಮಣಾ ಚ ತತಃ ಪರಂ ।**
**ಕೃತೋ ದುರ್ವಾಸಸಾ ಪಶ್ಚಾದ್ಭವತಾ ತು ತತಃ ಪರಂ ॥ ೧೩ ॥**

---

ದೇಹದಿಂದುದಿಸಿದ ದಿವ್ಯಪ್ರಭೆಯಿಂದ ಜಗತ್ತೆಲ್ಲವನ್ನೂ ತುಂಬುತ್ತಿರುವವನೂ ಆಗಿ ಶ್ರೀ ಹಯಗ್ರೀವರೂಪದಿಂದ ಮಹಾತೇಜಸ್ವಿಯಾದ ಆ ಮಹರ್ಷಿಯ ಮುಂಗಡೆಯೇ ಪ್ರತ್ಯಕ್ಷನಾದನು.

೯. ಹೀಗೆ ಪ್ರತ್ಯಕ್ಷನಾದ ಪರಮಾತ್ಮನನ್ನು ಕಂಡು ಆ ಅಗಸ್ತ್ಯ ಮಹಾಮುನಿಯು ಆನಂದಭರಿತನಾಗಿ ಅಡಿಗಡಿಗೂ ಆತನನ್ನು ನಮಸ್ಕರಿಸಿದನು; ವಿನಯದಿಂದ ತಲೆಬಾಗಿ ಆ ಜಗತ್ಪತಿಯನ್ನು ಸ್ತುತಿಸಿದನು.

೧೦. ಆಗ ದೇವದೇವನು ಆತನನ್ನು ಕುರಿತು, "ಎಲೈ ಮುನಿಯೇ! ನಿನ್ನ ತಪಸ್ಸಿನಿಂದ ಸಂತೋಷಗೊಂಡಿರುವೆನು. ವರವನ್ನು ಬೇಡು. ನಿನಗೆ ಮಂಗಳವಾಗುವುದು" ಎಂದನು.

೧೧-೧೨. ಷಡ್ಗುಣೈಶ್ವರ್ಯಸಂಪನ್ನನಾದ ಆ ಪರಮಾತ್ಮನು ಈ ರೀತಿ ಅಪ್ಪಣೆಕೊಡಿಸಲು ಅಗಸ್ತ್ಯಮುನಿಸತ್ತಮನು, "ಭೋ ಭಗವನ್! ಪರಮಾತ್ಮನಾದ ನೀನು ನನ್ನ ತಪಸ್ಸಿಗೆ ಮೆಚ್ಚಿರುವೆಯಾದರೆ ಪಾಮರಗಳಾದ ಈ ಜಂತುಗಳು ಯಾವ ಉಪಾಯದಿಂದ ಮುಕ್ತವಾಗುತ್ತವೆ? ಎಂಬ ಈ ವಿಷಯವನ್ನು ನನಗೆ ತಿಳಿಸಿ ಅನುಗ್ರಹಿಸಬೇಕು" ಎಂದನು. ಆಗ ದೇವತೆಗಳಿಗೂ ದೇವನೆನಿಸುವ ಹಯಗ್ರೀವನು ಈ ರೀತಿ ಉತ್ತರವನ್ನು ಹೇಳಿದನು.

೧೩. "ಎಲೈ ಮುನಿಯೇ! ಪೂರ್ವದಲ್ಲಿ ಪರಶಿವನು ನನ್ನನ್ನು ಕುರಿತು ಇದೇ ಪ್ರಶ್ನೆಯನ್ನೇ ಕೇಳಿದನು. ಆಮೇಲೆ ಬ್ರಹ್ಮನೂ ಇದೇ

ಭವದ್ಭಿಃ ಸರ್ವಲೋಕಾನಾಂ ಗುರುಭೂತೈರ್ಮಹಾತ್ಮಭಿಃ । [೧೪ ॥
ಮನೋಪದೇಶೋ ಲೋಕೇಷು ಪ್ರಥಿತೋಽಸ್ತು ವರಾನ್ಮಮ ॥
ಅಹಮಾದಿರ್ಹಿ ಭೂತಾನಾಮಾದಿಕರ್ತಾ ಸ್ವಯಂ ಪ್ರಭುಃ ।
ಸೃಷ್ಟಿಸ್ಥಿತಿಲಯಾನಾಂ ತು ಸರ್ವೇಷಾಮಪಿ ಕಾರಕಃ ॥ ೧೫ ॥
ತ್ರಿಮೂರ್ತಿಸ್ತ್ರಿಗುಣಾತೀತೋ ಗುಣಹೀನೋ ಗುಣಾಶ್ರಯಃ ।
ಇಚ್ಛಾವಿಹಾರೀ ಭೂತಾತ್ಮಾ ಪ್ರಧಾನಪುರುಷಾತ್ಮಕಃ ॥ ೧೬ ॥
ಏವಂ ಭೂತಸ್ಯ ಮೇ ಬ್ರಹ್ಮಂಸ್ತ್ರಿಜಗದ್ರೂಪಧಾರಿಣಃ ।
ದ್ವಿಧಾ ಕೃತಮಭೂದ್ರೂಪಂ ಪ್ರಧಾನಪುರುಷಾತ್ಮಕಂ ॥ ೧೭ ॥
ಮಮ ಪ್ರಧಾನಂ ಯದ್ರೂಪಂ ಸರ್ವಭೂತಗುಣಾತ್ಮಕಂ ।
ಅಪರಂ ಯದ್ಗುಣಾತೀತಂ ಪರಾತ್ಪರತರಂ ಮಹತ್ ।
ಏಕಮೇವೈತಯೋರ್ಜ್ಞಾತ್ವಾ ಮುಚ್ಯತೇ ತೇ ಉಭೇ ಕಿಮು ॥ ೧೮ ॥

---

ಪ್ರಶ್ನೆಯನ್ನೇ ಕೇಳಿದನು. ಅದಾದ ತರುವಾಯ ದುರ್ವಾಸಮುನಿಯು ಕೇಳಿದ ಪ್ರಶ್ನೆಯೂ ಇದೇ. ಈಗ ನೀನೂ ಈ ಪ್ರಶ್ನೆಯನ್ನೇ ಕೇಳುತ್ತಿರುವೆ.

೧೪. ಸಮಸ್ತಭೂತಗಳಿಗೂ ಗುರುಸ್ವರೂಪಿಗಳಾದ ನಿಮ್ಮಂತಹ ಮಹಾತ್ಮರಿಂದಲೇ ನನ್ನ ಉಪದೇಶವು ಸಮಸ್ತಲೋಕಗಳಲ್ಲಿಯೂ ಪ್ರಕಟವಾಗಲಿ. ಇದು ನನ್ನ ವರವು.

೧೫-೧೬. ಅಗಸ್ತ್ಯಮುನಿವರ! ನಾನೇ ಆದಿಪುರುಷನು. ಸಮಸ್ತ ಭೂತಗಳ ಅದಿಕರ್ತನೂ ನಾನೇ. ನಾನೇ ಸ್ವಯಂಪ್ರಭುವು. ಸೃಷ್ಟಿಸ್ಥಿತಿ ಲಯಗಳೆಂಬ ಮೂರು ಕಾರ್ಯಗಳನ್ನು ಆಗಗೊಳಿಸುವವನೂ ನಾನೇ. ಅನಾದಿಯೂ, ತ್ರಿಮೂರ್ತಿಸ್ವರೂಪನೂ, ಸತ್ವ ರಜಸ್ಸು ತಮಸ್ಸು ಎಂಬ ಮೂರು ಗುಣಗಳಿಗೆ ಅತೀತನೂ, ನಿರ್ಗುಣನೂ, ಆ ಗುಣಗಳಿಗೆಲ್ಲ ಆಶ್ರಯಭೂತನೂ, ಇಚ್ಛಾವಿಹಾರಿಯೂ, ಪಂಚಭೂತಗಳ ಸ್ವರೂಪನೂ, ಪ್ರಧಾನಪುರುಷಾತ್ಮಕನೂ ನಾನೇ.

೧೭. ಎಲೈ ವಿಪ್ರನೇ! ಹೀಗೆ ತ್ರಿಜಗದ್ರೂಪಧಾರಿಯಾದ ನನ್ನ ರೂಪವು ಪ್ರಧಾನವೆಂದೂ, ಪುರುಷವೆಂದೂ ಎರಡು ಭಾಗಗಳಾಗಿರುವಂತೆ ತೋರುವುದು.

೧೮. ಪ್ರಧಾನವೆಂಬ ನನ್ನ ರೂಪವು ಸಮಸ್ತಭೂತಗಳ ಗುಣಗಳೆಲ್ಲವನ್ನೂ ಒಳಗೊಂಡಿರುವಂತಹುದು. ಎರಡನೆಯದು ಗುಣಾತೀತವಾಗಿ ಪರಾತ್ಪರವೂ, ಮಹತ್ತರವೂ ಆದಂತಹುದು. ಮಾನವನು ಈ ಎರಡು

**ತಪೋಭಿಶ್ಚಿರಕಾಲೋತ್ಥೈರ್ಯಮೈಶ್ಚ ನಿಯಮೈರಪಿ ।**
**ತ್ಯಾಗೈರ್ದುಷ್ಕರ್ಮನಾಶಾಂತೇ ಮುಕ್ತಿರಾದ್ಯೇನ ಲಭ್ಯತೇ ॥ ೧೯ ॥**
**ಯದ್ರೂಪಂ ಯದ್ಗುಣಯುತಂ ತದ್ಗುಣೈಕ್ಯೇನ ಲಭ್ಯತೇ ।**
**ಅನ್ಯತ್ಸರ್ವಂ ಜಗದ್ರೂಪಂ ಕರ್ಮಭೋಗಪರಾತ್ಮಕಂ ॥ ೨೦ ॥**
**ಕರ್ಮಭಿರ್ಲಭ್ಯತೇ ತಚ್ಚ ತತ್ತ್ಯಾಗೇನಾಪಿ ಲಭ್ಯತೇ ।**
**ದುಷ್ಕರಸ್ತು ತಯೋಸ್ತ್ಯಾಗಃ ಸಕಲೈರಪಿ ತಾಪಸ ॥ ೨೧ ॥**
**ಅನಪಾಯಂ ಚ ಸುಗಮಂ ಸದಸತ್ಕರ್ಮಗೋಚರಂ ।**
**ಆತ್ಮಸ್ಥೇನ ಗುಣೇನೈವ ಸತಾ ವಾಪ್ಯಸತಾಪಿ ವಾ ॥**
**ಆತ್ಮೈಕ್ಯೇನೈವ ಯಜ್ಜ್ಞಾನಂ ಸರ್ವಸಿದ್ಧಿಪ್ರದಾಯಕಂ ॥ ೨೨ ॥**
**ವರ್ಣಾಶ್ರಮವಿಹೀನಾನಾಂ ಪಾಪಿಷ್ಠಾನಾಂ ನೃಣಾಮಪಿ ।**
**ಯದ್ರೂಪಧ್ಯಾನಮಾತ್ರೇಣ ದುಷ್ಕೃತಂ ಸುಕೃತಾಯತೇ ॥ ೨೩ ॥**

---

ರೂಪಗಳಲ್ಲಿ ಯಾವುದಾದರೂ ಒಂದನ್ನು ಅರಿತರೆ ಸಾಕು; ಭವಬಂಧನದಿಂದ ಬಿಡುಗಡೆ ಹೊಂದುತ್ತಾನೆ. ಇನ್ನು ಎರಡು ರೂಪಗಳನ್ನೂ ತಿಳಿದರಂತು ಹೇಳತಕ್ಕುದೇನು? ಅವನು ಮುಕ್ತನೆಂಬುದರಲ್ಲಿ ಸಂಶಯವೇ ಇರುವುದಿಲ್ಲ.

೧೯. ಮಾನವರಿಗೆ ಮುಕ್ತಿಯೆಂಬುದು ಬಹಳ ಕಾಲದ ತಪಸ್ಸಿನಿಂದಲೂ, ಯಮನಿಯಮಗಳಿಂದಲೂ, ತ್ಯಾಗದಿಂದಲೂ ದುಷ್ಕರ್ಮವಾಸನೆಯು ದೂರವಾಗಿ ಮೊದಲನೆಯ ರೂಪದ ಸಾಕ್ಷಾತ್ಕಾರವಾಗುವುದರಿಂದ ಲಭಿಸುತ್ತದೆ.

೨೦. ಯಾವ ರೂಪವು ಯಾವ ಗುಣವುಳ್ಳುದೋ, ಆ ರೂಪವು ಅದರಲ್ಲಿರುವ ಗುಣದ ಐಕ್ಯದಿಂದಲೇ ಲಭಿಸುತ್ತದೆ. ಉಳಿದುದೆಲ್ಲವೂ ಕಾಮಭೋಗಪರಾತ್ಮಕವಾದ ಜಗತ್ತಿನ ರೂಪವಾದುದು.

೨೧. ಆ ರೂಪವು ಕರ್ಮಗಳನ್ನು ಆಚರಿಸುವುದರಿಂದಾಗಲಿ, ಅಥವಾ ಅವುಗಳ ತ್ಯಾಗದಿಂದಾಗಲಿ ಪಡೆಯಲು ಸಾಧ್ಯವಾಗುತ್ತದೆ. ಎಲೈ ತಾಪಸನೇ! ಆದರೆ ಕರ್ಮಭೋಗಗಳ ತ್ಯಾಗವೆಂಬುದು ಮಾತ್ರ ಎಲ್ಲರಿಗೂ ಸಾಧ್ಯವಾಗುವುದಿಲ್ಲ.

೨೨-೨೩. ಯಾವ ರೂಪವನ್ನು ಧ್ಯಾನಿಸುವುದರಿಂದಲೇ ವರ್ಣಾಶ್ರಮವಿಹೀನರೂ, ಪಾಪಿಷ್ಠರೂ ಆದ ಮಾನವರ ದುಷ್ಕೃತವೆಲ್ಲವೂ ಸುಕೃತವಾಗುತ್ತದೆಯೋ, ಅಂತಹ ಅಪಾಯರಹಿತವೂ, ಸುಗಮವೂ,

**ಯೇಽರ್ಚಯಂತಿ ಪರಾಂ ಶಕ್ತಿಂ ವಿಧಿನಾಽವಿಧಿನಾಪಿ ವಾ ।**
**ನ ತೇ ಸಂಸಾರಿಣೋ ನೂನಂ ಮುಕ್ತಾ ಏವ ನ ಸಂಶಯಃ ॥ ೨೪ ॥**
**ಶಿವೋಽಪಿ ಯಾಂ ಸಮಾರಾಧ್ಯ ಧ್ಯಾನಯೋಗಬಲೇನ ಚ ।**
**ಈಶ್ವರಃ ಸರ್ವಸಿದ್ಧೀನಾಮರ್ಧನಾರೀಶ್ವರೋಽಭವತ್ ॥ ೨೫ ॥**
**ಅನ್ಯೇಽಬ್ಜಜಮುಖಾ ದೇವಾಃ ಸಿದ್ಧಾಸ್ತದ್ಧ್ಯಾನವೈಭವಾತ್ ।**
**ತಸ್ಮಾದಶೇಷಲೋಕಾನಾಂ ತ್ರಿಪುರಾರಾಧನಂ ವಿನಾ ॥**
**ನ ಸ್ತೋ ಭೋಗಾಪವರ್ಗೌ ತು ಯೌಗಪದ್ಯೇನ ಕುತ್ರಚಿತ್ ॥ ೨೬ ॥**
**ತಸ್ಮಾನ್ಮಂತ್ರಾಸ್ತ್ರಸಂಯುಕ್ತನ್ಯಾಸಪೂರ್ವಕ್ರಮೇಣ ಚ ।**
**ತನ್ಮನಾಸ್ತದ್ಗತಪ್ರಾಣಸ್ತದ್ಯಾಜೀ ತದ್ಗತೇಹಕಃ ॥**
**ತಾದಾತ್ಮ್ಯೈಕ್ಯೇನ ಕರ್ಮಾಣಿ ಕುರ್ವನ್ಮುಕ್ತಿಮವಾಪ್ಸ್ಯತಿ ॥ ೨೭ ॥**

---

ಸದಸತ್ಕರ್ಮಗಳಿಗೆ ಗೋಚರವೂ ಆದ ಆ ರೂಪವು ಸಗುಣವಾಗಿರಲಿ, ನಿರ್ಗುಣವಾಗಿರಲಿ ತನ್ನಲ್ಲಿ ನೆಲೆಗೊಂಡಿರುವ ಗುಣದಿಂದಲೇ ಪಡೆಯಲು ಸಾಧ್ಯವಾಗುವಂತಹುದು. ಆತ್ಮೈಕ್ಯಜ್ಞಾನವು ಸಮಸ್ತ ಸಿದ್ಧಿಗಳನ್ನೂ ದೊರಕಿಸಿಕೊಡುವಂತಹುದು. (ಆ ಜ್ಞಾನದಿಂದಲೇ ಜ್ಞಾನಸ್ವರೂಪಿ ಯಾದ ನನ್ನನ್ನು ಹೊಂದಲೂ ಸಾಧ್ಯವಾಗುವುದು.)

೨೪. ಶಾಸ್ತ್ರೋಕ್ತವಿಧಿಯಿಂದಾಗಲಿ, ಹಾಗಲ್ಲದೆಯಾಗಲಿ ಯಾರು ಪರಾಶಕ್ತಿಯನ್ನು ಪೂಜಿಸುತ್ತಾರೆಯೋ ಅವರು ಮುಕ್ತರೆಂಬುದರಲ್ಲಿ ಸಂಶಯವೇ ಇಲ್ಲ. ನಿಜವಾಗಿಯೂ ಅವರು ಭವಬಂಧನಕ್ಕೆ ಸಿಕ್ಕಿ ತೊಳಲುವುದೂ ಇಲ್ಲ.

೨೫-೨೬. ಎಲೈ ಅಗಸ್ತ್ಯಮುನಿಯೇ! ಸಾಕ್ಷಾತ್ಪರಶಿವನೂ ಯಾವ ಪರಾಶಕ್ತಿಯನ್ನು ಆರಾಧಿಸಿ ಧ್ಯಾನಯೋಗಗಳ ಬಲದಿಂದ ಸರ್ವಸಿದ್ಧಿ ಗಳಿಗೂ ಈಶ್ವರನು ಮಾತ್ರವಲ್ಲದೆ ಅರ್ಧನಾರೀಶ್ವರನೂ ಆದನೋ, ಇತರರಾದ ಬ್ರಹ್ಮಾದಿದೇವತೆಗಳೂ ಯಾವ ಮಹಾದೇವಿಯ ಧ್ಯಾನ ವೈಭವದಿಂದ ಸಿದ್ಧರಾದರೋ ಅಂತಹ ತ್ರಿಪುರಾಂಬಿಕೆಯ ಆರಾಧನೆ ಯನ್ನು ಬಿಟ್ಟರೆ, ಸಮಸ್ತ ಪ್ರಜೆಗಳಿಗೂ ಎಲ್ಲಿಯೂ ಏಕಕಾಲದಲ್ಲಿಯೇ ಭೋಗಾಪವರ್ಗಗಳು ದೊರಕುವುದೇ ಇಲ್ಲ.

೨೭. ಆದುದರಿಂದ ಅಂಗನ್ಯಾಸ, ಕರನ್ಯಾಸಾದಿಪೂರ್ವಕವಾಗಿ ಮಂತ್ರವೆಂಬ ಅಸ್ತ್ರವನ್ನು ಪಡೆದು, ಆ ಮಹಾದೇವಿಯಲ್ಲಿಯೇ

**ಏತದ್ರಹಸ್ಯಮಾಖ್ಯಾನಂ ಸರ್ವೇಷಾಂ ಹಿತಕಾಮ್ಯಯಾ ।**
**ಸಂತುಷ್ಟೇನೈವ ಭವತಸ್ತಪಸಾ ಮುನಿಸತ್ತಮ ॥ ೨೮ ॥**
**ದೇವಾಶ್ಚ ಋಷಯಃ ಸಿದ್ಧಾ ಮನುಷ್ಯಾಶ್ಚ ತಥೇತರೇ । [೨೯ ॥**
**ತ್ವನ್ಮುಖಾಂಭೋಜತೋ ಲಬ್ಧ್ವಾ ಸಿದ್ಧಿಂ ಯಾಂತು ಪರಾತ್ಪರಾಂ ॥**
**ಇತಿ ತದ್ವಚನಂ ಶ್ರುತ್ವಾ ಹಯಗ್ರೀವಸ್ಯ ಶಾರ್ಙ್ಗಿಣಃ ।**
**ಪ್ರಣಿಪತ್ಯ ಪುನರ್ವಾಕ್ಯಮುವಾಚ ಮಧುಸೂದನಂ ॥ ೩೦ ॥**
**ಭಗವನ್ ಕೀದೃಶಂ ರೂಪಂ ಭವತಾ ಯತ್ಪುರೋದಿತಂ ।**
**ಕಿಂ ವಿಹಾರಂ ಕಿಂ ಪ್ರಭಾವಮೇತನ್ಮೇ ವಕ್ತುಮರ್ಹಸಿ ॥ ೩೧ ॥**

**ಹಯಗ್ರೀವಃ—**
**ಏಷೋಽಂಶಭೂತೋ ದೇವರ್ಷಿರ್ಹಯಗ್ರೀವೋ ಮಮಾಪರಃ ।**
**ಶ್ರೋತುಮಿಚ್ಛಸಿ ಯದ್ಯತ್ತ್ವಂ ತತ್ತತ್ತ್ವ ವದತ್ಯಯಂ ॥ ೩೨ ॥**

---

ಮನಸ್ಸನ್ನಿಟ್ಟು, ಪಂಚಪ್ರಾಣಗಳನ್ನೂ ಆಕೆಯಲ್ಲಿಯೇ ನೆಲೆಗೊಳಿಸಿ, ಆಕೆಯಲ್ಲಿಯೇ ಐಹಿಕಸುಖಗಳೆಲ್ಲವನ್ನೂ ನಿರೀಕ್ಷಿಸುತ್ತ, ಆಕೆಯನ್ನೇ ಆರಾಧಿಸಿ ಆಕೆಯ ತಾದಾತ್ಮ್ಯದಿಂದಲೇ ಸಮಸ್ತ ಕರ್ಮಗಳನ್ನೂ ಮಾಡುತ್ತಿದ್ದರೆ ಮಾನವನು ಮುಕ್ತಿಯನ್ನು ಪಡೆಯುವನು.

೨೮. ಎಲೈ ಮುನಿಶ್ರೇಷ್ಠನಾದ ಅಗಸ್ತ್ಯನೇ! ರಹಸ್ಯವಾದ ಈ ಆಖ್ಯಾನವನ್ನು ಸಮಸ್ತ ಪ್ರಾಣಿಗಳ ಹಿತಕಾಮನೆಯಿಂದ ನಿನ್ನ ತಪಸ್ಸಿಗೆ ಮೆಚ್ಚಿ ಅನುಗ್ರಹಿಸಿರುತ್ತೇನೆ.

೨೯. ದೇವತೆಗಳೂ, ಮುನಿಗಳೂ, ಸಿದ್ಧರೂ, ಮಾನವರೂ, ಇತರ ಪ್ರಾಣಿಗಳೂ ನಿನ್ನ ಮುಖಕಮಲದಿಂದಲೇ ರಹಸ್ಯವಾದ ಈ ಆಖ್ಯಾನವನ್ನು ಅನುಗ್ರಹರೂಪವಾಗಿ ಪಡೆದು ಪರಾತ್ಪರವಾದ ಸಿದ್ಧಿಯನ್ನು ಹೊಂದಲಿ."

೩೦-೩೧. ಈ ರೀತಿ ನುಡಿದ ಹಯಗ್ರೀವರೂಪಿಯಾದ ಭಗವಂತನ ದಿವ್ಯವಾಣಿಯನ್ನು ಕೇಳಿ ಆ ಮುನಿಯು ಆತನನ್ನು ಪುನಃ ಪುನಃ ನಮಸ್ಕರಿಸಿ, "ಭೋ ಭಗವನ್! ನೀನು ಅಪ್ಪಣೆಕೊಡಿಸಿದ ಮೊದಲನೆಯ ರೂಪವೆಂತಹುದು? ಅದರ ವಿಹಾರಪ್ರಭಾವಗಳೇನು? ಈ ವಿಷಯವನ್ನು ನನಗೆ ತಿಳಿಸಬೇಕು" ಎಂದು ಕೇಳಿದನು.

೩೨. ಹಯಗ್ರೀವನು ಹೇಳುತ್ತಾನೆ:—"ಅಯ್ಯಾ, ದೇವರ್ಷಿಯೇ! ನನ್ನ ಅಂಶದಿಂದ ಆವಿರ್ಭವಿಸಿರುವ ಈ ಹಯಗ್ರೀವ ಮಹಾಮುನಿಯು

**ಇತ್ಯಾದಿಶ್ಯ ಜಗನ್ನಾಥೋ ಹಯಗ್ರೀವಂ ತಪೋನಿಧಿಂ ।**
**ಪುರತಃ ಕುಂಭಜಾತಸ್ಯ ಮುನೇರಂತರಧೀಯತ ॥ ೩೩ ॥**
**ತತಸ್ತು ವಿಸ್ಮಯಾವಿಷ್ಟೋ ಹೃಷ್ಟರೋಮಾ ತಪೋಧನಃ ।**
**ಹಯಗ್ರೀವೇಣ ಮುನಿನಾ ಸ್ವಾಶ್ರಮಂ ಪ್ರತ್ಯಪದ್ಯತ ॥ ೩೪ ॥**

**ಇತಿ ಶ್ರೀಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ**
**ಸಂವಾದೇ ಶ್ರೀ ಲಲಿತೋಪಾಖ್ಯಾನೇ**
**ಪ್ರಥಮೋಽಧ್ಯಾಯಃ**

---

ನನ್ನ ಅಪರಾವತಾರವು. ನೀನು ಏನೇನನ್ನು ಕೇಳಬೇಕೆಂದಿರುವೆಯೋ ಅದೆಲ್ಲವನ್ನೂ ಈತನೇ ಹೇಳುತ್ತಾನೆ.''

೩೩. ಜಗನ್ನಾಥನಾದ ಜನಾರ್ದನನು ಹಯಗ್ರೀವನಿಗೂ, ತಪೋಧನನಾದ ಅಗಸ್ತ್ಯಮುನಿಗೂ ಈ ರೀತಿ ಅಪ್ಪಣೆಕೊಡಿಸಿದ ತರುವಾಯ ಕುಂಭೋದ್ಭವನಾದ ಆ ಮುನಿಯ ಮುಂಗಡೆಯೇ ಅಂತರ್ಧಾನವಾದನು.

೩೪. ಬಳಿಕ ತಪೋಧನನಾದ ಅಗಸ್ತ್ಯಮುನಿಯು ಪರಮಾಶ್ಚರ್ಯಭರಿತನೂ, ರೋಮಾಂಚಿತ ಶರೀರನೂ ಆಗಿ ಆ ಹಯಗ್ರೀವಮುನಿಯೊಡನೆ ತನ್ನ ಆಶ್ರಮಕ್ಕೆ ಹಿಂತಿರುಗಿದನು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
**ಮೊದಲನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥ ದ್ವಿತೀಯೋಽಧ್ಯಾಯಃ

[ದೇವ್ಯಾ ಅವತಾರ ವಿಷಯೇ ಹಯಗ್ರೀವಂ ಪ್ರತ್ಯಗಸ್ತ್ಯಸ್ಯ ಪ್ರಶ್ನಃ— ಇಂದ್ರಂ ಪ್ರತಿ ದುರ್ವಾಸಸಃ ಶಾಪಃ— ಇಂದ್ರ ಬೃಹಸ್ಪತ್ಯೋಃ ಧರ್ಮಾಧರ್ಮವಿಷಯಕ ಸಂವಾದಃ— ಸ್ತೇಯದೋಷ ವಿಚಾರಃ — ದ್ವಿಜವರ್ಮನಾಮಕಿರಾತೋಪಾಖ್ಯಾನಂ— ಮದ್ಯಪಾನ ಗುಣ ದೋಷಕಥನಂ]

ತ್ವದ್ಧ್ಯಾನಪೂಜಾನಿರತಾ ಮಹಾಂತೋ ।
ಭುಕ್ತಿಂ ವಿಮುಕ್ತಿಂ ಪ್ರವಿಶಂತಿ ಸರ್ವೇ ॥

ಭಜೇಽಂಬಿಕಾಂ ತ್ವಾಂ ಜಗದೇಕವಂದ್ಯೇ ।
ಸದಾಶಿವಾಂ ಶ್ರೀಲಲಿತಾಂ ಮಹೇಶೀಂ ॥

**ಅಥೋಪವೇಶಯಿತ್ವೈನಮಾಸನೇ ಪರಮಾದ್ಭುತೇ ।**
**ಹಯಾನನಮುಪಾಗಮ್ಯ ಹ್ಯಗಸ್ತ್ಯೋ ವಾಕ್ಯಮಬ್ರವೀತ್ ॥ ೧ ॥**
**ಭಗವನ್ ಸರ್ವಧರ್ಮಜ್ಞ ಸರ್ವಸಿದ್ಧಾಂತವಿತ್ತಮ ।**
**ಲೋಕಾಭ್ಯುದಯಹೇತುರ್ಹಿ ದರ್ಶನಂ ತು ಭವಾದೃಶಾಂ ॥ ೨ ॥**
**ಆವಿರ್ಭಾವಂ ಮಹಾದೇವ್ಯಾಸ್ತಸ್ಯಾ ರೂಪಾಂತರಾಣಿ ಚ ।**
**ವಿಹಾರಾಣಿ ಚ ಮುಖ್ಯಾನಿ ತಾನಿ ವಿಸ್ತರತೋ ವದ ॥ ೩ ॥**

---

### ಕನ್ನಡದ ಅನುವಾದ

[ದೇವಿಯ ಅವತಾರಗಳ ವಿಷಯದಲ್ಲಿ ಅಗಸ್ತ್ಯನ ಪ್ರಶ್ನೆ— ದುರ್ವಾಸನು ಇಂದ್ರನನ್ನು ಶಪಿಸುವುದು— ಇಂದ್ರ ಬೃಹಸ್ಪತಿಗಳಿಗೆ ನಡೆದ ಧರ್ಮಾಧರ್ಮ ವಿಷಯಕವಾದ ಸಂವಾದ — ಸ್ತೇಯದೋಷ ವಿಚಾರ — ದ್ವಿಜವರ್ಮನೆಂಬ ಕಿರಾತನ ಕಥೆ — ಮದ್ಯಪಾನದ ಗುಣದೋಷ ಕಥನ]

೧. ಆಶ್ರಮಕ್ಕೆ ಬಂದ ಬಳಿಕ ಅಗಸ್ತ್ಯ ಮಹಾಮುನಿಯು ಹಯಗ್ರೀವ ಮುನಿಯನ್ನು ಪರಮಾದ್ಭುತವಾದ ಪೀಠದಲ್ಲಿ ಕುಳ್ಳಿರಿಸಿ, ಆತನ ಬಳಿಗೈದಿ ಆತನನ್ನು ಕುರಿತು ಈ ಮಾತನ್ನಾಡಿದನು :

೨. "ಎಲೈ ಪೂಜ್ಯನೇ! ನೀನು ಸಕಲ ಧರ್ಮಗಳನ್ನೂ ಅರಿತವನು; ಸಮಸ್ತ ಸಿದ್ಧಾಂತಗಳನ್ನೂ ತಿಳಿದವರಲ್ಲಿ ಶ್ರೇಷ್ಠನಾದವನು. ನಿನ್ನಂತಹ ಮಹಾತ್ಮರ ದರ್ಶನವು ಲೋಕದ ಅಭ್ಯುದಯಕ್ಕೆ ಕಾರಣವಲ್ಲವೇ!

೩. ಎಲೈ ಸ್ವಾಮಿಯೇ! ಇಂತಹ ಮಹಾತ್ಮನಾದ ನೀನು ಮಹಾದೇವಿಯ ಆವಿರ್ಭಾವವನ್ನೂ ಆಕೆಯ ಬೇರೆ ಬೇರೆ ರೂಪಗಳನ್ನೂ ಮುಖ್ಯ

ಹಯಗ್ರೀವಃ —

ಅನಾದಿರಖಿಲಾಧಾರಾ ಸದಸತ್ಕರ್ಮರೂಪಿಣೀ ।
ಧ್ಯಾನೈಕದೃಶ್ಯಾ ಜ್ಞಾನಾಂಗೀ ವಿದ್ಯಾಂಗೀ ಹೃದಯಾಸ್ಪದಾ ॥ ೪ ॥
ಆತ್ಮೈಕ್ಯಾದ್ವ್ಯಕ್ತಿಮಾಯಾತಿ ಚಿರಾನುಷ್ಠಾನಗೌರವಾತ್ ॥ ೫ ॥
ಆದೌ ಪ್ರಾದುರಭೂಚ್ಛಕ್ತಿರ್ಬ್ರಹ್ಮಣೋ ಧ್ಯಾನಯೋಗತಃ ।
ಪ್ರಕೃತಿರ್ನಾಮ ಸಾ ಖ್ಯಾತಾ ದೇವಾನಾಮಿಷ್ಟಸಿದ್ಧಿದಾ ॥ ೬ ॥
ದ್ವಿತೀಯಮುದಭೂದ್ರೂಪಂ ಪ್ರವೃತ್ತೇಽಮೃತಮಂಥನೇ ।
ಸರ್ವಸಂಮೋಹಜನಕಮವಾಙ್ಮನಸಗೋಚರಂ ॥ ೭ ॥
ಯದ್ದರ್ಶನಾದಭೂದೀಶಃ ಸರ್ವಜ್ಞೋಽಪಿ ವಿಮೋಹಿತಃ ।
ವಿಸೃಜ್ಯ ಪಾರ್ವತೀಂ ಶೀಘ್ರಂ ತಯಾ ರುದ್ಧೋಽಪ್ಯನುದ್ರುತಃ ॥ ೮ ॥
ತಸ್ಯಾಂ ವೈ ಜನಯಾಮಾಸ ಶಾಸ್ತಾರಮಸುರಾರ್ದನಂ ॥ ೯ ॥

---

ಮುಖ್ಯವಾದ ಆಕೆಯ ಲೀಲೆಗಳನ್ನೂ ವಿಸ್ತಾರವಾಗಿ ನನಗೆ ತಿಳಿಯ ಹೇಳಬೇಕು.''

೪-೫. ಹಯಗ್ರೀವನು ಹೇಳುತ್ತಾನೆ:— ''ಎಲೈ ಮಹರ್ಷಿಯೇ! ಹುಟ್ಟಿಲ್ಲದವಳೂ, ಎಲ್ಲಕ್ಕೂ ಆಸರೆಯಾಗಿರುವವಳೂ, ವಿಧಿವಿಹಿತ–ಅವಿಹಿತ ಗಳಾದ ಕರ್ಮಗಳ ಸ್ವರೂಪವುಳ್ಳವಳೂ, ಧ್ಯಾನವೊಂದರಿಂದಲೇ ಕಾಣ ಬರುವವಳೂ, ಜ್ಞಾನ ಮತ್ತು ವಿದ್ಯೆಗಳ ಸ್ವರೂಪವುಳ್ಳವಳೂ, ಸಮಸ್ತ ಪ್ರಾಣಿಗಳ ಹೃದಯಗಳಲ್ಲಿಯೂ ನೆಲೆಸಿರುವವಳೂ ಆದ ಆ ಮಹಾ ದೇವಿಯು ಬಹುಕಾಲದ ಅನುಷ್ಠಾನದ ಪ್ರಭಾವದಿಂದ ದೊರಕುವ ಬ್ರಹ್ಮಾತ್ಮೈಕ್ಯ ಜ್ಞಾನದ ಮೂಲಕ ಗೋಚರವಾಗುವಳು.

೬. ಪೂರ್ವದಲ್ಲಿ ಆದಿಶಕ್ತಿಯು ಬ್ರಹ್ಮನ ಧ್ಯಾನಯೋಗದಿಂದ ಅವತರಿಸಿ ಪ್ರಕೃತಿಯೆಂದು ಪ್ರಸಿದ್ಧಳಾಗಿ ದೇವತೆಗಳೆಲ್ಲರಿಗೂ ಇಷ್ಟಸಿದ್ಧಿ ಗಳನ್ನು ಕೊಡುವವಳಾದಳು. (ಇದೇ ದೇವಿಯ ಮೊದಲನೆಯ ರೂಪವು.)

೭. ಎಲ್ಲರನ್ನೂ ಮೋಹಗೊಳಿಸುವುದೂ, ಮಾತಿಗೂ ಮನಸ್ಸಿಗೂ ಸಿಲುಕದುದೂ ಆದ ಆಕೆಯ ಎರಡನೆಯ ರೂಪವು ಅಮೃತಮಥನ ಕಾಲದಲ್ಲಿ ಪ್ರಕಟವಾಯಿತು.

೮-೯. ಸರ್ವಜ್ಞನಾದ ಮಹೇಶ್ವರನೂ ಆ ದೇವಿಯ ದರ್ಶನದಿಂದ, ವಿಮೋಹಿತನಾಗಿ ಸತಿಯಾದ ಪಾರ್ವತಿಯನ್ನು ತೊರೆದು ಬೇಡವೆಂದು

ಅಗಸ್ತ್ಯ :—

ಕಥಂ ವೈ ಸರ್ವಭೂತೇಶೋ ವಶೀ ಮನ್ಮಥಶಾಸನಃ ।
ಅಹೋ ವಿಮೋಹಿತೋ ದೇವ್ಯಾ ಜನಯಾಮಾಸ ಚಾತ್ಮಜಂ ॥ ೧೦ ॥

ಹಯಗ್ರೀವ :—

ಪುರಾऽಮರಪುರಾಧೀಶೋ ವಿಜಯಶ್ರೀಸಮೃದ್ಧಿಮಾನ್ ।
ತ್ರೈಲೋಕ್ಯಂ ಪಾಲಯಾಮಾಸ ಸದೇವಾಸುರಮಾನುಷಂ ॥ ೧೧ ॥
ಕೈಲಾಸಶಿಖರಾಕಾರಂ ಗಜೇಂದ್ರಮಧಿರುಹ್ಯ ಸಃ ।
ಚಚಾರ ಸರ್ವಲೋಕೇಷು ಪೂಜ್ಯಮಾನೋऽಖಿಲೈರಪಿ ॥ ೧೨ ॥
ತಂ ಪ್ರಮತ್ತಂ ವಿದಿತ್ವಾ ತು ಭವಾನೀಪತಿರವ್ಯಯಃ ।
ದುರ್ವಾಸಸಮಥಾಹೂಯ ಪ್ರಜಿಘಾಯ ತದಂತಿಕಂ ॥ ೧೩ ॥
ಕಂಥಾಜಿನಧರೋ ದಂಡೀ ಧೂಲೀಧೂಸರವಿಗ್ರಹಃ ।
ಉನ್ಮತ್ತರೂಪಧಾರೀ ಚ ಯಯೌ ವಿದ್ಯಾಧರಾಧ್ವನಾ ॥ ೧೪ ॥

---

ತಡೆದರೂ ಆಕೆಯನ್ನನುಸರಿಸಿ ಹೋಗಿ ಆಕೆಯಲ್ಲಿ ಅಸುರಮರ್ದನನಾದ ಶಾಸ್ತೃವನ್ನು ಪಡೆದನು."

೧೦. ಅಗಸ್ತ್ಯನು ಕೇಳುತ್ತಾನೆ:—"ಮುನಿಯೇ! ಸಮಸ್ತ ಭೂತಗಳಿಗೂ ಈಶ್ವರನಾಗಿ, ಇಂದ್ರಿಯಗಳೆಲ್ಲವನ್ನೂ ವಶಪಡಿಸಿಕೊಂಡಿರುವವನಾಗಿ, ಮನ್ಮಥನನ್ನು ದಂಡಿಸಿದ ಮಹಾದೇವನು, ಆ ದೇವಿಗೆ ಮನಸೋತು ಆಕೆಯಲ್ಲಿ ವಿಮೋಹಿತನಾಗಿ ಮಗನನ್ನು ಪಡೆದುದೆಂತು?"

೧೧. ಹಯಗ್ರೀವನು ಹೇಳುತ್ತಾನೆ:—ಎಲೈ ಮಹರ್ಷಿಯೇ! ಪೂರ್ವದಲ್ಲಿ ಅಮರಪುರಾಧೀಶ್ವರನಾದ ಪುರಂದರನು ವಿಜಯೈಶ್ವರ್ಯಗಳಿಂದ ಸಮೃದ್ಧನಾಗಿ, ದೇವತೆಗಳಿಂದಲೂ, ಅಸುರರಿಂದಲೂ, ಮಾನವರಿಂದಲೂ ತುಂಬಿತುಳುಕುತ್ತಿರುವ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳನ್ನೂ ಪರಿಪಾಲಿಸುತ್ತಿದ್ದನು.

೧೨. ಕೈಲಾಸಪರ್ವತದ ಶಿಖರದಂತೆ ದೊಡ್ಡ ಆಕಾರವುಳ್ಳ ಗಜಶ್ರೇಷ್ಠವಾದ ಐರಾವತವನ್ನೇರಿ ಆ ಮಹೇಂದ್ರನು ಎಲ್ಲರಿಂದಲೂ ಪೂಜಿತನಾಗಿ ಎಲ್ಲ ಲೋಕಗಳಲ್ಲಿಯೂ ಸಂಚರಿಸುತ್ತಿದ್ದನು.

೧೩. ಆಗ ಅವ್ಯಯನೂ ಭವಾನೀಪತಿಯೂ ಆದ ಪರಮೇಶ್ವರನು, ಆ ಮಹೇಂದ್ರನು ವಿಶೇಷವಾಗಿ ಮದಿಸಿಹೋಗಿರುವುದನ್ನು ತಿಳಿದು ದುರ್ವಾಸಮಹರ್ಷಿಯನ್ನು ಕರೆದು ಅವನ ಬಳಿಗೆ ಕಳುಹಿಸಿದನು.

೧೪. ಆ ಮುನಿಯು ಕಂಥೆಯನ್ನು ಹೊದ್ದು, ಅಜಿನವನ್ನುಟ್ಟು,

ಏತಸ್ಮಿನ್ನಂತರೇ ಕಾಲೇ ಕಾಚಿದ್ವಿದ್ಯಾಧರಾಂಗನಾ ।
ಯದೃಚ್ಛಯಾಗತಾ ತಸ್ಯ ಪುರಶ್ಚಾರುತರಾಕೃತಿಃ ॥ ೧೫ ॥
ಚಿರಕಾಲೇನ ತಪಸಾ ತೋಷಯಿತ್ವಾ ಪರಾಂಬಿಕಾಂ ।
ತತ್ಸಮರ್ಪಿತಮಾಲ್ಯಂ ಚ ಲಬ್ಧ್ವಾ ಸಂತುಷ್ಟಮಾನಸಾ ॥ ೧೬ ॥
ತಾಂ ದೃಷ್ಟ್ವಾ ಮೃಗಶಾವಾಕ್ಷೀಮುವಾಚ ಮುನಿಪುಂಗವಃ ।
ಕುತ್ರ ವಾ ಗಮ್ಯತೇ ಭೀರು ಕುತೋ ಲಬ್ಧಮಿದಂ ತ್ವಯಾ ॥ ೧೭ ॥
ಪ್ರಣಮ್ಯ ಸಾ ಮಹಾತ್ಮಾನಮುವಾಚ ವಿನಯಾನ್ವಿತಾ ।
ಚಿರೇಣ ತಪಸಾ ಬ್ರಹ್ಮನ್ ದೇವ್ಯಾ ದತ್ತಂ ಪ್ರಸನ್ನಯಾ ॥ ೧೮ ॥
ತಚ್ಛ್ರುತ್ವಾ ವಚನಂ ತಸ್ಯಾಸ್ತ್ವಪೃಚ್ಛನ್ಮಾಲ್ಯಮುತ್ತಮಂ ।
ಪೃಷ್ಟಮಾತ್ರೇಣ ಸಾ ತುಷ್ಟಾ ದದೌ ತಸ್ಮೈ ಮಹಾತ್ಮನೇ ॥ ೧೯ ॥

---

ದಂಡವನ್ನು ಹಿಡಿದು, ದೂಳುಮುಚ್ಚಿದ ಶರೀರವುಳ್ಳವನಾಗಿ ಹುಚ್ಚನ ವೇಷವನ್ನು ತಾಳಿ ವಿದ್ಯಾಧರರು ಸಂಚರಿಸುವ ಮಾರ್ಗದಲ್ಲಿ ಹೊರಟು ಬರುತ್ತಿದ್ದನು.

೧೫-೧೬. ಇದೇ ಸಮಯದಲ್ಲಿಯೇ ಮಹಾಲಾವಣ್ಯವತಿಯಾದ ಒಬ್ಬಾನೊಬ್ಬ ವಿದ್ಯಾಧರಾಂಗನೆಯು ಅಕಸ್ಮಾತ್ತಾಗಿ ಅವನ ಮುಂಗಡೆಯೇ ಬಂದಳು. ಅವಳು ಬಹುಕಾಲ ತಾನೆಸಗಿದ ತಪಸ್ಸಿನಿಂದ ಪರಾಂಬಿಕೆಯನ್ನು ಸಂತೋಷಗೊಳಿಸಿ ಆಕೆಯು ತನಗಿತ್ತ ಪ್ರಸಾದ ಮಾಲಿಕೆಯನ್ನು ಪಡೆದು ಸಂತುಷ್ಟಮಾನಸೆಯಾಗಿ ಬರುತ್ತಿದ್ದಳು.

೧೭. ಜಿಂಕೆಯ ಮರಿಯ ಕಣ್ಣುಗಳಂತೆ ಚಂಚಲವಾದ ಕಣ್ಣುಗಳುಳ್ಳ ಆ ಸುಂದರಿಯನ್ನು ಕಂಡು ಮುನಿಪುಂಗವನಾದ ದುರ್ವಾಸನು, "ಎಲೆ ಭೀರು! ಎಲ್ಲಿಗೆ ಹೊರಟಿರುವೆ? ಈ ಮಾಲಿಕೆಯು ನಿನಗೆ ಎಲ್ಲಿ ದೊರಕಿತು?" ಎಂದು ಕೇಳಿದನು.

೧೮. ಆಗ ಆಕೆಯು ಮಹಾತ್ಮನಾದ ಆ ಮುನಿಯನ್ನು ನಮಸ್ಕರಿಸಿ ನಮ್ರತೆಯಿಂದ, "ಓ ಮಹರ್ಷೀ! ಮಹಾದೇವಿಯು ಬಹುಕಾಲ ನಾನೆಸಗಿದ ತಪಸ್ಸಿನಿಂದ ಪ್ರಸನ್ನಳಾಗಿ ಈ ಮಾಲಿಕೆಯನ್ನು ನನಗೆ ಅನುಗ್ರಹಿಸಿದಳು" ಎಂದು ಹೇಳಿದಳು.

೧೯. ಅವಳಾಡಿದ ನುಡಿಯನ್ನಾಲಿಸಿ ದುರ್ವಾಸಮುನಿಯು ಉತ್ತಮೋತ್ತಮವಾದ ಆ ಮಾಲಿಕೆಯನ್ನು ತನಗೆ ಕೊಡಬೇಕೆಂದು

**ಕರಾಭ್ಯಾಂ ತತ್ಸಮಾದಾಯ ಕೃತಾರ್ಥೋಽಸ್ಮೀತಿ ಸತ್ವರಂ ।**
**ದಧೌ ಸ್ವಶಿರಸಾ ಭಕ್ತ್ಯಾ ತಾಮುವಾಚಾತಿಹರ್ಷಿತಃ ॥ ೨೦ ॥**
**ಬ್ರಹ್ಮಾದೀನಾಮಲಭ್ಯಂ ಯತ್ತಲ್ಲಬ್ಧಂ ಭಾಗ್ಯತೋ ಮಯಾ ।**
**ಭಕ್ತಿರಸ್ತು ಪದಾಂಭೋಜೇ ದೇವ್ಯಾಸ್ತವ ಸಮುಜ್ಜ್ವಲಾ ॥ ೨೧ ॥**
**ಭವಿಷ್ಯಚ್ಛೋಭನಾಕಾರೇ ಗಚ್ಛ ಸೌಮ್ಯೇ ಯಥಾಸುಖಂ ।**
**ಸಾ ತಂ ಪ್ರಣಮ್ಯ ಶಿರಸಾ ಯಯೌ ತುಷ್ಟಾ ಯಥಾಗತಂ ॥ ೨೨ ॥**
**ಪ್ರೇಷಯಿತ್ವಾ ಸ ತಾಂ ಭೂಯೋ ಯಯೌ ವಿದ್ಯಾಧರಾಧ್ವನಾ ।**
**ವಿದ್ಯಾಧರವಧೂಭ್ಯಶ್ಚ ಪ್ರತಿಜಗ್ರಾಹ ವಲ್ಲಕೀಂ ॥ ೨೩ ॥**
**ದಿವ್ಯಸ್ರಗನುಲೇಪಾಂಶ್ಚ ದಿವ್ಯಾನ್ಯಾಭರಣಾನಿ ಚ ।**
**ಕ್ವಚಿದ್ವದನ್ ಕ್ವಚಿದ್ಗೃಹ್ಣನ್ ಕ್ವಚಿದ್ಗಾಯನ್ ಕ್ವಚಿದ್ಧಸನ್ ॥ ೨೪ ॥**
**ಸ್ವೇಚ್ಛಾವಿಹಾರೀ ಸ ಮುನಿರ್ಯಯೌ ಯತ್ರ ಪುರಂದರಃ ।**
**ಸ್ವಕರಸ್ಥಾಂ ತತೋ ಮಾಲಾಂ ಶಕ್ರಾಯ ಪ್ರದದೌ ಮುನಿಃ ॥ ೨೫ ॥**

---

ಕೇಳಿದನು. ವಿದ್ಯಾಧರಾಂಗನೆಯಾದರೋ ಕೇಳಿದೊಡನೆಯೇ ಅದನ್ನು ಸಂತೋಷದಿಂದ ಆ ಮಹಾತ್ಮನಿಗೆ ಕೊಟ್ಟುಬಿಟ್ಟಳು.

೨೦-೨೨. ಮುನಿಯು ಆ ಮಾಲಿಕೆಯನ್ನು ಎರಡೂ ಕೈಗಳಿಂದ ಸ್ವೀಕರಿಸಿ ಕೃತಾರ್ಥನಾದೆನೆಂದು ಹೇಳುತ್ತ, ಅದನ್ನು ಭಕ್ತಿಯಿಂದ ಶಿರಸ್ಸಿನಲ್ಲಿ ಧಾರಣೆಮಾಡಿ, ಪರಮಾನಂದಭರಿತನಾಗಿ ವಿದ್ಯಾಧರಾಂಗನೆಯನ್ನು ಕುರಿತು, "ಎಲೌ ವಿದ್ಯಾಧರೆಯೇ! ಬ್ರಹ್ಮಾದಿದೇವತೆಗಳಿಗೂ ಅಲಭ್ಯವಾದ ಈ ಪ್ರಸಾದಮಾಲಿಕೆಯು ನನ್ನ ಪುಣ್ಯದಿಂದ ಲಭ್ಯವಾಯಿತು. ಮಹಾದೇವಿಯ ಪಾದಕಮಲಗಳಲ್ಲಿ ನಿನಗೆ ಯಾವಾಗಲೂ ಸ್ಥಿರವಾದ ಭಕ್ತಿಯು ಬೆಳಗುತ್ತಿರಲಿ. ಎಲೆ ಸೌಮ್ಯಳೇ! ಮುಂದೆ ನಡೆಯುವ ಮಂಗಳಕಾರ್ಯಕ್ಕೆ ನೀನೇ ಕಾರಣಳಾದೆ. ಸುಖವಾಗಿ ಹೋಗಿಬಾ" ಎಂದು ಹೇಳಿದನು. ವಿದ್ಯಾಧರಾಂಗನೆಯಾದರೊ ಆತನನ್ನು ನಮಸ್ಕರಿಸಿ ಸಂತುಷ್ಟೆಯಾಗಿ ತಾನು ಬಂದಂತೆಯೇ ಹಿಂತಿರುಗಿದಳು.

೨೩-೨೫. ಆಕೆಯನ್ನು ಕಳುಹಿಸಿದ ತರವಾಯ, ದುರ್ವಾಸ ಮಹರ್ಷಿಯು ಅದೇ ವಿದ್ಯಾಧರ ಮಾರ್ಗದಲ್ಲಿಯೇ ಮುಂದುವರಿಯುತ್ತ, ವಿದ್ಯಾಧರವಧುಗಳಿಂದ ವೀಣೆಯೊಂದನ್ನೂ, ದಿವ್ಯವಾದ ಪುಷ್ಪಮಾಲಿಕೆಗಳನ್ನೂ, ಸುಗಂಧದ್ರವ್ಯಗಳನ್ನೂ, ದಿವ್ಯಾಭರಣಗಳನ್ನೂ ಸ್ವೀಕರಿಸಿ, ಕೆಲವೆಡೆಗಳಲ್ಲಿ ತನ್ನಷ್ಟಕ್ಕೆ ತಾನೇ ಮಾತನಾಡಿಕೊಳ್ಳುತ್ತಲೂ, ಕೆಲವೆಡೆ

**ತಾಂ ಗೃಹೀತ್ವಾ ಗಜಸ್ಕಂಧೇ ಸ್ಥಾಪಯಾಮಾಸ ದೇವರಾಟ್ ।**
**ಗಜಸ್ತು ತಾಂ ಗೃಹೀತ್ವಾಽಥ ಪೇಷಯಾಮಾಸ ಭೂತಲೇ ॥ ೨೬ ॥**
**ತಾಂ ದೃಷ್ಟ್ವಾ ಪೇಷಿತಾಂ ಮಾಲಾಂ ಕ್ರುದ್ಧಃ ಕೋಪೇನ ತಾಪಸಃ ।**
**ಉವಾಚ ನ ಧೃತಾ ಮಾಲಾ ಶಿರಸಾ ತು ಮಯಾರ್ಪಿತಾ ॥ ೨೭ ॥**
**ಮಹಾದೇವ್ಯಾ ಧೃತಾ ಮಾಲಾ ಬ್ರಹ್ಮಾದ್ಯೈಃ ಪೂಜ್ಯತೇ ಹಿ ಸಾ ।**
**ತ್ರೈಲೋಕ್ಯೈಶ್ವರ್ಯಮತ್ತೇನ ಭವತಾ ತ್ವವಮಾನಿತಾ ॥ ೨೮ ॥**
**ತ್ವಯಾ ಯಚ್ಛಾಸಿತಂ ಲೋಕಂ ಸದೇವಾಸುರಮಾನುಷಂ ।**
**ಅಶೋಭಿತಮತೇಜಸ್ಕಂ ಮಮ ಶಾಪಾದ್ಭವಿಷ್ಯತಿ ॥ ೨೯ ॥**
**ಇತಿ ಶಪ್ತ್ವಾ ವಿನೀತೇನ ತೇನ ಸಂಪೂಜಿತೋಽಪಿ ಸಃ । [ ೩೦ ॥**
**ತೂಷ್ಣೀಮೇವ ಯಯೌ ಬ್ರಹ್ಮನ್ ಭಾವಿಕಾರ್ಯಮನುಸ್ಮರನ್ ॥**

---

ಗಳಲ್ಲಿ ದಿವ್ಯಾಭರಣಗಳನ್ನು ತೆಗೆದುಕೊಳ್ಳುತ್ತಲೂ, ಕೆಲವೆಡೆಗಳಲ್ಲಿ ಹಾಡುತ್ತಲೂ, ಕೆಲವೆಡೆಗಳಲ್ಲಿ ನಗುತ್ತಲೂ ಉನ್ಮತ್ತನಂತೆ ಸ್ವೇಚ್ಛೆಯಾಗಿ ವಿಹರಿಸಿ ಸಂಚರಿಸುತ್ತ ಕಡೆಗೆ ಮಹೇಂದ್ರನಿದ್ದೆಡೆಗೆ ಆಗಮಿಸಿ ತನ್ನ ಕೈಯಲ್ಲಿದ್ದ ಮಾಲಿಕೆಯನ್ನು ಅವನಿಗೆ ಕೊಟ್ಟನು.

೨೬. ದೇವರಾಜನು ಆ ಮಾಲಿಕೆಯನ್ನು ತೆಗೆದುಕೊಂಡು ಐರಾವತದ ಕುಂಭಸ್ಥಳದಲ್ಲಿಟ್ಟನು. ಆ ಗಜವಾದರೊ ಅದನ್ನು ಸೊಂಡಿಲಿನಿಂದ ಸೆಳೆದು ನೆಲಕ್ಕೆ ಹಾಕಿ ಕಾಲಿನಿಂದ ತಿಕ್ಕಿತು.

೨೭. ಗಜವು ಈರೀತಿ ಆ ಮಾಲಿಕೆಯನ್ನು ಕಾಲಿನಿಂದ ತಿಕ್ಕಿದುದನ್ನು ನೋಡಿ ಆ ದುರ್ವಾಸಮಹರ್ಷಿಯು ಕೋಪಗೊಂಡು ಮಹೇಂದ್ರನನ್ನು ಕುರಿತು ಹೀಗೆ ಹೇಳಿದನು: "ಎಲಾ ಮಹೇಂದ್ರಾ! ನಾನು ನಿನಗೆ ಸಮರ್ಪಿಸಿದ ಈ ಮಾಲಿಕೆಯನ್ನು ನೀನು ಶಿರಸ್ಸಿನಲ್ಲಿ ಧರಸಲಿಲ್ಲವಷ್ಟೆ!

೨೮. ಮಹಾದೇವಿಯು ಧರಿಸಿದ ಆ ಮಾಲಿಕೆಯನ್ನು ಬ್ರಹ್ಮಾದಿಗಳೂ ಪೂಜಿಸುತ್ತಾರೆ. ಅಂತಹುದನ್ನು, ಮೂರು ಲೋಕಗಳ ಐಶ್ವರ್ಯದಿಂದ ಮದಿಸಿದ ನೀನು ತಿರಸ್ಕರಿಸಿದೆಯಲ್ಲವೆ!

೨೯. ಇದೋ, ನೀನು ಆಳುತ್ತಿರುವ ದೇವಾಸುರಮನುಷ್ಯರೊಡಗೂಡಿದ ಈ ಸಮಸ್ತಲೋಕವೂ ನನ್ನ ಶಾಪದಿಂದ, ಅಮಂಗಳಕರವೂ ಕಾಂತಿಹೀನವೂ ಆಗಿಹೋಗಲಿ."

೩೦. ಈರೀತಿ ಆ ದುರ್ವಾಸಮುನಿಯು ಆ ಮಹೇಂದ್ರನನ್ನು ಶಪಿಸಿ, ಅವನು ನಮ್ರನಾಗಿ ತನ್ನನ್ನು ಪೂಜಿಸಿದರೂ, ಮುಂದೆ ನಡೆಯಬೇಕಾ

**ವಿಜಯಶ್ರೀಶ್ಚ ಸಾ ತಸ್ಯ ದೈತ್ಯಲೋಕಮುಥಾನ್ವಗಾತ್ ।**
**ನಿತ್ಯಶ್ರೀರ್ನಿತ್ಯಪುರುಷಂ ವಾಸುದೇವಮುಥಾಽನ್ವಗಾತ್ ॥ ೩೦ ॥**
**ಇಂದ್ರೋಽಪಿ ಸ್ವಪುರಂ ಗತ್ವಾ ಸರ್ವದೇವಸಮನ್ವಿತಃ ।**
**ವಿಷಣ್ಣಚೇತಾ ನಿಃಶ್ರೀಕಶ್ಚಿಂತಯಾಮಾಸ ದೇವರಾಟ್ ॥ ೩೧ ॥**
**ಅಥಾಽಮರಪುರೇ ದೃಷ್ಟ್ವಾ ನಿಮಿತ್ತಾನ್ಯಶುಭಾನಿ ಚ ।**
**ಬೃಹಸ್ಪತಿಂ ಸಮಾಹೂಯ ವಾಕ್ಯಂ ಚೈತದುವಾಚ ಹ ॥ ೩೨ ॥**
**ಭಗವನ್ ಸರ್ವಧರ್ಮಜ್ಞ ತ್ರಿಕಾಲಜ್ಞಾನಕೋವಿದ ।**
**ದೃಶ್ಯಂತೇಽದೃಷ್ಟಪೂರ್ವಾಣಿ ನಿಮಿತ್ತಾನ್ಯಶುಭಾನಿ ನಃ ।**
**ಕಿಂ ಫಲಾನಿ ಚ ತಾನಿ ಸ್ಯುರುಪಾಯೋ ವಾಽಥ ಕೀದೃಶಃ ॥ ೩೪ ॥**
**ಇತಿ ತದ್ವಚನಂ ಶ್ರುತ್ವಾ ದೇವರಾಜಂ ಬೃಹಸ್ಪತಿಃ ।**
**ಪ್ರತ್ಯುವಾಚ ತತೋ ವಾಕ್ಯಂ ಧರ್ಮಾರ್ಥಸಹಿತಂ ಶುಭಂ ॥ ೩೫ ॥**

---

ಗಿರುವ ಕಾರ್ಯಗಳನ್ನೇ ಸ್ಮರಿಸಿ ಯಾವ ಮಾತನ್ನೂ ಆಡದೆ ಸುಮ್ಮನೆಯೇ ಹೊರಟುಹೋದನು.

೩೦. ಬಳಿಕ ವಿಜಯಲಕ್ಷ್ಮಿಯು ಮಹೇಂದ್ರನನ್ನು ತೊರೆದು ದೈತ್ಯಲೋಕಕ್ಕೆ ಹೊರಟುಹೋದಳು. ನಿತ್ಯಲಕ್ಷ್ಮಿಯು ನಿತ್ಯಪುರುಷನಾದ ವಾಸುದೇವನ ಬಳಿಗೈದಿದಳು.

೩೧. ಇತ್ತ ದೇವೇಂದ್ರನಾದರೋ ಅಮರಾವತಿಗೆ ಹೋಗಿ ದೇವತೆಗಳೆಲ್ಲರೊಡಗೂಡಿ ಖಿನ್ನಮಾನಸನೂ, ತೇಜೋವಿಹೀನನೂ ಆಗಿ ಚಿಂತಿಸತೊಡಗಿದನು.

೩೨. ಅಮರಾವತಿಯಲ್ಲಿ ಅಮಂಗಳಕರವಾದ ದುರ್ನಿಮಿತ್ತಗಳುಂಟಾದುದನ್ನು ಕಂಡು ಆ ಮಹೇಂದ್ರನು ಕೂಡಲೇ ತನ್ನ ಗುರುವಾದ ಬೃಹಸ್ಪತ್ಯಾಚಾರ್ಯನನ್ನು ಕರೆಯಿಸಿ ಆತನನ್ನು ಕುರಿತು ಹೀಗೆ ಹೇಳಿದನು :

೩೪. "ಎಲೈ ಪೂಜ್ಯನೇ! ನೀನು ಎಲ್ಲ ಧರ್ಮಗಳನ್ನೂ ತಿಳಿದವನು; ಭೂತಭವಿಷ್ಯದ್ವರ್ತಮಾನಕಾಲಗಳ ಆಗುಹೋಗುಗಳನ್ನು ತಿಳಿಯುವುದರಲ್ಲಿ ಸಮರ್ಥನಾದವನು. ಈಗ ಅಮರಾವತಿಯಲ್ಲಿಯಾದರೋ ಹಿಂದೆ ಯಾವಾಗಲೂ ಕಾಣಿಸದಿದ್ದ ಅಪಶಕುನಗಳು ಕಾಣತೊಡಗಿವೆ. ಇವುಗಳ ಫಲವೇನು? ಇವುಗಳ ನಿವಾರಣೋಪಾಯವಾದರೂ ಹೇಗೆ?"

೩೫. ದೇವೇಂದ್ರನ ಈ ಮಾತುಗಳನ್ನು ಕೇಳಿ, ಬೃಹಸ್ಪತಿಯು

**ಕೃತಸ್ಯ ಕರ್ಮಣೋ ರಾಜನ್ ಕಲ್ಪಕೋಟಿಶತೈರಪಿ । [೩೬ ॥**
**ಪ್ರಾಯಶ್ಚಿತ್ತೋಪಭೋಗಾಭ್ಯಾಂ ವಿನಾ ನಾಶೋ ನ ಜಾಯತೇ ॥**

**ದೇವರಾಜಃ—**

**ಕರ್ಮ ವಾ ಕೀದೃಶಂ ಬ್ರಹ್ಮನ್ ಪ್ರಾಯಶ್ಚಿತ್ತಂ ಚ ಕೀದೃಶಂ ।**
**ತತ್ಸರ್ವಂ ಶ್ರೋತುಮಿಚ್ಛಾಮಿ ತನ್ಮೋ ವಿಸ್ತರತೋ ವದ ॥ ೩೭ ॥**

**ಬೃಹಸ್ಪತಿಃ—**

**ಹನನಸ್ತೇಯಹಿಂಸಾಶ್ಚ ಪಾನಮನ್ಯಾಂಗನಾರತಿಃ ।**
**ಕರ್ಮ ಪಂಚವಿಧಂ ಪ್ರಾಹುರ್ದುಷ್ಕೃತಂ ಧರಣೀತಲೇ ॥ ೩೮ ॥**
**ಬ್ರಹ್ಮಕ್ಷತ್ರಿಯವಿಟ್ಛೂದ್ರಗೋತುರಂಗಗಜೋಷ್ಟ್ರಕಾಃ ।**
**ಚತುಷ್ಪದೋಽಂಡಜಾಬ್ಜಾಶ್ಚ ತಿರ್ಯಂಚೋಽನಸ್ಥಿಕಾಸ್ತಥಾ ॥ ೩೯ ॥**
**ಅಯುತಂ ಚ ಸಹಸ್ರಂ ಚ ಶತಂ ದಶ ತಥಾ ದಶ ।**
**ದಶಪಂಚ ತ್ರಿರೇಕಾರ್ಧಮಾನುಪೂರ್ವ್ಯಾದಘಂ ಭವೇತ್ ॥ ೪೦ ॥**

---

ಅವನನ್ನು ಕುರಿತು ಧರ್ಮಾರ್ಥಸಹಿತವೂ, ಮಂಗಳಕರವೂ ಆದ ಮಾತನ್ನು ಹೀಗೆ ಹೇಳಿದನು.

೩೬. "ದೊರೆಯೇ! ಮಾಡಿದ ಕರ್ಮಕ್ಕೆ ಪ್ರಾಯಶ್ಚಿತ್ತ, ಉಪಭೋಗ ಇವೆರಡೂ ಆಗದಿದ್ದರೆ, ನೂರುಕೋಟಿ ಕಲ್ಪಪ್ರಮಾಣ ಕಾಲವು ಕಳೆದರೂ ಆ ಕರ್ಮವು ನಾಶವಾಗುವುದೇ ಇಲ್ಲವು."

೩೭. ಮಹೇಂದ್ರನು ಹೇಳುತ್ತಾನೆ:—"ಭೋ ಬ್ರಹ್ಮನ್! ಕರ್ಮವೆಂದರೆಂತಹುದು? ಪ್ರಾಯಶ್ಚಿತ್ತವಾದರೂ ಎಂತಹುದು? ಈ ವಿಷಯವೆಲ್ಲವನ್ನೂ ಕೇಳಲಪೇಕ್ಷಿಸುವೆನು. ವಿಸ್ತಾರವಾಗಿ ತಿಳಿಯಹೇಳಬೇಕು."

೩೮. ಬೃಹಸ್ಪತಿಯು ಹೇಳುತ್ತಾನೆ:—ಕೊಲೆ, ಕಳ್ಳತನ, ಹಿಂಸೆ, ಕುಡಿತ, ಪರಸ್ತ್ರೀಗಮನ, ಈ ಐದೂ ಪ್ರಪಂಚದಲ್ಲಿ ಮಹಾಪಾತಕಗಳೆಂದು ಹೇಳುತ್ತಾರೆ.

೩೯-೪೦. ಪಾಪಕರ್ಮವನ್ನೆಸಗಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಗೋವು, ಕುದುರೆ, ಹೇಸರಕತ್ತೆ, ಒಂಟೆ, ಮೊಟ್ಟೆಯಿಂದ ಹುಟ್ಟುವ ಪ್ರಾಣಿ, ಜಲಚರ, ಎಲುಬಿಲ್ಲದ ಪ್ರಾಣಿ, ಇವುಗಳಲ್ಲಿ ಪ್ರತಿಯೊಂದಕ್ಕೂ ಕ್ರಮವಾಗಿ, ಹತ್ತು ಸಾವಿರ, ಸಾವಿರ, ನೂರು, ಹತ್ತು, ಹತ್ತು, ಹತ್ತು, ಐದು, ಮೂರು, ಒಂದು, ಅರ್ಧ, ಈ ಸಂಖ್ಯೆಯ ಪಾಲಿನಷ್ಟು ಪಾತಕವುಂಟಾಗುತ್ತದೆ.

**ಬ್ರಹ್ಮಕ್ಷತ್ರವಿಶಾಂ ಸ್ತ್ರೀಣಾಮುಕ್ತಾರ್ಥೇ ಪಾದಮಾಚರೇತ್ ।**
**ಪಿತೃಮಾತೃಗುರುಸ್ವಾಮಿಪುತ್ರಾಣಾಂ ನಾಸ್ತಿ ನಿಷ್ಕೃತಿಃ ॥ ೪೧ ॥**
**ಗುರ್ವಾಜ್ಞಯಾ ಕೃತೇ ಪಾದಂ ತದಾಜ್ಞೋಲ್ಲಂಘನೇಽರ್ಧಕಂ ॥**
**ದಶಬ್ರಾಹ್ಮಣಭೃತ್ಯರ್ಥಮೇಕಂ ಹನ್ಯಾದ್ದ್ವಿಜಂ ನೃಪಃ । [ ೪೨ ॥**
**ಶತಬ್ರಾಹ್ಮಣಭೃತ್ಯರ್ಥಂ ಬ್ರಾಹ್ಮಣೋ ಬ್ರಾಹ್ಮಣಂ ತು ವಾ ॥ ೪೩ ॥**
**ಪಂಚಬ್ರಹ್ಮವಿದಾಮರ್ಥೇ ವೈಶ್ಯಮೇಕಂ ತು ದಂಡಯೇತ್ ।**
**ವೈಶ್ಯೋ ದಶವಿಶಾಮರ್ಥೇ ವಿಶಂ ವಾ ದಂಡಯೇತ್ತಥಾ ॥ ೪೪ ॥**
**ತಥಾ ಶತವಿಶಾಮರ್ಥೇ ದ್ವಿಜಮೇಕಂ ತು ದಂಡಯೇತ್ ॥ ೪೫ ॥**
**ಶೂದ್ರಾಣಾಂ ತು ಸಹಸ್ರಾರ್ಥೇ ದಂಡಯೇದ್ಬ್ರಾಹ್ಮಣಂ ತು ವಾ ।**
**ತಚ್ಛತಾರ್ಥೇ ತು ವಾ ವೈಶ್ಯಂ ತದ್ದಶಾರ್ಥೇ ತು ಶೂದ್ರಕಂ ॥ ೪೬ ॥**

---

೪೧. ಬ್ರಹ್ಮ ಕ್ಷತ್ರಿಯ ವೈಶ್ಯ ಸ್ತ್ರೀಯರುಗಳ ವಿಷಯದಲ್ಲಿ ಮೇಲೆ ಹೇಳಿದ ಪಾಪದಲ್ಲಿ ಕಾಲುಭಾಗವನ್ನು ನಿಷ್ಕರ್ಷಿಸತಕ್ಕದ್ದು. ತಂದೆ, ತಾಯಿ, ಗುರು, ಸ್ವಾಮಿ, ಮಕ್ಕಳು, ಇವರ ಹತ್ಯೆಯ ವಿಷಯದಲ್ಲಿ ಪ್ರಾಯಶ್ಚಿತ್ತವೇ ಇರುವುದಿಲ್ಲ.

೪೨. ಗುರುವಿನ ಅನುಜ್ಞೆಯಿಂದ ಹತ್ಯೆಮಾಡಿದರೆ, ಕಾಲುಭಾಗವೂ, ಆತನ ಅನುಜ್ಞೆಯನ್ನು ಮೀರಿ ಹತ್ಯೆಮಾಡಿದರೆ ಅರ್ಧಭಾಗವೂ ಪಾಪ ವುಂಟಾಗುವುದು.

೪೩. ರಾಜನಾದವನು ಹತ್ತು ಮಂದಿ ಬ್ರಾಹ್ಮಣರ ರಕ್ಷಣೆಗಾಗಿ ಒಬ್ಬ ಬ್ರಾಹ್ಮಣನನ್ನು ಕೊಲ್ಲಬಹುದು. ಅಥವಾ, ನೂರು ಮಂದಿ ಬ್ರಾಹ್ಮಣರ ರಕ್ಷಣೆಗಾಗಿ ಬ್ರಾಹ್ಮಣನೇ ಒಬ್ಬ ಬ್ರಾಹ್ಮಣನನ್ನು ದಂಡಿಸ ಬಹುದು.

೪೪. ಐದು ಮಂದಿ ಬ್ರಾಹ್ಮಣರಿಗಾಗಿ ವೈಶ್ಯನೊಬ್ಬನನ್ನು ದಂಡಿಸ ಬಹುದು. ಅಥವಾ, ಹತ್ತು ಮಂದಿ ವೈಶ್ಯರಿಗಾಗಿ ವೈಶ್ಯನೇ ಒಬ್ಬ ವೈಶ್ಯನನ್ನು ದಂಡಿಸಬಹುದು.

೪೫. ಹಾಗೆಯೇ ನೂರು ಮಂದಿ ವೈಶ್ಯರಿಗೋಸ್ಕರ ಬ್ರಾಹ್ಮಣ ನೊಬ್ಬನನ್ನು ದಂಡಿಸತಕ್ಕುದು.

೪೬. ಇಷ್ಟೆಯಲ್ಲದೆ ಪ್ರಭುವಾದವನು, ಒಂದು ಸಾವಿರ ಮಂದಿ ಶೂದ್ರರಿಗಾಗಿ ಒಬ್ಬ ಬ್ರಾಹ್ಮಣನನ್ನು ದಂಡಿಸಿದರೂ ದಂಡಿಸಬಹುದು.

**ಬಂಧೂನಾಂ ಚೈವ ಮಿತ್ರಾಣಾಮಿಷ್ಟಾರ್ಥೇ ತು ತ್ರಿಪಾದಕಂ ।**
**ಅರ್ಧಂ ಕಲತ್ರಪುತ್ರಾರ್ಥೇ ಸ್ವಾತ್ಮಾರ್ಥೇ ತು ನ ಕಿಂಚನ ॥ ೪೭ ॥**
**ಆತ್ಮಾನಂ ಹಂತುಮಾರಬ್ಧಂ ಬ್ರಾಹ್ಮಣಂ ಕ್ಷತ್ರಿಯಂ ವಿಶಂ ।**
**ಗಾಂ ವಾ ತುರಂಗಮನ್ಯಂ ವಾ ಹತ್ವಾ ದೋಷೈರ್ನಲಿಪ್ಯತೇ ॥ ೪೮ ॥**
**ಆತ್ಮದಾರಾತ್ಮಜ ಭ್ರಾತೃಬಂಧೂನಾಂ ತು ದ್ವಿಜೋತ್ತಮ ।**
**ಕ್ರಮಾದ್ದಶಗುಣೋ ದೋಷೋ ರಕ್ಷಣೇ ಚ ತಥಾ ಫಲಂ ॥ ೪೯ ॥**
**ದೇವದ್ವಿಜಶ್ರೋತ್ರಿಯವೇದವಿದ್ವ್ರತೀ**
**ವೇದಾಂತವಿದ್ವೇದವಿದಾಂ ವಿನಾಶೇ ।**
**ಏಕದ್ವಿಪಂಚಶತ ತದ್ದಶ ಚಾಯುತಂ ಚ**
**ಲಕ್ಷಂ ಚ ನಿಷ್ಕೃತಿರಿತಿ ಪ್ರವದಂತಿ ತಜ್ಞಾಃ ॥ ೫೦ ॥**

---

ನೂರು ಮಂದಿ ಶೂದ್ರರಿಗಾಗಿ ಒಬ್ಬ ವೈಶ್ಯನನ್ನೂ, ಹತ್ತುಮಂದಿ ಶೂದ್ರರಿಗಾಗಿ ಒಬ್ಬ ಶೂದ್ರನನ್ನೂ ಶಿಕ್ಷಿಸಬಹುದು.

೪೭. ಬಂಧುಗಳ ಮತ್ತು ಮಿತ್ರರ ಅಭೀಷ್ಟಸಿದ್ಧಿಗಾಗಿ ಹತ್ಯೆ ಮಾಡಿದರೆ ಮುಕ್ಕಾಲುಪಾಲೂ, ಹೆಂಡತಿ, ಮಕ್ಕಳಿಗಾಗಿ ಹತ್ಯೆಮಾಡಿದರೆ ಅರ್ಧಪಾಲೂ ಪಾಪವುಂಟು. ಆದರೆ ಆತ್ಮರಕ್ಷಣೆಗಾಗಿ ಹತ್ಯೆಮಾಡಿದರೆ ಪಾಪಲೇಪವಾಗುವುದಿಲ್ಲ.

೪೮. ತನ್ನನ್ನು ಕೊಲ್ಲಲು ಬಂದ, ಬ್ರಾಹ್ಮಣ ಕ್ಷತ್ರಿಯ ವೈಶ್ಯರನ್ನಾಗಲಿ, ಆಕಳು ಕುದುರೆಗಳನ್ನಾಗಲಿ, ಮತ್ತಾವ ಪ್ರಾಣಿಯನ್ನೇ ಆಗಲಿ ಕೊಲೆಮಾಡಿದರೂ ದೋಷಲೇಪವಾಗುವುದಿಲ್ಲ.

೪೯. ತಾನು, ಹೆಂಡತಿ, ಮಗ, ಅಣ್ಣತಮ್ಮಂದಿರು, ಬಂಧುಗಳು, ಇವರುಗಳ ಹತ್ಯೆಯು ಒಂದಕ್ಕಿಂತಲೂ ಒಂದು ಹತ್ತರಷ್ಟು ಹೆಚ್ಚಿನ ದೋಷಕ್ಕೆ ಕಾರಣವಾಗುವುದು. ಅಲ್ಲದೆ, ಅವರನ್ನು ರಕ್ಷಿಸಿದರೂ ಅಷ್ಟೇ ಪುಣ್ಯವೂ ಲಭಿಸುತ್ತದೆ.

೫೦. ಮಹೇಂದ್ರಾ! ಸತ್ಪುರುಷರಾದವರು, ಪ್ರಭು, ಬ್ರಾಹ್ಮಣ, ಶ್ರೋತ್ರಿಯ, ವೇದವನ್ನು ತಿಳಿದವನು, ವ್ರತನಿಯಮಗಳನ್ನು ಅನುಷ್ಠಿಸುವವನು, ವೇದಾಂತಿ, ಬ್ರಹ್ಮಜ್ಞಾನಿ, ಇವರ ಹತ್ಯೆಯೊಂದೊಂದರ ವಿಷಯದಲ್ಲಿಯೂ ಕ್ರಮವಾಗಿ ಒಂದು, ಎರಡು, ಐದು, ನೂರು, ಸಾವಿರ, ಹತ್ತು ಸಾವಿರ, ಲಕ್ಷ ಈ ಕ್ರಮದಿಂದ ಪ್ರಾಯಶ್ಚಿತ್ತವೆಂದು ಹೇಳುತ್ತಾರೆ.

**ತೇಷಾಂ ಚ ರಕ್ಷಣವಿಧೌ ಚ ಕೃತೇಽಪಿ ದಾನೇ**
**ಪೂರ್ವೋದಿತೋತ್ತರಗುಣಂ ಪ್ರವದಂತಿ ಪುಣ್ಯಂ ।**
**ತೇಷಾಂ ಚ ದರ್ಶನವಿಧೌ ನಮನೇ ಚ ಕಾರ್ಯೇ**
**ಶುಶ್ರೂಷಣೇ ವಿಚರತಾಂ ಸದೃಶಂ ಚ ಪುಣ್ಯಂ ॥ ೫೧ ॥**
**ಸಿಂಹವ್ಯಾಘ್ರಮೃಗಾದೀನಿ ಲೋಕಹಿಂಸಾಕರಾಣಿ ತು ।**
**ನೃಪೋ ಹನ್ಯಾಚ್ಚ ಸತತಂ ದೇವಾರ್ಥೇ ಬ್ರಾಹ್ಮಣಾರ್ಥಕೇ ॥ ೫೨ ॥**
**ಆಪತ್ಸ್ವಾತ್ಮಾರ್ಥತೋ ವಾಪಿ ಹತ್ವಾ ಮೇಧ್ಯಾನಿ ಭಕ್ಷಯೇತ್ ।**
**ನಾತ್ಮಾರ್ಥಂ ಪಾಚಯೇದನ್ನಂ ನಾತ್ಮಾರ್ಥಂ ಪಾಚಯೇತ್ಪಶೂನ್ ।**
**ದೇವಾರ್ಥೇ ಬ್ರಾಹ್ಮಣಾರ್ಥೇ ವಾ ಪಚಮಾನೋ ನ ಲಿಪ್ಯತೇ ॥೫೩॥**
**ಪುರಾ ಭಗವತೀ ಮಾಯಾ ಜಗದುಜ್ಜೀವನೋನ್ಮುಖೀ ।**
**ಸಸರ್ಜ ಸರ್ವದೇವಾಂಶ್ಚ ಸದೇವಾಸುರಮಾನುಷಾನ್ ॥ ೫೪ ॥**

---

೫೧. ಅವರ ಸಂರಕ್ಷಣೆಯ ವಿಷಯುದಲ್ಲಿಯೂ, ಅವರಿಗೆ ಕೊಟ್ಟ ದಾನದ ವಿಷಯುದಲ್ಲಿಯೂ ಹಿಂದೆ ಹೇಳಿದುದಕ್ಕಿಂತಲೂ ಹೆಚ್ಚಾದ ಪುಣ್ಯವುಂಟೆಂದು ಹೇಳುವರು. ಅಲ್ಲದೆ, ಅವರನ್ನು ಸಂದರ್ಶಿಸುವುದು, ನಮಸ್ಕರಿಸುವುದು, ಶುಶ್ರೂಷೆ ಮಾಡುವುದು, ಅವರ ಇಷ್ಟದಂತೆ ನಡೆಯುವುದು—ಇವುಗಳಿಂದಲೂ ಅಧಿಕಾಧಿಕವಾದ ಪುಣ್ಯಲಾಭವಾಗುವುದೆಂದೂ ಹೇಳುತ್ತಾರೆ.

೫೨. ರಾಜನಾದವನು ದೇವತೆಗಳಿಗಾಗಿಯೂ, ಬ್ರಾಹ್ಮಣರಿಗಾಗಿಯೂ, ಲೋಕೋಪದ್ರವಕರಗಳಾದ ಸಿಂಹ, ಹುಲಿ, ಮುಂತಾದ ದುಷ್ಟಮೃಗಗಳನ್ನು ಯಾವಾಗಲೂ ಬೇಟೆಯಾಡಿ ಕೊಲ್ಲುತ್ತಿರಬೇಕು.

೫೩. ದೊರೆಯು ಆಪತ್ಕಾಲಗಳಲ್ಲಿ ಆತ್ಮರಕ್ಷಣೆಗಾಗಿ ಭಕ್ಷಣಯೋಗ್ಯಗಳಾದ ಮೃಗಗಳನ್ನು ಕೊಂದು ಭಕ್ಷಿಸಬಹುದು. ಇತರ ಸಂದರ್ಭಗಳಲ್ಲಿ ತನಗಾಗಿಯೇ ಅನ್ನವನ್ನಾಗಲಿ, ಪಶುಗಳನ್ನಾಗಲಿ ಪಚನ ಮಾಡಬಾರದು. ದೇವತೆಗಳಿಗಾಗಿಯೂ, ಬ್ರಾಹ್ಮಣರಿಗಾಗಿಯೂ ಪಶುಗಳನ್ನು ಕೊಂದು ಪಚನಮಾಡಿದಲ್ಲಿ ದೋಷಲೇಪವಾಗುವುದಿಲ್ಲ.

೫೪. ಪೂರ್ವದಲ್ಲಿ ಪರಮಪೂಜ್ಯೆಯಾದ ಜಗನ್ಮಾಯೆಯು ಜಗತ್ತನ್ನು ಉಜ್ಜೀವನಗೊಳಿಸಬಯಿಸಿ ಸಮಸ್ತ ದೇವತೆಗಳನ್ನೂ, ಅಸುರರನ್ನೂ, ಮಾನವರನ್ನೂ ಸೃಜಿಸಿದಳು.

**ತೇಷಾಂ ಸಂರಕ್ಷಣಾರ್ಥಾಯ ಪಶೂನಪಿ ಚತುರ್ದಶ ।**
**ಯಜ್ಞಾಂಶ್ಚ ತದ್ವಿಧಾನಾನಿ ಕೃತ್ವಾ ಚೈನಾನುವಾಚ ಹ ॥ ೫೫ ॥**
**ಯಜಧ್ವಂ ಪಶುಭಿರ್ದೇವಾನ್ವಿಧಿನಾ ಚೈವ ಮಾನವಾಃ ।**
**ಇಷ್ಟಾನಿ ವಃ ಪ್ರದಾಸ್ಯಂತಿ ತುಷ್ಟಾಸ್ತೇ ಯಜ್ಞಭಾವಿತಾಃ ॥ ೫೬ ॥**
**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ದರಿದ್ರೋ ನಾರಕಶ್ಚೈವ ಭವೇಜ್ಜನ್ಮನಿ ಜನ್ಮನಿ ॥ ೫೭ ॥**
**ದೇವತಾರ್ಥೇ ಚ ಪಿತ್ರರ್ಥೇ ತಥೈವಾಭ್ಯಾಗತೇ ಗುರೌ ।**
**ಮಹದಾಗಮನೇ ಚೈವ ಹನ್ಯಾನ್ಮೇಧ್ಯಾನ್ ಪಶೂನ್ ದ್ವಿಜಃ ॥ ೫೮ ॥**
**ಆಪತ್ಸು ಬ್ರಾಹ್ಮಣೋ ಮಾಂಸಂ ಮೇಧ್ಯಮಶ್ನನ್ನ ದೋಷಭಾಕ್ ।**
**ವಿಹಿತಾನಿ ತು ಕಾರ್ಯಾಣಿ ಪ್ರತಿಷಿದ್ಧಾನಿ ವರ್ಜಯೇತ್ ॥ ೫೯ ॥**
**ಪುರಾಃಭೂದ್ಯುವನಾಶ್ವಸ್ಯ ದೇವತಾನಾಂ ಮಹಾಕ್ರತೌ ।**
**ಮಮಾಯಮಿತಿ ದೇವಾನಾಂ ಕಲಹಃ ಸಮಜಾಯತ ॥ ೬೦ ॥**

---

೫೫. ಅವರ ಸಂರಕ್ಷಣೆಗಾಗಿ ಹದಿನಾಲ್ಕು ಬಗೆಯ ಪಶುಗಳನ್ನೂ, ಆ ಪಶುಗಳ ಮೂಲಕ ಮಾಡುವ ಯಜ್ಞಗಳನ್ನೂ, ಅವುಗಳ ಕ್ರಮಗಳನ್ನೂ ನಿರ್ಮಿಸಿ, ಆಮೇಲೆ ಅವರನ್ನು ಕುರಿತು ಈರೀತಿ ಹೇಳಿದಳು.

೫೬. ಎಲೈ ಮಾನವರೇ! ಈ ಪಶುಗಳ ಮೂಲಕ, ವೇದೋಕ್ತ ವಿಧಾನವನ್ನನುಸರಿಸಿ ಯಜ್ಞಗಳನ್ನು ಮಾಡಿರಿ. ಆ ಯಜ್ಞಗಳಿಂದ ಪೂಜಿತರಾದ ದೇವತೆಗಳು ಸಂತುಷ್ಟರಾಗಿ ನಿಮ್ಮ ಇಷ್ಟಾರ್ಥಗಳನ್ನು ಸಲ್ಲಿಸುತ್ತಾರೆ.

೫೭. ಹೀಗೆ ಆಕೆಯಿಂದ ನಡೆಯತೊಡಗಿದ ಯಜ್ಞಚಕ್ರವನ್ನು ಯಾವನು ಅನುಸರಿಸುವುದಿಲ್ಲವೋ, ಅವನು ಜನ್ಮಜನ್ಮದಲ್ಲಿಯೂ ದರಿದ್ರನೂ, ನರಕಭಾಜನನೂ ಆಗುತ್ತಾನೆ.

೫೮. ದೇವತೆಗಳು, ಪಿತೃಗಳು, ಅಭ್ಯಾಗತರು, ಗುರುಗಳು ಇವರಿಗಾಗಿಯೂ, ಮಹಾತ್ಮರು ಆಗಮಿಸಿದಾಗ ಅವರಿಗಾಗಿಯೂ ಬ್ರಾಹ್ಮಣನಾದವನು ಮೇಧ್ಯಗಳಾದ ಪಶುಗಳನ್ನು ಕೊಲ್ಲಬಹುದು.

೫೯. ಆಪತ್ಕಾಲಗಳಲ್ಲಿ ಬ್ರಾಹ್ಮಣನು ಮೇಧ್ಯಗಳಾದ ಪಶುಗಳ ಮಾಂಸವನ್ನು ಭಕ್ಷಿಸಿದರೂ ದೋಷಭಾಗಿಯಾಗುವುದಿಲ್ಲ. ಆದರೆ ಶಾಸ್ತ್ರೋಕ್ತವಾದ ನಿಯಮಗಳನ್ನು ಮೀರದಿರಬೇಕಲ್ಲದೆ ನಿಷಿದ್ಧಗಳಾದ ಕರ್ಮಗಳನ್ನು ತೊರೆಯಲೂ ಬೇಕು.

೬೦. ಪೂರ್ವದಲ್ಲಿ ಯುವನಾಶ್ವನು ದೇವತೆಗಳಿಗಾಗಿ ಮಹಾಯಾಗ

**ತಥಾ ವಿಭಜ್ಯ ದೇವಾನಾಂ ಮನುಷ್ಯಾಂಶ್ಚ ಪಶೂನಪಿ ।**
**ವಿಭಜ್ಯೈಕೈಕಶಃ ಪ್ರಾದಾದ್ಬ್ರಹ್ಮಾ ಲೋಕಪಿತಾಮಹಃ ॥ ೬೧ ॥**
**ತತಸ್ತು ಪರಮಾ ಶಕ್ತಿರ್ಭೂತಸಂಘ ಸಹಾಯಿನೀ ।**
**ಕುಪಿತಾಭೂತ್ತತೋ ಬ್ರಹ್ಮಾ ತಾಮುವಾಚ ನಯಾನ್ವಿತಃ ॥ ೬೨ ॥**
**ಯೇ ವಿಭಕ್ತಾಸ್ತು ಪಶವೋ ದೇವಾನಾಂ ಪರಮೇಶ್ವರಿ ।**
**ತೇ ಸರ್ವೇ ತಾವಕಾಃ ಸಂತು ಭೂತಾನಾಮಪಿ ತೃಪ್ತಯೇ ॥**
**ಇತ್ಯುಕ್ತ್ವಾಽಂತರ್ದಧೇ ತೇಷಾಂ ಪುರ ಏವ ಪಿತಾಮಹಃ ॥ ೬೩ ॥**
**ತದುಕ್ತೇನೈವ ವಿಧಿನಾ ಚಕಾರ ಸುಮಹಾಕ್ರತೂನ್ ।**
**ಇಯಾಜ ಚ ಪರಾಂ ಶಕ್ತಿಂ ಹತ್ವಾ ಮೇಧ್ಯಾನ್ ಪಶೂನಪಿ ॥**
**ತತ್ತದ್ವಿಭಾಗೋ ವೇದೇಷು ಪ್ರೋಕ್ತತ್ವಾದಿಹ ನೋದಿತಃ ॥ ೬೪ ॥**
**ಸ್ತ್ರಿಯಃ ಶೂದ್ರಾಸ್ತಥಾ ಮಾಂಸಮಾದದ್ಯುರ್ಬ್ರಾಹ್ಮಣೀಂ ವಿನಾ ।**
**ಆಪತ್ಸು ಬ್ರಾಹ್ಮಣೀ ವಾಪಿ ಭಕ್ಷಯೇದ್ಗುರ್ವನುಜ್ಞಯಾ ॥ ೬೫ ॥**

---

ವೊಂದನ್ನು ಮಾಡಿದನು. ಆಗ ದೇವತೆಗಳಲ್ಲಿಯೇ ಇದು ನನಗೆ ತನಗೆ ಎಂಬ ಕಲಹವು ಹುಟ್ಟಿತು.

೬೧. ಆಗ ಲೋಕಪಿತಾಮಹನಾದ ಬ್ರಹ್ಮನು ಮನುಷ್ಯರನ್ನೂ ಪಶುಗಳನ್ನೂ ವಿಭಾಗಮಾಡಿ ಒಂದೊಂದನ್ನಾಗಿ ಅವರಿಗೆ ಹಂಚಿಕೊಟ್ಟನು.

೬೨. ಬಳಿಕ ಸಮಸ್ತಭೂತಸಮೂಹಗಳಿಗೂ ಸಹಾಯಿನಿಯಾದ ಪರಾಶಕ್ತಿಯು ಈ ವಿಭಾಗವನ್ನು ಕಂಡು ಕೋಪಗೊಂಡು ಅಲ್ಲಿಯೇ ಆವಿರ್ಭವಿಸಿದಳು. ಬ್ರಹ್ಮನು ಆ ದೇವಿಯನ್ನು ಕಂಡು ನಮ್ರತೆಯಿಂದ ಈರೀತಿ ಹೇಳಿದನು :

೬೩. "ಓ ಪರಮೇಶ್ವರೀ! ಈಗ ನಾನು ದೇವತೆಗಳಿಗಾಗಿ ವಿಭಾಗಿಸಿ ಕೊಟ್ಟಿರುವ ಈ ಪಶುಗಳೆಲ್ಲವೂ ಸಮಸ್ತಭೂತಗಳ ತೃಪ್ತ್ಯರ್ಥವಾಗಿ ನಿನ್ನವೇ ಆಗಿರಲಿ." ಹೀಗೆ ಹೇಳಿ ಆತನು ಅವರೆಲ್ಲರ ಮುಂಗಡೆಯೇ ಅಂತರ್ಧಾನವಾದನು.

೬೪. ಬಳಿಕ ಬ್ರಹ್ಮದೇವನು ಹೇಳಿದ ವಿಧಾನದಿಂದಲೇ ಆ ಯುವನಾಶ್ವನು ಮಹಾಕ್ರತುಗಳನ್ನೆಸಗಿ, ಮೇಧ್ಯಗಳಾದ ಪಶುಗಳನ್ನು ಹನನ ಮಾಡಿ ಪರಾಶಕ್ತಿಯನ್ನು ಪೂಜಿಸಿದನು. ಆಯಾ ವಿಭಾಗಗಳೆಲ್ಲವೂ ವೇದಗಳಲ್ಲಿ ಹೇಳಿರುವುದಾದಕಾರಣ ಇಲ್ಲಿ ಪ್ರಸ್ತಾಪಿಸಿರುವುದಿಲ್ಲ.

೬೫. ಮಹೇಂದ್ರಾ! ಆಗ ಬ್ರಾಹ್ಮಣ ಸ್ತ್ರೀಯನ್ನು ಬಿಟ್ಟು ಉಳಿದೆಲ್ಲ

**ಶಿವೋದ್ಭವಮಿದಂ ಪಿಂಡಮತ್ಯರ್ಥಂ ಶಿವತಾಂ ಗತಂ ।**
**ಉದ್ಬುಧ್ಯಸ್ವ ಪಶೋ ತ್ವಂ ಹಿ ನಾಽಶಿವಸ್ತ್ವಂ ಶಿವೋ ಹ್ಯಸಿ ॥ ೬೬ ॥**
**ಈಶಃ ಸರ್ವಜಗತ್ಕರ್ತಾ ಪ್ರಭವಃ ಪ್ರಲಯಸ್ತಥಾ ।**
**ಯತೋ ವಿಶ್ವಾಧಿಕೋ ರುದ್ರಸ್ತೇನ ರುದ್ರೋಽಸಿ ವೈ ಪಶೋ ॥ ೬೭ ॥**
**ಅನೇನ ತುರಗಂ ಗಾಂ ವಾ ಗಜೋಷ್ಟ್ರಮಹಿಷಾದಿಕಂ ।**
**ಆತ್ಮಾರ್ಥಂ ವಾ ಪರಾರ್ಥಂ ವಾ ಹತ್ವಾ ದೋಷೈರ್ನಲಿಪ್ಯತೇ ॥ ೬೮ ॥**
**ಗೃಹಾನಿಷ್ಟಕರಾನ್ವಾಪಿ ನಾಗಾಖುಬಲಿವೃಶ್ಚಿಕಾನ್ ॥ ೬೯ ॥**
**ಏತದ್ಗೃಹಾಶ್ರಮಸ್ಥಾನಾಂ ಕ್ರಿಯಾಫಲಮಭೀಪ್ಸತಾಂ ।**
**ಪಶುಯಜ್ಞೋ ನ ಚಾನ್ಯೇಷಾಮಿಷ್ಟಾಪೂರ್ತಿಕರಂ ಭವೇತ್ ॥**
**ಜಪಹೋಮಾರ್ಚನಾದ್ಯೈಶ್ಚ ತೇಷಾಮಿಷ್ಟಂ ಹಿ ಸಿಧ್ಯತಿ ॥ ೭೦ ॥**

---

ಸ್ತ್ರೀಯರೂ, ಶೂದ್ರರೂ ಮಾಂಸವನ್ನು ಭುಜಿಸಿದರು. ಆಪತ್ಕಾಲಗಳಲ್ಲಿ ಬ್ರಾಹ್ಮಣ ಸ್ತ್ರೀಯೂ ಸಹ ಗುರುವಿನ ಅನುಜ್ಞೆಯನ್ನು ಪಡೆದು ಮಾಂಸ ಭಕ್ಷಣವನ್ನು ಮಾಡಬಹುದು.

೬೬. "ಎಲೆ ಪ್ರಾಣಿಯೇ! ಈ ಪಿಂಡವು ಶಿವನಿಂದ ಉದ್ಭವವಾದುದು. ಪರಮಾರ್ಥವಾಗಿಯೂ ಇದು ಶಿವತ್ವವನ್ನೇ ಹೊಂದಿರುವಂತಹುದು. ಎಲೆ ಪಶುವೇ! ಎಚ್ಚರಗೊಳ್ಳು. ನೀನು ಅಮಂಗಳಕರವಲ್ಲ. ಪರಮಮಂಗಳಸ್ವರೂಪಿಯಾಗಿರುವೆ.

೬೭. ಈಶ್ವರನು ಸರ್ವಜಗತ್ಕರ್ತನು; ಸಮಸ್ತಭೂತಗಳ ಸೃಷ್ಟಿಕರ್ತನು; ಪ್ರಳಯಕರ್ತನೂ ಆತನೇ. ಆತನೇ ವಿಶ್ವಾಧಿಕನಾದ ರುದ್ರನು. ಆದುದರಿಂದ ನೀನೂ ರುದ್ರನೇ ಆಗಿರುವೆ."

೬೮. ಮೇಲೆ ಹೇಳಿದ ಈ ಎರಡು ಶ್ಲೋಕಗಳ ಅರ್ಥವುಳ್ಳ ಮಂತ್ರವನ್ನು ಹೇಳಿಕೊಂಡು ಕುದುರೆಯನ್ನಾಗಲಿ, ಆಕಳು, ಆನೆ, ಒಂಟೆ, ಎಮ್ಮೆ ಮುಂತಾದುವನ್ನಾಗಲಿ ತನಗೋಸ್ಕರವೂ, ಇತರರಿಗೋಸ್ಕರವೂ ಹತ್ಯೆಮಾಡಿದರೂ ಅದರಿಂದ ಯಾವ ದೋಷವೂ ಬರುವುದಿಲ್ಲ.

೬೯. ಮನೆಗಳಿಗೆ ಅನಿಷ್ಟಕರಗಳಾದ ನಾಗರಹಾವುಗಳು, ಇಲಿ, ಚೇಳು ಮೊದಲಾದ ದುಷ್ಟ ಪ್ರಾಣಿಗಳನ್ನು ಹೊಡೆದುಕೊಂದರೂ ದೋಷ ಬರುವುದಿಲ್ಲ.

೭೦. ದೇವೇಂದ್ರಾ! ಕ್ರಿಯಾಫಲವನ್ನಪೇಕ್ಷಿಸುವವರೂ, ಮನಸ್ಸಂಕಲ್ಪಸಿದ್ಧಿಯುಳ್ಳವರೂ ಆದ ಗೃಹಸ್ಥಾಶ್ರಮಿಗಳಿಗೆ ಮಾತ್ರ

ಇಂದ್ರಃ—
ಭಗವನ್ ಸರ್ವಮಾಖ್ಯಾತಂ ಹಿಂಸಾಘಸ್ಯ ತು ಲಕ್ಷಣಂ ।
ಸ್ತೇಯಸ್ಯ ಲಕ್ಷಣಂ ಕಿಂ ವಾ ತನ್ಮೇ ವಿಸ್ತರತೋ ವದ ॥ ೭೧ ॥

ಬೃಹಸ್ಪತಿಃ—
ಪಾಪಾನಾಮಧಿಕಂ ಪಾಪಂ ಹನನಂ ಜೀವಜಾತಿನಾಂ ।
ಏತಸ್ಮಾದಧಿಕಂ ಪಾಪಂ ವಿಶ್ವಸ್ತೇ ಶರಣಾಗತೇ ॥ ೭೨ ॥
ವಿಶ್ವಾಸ್ಯ ಹತ್ವಾ ಪಾಪಿಷ್ಠಂ ಶೂದ್ರಂ ವಾಪ್ಯಂತ್ಯಜಾತಿಜಂ ।
ಬ್ರಹ್ಮಹತ್ಯಾಧಿಕಂ ಪಾಪಂ ತಸ್ಮಾನ್ನಾಸ್ತ್ಯಸ್ಯ ನಿಷ್ಕೃತಿಃ ॥ ೭೩ ॥
ಬ್ರಹ್ಮಜ್ಞಸ್ಯ ದರಿದ್ರಸ್ಯ ಕೃಚ್ಛ್ರಾರ್ಜಿತಧನಸ್ಯ ಚ ।
ಬಹುಪುತ್ರಕಲತ್ರಸ್ಯ ತೇನ ಜೀವಿತುಮಿಚ್ಛತಃ ॥
ತದ್ಧನೈಸ್ತೇಯದೋಷಸ್ಯ ಪ್ರಾಯಶ್ಚಿತ್ತಂ ನ ವಿದ್ಯತೇ ॥ ೭೪ ॥

---

ಈ ನಿಯಮಗಳು ವಿಧಾಯಕವಾಗಿವೆ. ಇತರರಿಗೆ ಪಶುಯಜ್ಞದಿಂದ ಇಷ್ಟಾರ್ಥಸಿದ್ಧಿಯಾಗದು. ಅವರಿಗೆ ಜಪ, ಹೋಮ, ಅರ್ಚನೆ ಇವುಗಳಿಂದಲೇ ಇಷ್ಟಾರ್ಥವು ಸಿದ್ಧಿಸುತ್ತದೆ.

೭೧. ಮಹೇಂದ್ರನು ಕೇಳುತ್ತಾನೆ:— "ಎಲೈ ಪೂಜ್ಯನೇ! ಪಂಚಮಹಾಪಾತಕಗಳಲ್ಲಿ ಮೊದಲನೆಯದಾದ ಹಿಂಸೆಯ ಲಕ್ಷಣವೆಲ್ಲವನ್ನೂ ಅಪ್ಪಣೆಕೊಡಿಸಿದೆ. ಇನ್ನು ಎರಡನೆಯದಾದ ಸ್ತೇಯ (ಕಳ್ಳತನ)ದ ಲಕ್ಷಣವೇನೆಂಬುದನ್ನು ವಿಸ್ತಾರವಾಗಿ ನನಗೆ ತಿಳಿಯಹೇಳಬೇಕು."

೭೨. ಬೃಹಸ್ಪತಿಯು ಹೇಳುತ್ತಾನೆ:— ಅಯ್ಯಾ ಮಹೇಂದ್ರನೇ! ಜೀವಜಾತಿಗಳಿಗೆ 'ಹಿಂಸೆ' ಎಂಬುದು ಎಲ್ಲಾ ಪಾಪಗಳಿಗಿಂತಲೂ ಅಧಿಕವಾದ ಪಾಪವು. ನಂಬಿದವನನ್ನೂ, ಶರಣಾಗತನನ್ನೂ ಹಿಂಸಿಸಿದಲ್ಲಿ ಇದಕ್ಕಿಂತಲೂ ಹೆಚ್ಚಿನ ಪಾಪವುಂಟು.

೭೩. ಪಾಪಿಷ್ಠನನ್ನಾಗಲಿ, ಶೂದ್ರನನ್ನಾಗಲಿ, ಅಂತ್ಯಜಾತಿಯವನನ್ನೇ ಆಗಲಿ ನಂಬಿಸಿ ಕೊಂದುದೇ ಆದರೆ ಬ್ರಹ್ಮಹತ್ಯೆಗಿಂತಲೂ ಹೆಚ್ಚಾದ ಪಾಪವು ಘಟಿಸುತ್ತದೆ. ಆ ಹತ್ಯೆಯನ್ನು ಮಾಡಿದವನಿಗೆ ಪ್ರಾಯಶ್ಚಿತ್ತವೇ ಇರುವುದಿಲ್ಲ.

೭೪. ಬ್ರಹ್ಮಜ್ಞಾನಿ, ಬಡವ, ಬಹಳ ಕಷ್ಟಪಟ್ಟು ಧನವನ್ನು ಸಂಪಾದಿಸಿದವನು, ಬಹುಪುತ್ರಕಳತ್ರವಂತನಾದುದರಿಂದಲೇ ಬದುಕ

ವಿಶ್ವಸ್ತದ್ರವ್ಯಹರಣಂ ತಸ್ಯಾಪ್ಯಧಿಕಮುಚ್ಯತೇ ।
ವಿಶ್ವಸ್ತೋ ವಾಪ್ಯವಿಶ್ವಸ್ತೋ ನ ದರಿದ್ರಧನಂ ಹರೇತ್ ॥ ೭೫ ॥
ತತೋ ದೇವದ್ವಿಜಾದೀನಾಂ ಹೇಮರತ್ನಾಪಹಾರಕಂ ।
ಯೋ ಹನ್ಯಾದವಿಚಾರೇಣ ಸೋಽಶ್ವಮೇಧ ಫಲಂ ಲಭೇತ್ ॥ ೭೬ ॥
ಗುರುದೇವದ್ವಿಜಸುಹೃತ್ಪುತ್ರೇಷ್ವಾತ್ಮಸುಖೇಷು ಚ ।
ಸ್ತೇಯಾದಯಃ ಕ್ರಮಾದೇವ ದಶೋತ್ತರಗುಣಂ ತ್ವಘಂ ॥ ೭೭ ॥
ಸ್ತೇಯಂ ಕೃತ್ವಾ ತು ಯೋ ಮೂಢಃ ಪರಸ್ತ್ರೀಭ್ಯಃ ಪ್ರಯಚ್ಛತಿ ।
ವೇಶ್ಯಾಯೈ ವಾ ನಟೇಭ್ಯೋ ವಾ ಸ ಭವೇದ್ಬ್ರಾಹ್ಮಣಾಧಮಃ
ಕ್ಷತ್ರಿಯಾಚ್ಚ ವಿಶಃ ಶೂದ್ರಾದ್ಬ್ರಾಹ್ಮಣಾದಂತ್ಯಜಾತಿಜಾತ್ ।
ದಶೋತ್ತರಗುಣೈಃ ಪಾಪೈರ್ಲಿಪ್ಯತೇ ಧನಹಾರಕಃ ॥ ೭೯ ॥

---

ಬಯಸಿದವನು — ಎಂಬಿವರ ಧನವನ್ನು ಕದಿಯಬಾರದು. ಹಾಗೆ ಕದ್ದು ದಾದರೆ ಅದರಿಂದುಂಟಾಗುವ ಪಾಪಕ್ಕೆ ಪ್ರಾಯಶ್ಚಿತ್ತವೇ ಇರುವುದಿಲ್ಲ.

೭೫. ನೆಚ್ಚಿದವನ ದ್ರವ್ಯವನ್ನಪಹರಿಸಿದ ಪಾಪವಂತು ಅದಕ್ಕಿಂತಲೂ ಹೆಚ್ಚಿನದೆಂದು ಹೇಳಿದೆ. ನಂಬಿದವನಾಗಲಿ, ನಂಬದವನಾಗಲಿ, ದರಿದ್ರ ನಾದವನ ದ್ರವ್ಯವನ್ನು ಅಪಹರಿಸಲೇಬಾರದು.

೭೬. ದೇವಬ್ರಾಹ್ಮಣರಿಗೆ ಸೇರಿದ ಸ್ವರ್ಣರತ್ನಾದಿಗಳನ್ನು ಕಳವು ಮಾಡಿದವನು ವಧ್ಯನೆನಿಸುತ್ತಾನೆ. ಯಾವ ಯೋಚನೆಯನ್ನೂ ಮಾಡದೆ ಅವನನ್ನು ಕೊಲ್ಲುವವನಿಗೆ ಅಶ್ವಮೇಧಯಜ್ಞವನ್ನು ಮಾಡಿದ ಫಲವು ಲಭಿಸುತ್ತದೆ.

೭೭. ತನ್ನ ಸುಖಕ್ಕೆ ಕಾರಣರಾದ ಗುರು, ದೇವತೆ, ದ್ವಿಜ, ಮಿತ್ರ, ಪುತ್ರ ಮೊದಲಾದವರಲ್ಲಿ ಕಳವು ಮುಂತಾದುವನ್ನು ಮಾಡಿದರೆ ಕ್ರಮ ವಾಗಿ ಹತ್ತರಷ್ಟು ಹೆಚ್ಚಿನ ಪಾಪವುಂಟು.

೭೮. ಯಾವ ಬ್ರಾಹ್ಮಣನು ಪರದ್ರವ್ಯವನ್ನಪಹರಿಸಿ ಪರಸ್ತ್ರೀಯ ರಿಗೂ, ಸೂಳೆಗೂ, ನಟರಿಗೂ ಕೊಡುತ್ತಾನೆಯೋ ಅವನು ಬ್ರಾಹ್ಮಣಾಧಮ ನೆನಿಸುವನು.

೭೯. ಕ್ಷತ್ರಿಯ, ವೈಶ್ಯ, ಶೂದ್ರ, ಬ್ರಾಹ್ಮಣ, ಅಂತ್ಯಜ ಮುಂತಾದ ವರ ದ್ರವ್ಯವನ್ನಪಹರಿಸಿದವನಿಗೆ ಒಂದಕ್ಕಿಂತಲೂ ಒಂದು ಹತ್ತರಷ್ಟು ಹೆಚ್ಚಿನ ಪಾಪವನ್ನುಂಟುಮಾಡುತ್ತದೆ.

ಅಯುತಾಂಶಾತ್ಸಹಸ್ರಾಂಶಾಚ್ಛತಾಂಶಾದ್ದಶಮಾಂಶತಃ ।
ಧನಂ ಹೃತ್ವಾ ತಥಾ ಪಾಪೈರ್ಲಿಪ್ಯತೇ ನಾತ್ರ ಸಂಶಯಃ ॥ ೮೦ ॥
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ರಹಸ್ಯಾತಿರಹಸ್ಯಂ ಚ ಸರ್ವಪಾಪಪ್ರಣಾಶನಂ ॥ ೮೧ ॥
ಪುರಾ ಕಾಂಚೀಪುರೇ ಜಾತೋ ವಜ್ರಾಖ್ಯೋ ನಾಮ ಚೋರಕಃ ।
ತಸ್ಮಿನ್ಪುರವರೇ ರಮ್ಯೇ ಸರ್ವೈಶ್ವರ್ಯಸಮನ್ವಿತಾಃ ॥ [೮೨ ॥
ಸರ್ವೇ ನೀರೋಗಿಣೋ ದಾಂತಾಃ ಸುಖಿನೋ ದಯಯಾನ್ವಿತಾಃ ॥
ಸರ್ವೈಶ್ವರ್ಯ ಸಮೃದ್ಧೇಽಸ್ಮಿನ್ನಗರೇ ಸ ತು ತಸ್ಕರಃ ।
ವಜ್ರೋ ಬಹುದ್ರವ್ಯವತಾಂ ಗೃಹೇಷು ಧನತೃಷ್ಣಯಾ ॥
ಸ್ತೋಕಂ ಸ್ತೋಕಂ ಕ್ರಮೇಣೈವ ಬಹುದ್ರವ್ಯಮುಪಾಹರತ್ ॥ ೮೩ ॥
ತದರಣ್ಯೇಽವಟಂ ಕೃತ್ವಾ ಸ್ಥಾಪಯಾಮಾಸ ಲೋಭತಃ ।
ತದ್ಗೋಪನಶಿಲಾರ್ಥಾಯ ತಸ್ಮಿನ್ ದೂರಂ ಗತೇ ಸತಿ ॥ ೮೪ ॥

---

೮೦. ಹತ್ತು ಸಾವಿರ, ಸಾವಿರ, ನೂರು, ಹತ್ತು ಎಂಬ ಈ ಸಂಖ್ಯೆಯ ಅಂಶದಷ್ಟು ಪರದ್ರವ್ಯವನ್ನು ಅಪಹರಿಸಿದರೂ ಅಷ್ಟೇ ಪಾಪವುಂಟೆಂಬು ದರಲ್ಲಿ ಸಂಶಯವಿಲ್ಲ.

೮೧. ಇದೇ ವಿಷಯದಲ್ಲಿಯೇ ಬಹುಪುರಾತನವಾದುದೂ ಬಹಳ ಗುಟ್ಟಿನದೂ, ಕೇಳಿದವರ ಎಲ್ಲ ಪಾಪಗಳನ್ನೂ ಕಳೆಯುವುದೂ ಆದ ಇತಿಹಾಸವೊಂದನ್ನು ಉದಾಹರಿಸುತ್ತಾರೆ.

೮೨. ಹಿಂದೆ ಕಾಂಚೀಪುರದಲ್ಲಿ ವಜ್ರನೆಂಬ ಕಳ್ಳನೊಬ್ಬನು ವಾಸವಾಗಿದ್ದನು. ರಮಣೀಯವಾದ ಆ ಪುರವರದಲ್ಲಿ ಎಲ್ಲ ಪ್ರಜೆಗಳೂ ಸರ್ವೈಶ್ವರ್ಯಸಮನ್ವಿತರೂ, ರೋಗರಹಿತರೂ, ಜಿತೇಂದ್ರಿಯರೂ, ಸುಖಿಗಳೂ ದಯಾಗುಣವುಳ್ಳವರೂ ಆಗಿದ್ದರು.

೮೩. ಕಳ್ಳನಾದ ಆ ವಜ್ರನಾದರೋ ಸರ್ವೈಶ್ವರ್ಯಸಮೃದ್ಧವಾದ ಆ ಕಾಂಚೀನಗರದಲ್ಲಿಯ ದೊಡ್ಡ ದೊಡ್ಡ ಶ್ರೀಮಂತರ ಮನೆಗಳಲ್ಲೆಲ್ಲ ಧನದಾಶೆಯಿಂದ ಸ್ವಲ್ಪ ಸ್ವಲ್ಪವಾಗಿಯೇ ಕ್ರಮವಾಗಿ ಬಹಳ ಹಣವನ್ನು ಕಳವುಮಾಡಿದನು.

೮೪-೮೫. ಬಳಿಕ ಆ ದ್ರವ್ಯವನ್ನು, ಸಮೀಪದ ಕಾಡಿಗೆ ತೆಗೆದು ಕೊಂಡು ಹೋಗಿ ಅಲ್ಲಿ ಒಂದು ಹಳ್ಳವನ್ನು ತೆಗೆದು ಅದರಲ್ಲಿಟ್ಟು,

ಕಿರಾತಃ ಕಶ್ಚಿದಾಗಮ್ಯ ತದ್ದೃಷ್ಟ್ವಾ ತು ದಶಾಂಶತಃ ।
ಜಹಾರಾಽವಿದಿತಸ್ತೇನ ಕಾಷ್ಠಭಾರಂ ವಹನ್ಯಯೌ ॥ ೮೫ ॥
ಸೋಽಪಿ ತಚ್ಛಿಲಯಾಚ್ಛಾದ್ಯ ಮೃದ್ಭಿರಾಪೂರ್ಯ ಯತ್ನತಃ ।
ಪುನಶ್ಚ ತತ್ಪುರಂ ಪ್ರಾಯಾದ್ವಜ್ರೋಽಪಿ ಧನತೃಷ್ಣಯಾ ॥ ೮೬ ॥
ಏವಂ ಬಹುಧನಂ ಹೃತ್ವಾ ನಿಚಿಕ್ಷೇಪ ಮಹೀತಲೇ ।
ಕಿರಾತೋಽಪಿ ಗೃಹಂ ಪ್ರಾಪ್ಯ ಬಭಾಷೇ ಮುದಿತಃ ಪ್ರಿಯಾಂ ॥ ೮೭ ॥
ಮಯಾ ಕಾಷ್ಠಂ ಸಮಾಹರ್ತುಂ ಗಚ್ಛತಾ ಪಥಿ ನಿರ್ಜನೇ ।
ಲಬ್ಧಂ ಧನಮಿದಂ ಭೀರು ಸಮಾದತ್ಸ್ವ ಧನಾರ್ಥಿನಿ ॥ ೮೮ ॥
ತಚ್ಛ್ರುತ್ವಾ ತತ್ಸಮಾದಾಯ ನಿಧಾಯಾಭ್ಯಂತರೇ ತತಃ ।
ಚಿಂತಯಂತೀ ತತೋ ವಾಕ್ಯಮಿದಂ ಭರ್ತಾರಮಬ್ರವೀತ್ ॥ ೮೯ ॥

---

ಅದನ್ನು ಮುಚ್ಚುವುದಕ್ಕಾಗಿ ಬಂಡೆಯೊಂದನ್ನು ತರಲು ದೂರಹೋದನು. ಅಷ್ಟರಲ್ಲಿಯೇ ಇತ್ತ ವೀರದತ್ತನೆಂಬ ಒಬ್ಬಾನೊಬ್ಬ ಕಿರಾತನು ಅಲ್ಲಿಗೆ ಬಂದು ಆ ನಿಧಿಯನ್ನು ಕಂಡು ಅದರಲ್ಲಿ ಹತ್ತನೆಯ ಒಂದು ಪಾಲನ್ನು ಅವನಿಗೆ ತಿಳಿಯದಂತೆಯೇ ಅಪಹರಿಸಿ ಸೌದೆಯ ಹೊರೆಯನ್ನು ಹೊತ್ತು ಕೊಂಡು ಹೊರಟುಹೋದನು.

೮೬. ವಜ್ರನಾದರೋ ಬಂಡೆಯಿಂದ ಆ ಹಳ್ಳವನ್ನು ಮುಚ್ಚಿ ಪ್ರಯತ್ನಪೂರ್ವಕವಾಗಿ ಮಣ್ಣಿನಿಂದ ಅದನ್ನು ಭದ್ರಪಡಿಸಿ, ಪುನಃ ಧನದಾಶೆಯಿಂದ ಕಾಂಚೀನಗರಕ್ಕೆ ಹೊರಟುಬಂದನು.

೮೭. ಹೀಗೆಯೇ ಅವನು ಆ ಪಟ್ಟಣದಲ್ಲಿ ಅಪಾರವಾದ ಧನವನ್ನು ಅಪಹರಿಸಿ ಭೂಮಿಯಲ್ಲಿ ಹೂತಿಡುತ್ತ ಬಂದನು. ಅತ್ತ ಕಿರಾತ ವೀರದತ್ತನಾದರೋ ಮನೆಗೆ ಬಂದು ತನ್ನ ಪ್ರಿಯೆಯನ್ನು ಕುರಿತು ಪರಮಸಂತೋಷದಿಂದ ಈ ರೀತಿ ನುಡಿದನು:

೮೮. "ಪ್ರಿಯೇ! ನಾನು ಸೌದೆಯನ್ನು ತರಲು ಕಾಡಿಗೆ ಹೋಗಿರುವಾಗ ಅಲ್ಲಿ ನನಗೆ ಈ ಧನವು ದೊರಕಿತು. ಓ ಭೀರು! ನೀನು ಧನವನ್ನು ಅಪೇಕ್ಷಿಸುತ್ತಿದ್ದೆಯಲ್ಲವೆ? ಇದೊ! ಇದನ್ನು ತೆಗೆದುಕೋ."

೮೯. ಆ ಮಾತನ್ನು ಕೇಳಿ, ಆ ಕಿರಾತಿಯು ಅದನ್ನು ತೆಗೆದು ಕೊಂಡು ಹೋಗಿ ಒಳಗಿಟ್ಟು ಬಂದು, ತನ್ನಲ್ಲಿಯೇ ಯೋಚಿಸಿ ಪತಿಯನ್ನು ಕುರಿತು ಈರೀತಿ ನುಡಿದಳು:

**ನಿತ್ಯಂ ಸಂಚರತೇ ವಿಪ್ರೋ ಮಾಮಕಾನಾಂ ಗೃಹೇಷು ಯಃ ।**
**ಮಾಂ ವಿಲೋಕ್ಯೇಯಮಚಿರಾದ್ಬಹುಭಾಗ್ಯವತೀ ಭವೇತ್ ।**
**ಚಾತುರ್ವರ್ಣ್ಯಾಸು ನಾರೀಷು ಇಯಂ ಚೇದ್ರಾಜವಲ್ಲಭಾ ॥ ೯೦ ॥**
**ಕಿಂತು ಭಿಲ್ಲೇ ಕಿರಾತೇ ಚ ಶೈಲೂಷೇ ಚಾಂತ್ಯಜಾತಿಜೇ ।**
**ನ ತಿಷ್ಠತೇ ಚಿರಂ ಲಕ್ಷ್ಮೀಃ ಶಾಪಾದ್ವಲ್ಮೀಕ ಜನ್ಮನಃ ॥ ೯೧ ॥**
**ತಥಾಪಿ ಬಹುಭಾಗ್ಯಾನಾಂ ಪುಣ್ಯಾನಾಮಪಿ ಪಾತ್ರಿಣೀ ।**
**ದೃಷ್ಟಪೂರ್ವಂತು ತದ್ವಾಕ್ಯಂ ನ ಕದಾಚಿದ್ವೃಥಾ ಭವೇತ್ ॥ ೯೨ ॥**
**ಅಥವಾಽತ್ಮಪ್ರಯಾಸೇನ ಕೃಚ್ಛ್ರಾದ್ಯಲ್ಲಭ್ಯತೇ ಧನಂ ।**
**ತದೇವ ತಿಷ್ಠತಿ ಚಿರಮನ್ಯದ್ಗಚ್ಛತಿ ಕಾಲತಃ ॥ ೯೩ ॥**
**ಸ್ವಯಮಾಗತವಿತ್ತಂ ತು ಧರ್ಮಾರ್ಥೇ ವಿನಿಯೋಜಯೇತ್ ।**
**ಕುರುಷ್ವ ತೇನ ತಸ್ಮಾತ್ತ್ವಂ ವಾಪೀಕೂಪಾದಿಕಾಃ ಶುಭಾಃ ॥ ೯೪ ॥**

---

೯೦. "ಎಲೈ ಪ್ರಿಯನೇ! ಪ್ರತಿನಿತ್ಯವೂ ನಮ್ಮವರ ಮನೆಗಳಿಗೆ ಬರುತ್ತಿರುವ ಬ್ರಾಹ್ಮಣನೊಬ್ಬನು ನನ್ನನ್ನು ನೋಡಿ, 'ಇಷ್ಟರಲ್ಲಿಯೇ ಇವಳು ಬಹುಭಾಗ್ಯವತಿಯಾಗುವಳು. ಬ್ರಹ್ಮಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣದವರಲ್ಲಿ ಇವಳೇನಾದರೂ ಹುಟ್ಟಿದ್ದರೆ, ರಾಜವಲ್ಲಭೆಯೇ ಆಗುತ್ತಿದ್ದಳು.

೯೧. ಆದರೆ ವಾಲ್ಮೀಕಿಮಹರ್ಷಿಯ ಶಾಪದಿಂದ ಭಿಲ್ಲಜಾತೀಯರಲ್ಲಿಯೂ, ಕಿರಾತರಲ್ಲಿಯೂ, ನಟರಲ್ಲಿಯೂ, ಅಂತ್ಯಜಾತಿಯವರಲ್ಲಿಯೂ ಧನಲಕ್ಷ್ಮಿಯು ಬಹುಕಾಲ ನೆಲೆಸುವುದಿಲ್ಲ.

೯೨. ಆದರೂ ಈ ಕನ್ಯೆಯು ಅನೇಕ ಭಾಗ್ಯಗಳಿಗೂ, ಪುಣ್ಯಗಳಿಗೂ ಪಾತ್ರಳಾಗುತ್ತಾಳೆ' ಎಂದು ಹೇಳುತ್ತಿದ್ದನು. ಬಹುಕಾಲದಿಂದಲೂ ಅನುಭವಕ್ಕೆ ಬಂದಿರುವ ಆತನ ಮಾತು ಎಂದಿಗೂ ವ್ಯರ್ಥವಾಗುವುದಿಲ್ಲ.

೯೩. ಅಥವಾ ದೇಹಶ್ರಮದಿಂದ ಬಹು ಕಷ್ಟಪಟ್ಟು ಸಂಪಾದಿಸಿದ ಧನವು ಮಾತ್ರ ನಿಲ್ಲುತ್ತದೆಯಲ್ಲದೆ, ಇತರ ವಿಧಗಳಿಂದ ದೊರೆತ ಧನವೆಲ್ಲವೂ ಕಾಲಕ್ರಮವಾಗಿ ಕಳೆದುಹೋಗುತ್ತದೆ.

೯೪. ಆದುದರಿಂದ ತಾನಾಗಿಯೇ ದೊರೆತ ದ್ರವ್ಯವನ್ನು ಧರ್ಮಕಾರ್ಯಗಳಿಗಾಗಿ ಉಪಯೋಗಿಸಬೇಕು. ಆದಕಾರಣ ಈಗ ದೊರೆತಿರುವ ಈ ಧನದಿಂದ ನೀನೂ ಸಹ ಪುಣ್ಯಕರಗಳಾದ ಬಾವಿ, ಕೊಳ, ಕೆರೆ ಮುಂತಾದವುಗಳನ್ನು ಮಾಡುವವನಾಗು."

ಇತಿ ತದ್ವಚನಂ ಶ್ರುತ್ವಾ ಭಾವಿಭಾಗ್ಯಪ್ರಚೋದಿತಃ ।
ಬಹೂದಕಯುತಂ ದೇಶಂ ತತ್ರ ತತ್ರ ವ್ಯಲೋಕಯತ್ ॥ ೯೫ ॥
ನಿರ್ಗಮೇಽಥ ಮಹೇಂದ್ರಸ್ಯ ಪ್ರಾಗ್ಭಾಗೇ ವಿಮಲೋದಕಂ ।
ಸುಬಹುದ್ರವ್ಯಸಂಸಾಧ್ಯಂ ತಟಾಕಂ ಚಾಽಕ್ಷಯೋದಕಂ ॥ ೯೬ ॥
ದತ್ತೇಷು ಕರ್ಮಕಾರಿಭ್ಯೋ ನಿಖಿಲೇಷು ಧನೇಷು ಚ [ ೯೭ ॥
ಅಸಂಪೂರ್ಣಂ ತು ತತ್ಕರ್ಮ ದೃಷ್ಟ್ವಾ ಚಿಂತಾಕುಲೋಽಭವತ್ ॥
ತಂ ಚೋರಂ ವಜ್ರನಾಮಾನಮಜ್ಞಾತೋಽನುಚರಾಮ್ಯಹಂ ।
ತೇನೈವ ಬಹುಧಾಕ್ಷಿಪ್ತಂ ಧನಂ ಭೂರಿ ಮಹೀತಲೇ ॥
ಸ್ತೋಕಂ ಸ್ತೋಕಂ ಹರಿಷ್ಯಾಮಿ ತತ್ರ ತತ್ರ ಧನಂ ಬಹು ॥ ೯೮ ॥
ಇತಿ ನಿಶ್ಚಿತ್ಯ ಮನಸಾ ತೇನಾಜ್ಞಾತಸ್ತಮನ್ವಗಾತ್ ।
ತಥೈವಾಹೃತ್ಯ ತದ್ದ್ರವ್ಯಂ ತೇನ ಸೇತುಮಪೂರಯತ್ ॥ ೯೯ ॥

---

೯೫. ಹೀಗೆ ನುಡಿದ ತನ್ನ ಹೆಂಡತಿಯ ಮಾತುಗಳನ್ನು ಕೇಳಿ ಆ ಕಿರಾತ ವೀರದತ್ತನು ಮುಂದೆ ಸಂಭವಿಸುವ ಭಾಗ್ಯದಿಂದ ಪ್ರೇರಿತನಾಗಿ ಆ ರೀತಿಯೇ ಮಾಡಲು ಸಂಕಲ್ಪಿಸಿ, ಸಮೃದ್ಧವಾದ ಜಲವಿರುವ ಪ್ರದೇಶಕ್ಕಾಗಿ ಅಲ್ಲಲ್ಲಿ ಹುಡಿಕಿನೋಡಿದನು.

೯೬. ಬಳಿಕ, ಅವನು ಮಹೇಂದ್ರಪರ್ವತದ ಪೂರ್ವಭಾಗದಲ್ಲಿ ಅಂತಹ ಪ್ರದೇಶವನ್ನು ಕಂಡು ಅಪಾರವಾದ ಧನದಿಂದ ಮಾತ್ರವೇ ಸಾಧ್ಯವಾದ, ಪರಿಶುದ್ಧವೂ ಧ್ರುವವೂ ಆದ ಜಲಸಂಪತ್ತಿಯುಳ್ಳ ಕೆರೆಯನ್ನು ಕಟ್ಟಸಲು ಉಪಕ್ರಮಿಸಿದನು.

೯೭. ತನ್ನಲ್ಲಿದ್ದ ಹಣವೆಲ್ಲವನ್ನೂ ಕೆಲಸಗಾರರಿಗೆ ಕೊಟ್ಟ ಮೇಲೆಯೂ ಕೆಲಸವು ಮುಗಿಯದಿದ್ದುದನ್ನು ಕಂಡು ಅವನು ಚಿಂತೆಗೀಡಾಗಿ ಈರೀತಿ ಯೋಚಿಸಿದನು:

೯೮. "ನಾನು ಆ ವಜ್ರನೆಂಬ ಚೋರನನ್ನೇ ಅವನಿಗೆ ತಿಳಿಯದಂತೆ ಹಿಂಬಾಲಿಸುತ್ತೇನೆ. ಅವನಾದರೋ ಅಪಾರವಾದ ಧನವನ್ನು ಹೂತಿಟ್ಟಿರುವನು. ಅಲ್ಲಿಂದ ಸ್ವಲ್ಪಸ್ವಲ್ಪವಾಗಿಯೇ ಬಹಳ ಧನವನ್ನು ಅಪಹರಿಸಿ ತರುತ್ತೇನೆ."

೯೯. ಈರೀತಿ ಆ ಕಿರಾತನು ತನ್ನಲ್ಲಿ ತಾನೇ ನಿರ್ಧರಿಸಿಕೊಂಡು ಆ ಚೋರನಿಗೆ ತಿಳಿಯದಂತೆಯೇ ಅವನನ್ನು ಹಿಂಬಾಲಿಸಿ ಹೋಗಿ ಅವನ ದ್ರವ್ಯವನ್ನು ಅಪಹರಿಸಿ ತಂದು ಕೆರೆಯ ಏರಿಯನ್ನು ಪೂರ್ತಿಗೊಳಿಸಿದನು.

**ಮಧ್ಯೇ ಜಲಂ ಕೃತಂ ತೇನ ಪ್ರಾಸಾದಮಪಿ ಶಾರ್ಙ್ಗಿಣಃ ॥ ೧೦೦ ॥**
**ತತ್ತಟಾಕಮಭೂದ್ದಿವ್ಯಮಶೋಷಿತಜಲಂ ಮಹತ್ ।**
**ಸೇತುಮಧ್ಯೇ ಚಕಾರಾಗ್ರ್ಯಂ ಶಂಕರಾಯತನಂ ಮಹತ್ ॥ ೧೦೧ ॥**
**ಕಾನನಂ ಚ ಕ್ಷಯಂ ನೀತಂ ಬಹುಸತ್ವಸಮಾಕುಲಂ ।**
**ತೇನಾಗ್ರ್ಯಾಣಿ ಮಹಾರ್ಹಾಣಿ ಕ್ಷೇತ್ರಾಣ್ಯಪಿ ಚಕಾರ ಸಃ ॥ ೧೦೨ ॥**
**ದೇವತಾಭ್ಯೋ ದ್ವಿಜೇಭ್ಯಶ್ಚ ಪ್ರದಾತ್ತಾನಿ ವಿಭಜ್ಯ ಚ ।**
**ಬ್ರಾಹ್ಮಣಾಂಶ್ಚ ಸಮಾಮಂತ್ರ್ಯ ದೇವರಾತಮುಖಾನ್ ಬಹೂನ್ ।**
**ಸಂತೋಷ್ಯ ವಸ್ತ್ರಹೇಮಾದ್ಯೈರಿದಂ ವಚನಮಬ್ರವೀತ್ ॥ ೧೦೩ ॥**
**ಕ್ವ ವಾಽಹಂ ವೀರದತ್ತಾಖ್ಯಃ ಕಿರಾತಃ ಕಾಷ್ಠವಿಕ್ರಯೀ ।**
**ಕ್ವ ವಾ ಮಹಾಸೇತುಬಂಧಃ ಕ್ವ ದೇವಾಲಯಕಲ್ಪನಾ ॥ ೧೦೪ ॥**
**ಕ್ವ ವಾ ಕ್ಷೇತ್ರಾಣಿ ಕ್ಲೃಪ್ತಾನಿ ಬ್ರಾಹ್ಮಣಾಯತನಾನಿ ಚ ।**
**ಕೃಪಯೈವ ಕೃತಂ ಸರ್ವಂ ಭವತಾಂ ಭೂಸುರೋತ್ತಮಾಃ ॥ ೧೦೫ ॥**

---

೧೦೦. ಕೆರೆಯ ಮಧ್ಯದಲ್ಲಿ ಜಲದಿಂದ ಆವೃತವಾಗಿರುವಂತೆಯೇ ಒಂದು ವಿಷ್ಣುದೇವಾಲಯವನ್ನೂ ನಿರ್ಮಿಸಿದನು.

೧೦೧. ಆ ಕೆರೆಯಾದರೋ ಧ್ರುವಜಲವುಳ್ಳದಾಗಿ ಬಹು ರಮಣೀಯವಾಗಿ ಕಂಗೊಳಿಸುವುದಾಯಿತು. ವೀರದತ್ತನು ಆ ಕೆರೆಯ ಕಟ್ಟೆಯ ನಡುವೆ ದೊಡ್ಡದಾದ ಶಿವಾಲಯವೊಂದನ್ನೂ ಕಟ್ಟಿಸಿದನು.

೧೦೨. ತರುವಾಯ ಆ ಕಿರಾತನು ಅನೇಕ ದುಷ್ಟಮೃಗಗಳು ತುಂಬಿ ತುಳುಕುತ್ತಿದ್ದ ಅಲ್ಲಿಯ ಕಾಡೆಲ್ಲವನ್ನೂ ಬಯಲುಮಾಡಿ, ಅಲ್ಲಿ ಶ್ರೇಷ್ಠವಾದುವೂ, ಬಹು ಬೆಲೆ ಬಾಳುವುವೂ ಆದ ಗದ್ದೆಗಳನ್ನೂ ಏರ್ಪಡಿಸಿದನು.

೧೦೩. ತರುವಾಯ ಅವನು, ದೇವರಾತನೇ ಮೊದಲಾದ ಅನೇಕ ಮಂದಿ ಬ್ರಾಹ್ಮಣರನ್ನು ಆಹ್ವಾನಿಸಿ ಅವರಿಗೂ, ದೇವತೆಗಳಿಗೂ ಆ ಗದ್ದೆಗಳನ್ನು ವಿಭಾಗಿಸಿ ದಾನಮಾಡಿ, ಕಾಂಚನವಸ್ತ್ರಾದಿಗಳಿಂದ ಅವರೆಲ್ಲರನ್ನೂ ಸಂತೋಷಗೊಳಿಸಿದ ಬಳಿಕ ಅವರನ್ನು ಕುರಿತು ಈ ಮಾತನ್ನು ಹೇಳಿದನು :

೧೦೪. "ಎಲೈ ಬ್ರಾಹ್ಮಣೋತ್ತಮರೇ! ಸೌದೆಯನ್ನು ಮಾರಿ ಜೀವನಮಾಡುತ್ತಿರುವ ಕಿರಾತ ವೀರದತ್ತನೆಂಬ ನಾನೆಲ್ಲಿ? ಈ ದೊಡ್ಡ ಕೆರೆಕಟ್ಟೆಯ ನಿರ್ಮಾಣವೆಲ್ಲಿ? ಹರಿಹರಾಲಯಗಳ ರಚನೆಯೆಂದರೇನು?

೧೦೫. ಈಗ ನಿರ್ಮಾಣವಾಗಿರುವ ಈ ಗದ್ದೆಗಳೂ, ಬ್ರಾಹ್ಮಣರ

**ಪ್ರತಿಗೃಹ್ಯ ಭವಂತೋ ಮೇ ಕ್ಷೇತ್ರಾಣ್ಯಾಯತನಾನಿ ಚ ।**
**ಕೃತಾರ್ಥಂ ಕುರುತ ಕ್ಷಿಪ್ರಂ ಮಾದೃಶಾಂ ಹಿ ಗತಿರ್ದ್ವಿಜಾಃ ॥ ೧೦೬ ॥**
**ಪ್ರತಿಗೃಹ್ಯ ತಥೈವೈತದ್ದೇವರಾತಮುಖಾದ್ವಿಜಾಃ ।**
**ದ್ವಿಜವರ್ಮೇತಿ ನಾಮಾಸ್ಮೈ ತಸ್ಯೈ ಶೀಲವತೀತಿ ಚ ॥ [೧೦೭ ॥**
**ಚಕ್ರುಃ ಸಂತುಷ್ಟಮನಸೋ ಮಹಾತ್ಮಾನೋ ಮಹೌಜಸಃ ॥**
**ತೇಷಾಂ ಸಂರಕ್ಷಣಾರ್ಥಾಯ ಬಂಧುಭಿಃ ಸಹಿತೋ ವಶೀ ।**
**ತತ್ರೈವ ವಸತಿಂ ಚಕ್ರೇ ಮುದಿತೋ ಭಾರ್ಯಯಾ ಸಹ ॥ ೧೦೮ ॥**
**ಪುರೋಹಿತಾಭಿಧಾನೇನ ದೇವರಾತಪುರಂತ್ವಿತಿ । [೧೦೯ ॥**
**ನಾಮ ಚಕ್ರೇ ಪುರಸ್ಯಾಽಸ್ಯ ತೋಷಯನ್ನಖಿಲಾನ್ದ್ವಿಜಾನ್ ॥**
**ತತಃ ಕಾಲವಶಂ ಪ್ರಾಪ್ತೋ ದ್ವಿಜವರ್ಮಾಽಂಗನಾಸಖಃ । [೧೧೦ ॥**
**ಯಮಸ್ಯ ಬ್ರಹ್ಮಣೋ ವಿಷ್ಣೋರ್ದೂತಾ ರುದ್ರಸ್ಯ ಚಾಗತಾಃ ॥**
**ಅನ್ಯೋನ್ಯಮಭವತ್ತೇಷಾಂ ಯುದ್ಧಂ ದೇವಾಸುರೋಪಮಂ ॥**

---

ನೆಲೆಮನೆಗಳೂ ಎಲ್ಲಿಯವು? ಓ ಭೂಸುರೋತ್ತಮರೇ! ಇವೆಲ್ಲವೂ ನಿಮ್ಮ ಕೃಪೆಯಿಂದಲೇ ಆದುದು.

೧೦೬. ಆದುದರಿಂದ ದೇವರಾತರಾದಿಗಳಾದ ನೀವು ಇವೆಲ್ಲವನ್ನೂ ಪರಿಗ್ರಹಿಸಿ ನನ್ನನ್ನು ಕ್ಷಿಪ್ರವಾಗಿಯೆ ಅನುಗ್ರಹಿಸಿ ಕೃತಾರ್ಥನನ್ನಾಗಿ ಮಾಡಬೇಕು. ನನ್ನಂತಹವರಿಗೆ ಬ್ರಾಹ್ಮಣರೇ ಗತಿದಾಯಕರಷ್ಟೆ!"

೧೦೭. ಮಹಾತೇಜಸ್ವಿಗಳೂ ಮಹಾತ್ಮರೂ ಆದ ಆ ದೇವರಾತಾದಿ ಭೂಸುರೋತ್ತಮರಾದರೊ, ಕಿರಾತ ವೀರದತ್ತನ ಈ ಮಾತುಗಳನ್ನು ಕೇಳಿ ಸಂತುಷ್ಟಮಾನಸರಾಗಿ, ಅವನು ದಾನಮಾಡಿದ ಗೃಹಕ್ಷೇತ್ರಾದಿಗಳೆಲ್ಲವನ್ನೂ ಪರಿಗ್ರಹಿಸಿ ಅವನಿಗೆ ದ್ವಿಜವರ್ಮನೆಂಬ ಹೆಸರನ್ನೂ ಅವನ ಹೆಂಡತಿಗೆ ಶೀಲವತಿಯೆಂಬ ಹೆಸರನ್ನೂ ಕೊಟ್ಟರು.

೧೦೮. ಜಿತೇಂದ್ರಿಯನಾದ ಆ ವೀರದತ್ತನಾದರೊ ಆ ಬ್ರಾಹ್ಮಣರ ಸಂರಕ್ಷಣೆಗಾಗಿ, ಪತ್ನಿಯೊಡನೆಯೂ, ಬಾಂಧವರೊಡನೆಯೂ ಅಲ್ಲಿಯೇ ಸಂತೋಷದಿಂದ ವಾಸಮಾಡತೊಡಗಿದನು.

೧೦೯. ಅವನು ಆ ಬ್ರಾಹ್ಮಣರೆಲ್ಲರಿಗೂ ಸಂತೋಷವಾಗುವಂತೆ ಆ ಪಟ್ಟಣಕ್ಕೆ ಪುರೋಹಿತನ ಹೆಸರಿನಿಂದ ದೇವರಾತಪುರವೆಂದು ನಾಮಕರಣ ಮಾಡಿದನು.

೧೧೦. ಕೆಲ ಕಾಲವಾದಮೇಲೆ ಆ ದ್ವಿಜವರ್ಮನು ಪತ್ನೀಸಮೇತ

**ಅತ್ರಾಂತರೇ ಸಮಾಗತ್ಯ ನಾರದೋ ವಾಕ್ಯಮಬ್ರವೀತ್ । [೧೧೧
ಮಾ ಕುರ್ವಂತು ಮಿಥೋ ಯುದ್ಧಂ ಶೃಣ್ವಂತು ವಚನಂ ಮಮ ॥
ಅಯಂ ಕಿರಾತಶ್ಚೌರ್ಯೇಣ ಸೇತುಬಂಧಂ ಪುರಾಽಕರೋತ್ ॥
ವಾಯುಭೂತಶ್ಚರೇದೇಕೋ ಯಾವದ್ದ್ರವ್ಯವತೋ ಮೃತಿಃ ।
ಸ ಬಹುಭ್ಯೋಽಹರದ್ದ್ರವ್ಯಂ ತೇಷಾಂ ಯಾವತ್ತಥಾ ಮೃತಿಃ ॥೧೧೩॥
ಗತೇಷ್ವಖಿಲದೂತೇಷು ಶ್ರುತ್ವಾ ನಾರದ ಭಾಷಿತಂ ।
ಚಚಾರ ದ್ವಾದಶಾಬ್ದಂ ತು ವಾಯುಭೂತೋಽಂತರಿಕ್ಷಗಃ ॥ ೧೧೪ ॥
ಭಾರ್ಯಾಂ ತಸ್ಯಾಽಹ ಸ ಮುನಿಸ್ತವ ದೋಷೋ ನ ಕಿಂಚನ ।
ತ್ವಯಾ ಕೃತೇನ ಪುಣ್ಯೇನ ಬ್ರಹ್ಮಲೋಕಮಿತೋ ವ್ರಜ ॥ ೧೧೫ ॥**

---

ನಾಗಿ ಮೃತಿಯೊಂದಿದನು. ಕೂಡಲೇ ಅಲ್ಲಿಗೆ ಯಮದೂತರೂ, ಬ್ರಹ್ಮ, ವಿಷ್ಣು, ಮಹೇಶ್ವರರ ದೂತರೂ ಅವನನ್ನು ತಮ್ಮ ತಮ್ಮ ಲೋಕಗಳಿಗೆ ಕರೆದೊಯ್ಯಲು ಬಂದರು. ಹೀಗೆ ಸ್ಪರ್ಧಿಸುತ್ತಲಿರುವ ಅವರಿಗೆ ಪರಸ್ಪರವಾಗಿ ದೇವದಾನವರ ಯುದ್ಧದಂತಹ ದೊಡ್ಡ ಯುದ್ಧವು ನಡೆಯಲು ಮೊದಲಾಯಿತು.

೧೧೧. ಇದೇ ಸಮಯದಲ್ಲಿಯೆ ನಾರದಮಹರ್ಷಿಯು ಅಲ್ಲಿಗೈತಂದು "ನೀವು ಹೀಗೆ ಪರಸ್ಪರವಾಗಿ ಯುದ್ಧಮಾಡುವುದು ಉಚಿತವಲ್ಲ. ನನ್ನ ಮಾತನ್ನು ಕೇಳಿರಿ.

೧೧೨. ಈ ಕಿರಾತನು ಪೂರ್ವದಲ್ಲಿ ಕಳವು ಮಾಡಿ ತಂದ ದ್ರವ್ಯದಿಂದ ಈ ಕೆರೆಯ ಏರಿಯನ್ನು ಕಟ್ಟಿಸಿದನು.

೧೧೩. ಎದುವರೆಗೆ ಹಣದ ಸ್ವಂತಕರ್ತನು ಜೀವಂತನಾಗಿರುವನೋ ಅದುವರೆಗೆ ಮಾತ್ರವಲ್ಲದೆ, ಎಷ್ಟು ಮಂದಿಯಿಂದ ಇವನು ಧನವನ್ನು ಅಪಹರಿಸಿದನೋ, ಅವರೆಲ್ಲರೂ ಜೀವಿಸಿರುವ ವರೆಗೂ ಇವನು ಗಾಳಿಯ ರೂಪದಲ್ಲಿ ಒಬ್ಬಂಟಿಗನಾಗಿ ಸಂಚರಿಸುತ್ತಿರಬೇಕು" ಎಂದು ಹೇಳಿದನು.

೧೧೪. ಆತನ ಮಾತುಗಳನ್ನು ಕೇಳಿ ದೂತರೆಲ್ಲರೂ ಹೊರಟು ಹೋದರು. ಆಮೇಲೆ ವೀರದತ್ತನು ವಾಯುಭೂತನಾಗಿ ಹನ್ನೆರಡು ವರ್ಷಗಳವರೆಗೆ ಅಂತರಿಕ್ಷದಲ್ಲಿಯೆ ಸಂಚರಿಸುತ್ತಿದ್ದನು.

೧೧೫. ಆಮೇಲೆ ಆ ದೇವರ್ಷಿಯು ದ್ವಿಜವರ್ಮನ ಹೆಂಡತಿಯಾದ

**ವಾಯುಭೂತಂ ಪತಿಂ ದೃಷ್ಟ್ವಾ ನೇಚ್ಛಂತೀ ಬ್ರಹ್ಮಮಂದಿರಂ ।**
**ನಿರ್ವೇದಂ ಪರಮಾಪನ್ನಾ ಮುನಿಮೇನಮಭಾಷತ ॥ ೧೧೬ ॥**
**ಅಹಂ ವಿನಾ ಪತಿಂ ದೇವ ನ ಗಚ್ಛೇಯಂ ಪಿತಾಮಹಂ ।**
**ಇಹ ಸ್ಥಾಸ್ಯೇ ಪತಿರ್ಯಾವತ್ಸ್ವದೇಹಂ ಲಭತೇ ಪುನಃ ॥ ೧೧೭ ॥**
**ತತಸ್ತು ಯಾ ಗತಿಸ್ತಸ್ಯ ತಾಮೇವಾನುಚರಾಮ್ಯಹಂ । [೧೧೮ ॥**
**ಪರಿಹಾರೋಽಥವಾ ಕಿಂತು ಮಯಾ ಕಾರ್ಯಂ ತು ತೇನ ವಾ ॥**
**ಇತಿ ತಸ್ಯಾ ವಚಃ ಶ್ರುತ್ವಾ ಪ್ರೀತಃ ಪ್ರಾಹ ತಪೋಧನಃ ।**
**ಭೋಗಾರ್ಥಕಂ ಶರೀರಂ ತು ಪತ್ಯುಃ ಕರ್ಮಕರಂ ತವ ।**
**ಮಮ ಪ್ರಭಾವಾದ್ಭವಿತಾ ಪರಿಹಾರಂ ವದಾಮಿ ಚ ॥ ೧೧೯ ॥**

---

ಶೀಲವತಿಯನ್ನು ಕುರಿತು, "ಅಮ್ಮಾ! ಈ ವಿಷಯದಲ್ಲಿ ನಿನ್ನ ದೋಷವೇನೂ ಇರುವುದಿಲ್ಲ. ನೀನು ಮಾಡಿದ ಪುಣ್ಯದಿಂದ ಈಗಲೇ ಬ್ರಹ್ಮಲೋಕವನ್ನು ಸೇರು" ಎಂದು ಹೇಳಿದನು.

೧೧೬. ಆದರೆ ಶೀಲವತಿಯು ವಾಯುಭೂತನಾಗಿರುವ ತನ್ನ ಪತಿಯನ್ನು ನೋಡಿ, ಬ್ರಹ್ಮಲೋಕವನ್ನು ಅಪೇಕ್ಷಿಸದೆ ಪರಮವೈರಾಗ್ಯ ಸಂಪನ್ನಳಾಗಿ ಆ ಮುನೀಂದ್ರನನ್ನು ಕುರಿತು ಈರೀತಿ ನುಡಿದಳು :

೧೧೭. "ಓ ದೇವಾ! ಪತಿಯನ್ನು ಬಿಟ್ಟು ಬ್ರಹ್ಮಲೋಕಕ್ಕೆ ನಾನೆಂದಿಗೂ ಹೋಗುವುದಿಲ್ಲ. ನನ್ನ ಪತಿಯು ತನ್ನ ದೇಹವನ್ನು ಪಡೆಯುವವರೆಗೂ ನಾನು ಇಲ್ಲಿಯೇ ಇರುತ್ತೇನೆ.

೧೧೮. ತರುವಾಯ ಆತನಿಗೆ ಯಾವ ಗತಿಯುಂಟಾಗುವುದೋ ಅದನ್ನೇ ನಾನೂ ಪಡೆದು ಆತನನ್ನೇ ಹಿಂಬಾಲಿಸುವೆನು. ಅಥವಾ ಆತನು ತನ್ನ ದೇಹವನ್ನು ತಾನು ಪಡೆಯಲೋಸುಗ ಅವನಾಗಲಿ ನಾನಾಗಲಿ ಮಾಡಬೇಕಾದ ಪರಿಹಾರರೂಪವಾದ ಕಾರ್ಯವೇನಾದರೂ ಇದ್ದಲ್ಲಿ ಅದನ್ನಾದರೂ ಮಾಡುವೆನು" ಎಂದು ಹೇಳಿದಳು.

೧೧೯. ತಪೋಧನನಾದ ನಾರದಮಹರ್ಷಿಯು ಶೀಲವತಿಯ ಮಾತುಗಳನ್ನು ಕೇಳಿ ಸುಪ್ರೀತನಾಗಿ, "ಎಲೌ! ನಿನ್ನ ಪತಿಗೆ ಸುಖವನ್ನನುಭವಿಸಲು ಯೋಗ್ಯವಾದ ದೇಹವು ಲಭಿಸಬೇಕಾದರೆ, ನೀನು ದೊಡ್ಡ ತಪಸ್ಸನ್ನು ಮಾಡಬೇಕು. ನನ್ನ ತಪಃಪ್ರಭಾವದಿಂದ ಸಾಧ್ಯವಾಗುವ ಪರಿಹಾರೋಪಾಯವನ್ನು ಹೇಳುವೆನು ಕೇಳು.

**ನಿರಾಹಾರಾ ಮಹಾತೀರ್ಥೇ ಸ್ನಾತ್ವಾ ನಿತ್ಯಂ ಹಿ ಸಾಂಬಕಂ ।**
**ಪೂಜಯಿತ್ವಾ ಶಿವಂ ಭಕ್ತ್ಯಾ ಭಸ್ಮೋದ್ಧೂಳಿತ ವಿಗ್ರಹಂ ॥**
**ಧ್ಯಾತ್ವಾ ಹೃದಿಮಹೇಶಾನಾಂ ಶತರುದ್ರಮನುಂ ಜಪೇತ್ ॥ ೧೨೦ ॥**
**ಬ್ರಹ್ಮಹಾ ಮುಚ್ಯತೇ ಪಾಪೈರಷ್ಟೋತ್ತರ ಸಹಸ್ರತಃ ।**
**ಪಾಪೈರನ್ಯೈಶ್ಚ ಸಕಲೈರ್ಮುಚ್ಯತೇ ನಾತ್ರಸಂಶಯಃ ॥ ೧೨೧ ॥**
**ಇತ್ಯಾದಿಶ್ಯ ದದೌ ತಸ್ಯೈ ರುದ್ರಾಧ್ಯಾಯಂ ತಪೋಧನಃ ।**
**ಅನುಗೃಹ್ಯೇತಿ ತಾಂ ನಾರೀಂ ತತ್ರೈವಾಂತರಧೀಯತ ॥ ೧೨೨ ॥**
**ಭರ್ತುಃ ಪ್ರಿಯಾರ್ಥೇ ಸಂಕಲ್ಪ್ಯ ಜಜಾಪ ಪರಮಂ ಮನುಂ ।**
**ವಿಮುಕ್ತಃ ಸ್ತ್ರೇಯದೋಷೇಣ ಪೂರ್ವದೇಹಮವಾಪ ಸಃ ॥ ೧೨೩ ॥**
**ತತೋ ವಜ್ರಾಭಿಧಶ್ಚೋರಃ ಕಾಲಧರ್ಮಮುಪಾಗತಃ ।**
**ಅನ್ಯೇ ತದ್ದ್ರವ್ಯವಂತೋಽಪಿ ಕಾಲಧರ್ಮಮುಪಾಗತಾಃ ॥ ೧೨೪ ॥**

---

೧೨೦. ನಿರಾಹಾರಿಣಿಯಾಗಿ, ಮಹಾತೀರ್ಥದಲ್ಲಿ ಸ್ನಾನಮಾಡಿ ಅನುದಿನವೂ ಅಂಬಿಕೆಯೊಡಗೂಡಿದವನೂ, ಭಸ್ಮೋದ್ಧೂಳಿತ ವಿಗ್ರಹನೂ ಆದ ಪರಶಿವನನ್ನು ಭಕ್ತಿಯಿಂದ ಪೂಜಿಸುತ್ತಾ, ಆತನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಾ ಶತರುದ್ರೀಯ ಮಂತ್ರವನ್ನು ಜಪಿಸಬೇಕು.

೧೨೧. ಈರೀತಿ ಸಾವಿರದ ನೂರೆಂಟುಬಾರಿ ಶತರುದ್ರೀಯ ಮಂತ್ರ ವನ್ನು ಜಪಿಸಿದರೆ ಬ್ರಹ್ಮಹತ್ಯೆ ಮಾಡಿದವನು ಆ ಪಾಪದಿಂದಲೂ, ಇತರ ಪಾಪಗಳಿಂದಲೂ ವಿಮುಕ್ತನಾಗುವನೆಂಬುದರಲ್ಲಿ ಸಂಶಯವಿಲ್ಲವು.''

೧೨೨. ತಪೋಧನನಾದ ನಾರದಮಹರ್ಷಿಯು ಆ ಶೀಲವತಿಗೆ ಈರೀತಿ ಆಜ್ಞಾಪಿಸಿ, ಅವಳಿಗೆ ಶತರುದ್ರಾಧ್ಯಾಯಮಂತ್ರವನ್ನು ಉಪ ದೇಶಮಾಡಿ ಅನುಗ್ರಹಿಸಿದ ಬಳಿಕ ಅಲ್ಲಿಯೇ ಅಂತರ್ಧಾನವಾದನು.

೧೨೩. ಬಳಿಕ ಶೀಲವತಿಯು ತನ್ನ ಪತಿಯು ಪಾಪವಿಮೋಚನನಾಗ ಬೇಕೆಂದು ಸಂಕಲ್ಪಿಸಿ ಶ್ರೇಷ್ಠವಾದ ಆ ಶತರುದ್ರಮಂತ್ರವನ್ನು ಜಪಿಸಿ ದಳು. ಅದರಿಂದ ದ್ವಿಜವರ್ಮನು ಸ್ತ್ರೇಯದೋಷದಿಂದ ಬಿಡುಗಡೆ ಹೊಂದಿ ಸ್ವಶರೀರವನ್ನು ಪಡೆದನು.

೧೨೪. ಇತ್ತ ಚೋರನಾದ ವಜ್ರನೂ ಕೂಡ ಮೃತಿಯೊಂದಿದನು. ಅವನು ಯಾರಾರಲ್ಲಿ ದ್ರವ್ಯವನ್ನು ಅಪಹರಿಸಿದ್ದನೋ ಅವರೂ ಸಹ ಕಾಲ ಧರ್ಮವನ್ನು (ಮೃತ್ಯುವನ್ನು) ಹೊಂದಿದರು.

ಯಮಸ್ತು ತಾನ್ಸಮಾಹೂಯ ವಾಕ್ಯಮೇತದುವಾಚ ಹ ।
ಭವದ್ಭಿಸ್ತು ಕೃತಂ ಪಾಪಂ ದೈವಾತ್ಸುಕೃತಮಪ್ಯಭೂತ್ ॥
ಕಿಮಿಚ್ಛಥ ಫಲಂ ಭೋಕ್ತುಂ ದುಷ್ಕೃತಸ್ಯ ಶುಭಸ್ಯ ವಾ ॥ ೧೨೫ ॥
ಇತಿ ತಸ್ಯ ವಚಃ ಶ್ರುತ್ವಾ ಪ್ರೋಚುರ್ವಜ್ರಾದಿಕಾಸ್ತತಃ ।
ಸುಕೃತಸ್ಯ ಫಲಂ ತ್ವಾದೌ ಪಶ್ಚಾತ್ಪಾಪಸ್ಯ ಭುಜ್ಯತೇ ॥ ೧೨೬ ॥
ಪುನರಾಹ ಯಮೋ ಯೂಯಂ ಪುತ್ರಮಿತ್ರಕಲತ್ರಕೈಃ ।
ಏತಸ್ಯೈವ ಬಲಾತ್ಸರ್ವೇ ತ್ರಿದಿವಂ ಗಚ್ಛತ ದ್ರುತಂ ॥ ೧೨೭ ॥
ತೇಽಧಿರುಹ್ಯ ವಿಮಾನಾನಿ ದ್ವಿಜವರ್ಮಾಣಮಾಶ್ರಿತಾಃ ।
ಯಥೋಚಿತಫಲೋಪೇತಾಸ್ತ್ರಿದಿವಂ ಜಗ್ಮುರಂಜಸಾ ॥ ೧೨೮ ॥
ದ್ವಿಜವರ್ಮಾಖಿಲಾನ್ ಲೋಕಾನತೀತ್ಯ ಪ್ರಮದಾಸಖಃ ।
ಗಾಣಾಪತ್ಯಮನುಪ್ರಾಪ್ಯ ಕೈಲಾಸೇಽದ್ಯಾಪಿ ಮೋದತೇ ॥ ೧೨೯ ॥

---

೧೨೫. ತರುವಾಯ ಯಮನು ಅವರೆಲ್ಲರನ್ನೂ ಕರೆದು, "ಎಲೈ, ನೀವು ಪಾಪವನ್ನೇನೋ ಮಾಡಿರುವಿರಿ. ದೈವವಶದಿಂದ ಪುಣ್ಯವನ್ನೂ ಗಳಿಸಿರುವಿರಿ. ಆದುದರಿಂದ ನೀವು ಮಾಡಿದ ಪುಣ್ಯಪಾಪಗಳಲ್ಲಿ ಮೊದಲು ಯಾವುದರ ಫಲವನ್ನು ಅನುಭವಿಸಲಪೇಕ್ಷಿಸುವಿರಿ ?" ಎಂದು ಕೇಳಿದನು.

೧೨೬. ಈ ರೀತಿ ನುಡಿದ ಯಮನ ಮಾತನ್ನು ಕೇಳಿ ವಜ್ರನೇ ಮೊದಲಾದವರೆಲ್ಲರೂ, "ನಾವು ಮೊದಲು ಪುಣ್ಯಫಲವನ್ನೂ, ಆ ಬಳಿಕ ಪಾಪಫಲವನ್ನೂ ಅನುಭವಿಸಲಪೇಕ್ಷಿಸುತ್ತೇವೆ" ಎಂದು ಹೇಳಿದರು.

೧೨೭. ಆಗ ಯಮನು ಮತ್ತೆ ಅವರನ್ನು ಕುರಿತು— "ಅಯ್ಯಾ ! ನೀವೆಲ್ಲರೂ ಆ ಪುಣ್ಯಫಲದ ಪ್ರಭಾವದಿಂದಲೇ ಪುತ್ರ ಮಿತ್ರ ಕಳತ್ರ ಸಹಿತರಾಗಿ ಸ್ವರ್ಗಲೋಕಕ್ಕೆ ಶೀಘ್ರವಾಗಿ ಹೋಗಿರಿ" ಎಂದು ಹೇಳಿದನು.

೧೨೮. ಆಗ ಅವರೆಲ್ಲರೂ ಅವರವರಿಗೆ ಉಚಿತವಾದ ಪುಣ್ಯಫಲಗಳಿಂದ ಕೂಡಿದವರಾಗಿ ದ್ವಿಜವರ್ಮನನ್ನು ಆಶ್ರಯಿಸಿ ಉನ್ನತವಾದ ವಿಮಾನಗಳನ್ನೇರಿ ಜಾಗ್ರತೆಯಾಗಿ ಸ್ವರ್ಗಲೋಕಕ್ಕೆ ತೆರಳಿದರು.

೧೨೯. ದ್ವಿಜವರ್ಮನಾದರೋ ಪತ್ನೀ ಸಮೇತನಾಗಿ ಸಮಸ್ತ ಲೋಕಗಳನ್ನೂ ದಾಟಿ ಕೈಲಾಸವನ್ನು ಸೇರಿ ಅಲ್ಲಿ ಗಾಣಾಪತ್ಯವನ್ನು ಪಡೆದು ಇಂದಿಗೂ ಆನಂದದಿಂದಿರುವನು.

ಇಂದ್ರಃ—
ತಾರತಮ್ಯವಿಭಾಗಂ ಚ ಕಥಯಸ್ವ ಮಹಾಮತೇ ।
ಸೇತುಬಂಧಾದಿಕಾನಾಂ ಚ ಪುಣ್ಯಾನಾಂ ಪುಣ್ಯವರ್ಧನಂ ॥ ೧೩೦ ॥

ಬೃಹಸ್ಪತಿಃ—
ಪುಣ್ಯಸ್ಯಾರ್ಧಫಲಂ ಪ್ರಾಪ ದ್ವಿಜವರ್ಮಾ ಮಹಾಯಶಾಃ ।
ವಜ್ರಃ ಪ್ರಾಪ ತದರ್ಧಂ ತು ತದರ್ಧೇನ ಯುತಾಃ ಪರೇ ॥ ೧೩೧ ॥
ಮನೋವಾಕ್ಕಾಯ ಚೇಷ್ಟಾಭಿಶ್ಚತುರ್ಧಾ ಕ್ರಿಯತೇ ಕ್ರಿಯಾ ।
ವಿನಶ್ಯೇತ್ತೇನ ತೇನೈವ ಕೃತೈಸ್ತತ್ಪರಿಹಾರಕೈಃ ॥ ೧೩೨ ॥

ಇಂದ್ರಃ—
ಆಸವಸ್ಯ ತು ಕಿಂ ರೂಪಂ ಕೋ ದೋಷಃ ಕಶ್ಚ ವಾ ಗುಣಃ ।
ಅನ್ನಂ ದೋಷಕರಂ ಕಿಂ ತು ತನ್ಮೇ ವಿಸ್ತರತೋ ವದ ॥ ೧೩೩ ॥

---

೧೩೦. ಇಂದ್ರನು ಕೇಳುತ್ತಾನೆ:—"ಎಲೈ ಮಹಾಮತಿಯೇ! ಈ ಸೇತುಬಂಧವೇ ಮೊದಲಾದ ಕಾರ್ಯಗಳಿಂದ ದೊರೆತ ಪುಣ್ಯದಲ್ಲಿ ಯಾರಾರಿಗೆ ಎಷ್ಟೆಷ್ಟು ಪುಣ್ಯವು ದೊರೆಯಿತೆಂಬುದನ್ನು ನನಗೆ ತಿಳಿಸಬೇಕು."

೧೩೧. ಬೃಹಸ್ಪತಿಯು ಹೇಳುತ್ತಾನೆ:—"ಮಹೇಂದ್ರಾ! ಮಹಾಯಶಸ್ವಿಯಾದ ದ್ವಿಜವರ್ಮನು ಸೇತುಬಂಧದ ಪುಣ್ಯದಲ್ಲಿ ಅರ್ಧಭಾಗವನ್ನೂ, ವಜ್ರನು ನಾಲ್ಕನೆಯ ಒಂದು ಭಾಗವನ್ನೂ, ಉಳಿದುದನ್ನು ಇತರರೂ ಪಡೆದರು.

೧೩೨. ಯಾವ ಕಾರ್ಯವೇ (ಪಾಪವೇ) ಆಗಲಿ, ಮನಸ್ಸು, ವಾಕ್ಕು, ಶರೀರ, ಚೇಷ್ಟೆ ಎಂಬ ಈ ನಾಲ್ಕರ ಮೂಲಕವಾಗಿಯೇ ನಡೆಯುತ್ತದೆ. ಅಲ್ಲದೆ ಅವುಗಳ ಮೂಲಕವೇ ನಡೆಯುವ ಪರಿಹಾರ ಕಾರ್ಯಗಳಿಂದ ಅದು ನಾಶವೂ ಆಗುತ್ತದೆ."

೧೩೩. ಇಂದ್ರನು ಕೇಳುತ್ತಾನೆ:—"ಗುರುವೇ! ಆಸವ (ಮದ್ಯ)ದ ಲಕ್ಷಣವೇನು? ಅದರ ಗುಣದೋಷಗಳಾವುವು? ದೋಷವನ್ನುಂಟುಮಾಡುವ ಅನ್ನವಾವುದು? ಈ ವಿಚಾರವನ್ನು ನನಗೆ ವಿಸ್ತಾರವಾಗಿ ತಿಳಿಸಬೇಕು."

ಬೃಹಸ್ಪತಿಃ—

ಪೈಷ್ಟಿಕಂ ತಾಲಜಂ ಕೈರಂ ಮಾಧೂಕಂ ಗುಡಸಂಭವಂ ।
ಕ್ರಮಾನ್ನ್ಯೂನತರಂ ಪಾಪಂ ತದರ್ಧಾರ್ಧತರಸ್ತಥಾ ॥ ೧೩೪ ॥
ವರ್ಜ್ಯಮಾದ್ಯಂ ಸದಾ ಸರ್ವೈರಾದ್ಯಯುಗ್ಮಂ ನೃಪಸ್ತ್ಯಜೇತ್ ।
ತೃತೀಯಮಪಿ ವೈಶ್ಯಸ್ತು ಶೂದ್ರೋಽಪ್ಯಾದ್ಯದ್ವಯಂ ತಥಾ ॥ ೧೩೫ ॥
ತೃತೀಯಾದಿ ತ್ರಿವರ್ಣಾನಾಮಾಸವಂ ಪೇಯಮುಚ್ಯತೇ । [೧೩೬ ॥
ಸ್ತ್ರೀಣಾಮಪಿ ತೃತೀಯಾದಿ ಪೇಯಂ ಸ್ಯಾದ್ಬ್ರಾಹ್ಮಣೀಂ ವಿನಾ ॥
ಪತಿಹೀನಾ ಚ ಕನ್ಯಾ ಚ ತ್ಯಜೇದೃತುಮತೀ ತಥಾ ॥ ೧೩೭ ॥
ಅಭರ್ತೃಸನ್ನಿಧೌ ನಾರೀ ಮದ್ಯಂ ಪಿಬತಿ ಲೋಲುಪಾ ।
ಉನ್ಮಾದಿನೀತಿ ಸಾ ಖ್ಯಾತಾ ತಾಂ ತ್ಯಜೇದಂತ್ಯಜಾಮಿವ ॥ ೧೩೮ ॥
ದಶಾಷ್ಟಷಟ್ ಚತಸ್ರಸ್ತು ದ್ವಿಜಾತೀನಾಮಘಂ ಭವೇತ್ ।
ಸ್ತ್ರೀಣಾಮಪಿ ತದರ್ಧಂ ಸ್ಯಾತ್ಪಾದಂ ಸ್ಯಾದ್ಭರ್ತೃಸಂಗಮೇ ॥ ೧೩೯ ॥

---

೧೩೪. ಬೃಹಸ್ಪತಿಯು ಹೇಳುತ್ತಾನೆ:—ಪೈಷ್ಟಿಕ ಅಥವಾ ಹಿಟ್ಟಿನ ಸಂಬಂಧವಾದುದು, ತಾಳೆ, ತೆಂಗು, ದ್ರಾಕ್ಷೆ, ಕಾಕಂಬಿ ಈ ದ್ರವ್ಯಗಳಿಂದ ಉತ್ಪನ್ನವಾಗುವ ಮದ್ಯಗಳು ಎಂದು ಮದ್ಯವು ಐದು ಬಗೆಯಾಗಿದೆ. ಇವುಗಳಲ್ಲಿ ಒಂದಕ್ಕಿಂತಲೂ ಮತ್ತೊಂದು ಕ್ರಮವಾಗಿ ಅರ್ಧಭಾಗ ಕಾಲುಭಾಗಗಳಷ್ಟು ಕಡಮೆಯ ಪಾಪವನ್ನುಂಟುಮಾಡತಕ್ಕವು.

೧೩೫. ಮೊದಲನೆಯದಾದ ಪೈಷ್ಟಿಕಾಸವವನ್ನು ಎಲ್ಲರೂ ತ್ಯಜಿಸತಕ್ಕುದು. ರಾಜನು ಮೊದಲಿನ ಎರಡು ಬಗೆಯ ಮದ್ಯಗಳನ್ನು ಬಿಡಬೇಕು. ವೈಶ್ಯನು ಮೂರನೆಯದನ್ನೂ, ಶೂದ್ರನು ಮೊದಲಿನ ಎರಡು ಬಗೆಗಳನ್ನೂ ತ್ಯಜಿಸಬೇಕು.

೧೩೬. ಬ್ರಹ್ಮಕ್ಷತ್ರಿಯವೈಶ್ಯರಿಗೂ, ಬ್ರಾಹ್ಮಣಿಯರಲ್ಲದ ಇತರ ಸ್ತ್ರೀಯರಿಗೂ ಕೇರಾದಿ ಆಸವಗಳು ಪೇಯವೆನಿಸುತ್ತವೆ.

೧೩೭. ಪತಿಹೀನೆ (ಗಂಡನಿಲ್ಲದವಳೂ) ಯೂ, ಕನ್ಯೆಯೂ, ಋತುಮತಿಯಾದ ಸ್ತ್ರೀಯೂ ಆಸವವನ್ನು ತೆಗೆದುಕೊಳ್ಳಕೂಡದು.

೧೩೮. ಪತಿಯಿಲ್ಲದ ವೇಳೆಯಲ್ಲಿ ಕೇವಲ ಲೋಲುಪೆಯಾಗಿ ಆಸವವನ್ನು ಸೇವಿಸಿದ ಸ್ತ್ರೀಯು ಉನ್ಮಾದಿನಿಯೆನಿಸುತ್ತಾಳೆ. ಅವಳನ್ನು ಅಂತ್ಯಜಾತಿಯ ಸ್ತ್ರೀಯನ್ನೆಂತೋ ಅಂತು ತ್ಯಜಿಸಬೇಕು.

೧೩೯. ಈ ಆಸವಗಳ ಪಾನದಿಂದ ಬ್ರಾಹ್ಮಣರಾದವರಿಗೆ ಕ್ರಮವಾಗಿ

ಮದ್ಯಂ ಪೀತ್ವಾ ದ್ವಿಜೋ ಮೋಹಾತ್ಕೃಚ್ಛ್ರಂ ಚಾಂದ್ರಾಯಣಂ
ಜಪೇಚ್ಚಾಯುತಗಾಯತ್ರೀಂ ಜಾತವೇದಸಮೇವ ವಾ ॥ [ಚರೇತ್।
ಅಂಬಿಕಾಹೃದಯಂ ವಾಪಿ ಜಪೇಚ್ಛುದ್ಧೋ ಭವೇನ್ನರಃ ॥ ೧೪೦ ॥
ಕ್ಷತ್ರಿಯಾದಿ ತ್ರಿವರ್ಣಾನಾಂ ದ್ವಿಜಾದರ್ಧಾರ್ಧತಃ ಕ್ರಮಾತ್ ।
ಸ್ತ್ರೀಣಾಮರ್ಧಾರ್ಧಕ್ಲ್ಪ್ತಿಃ ಸ್ಯಾತ್ಕಾರಯೇದ್ವಾ ದ್ವಿಜೈರಪಿ॥ ೧೪೧ ॥
ಅಂತರ್ಜಲೇ ಸಹಸ್ರಂ ವಾ ಜಪೇಚ್ಛುದ್ಧಿಮವಾಪ್ನುಯಾತ್॥ ೧೪೨ ॥
ಲಕ್ಷ್ಮೀಃ ಸರಸ್ವತೀ ಗೌರೀ ಚಂಡಿಕಾ ತ್ರಿಪುರಾಂಬಿಕಾ ।
ಭೈರವೋ ಭೈರವೀ ಕಾಲೀ ಮಹಾಶಾಸ್ತಾ ಚ ಮಾತರಃ ॥
ಅನ್ಯಾಶ್ಚ ಶಕ್ತಯಸ್ತಾಸಾಂ ಪೂಜನೇ ಮಧು ಶಸ್ಯತೇ ॥ ೧೪೩ ॥

---

ಹತ್ತು, ಎಂಟು, ಆರು, ನಾಲ್ಕು ಈ ಸಂಖ್ಯೆಗಳಷ್ಟು ಪಾಪವು ಘಟಿಸುತ್ತದೆ. ಸ್ತ್ರೀಯರು ಪಾನಮಾಡಿದಲ್ಲಿ ಅರ್ಧಭಾಗವೂ, ಅವರು ಭರ್ತೃಸಂಗಮ ಕಾಲದಲ್ಲಿ ಆಸವಸೇವನೆ ಮಾಡಿದುದಾದರೆ ಅದರಲ್ಲಿ ಕಾಲು ಭಾಗವೂ ಪಾಪವುಂಟು.

೧೪೦. ಬ್ರಾಹ್ಮಣನು ಅಜ್ಞಾನದಿಂದ ಮದ್ಯವನ್ನು ಪಾನಮಾಡಿದಲ್ಲಿ ಕೃಚ್ಛ್ರವನ್ನೂ, ಚಾಂದ್ರಾಯಣವನ್ನೂ ಆಚರಿಸತಕ್ಕುದು. ಅಥವಾ ಹತ್ತು ಸಾವಿರ ಗಾಯತ್ರೀಜಪವನ್ನಾಗಲಿ, ಅಷ್ಟೇ ಸಂಖ್ಯೆಯ ಜಾತ ವೇದಸ ಮಂತ್ರವನ್ನಾಗಲಿ ಜಪಮಾಡಬೇಕು. ಅಥವಾ, ಅಂಬಿಕಾ ಹೃದಯವನ್ನು ಜಪಿಸಿದಲ್ಲಿ ಮಾನವನು ಶುದ್ಧನಾಗುವನು.

೧೪೧. ಕ್ಷತ್ರಿಯ ವೈಶ್ಯ ಶೂದ್ರರೆಂಬ ಮೂರು ವರ್ಣದವರಿಗೆ ಕ್ರಮವಾಗಿ ಅರ್ಧಾರ್ಧ ಕ್ರಮದಿಂದ ಮೇಲೆ ಹೇಳಿದ ಮಂತ್ರ ಜಪರೂಪ ವಾದ ಪ್ರಾಯಶ್ಚಿತ್ತವು ಪರಿಶುದ್ಧಿಯನ್ನುಂಟುಮಾಡುತ್ತದೆ. ಸ್ತ್ರೀಯರಿಗೆ ಅದರಲ್ಲಿ ಅರ್ಧಾರ್ಧವು ಪ್ರಾಯಶ್ಚಿತ್ತವೆನಿಸುತ್ತದೆ. ಸ್ತ್ರೀಶೂದ್ರಾದಿಗಳು ಈ ಪ್ರಾಯಶ್ಚಿತ್ತರೂಪವಾದ ಮಂತ್ರಜಪವನ್ನು ಬ್ರಾಹ್ಮಣರಿಂದ ಲಾದರೂ ಮಾಡಿಸಬಹುದು.

೧೪೨. ನೀರಿನಲ್ಲಿ ನಿಂತು ಒಂದು ಸಾವಿರ ಜಪಮಾಡಿದರೆ ಶುದ್ಧಿ ಯುಂಟಾಗುತ್ತದೆ.

೧೪೩. ಲಕ್ಷ್ಮೀ, ಸರಸ್ವತೀ, ಗೌರೀ, ಚಂಡಿಕೆ, ತ್ರಿಪುರಾಂಬಿಕೆ, ಭೈರವ, ಭೈರವೀ, ಕಾಳೀ, ಮಹಾಶಾಸ್ತೆ, ಸಪ್ತಮಾತೃಗಳು ಮತ್ತು ಇತರ ಶಕ್ತಿಗಳ ಪೂಜೆಗೆ ಮಧುವು (ಮದ್ಯವು) ಶ್ರೇಷ್ಠವಾದುದು.

**ಬ್ರಾಹ್ಮಣಸ್ತು ವಿನಾ ತೇನ ಯಜೇದ್ವೇದಾಂತ ಪಾರಗಃ ।**
**ಇತರೇ ಮಧುನಾ ದೇವೀಮರ್ಚಯೇಯುಃ ಫಲಾರ್ಥಿನಃ ॥ ೧೪೪ ॥**
**ತನ್ನಿವೇದಿತಮಶ್ನಂತಸ್ತದನನ್ಯಾಸ್ತದಾತ್ಮಕಾಃ ।**
**ತಾಸಾಂ ಪ್ರಭಾವಾದ್ಗಚ್ಛಂತಿ ನಿರ್ಲೇಪಾಸ್ತೇ ಪರಾಂ ಗತಿಂ ॥ ೧೪೫ ॥**
**ಕೃತಸ್ಯಾಖಿಲಪಾಪಸ್ಯ ಜ್ಞಾನತೋಽಜ್ಞಾನತೋಽಪಿ ವಾ ।**
**ಪ್ರಾಯಶ್ಚಿತ್ತಮಿದಂ ಪ್ರೋಕ್ತಂ ಪರಾಶಕ್ತೇಃ ಪದಸ್ಮೃತಿಃ ॥ ೧೪೬ ॥**
**ಅನಭ್ಯರ್ಚ್ಯ ಪರಾಂ ಶಕ್ತಿಂ ಪಿಬೇನ್ಮದ್ಯಂ ತು ಯೋಽಧಮಃ ।**
**ರೌರವೇ ನರಕೇಽಬ್ದಾಂಸ್ತು ನಿವಸೇದ್ಬಿಂದುಸಂಖ್ಯಯಾ ॥ [೧೪೭ ॥**
**ಭೋಗೇಚ್ಛಯಾ ತು ಯೋ ಮದ್ಯಂ ಪಿಬತೇ ವೃಷಲಾಧಮಃ ॥**
**ದ್ವಿಜೋ ಮೋಹಾನ್ನತು ಪಿಬೇಲ್ಲೋಭಾದ್ವಾ ಕಾಮತೋಽಪಿ ವಾ ।**
**ಪ್ರಾಯಶ್ಚಿತ್ತಂ ನೈವ ವಾಚ್ಯಂ ಶಿಲಾಗ್ನಿಪತನಾದೃತೇ ॥ ೧೪೮ ॥**

---

೧೪೪. ವೇದವೇದಾಂಗಪಾರಂಗತನಾದ ಬ್ರಾಹ್ಮಣನು ಮಧು ವಿಲ್ಲದೆಯೇ ಪೂಜೆಯನ್ನು ಮಾಡತಕ್ಕುದು. ಇತರರು ಫಲಾಪೇಕ್ಷೆ ಯಿಂದ ದೇವಿಯನ್ನು ಪೂಜಿಸಲು ಮಧುವನ್ನು ಉಪಯೋಗಿಸಬಹುದು.

೧೪೫. ಶಕ್ತಿದೇವತೆಗಳಿಗೆ ಮಧುವನ್ನು ನಿವೇದಿಸಿ, ಆ ದೇವತೆ ಗಳನ್ನೇ ನಂಬಿ, ಅವುಗಳಲ್ಲಿಯೇ ತಮ್ಮ ಆತ್ಮವನ್ನು ನೆಲೆಗೊಳಿಸಿ, ಅವುಗಳಿಗೆ ನಿವೇದಿತವಾದ ಮಧುವನ್ನೇ ಪಾನಮಾಡುವವರೂ, ಅವರ ಸಂತತಿಯವರೂ ಪಾಪಲೇಪವಿಲ್ಲದವರಾಗಿ ಸದ್ಗತಿಯನ್ನು ಪಡೆಯುತ್ತಾರೆ.

೧೪೬. ತಿಳಿದಾಗಲಿ, ತಿಳಿಯದೆಯಾಗಲಿ ಮಾಡಿದ ಸಮಸ್ತ ಪಾಪಕ್ಕೂ ಪರಾಶಕ್ತಿಯ ಚರಣಸ್ಮರಣೆಯೇ ಪ್ರಾಯಶ್ಚಿತ್ತರೂಪವಾಗಿ ಹೇಳಿದೆ.

೧೪೭. ಯಾವ ಶೂದ್ರಾಧಮನು ಪರಾಶಕ್ತಿಯನ್ನು ಪೂಜಿಸದೆಯೂ, ಆಕೆಗೆ ನಿವೇದಿಸದೆಯೂ, ಮದ್ಯಪಾನಮಾಡುವನೋ ಅವನು, ಕುಡಿದ ಮದ್ಯದಲ್ಲಿ ಎಷ್ಟು ಬಿಂದುಗಳಿರುತ್ತವೆಯೋ ಅಷ್ಟು ವರ್ಷಗಳವರೆಗೆ ರೌರವ ನರಕದಲ್ಲಿ ವಾಸಿಸುವನು.

೧೪೮. ಯಾವ ಬ್ರಾಹ್ಮಣನೂ, ಮೋಹದಿಂದಾಗಲಿ, ಲೋಭದಿಂದಾ ಗಲಿ, ಕಾಮಾದಿಂದಲೇ ಆಗಲಿ ಮದ್ಯಪಾನ ಮಾಡಕೂಡದು. ಹಾಗೆ

**ಅನುಗ್ರಹಾಚ್ಚ ಮಹತಾಮನುತಾಪಾಚ್ಚ ಕರ್ಮಣಃ ।**
**ಅರ್ಚನಾಚ್ಚ ಪರಾಶಕ್ತೇರ್ಯಮೈಶ್ಚ ನಿಯಮೈರಪಿ ॥ ೧೪೯ ॥**
**ಚಾಂದ್ರಾಯಣೇನ ಕೃಚ್ಛ್ರೇಣ ದಿನಸಂಖ್ಯಾಕೃತೇನ ಚ । [೧೫೦ ॥**
**ಶುಧ್ಯತೇ ಬ್ರಾಹ್ಮಣೋ ದೋಷಾದ್ದ್ವಿಗುಣಾದ್ಬುದ್ಧಿಪೂರ್ವತಃ ॥**

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ದ್ವಿತೀಯೋಽಧ್ಯಾಯಃ

---

ಮಾಡಿದವನಿಗೆ ಬಂಡೆಯಿಂದ ಬೀಳುವುದು, ಬೆಂಕಿಯಲ್ಲಿ ಧುಮುಕುವುದು ಎಂಬ ಈ ಎರಡನ್ನುಳಿದು ಬೇರೆ ಪ್ರಾಯಶ್ಚಿತ್ತವನ್ನೇ ಹೇಳಬಾರದು.

೧೪೯-೧೫೦. ಬ್ರಾಹ್ಮಣನಾದವನು ತಿಳಿಯದೆ ಮದ್ಯಪಾನ ಮಾಡಿದುದಾದರೆ, ಮಹಾತ್ಮರ ಅನುಗ್ರಹ, ಮಾಡಿದ ಆ ಪಾಪಕರ್ಮಕ್ಕೆ ಪಶ್ಚಾತ್ತಾಪ, ಪರಾಶಕ್ತಿಯ ಪೂಜೆ, ಯಮನಿಯಮಗಳ ಆಚರಣೆ, ದಿನ ಸಂಖ್ಯೆಯ ಕ್ರಮವನ್ನನುಸರಿಸಿ ಆಚರಿಸುವ ಕೃಚ್ಛ್ರಚಾಂದ್ರಾಯಣಾದಿ ವ್ರತಗಳು ಇವುಗಳಿಂದ ಶುದ್ಧನಾಗುತ್ತಾನೆ. ಅವನು ಬುದ್ಧಿಪೂರ್ವಕವಾಗಿ ಮದ್ಯಪಾನ ಮಾಡಿದುದಾದರೆ ಇದಕ್ಕೆ ಎರಡರಷ್ಟು ಪ್ರಾಯಶ್ಚಿತ್ತದಿಂದ ಶುದ್ಧನಾಗುವನು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡನಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

## ಅಥ ತೃತೀಯೋಽಧ್ಯಾಯಃ

[ಅಗಮ್ಯಾಗಮನ ತತ್ಪ್ರಾಯಶ್ಚಿತ್ತಾದಿ ವಿಷಯೇ ಮಹೇಂದ್ರಸ್ಯ ಪ್ರಶ್ನಃ— ಅಭೋಜ್ಯ ವಸ್ತುವಿಚಾರಃ]

ಪುಣ್ಯೈಃ ಪಾಪೈಸ್ಸಮೇತಾಃ ಸುರಪದಮುಪರಂ ಯಾಂತಿ ಲೋಕಾ ಹಿ ಯಾಮ್ಯಂ
ಪ್ರಾಜ್ಞಾ ಮೂಢಾಃ ಕ್ರಮಾದ್ವೈ ಪಶುಪತಿಚರಣಧ್ಯಾನಭಕ್ತ್ಯಾ ವಿನೈವ ।
ಶಂಭೋಃ ಶಕ್ತೇಃ ಪರಾಯಾಃ ಪರತರವಿಭವಾ ಭಕ್ತಿಭಾಜಃ ಪ್ರಯಾಂತಿ
ಯಸ್ಮಾದೇವಂ ತತೋಽಹಂ ಪರಶಿವ ಶಿವಯಾ ಸುಂದರೇಶಂ ಭಜೇ ತ್ವಾಂ ॥

ಇಂದ್ರಃ—

**ಅಗಮ್ಯಾಗಮನಂ ಕಿಂ ವಾ ಕೋ ದೋಷಃ ಕಾ ಚ ನಿಷ್ಕೃತಿಃ ।**
**ಏತನ್ಮೇ ಮುನಿಶಾರ್ದೂಲ ವಿಸ್ತರಾದ್ವಕ್ತುಮರ್ಹಸಿ ॥ ೧ ॥**

ಬೃಹಸ್ಪತಿಃ—

**ಅಗಮ್ಯಾಗಮನಂ ನಾಮ ಮಾತೃಷ್ವಸೃಗುರುಸ್ತ್ರಿಯಃ ।**
**ಮಾತುಲಸ್ಯ ಪ್ರಿಯಾ ಚೇತಿ ಗತ್ವೇಮಾ ನಾಸ್ತಿ ನಿಷ್ಕೃತಿಃ ॥ ೨ ॥**
**ಮಾತೃಸಂಗೇ ತು ಯದಘಂ ತದೇವ ಸ್ವಸೃಸಂಗಮೇ ।**
**ಗುರುಸ್ತ್ರೀಸಂಗಮೇ ತದ್ವದ್ಗುರವೋ ಬಹವಃ ಸ್ಮೃತಾಃ ॥ ೩ ॥**

---

### ಕನ್ನಡದ ಅನುವಾದ

[ಅಗಮ್ಯಾಗಮನ ಮತ್ತು ಅದರ ಪ್ರಾಯಶ್ಚಿತ್ತ ಮೊದಲಾದ ವಿಚಾರದಲ್ಲಿ ದೇವೇಂದ್ರನ ಪ್ರಶ್ನೆ— ಅಭೋಜ್ಯ ವಸ್ತುವಿಚಾರ]

೧. ಇಂದ್ರನು ಕೇಳುತ್ತಾನೆ:—“ಗುರುವೇ! ಅಗಮ್ಯಾಗಮನವೆಂದರೇನು? ಅದರಿಂದ ಯಾವ ಪಾಪವುಂಟಾಗುತ್ತದೆ? ಅದಕ್ಕೆ ಪ್ರಾಯಶ್ಚಿತ್ತವಾದರೂ ಏನು? ಮುನಿಶ್ರೇಷ್ಠಾ! ಈ ವಿಷಯವನ್ನು ನನಗೆ ವಿಸ್ತಾರವಾಗಿ ತಿಳಿಸಬೇಕು.”

೨. ಬೃಹಸ್ಪತಿಯು ಹೇಳುತ್ತಾನೆ:— ಮಹೇಂದ್ರಾ! ತಾಯಿ, ತಂಗಿ, ಗುರುಪತ್ನಿ, ಸೋದರಮಾವನ ಹೆಂಡತಿ ಇವರ ಸಂಗಮದಿಂದ ಅಗಮ್ಯಾಗಮನವೆಂಬ ದೋಷವುಂಟಾಗುತ್ತದೆ. ಇದಕ್ಕೆ ಪ್ರಾಯಶ್ಚಿತ್ತವೇ ಇರುವುದಿಲ್ಲ.

೩. ಮಾತೃಸಂಗದಿಂದ ಯಾವ ಪಾಪವುಂಟಾಗುತ್ತದೆಯೋ ಅದೇ

**ಬ್ರಹ್ಮೋಪದೇಶಮಾರಭ್ಯ ಯಾವದ್ವೇದಾಂತದರ್ಶನಂ ।**
**ಏಕೇನ ಶಿಕ್ಷ್ಯತೇ ಯೇನ ಸ ಮಹಾಗುರುರುಚ್ಯತೇ ॥ ೪ ॥**
**ಬ್ರಹ್ಮೋಪದೇಶಮೇಕತ್ರ ವೇದಶಾಸ್ತ್ರಾಣ್ಯಥೈಕತಃ ।**
**ಆಚಾರ್ಯಃ ಸ ತು ವಿಜ್ಞೇಯಸ್ತಥಾಽನೇಕಾಸ್ತು ದೇಶಿಕಾಃ ॥ ೫ ॥**
**ಗುರೋರಾತ್ಮಾಂತಮೇವ ಸ್ಯಾದಾಚಾರ್ಯಸ್ಯ ಪ್ರಿಯಾಗಮೇ ।**
**ದ್ವಾದಶಾಬ್ದಂ ಚರೇತ್ಕೃಚ್ಛ್ರಮನೇಕೈಕೇ ತು ಷಡಬ್ದತಃ ॥ ೬ ॥**
**ಮಾತುಲಸ್ಯ ಪ್ರಿಯಾಂ ಗತ್ವಾ ಷಡಬ್ದಂ ಕೃಚ್ಛ್ರಮಾಚರೇತ್ ॥ ೭ ॥**
**ಬ್ರಾಹ್ಮಣಸ್ತು ಸಜಾತೀಯಾಂ ಪ್ರಮದಾಂ ಯದಿ ಗಚ್ಛತಿ ।**
**ತ್ರಿರಾತ್ರೋಪೋಷಿತಃ ಶುದ್ಧಃ ಪ್ರಾಣಾಯಾಮಶತಂ ಚರೇತ್ ॥ ೮ ॥**

---

ಪಾಪವೇ ತಂಗಿಯ ಸಂಗದಿಂದಲೂ ಸಂಭವಿಸುತ್ತದೆ. ಗುರುಪತ್ನೀಗಮನದಿಂದಲೂ ಅಷ್ಟೇ ಪಾಪವುಂಟು. ಗುರುಗಳು ಅನೇಕ ಮಂದಿ ಎಂದು ಹೇಳಿದೆ.

೪–೫. ಬ್ರಹ್ಮೋಪದೇಶ ಮೊದಲುಗೊಂಡು ವೇದಾಂತದರ್ಶನದ ಉಪದೇಶದವರೆಗೂ ಒಬ್ಬನೇ ಪಾಠ ಹೇಳಿದುದಾದರೆ ಆತನು ಮಹಾ ಗುರುವೆನಿಸುತ್ತಾನೆ. ಬ್ರಹ್ಮೋಪದೇಶ ಒಬ್ಬನಿಂದಲೂ, ವೇದಗಳೂ ಶಾಸ್ತ್ರಗಳೂ ಬೇರೆ ಒಬ್ಬನಿಂದಲೂ ಉಪದೇಶವಾದಲ್ಲಿ ಅವನು ಆಚಾರ್ಯ ಅಥವಾ ದೇಶಿಕನೆಂದು ತಿಳಿಯಬೇಕು. ಇಂತಹರು ಅನೇಕರಿರುವುದುಂಟು.

೬. ಮಹಾಗುರುಪತ್ನಿಯ ಸಂಗಮದಿಂದುಂಟಾಗುವ ಪಾಪಕ್ಕೆ ಬಿಡುಗಡೆಯೇ ಇಲ್ಲ. ಅದಕ್ಕೆ ಆತ್ಮನಾಶವೇ ಪ್ರಾಯಶ್ಚಿತ್ತ. ಆಚಾರ್ಯ ಪತ್ನೀಗಮನ ಮಾಡಿದಲ್ಲಿ ಹನ್ನೆರಡು ವರ್ಷಗಳ ಕಾಲ ಕೃಚ್ಛ್ರವನ್ನು ಆಚರಿಸಬೇಕು. ಇತರ ಉಪದೇಶಕರ ಪತ್ನೀಗಮನ ವಿಷಯದಲ್ಲಿ ಒಂದೊಂದು ಪಾಪಕ್ಕೂ ಆರು ಆರು ವರ್ಷಗಳ ಕಾಲ ಕೃಚ್ಛ್ರವನ್ನು ಆಚರಿಸಬೇಕು.

೭. ಸೋದರಮಾವನ ಹೆಂಡತಿಯ ಸಂಗಮಾಡಿದ ಪಾಪಕ್ಕಾಗಿ ಆರು ವರ್ಷಗಳ ಕಾಲ ಕೃಚ್ಛ್ರವನ್ನಾಚರಿಸತಕ್ಕುದು.

೮. ಬ್ರಾಹ್ಮಣನಾದವನು ಸಜಾತೀಯಳಾದ ಪ್ರಮದೆಯ ಸಂಗಮಾಡಿದುದಾದರೆ ಮೂರು ದಿನಗಳ ಉಪವಾಸವನ್ನು ಮಾಡಿ ನೂರಾವೃತ್ತಿ ಪ್ರಾಣಾಯಾಮವನ್ನು ಮಾಡತಕ್ಕುದು.

**ಕುಲಟಾಂ ತು ಸಜಾತೀಯಾಂ ದ್ವಿರಾತ್ರಾಚ್ಛುದ್ಧಿಮೃಚ್ಛತಿ ।**
**ಪಂಚಾಹಾತ್ ಕ್ಷತ್ರಿಯಾಂ ಗತ್ವಾ ಸಪ್ತಾಹಾದ್ವೈಶ್ಯಜಾಮಪಿ ॥ ೯ ॥**
**ಚಕ್ರೀ ಕಿರಾತಕೈವರ್ತ ಕರ್ಮಕಾರಾದಿಯೋಷಿತಃ ।**
**ಶುದ್ಧಃ ಸ್ಯಾದ್ದ್ವಾದಶಾಹೇನ ಪರಾಶಕ್ತ್ಯರ್ಚನೇನ ಚ ॥ ೧೦ ॥**
**ಅಂತ್ಯಜಾಂ ಬ್ರಾಹ್ಮಣೋ ಗತ್ವಾ ಪ್ರಮಾದಾದಬ್ದತಃ ಶುಚಿಃ ॥ ೧೧ ॥**
**ದೇವದಾಸೀ ಬ್ರಹ್ಮದಾಸೀ ಸ್ವದಾಸೀ ಶೂದ್ರದಾಸಿಕಾ । [೧೨ ॥**
**ದಾಸ್ಯಶ್ಚತುರ್ವಿಧಾಃ ಪ್ರೋಕ್ತಾ ದ್ವೇ ಚಾದ್ಯೇ ಕ್ಷತ್ರಿಯಾಸಮೇ॥**
**ಅನ್ಯಾ ವೈಶ್ಯಾಂಗನಾ ತುಲ್ಯಾ ತದನ್ಯಾ ಹೀನಜಾತಿವತ್ । [೧೩ ॥**
**ಆತ್ಮದಾಸೀಂ ದ್ವಿಜೋ ಗಚ್ಛೇದುಕ್ತಾರ್ಧಂ ದೋಷಮಾಪ್ನುಯಾತ್॥**

---

೯. ವ್ಯಭಿಚಾರಿಣಿಯಾದ ಸಜಾತೀಯ ಸ್ತ್ರೀಯ ಸಂಗಮಾಡಿದುದಾದರೆ ಎರಡು ದಿನಗಳ ಉಪವಾಸದಿಂದ ಶುದ್ಧನಾಗುತ್ತಾನೆ. ಕ್ಷತ್ರಿಯ ಸ್ತ್ರೀಯ ಸಂಗವನ್ನು ಮಾಡಿದುದಾದರೆ ಐದು ದಿನಗಳ ಉಪವಾಸದಿಂದಲೂ, ವೈಶ್ಯಸ್ತ್ರೀಯ ಸಂಗವನ್ನು ಮಾಡಿದುದಾದರೆ ಏಳು ದಿನಗಳ ಉಪವಾಸದಿಂದಲೂ ಪರಿಶುದ್ಧನಾಗುತ್ತಾನೆ.

೧೦. ಕುಂಬಾರ, ಬೇಡ, ಬೆಸ್ತ, ಕಮ್ಮಾರ ಮುಂತಾದ ಜಾತಿಯ ಸ್ತ್ರೀಯರ ಸಂಗವನ್ನು ಮಾಡಿದುದಾದರೆ ಹನ್ನೆರಡು ದಿನಗಳ ಉಪವಾಸದಿಂದಲೂ, ಪರಾಶಕ್ತಿಯ ಪೂಜೆಯಿಂದಲೂ ಶುದ್ಧನಾಗುತ್ತಾನೆ.

೧೧. ಬ್ರಾಹ್ಮಣನಾದವನು ಪ್ರಮಾದವಶದಿಂದ ಅಂತ್ಯಜಾತಿಯ ಸ್ತ್ರೀಯ ಸಂಗವನ್ನು ಮಾಡಿದುದಾದರೆ ಒಂದು ವರ್ಷ ಕಾಲ ಆಚರಿಸುವ ಕೃಚ್ಛ್ರಾದಿ ವ್ರತನಿಯಮಗಳಿಂದ ಶುದ್ಧಿಯುಂಟಾಗುತ್ತದೆ.

೧೨-೧೩. ದೇವದಾಸಿ, ಬ್ರಹ್ಮದಾಸಿ, ಸ್ವದಾಸಿ, ಶೂದ್ರದಾಸಿ ಎಂಬುದಾಗಿ ದಾಸಿಯರು ನಾಲ್ಕು ವಿಧ. ಇವರಲ್ಲಿ ದೇವದಾಸಿ ಬ್ರಹ್ಮದಾಸಿಯರು ಕ್ಷತ್ರಿಯ ಸ್ತ್ರೀಗೂ, ಮೂರನೆಯವಳು ವೈಶ್ಯಾಂಗನೆಗೂ ಸಮಾನರಾದವರು. ನಾಲ್ಕನೆಯವಳಾದರೋ ಅಂತ್ಯಜಾತಿಯ ಸ್ತ್ರೀಯಂತೆಯೇ. ಬ್ರಾಹ್ಮಣನು ತಿಳಿವಳಿಕೆಯಿಲ್ಲದೆ ತನ್ನ ದಾಸಿಯಲ್ಲಿಯೇ ವ್ಯಭಿಚರಿಸಿದುದಾದರೆ ಮೇಲೆ ಹೇಳಿದ ದೋಷದಲ್ಲಿ ಅರ್ಧಕ್ಕೆ ಭಾಗಿಯಾಗುತ್ತಾನೆ.

**ಸ್ವಸ್ತ್ರಿಯಂ ಪುಷ್ಪಿಣೀಂ ಗತ್ವಾ ಪ್ರಾಜಾಪತ್ಯಂ ಚರೇದ್ವ್ರತಂ ।**
**ದ್ವಿಗುಣೇನ ಪರಾಂ ನಾರೀಂ ಚತುರ್ಭಿಃ ಕ್ಷತ್ರಿಯಾಂಗನಾಂ ॥ ೧೪ ॥**
**ಅಷ್ಟಭಿರ್ವೈಶ್ಯನಾರೀಂ ಚ ಶೂದ್ರಾಂ ಷೋಡಶಭಿಸ್ತಥಾ ।**
**ದ್ವಾತ್ರಿಂಶತಾ ಸಂಕರಜಾಂ ವೇಶ್ಯಾಂ ಶೂದ್ರಾಮಿವಾಚರೇತ್ ॥**
**ಪ್ರಾಯಶ್ಚಿತ್ತಂ ಚರೇದೇವಂ ನೋ ಚೇತ್ಸ ಬ್ರಾಹ್ಮಣಾಧಮಃ ॥ ೧೫ ॥**
**ರಜಸ್ವಲಾಂ ತು ಯೋ ಭಾರ್ಯಾಂ ಮೋಹತೋ ಗಂತುಮಿಚ್ಛತಿ ।**
**ಸ್ನಾತ್ವಾನ್ಯವಸ್ತ್ರಸಂಯುಕ್ತ ಉಕ್ತಾರ್ಧೇನೈವ ಶುದ್ಧ್ಯತಿ ॥ [೧೬ ॥**
**ಉಪೋಷ್ಯ ದಿನಮಾಸಾಯಂ ಸ್ನಾತ್ವಾ ದೇವೀಂ ಪ್ರಪೂಜಯೇತ್ ॥**
**ತಥೈವಾನ್ಯಾಂಗನಾಂ ಗತ್ವಾ ತದುಕ್ತಾರ್ಧಂ ಸಮಾಚರೇತ್ ॥ ೧೭ ॥**

---

೧೪-೧೫. ಋತುಮತಿಯಾಗಿರುವ ತನ್ನ ಸ್ತ್ರೀಯ ಸಂಗವನ್ನು ಮಾಡಿದರೆ ಪ್ರಾಜಾಪತ್ಯವ್ರತವನ್ನು ಮಾಡತಕ್ಕುದು. ಪರಸ್ತ್ರೀ ವಿಷಯದಲ್ಲಿ ಅದಕ್ಕೆ ಎರಡರಷ್ಟೂ, ಕ್ಷತ್ರಿಯಾಂಗನೆಯ ವಿಷಯದಲ್ಲಿ ಅದಕ್ಕೆ ನಾಲ್ಕರಷ್ಟೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ವೈಶ್ಯಸ್ತ್ರೀ ಸಂಗವನ್ನು ಮಾಡಿದರೆ ಅದಕ್ಕೆ ಎಂಟರಷ್ಟೂ, ಶೂದ್ರಸ್ತ್ರೀ ವಿಷಯದಲ್ಲಿ ಹದಿನಾರರಷ್ಟೂ, ಸಂಕರ ಜಾತಿಯ ಸ್ತ್ರೀ ಸಂಗವನ್ನು ಮಾಡಿದಲ್ಲಿ ಮೂವತ್ತೆರಡರಷ್ಟೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳತಕ್ಕುದು. ವೇಶ್ಯಾ ಸ್ತ್ರೀಯ ಸಂಗದ ವಿಚಾರದಲ್ಲಿ, ಶೂದ್ರ ಸ್ತ್ರೀಯ ವಿಚಾರದಲ್ಲಿ ಹೇಗೋ ಹಾಗೆಯೇ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ಹೀಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೆಯೆ ಇದ್ದಲ್ಲಿ ಅವನು ಬ್ರಾಹ್ಮಣಾಧಮನೆನಿಸುತ್ತಾನೆ.

೧೬. ರಜಸ್ವಲೆಯಾಗಿರುವ ತನ್ನ ಭಾರ್ಯೆಯಲ್ಲಿ ತಿಳಿಯದೆ ಹೋಗಲಪೇಕ್ಷಿಸಿದರೆ, ಸ್ನಾನಮಾಡಿ ಬೇರೆ ವಸ್ತ್ರವನ್ನುಟ್ಟು ಮೇಲೆ ಹೇಳಿದ ಪ್ರಾಯಶ್ಚಿತ್ತದಲ್ಲಿ ಅರ್ಧವನ್ನಾಚರಿಸುವುದರಿಂದ ದೋಷವು ಕಳೆದು ಹೋಗುತ್ತದೆ. ಆ ದಿವಸ ಸಾಯಂಕಾಲದವರೆಗೂ ಉಪವಾಸವಿದ್ದು ಸ್ನಾನಮಾಡಿ ದೇವಿಯನ್ನು ಪೂಜಿಸಬೇಕು.

೧೭. ಹಾಗೆಯೇ ರಜಸ್ವಲೆಯಾದ ಪರಸ್ತ್ರೀಯ ಸಂಗವನ್ನು ಮಾಡಿದ ದೋಷಕ್ಕೂ ಹಿಂದೆ ಹೇಳಿದ ಪ್ರಾಯಶ್ಚಿತ್ತದಲ್ಲಿ ಅರ್ಧವನ್ನು ಆಚರಿಸಬೇಕು.

**ಪಿತ್ರೋರನುಜ್ಞಯಾ ಕನ್ಯಾಂ ಯೋ ಗಚ್ಛೇದ್ವಿಧಿನಾ ವಿನಾ ।**
**ತ್ರಿರಾತ್ರೋಪೋಷಣಾಚ್ಛುದ್ಧಿಸ್ತಾಮೇವೋದ್ವಾಹಯೇತ್ತತಃ ॥೧೮॥**
**ಕನ್ಯಾಗಂತಾ ತು ಯೋಽನ್ಯಸ್ಮೈ ದತ್ತಾಂ ಪಶ್ಚಾತ್ತು ಗಚ್ಛತಿ ।**
**ಪಿತ್ರೋರನುಜ್ಞಯಾ ಸಾರ್ಧಂ ತ್ರಿದಿನೇನ ವಿಶುಧ್ಯತಿ ॥ ೧೯ ॥**
**ಜ್ಞಾತಃ ಪಿತೃಭ್ಯಾಂ ಯೋ ಮಾಸಂ ಕನ್ಯಾಭಾವೇ ತು ಗಚ್ಛತಿ ।**
**ಅನ್ಯೋಢಾಂ ತಾಂ ತತೋ ಗತ್ವಾ ಪ್ರಾಣಾಯಾಮಶತೇನ ತು ॥ ೨೦ ॥**
**ಏಕೇನ ಸಂಗತಾಂ ಜ್ಞಾತ್ವಾ ಯೋಽನ್ಯಸ್ಮೈ ಸಂಪ್ರಯಚ್ಛತಿ ।**
**ವೃಷಲಃ ಸ ತು ವಿಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥ ೨೧ ॥**
**ಜ್ಞಾತಃ ಪಿತೃಭ್ಯಾಂ ಯೋ ಗತ್ವಾ ಪರೋಢಾಂ ತದ್ವಿನಾಶನೇ ।**
**ವಿಧವಾ ಜಾಯತೇ ನೇಯಂ ಪೂರ್ವಗಂತಾರಮಾಪ್ನುಯಾತ್ ॥೨೨॥**

---

೧೮. ತಾಯಿತಂದೆಗಳ ಅಪ್ಪಣೆಯನ್ನು ಪಡೆದರೂ ಶಾಸ್ತ್ರವಿಧಿಯನ್ನು ಮೀರಿ ಯಾವನು ಅವಿವಾಹಿತೆಯಾದ ಕನ್ಯೆಯನ್ನು ಉಪಭೋಗಿಸುವನೋ ಅವನು ಮೂರು ರಾತ್ರಿಗಳು ಉಪವಾಸವಿದ್ದು ಪ್ರಾಯಶ್ಚಿತ್ತದಿಂದ ಶುದ್ಧನಾಗಿ ಆಮೇಲೆ ಆ ಕನ್ಯೆಯನ್ನೇ ಮದುವೆಯಾಗತಕ್ಕುದು.

೧೯. ತಾಯಿತಂದೆಗಳ ಅನುಜ್ಞೆಯಿಂದ ಒಬ್ಬ ಕನ್ಯೆಯನ್ನು ಉಪಭೋಗಿಸುತ್ತಿದ್ದು ಅವಳನ್ನು ಮತ್ತೊಬ್ಬನಿಗೆ ಕೊಟ್ಟಮೇಲೂ ಅವಳಲ್ಲಿಗೆ ಪುನಃ ಯಾವನು ಹೋಗುತ್ತಾನೆಯೋ ಅವನು, ಆ ಪಾಪದ ಪ್ರಾಯಶ್ಚಿತ್ತವಾಗಿ ಮೂರು ದಿನಗಳ ಉಪವಾಸ ವ್ರತವನ್ನಾಚರಿಸಿದರೆ ಶುದ್ಧನಾಗುವನು.

೨೦. ತಾಯಿತಂದೆಗಳಿಗೆ ಗೊತ್ತಿರುವಂತೆಯೇ ಇನ್ನೊಬ್ಬನಿಗೆ ಮದುವೆಯಾದ ಕನ್ಯೆಯ ಸಂಗವನ್ನು ಮಾಡಿದವನು ನೂರಾವೃತ್ತಿ ಪ್ರಾಣಾಯಾಮಮಾಡುವುದರಿಂದ ಶುದ್ಧನಾಗುವನು.

೨೧. ಒಬ್ಬನಲ್ಲಿಯೇ ಆಸಕ್ತೆಯಾಗಿರುವುದನ್ನು ಅರಿತೂ ಯಾವನು ಕನ್ಯೆಯನ್ನು ಇನ್ನೊಬ್ಬನಿಗೆ ಕೊಡುತ್ತಾನೆಯೋ ಅವನನ್ನು ವೃಷಲ (ಶೂದ್ರ) ನೆಂದು ತಿಳಿಯತಕ್ಕುದು. ಅವನು ಎಲ್ಲಾ ಕರ್ಮಗಳಿಗೂ ಬಹಿಷ್ಕೃತನಾದವನು.

೨೨. ತಾಯಿತಂದೆಗಳಿಗೆ ತಿಳಿದಿರುವಂತೆ ಇನ್ನೊಬ್ಬನಿಗೆ ಮದುವೆ ಮಾಡಿಕೊಟ್ಟ ಕನ್ಯೆಯಲ್ಲಿ ವ್ಯಭಿಚರಿಸುತ್ತಿದ್ದು ಅವನು ಮೃತನಾದರೆ

**ಅನುಗ್ರಹಾದ್ದ್ವಿಜಾತೀನಾಮುದ್ವಾಹವಿಧಿನಾ ತತಃ ।**
**ತಯಾ ಕರ್ಮಾಣಿ ಕುರ್ವೀತ ಶ್ರೌತಸ್ಮಾರ್ತಾದಿಕಾನಿ ಚ ॥ ೨೩ ॥**
**ಆದಾವುದ್ವಾಹಿತಾ ವಾಪಿ ತದ್ವಿನಾಶೇಽನ್ಯಸಂಗತಾ ।**
**ಭೋಗೈಕಸಾಧನಾ ಸಾ ತು ನ ಯೋಗ್ಯಾಽಖಿಲಕರ್ಮಸು ॥ ೨೪ ॥**
**ಪಿಪೀಲಿಕಾಂತಂ ಬ್ರಹ್ಮಾದ್ಯಂ ಜಗತ್ಸ್ಥಾವರಜಂಗಮಂ ।**
**ಪಂಚಭೂತಾತ್ಮಕಂ ಪ್ರೋಕ್ತಂ ಚತುರ್ವಾಸನಯಾನ್ವಿತಂ ॥ ೨೫ ॥**
**ಜನ್ಮಾದ್ಯಾಹಾರಮದನ ನಿದ್ರಾಭೀತ್ಯಾ ಚ ಸರ್ವದಾ ।**
**ಆಹಾರಂ ನ ವಿನಾ ಜಂತುರಾಹಾರೋ ಮದನಃ ಸ್ಮೃತಃ ॥**
**ದುಃಸಹೋ ಮದನಸ್ತಸ್ಮಾತ್ಸರ್ವೇಷಾಂ ಪ್ರಾಣಿನಾಮಪಿ ॥ ೨೬ ॥**

---

ಆ ಕನ್ಯೆಯು ವಿಧವೆಯಾಗುವುದಿಲ್ಲ. ಪೂರ್ವದಲ್ಲಿ ತನ್ನಲ್ಲಿಗೆ ಬಂದಿದ್ದವನನ್ನು ಹೊಂದಬಹುದು.

೨೩. ಹಾಗೆ ಮತ್ತೆ ಆ ಕನ್ಯೆಯೊಡಗೂಡಿದ ಪುರುಷನು ಬ್ರಾಹ್ಮಣರ ಅನುಗ್ರಹದಿಂದ ಶಾಸ್ತ್ರೋಕ್ತನಿಯಮಗಳನ್ನು ಅನುಸರಿಸಿ ಅವಳನ್ನು ಮದುವೆಯಾಗಿ ಶ್ರೌತಸ್ಮಾರ್ತಾದಿ ಸಮಸ್ತ ಕರ್ಮಗಳನ್ನೂ ಅವಳೊಡನೆ ಮಾಡಬಹುದು.

೨೪. ಮೊದಲು ಒಬ್ಬನಿಗೆ ವಿವಾಹಿತೆಯಾಗಿ ಆ ಪತಿಯು ಮೃತನಾದಮೇಲೆ ಮತ್ತೊಬ್ಬನಲ್ಲಿ ಅನುರಕ್ತೆಯಾಗುವವಳು ಕೇವಲ ಭೋಗಾಪೇಕ್ಷೆಗೆ ಸಾಧನವೆನಿಸುತ್ತಾಳೆ. ಅಂತಹವಳು ಶ್ರೌತಸ್ಮಾರ್ತಾದಿ ಯಾವ ಕರ್ಮಗಳಿಗೂ ಯೋಗ್ಯಳಲ್ಲ.

೨೫. ಬ್ರಹ್ಮನು ಮೊದಲಾಗಿ ಇರುವೆಯ ವರೆಗಣ ಸ್ಥಾವರಜಂಗಮಾತ್ಮಕವಾದ ಈ ಜಗತ್ತೆಲ್ಲವೂ ಪಂಚಭೂತಾತ್ಮಕವಾದುದು; ಹುಟ್ಟಿದಂದಿನಿಂದ ಯಾವಾಗಲೂ ಆಹಾರ, ನಿದ್ರೆ, ಭಯ, ಮೈಥುನ ಎಂಬ ನಾಲ್ಕು ವಾಸನೆಗಳಿಂದ ಕೂಡಿದುದೂ ಆಗಿದೆ—ಎಂದು ಹೇಳಿದೆ.

೨೬. ಪ್ರಾಣಿಗಳಿಗೆ ಆಹಾರ, ನಿದ್ರೆ, ಭಯ, ಕಾಮ ಮೊದಲಾದವುಗಳು ಹುಟ್ಟಿದಂದಿನಿಂದ ಯಾವಾಗಲೂ ಇದ್ದೇ ಇರುತ್ತವೆ. ಆಹಾರವಿಲ್ಲದೆ ಪ್ರಾಣಿಯು ಜೀವಿಸಿರಲಾರದು. ಆಹಾರವೇ 'ಕಾಮ' ಎಂದು ಹೇಳಲಾಗಿದೆ. ಆದುದರಿಂದಲೇ ಎಲ್ಲ ಪ್ರಾಣಿಗಳಿಗೂ ಕಾಮವು ದುಸ್ಸಹವಾದುದು.

**ಪುಂನಾರೀರೂಪವತ್ಸೃತ್ವಾ ಮದನೇನ ಸ ವಿಶ್ವಸೃಟ್ ।**
**ಪ್ರವೃತ್ತಿಮಕರೋದಾದೌ ಸೃಷ್ಟಿಸ್ಥಿತಿಲಯಾತ್ಮಿಕಾಂ ॥ ೨೭ ॥**
**ತತ್ಪ್ರವೃತ್ತ್ಯಾ ಪ್ರವರ್ತಂತೇ ತನ್ನಿವೃತ್ತ್ಯಾಽಕ್ಷಯಾಂ ಗತಿಂ ।**
**ಪ್ರವೃತ್ತ್ಯಾಪಿ ತಥಾ ಮುಕ್ತಿರ್ನಿವೃತ್ತ್ಯಾ ಯಾ ಸಮೀರಿತಾ ।**
**ತದ್ರಹಸ್ಯಂ ತಥೋಪಾಯಂ ಶೃಣು ವಕ್ಷ್ಯಾಮಿ ಸಾಂಪ್ರತಂ ॥೨೮॥**
**ಸರ್ವಾತ್ಮಕೋ ವಾಸುದೇವಃ ಪುರುಷಸ್ತು ಪುರಾತನಃ**
**ಇಯಂ ಹಿ ಮೂಲಪ್ರಕೃತಿರ್ಲಕ್ಷ್ಮೀಃ ಸರ್ವಜಗತ್ಪ್ರಸೂಃ ॥ ೨೯ ॥**
**ಪಂಚಪಂಚಾತ್ಮತೃಪ್ತ್ಯರ್ಥಂ ಮಥನಂ ಕ್ರಿಯತೇ ತರಾಂ ।**
**ಏತನ್ಮಂತ್ರಾನುಭಾವಾಭ್ಯಾಂ ಮಥನಂ ಕ್ರಿಯತೇ ಯದಿ ॥**
**ತಾವುಭೌ ಪುಣ್ಯಕರ್ಮಾಣೌ ನ ದೋಷೋ ವಿದ್ಯತೇ ತಯೋಃ ॥೩೦॥**
**ಇದಂ ಚ ಶೃಣು ದೇವೇಂದ್ರ ರಹಸ್ಯಂ ಪರಮಂ ಮಹತ್ ।**
**ಸರ್ವೇಷಾಮೇವ ಪಾಪಾನಾಂ ಯೌಗಪದ್ಯೇನ ನಾಶನಂ ॥ ೩೧ ॥**

---

೨೭. ಪೂರ್ವದಲ್ಲಿ ಬ್ರಹ್ಮನು ಸ್ತ್ರೀಪುರುಷರ ರೂಪಗಳನ್ನು ಸೃಜಿಸಿ ಮನ್ಮಥನಿಂದಲೇ ಸೃಷ್ಟಿಸ್ಥಿತಿಲಯಾತ್ಮಕವಾದ ಕಾಮಪ್ರವೃತ್ತಿಯನ್ನು ಅವರಲ್ಲುಂಟುಮಾಡಿದನು.

೨೮–೨೯. ಅದೇ ಪ್ರವೃತ್ತಿಯಿಂದಲೇ ಪ್ರಾಣಿಗಳು ಪ್ರವರ್ತಿಸುತ್ತಿವೆ. ಆ ಪ್ರವೃತ್ತಿಯು ನಿವೃತ್ತವಾದರೆ ಅಕ್ಷಯವಾದ ಗತಿಯನ್ನೂ ಅವು ಹೊಂದುತ್ತವೆ. ಮಹೇಂದ್ರಾ! ನಿವೃತ್ತಿಯಿಂದ ಯಾವ ಮುಕ್ತಿಯು ದೊರಕುತ್ತದೆಯೋ, ಪ್ರವೃತ್ತಿಯಿಂದಲೂ ಅದೇ ಮುಕ್ತಿಯು ದೊರಕುತ್ತದೆ. ಅದರ ರಹಸ್ಯವನ್ನೂ, ಅದನ್ನು ಪಡೆಯುವ ಉಪಾಯವನ್ನೂ ಈಗ ನಿನಗೆ ಹೇಳುವೆನು. ಸಾವಧಾನದಿಂದ ಕೇಳು. ಶ್ರೀಮನ್ನಾರಾಯಣನು ಸರ್ವಾತ್ಮಕನೂ ಪುರಾಣಪುರುಷನೂ ಆದವನು. ಸಮಸ್ತ ಜಗತ್ತಿಗೂ ಪ್ರಸವಿತ್ರಿಯಾದ ಈ ಮೂಲಪ್ರಕೃತಿಯೇ ಆದಿಲಕ್ಷ್ಮಿಯು.

೩೦. "ಇಪ್ಪತ್ತೈದು ತತ್ತ್ವಗಳೊಡಗೂಡಿದ ಆತ್ಮದ ತೃಪ್ತಿಗಾಗಿ ಮೈಥುನವೆಂಬುದು ನಡೆಯುತ್ತದೆ" ಎಂಬ ಈ ಮಂತ್ರದ ಪುರಶ್ಚರಣದಿಂದ ಮೈಥುನವು ಮಾಡಲ್ಪಟ್ಟಿದೇ ಆದರೆ, ಹಾಗೆ ಮಾಡಿದ ಸ್ತ್ರೀಪುರುಷರಿಬ್ಬರೂ ಪುಣ್ಯಭಾಗಿಗಳೆನಿಸುವರು. ಅವರಿಗೆ ಮೈಥುನದೋಷವು ಬರುವುದಿಲ್ಲ.

೩೧. ಮಹೇಂದ್ರಾ! ಎಲ್ಲ ಪಾಪಗಳನ್ನೂ ಏಕಕಾಲದಲ್ಲಿಯೇ ನಾಶಗೊಳಿಸುವ ಪರಮಶ್ರೇಷ್ಠವಾದ ಈ ರಹಸ್ಯವನ್ನು ಕೇಳು.

ಭಕ್ತಿಶ್ರದ್ಧಾಸಮಾಯುಕ್ತಃ ಸ್ನಾತ್ವಾಂತರ್ಜಲಸಂಸ್ಥಿತಃ ।
ಅಷ್ಟೋತ್ತರಸಹಸ್ರಂ ತು ಜಪೇತ್ಪಂಚಾದಶಾಕ್ಷರೀಂ ॥
ಆರಾಧ್ಯ ಚ ಪರಾಂ ಶಕ್ತಿಂ ಮುಚ್ಯತೇ ಸರ್ವಕಿಲ್ಬಿಷೈಃ ॥ ೩೨ ॥
ತೇನ ನಶ್ಯಂತಿ ಪಾಪಾನಿ ಕಲ್ಪಕೋಟಿಕೃತಾನ್ಯಪಿ ।
ಸರ್ವಾಪದ್ಭ್ಯೋ ವಿಮುಚ್ಯೇತ ಸರ್ವಾಭೀಷ್ಟಂ ಚ ವಿಂದತಿ ॥ ೩೩ ॥

ಇಂದ್ರಃ—

ಭಗವನ್ಸರ್ವಧರ್ಮಜ್ಞ ಸರ್ವಭೂತಹಿತೇ ರತ ।
ಸಂಯೋಗಜಸ್ಯ ಪಾಪಸ್ಯ ವಿಶೇಷಂ ವಕ್ತುಮರ್ಹಸಿ ॥ ೩೪ ॥

ಬೃಹಸ್ಪತಿಃ—

ಸಂಯೋಗಜಂ ತು ಯತ್ಪಾಪಂ ತಚ್ಚತುರ್ಧಾ ನಿಗದ್ಯತೇ ।
ಕರ್ತಾ ಪ್ರಧಾನಂ ಸಹಕೃನ್ನಿಮಿತ್ತೋಽನುಮತಃ ಕ್ರಮಾತ್। [೩೫ ॥
ಕ್ರಮಾದ್ದಶಾಂಶತೋಽಘಂ ಸ್ಯಾಚ್ಚುದ್ಧಿಃ ಪೂರ್ವೋಕ್ತಮಾರ್ಗತಃ ॥

---

೩೨. ಭಕ್ತಿಶ್ರದ್ಧೆಗಳಿಂದ ಕೂಡಿದವನಾಗಿ ಸ್ನಾನಮಾಡಿ, ನೀರಿನ ನಡುವೆ ನಿಂತು ಸಾವಿರದೆಂಟು ಬಾರಿ ಪಂಚದಶಾಕ್ಷರೀಮಂತ್ರವನ್ನು ಜಪಿಸತಕ್ಕುದು. ಹೀಗೆ ಜಪಮಾಡಿ ಪರಾಶಕ್ತಿಯನ್ನು ಆರಾಧಿಸಿದಲ್ಲಿ ಎಲ್ಲ ಪಾಪಗಳಿಂದಲೂ ಬಿಡುಗಡೆಯಾಗುತ್ತದೆ.

೩೩. ಇದರಿಂದ ಕೋಟಿಕಲ್ಪಗಳವರೆಗೆ ಮಾಡಿದ ಪಾಪಗಳೆಲ್ಲವೂ ನಿವಾರಣೆಯಾಗುವುವು. ಈ ರೀತಿ ಆಚರಿಸಿದ ಮನುಷ್ಯನು ಎಲ್ಲಾ ಆಪತ್ತುಗಳಿಂದಲೂ ಬಿಡುಗಡೆಹೊಂದಿ ಸರ್ವಾಭೀಷ್ಟವನ್ನೂ ಪಡೆಯುತ್ತಾನೆ.

೩೪. ಮಹೇಂದ್ರನು ಕೇಳುತ್ತಾನೆ:—"ಪೂಜ್ಯನೆ! ಸಕಲ ಧರ್ಮಗಳನ್ನೂ ಬಲ್ಲವನಾಗಿ ಸಮಸ್ತಭೂತಗಳ ಹಿತದಲ್ಲಿಯೂ ಆಸಕ್ತನಾಗಿ ಮಹಾತ್ಮನೆನಿಸಿರುವ ನೀನು, ಪರಸ್ತ್ರೀ ಸಂಗದಿಂದುಂಟಾದ ಪಾಪದ ವಿಶೇಷವೇನೆಂಬುದನ್ನು ಹೇಳಬೇಕು."

೩೫. ಬೃಹಸ್ಪತಿಯು ಹೇಳುತ್ತಾನೆ:—ಎಲೈ ಪುರಂದರನೇ! ಪರಸ್ತ್ರೀ ಗಮನದಿಂದುಂಟಾಗುವ ಪಾಪವು ನಾಲ್ಕು ಬಗೆಯಾಗಿ ಹೇಳಲಾಗುತ್ತದೆ. ಮಾಡಿದವನು, ಆ ಕೆಲಸಕ್ಕೆ ಮುಖ್ಯವಾಗಿ ಸಹಾಯಮಾಡಿದವನು, ಅದಕ್ಕೆ ಕಾರಣನಾದವನು ಮತ್ತು ಆ ಕಾರ್ಯವನ್ನು ಅನುಮತಿಸಿದವನು. ಈ ನಾಲ್ವರಿಗೂ ಕ್ರಮವಾಗಿ ಹತ್ತು ಹತ್ತರಷ್ಟು ಪಾಪವುಂಟು.

**ಮದ್ಯಂ ಕಲಂಜಂ ನಿರ್ಯಾಸಂ ಛತ್ರಾಕಂ ಗೃಂಜನಂ ತಥಾ ।**
**ಲಶುನಂ ಚ ಕಲಿಂಗಂ ಚ ಮಹಾಕೋಶಾತಕೀ ತಥಾ ॥ ೩೬ ॥**
**ಬಿಂಬೀ ಲಿಂಗೀ ಕೈರವಂ ಚ ಹಸ್ತಿನೀ ಶಿಗ್ರುಬಿಂಬಿಕಾ ।**
**ಔದುಂಬರಂ ಚ ವಾರ್ತಾಕಂ ಕತಕಂ ಬಿಲ್ವಮಾರಿಕಾ ॥**
**ಕ್ರಮಾದ್ದಶಗುಣಾನ್ಯೂನಮಘಮೇಷಾಂ ವಿನಿರ್ದಿಶೇತ್ ॥ ೩೭ ॥**
**ಭ್ರುವಗ್ರಾಮಾಂಗವೇಶ್ಯಾಂಗವೇಶ್ಯೋಪಾಯನವಿಕ್ರಯೀ ।**
**ಸೇವಕಃ ಸ್ವಪುರಸ್ಥಶ್ಚ ಕುಗ್ರಾಮಸ್ಥೋಽಭಿಶಸ್ತಕಃ ॥ ೩೮ ॥**
**ವೈದ್ಯೋ ವೈಖಾನಸಃ ಶೈವೋ ನಾರೀಜೀವೋಽನ್ನವಿಕ್ರಯೀ ।**
**ಶಸ್ತ್ರಜೀವೀ ಪರಿವ್ರಾಟ್ ಚ ವೈದಿಕಾಚಾರನಿಂದಕಃ ॥ ೩೯ ॥**
**ಕ್ರಮಾದ್ದಶಗುಣಾನ್ಯೂನಮೇಷಾಂ ಪಕ್ವೋದನೇ ಭವೇತ್ ।**
**ಸ್ವತಂಡುಲಂ ವಾ ತೈಃ ಕ್ಲೃಪ್ತಮುಕ್ತಾರ್ಥಂ ಪಾಪಮಾದಿಶೇತ್॥೪೦॥**

---

ಹಿಂದೆಯೇ ನಿರೂಪಿಸಿರುವ ನಿಯಮದಂತೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದರಿಂದ ಇವರೆಲ್ಲರೂ ಶುದ್ಧರಾಗುತ್ತಾರೆ.

೩೬-೩೭. (ಇನ್ನು ಅಭಕ್ಷ್ಯಭಕ್ಷಣ ಮತ್ತು ಅದರಿಂದುಂಟಾಗುವ ದೋಷದ ವಿಚಾರವನ್ನು ಕೇಳುವವನಾಗು.) ಮದ್ಯ, ನಿರ್ಯಾಸ, (ಗಿಡದ ಹಾಲು), ನಾಯಿಕೊಡೆ, ಈರುಳ್ಳಿ, ಬೆಳ್ಳುಳ್ಳಿ, ಕಲ್ಲಂಗಡಿಹಣ್ಣು, ಗುಂಡುಸೋರೆ, ತೊಂಡೆ, ಲಿಂಗಿ, ಕೈರವ, ಹಸ್ತಿನಿ, ಶಿಗ್ರುಬಿಂಬಕ, ಅತ್ತಿ, ಬದನೆ, ಕತಕ, ಬಿಲ್ವಮಾರಿಕಾ, ಮುಂತಾದವುಗಳನ್ನು ಭುಜಿಸಬಾರದು. ಇವುಗಳನ್ನು ಭುಜಿಸಿದವನಿಗೆ ಕ್ರಮವಾಗಿ ಹತ್ತು ಹತ್ತರಷ್ಟು ಹೆಚ್ಚಾದ ಪಾಪವನ್ನು ಹೇಳಬೇಕು.

೩೮-೪೦. (ಭ್ರುವ) ಕುಲಗೋತ್ರಗಳು ಗೊತ್ತಿಲ್ಲದವನು, ಗ್ರಾಮಾಧಿಕಾರಿ, ವೇಶ್ಯೆಯರ ಮನೆಯಲ್ಲಿ ಯಜಮಾನನಾಗಿರುವವನು, ವೇಶ್ಯೆಯರಿಗೆ ವಿಟರು ಕೊಡುವ ಉಪಾಯನ ಪದಾರ್ಥಗಳನ್ನು ಮಾರುವವನು, ತನ್ನ ಊರಿನಲ್ಲಿಯೇ ಇರುವ ಸೇವಕ, ಕುಗ್ರಾಮದಲ್ಲಿರುವವನು, ವ್ಯಭಿಚಾರಿಯೆಂದು ಆಪಾದಿತನಾದವನು, ವೈದ್ಯ, ವೈಖಾನಸ, ಶೈವ, ಹೆಂಗಸಿನ ಮೂಲಕ ಜೀವನಮಾಡುವವನು, ಅನ್ನವಿಕ್ರಯ ಮಾಡುವವನು, ಶಸ್ತ್ರದಿಂದ ಜೀವಿಸುವವನು, ಸಂನ್ಯಾಸಿ, ವೈದಿಕಾಚಾರವನ್ನು ನಿಂದಿಸುವವನು, ಇವರುಗಳು ಬೇಯಿಸಿದ ಅನ್ನವನ್ನು ಭುಜಿಸಿದುದಾದರೆ ಕ್ರಮವಾಗಿ ಒಂದಕ್ಕಿಂತಲೂ ಮತ್ತೊಂದು ಹತ್ತರಷ್ಟು ಕಡಮೆಯ ಪಾಪವ

**ಬ್ರಹ್ಮಕ್ಷತ್ರವಿಶಾಂ ಚೈವ ಸಚ್ಛೂದ್ರಾಣಾಂ ಯದೋದನಂ ।**
**ತೈಲಪಕ್ವಮದೃಷ್ಟಂ ಚ ಭುಂಜನ್ ಪಾದಮಘಂ ಭವೇತ್ ॥ ೪೧ ॥**
**ದ್ವಿಜನ್ಮದಾಸೀಕ್ಲೃಪ್ತಂ ಚ ತಯಾ ದೃಷ್ಟೇ ತದರ್ಧಕಂ ।**
**ವೇಶ್ಯಾಯಾಸ್ತು ತ್ರಿಪಾದಂ ಸ್ಯಾತ್ತಯಾ ದೃಷ್ಟೇ ತದೋದನೇ॥೪೨॥**
**ಶೂದ್ರವತ್ಸ್ಯಾಚ್ಚ ಗೋಪಾನ್ನಂ ವಿನಾ ಗವ್ಯಚತುಷ್ಟಯಂ ।**
**ತೈಲಾಜ್ಯಗುಡಸಂಯುಕ್ತಂ ಪಕ್ವಂ ವೈಶ್ಯಾನ್ನ ದುಷ್ಯತಿ ॥ ೪೩ ॥**
**ವೇಶ್ಯಾವದ್ಬ್ರಾಹ್ಮಣೀ ಭ್ರಷ್ಟಾ ತಯಾ ದೃಷ್ಟೇ ನ ಕಿಂಚನ ।**
**ಬ್ರುವಸ್ಯಾನ್ನಂ ದ್ವಿಜೋ ಭುಕ್ತ್ವಾ ಪ್ರಾಣಾಯಾಮಶತಂ ಜಪೇತ್ ॥**
**ಅಥವಾಂತರ್ಜಲೇ ಜಪ್ತ್ವಾ ತ್ರಿಪದಾಂ ವಾ ತ್ರಿವಾರಕಂ । [೪೪ ॥**
**ಇದಂ ವಿಷ್ಣುಸ್ತ್ರ್ಯಮ್ಬಕಂ ವಾ ತಥೈವಾಂತರ್ಜಲೇ ಜಪೇತ್ ॥ ೪೫ ॥**

---

ನ್ನುಂಟುಮಾಡುತ್ತದೆ. ತನ್ನ ಸ್ವಂತ ಅಕ್ಕಿಯನ್ನು ಇವರುಗಳಿಂದ ಬೇಯಿಸಿ ತಿಂದಲ್ಲಿಯೂ ಮೇಲೆ ಹೇಳಿದ ಪಾಪದಲ್ಲಿ ಅರ್ಧಾಂಶದಷ್ಟು ಪಾಪವುಂಟು.

೪೧. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಬ್ರಾಹ್ಮಣರ ಮನೆಯಲ್ಲಿರುವ ಶೂದ್ರ ಇವರು ತೈಲದಲ್ಲಿ ಪಕ್ವಮಾಡಿದ ಅನ್ನವನ್ನೂ, ಆಹಾರವನ್ನೂ ಕಾಣದೆ ಭುಜಿಸಿದುದಾದರೆ ಮೇಲೆ ಹೇಳಿದ ಪಾಪದಲ್ಲಿ ಕಾಲುಭಾಗವುಂಟು.

೪೨. ಬ್ರಾಹ್ಮಣನ ದಾಸಿಯು ಬೇಯಿಸಿದ ಅನ್ನವನ್ನೂ ಅಥವಾ ಅವಳು ದೃಷ್ಟಿಸಿದ ಅನ್ನವನ್ನೂ ಭುಜಿಸಿದುದಾದರೆ ಅದರಲ್ಲಿ ಅರ್ಧಭಾಗ ದಷ್ಟೂ, ವೇಶ್ಯೆಯು ದೃಷ್ಟಿಸಿದ ಅನ್ನವನ್ನು ಭುಜಿಸಿದರೆ ಅದರಲ್ಲಿ ಮುಕ್ಕಾಲುಭಾಗದಷ್ಟೂ ದೋಷವುಂಟು.

೪೩. ಹಾಲು, ಮೊಸರು, ಬೆಣ್ಣೆ, ತುಪ್ಪ ಇವುಗಳನ್ನು ಬಿಟ್ಟು ಗೋವಳರು ಬೇಯಿಸಿದ ಇತರ ಭೋಜ್ಯಪದಾರ್ಥಗಳು ಶೂದ್ರಾನ್ನ ವೆನಿಸುವುದು. ಎಣ್ಣೆ ತುಪ್ಪ ಬೆಲ್ಲಗಳಿಂದ ಕೂಡಿ ಪಕ್ವವಾದ ವೈಶ್ಯಾನ್ನವು ದೂಷ್ಯವಲ್ಲ.

೪೪. ಭ್ರಷ್ಟೆಯಾದ ಬ್ರಾಹ್ಮಣಸ್ತ್ರೀಯು ವೇಶ್ಯೆಯಂತೆಯೇ. ಅವಳು ದೃಷ್ಟಿಸಿದ ಅನ್ನವನ್ನು ಭುಜಿಸಲೇಬಾರದು. ಬ್ರಾಹ್ಮಣನು ಕುಲಗೋತ್ರಗಳು ಗೊತ್ತಿಲ್ಲದವನ (ಬ್ರುವನ) ಅನ್ನವನ್ನು ಭುಜಿಸಿದು ದಾದರೆ ನೂರಾವೃತ್ತಿ ಪ್ರಾಣಾಯಾಮವನ್ನು ಮಾಡಬೇಕು.

೪೫. ಅಥವಾ ನೀರಿನಲ್ಲಿ ನಿಂತು ಮೂರು ಬಾರಿ ಗಾಯತ್ರಿಯನ್ನು ಜಪಿಸಬೇಕು. ಅಥವಾ "ಇದಂ ವಿಷ್ಣುಃ" ಎಂಬ ಮಂತ್ರವನ್ನಾಗಲಿ,

ಸ್ತ್ರೀಭುಕ್ತ್ವಾತು ಬ್ರುವಸ್ಯಾನ್ನಮೇಕಾದ್ಯಾನ್ಭೋಜಯೇದ್ದ್ವಿಜಾನ್।
ಉಪೋಷ್ಯ ರಜನೀಮೇಕಾಂ ತತಃ ಪಾಪಾದ್ವಿಶುಧ್ಯತಿ ॥ ೪೬ ॥
ಅಥವಾ ಪ್ರೋಕ್ಷಯೇದನ್ನಮಬ್ಲಿಂಗೈಃ ಪಾವಮಾನಿಕೈಃ।
ಅನ್ನಸೂಕ್ತಂ ಜಪಿತ್ವಾ ತು ಭೃಗುರ್ವೈ ವಾರುಣೇತಿ ಚ ॥ [೪೭॥
ಬ್ರಹ್ಮಾರ್ಪಣಮಿತಿಶ್ಲೋಕಂ ಜಪ್ತ್ವಾ ಭುಕ್ತ್ವಾ ನದೋಷಭಾಕ್॥
ಇದಂ ವಿಷ್ಣುರಿತಿ ಮಂತ್ರೇಣ ಸಪ್ತವಾರಾಭಿಮಂತ್ರಿತಂ। [೪೮ ॥
ಸೋಽಹಂಭಾವೇನ ತದ್ಧ್ಯಾತ್ವಾ ಭುಕ್ತ್ವಾ ದೋಷೈರ್ನ ಲಿಪ್ಯತೇ॥
ಅಥವಾ ಶಂಕರಂ ಧ್ಯಾಯೇಜ್ಜಪ್ತ್ವಾ ವೈ ತ್ರ್ಯಂಬಕಂ ತಥಾ।
ಸೋಽಹಂಭಾವೇನ ತದ್ಭುಕ್ತ್ವಾ ನಾನ್ನದೋಷೈಃ ಪ್ರಲಿಪ್ಯತೇ॥೪೯॥
ಏವಮುಕ್ತಪ್ರಕಾರೇಣ ಪ್ರಾಯಶ್ಚಿತ್ತಂ ಸಮಾಚರೇತ್।
ಇದಂ ರಹಸ್ಯಂ ದೇವೇಂದ್ರ ಶೃಣುಷ್ವ ವಚನಂ ಮಮ ॥ ೫೦ ॥

---

"ತ್ರ್ಯಂಬಕಂ" ಎಂಬ ಮಂತ್ರವನ್ನಾಗಲಿ ನೀರಿನಲ್ಲಿ ನಿಂತು ಮೂರಾವೃತ್ತಿ ಜಪಿಸಬೇಕು.

೪೬. ಶೂದ್ರಾನ್ನವನ್ನು ಭುಜಿಸಿದ ಸ್ತ್ರೀಯು ಒಬ್ಬ ಅಥವಾ ಹೆಚ್ಚು ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಒಂದು ರಾತ್ರಿ ಉಪವಾಸ ವಿದ್ದಲ್ಲಿ ಪಾಪಪರಿಹಾರವಾಗಿ ಶುದ್ಧಳಾಗುತ್ತಾಳೆ.

೪೭. ಪಾವಮಾನ ಮಂತ್ರಗಳನ್ನು ಹೇಳಿಕೊಂಡು ಅನ್ನವನ್ನು ಜಲದಿಂದ ಪ್ರೋಕ್ಷಣೆಮಾಡಿ ಭುಜಿಸಬೇಕು. ಅನ್ನಸೂಕ್ತವನ್ನೂ, "ಭೃಗುರ್ವೈ ವಾರುಣಿಃ" ಎಂಬ ಮಂತ್ರವನ್ನೂ, "ಬ್ರಹ್ಮಾರ್ಪಣಂ" ಎಂಬ ಶ್ಲೋಕವನ್ನೂ ಜಪಿಸಿ ಅನ್ನವನ್ನು ಭುಜಿಸಿದುದಾದರೆ ದೋಷ ಭಾಜನನಾಗುವುದಿಲ್ಲ.

೪೮. ಯಾವ ಅನ್ನವನ್ನಾದರೂ "ಇದಂ ವಿಷ್ಣುಃ" ಎಂಬ ಮಂತ್ರದಿಂದ ಏಳಾವೃತ್ತಿ ಅಭಿಮಂತ್ರಿಸಿ ಸೋಽಹಂಭಾವದಿಂದ ಧ್ಯಾನಿಸಿ ಭುಜಿಸಿದರೆ ದೋಷಲೇಪವಾಗದು.

೪೯. ಅಥವಾ ಪರಮೇಶ್ವರನನ್ನು ಧ್ಯಾನಿಸಿ "ತ್ರ್ಯಂಬಕಂ" ಎಂಬ ಮಂತ್ರವನ್ನು ಜಪಿಸಿ ಸೋಽಹಂಭಾವದಿಂದ ಭುಜಿಸಿದರೂ ದೋಷವು ಬರುವುದಿಲ್ಲ.

೫೦. ಅಯ್ಯಾ ದೇವೇಂದ್ರನೇ! ಈ ಮೇಲೆ ಹೇಳಿದಂತೆ ಅಭಕ್ಷ್ಯ ಭಕ್ಷಣ ವಿಷಯದಲ್ಲಿ ಪ್ರಾಯಶ್ಚಿತ್ತವನ್ನು ಆಚರಿಸತಕ್ಕುದು. ನನ್ನ

**ಧ್ಯಾತ್ವಾ ದೇವೀಂ ಪರಾಂ ಶಕ್ತಿಂ ಜಪ್ತ್ವಾ ಪಂಚದಶಾಕ್ಷರೀಂ ।**
**ತನ್ನಿವೇದಿತಬುದ್ಧ್ಯಾ ತು ಯೋಽಶ್ನಾತಿ ಪ್ರತ್ಯಹಂ ದ್ವಿಜಃ ॥ ೫೧ ॥**
**ನಚಾಸ್ಯ ದೋಷಜಂ ಕಿಂಚಿನ್ನ ದಾರಿದ್ರ್ಯಭಯಂ ತಥಾ ।**
**ನ ವ್ಯಾಧಿಜಂ ಭಯಂ ತಸ್ಯ ನ ಚ ಶತ್ರುಭಯಂ ತಥಾ ॥**
**ಜಪತೋ ಮುಕ್ತಿರೇವಾಸ್ಯ ಸದಾ ಸರ್ವತ್ರ ಮಂಗಲಂ ॥ ೫೨ ॥**
**ಏತತ್ತೇ ಕಥಿತಂ ಶಕ್ರ ಪಾಪಾನಾಮಪಿ ವಿಸ್ತರಂ ।**
**ಪ್ರಾಯಶ್ಚಿತ್ತಂ ತಥಾ ತೇಷಾಂ ಕಿಮನ್ಯಚ್ಛ್ರೋತುಮಿಚ್ಛತಿ ॥೫೩॥**

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ತ ತೀಯೋऽಧ್ಯಾಯಃ

---

ಮಾತನ್ನು ಸಾವಧಾನವಾಗಿ ಕೇಳು. ನಿನಗೆ ಒಂದು ರಹಸ್ಯವನ್ನು ಹೇಳುವೆನು.

೫೧-೫೨. ಯಾವ ಬ್ರಾಹ್ಮಣನು ಪರಾಶಕ್ತಿಯಾದ ದೇವಿಯನ್ನೇ ಧ್ಯಾನಿಸುತ್ತ, ಪಂಚದಶಾಕ್ಷರೀ ಮಂತ್ರವನ್ನು ಜಪಿಸಿ ಅನ್ನವನ್ನು ಆಕೆಗೇ ನಿವೇದಿಸಿ ಅದನ್ನು ಅನುದಿನವೂ ಭುಜಿಸುತ್ತಾನೆಯೋ, ಅವನು ಅಭಕ್ಷ್ಯಭಕ್ಷಣ ದೋಷಕ್ಕೆ ಸ್ವಲ್ಪವೂ ತುತ್ತಾಗುವುದಿಲ್ಲ. ಅವನಿಗೆ ದಾರಿದ್ರ್ಯವೆಂಬುದಿಲ್ಲ; ವ್ಯಾಧಿಭಯವಿಲ್ಲ. ಶತ್ರುಭಯವಂತೂ ಇರುವುದೇ ಇಲ್ಲ. ಪಂಚದಶಾಕ್ಷರೀ ಜಪಮಾಡುವವನಿಗೆ ಮುಕ್ತಿಯು ದೊರಕುವುದಲ್ಲದೆ, ಯಾವಾಗಲೂ ಎಲ್ಲೆಡೆಗಳಲ್ಲಿಯೂ ಮಂಗಳವೇ ಉಂಟಾಗುವುದು.

೫೩. ಮಹೇಂದ್ರಾ! ಪಾಪಗಳ ವಿಚಾರವನ್ನೂ ಅವುಗಳ ಪ್ರಾಯಶ್ಚಿತ್ತ ವಿಧಿಯನ್ನೂ ನಿನಗೆ ವಿಸ್ತಾರವಾಗಿ ತಿಳಿಸಿದುದಾಯಿತು. ಮತ್ತೇನನ್ನು ಕೇಳಲಪೇಕ್ಷಿಸುವೆ?

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

[ಮಹೇಂದ್ರೇಣ ಬೃಹಸ್ಪತಿಂ ಪ್ರತಿ ನಿಜದೌರ್ಭಾಗ್ಯ ಪ್ರತೀಕಾರ ಪ್ರಶ್ನಃ]

ಪಾಪಿಷ್ಠಾನ್ನಸುಭಕ್ಷಣೈರಪಿ ತಥಾ ಚಾನ್ಯಾಂಗನಾ ಸಂಗಮೈ
ರ್ಯತ್ಪಾಪಂ ಪರಿಕೀರ್ತಿತಂ ತದಖಿಲಂ ಯಸ್ಸೈವ ಶಂಭೋರ್ವಿಭೋಃ ।
ದೇವ್ಯಾಶ್ಚೈವ ಪದಾಂಬುಜಸ್ಮರಣತಃ ಪುಣ್ಯಾಯತೇ ಸಂತತಂ
ತಸ್ಮಾತ್ತ್ವಾಂ ಲಲಿತಾಸಮೇತಮನಘಂ ಶ್ರೀಸುಂದರೇಶಂ ಭಜೇ ॥

ಇಂದ್ರಃ —

**ಭಗವನ್ ಸರ್ವಧರ್ಮಜ್ಞ ತ್ರಿಕಾಲಜ್ಞಾನವಿತ್ತಮ**
**ದುಷ್ಕೃತಂ ಚ ಪ್ರತೀಕಾರಂ ಭವತಾ ಸಮ್ಯಗೀರಿತಂ ॥ ೧ ॥**
**ಕೇನ ಕರ್ಮವಿಪಾಕೇನ ಮಮಾಪದಿಯಮಾಗತಾ ।**
**ಪ್ರಾಯಶ್ಚಿತ್ತಂ ಚ ಕಿಂ ತಸ್ಯ ವದಸ್ವ ವದತಾಂ ವರ ॥ ೨ ॥**

ಬೃಹಸ್ಪತಿಃ —

**ಕಶ್ಯಪಸ್ಯ ಸುತೋ ಜಜ್ಞೇ ದಿತ್ಯಾಂ ದನುರಿತಿ ಸ್ಮೃತಃ ।**
**ಕನ್ಯಾ ರೂಪವತೀ ನಾಮ ಧಾತ್ರೇ ತಾಂ ಪ್ರದದೌ ಪಿತಾ ॥ ೩ ॥**

---

### ಕನ್ನಡದ ಅನುವಾದ

[ಮಹೇಂದ್ರನು ಬೃಹಸ್ಪತಿಯನ್ನು ಕುರಿತು, ತನ್ನ ದೌರ್ಭಾಗ್ಯಕ್ಕೆ ಪ್ರತೀಕಾರ ವೇನೆಂದು ಪ್ರಶ್ನೆಮಾಡುವುದು]

೧. ಮಹೇಂದ್ರನು ಕೇಳುತ್ತಾನೆ:—ಗುರುವೇ! ಷಡ್ಗುಣೈಶ್ವರ್ಯ ಸಂಪನ್ನನೂ, ಎಲ್ಲ ಧರ್ಮಗಳನ್ನೂ ಬಲ್ಲವನೂ, ತ್ರಿಕಾಲಜ್ಞಾನಿಗಳಲ್ಲಿ ಶ್ರೇಷ್ಠನೂ ಆದ ನೀನು ಈವರೆಗೆ ಪಾಪ ಸ್ವರೂಪವನ್ನೂ, ಅದಕ್ಕೆ ಪ್ರಾಯಶ್ಚಿತ್ತವೇನೆಂಬ ವಿಷಯವನ್ನೂ ಬಹಳ ಚೆನ್ನಾಗಿ ತಿಳಿಸಿದೆ.

೨. ನಾನು ಮಾಡಿದ ಯಾವ ಕರ್ಮದ ಫಲವಾಗಿ ನನಗೆ ಈ ವಿಧವಾದ ಸಂಕಟವು ಪ್ರಾಪ್ತವಾಗಿರುವುದು? ಇದಕ್ಕೆ ಪ್ರಾಯಶ್ಚಿತವಾದರೂ ಏನು? ವಾಗ್ಮಿಗಳಲ್ಲಿ ಶ್ರೇಷ್ಠನಾದ ನೀನು ಈ ವಿಚಾರವನ್ನು ನನಗೆ ತಿಳಿಸಬೇಕು.

೩. ಬೃಹಸ್ಪತಿಯು ಹೇಳುತ್ತಾನೆ:—ಎಲೈ ದೇವರಾಜನೇ! ಕೇಳು. ಪೂರ್ವದಲ್ಲಿ ಕಶ್ಯಪನಿಗೆ ದಿತೀದೇವಿಯಲ್ಲಿ ದನುವೆಂಬ ಮಗನೂ, ರೂಪವತಿ

**ತಸ್ಯಾಃ ಪುತ್ರಸ್ತತೋ ಜಾತೋ ವಿಶ್ವರೂಪೋ ಮಹಾದ್ಯುತಿಃ ।**
**ನಾರಾಯಣಪರೋ ನಿತ್ಯಂ ವೇದವೇದಾಂಗಪಾರಗಃ ॥ ೪ ॥**
**ತತೋ ದೈತ್ಯೇಶ್ವರೋ ವವ್ರೇ ಭೃಗುಪುತ್ರಂ ಪುರೋಹಿತಂ ।**
**ಭವಾನಪಿ ಕೃತೋ ರಾಜ್ಯೇ ದೇವಾನಾಮಪಿ ವಾಸವಃ ॥ ೫ ॥**
**ಭವತಾ ಸಹ ದೇವೈಸ್ತು ಪೌರೋಹಿತ್ಯಾರ್ಥಮಾದರಾತ್ ।**
**ಪ್ರಾರ್ಥಿತೋ ವಿಶ್ವರೂಪಸ್ತು ಬಭೂವ ತಪತಾಂ ವರಃ ॥ ೬ ॥**
**ಸ್ವಸ್ರೀಯೋ ದಾನವಾನಾಂ ತು ದೇವಾನಾಂ ಚ ಪುರೋಹಿತಃ ।**
**ನಾತ್ಯರ್ಥಮಕರೋದ್ವೈರಂ ದೈತ್ಯೇಷ್ವಪಿ ಮಹಾತಪಾಃ ॥ ೭ ॥**
**ಬಭೂವತುಸ್ತುಲ್ಯಬಲೌ ತದಾ ದೈತ್ಯೇಂದ್ರವಾಸವೌ ॥ ೮ ॥**
**ತತಸ್ತ್ವಂ ಕುಪಿತೋ ರಾಜನ್ ಸ್ವಸ್ರೀಯಂ ದಾನವೇಶಿತುಃ ।**
**ಹಂತುಮಿಚ್ಛನ್ನಗಾಶ್ಚಾಶು ತಪಸಃ ಸಾಧನಂ ವನಂ ॥ ೯ ॥**

---

ಎಂಬ ಕನ್ಯೆಯೂ ಜನಿಸಿದರು. ಆತನು ಮಗಳಾದ ರೂಪವತಿಯನ್ನು ಧಾತೃವಿಗೆ ಮದುವೆ ಮಾಡಿಕೊಟ್ಟನು.

೪. ಆ ರೂಪವತಿಗೆ ವಿಶ್ವರೂಪನೆಂಬ ಮಗನಾದನು. ಆತನು ಮಹಾತೇಜಸ್ವಿಯೂ ವಿಷ್ಣುಭಕ್ತನೂ, ವೇದವೇದಾಂಗಗಳಲ್ಲಿ ಪಾರಂಗತನೂ ಆದನು.

೫. ಆಗ ದೈತ್ಯರಾಜನು, ಭೃಗುಪುತ್ರನಾದ ಶುಕ್ರಾಚಾರ್ಯನನ್ನು ಪುರೋಹಿತನನ್ನಾಗಿ ವರಿಸಿದನು. ಆಗಲೇ ನೀನೂ ಸಹ ದೇವತೆಗಳ ರಾಜ್ಯದಲ್ಲಿ ಮಹೇಂದ್ರನಾದೆ.

೬. ಆಗ ನೀನು ದೇವತೆಗಳೊಡಗೂಡಿ ಬಹಳ ಆದರದಿಂದ ವಿಶ್ವರೂಪನನ್ನು ಪುರೋಹಿತನಾಗೆಂದು ಪ್ರಾರ್ಥಿಸಿದೆ. ತಪಸ್ವಿಶ್ರೇಷ್ಠನಾದ ಆತನು ನಿನ್ನ ಮಾತಿನಂತೆ ಪುರೋಹಿತನಾದನು.

೭. ದಾನವರಿಗೆ ಸೋದರಳಿಯನಾಗಿ, ದೇವತೆಗಳಾದ ನಿಮ್ಮೆಲ್ಲರಿಗೂ ಪುರೋಹಿತನಾದ ಆ ವಿಶ್ವರೂಪನು ಮಹಾತಪಸ್ವಿಯಾದುದರಿಂದ ದೈತ್ಯರಲ್ಲಿ ಬಹಳವಾಗಿ ವೈರವನ್ನು ಕಟ್ಟಿಕೊಳ್ಳಲಿಲ್ಲ.

೮. ಆಗ ವಾಸವನಾದ ನೀನೂ, ದೈತ್ಯೇಂದ್ರನೂ ಸಮಾನವಾದ ಬಲಪರಾಕ್ರಮವುಳ್ಳವರಾದಿರಿ.

೯–೧೨. ಎಲೈ ದೇವರಾಜನೇ! ಇದೇ ಕಾರಣದಿಂದಲೇ ನಿನಗೆ ದಾನವೇಂದ್ರನ ಸೋದರಳಿಯನಾದ ಆ ವಿಶ್ವರೂಪನಲ್ಲಿ ಕೋಪ

**ತಮಾಸನಸ್ಥಂ ಮುನಿಭಿಸ್ತ್ರಿಶೃಂಗಮಿವ ಪರ್ವತಂ ।**
**ತ್ರಯೀಮುಖರದಿಗ್ಭಾಗಂ ಬ್ರಹ್ಮಾನಂದೈಕನಿಷ್ಠಿತಂ ॥ ೧೦ ॥**
**ಸರ್ವಭೂತಹಿತಂ ತಂ ತು ಮತ್ವಾರೇರನುಕೂಲಿನಂ ।**
**ಶಿರಾಂಸಿ ಯಔಗಪದ್ಯೇನ ಚ್ಛಿನ್ನಾನ್ಯಸ್ಯ ತ್ವಯೈವ ತು ॥ ೧೧ ॥**
**ತೇನ ಪಾಪೇನ ಸಂಯುಕ್ತಃ ಪೀಡಿತಶ್ಚ ಮುಹುರ್ಮುಹುಃ ।**
**ತತೋ ಮೇರುಗುಹಾಂ ಗತ್ವಾ ಬಹೂನ್ಯಬ್ದಾನಿ ಸಂಸ್ಥಿತಃ ॥ ೧೨ ॥**
**ತತಸ್ತಸ್ಯ ವಧಂ ಶ್ರುತ್ವಾ ಧಾತಾ ತು ಮುನಿವಾಕ್ಯತಃ ।**
**ಪುತ್ರಶೋಕೇನ ಸಂತಪ್ತಸ್ತ್ವಾಂ ಶಶಾಪ ರುಷಾನ್ವಿತಃ ॥**
**ನಿಃಶ್ರೀಕೋ ಭವತು ಕ್ಷಿಪ್ರಂ ಮಮ ಶಾಪೇನ ವಾಸವಃ ॥ ೧೩ ॥**
**ಅನಾಯಕಾಸ್ತತೋ ದೇವಾ ವಿಷಣ್ಣಾ ದೈತ್ಯಪೀಡಿತಾಃ ।**
**ಗತ್ವಾ ತು ಬ್ರಹ್ಮಸದನಂ ನತ್ವಾ ತದ್ವೃತ್ತಮೂಚಿರೇ ॥ ೧೪ ॥**

---

ವುಂಟಾಯಿತು. ಕೂಡಲೇ ನೀನು ಆತನ ತಪಸ್ಸಿಗೆ ಅನುಕೂಲವಾದ ಪರ್ವತಗಳನ್ನೂ, ತಪೋವನಗಳನ್ನೂ ನಾಶಮಾಡಲಪೇಕ್ಷಿಸಿದೆ. ಅಲ್ಲದೆ ಮುನಿಗಳೊಡಗೂಡಿ ಮೂರು ಶಿಖರಗಳುಳ್ಳ ಪರ್ವತದಂತೆ ಮಹೋನ್ನತನಾಗಿ ಪೀಠದಲ್ಲಿ ಕುಳಿತು ವೇದಮಂತ್ರಗಳನ್ನುಚ್ಚರಿಸುತ್ತಾ ಆ ಮಂತ್ರಧ್ವನಿಗಳಿಂದ ದಶದಿಶೆಗಳನ್ನು ತುಂಬಿ ಬ್ರಹ್ಮಾನಂದದಲ್ಲಿ ಲೀನನಾಗಿ ಸಮಸ್ತಭೂತಗಳಲ್ಲಿಯೂ ದಯಾನ್ವಿತನಾಗಿರುವ ಆ ವಿಶ್ವರೂಪ ಮುನಿಯನ್ನು ಕಂಡು, 'ಇವನು ಶತ್ರುಗಳಾದ ದಾನವರಿಗೆ ಅನುಕೂಲವಾದವನೆ'ಂದು ತಿಳಿದು, ಆತನ ಮೂರು ಶಿರಸ್ಸುಗಳನ್ನೂ ಒಂದೇ ತಡವೆಯೇ ಕತ್ತರಿಸಿದೆ. ಆ ಬ್ರಹ್ಮಹತ್ಯೆಯ ಪಾಪದಿಂದ ನೀನು ಅಡಿಗಡಿಗೂ ಪೀಡೆಗೊಳಗಾಗಿ ಅದರಿಂದ ಪಾರಾಗಲು ಮೇರು ಪರ್ವತದ ಗುಹೆಗೆ ಹೋಗಿ ಅಲ್ಲಿಯೇ ಅನೇಕ ಸಂವತ್ಸರಗಳ ಕಾಲ ನೆಲಸಿದೆ.

೧೩. ಇದಾದ ಮೇಲೆ ಧಾತೃವೂ ಸಹ ನಾರದಮಹರ್ಷಿಯ ಮೂಲಕವಾಗಿ ತನ್ನ ಮಗನಾದ ವಿಶ್ವರೂಪನ ಕೊಲೆಯ ವೃತ್ತಾಂತವನ್ನು ತಿಳಿದು ಮಗನ ಮರಣದಿಂದ ದುಃಖಿತನಾಗಿ ರೋಷಗೊಂಡು 'ಈ ನನ್ನ ಶಾಪದಿಂದ ಇಂದ್ರನು ಶೀಘ್ರದಲ್ಲಿಯೇ ರಾಜ್ಯಭ್ರಷ್ಟನಾಗಲಿ' ಎಂದು ನಿನ್ನನ್ನು ಶಪಿಸಿದನು. ಕೂಡಲೇ ನೀನು ರಾಜ್ಯಭ್ರಷ್ಟನಾದೆ.

೧೪. ಆಗ ದೇವತೆಗಳೆಲ್ಲರೂ ಅನಾಥರಾದರು. ದೈತ್ಯರು ಅವರನ್ನು

**ತತಸ್ತು ಚಿಂತಯಾಮಾಸ ತದಘಸ್ಯ ಪ್ರತಿಕ್ರಿಯಾಂ ।**
**ತಸ್ಯ ಪ್ರತಿಕ್ರಿಯಾಂ ವೇತ್ತುಂ ನ ಶಶಾಕಾತ್ಮಭೂಸ್ತದಾ ॥ ೧೫ ॥**
**ತತೋ ದೇವೈಃ ಪರಿವೃತೋ ನಾರಾಯಣಮುಪಾಗಮತ್ ।**
**ನತ್ವಾ ಸ್ತುತ್ವಾ ತು ಸರ್ವಜ್ಞಸ್ತದ್ವೃತ್ತಾಂತಂ ವ್ಯಜಿಜ್ಞಪತ್ ॥೧೬॥**
**ವಿಚಿಂತ್ಯ ಸೋಽಪಿ ಬಹುಧಾ ಕೃಪಯಾ ಲೋಕನಾಯಕಃ ।**
**ತದಘಂ ತು ತ್ರಿಧಾ ಭಿತ್ವಾ ತ್ರಿಷು ಸ್ಥಾನೇಷ್ವಥಾರ್ಪಯತ್ ॥**
**ಸ್ತ್ರೀಷು ಭೂಮ್ಯಾಂ ಚ ವೃಕ್ಷೇಷು ತೇಷಾಮಪಿ ದದೌ ವರಂ ॥ ೧೭ ॥**
**ಸದಾ ಭರ್ತೃಸಮಾಯೋಗಂ ಪುತ್ರಾವಾಪ್ತಿಮೃತುಷ್ವಪಿ ।**
**ಛಿನ್ನೇ ಪುನರ್ಭವತ್ವಂ ಚ ಸರ್ವೇಷಾಮಪಿ ಶಾಖಿನಾಂ ॥**
**ಖಾತಪೂರ್ತಿಂ ಧರಣ್ಯಾಶ್ಚ ಪ್ರದದೌ ಮಧುಸೂದನಃ ॥ ೧೮ ॥**

---

ವಿಧವಿಧವಾಗಿ ಹಿಂಸಿಸಲಾರಂಭಿಸಿದರು. ಹೀಗೆ ಬಹಳವಾಗಿ ಪೀಡೆಗೊಳಗಾದ ಆ ದೇವತೆಗಳೆಲ್ಲರೂ ಸತ್ಯಲೋಕಕ್ಕೆ ಹೋಗಿ ಬ್ರಹ್ಮದೇವನಿಗೆ ಈ ವೃತ್ತಾಂತವನ್ನು ತಿಳಿಸಿದರು.

೧೫. ಬ್ರಹ್ಮನಾದರೋ ಆ ನಿನ್ನ ಪಾಪಕ್ಕೆ ಪ್ರಾಯಶ್ಚಿತ್ತವೇನೆಂದು ಬಹಳ ಯೋಚನೆಮಾಡಿದರೂ ಅದನ್ನು ತಿಳಿಯುವುದಕ್ಕೆ ಆತನಿಗೆ ಸಾಧ್ಯವಾಗಲೇ ಇಲ್ಲ.

೧೬. ತರುವಾಯ ಆತನು ದೇವತೆಗಳೆಲ್ಲರೊಡನೆ ಶ್ರೀಮನ್ನಾರಾಯಣನ ಬಳಿಗೈದಿ ಆತನನ್ನು ನಮಸ್ಕರಿಸಿ, ಸ್ತುತಿಸಿ, ನಡೆದ ವೃತ್ತಾಂತವೆಲ್ಲವನ್ನೂ ಆತನಿಗೆ ಅರಿಕೆಮಾಡಿದನು.

೧೭. ಲೋಕನಾಯಕನಾದ ಶ್ರೀಮನ್ನಾರಾಯಣಮೂರ್ತಿಯು, ದಯಾನ್ವಿತನಾಗಿ, ಅನೇಕ ಪ್ರಕಾರವಾಗಿ ಯೋಚಿಸಿ ಆ ನಿನ್ನ ಬ್ರಹ್ಮಹತ್ಯಾದೋಷವನ್ನು ಮೂರು ಭಾಗವಾಗಿ ವಿಭಾಗಿಸಿ ಸ್ತ್ರೀಯರು, ಭೂಮಿ, ವೃಕ್ಷಗಳು ಎಂಬ ಈ ಮೂರರಲ್ಲಿಯೂ ಅರ್ಪಣಮಾಡಿದನು. ಹೀಗೆ ಅವರೆಲ್ಲರಿಗೂ ಬ್ರಹ್ಮಹತ್ಯೆಯನ್ನು ಹಂಚಿಕೊಟ್ಟು ಒಬ್ಬೊಬ್ಬರಿಗೂ ಒಂದೊಂದು ವರವನ್ನೂ ದಯಪಾಲಿಸಿದನು.

೧೮. ಸ್ತ್ರೀಯರಿಗೆ ಸಾರ್ವಕಾಲಿಕವಾದ ಭರ್ತೃ ಸಂಗಮಯೋಗವನ್ನೂ, ಋತುಕಾಲಗಳಲ್ಲಿ ಪುತ್ರಪ್ರಾಪ್ತಿಯನ್ನೂ ಅನುಗ್ರಹಿಸಿದನು. ಕತ್ತರಿಸಿದರೆ ಮತ್ತೆ ಮೊಳೆಯುವ ಯೋಗವು ವೃಕ್ಷಗಳಿಗೆ ವರವಾಗಿ

ತೇಷ್ವಘಂ ಪ್ರಬಭೂವಾಶು ರಜೋನಿರ್ಯಾಸಮೂಷರಂ ॥ ೧೯ ॥
ನಿರ್ಗತೋ ಗಹ್ವರಾತ್ತಸ್ಮಾತ್ತದೇಂದ್ರೋ ದೇವನಾಯಕಃ ।
ರಾಜ್ಯಂ ಶ್ರಿಯಂ ಚ ಸಂಪ್ರಾಪ್ತಃ ಪ್ರಸಾದಾತ್ಪರಮೇಷ್ಠಿನಃ ॥೨೦॥
ತೇನೈವ ಸಾಂತ್ವಿತೋ ಧಾತಾ ಜಗಾದ ಚ ಜನಾರ್ದನಂ ।
ಮಮ ಶಾಪೋ ವೃಥಾ ನ ಸ್ಯಾದಸ್ತು ಕಾಲಾಂತರೇ ಹರೇ ॥ ೨೧ ॥
ಭಗವಾಂಸ್ತದ್ವಚಃ ಶ್ರುತ್ವಾ ಧಾತುಸ್ತ್ವಮಿತತೇಜಸಃ । [೨೨ ॥
ಪ್ರಹೃಷ್ಟೋ ಭಾವಿಕಾರ್ಯಜ್ಞಸ್ತೂಷ್ಣೀಮೇವ ತದಾ ಯಯೌ ॥
ಏತಾವಂತಮಿಮಂ ಕಾಲಂ ತ್ರಿಲೋಕೀಂ ಪಾಲಯನ್ ಭವಾನ್ ।
ಐಶ್ವರ್ಯಮದಮತ್ತತ್ವಾತ್ಕೈಲಾಸಾದ್ರಿಮಪೀಡಯತ್ ॥ ೨೩ ॥

---

ದೊರೆಯಿತು. ಅಗೆದ ಪ್ರದೇಶವೆಲ್ಲವೂ ಮತ್ತೆ ತುಂಬಿಕೊಳ್ಳುವಿಕೆಯು ಭೂಮಿಯ ಪಾಲಿಗೆ ವರವಾಗಿ ಬಂದಿತು.

೧೯. ಈ ಮೂರರಲ್ಲಿಯೂ ಆ ನಿನ್ನ ಬ್ರಹ್ಮಹತ್ಯಾದೋಷವು, ರಜಸ್ಸು, ಅಂಟು, ಚೌಳು ಎಂಬ ಮೂರು ಬಗೆಯಿಂದ ತಲೆದೋರಿತು.

೨೦. ಹೀಗೆ ಬ್ರಹ್ಮಹತ್ಯಾದೋಷವು ನಿವಾರಣೆಯಾದ ಮೇಲೆ ದೇವನಾಯಕನಾದ ನೀನು ಮೇರುಪರ್ವತದ ಗುಹೆಯಿಂದ ಹೊರಕ್ಕೆ ಬಂದು, ಬ್ರಹ್ಮನ ಪ್ರಸಾದದಿಂದ ಮತ್ತೆ ದೇವರಾಜ್ಯವನ್ನೂ, ದೇವೈಶ್ವರ್ಯವನ್ನೂ ಪಡೆದೆ.

೨೧. ಇದಾದ ಬಳಿಕ, ನಿನ್ನಿಂದಲೇ ಸಮಾಧಾನಗೊಳಿಸಲಾದ ಕಶ್ಯಪಪ್ರಜಾಪತಿಯೂ ಸಹ ಜನಾರ್ದನನನ್ನು ಕುರಿತು, "ದೇವ! ಈ ಮಹೇಂದ್ರನಿಗೆ ನಾನು ಕೊಟ್ಟಿರುವ ಶಾಪವು ವ್ಯರ್ಥವಾಗದೆ ಕಾಲಾಂತರದಲ್ಲಿ ಫಲಿಸಲಿ" ಎಂದು ಪ್ರಾರ್ಥಿಸಿದನು.

೨೨. ನಾರಾಯಣನೂ ಸಹ, ಅಪಾರತೇಜಸ್ವಿಯಾದ ಧಾತೃವಿನ ಈ ಮಾತನ್ನು ಕೇಳಿ ಸಂತುಷ್ಟನಾಗಿ ಮುಂದೆ ನಡೆಯುವ ಕಾರ್ಯವನ್ನು ತಿಳಿದವನಾದುದರಿಂದ ಯಾವ ಮಾತನ್ನೂ ಆಡದೆ ಸುಮ್ಮನೆ ಹೊರಟು ಹೋದನು.

೨೩. ಮಹೇಂದ್ರ! ನೀನೂ ಈವರೆಗೆ ಮೂರು ಲೋಕಗಳನ್ನೂ ಸುಖವಾಗಿ ಪರಿಪಾಲಿಸುತ್ತಿದ್ದು, ಈಗ ಆ ತ್ರಿಲೋಕೈಶ್ವರ್ಯದಿಂದ ಗರ್ವಿಸಿ ಕೈಲಾಸಾದ್ರಿಯನ್ನೂ ಪೀಡಿಸಿದೆ.

**ಸರ್ವಜ್ಞೇನ ಶಿವೇನಾಥ ಪ್ರೇರಿತೋ ಭಗವಾನ್ಮುನಿಃ ।**
**ದುರ್ವಾಸಾಸ್ತ್ವನ್ಮದಭ್ರಂಶಂ ಕರ್ತುಕಾಮಃ ಶಶಾಪ ಹ ॥ ೨೪ ॥**
**ಏಕಮೇವ ಫಲಂ ಜಾತಮುಭಯೋಃ ಶಾಪಯೋರಪಿ ।**
**ಅಧುನಾ ಪಶ್ಯ ನಿಃಶ್ರೀಕಂ ತ್ರೈಲೋಕ್ಯಂ ಸಮಜಾಯತ ॥ ೨೫ ॥**
**ನ ಯಜ್ಞಾಃ ಸಂಪ್ರವರ್ತಂತೇ ನ ದಾನಾನಿ ಚ ವಾಸವ ।**
**ನ ಯಮಾ ನಾಪಿ ನಿಯಮಾ ನ ತಪಾಂಸಿ ಚ ಕುತ್ರಚಿತ್ ॥ ೨೬ ॥**
**ವಿಪ್ರಾಃ ಸರ್ವೇಽಪಿ ನಿಃಶ್ರೀಕಾ ಲೋಭೋಪಹತಚೇತಸಃ । [೨೭ ॥**
**ನಿಃಸತ್ತ್ವಾ ಧೈರ್ಯಹೀನಾಶ್ಚ ನಾಸ್ತಿಕಾಃ ಪ್ರಾಯಶೋಽಭವನ್ ॥**
**ನಿರೌಷಧಿರಸಾ ಭೂಮಿರ್ನಿರ್ವೀರ್ಯಾ ಜಾಯತೇತರಾಂ ।**
**ಭಾಸ್ಕರೋ ಧೂಸರಾಕಾರಶ್ಚಂದ್ರಮಾಃ ಕಾಂತಿವರ್ಜಿತಃ ॥ ೨೮ ॥**

---

೨೪. ನಿನ್ನ ದುರಹಂಕಾರವನ್ನು ಕಂಡು ಸರ್ವಜ್ಞನಾದ ಪರಶಿವನು ದುರ್ವಾಸಮುನಿಯನ್ನು ನಿನ್ನ ಬಳಿಗೆ ಕಳುಹಿಸಿದನು. ಆ ಮುನಿಯು ನಿನ್ನ ಮದವನ್ನು ನಾಶಮಾಡಲೋಸುಗ ರಾಜ್ಯಭ್ರಷ್ಟನಾಗೆಂದು ನಿನ್ನನ್ನು ಶಪಿಸಿದನು.

೨೫. ಪೂರ್ವದ ಧಾತೃವಿನ ಶಾಪ, ಈಗಿನ ದುರ್ವಾಸಮುನಿಯ ಶಾಪ ಈ ಎರಡೂ ಶಾಪಗಳಿಗೆ ಒಂದೇ ಫಲವೇ ಉಂಟಾಯಿತು. ನೋಡಿದೆಯಾ! ನಿನ್ನ ಗರ್ವದ ದೆಸೆಯಿಂದ ಮೂರು ಲೋಕಗಳೂ ತೇಜೋವಿಹೀನಗಳಾಗಿ ಹೋಗಿವೆ!

೨೬. ಮಹೇಂದ್ರಾ! ಎಲ್ಲಿಯೂ ಯಜ್ಞಗಳಾಗಲಿ, ದಾನಗಳಾಗಲಿ, ಯಮನಿಯಮಗಳಾಗಲಿ, ತಪಸ್ಸಾಗಲಿ ನಡೆಯುತ್ತಿಲ್ಲ.

೨೭. ಬ್ರಾಹ್ಮಣರೆಲ್ಲರೂ ಲೋಭಪರವಶರಾಗಿ ತಮ್ಮ ತೇಜಸ್ಸನ್ನು ಕಳೆದುಕೊಂಡು, ಸತ್ವಹೀನರೂ, ಧೈರ್ಯಹೀನರೂ ಆಗಿರುವುದು ಮಾತ್ರವಲ್ಲದೆ ಪ್ರಾಯಿಕವಾಗಿ ನಾಸ್ತಿಕರೂ ಆಗಿಹೋಗಿದ್ದಾರೆ.

೨೮. ಭೂಮಿಯು ಬಹುಮಟ್ಟಿಗೆ ಸತ್ವಹೀನೆಯಾಗಿ ಓಷಧಿರಸಗಳನ್ನೇ ಬೆಳೆಯಲಾರದುದಾಗಿದೆ. ಸೂರ್ಯನು ಧೂಸರಾಕಾರ(ಬೂದಿಯ ಬಣ್ಣವುಳ್ಳವ) ನಾಗಿಯೂ, ಚಂದ್ರನು ತೇಜೋವಿಹೀನನಾಗಿಯೂ ಕಾಣುತ್ತಿರುವರು.

**ನಿಸ್ತೇಜಸ್ಕೋ ಹವಿರ್ಭೋಕ್ತಾ ಮರುದ್ಧೂಲಿಮಯಾಕೃತಿಃ ।**
**ನ ಪ್ರಸನ್ನಾ ದಿಶಾಂ ಭಾಗಾ ನಭೋ ನೈವ ಚ ನಿರ್ಮಲಂ ॥ ೨೯ ॥**
**ದುರ್ಬಲಾ ದೇವತಾಃ ಸರ್ವಾ ವಿಭಾಂತ್ಯನ್ಯಾದೃಶಾ ಇವ ।**
**ವಿನಷ್ಟಪ್ರಾಯಮೇವಾಸೀತ್ತ್ರೈಲೋಕ್ಯಂ ಸಚರಾಚರಂ ॥ ೩೦ ॥**
**ಹಯಗ್ರೀವಃ —**
**ಇತ್ಥಂ ಕಥಯತೋರೇವ ಬೃಹಸ್ಪತಿಮಹೇಂದ್ರಯೋಃ ।**
**ಮಲಕಾದ್ಯಾ ಮಹಾದೈತ್ಯಾ ದೇವಲೋಕಂ ಬಬಾಧಿರೇ ॥ ೩೧ ॥**
**ನಂದನೋದ್ಯಾನಮಖಿಲಂ ಚಿಚ್ಛಿದುರ್ಬಲಗರ್ವಿತಾಃ ।**
**ಉದ್ಯಾನಪಾಲಕಾನ್ ಸರ್ವಾನಾಯುಧೈಃ ಸಮತಾಡಯನ್ ॥ ೩೨ ॥**
**ಪ್ರಾಕಾರಮಭಿಪಾತ್ಯೈವ ಪ್ರವಿಶ್ಯ ನಗರಾಂತರಂ । [೩೩ ॥**
**ಮಂದಿರಸ್ಥಾನ್ ಸುರಾನ್ ಸರ್ವಾನತ್ಯರ್ಥಂ ಪರ್ಯಪೀಡಯನ್ ॥**

---

೨೯. ಹವಿರ್ಭುಜನಾದ ಯಜ್ಞೇಶ್ವರನು ತೇಜೋವಿಹೀನನಾಗಿರುವನು. ವಾಯುದೇವನು ಧೂಳಿ ಮುಚ್ಚಿದ ಮೈಯುಳ್ಳವನಾಗಿರುವನು. ದಿಗ್ಭಾಗಗಳೆಲ್ಲವೂ ಪ್ರಸನ್ನತೆಯನ್ನು ಕಳೆದುಕೊಂಡಿವೆ. ಆಕಾಶವು ನಿರ್ಮಲವಾಗಿಯೇ ಇಲ್ಲ.

೩೦. ದೇವತೆಗಳೆಲ್ಲರೂ ದುರ್ಬಲರಾಗಿ, ದೇವತೆಗಳಂತಿಲ್ಲದೆ ಹೇಗೆ ಹೇಗೆಯೋ ಕಾಣುತ್ತಿದ್ದಾರೆ. ಅಂತು ಸ್ಥಾವರಜಂಗಮಾತ್ಮಕವಾದ ಈ ಲೋಕತ್ರಯವೆಲ್ಲವೂ ನಾಶವಾದಂತೆಯೇ ತೋರುತ್ತಿದೆ.

೩೧. ಹಯಗ್ರೀವಮುನಿಯು ಹೇಳುತ್ತಾನೆ:—ಈ ಪ್ರಕಾರ ಬೃಹಸ್ಪತಿಯೂ, ಮಹೇಂದ್ರನೂ ಮಾತನಾಡುತ್ತಿರುವಂತೆಯೇ, ಮಲಕನೇ ಮೊದಲಾದ ಮಹಾದೈತ್ಯರೆಲ್ಲರೂ ದೇವಲೋಕವನ್ನು ಮುತ್ತಿದರು.

೩೨. ಬಲಗರ್ವಿತರಾದ ಅವರು ನಂದನೋದ್ಯಾನವೆಲ್ಲವನ್ನೂ ಕತ್ತರಿಸಿ ಕೆಡವಿ, ಆ ವನದ ಕಾವಲುಗಾರರೆಲ್ಲರನ್ನೂ ಆಯುಧಗಳಿಂದ ಚೆನ್ನಾಗಿ ಹೊಡೆದರು.

೩೩. ಇಷ್ಟೆಯಲ್ಲದೆ ಆ ದೈತ್ಯರು ನಗರದ ಪ್ರಾಕಾರವನ್ನೇ ಕಿತ್ತೊಗೆದು, ಒಳನುಗ್ಗಿ ಬಂದು, ಮನೆಗಳಲ್ಲಿ ಸೇರಿಕೊಂಡಿದ್ದ ದೇವತೆಗಳೆಲ್ಲರನ್ನೂ ಬಹಳವಾಗಿ ಪೀಡಿಸತೊಡಗಿದರು.

ಆಜಹ್ರುರಪ್ಸರೋ ರತ್ನಾನ್ಯಶೇಷಾಣಿ ಮದೋದ್ಧತಾಃ ।
ತತೋ ದೇವಾಃ ಸಮಸ್ತಾಶ್ಚ ಚಕ್ರಂದುರ್ಭೃಶಬಾಧಿತಾಃ ॥ ೩೪ ॥
ತಾದೃಶಂ ಘೋಷಮಾಕರ್ಣ್ಯ ವಾಸವಃ ಪ್ರೋಜ್ಝಿತಾಸನಃ ।
ಸರ್ವೈರನುಗತೋ ದೇವೈಃ ಪಲಾಯನಪರೋಽಭವತ್ ॥ ೩೫ ॥
ಬ್ರಾಹ್ಮಂ ಧಾಮ ಸಮಭ್ಯೇತ್ಯ ವಿಷಣ್ಣವದನೋ ವೃಷಾ ।
ಯಥಾವತ್ಕಥಯಾಮಾಸ ನಿಖಿಲಂ ದೈತ್ಯಚೇಷ್ಟಿತಂ ॥ ೩೬ ॥
ವಿಧಾತಾಪಿ ತದಾಕರ್ಣ್ಯ ಸರ್ವದೇವಸಮನ್ವಿತಂ ।
ಹತಶ್ರೀಕಂ ಹರಿಹಯಮಾಲೋಕ್ಯೈತದುವಾಚ ಹ ॥ ೩೭ ॥
ಇಂದ್ರ ತ್ವಮಖಿಲೈರ್ದೇವೈರ್ಮುಕುಂದಂ ಶರಣಂ ವ್ರಜ ।
ದೈತ್ಯಾರಾತಿರ್ಜಗತ್ಕರ್ತಾ ಸ ತೇ ಶ್ರೇಯೋ ವಿಧಾಸ್ಯತಿ ॥ ೩೮ ॥
ಇತ್ಯುಕ್ತ್ವಾ ತೇನ ಸಹಿತಃ ಸ್ವಯಂ ಬ್ರಹ್ಮಾ ಪಿತಾಮಹಃ ।
ಸಮಸ್ತದೇವಸಹಿತಃ ಕ್ಷೀರೋದಧಿಮುಪಾಯಯೌ ॥ ೩೯ ॥

---

೩೪. ಆ ದುಷ್ಟದಾನವರು ಮದೋದ್ಧತರಾಗಿ ಅಪ್ಸರಸ್ತ್ರೀಯರನ್ನೂ ಅಸಂಖ್ಯಾತವಾದ ರತ್ನಗಳನ್ನೂ ಅಪಹರಿಸಿಕೊಂಡುಹೋದರು. ಆಗ ದೇವತೆಗಳು ದುರ್ಭರವಾದ ಬಾಧೆಗೊಳಗಾಗಿ ಗಟ್ಟಿಯಾಗಿ ಕೂಗಿಕೊಂಡರು.

೩೫. ಅವರ ಈ ಕೂಗನ್ನು ಕೇಳಿದೊಡನೆಯೇ ಇಂದ್ರನು ಸಿಂಹಾಸನವನ್ನು ತೊರೆದು ದೇವತೆಗಳೊಡಗೂಡಿ ಓಡಿಹೋದನು.

೩೬. ಅವನು ಬ್ರಹ್ಮಲೋಕಕ್ಕೆ ಬಂದು ಚತುರಾನನನನ್ನು ಕಂಡು, ವಿಷಣ್ಣವದನನಾಗಿ ದಾನವರು ಮಾಡಿದ ಹಾವಳಿಯನ್ನು ಇದ್ದುದನ್ನು ಇದ್ದಂತೆಯೇ ಆತನಿಗೆ ಅರಿಕೆಮಾಡಿದನು.

೩೭. ಬ್ರಹ್ಮನಾದರೋ ಅದನ್ನು ಕೇಳಿ, ರಾಜ್ಯಭ್ರಷ್ಟನಾಗಿ ದೇವತೆಗಳೆಲ್ಲರೊಡನೆ ತನ್ನ ಬಳಿಗೆ ಬಂದಿರುವ ನಿಸ್ತೇಜಸ್ಕನಾದ ಆ ಮಹೇಂದ್ರನನ್ನು ಕುರಿತು ಈ ರೀತಿ ಹೇಳಿದನು :

೩೮. "ಎಲೈ ಇಂದ್ರನೇ! ನೀನು ಈಗಲೇ ಈ ದೇವತೆಗಳೆಲ್ಲರನ್ನೂ ಹಿಂದಿಟ್ಟುಕೊಂಡು ಶ್ರೀಮನ್ನಾರಾಯಣನನ್ನು ಶರಣುಹೋಗು. ಆತನು ಜಗತ್ಕರ್ತನು; ದೈತ್ಯವಿನಾಶಕನು. ಆತನೇ ನಿನಗೆ ಶ್ರೇಯಸ್ಸನ್ನುಂಟುಮಾಡುವನು."

೩೯. ಲೋಕಪಿತಾಮಹನಾದ ಬ್ರಹ್ಮದೇವನು ಹೀಗೆ ಹೇಳಿ ತಾನೇ ಆ ದೇವತೆಗಳೊಡನೆ ಕ್ಷೀರಸಮುದ್ರದ ಬಳಿಗೆ ಬಂದನು.

ಅಥ ಬ್ರಹ್ಮಾದಯೋ ದೇವಾ ಭಗವಂತಂ ಜನಾರ್ದನಂ ।
ತುಷ್ಟುವುರ್ವಾಗ್ಭಿರಿಷ್ಟಾಭಿಃ ಸರ್ವಲೋಕಮಹೇಶ್ವರಂ ॥ ೪೦ ॥
ಅಥ ಪ್ರಸನ್ನೋ ಭಗವಾನ್ವಾಸುದೇವಃ ಸನಾತನಃ ।
ಜಗಾದ ಸಕಲಾನ್ ದೇವಾನ್ ಜಗದ್ರಕ್ಷಣಲಂಪಟಃ ॥ ೪೧ ॥
ಶ್ರೀಭಗವಾನ್ —
ಭವತಾಂ ಸಂವಿಧಾಸ್ಯಾಮಿ ತೇಜಸ್ಯೈವೋಪಬೃಂಹಣಂ ।
ಯದುಚ್ಯತೇ ಮಯೇದಾನೀಂ ಯುಷ್ಮಾಭಿಸ್ತದ್ವಿಧೀಯತಾಂ ॥೪೨॥
ಓಷಧಿಪ್ರವರಾಃ ಸರ್ವಾಃ ಕ್ಷಿಪತ ಕ್ಷೀರಸಾಗರೇ ।
ಅಸುರೈಃ ಸಹ ಸಂಧಾಯ ತಥಾ ಮೇ ವಚಸೇರಿತಾಃ ॥ ೪೩ ॥
ಮಂಥಾನಂ ಮಂದರಂ ಕೃತ್ವಾ ಯೋಕ್ತ್ರಂ ಕೃತ್ವಾ ಚ ವಾಸುಕಿಂ ।
ಮಯಿ ಸ್ಥಿತೇ ಸಹಾಯೇ ತು ಮಥ್ಯತಾಮಮೃತಂ ಸುರಾಃ ॥ ೪೪ ॥
ಸಮಸ್ತದಾನವಾಶ್ಚಾಪಿ ವಕ್ತವ್ಯಾಃ ಸಾಂತ್ವಪೂರ್ವಕಂ ।
ಸಾಮಾನ್ಯಮೇವ ಯುಷ್ಮಾಕಮಸ್ಮಾಕಂ ಚ ಫಲಂ ತ್ವಿತಿ ॥ ೪೫ ॥

---

೪೦. ಆಗ ಬ್ರಹ್ಮಾದಿದೇವತೆಗಳು, ಸರ್ವಲೋಕಮಹೇಶ್ವರನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಶ್ರೀಮನ್ನಾರಾಯಣನನ್ನು ವೇದ ವಾಕ್ಯಗಳಿಂದ ಸ್ತುತಿಸಿ ಸಂತೋಷಗೊಳಿಸಿದರು.

೪೧. ಆಗ ಪುರಾಣಪುರುಷನಾದ ಆ ವಾಸುದೇವನು ಜಗದ್ರಕ್ಷಣ ಕಾರ್ಯದಲ್ಲಿ ಆಸಕ್ತನಾದುದರಿಂದ ಪ್ರಸನ್ನನಾಗಿ ಆ ದೇವತೆಗಳೆಲ್ಲರನ್ನೂ ಕುರಿತು ಹೀಗೆ ಹೇಳಿದನು.

೪೨. ಭಗವಂತನು ಹೇಳುತ್ತಾನೆ:—"ಎಲೈ ದೇವತೆಗಳಿರಾ! ಕಳೆದುಹೋಗಿರುವ ನಿಮ್ಮ ತೇಜಸ್ಸೆಲ್ಲವೂ ಮರಳಿ ಅಭಿವೃದ್ಧಿಯಾಗುವಂತೆ ಮಾಡುವೆನು. ಈಗ ನಾನು ಹೇಳುವಂತೆ ನೀವು ಆಚರಿಸತಕ್ಕುದು.

೪೩. ನನ್ನ ಅಪ್ಪಣೆಯಂತೆ ಈಗಲೇ ನೀವು ಆ ದಾನವರೊಡನೆ ಸಂಧಿಮಾಡಿಕೊಂಡು ಅವರೊಡಗೂಡಿ ಶ್ರೇಷ್ಠವಾದ ಓಷಧಿಗಳೆಲ್ಲವನ್ನೂ ಕ್ಷೀರಸಾಗರಕ್ಕೆಸೆಯಿರಿ.

೪೪. ಮಂದರಪರ್ವತವನ್ನು ಕಡೆಗೋಲನ್ನಾಗಿಯೂ, ವಾಸುಕಿ ಯನ್ನು ಹಗ್ಗವನ್ನಾಗಿಯೂ ಮಾಡಿ ನನ್ನ ಸಹಾಯದಿಂದ ನೀವೆಲ್ಲರೂ ಆ ಕ್ಷೀರೋದಧಿಯನ್ನು ಮಥನಮಾಡಿರಿ.

೪೫. ನೀವು, ದಾನವರೆಲ್ಲರನ್ನೂ ಸಮಾಧಾನಗೊಳಿಸಿ, "ಈ ಕ್ಷೀರ

**ಮಥ್ಯಮಾನೇ ತು ದುಗ್ಧಾಬ್ಧೌ ಸಮ್ಯಗುತ್ಪದ್ಯತೇ ಸುಧಾ ।**
**ತತ್ಪಾನಾದ್ಬಲಿನೋ ಯೂಯಮಮರ್ತ್ಯಾಶ್ಚ ಭವಿಷ್ಯಥ ॥ ೪೬ ॥**
**ಯಥಾ ದೈತ್ಯಾಸ್ತು ಪೀಯೂಷಂ ನೈತತ್ಪ್ರಾಪ್ಸ್ಯಂತಿ ಕಿಂಚನ ।**
**ಕೇವಲಂ ಕ್ಲೇಶವಂತಶ್ಚ ಕರಿಷ್ಯಾಮಿ ತಥಾಪ್ಯಹಂ ॥ ೪೭ ॥**
**ಇತಿ ಶ್ರೀವಾಸುದೇವೇನ ಕಥಿತಾ ನಿಖಿಲಾಃ ಸುರಾಃ ।**
**ಸಂಧಾನಂ ಸಕಲೈರ್ದೈತ್ಯೈಃ ಕೃತವಂತಸ್ತಪೋಧನ ॥ ೪೮ ॥**
**ನಾನಾವಿಧೌಷಧಿಗಣಂ ಸಮಾನೀಯ ಸುರಾಸುರಾಃ ।**
**ಕ್ಷೀರಾಬ್ಧಿಪಯಸಿ ಕ್ಷಿಪ್ತ್ವಾ ಚಂದ್ರಿಕಾಧಿಕನಿರ್ಮಲೇ ॥ ೪೯ ॥**
**ಮಂಥಾನಂ ಮಂದರಂ ಕೃತ್ವಾ ಕೃತ್ವಾ ಯೋಕ್ತ್ರಂ ತು ವಾಸುಕಿಂ ।**
**ಪ್ರಾರೇಭಿರೇ ಪ್ರಯತ್ನೇನ ಮಥಿತುಂ ಪರಮಾಮೃತಂ ॥ ೫೦ ॥**
**ವಾಸುಕೇಃ ಪುಚ್ಛಭಾಗೇ ತು ಸಹಿತಾಃ ಸರ್ವದೇವತಾಃ ।**
**ಪೂರ್ವಭಾಗೇ ತು ದೈತೇಯಾ ನಿಯುಕ್ತಾಸ್ತತ್ರ ಶೌರಿಣಾ ॥ ೫೧ ॥**

---

ಸಮುದ್ರಮಥನದಲ್ಲಿ ನಮಗೂ ನಿಮಗೂ ಸರಿಸಮನಾದ ಫಲವುಂಟೆ''ಂದು ಹೇಳಿರಿ.

೪೬. ಕ್ಷೀರಸಮುದ್ರವನ್ನು ಚೆನ್ನಾಗಿ ಕಡೆದರೆ ಅಮೃತವು ಉದಿಸುತ್ತದೆ. ಅದನ್ನು ಪಾನಮಾಡುವುದರಿಂದ ನೀವೆಲ್ಲರೂ ಬಲಾಢ್ಯರೂ, ಮರಣರಹಿತರೂ ಆಗುವಿರಿ.

೪೭. ಆ ಅಮೃತವು ದೈತ್ಯರಿಗೆ ದೊರಕದಂತೆ ಮಾಡಿ, ಅವರು ವಿಧ ವಿಧವಾದ ಪೀಡೆಗಳಿಗೆ ಸಿಕ್ಕಿ ತೊಳಲುವಂತೆ ನಾನು ನೋಡಿಕೊಳ್ಳುವೆನು.''

೪೮. ಶ್ರೀಮನ್ನಾರಾಯಣನು ಹೀಗೆ ಅಪ್ಪಣೆಕೊಡಿಸಲು ದೇವತೆಗಳೆಲ್ಲರೂ ಆ ಕೂಡಲೇ ದೈತ್ಯರೊಡನೆ ಸಂಧಿಮಾಡಿಕೊಂಡರು.

೪೯. ಬಳಿಕ ದೇವಾಸುರರೆಲ್ಲರೂ ಒಟ್ಟುಗೂಡಿ ನಾನಾ ವಿಧಗಳಾದ ಓಷಧಿಸಮೂಹವೆಲ್ಲವನ್ನೂ ಬೆಳುದಿಂಗಳಿಗಿಂತಲೂ ಸ್ವಚ್ಛವಾದ ಆ ಕ್ಷೀರಸಮುದ್ರದ ಜಲದಲ್ಲಿ ಹಾಕಿದರು.

೫೦. ಅವರು ಮಂದರಪರ್ವತವನ್ನು ಕಡೆಗೋಲನ್ನಾಗಿಯೂ, ವಾಸುಕಿಯನ್ನು ಹಗ್ಗವನ್ನಾಗಿಯೂ ಮಾಡಿಕೊಂಡು ಪ್ರಯತ್ನಪೂರ್ವಕವಾಗಿ ಅಮೃತವನ್ನು ಪಡೆಯಲು ಸಮುದ್ರವನ್ನು ಕಡೆಯಲುಪಕ್ರಮಿಸಿದರು.

೫೧. ದೇವತೆಗಳೆಲ್ಲರೂ ಆ ವಾಸುಕಿಯ ಬಾಲದ ಕಡೆಯೂ,

ಬಲವಂತೋಽಪಿ ದೈತ್ಯಾಸ್ತನ್ಮುಖೋತ್ಥವಿಷಪಾವಕೈಃ ।
ನಿರ್ದಗ್ಧವಪುಷಃ ಸರ್ವೇ ನಿಸ್ತೇಜಸ್ಕಾಸ್ತದಾಭವನ್ ॥ ೫೨ ॥
ಪುಚ್ಛಭಾಗೇ ತು ಕರ್ಷಂತೋ ಮುಹುರಾಪ್ಯಾಯಿತಾಃ ಸುರಾಃ ।
ಅನುಕೂಲೇನ ವಾತೇನ ಕೃಷ್ಣೇನ ಪ್ರೇರಿತೇನ ತೇ ॥ ೫೩ ॥
ಆದಿಕೂರ್ಮಾಕೃತಿಃ ಶ್ರೀಮಾನ್ ಮಧ್ಯೇ ಕ್ಷೀರಪಯೋನಿಧೇಃ ।
ಭ್ರಮತೋ ಮಂದರಾದ್ರೇಸ್ತು ತಸ್ಯಾಧಿಷ್ಠಾನತಾಮಗಾತ್ ॥ ೫೪ ॥
ಮಧ್ಯೇ ಚ ಸರ್ವದೇವಾನಾಂ ರೂಪೇಣಾನ್ಯೇನ ಮಾಧವಃ ।
ಚಕರ್ಷ ವಾಸುಕಿಂ ವೇಗಾದ್ದೈತ್ಯಮಧ್ಯೇ ಪರೇಣ ಚ ॥ ೫೫ ॥
ಬ್ರಹ್ಮರೂಪೇಣ ತಂ ಶೈಲಮುಪರ್ಯಾಕ್ರಾಂತವಾನ್ ಹರಿಃ ।
ಅಪರೇಣ ಚ ದೇವರ್ಷೇ ಮಹತಾ ತೇಜಸಾ ಮುಹುಃ ॥ ೫೬ ॥
ಉಪಬೃಂಹಿತವಾನ್ ದೇವಾನ್ಯೇನ ತೇ ಬಲಶಾಲಿನಃ ।
ಉಪಬೃಂಹಿತವಾನ್ನಾಗಂ ಸರ್ವಶಕ್ತಿರ್ಜನಾರ್ದನಃ ॥ ೫೭ ॥

---

ದೈತ್ಯರೆಲ್ಲರೂ ಅದರ ಶಿರಸ್ಸಿನ ಕಡೆಯೂ ಇದ್ದು ಮಥನಮಾಡುವಂತೆ ಶ್ರೀಮನ್ನಾರಾಯಣನೇ ಅಪ್ಪಣೆಮಾಡಿದನು.

೫೨. ದೈತ್ಯರು ಮಹಾಬಲಾಢ್ಯರಾದರೂ ಮಥನಕಾಲದಲ್ಲಿ ವಾಸುಕಿಯ ಮುಖದಿಂದ ಹೊರಹೊರಟ ವಿಷಾಗ್ನಿಯಿಂದ ಸುಟ್ಟ ಮೈಯುಳ್ಳವರಾಗಿ ಕಳೆಗುಂದಿದರು.

೫೩. ಬಾಲದ ಕಡೆಯಿದ್ದು ಕಡೆಯುತ್ತಿದ್ದ ದೇವತೆಗಳಿಗೆ ವಿಷ್ಣು ಪ್ರೇರಿತವಾಗಿ, ಅನುಕೂಲವಾಗಿ ಬೀಸುವ ತಂಗಾಳಿಯಿಂದ ಆಪ್ಯಾಯನ ವಾಗುತ್ತಿದ್ದಿತು.

೫೪. ಆ ಸಮಯದಲ್ಲಿ ಶ್ರೀಮನ್ನಾರಾಯಣನು ಆದಿಕೂರ್ಮದ ಆಕೃತಿಯುಳ್ಳವನಾಗಿ ಕ್ಷೀರಸಾಗರದಲ್ಲಿ ಗಿರಗಿರನೆ ತಿರುಗುತ್ತಿರುವ ಮಂದರಪರ್ವತಕ್ಕೆ ಆಸರೆಯಾಗಿ ನಿಂತನು.

೫೫. ಅದೇ ನಾರಾಯಣನೇ ಮತ್ತೊಂದು ರೂಪದಿಂದ ದೇವತೆಗಳ ನಡುವೆಯೂ, ಇನ್ನೊಂದು ರೂಪದಿಂದ ದೈತ್ಯರ ನಡುವೆಯೂ ಸೇರಿ, ವಾಸುಕಿಯನ್ನೆಳೆಯುತ್ತಿದ್ದನು.

೫೬-೫೭. ಇಷ್ಟೆಯಲ್ಲದೆ ಬ್ರಹ್ಮರೂಪದಿಂದ ಆತನು ಮಂದರಶೈಲದ ಮೇಲೇರಿ ಕುಳಿತನು. ಎಲೈ ದೇವರ್ಷಿಯೇ! ಆ ಭಗವಂತನು ಮತ್ತೊಂದು ರೂಪವನ್ನು ತಾಳಿ ಅಮಿತವಾದ ತನ್ನ ತೇಜಸ್ಸಿನಿಂದ

**ಮಥ್ಯಮಾನೇ ತತಸ್ತಸ್ಮಿನ್ ಕ್ಷೀರಾಬ್ಧೌ ದೇವದಾನವೈಃ ।**
**ಕಿಮೇತದಿತಿ ಸಿದ್ಧಾನಾಂ ದಿವಿ ಚಿಂತಯತಾಂ ತದಾ ॥ ೫೮ ॥**
**ಉತ್ಥಿತಾ ವಾರುಣೀ ದೇವೀ ಮದಾಲೋಲವಿಲೋಚನಾ ।**
**ಅಸುರಾಣಾಂ ಪುರಸ್ತಾತ್ಸಾ ವರ್ಧಮಾನಾ ವ್ಯತಿಷ್ಠತ ॥ ೫೯ ॥**
**ಜಗೃಹುರ್ನೈವ ತಾಂ ದೈತ್ಯಾ ಅಸುರಾಶ್ಚಾಭವಂಸ್ತತಃ ।**
**ಸುರಾ ನ ವಿದ್ಯತೇ ಯೇಷಾಂ ತ ಏವಾಸುರಶಬ್ದಿತಾಃ ॥ ೬೦ ॥**
**ಅಥ ಸಾ ಸರ್ವದೇವಾನಾಮಗ್ರತಃ ಸಮತಿಷ್ಠತ ।**
**ಜಗೃಹುಸ್ತಾಂ ಮುದಾ ದೇವಾಃ ಸೂಚಿತಾಃ ಪರಮೇಷ್ಠಿನಾ ॥ ೬೧ ॥**
**ಸುರಾಗ್ರಹಣತೋ ಹ್ಯೇತೇ ದೇವಾಃ ಪ್ರಾಪ್ತಾಃ ಸುರಾಭಿಧಾಂ ।**
**ಆವಿರ್ಬಭೂವ ಪುರತಃ ಸುರಭಿಃ ಸುರಪೂಜಿತಾ ॥**
**ಮುದಂ ಜಗ್ಮುಸ್ತದಾ ದೇವಾ ದೈತೇಯಾಶ್ಚ ತಪೋಧನ ॥ ೬೨ ॥**

---

ಅಡಿಗಡಿಗೂ ದೇವತೆಗಳನ್ನು ಹುರಿಗೊಳಿಸುತ್ತಿದನು. ಅದರಿಂದ ಅವರೆಲ್ಲರೂ ಮಹಾಬಲಶಾಲಿಗಳಾಗುತ್ತಿದ್ದರು. ಸರ್ವಶಕ್ತನಾದ ಆ ಜನಾರ್ದನನು ಇನ್ನೂ ಒಂದು ರೂಪವನ್ನು ತಾಳಿ ಆ ತೇಜಸ್ಸಿನಿಂದ ವಾಸುಕಿಯನ್ನು ಬಹು ಬಲಶಾಲಿಯಾಗುವಂತೆ ವೃದ್ಧಿಗೊಳಿಸುತ್ತಿದ್ದನು.

೫೮-೫೯. ಹೀಗೆ ದೇವದಾನವರು ಕ್ಷೀರಸಮುದ್ರವನ್ನು ಮಥನ ಮಾಡುತ್ತಿರಲು ಆಕಾಶದಲ್ಲಿ ಸಿದ್ಧಪುರುಷರೆಲ್ಲರೂ ಇದೇನಿದೇನೆಂದು ಯೋಚಿಸುತ್ತಿರುವಂತೆಯೇ, ಮತ್ತಿನಿಂದ ಆಲುತ್ತಿರುವ ಕಂಗಳುಳ್ಳ ವಾರುಣೀದೇವಿಯು ಆವಿರ್ಭವಿಸಿ ಆ ದೈತ್ಯರ ಮುಂದೆ ವೃದ್ಧಿಯಾಗಲು ಉಪಕ್ರಮಿಸಿದಳು.

೬೦. ಆಕೆಯನ್ನವರು ಪರಿಗ್ರಹಿಸಲಿಲ್ಲವಾಗಿ ಅವರಿಗೆ ಅಸುರರೆಂದು ಹೆಸರಾಯಿತು. ಸುರೆಯು ಯಾರಿಗಿಲ್ಲವೋ ಅವರು ಅಸುರರು.

೬೧. ತರುವಾಯ ಆ ದೇವಿಯು ದೇವತೆಗಳ ಮುಂದೆ ಬಂದು ನಿಂತಳು. ದೇವತೆಗಳಾದರೋ ಬ್ರಹ್ಮನ ಸೂಚನೆಯಂತೆ ಅವಳನ್ನು ಸಂತೋಷದಿಂದ ಪರಿಗ್ರಹಿಸಿದರು.

೬೨. ಸುರಾಗ್ರಹಣದಿಂದ ಅವರು ಸುರರೆಂದು ಹೆಸರಾದರು. ಇದಾದ ಮೇಲೆ ಸುರಪೂಜಿತೆಯಾದ ಸುರಭಿಯು (ಕಾಮಧೇನುವು) ಉದಿಸಿತು. ಅದನ್ನು ಕಂಡು ದೇವದಾನವರೆಲ್ಲರೂ ಪರಮಾನಂದ ಭರಿತರಾದರು.

**ಮಥ್ಯಮಾನೇ ಪುನಸ್ತಸ್ಮಿನ್ ಕ್ಷೀರಾಬ್ಧೌ ದೇವದಾನವೈಃ ।**
**ಅತ್ಯರ್ಥಸುಂದರಾಕಾರಾ ಧೀರಾಶ್ಚಾಪ್ಸರಸಾಂ ಗಣಾಃ ॥**
**ಆವಿರ್ಭೂತಾಶ್ಚ ದೇವರ್ಷೇ ಸರ್ವಲೋಕಮನೋಹರಾಃ ॥ ೬೩ ॥**
**ಮಥ್ಯಮಾನೇ ತತೋ ಭೂಯಃ ಪಾರಿಜಾತೋ ಮಹಾದ್ರುಮಃ ।**
**ಆವಿರಾಸೀತ್ಸಗಂಧೇನ ಪರಿತೋ ವಾಸಯನ್ ಜಗತ್ ॥ ೬೪ ॥**
**ತತಃ ಶೀತಾಂಶುರುದಭೂತ್ತಂ ಜಗ್ರಾಹ ಮಹೇಶ್ವರಃ ।**
**ವಿಷಜಾತಂ ತದುತ್ಪನ್ನಂ ಜಗೃಹುರ್ನಾಗಜಾತಯಃ ॥ ೬೫ ॥**
**ಕೌಸ್ತುಭಾಖ್ಯಂ ಮಹಾರತ್ನಮಾದದೇ ತಜ್ಜನಾರ್ದನಃ ॥ ೬೬ ॥**
**ತತಃ ಸ್ವಪತ್ರಗಂಧೇನ ಮದಯಂತೀ ಮಹೌಷಧಿಃ ।**
**ವಿಜಯಾ ನಾಮ ಸಂಜಜ್ಞೇ ಭೈರವಸ್ತಾಮುಪಾದದೇ ॥ ೬೭ ॥**
**ತತೋ ದಿವ್ಯಾಂಬರಧರೋ ದೇವೋ ಧನ್ವಂತರಿಃ ಸ್ವಯಂ ।**
**ಸಮುತ್ಥಿತಃ ಕರೇ ಬಿಭ್ರದಮೃತಾಢ್ಯಂ ಕಮಂಡಲುಂ ॥ ೬೮ ॥**

---

೬೩. ಹೀಗೆಯೇ ಆ ಕ್ಷೀರಮಹೋದಧಿಯನ್ನು ಮಥನಮಾಡುತ್ತಿರಲು, ಅನುಪಮಲಾವಣ್ಯವತಿಯರೂ, ಲೋಕಮನೋಹರೆಯರೂ ಆದ ಅಪ್ಸರೆಯರ ಸಮೂಹವು ಉದಿಸಿತು.

೬೪. ಮಥನಕಾರ್ಯವು ಮುಂದುವರಿಯಲು ಮಹಾವೃಕ್ಷವಾದ ಪಾರಿಜಾತವು ತನ್ನ ಸುವಾಸನೆಯಿಂದಲೇ ಸಮಸ್ತ ಪ್ರಪಂಚವನ್ನೂ ವಾಸನೆಗೊಳಿಸುತ್ತ ಉದಿಸಿತು.

೬೫. ಆಮೇಲೆ ತಂಪಾದ ಕಿರಣವುಳ್ಳ ಚಂದ್ರನುದಿಸಲು, ಮಹೇಶ್ವರನು ಅವನನ್ನು ಪರಿಗ್ರಹಿಸಿದನು. ಬಳಿಕ ಅನೇಕ ವಿಷಸಮೂಹವುತ್ಪನ್ನವಾಗಲು ಅದನ್ನು ನಾಗ (ಸರ್ಪ) ಜಾತಿಗಳು ತೆಗೆದುಕೊಂಡವು.

೬೬. ಆಮೇಲೆ ಕೌಸ್ತುಭವೆಂಬ ಮಹಾರತ್ನವು ಹುಟ್ಟಲು ಶ್ರೀಮನ್ನಾರಾಯಣನು ಅದನ್ನು ಸ್ವೀಕರಿಸಿದನು.

೬೭. ತರುವಾಯ ತನ್ನ ಎಲೆಗಳ ವಾಸನೆಯಿಂದಲೇ ಸಮಸ್ತವನ್ನೂ ಉನ್ಮಾದಗೊಳಿಸುತ್ತಾ ಮಹೌಷಧಿಯು ಉತ್ಪನ್ನವಾಯಿತು. ಆಮೇಲೆ ವಿಜಯೆ ಎಂಬುವಳು ಉದಿಸಲು ಭೈರವನು ಆಕೆಯನ್ನು ಪರಿಗ್ರಹಿಸಿದನು.

೬೮. ಬಳಿಕ ದಿವ್ಯಾಂಬರಧರನಾಗಿ ಕೈಯಲ್ಲಿ ಅಮೃತವು ತುಂಬಿದ ಕಮಂಡಲುವನ್ನು ಹಿಡಿದು ಬೆಳಗುತ್ತಾ ದೇವದೇವನಾದ ಧನ್ವಂತರಿಯು ಉದಿಸಿದನು.

**ತತಃ ಪ್ರಹೃಷ್ಟಮನಸೋ ದೇವಾ ದೈತ್ಯಾಶ್ಚ ಸರ್ವಶಃ ।**
**ಮುನಯಶ್ಚಾಽಭವಂಸ್ತುಷ್ಟಾಸ್ತದಾನೀಂ ತಪಸಾಂ ನಿಧೇ ॥ ೧೯ ॥**
**ತತೋ ವಿಕಸಿತಾಂಭೋಜವಾಸಿನೀ ವರದಾಯಿನೀ ।**
**ಉತ್ಥಿತಾ ಪದ್ಮಹಸ್ತಾ ಶ್ರೀಸ್ತಸ್ಮಾತ್ ಕ್ಷೀರಮಹಾರ್ಣವಾತ್ ॥೨೦॥**
**ಅಥ ತಾಂ ಮುನಯಃ ಸರ್ವೇ ಶ್ರೀಸೂಕ್ತೇನ ಶ್ರಿಯಂ ಪರಾಂ ।**
**ತುಷ್ಟುವುಸ್ತುಷ್ಟಹೃದಯಾ ಗಂಧರ್ವಾಶ್ಚ ಜಗುಃ ಪುರಃ ॥ ೨೧ ॥**
**ವಿಶ್ವಾಚೀ ಪ್ರಮುಖಾಃ ಸರ್ವೇ ನನೃತುಶ್ಚಾಪ್ಸರೋಗಣಾಃ ।**
**ಗಂಗಾದ್ಯಾಃ ಪುಣ್ಯನದ್ಯಶ್ಚ ಸ್ನಾನಾರ್ಥಮುಪತಸ್ಥಿರೇ ॥ ೨೨ ॥**
**ಅಷ್ಟೌ ದಿಗ್ದಂತಿನಶ್ಚೈವ ಹೇಮಪಾತ್ರಸ್ಥಿತಂ ಜಲಂ ।**
**ಆದಾಯ ಸ್ನಾಪಯಾಂಚಕ್ರುಸ್ತಾಂ ಶ್ರಿಯಂ ಪದ್ಮವಾಸಿನೀಂ॥೨೩॥**
**ಪದ್ಮಮಾಲಾಂ ದದೌ ತಸ್ಯೈ ಮೂರ್ತಿಮಾನ್ ಕ್ಷೀರಸಾಗರಃ ॥೨೪॥**

---

೧೯. ಎಲೈ ತಪೋನಿಧಿಯಾದ ಅಗಸ್ತ್ಯನೇ! ಅನಂತರದಲ್ಲಿ ದೇವತೆಗಳು, ದೈತ್ಯರು, ಮಹರ್ಷಿಗಳಾದಿಯಾಗಿ ಎಲ್ಲರೂ ಪರಮಾನಂದ ಭರಿತರಾದರು.

೨೦. ಹೀಗೆ ಅಮೃತೋದಯವಾದ ತರುವಾಯ ಆ ಕ್ಷೀರ ಮಹಾರ್ಣವದಲ್ಲಿ ಅರಳಿ ಬೆಳಗುತ್ತಿರುವ ಕೆಂದಾವರೆಯಲ್ಲಿ ವಾಸಿಸುತ್ತಿರುವವಳಾಗಿ, ಎರಡು ಕೈಗಳಲ್ಲಿಯೂ ತಾವರೆಗಳನ್ನು ಹಿಡಿದವಳಾಗಿ, ನಂಬಿದ ಭಕ್ತರಿಗೆ ವರಪ್ರದಾಯಕಿಯಾಗಿರುವ ಶ್ರೀಮಹಾಲಕ್ಷ್ಮಿಯು ಆವಿರ್ಭವಿಸಿದಳು.

೨೧. ಆಗ ಬ್ರಹ್ಮರ್ಷಿಗಳೆಲ್ಲರೂ ಶ್ರೀಸೂಕ್ತದಿಂದ ಆ ಶ್ರೀದೇವಿಯನ್ನು ಸಂತುಷ್ಟಹೃದಯರಾಗಿ ಸ್ತುತಿಸಿದರು. ಗಂಧರ್ವರು ಆಕೆಯ ಮುಂಗಡೆ ಗಾನಮಾಡಿದರು.

೨೨. ವಿಶ್ವಾಚಿ, ಘೃತಾಚಿ, ರಂಭೆ ಮೊದಲಾದ ಅಪ್ಸರಾಂಗನೆಯರೆಲ್ಲರೂ ನಾಟ್ಯಮಾಡಿದರು. ಗಂಗಾದಿ ಪುಣ್ಯನದೀಲಲನೆಯರೆಲ್ಲರೂ ಆಕೆಗೆ ಸ್ನಾನಮಾಡಿಸಲೋಸುಗ ಸಿದ್ಧರಾಗಿ ಸಮೀಪಿಸಿದರು.

೨೩. ತರುವಾಯ ಅಷ್ಟದಿಗ್ಗಜಗಳೂ ಸಹ ಸ್ವರ್ಣಪಾತ್ರೆಯಲ್ಲಿದ್ದ ಪರಿಶುದ್ಧ ಜಲವನ್ನು ತೆಗೆದುಕೊಂಡು ಪದ್ಮವಾಸಿನಿಯಾದ ಆ ಶ್ರೀದೇವಿಗೆ ಸ್ನಾನಮಾಡಿಸಿದುವು.

೨೪. ಆ ಸಮಯದಲ್ಲಿಯೇ ಕ್ಷೀರಸಮುದ್ರರಾಜನು ಮೂರ್ತಿಮಂತನಾಗಿ ಬಂದು ಆ ಪದ್ಮಸಂಭವೆಗೆ ಪದ್ಮಮಾಲಿಕೆಯೊಂದನ್ನು ಕೊಟ್ಟನು.

**ಭೂಷಣಾನಿ ಚ ದಿವ್ಯಾನಿ ವಿಶ್ವಕರ್ಮಾ ಸಮರ್ಪಯತ್ ॥ ೭೫ ॥**
**ದಿವ್ಯಮಾಲಾಂಬರಧರಾ ದಿವ್ಯಭೂಷಣಭೂಷಿತಾ । [೭೬ ॥**
**ಯಯೌ ವಕ್ಷಃಸ್ಥಲಂ ವಿಷ್ಣೋಃ ಸರ್ವೇಷಾಂ ಪಶ್ಯತಾಂ ರಮಾ ॥**
**ಪಶ್ಯತಿ ಸ್ಮ ಚ ಸಾ ದೇವೀ ವಿಷ್ಣುವಕ್ಷಃಸ್ಥಲಾಲಯಾ । [೭೭ ॥**
**ದೇವಾನ್ ದಯಾರ್ದ್ರಯಾ ದೃಷ್ಟ್ಯಾ ಸರ್ವಲೋಕಮಹೇಶ್ವರೀ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ**
**ಸಂವಾದೇ ಶ್ರೀ ಲಲಿತೋಪಾಖ್ಯಾನೇ**
**ಚತುರ್ಥೋಽಧ್ಯಾಯಃ**

---

೭೫. ವಿಶ್ವಕರ್ಮನಾದರೋ ಆ ದೇವಿಗೆ ದೇವತಾಸಂಬಂಧಗಳಾದ ಆಭರಣಗಳನ್ನು ಸಮರ್ಪಿಸಿದನು.

೭೬. ಆಗ ಆ ರಮಾದೇವಿಯು, ದಿವ್ಯಮಾಲ್ಯಾಂಬರಧಾರಿಣಿಯೂ, ದಿವ್ಯಭೂಷಣಭೂಷಿತೆಯೂ ಆಗಿ ದೇವದಾನವರಾದಿಯಾಗಿ ಎಲ್ಲರೂ ನೋಡುತ್ತಿರುವಂತೆಯೇ ಶ್ರೀಮನ್ಮಹಾವಿಷ್ಣುವಿನ ವಕ್ಷಃಸ್ಥಲವನ್ನು ಸೇರಿದಳು.

೭೭. ಆಗ ಮಹಾವಿಷ್ಣುವಿನ ವಕ್ಷಃಸ್ಥಲದಲ್ಲಿ ನೆಲೆಸಿದವಳೂ, ಸರ್ವಲೋಕಮಹೇಶ್ವರಿಯೂ ಆದ ಆ ಮಹಾದೇವಿಯು ದೇವತೆಗಳೆಲ್ಲರನ್ನೂ ದಯಾರ್ದ್ರದೃಷ್ಟಿಯಿಂದ ನೋಡಿದಳು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಮೋಽಧ್ಯಾಯಃ

[ಶ್ರೀ ಮಹಾವಿಷ್ಣೋರ್ಮೋಹಿನೀರೂಪೇಣಾವಿರ್ಭಾವಃ— ನಾರದೇನ ಶಂಕರಾಯ ಮೋಹಿನೀವೃತ್ತಾಂತಕಥನಂ— ತದ್ದರ್ಶನಾಯ ಶಂಕರೇಣ ವಿಷ್ಣುಲೋಕಾಗಮನಂ— ಭಂಡಾಸುರ ಚರಿತಾರಂಭಃ— ಶ್ರೀ ಲಲಿತಾಂಬಾವತಾರಃ]

ತಸ್ಮಾತ್ ಕ್ಷೀರಮಹಾಂಬುಧೇರ್ಮಥನತೋ ದೇವೀ ಸುರಾಖ್ಯಾಯರ್ಮಾ
ಲಕ್ಷ್ಮೀಃ ಕಲ್ಪತರುಸ್ತದಾನ್ಯದತುಲಂ ಪ್ರಾದುರ್ಬಭೂವಾಪ್ಸರಾಃ ।
ಯಸ್ಯಾಜ್ಞಾವಶತಸ್ತಮೇವ ಪರಯಾ ಶಕ್ತ್ಯಾ ಸಮೇತಂ ಶಿವಂ
ವಂದೇಽಹಂ ಲಲಿತಾಸಮೇತಮನಿಶಂ ಶ್ರೀಸುಂದರೇಶಂ ಭಜೇ ॥

ಹಯಗ್ರೀವಃ—

**ಅಥ ದೇವಾ ಮಹೇಂದ್ರಾದ್ಯಾ ವಿಷ್ಣುನಾ ಪ್ರಭವಿಷ್ಣುನಾ ।**
**ಅಂಗೀಕೃತಾ ಮಹಾಧೀರಾಃ ಪ್ರಮೋದಂ ಪರಮಂ ಯಯುಃ ॥ ೧ ॥**
**ಮಲಕಾದ್ಯಾಸ್ತು ತೇ ದೈತ್ಯಾಃ ಸರ್ವೇ ವಿಷ್ಣುಪರಾಙ್ಮುಖಾಃ ।**
**ಸಂತ್ಯಕ್ತಾಶ್ಚ ಶ್ರಿಯಾ ದೇವ್ಯಾ ಭೃಶಮುದ್ವೇಗಮಾಗತಾಃ ॥ ೨ ॥**
**ತತೋ ಜಗೃಹಿರೇ ದೈತ್ಯಾ ಧನ್ವಂತರಿಕರಸ್ಥಿತಂ ।**
**ಪರಮಾಮೃತಸಾರಾಢ್ಯಂ ಕಲಶಂ ಕಲಶೋದ್ಭವ ॥ ೩ ॥**

---

## ಕನ್ನಡದ ಅನುವಾದ

[ಶ್ರೀಮಹಾವಿಷ್ಣುವಿನ ಮೋಹಿನೀರೂಪಾವತಾರವು— ಶಂಕರನಿಗೆ ನಾರದನ ಮೂಲಕ ಮೋಹಿನೀ ವೃತ್ತಾಂತವು ತಿಳಿಯುವುದು— ಆತನು ಮೋಹಿನಿಯ ದರ್ಶನಕ್ಕಾಗಿ ವಿಷ್ಣು ಲೋಕಕ್ಕೆ ಬರುವುದು— ಭಂಡಾಸುರ ಚರಿತ್ರೆಯ ಪ್ರಾರಂಭ — ಶ್ರೀ ಲಲಿತಾಂಬಾವತಾರವು]

೧. ಹಯಗ್ರೀವನು ಹೇಳುತ್ತಾನೆ:—ತರುವಾಯ ಮಹಾಪ್ರಭಾವಶಾಲಿಯಾದ ಶ್ರೀಮಹಾವಿಷ್ಣುವಿನಿಂದ ಅನುಗೃಹೀತರಾದ ಮಹೇಂದ್ರಾದಿ ದೇವತೆಗಳೆಲ್ಲರೂ ಮಹಾಧೀರರಾಗಿ ಅಪರಿಮಿತವಾದ ಆನಂದವನ್ನು ಹೊಂದಿದರು.

೨. ಮಲಕನೇ ಮೊದಲಾದ ದೈತ್ಯರೆಲ್ಲರೂ ವಿಷ್ಣುವಿನ ತಿರಸ್ಕಾರಕ್ಕೆ ಪಾತ್ರರಾಗಿ ಕಾಂತಿಯನ್ನು ಕಳೆದುಕೊಂಡು, ಶ್ರೀದೇವಿಯೂ ಅವರನ್ನು ಕಡೆಗಾಣಲು ಬಹಳ ಸಂಕಟಕ್ಕೊಳಗಾದರು.

೩. ಎಲೈ ಕುಂಭಸಂಭವನಾದ ಅಗಸ್ತ್ಯನೇ! ಕೂಡಲೇ ಆ ದೈತ್ಯರು ಧನ್ವಂತರಿಯ ಕೈಯಲ್ಲಿದ್ದ ಅಮೃತಕಲಶವನ್ನು ಕಿತ್ತುಕೊಂಡರು.

ಅಥಾಸುರಾಣಾಂ ದೇವಾನಾಮನ್ಯೋಽನ್ಯಂ ಕಲಹೋಽಭವತ್ ॥ ೪ ॥
ಏತಸ್ಮಿನ್ನಂತರೇ ವಿಷ್ಣುಃ ಸರ್ವಲೋಕೈಕರಕ್ಷಕಃ ।
ಸಮ್ಯಗಾರಾಧಯಾಮಾಸ ಲಲಿತಾಂ ಸ್ವೈಕ್ಯರೂಪಿಣೀಂ ॥ ೫ ॥
ಸುರಾಣಾಂ ಚಾಸುರಾಣಾಂ ಚ ರಣಂ ವೀಕ್ಷ್ಯ ಸುದಾರುಣಂ ।
ಬ್ರಹ್ಮಾ ನಿಜಪದಂ ಪ್ರಾಪ ಶಂಭುಃ ಕೈಲಾಸಮಾಸ್ಥಿತಃ ॥ ೬ ॥
ಮಲಕಂ ಯೋಧಯಾಮಾಸ ದೈತ್ಯಾನಾಮಧಿಪಂ ವೃಷಾ ।
ಅಸುರೈಶ್ಚ ಸುರಾಃ ಸರ್ವೇ ಸಾಂಪರಾಯಮಕುರ್ವತ ॥ ೭ ॥
ಭಗವಾನಪಿ ಯೋಗೀಂದ್ರಃ ಸಮಾರಾಧ್ಯ ಮಹೇಶ್ವರೀಂ ।
ತದೇಕಧ್ಯಾನಯೋಗೇನ ತದ್ರೂಪಃ ಸಮಜಾಯತ ॥ ೮ ॥
ಸರ್ವಸಂಮೋಹಿನೀ ಸಾ ತು ಸಾಕ್ಷಾಚ್ಛೃಂಗಾರನಾಯಿಕಾ ।
ಸರ್ವಶೃಂಗಾರವೇಷಾಢ್ಯಾ ಸರ್ವಾಭರಣಭೂಷಿತಾ ॥ ೯ ॥
ಸುರಾಣಾಮಸುರಾಣಾಂ ಚ ನಿವಾರ್ಯ ರಣಮುದ್ಭುತಂ ।
ಮಂದಸ್ಮಿತೇನ ದೈತೇಯಾನ್ ಮೋಹಯಂತೀ ಜಗಾದ ಹ ॥ ೧೦ ॥

---

೪. ಆಗ ದೇವತೆಗಳಿಗೂ ದಾನವರಿಗೂ ಪರಸ್ಪರವಾಗಿ ಕಲಹವು ಮೊದಲಾಯಿತು.

೫. ಇದೇ ಸಮಯದಲ್ಲಿಯೇ ಸರ್ವಲೋಕೈಕರಕ್ಷಕನಾದ ಶ್ರೀ ಮಹಾವಿಷ್ಣುವು ತನ್ನಲ್ಲಿಯೇ ಐಕ್ಯಹೊಂದಿದ್ದ ಶ್ರೀ ಲಲಿತಾದೇವಿಯನ್ನು ಭಕ್ತಿಪೂರ್ವಕವಾಗಿ ಆರಾಧಿಸಿದನು.

೬. ಇತ್ತ, ದೇವಾಸುರರ ಮಹಾಭಯಂಕರವಾದ ಯುದ್ಧವನ್ನು ಕಂಡು ಬ್ರಹ್ಮನು ಸತ್ಯಲೋಕಕ್ಕೂ, ಶಂಭುವು ಕೈಲಾಸಕ್ಕೂ ಹೊರಟು ಹೋದರು.

೭. ದೇವೇಂದ್ರನು ದೈತ್ಯರಾಜನಾದ ಮಲಕನೊಡನೆ ಯುದ್ಧ ಮಾಡಿದನು. ಉಳಿದ ದೇವತೆಗಳೆಲ್ಲರೂ ದಾನವರೊಡನೆ ಯುದ್ಧಕ್ಕೆ ತೊಡಗಿದರು.

೮. ಯೋಗೀಂದ್ರನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಶ್ರೀಮನ್ನಾರಾಯಣನಾದರೋ ಇದೇ ಸಮಯದಲ್ಲಿಯೇ ಮಹೇಶ್ವರಿಯನ್ನು ಭಕ್ತಿಯಿಂದ ಆರಾಧಿಸಿ ಆಕೆಯ ಧ್ಯಾನಯೋಗಗಳ ಬಲದಿಂದ ಆಕೆಯ ರೂಪವನ್ನೇ ಪಡೆದನು.

೯-೧೦. ಆ ದೇವಿಯು ಎಲ್ಲರನ್ನೂ ಸಂಮೋಹನಗೊಳಿಸುವ ಸಾಕ್ಷಾತ್ ಶೃಂಗಾರನಾಯಕಿಯೂ, ಸರ್ವಶೃಂಗಾರವೇಷಧಾರಿಣಿಯೂ,

**ಅಲಂ ಯುದ್ಧೇನ ಕಿಂ ಶಸ್ತ್ರೈರ್ಮರ್ಮಸ್ಥಾನವಿಭೇದಿಭಿಃ ।**
**ನಿಷ್ಠುರೈಃ ಕಿಂ ವೃಥಾಲಾಪೈಃ ಕಂಠಶೋಷಣ ಹೇತುಭಿಃ ॥ ೧೧ ॥**
**ಅಹಮೇವಾತ್ರ ಮಧ್ಯಸ್ಥಾ ಯುಷ್ಮಾಕಂ ಚ ದಿವೌಕಸಾಂ ।**
**ಯೂಯಂ ಚಾಮೀ ಚ ನಿತರಾಮತ್ರ ಹಿ ಕ್ಲೇಶಭಾಗಿನಃ ॥ ೧೨ ॥**
**ಸರ್ವೇಷಾಂ ಸಮಮೇವಾದ್ಯ ದಾಸ್ಯಾಮ್ಯಮೃತಮದ್ಭುತಂ ।**
**ಮಮ ಹಸ್ತೇ ಪ್ರದಾತವ್ಯಂ ಸುಧಾಪಾತ್ರಮನುತ್ತಮಂ ॥ ೧೩ ॥**
**ಇತಿ ತಸ್ಯಾ ವಚಃ ಶ್ರುತ್ವಾ ದೈತ್ಯಾಸ್ತದ್ವಾಕ್ಯಮೋಹಿತಾಃ ।**
**ಪೀಯೂಷಕಲಶಂ ತಸ್ಯೈ ದದುಸ್ತೇ ಮುಗ್ಧಚೇತಸಃ ॥ ೧೪ ॥**
**ತತ್ಪಾತ್ರಂ ಸಾ ಸಮಾದಾಯ ಜಗನ್ಮೋಹನರೂಪಿಣೀ ।**
**ಸುರಾಣಾಮಸುರಾಣಾಂ ಚ ಪೃಥಕ್ಪಂಕ್ತಿಂ ಚಕಾರ ಹ ॥ ೧೫ ॥**

---

ಸರ್ವಾಭರಣಭೂಷಿತೆಯೂ ಆಗಿ ರಣಾಂಗಣಕ್ಕೈತಂದು ಸುರಾಸುರರ ಆ ಭಯಂಕರ ಯುದ್ಧವನ್ನು ತಡೆದು ನಿಲ್ಲಿಸಿ, ತನ್ನ ಮುಗುಳ್ನಗೆಯಿಂದಲೇ ದಾನವರೆಲ್ಲರನ್ನೂ ಸಂಮೋಹನಗೊಳಿಸುತ್ತಾ ಅವರನ್ನು ಕುರಿತು ಈ ರೀತಿ ಹೇಳಿದಳು —

೧೧. "ಅಯ್ಯಾ, ದಾನವರೇ! ಇನ್ನು ಈ ಯುದ್ಧವು ಸಾಕು. ಮರ್ಮಸ್ಥಾನಗಳನ್ನೇ ಭೇದಿಸುವ ಈ ಶಸ್ತ್ರಗಳಿಂದೇನು ಪ್ರಯೋಜನ? ಒಬ್ಬರನ್ನೊಬ್ಬರು ನಿಷ್ಪ್ರಯೋಜನವಾಗಿ, ಕಂಠಶೋಷಣಕ್ಕೆ ಕಾರಣವಾಗುವಂತೆ ಬೈದು ಕೂಗಾಡುವುದರಿಂದ ತಾನೇ ಯಾವ ಪ್ರಯೋಜನವಾದೀತು?

೧೨. ಈಗ ನಿಮಗೂ, ಈ ದೇವತೆಗಳಿಗೂ ನಾನೇ ಮಧ್ಯಸ್ಥೆಯಾಗಿರುತ್ತೇನೆ. ನೀವೀರ್ವರೂ ಈ ಅಮೃತಮಥನಕಾರ್ಯದಲ್ಲಿ ಸರಿಸಮನಾಗಿ ಕಷ್ಟಪಟ್ಟಿರುವಿರಲ್ಲವೇ ?

೧೩. ಅದ್ಭುತವಾದ ಈ ಅಮೃತವನ್ನು ನಿಮ್ಮೆಲ್ಲರಿಗೂ ಸಮನಾಗಿ ನಾನು ಹಂಚಿಕೊಡುತ್ತೇನೆ. ಸರ್ವೋತ್ತಮವಾದ ಈ ಅಮೃತ ಕಲಶವನ್ನು ನನ್ನ ಕೈಗೆಕೊಡಬೇಕು."

೧೪. ಇಂತು ನುಡಿದ ಆ ಮೋಹಿನಿಯ ಮಾತುಗಳನ್ನು ಕೇಳಿ ದಾನವರೆಲ್ಲರೂ ಮುಗ್ಧರಾಗಿ ಆಕೆಯ ಕೈಗೆ ಅಮೃತಕಲಶವನ್ನು ಕೊಟ್ಟುಬಿಟ್ಟರು.

೧೫. ಜಗನ್ಮೋಹನರೂಪಿಣಿಯಾದ ಮೋಹಿನಿಯಾದರೋ ಆ ಕಲಶವನ್ನು ತೆಗೆದುಕೊಂಡು ದೇವದಾನವರನ್ನು ಬೇರೆ ಬೇರೆ ಪಂಕ್ತಿಗಳನ್ನಾಗಿ ಕುಳ್ಳಿರಿಸಿದಳು.

**ದ್ವಯೋಃ ಪಂಕ್ತ್ಯೋಶ್ಚ ಮಧ್ಯಸ್ಥಾ ತಾನುವಾಚ ಸುರಾಸುರಾನ್ ।**
**ತೂಷ್ಣೀಂಭವಂತು ಸರ್ವೇಽಪಿ ಕ್ರಮಶೋ ದೀಯತೇಽಮೃತಂ ॥೧೬॥**
**ತದ್ವಾಕ್ಯಮುರರೀಚಕ್ರುಸ್ತೇ ಸರ್ವೇ ಸಮವಾಯಿನಃ ।**
**ಸಾ ಚ ಸಂಮೋಹಿತಾಶೇಷಲೋಕಾ ದಾತುಂ ಪ್ರಚಕ್ರಮೇ ॥ ೧೭ ॥**
**ಕನತ್ಕನಕದರ್ವೀಕಾ ಕ್ವಣನ್ಮಂಗಲಕಂಕಣಾ ।**
**ಕಮನೀಯವಿಭೂಷಾಢ್ಯಾ ಕಲಾ ಸಾ ಪರಮಾ ಬಭೌ ॥ ೧೮ ॥**
**ವಾಮಾ ವಾಮಕರಾಂಭೋಜೇ ಸುಧಾಕಲಶಮುಜ್ಜ್ವಲಂ ।**
**ದಧಾನಾ ದೇವತಾಪಂಕ್ತ್ಯೈ ಪೂರ್ವಂ ದದ್ಯಾತ್ ತಥಾದಿಶತ್ ॥ ೧೯ ॥**
**ದಿಶಂತೀ ಕ್ರಮಶಸ್ತತ್ರ ಚಂದ್ರಭಾಸ್ಕರಸೂಚಿತಂ ।**
**ದರ್ವೀಮುಖೇನ ಚಿಚ್ಛೇದ ಸೈಂಹಿಕೇಯಂ ತು ಮಧ್ಯಗಂ ॥ ೨೦ ॥**

---

೧೬. ಬಳಿಕ, ಆ ಎರಡೂ ಪಂಕ್ತಿಗಳ ನಡುವೆ ತಾನೇ ನಿಂತು ಅವರೀರ್ವರನ್ನು ಕುರಿತು, "ನೀವು ಗಲಭೆಮಾಡದೆ ಸುಮ್ಮನೆ ಕುಳಿತು ಕೊಳ್ಳಿರಿ; ನಾನು ನಿಮ್ಮಿರ್ವರಿಗೂ ಅಮೃತವನ್ನು ಕ್ರಮವಾಗಿ ಹಂಚಿ ಕೊಡುತ್ತೇನೆ" ಎಂದು ಹೇಳಿದಳು.

೧೭. ಆಗ ದೇವದಾನವರೆಲ್ಲರೂ ಒಟ್ಟಾಗಿ ಆಕೆಯ ಮಾತಿಗೆ ಒಪ್ಪಿದರು. ತರುವಾಯ ಸಮಸ್ತಲೋಕಗಳನ್ನೂ ಸಂಮೋಹನಗೊಳಿಸುತ್ತಿರುವ ಆ ಮೋಹಿನಿಯಾದರೋ ಅಮೃತವನ್ನು ಹಂಚಲು ಮೊದಲು ಮಾಡಿದಳು.

೧೮. ಥಳಥಳನೆ ಬೆಳಗುತ್ತಿರುವ ಚಿನ್ನದ ಸೌಟನ್ನು ಕೈಯಲ್ಲಿ ಹಿಡಿದು, ಮಂಗಳಕರವಾದ ಕೈಬಳೆಗಳನ್ನು ಗಲುಗಲನೆ ಧ್ವನಿಗೊಳಿಸುತ್ತ, ನಯನಮನೋಹರವಾದ ವಿಭೂಷಣಗಳಿಂದ ಮತ್ತಷ್ಟು ಸೊಬಗನ್ನು ನೆರೆಯುತ್ತಿರುವ ಆ ದೇವಿಯು ಚಂದ್ರಕಲೆಯಂತೆ ಪರಮಾದ್ಭುತವಾಗಿ ಕಾಣಿಸುತ್ತಿದ್ದಳು.

೧೯. ಲಾವಣ್ಯವತಿಯಾದ ಆ ಭುವನಮೋಹಿನಿಯು ಕಮಲೋಪಮವಾದ ತನ್ನ ಎಡಗೈಯಲ್ಲಿ ಮಹೋಜ್ಜ್ವಲವಾಗಿ ಬೆಳಗುತ್ತಿರುವ ಅಮೃತಕಲಶವನ್ನು ಹಿಡಿದು ಮೊದಲು ದೇವತೆಗಳ ಪಂಕ್ತಿಗೆ ಸೌಟನಿಂದ ಅಮೃತವನ್ನು ಹಂಚಿದಳು.

೨೦. ಆಕೆಯು ಕ್ರಮವಾಗಿ ಅಮೃತವನ್ನು ಹಂಚುತ್ತಿರುವ ಸಮಯದಲ್ಲಿಯೇ, ಸೂರ್ಯ ಚಂದ್ರರು ಸೂಚಿಸಿದ, ದೇವತೆಗಳ

**ಪೀತಾಮೃತಶಿರೋಮಾತ್ರಂ ತಸ್ಯ ವ್ಯೋಮ ಜಗಾಮ ಚ ।**
**ತದ್ದೃಷ್ಟ್ವಾಪ್ಯಸುರಾಸ್ತತ್ರ ತೂಷ್ಣೀಮಾಸತ ಮೋಹಿತಾಃ ॥ ೨೧ ॥**
**ಏವಂ ಕ್ರಮೇಣ ತತ್ಸರ್ವಂ ವಿಬುಧೇಭ್ಯೋ ವಿತೀರ್ಯ ಸಾ ।**
**ಅಸುರಾಣಾಂ ಪುರಃ ಪಾತ್ರಂ ಸಾ ನಿಧಾಯ ತಿರೋದಧೇ ॥ ೨೨ ॥**
**ರಿಕ್ತಪಾತ್ರಂ ತು ತದ್ದೃಷ್ಟ್ವಾ ಸರ್ವೇ ದೈತೇಯದಾನವಾಃ । [೨೩ ॥**
**ಉದ್ವೇಲಂ ಕೇವಲಂ ಕ್ರೋಧಂ ಪ್ರಾಪ್ತಾ ಯುದ್ಧಚಿಕೀರ್ಷಯಾ ॥**
**ಇಂದ್ರಾದಯಃ ಸುರಾಃ ಸರ್ವೇ ಸುಧಾಪಾನಾದ್ಬಲೋತ್ತರಾಃ ।**
**ದುರ್ಬಲೈರಸುರೈಃ ಸಾರ್ಧಂ ಸಮಯುಧ್ಯಂತ ಸಾಯುಧಾಃ ॥ ೨೪ ॥**
**ತೇ ವಧ್ಯಮಾನಾಃ ಶತಶೋ ದಾನವೇಂದ್ರಾಃ ಸುರೋತ್ತಮೈಃ ।**
**ದಿಗಂತಾನ್ ಕತಿಚಿಜ್ಜಗ್ಮುಃ ಪಾತಾಲಂ ಕತಿಚಿದ್ಯಯುಃ ॥ ೨೫ ॥**

---

ಪಂಕ್ತಿಯ ನಡುವೆಯಿದ್ದ, ಸಿಂಹಿಕೆಯ ಮಗನಾದ ರಾಹುವನ್ನು ಸೌಟಿನ ತುದಿಯಿಂದ ಕತ್ತರಿಸಿದಳು.

೨೧. ಅಮೃತಪಾನಮಾಡಿದ್ದ ಆ ದಾನವನ ಶಿರಸ್ಸು ಮಾತ್ರ ಗಗನಕ್ಕೆ ಹಾರಿಹೋಯಿತು. ಮೋಹಿನಿಯ ಈ ಕೃತ್ಯವನ್ನು ಕಂಡೂ ದಾನವರೆಲ್ಲರೂ ಆಕೆಯ ರೂಪವೈಭವದಿಂದ ಮೋಹಿತರಾಗಿ ಸುಮ್ಮನೆಯೇ ಇದ್ದರು.

೨೨. ಹೀಗೆ ಕ್ರಮವಾಗಿ ಆಕೆಯು ದೇವತೆಗಳೆಲ್ಲರಿಗೂ ಅಮೃತವನ್ನು ಹಂಚಿ ಬರಿದಾದ ಕಲಶವನ್ನು ದೈತ್ಯರ ಮುಂಗಡೆಯೇ ಬಿಟ್ಟು ಅಂತರ್ಧಾನವಾದಳು.

೨೩. ದಾನವರು ಆ ಪಾತ್ರೆಯು ಬರಿದಾಗಿರುವುದನ್ನು ಕಂಡು, ಮಿತಿಮೀರಿ ಕೋಪಗೊಂಡು, ದೇವತೆಗಳೊಡನೆ ಯುದ್ಧಮಾಡಲಪೇಕ್ಷೆಯುಳ್ಳವರಾದರು.

೨೪. ಅಮೃತಪಾನಮಾಡಿ ಮಹಾಬಲಶಾಲಿಗಳಾಗಿದ್ದ ದೇವೇಂದ್ರನೇ ಮೊದಲಾದ ದೇವತೆಗಳೆಲ್ಲರೂ ಆ ಕೂಡಲೇ ಆಯುಧಗಳನ್ನು ಹಿಡಿದು ದುರ್ಬಲರಾದ ಆ ದಾನವರೊಡನೆ ಯುದ್ಧ ಮಾಡಿದರು.

೨೫. ಅವರೆಲ್ಲರೂ ಆ ಯುದ್ಧದಲ್ಲಿ ದೇವತೆಗಳ ಹೊಡೆತವನ್ನು ತಾಳಲಾರದೆ ನೂರಾರುಗಳಾಗಿ ಕೆಲವರು ದಿಕ್ಕುದಿಕ್ಕುಗಳಿಗೂ, ಕೆಲವರು ಪಾತಾಳ ಲೋಕಕ್ಕೂ ಪಲಾಯನವಾಗಿ ಹೋದರು.

**ದೈತ್ಯಂ ಮಲಕನಾಮಾನಂ ವಿಜಿತ್ಯ ವಿಬುಧೇಶ್ವರಃ ।**
**ಆತ್ಮೀಯಾಂ ಶ್ರಿಯಮಾಜಹ್ರೇ ಶ್ರೀಕಟಾಕ್ಷಸಮೀಕ್ಷಿತಃ ॥ ೨೬ ॥**
**ಪುನಃ ಸಿಂಹಾಸನಂ ಪ್ರಾಪ್ಯ ಮಹೇಂದ್ರಃ ಸುರಸೇವಿತಃ । [ ೨೭ ॥**
**ತ್ರೈಲೋಕ್ಯಂ ಪಾಲಯಾಮಾಸ ಪೂರ್ವವತ್ಪೂರ್ವದೇವಜಿತ್ ॥**
**ನಿರ್ಭಯಾ ನಿಖಿಲಾ ದೇವಾಸ್ತ್ರೈಲೋಕ್ಯೇ ಸಚರಾಚರೇ ।**
**ಯಥಾಕಾಮಂ ಚರಂತಿ ಸ್ಮ ಸರ್ವದಾ ಹೃಷ್ಟಚೇತಸಃ ॥ ೨೮ ॥**
**ತದಾ ತದಖಿಲಂ ದೃಷ್ಟ್ವಾ ಮೋಹಿನೀಚರಿತಂ ಮುನಿಃ ।**
**ವಿಸ್ಮಿತಃ ಕಾಮಚಾರೀ ತು ಕೈಲಾಸಂ ನಾರದೋ ಗತಃ ॥ ೨೯ ॥**
**ನಂದಿನಾ ಚ ಕೃತಾನುಜ್ಞಃ ಪ್ರಣಮ್ಯ ಪರಮೇಶ್ವರಂ ।**
**ತೇನ ಸಂಭಾವ್ಯಮಾನೋಽಸೌ ತುಷ್ಟೋ ವಿಷ್ಟರಮಾಸತ ॥ ೩೦ ॥**
**ಆಸನಸ್ಥಂ ಮಹಾದೇವೋ ಮುನಿಂ ಸ್ವೇಚ್ಛಾವಿಹಾರಿಣಂ ।**
**ಪಪ್ರಚ್ಛ ಪಾರ್ವತೀಜಾನಿರಚ್ಛಸ್ಫಟಿಕಸಂನಿಭಃ ॥ ೩೧ ॥**

---

೨೬. ವಿಬುಧೇಶ್ವರನಾದ ಮಹೇಂದ್ರನಾದರೋ ದಾನವಾಧಿಪತಿಯಾದ ಮಲಕನನ್ನು ಗೆದ್ದು, ಶ್ರೀದೇವಿಯ ಕಟಾಕ್ಷ ಮಾತ್ರದಿಂದಲೇ ವೀಕ್ಷಿತನಾಗಿ, ಕಳೆದುಹೋಗಿದ್ದ ರಾಜ್ಯೈಶ್ವರ್ಯವನ್ನು ಮತ್ತೆ ಪಡೆದನು.

೨೭. ಪುನಃ ಅಮರಾವತಿಯ ಸಿಂಹಾಸನವನ್ನಲಂಕರಿಸಿ ದೇವತೆಗಳೆಲ್ಲರೂ ತನ್ನನ್ನು ಸೇವಿಸುತ್ತಿರಲು ಪೂರ್ವದಂತೆಯೇ ಅವನು ದಾನವರನ್ನು ಗೆದ್ದವನೆಂಬ ಕೀರ್ತಿಯಿಂದ ವಿರಾಜಿಸುತ್ತ ತ್ರೈಲೋಕ್ಯವನ್ನು ಪಾಲಿಸತೊಡಗಿದನು.

೨೮. ದೇವತೆಗಳೆಲ್ಲರೂ ಹೃಷ್ಟಮಾನಸರಾಗಿ ಚರಾಚರಾತ್ಮಕವಾದ ಈ ಜಗತ್ರಯದಲ್ಲಿ ತಮ್ಮಿಷ್ಟಾನುಸಾರವಾಗಿ ಯಾವಾಗಲೂ ಯಾವೊಂದು ಭಯವೂ ಇಲ್ಲದೆ ಸಂಚರಿಸತೊಡಗಿದರು.

೨೯. ಇದಾದ ಬಳಿಕ ತ್ರಿಲೋಕಸಂಚಾರಿಯಾದ ನಾರದ ಮಹರ್ಷಿಯು ಈ ರೀತಿ ನಡೆದ ವಿಷ್ಣುಮೋಹಿನಿಯ ನಡವಳಿಯೆಲ್ಲವನ್ನೂ ಕಂಡು ವಿಸ್ಮಿತನಾಗಿ ಕೂಡಲೇ ಕೈಲಾಸಕ್ಕೆ ಹೋದನು.

೩೦. ಅಲ್ಲಿ ಆತನು ನಂದೀಶ್ವರನ ಅನುಜ್ಞೆಯನ್ನು ಪಡೆದು, ಪರಮೇಶ್ವರನ ಬಳಿಗೈದಿ, ನಮಸ್ಕರಿಸಿ, ಆತನ ಮನ್ನಣೆಯನ್ನು ಪಡೆದು ಸಂತೋಷದಿಂದ ಪೀಠದಲ್ಲಿ ಕುಳಿತುಕೊಂಡನು.

೩೧. ಹೀಗೆ ಪೀಠದಲ್ಲಿ ಕುಳಿತಿರುವ ತ್ರಿಲೋಕಸಂಚಾರಿಯಾದ

**ಭಗವನ್ ಸರ್ವವೃತ್ತಜ್ಞ ಪವಿತ್ರೀಕೃತವಿಷ್ಟಪ ।**
**ಕಲಹಪ್ರಿಯ ದೇವರ್ಷೇ ಕಿಂ ವೃತ್ತಂ ತತ್ರ ನಾಕಿನಾಂ ॥ ೩೨ ॥**
**ಸುರಾಣಾಮಸುರಾಣಾಂ ವಾ ವಿಜಯಃ ಸಮಜಾಯತ ।**
**ಕಿಂ ವಾಪ್ಯದ್ಭುತವೃತ್ತಾಂತಂ ವಿಷ್ಣುನಾ ವಾಪಿ ಕಿಂ ಕೃತಂ ॥ ೩೩ ॥**
**ಇತಿ ಪೃಷ್ಟೋ ಮಹೇಶೇನ ನಾರದೋ ಮುನಿಸತ್ತಮಃ ।**
**ಉವಾಚ ವಿಸ್ಮಯಾವಿಷ್ಟಃ ಪ್ರಸನ್ನವದನೇಕ್ಷಣಃ ॥ ೩೪ ॥**
**ಸರ್ವಂ ಜಾನಾಸಿ ಭಗವನ್ ಸರ್ವಜ್ಞೋಽಸಿ ಯತಸ್ತತಃ ।**
**ತಥಾಪಿ ಪರಿಪೃಷ್ಟೇನ ಮಯಾ ತದ್ವಕ್ಷ್ಯತೇಽಧುನಾ ॥ ೩೫ ॥**
**ತತ್ರಾದೃಶೇ ಚ ಸಮರೇ ಸತಿ ದೈತ್ಯದಿವೌಕಸಾಂ ।**
**ಆದಿನಾರಾಯಣಃ ಶ್ರೀಮಾನ್ಮೋಹಿನೀರೂಪಮಾದದೇ ॥ ೩೬ ॥**

---

ಮುನಿಯನ್ನು ಕಂಡು ಸ್ವಚ್ಛವಾದ ಸ್ಫಟಿಕದಂತೆ ಬೆಳಗಿ ವಿರಾಜಿಸುತ್ತಿರುವ ಆ ಪಾರ್ವತೀಶನು ಈ ರೀತಿ ಕೇಳಿದನು.

೩೨. "ಎಲೈ ಪೂಜ್ಯನಾದ ದೇವರ್ಷಿಯೇ! ನೀನು ಎಲ್ಲ ಸಮಾಚಾರಗಳನ್ನೂ ತಿಳಿದವನು. ಲೋಕವನ್ನೇ ಪವಿತ್ರಗೊಳಿಸಿದವನು. ಆದರೂ ಕಲಹಪ್ರಿಯನಾದವನು. ಪ್ರಕೃತದಲ್ಲಿ ಸಮುದ್ರಮಥನದಲ್ಲಿ ತೊಡಗಿದ್ದ ದೇವತೆಗಳ ವೃತ್ತಾಂತವೇನು?

೩೩. ದೇವಾಸುರರ ಯುದ್ಧದಲ್ಲಿ ದೇವತೆಗಳಿಗೆ ಜಯವಾಯಿತೇ? ಆಶ್ಚರ್ಯಕರವಾದ ವೃತ್ತಾಂತವೇನಾದರೂ ಉಂಟೇ? ವಿಷ್ಣುವು ಆ ಸಂದರ್ಭದಲ್ಲಿ ಯಾವ ಅದ್ಭುತಕಾರ್ಯವನ್ನು ಮಾಡಿದನು?"

೩೪. ಮಹೇಶ್ವರನು ಈ ರೀತಿ ಪ್ರಶ್ನಿಸಲು ಮುನಿಶ್ರೇಷ್ಠನಾದ ನಾರದನು ಆಶ್ಚರ್ಯಪಟ್ಟು ಅರಳಿದ ಮುಖನಯನಗಳುಳ್ಳವನಾಗಿ ಆತನನ್ನು ಕುರಿತು ಹೀಗೆ ಹೇಳಿದನು—

೩೫. "ಎಲೈ ಮಹೇಶ್ವರನೇ, ಪರಮಪೂಜ್ಯನೂ, ಸರ್ವಜ್ಞನೂ ಆದ ನೀನು ಎಲ್ಲವನ್ನೂ ಅರಿತವನೇ ಆಗಿರುವೆ. ಆದರೂ ನನ್ನನ್ನು ಕೇಳುತ್ತಿರುವೆಯಾಗಿ ನಡೆದ ವೃತ್ತಾಂತವನ್ನು ಅರಿಕೆ ಮಾಡುವೆನು.

೩೬. ದೇವತೆಗಳು ದಾನವರೊಡನೆ ಯುದ್ಧಮಾಡುತ್ತಿರಲು, ಆದಿಪುರುಷನೂ ಷಡ್ಗುಣೈಶ್ವರ್ಯಸಂಪನ್ನನೂ ಆದ ನಾರಾಯಣನು ಮೋಹಿನಿಯ ರೂಪವನ್ನು ತಾಳಿದನು.

ತಾಮುದಾರವಿಭೂಷಾಢ್ಯಾಂ ಮೂರ್ತಾಂ ಶೃಂಗಾರದೇವತಾಂ।
ಸುರಾಸುರಾಃ ಸಮಾಲೋಕ್ಯ ನಿರತಾಃ ಸಮರೋದ್ಯಮಾತ್ ॥ ೩೭ ॥
ತನ್ಮಾಯಾಮೋಹಿತಾ ದೈತ್ಯಾಃ ಸುಧಾಪಾತ್ರಂ ಚ ಯಾಚಿತಾಃ।
ಕೃತ್ವಾ ತಾಮೇವ ಮಧ್ಯಸ್ಥಾಮರ್ಪಯಾಮಾಸುರಂಜಸಾ ॥ ೩೮ ॥
ತದಾ ದೇವೀ ತದಾದಾಯ ಮಂದಸ್ಮಿತಮನೋಹರಾ।
ದೇವೇಭ್ಯ ಏವ ಪೀಯೂಷಮಶೇಷಂ ವಿತತಾರ ಸಾ ॥ ೩೯ ॥
ತಿರೋಹಿತಾಮದೃಷ್ಟ್ವಾ ತಾಂ ದೃಷ್ಟ್ವಾ ಶೂನ್ಯಂ ಚ ಪಾತ್ರಕಂ।
ಜ್ವಲನ್ಮನ್ಯುಮುಖಾ ದೈತ್ಯಾ ಯುದ್ಧಾಯ ಪುನರುತ್ಥಿತಾಃ ॥ ೪೦ ॥
ಅಮರ್ತ್ಯೈರಮೃತಾಸ್ವಾದಾದತ್ಯದ್ಭುತ ಪರಾಕ್ರಮೈಃ।
ಪರಾಜಿತಾ ಮಹಾದೈತ್ಯಾ ನಷ್ಟಾಃ ಪಾತಾಲಮಭ್ಯಯುಃ ॥ ೪೧ ॥
ಇಮಂ ವೃತ್ತಾಂತಮಾಕರ್ಣ್ಯ ಭವಾನೀಪತಿರವ್ಯಯಃ।
ಪಾರ್ವತೀಸಹಿತೋ ವಿಷ್ಣುಮಾಜಗಾಮ ಸವಿಸ್ಮಯಃ ॥ ೪೨ ॥

---

೩೭. ಅನುಪಮವಾದ ದಿವ್ಯಾಭರಣಗಳನ್ನು ಧರಿಸಿ, ಸಾಕ್ಷಾತ್ ಶೃಂಗಾರದೇವತೆಯಾಗಿ ವಿರಾಜಿಸುತ್ತಿರುವ ಆತನ ಮೋಹಿನೀ ರೂಪವನ್ನು ಕಂಡು ಸುರಾಸುರರೆಲ್ಲರೂ ಯುದ್ಧವನ್ನು ನಿಲ್ಲಿಸಿ ಸುಮ್ಮನಾದರು.

೩೮. ಆ ಮೋಹಿನಿಯ ಮಾಯೆಗೆ ಮುಗ್ಧರಾಗಿ ದೈತ್ಯರು ಆಕೆಯು ಕೇಳಿದೊಡನೆಯೇ ಆಕೆಯನ್ನೇ ಮಧ್ಯಸ್ಥೆಯನ್ನಾಗಿ ಮಾಡಿ ಅಮೃತಕಲಶವನ್ನು ಆಕೆಯ ಕೈಗೆ ಕೊಟ್ಟುಬಿಟ್ಟರು.

೩೯. ಆಗಲಾ ದೇವಿಯು ಮುಗುಳ್ನಗೆಯನ್ನು ಸೂಸಿ ಮತ್ತಷ್ಟು ಮನೋಹರವಾಗಿ ಬೆಳಗುತ್ತ, ಆ ಅಮೃತಕಲಶವನ್ನು ತೆಗೆದುಕೊಂಡು ಅಮೃತವೆಲ್ಲವನ್ನೂ ದೇವತೆಗಳಿಗೇ ಹಂಚಿಕೊಟ್ಟಳು.

೪೦. ಆ ಮೋಹಿನಿಯೂ ಕಣ್ಮರೆಯಾಗಿ ಅಲ್ಲಿದ್ದ ಅಮೃತ ಕಲಶವೂ ಬರಿದಾಗಿರುವುದನ್ನು ಕಂಡು ದಾನವರೆಲ್ಲರೂ ಕೋಪದಿಂದ ಕೆರಳಿ ಮತ್ತೆ ದೇವತೆಗಳೊಡನೆ ಯುದ್ಧಕ್ಕೆ ನಿಂತರು.

೪೧. ಅಮೃತಪಾನಮಾಡಿ ಅತ್ಯದ್ಭುತ ಪರಾಕ್ರಮವನ್ನು ಪಡೆದಿದ್ದ ದೇವತೆಗಳಾದರೋ ಆ ದಾನವರೆಲ್ಲರನ್ನೂ ಬಹು ಬೇಗನೆಯೇ ಸೋಲಿಸಿದರು. ಆಗ ಆ ಮಹಾದೈತ್ಯರೆಲ್ಲರೂ ಪರಾಜಿತರಾಗಿ ಪಾತಾಳಲೋಕಕ್ಕೆ ಓಡಿಹೋದರು."

೪೨. ಈ ರೀತಿ ನಾರದಮಹರ್ಷಿಯಿಂದ ವೃತ್ತಾಂತವೆಲ್ಲವನ್ನೂ

**ಕ್ಷೀರೋದತೀರಗಂ ದೃಷ್ಟ್ವಾ ಸಸ್ತ್ರೀಕಂ ವೃಷವಾಹನಂ ।**
**ಭೋಗಿಭೋಗಾಸನಾದ್ವಿಷ್ಣುಃ ಸಮುತ್ಥಾಯ ಸಮಾಗತಃ ॥ ೪೩ ॥**
**ಸಸ್ನೇಹಂ ಗಾಢಮಾಲಿಂಗ್ಯ ಭವಾನೀಪತಿಮಚ್ಯುತಃ ।**
**ತದಾಗಮನಕಾರ್ಯಂ ಚ ಪೃಷ್ಟವಾನ್ವಿಷ್ಟರಶ್ರವಾಃ ॥ ೪೪ ॥**
**ತಮುವಾಚ ಮಹಾದೇವೋ ಭಗವಾನ್ ಪುರುಷೋತ್ತಮಂ ।**
**ಮಹಾಯೋಗೀಶ್ವರಃ ಶ್ರೀಮಾನ್ ಸರ್ವಸೌಭಾಗ್ಯಸುಂದರಃ ॥ ೪೫ ॥**
**ಸರ್ವಸಂಮೋಹಜನಕಮವಾಙ್ಮಾನಸಗೋಚರಂ ।**
**ಯದ್ರೂಪಂ ಭವತೋಽಪಾತ್ತಂ ತನ್ಮಹ್ಯಂ ಸಂಪ್ರದರ್ಶಯ ॥ ೪೬ ॥**
**ದ್ರಷ್ಟುಮಿಚ್ಛಾಮಿ ತೇ ರೂಪಂ ಶೃಂಗಾರಸ್ಯಾಧಿದೈವತಂ । [ ೪೭ ॥**
**ಅವಶ್ಯಂ ದರ್ಶನೀಯಂ ಮೇ ತ್ವಂ ಹಿ ಪ್ರಾರ್ಥಿತಕಾಮಧುಕ್ ॥**

---

ಕೇಳಿದ ತರುವಾಯ, ಅವ್ಯಯನಾದ ಆ ಪರಮೇಶ್ವರನು ಪರಮಾಶ್ಚರ್ಯ ಭರಿತನಾಗಿ ಕೂಡಲೇ ಪಾರ್ವತಿಯೊಡಗೂಡಿ ಶ್ರೀಮನ್ಮಹಾವಿಷ್ಣುವನ್ನು ಕಾಣಲು ಕ್ಷೀರಸಾಗರದ ಬಳಿಗೆ ಹೊರಟುಬಂದನು.

೪೩. ಶ್ರೀಮಹಾವಿಷ್ಣುವಾದರೋ ಸತಿಯೊಡನೆ ಬಿಜಿಮಾಡಿರುವ ವೃಷಭವಾಹನನಾದ ಪರಮೇಶ್ವರನನ್ನು ಕಂಡು ತಕ್ಷಣವೇ ಶೇಷಶಯನ ವನ್ನು ಬಿಟ್ಟೆದ್ದು, ಆತನ ಬಳಿಗೈದಿ ಪ್ರೀತಿಪೂರ್ವಕವಾಗಿ ಆತನನ್ನು ಇದಿರುಗೊಂಡನು.

೪೪. ಪ್ರೀತಿಪೂರ್ವಕವಾಗಿ ಆತನನ್ನು ಬಿಗಿದಪ್ಪಿದ ಬಳಿಕ ನಾರಾಯಣನು ಭವಾನೀವಲ್ಲಭನಾದ ಆ ಪರಮೇಶ್ವರನನ್ನು ಕುರಿತು ಬಂದಕಾರ್ಯವೇನೆಂದು ಕೇಳಿದನು.

೪೫. ಆಗ ಪೂಜ್ಯನೂ, ಮಹಾಯೋಗೀಶ್ವರನೂ, ಸಮಸ್ತಸೌಭಾಗ್ಯ ಗಳೊಡಗೂಡಿ ಬಹು ಸುಂದರನೂ ಆದ ಮಹೇಶ್ವರನು ಆ ಪುರುಷೋತ್ತಮ ನನ್ನು ಹೀಗೆ ಕೇಳಿದನು:

೪೬. "ಎಲೈ ವಿಭುವೇ, ನೀನು ಸಮುದ್ರಮಥನ ಕಾಲದಲ್ಲಿ ಎಲ್ಲ ರನ್ನೂ ಮುಗ್ಧಗೊಳಿಸುವಂತಹುದೂ, ಮಾತಿಗೂ ಮನಸ್ಸಿಗೂ ನಿಲುಕ ದಷ್ಟು ಮನೋಹರವಾದುದೂ ಆದ ಮೋಹಿನಿಯ ರೂಪವನ್ನು ತಾಳಿದೆ ಯಷ್ಟೆ? ಅದನ್ನು ನನಗೆ ತೋರಿಸು.

೪೭. ಈಗ ನಾನು ಶೃಂಗಾರಕ್ಕೆ ಅಧಿದೈವತವಾದ ಆ ಮನೋಹರ ರೂಪವನ್ನು ನೋಡಬಯಸಿರುವೆನು. ಬೇಡಿದವರಿಗೆ ಕಲ್ಪವೃಕ್ಷವೆನಿಸಿದ

**ಇತಿ ಸಂಪ್ರಾರ್ಥಿತಃ ಶಶ್ವನ್ಮಹಾದೇವೇನ ತೇನ ಸಃ ।**
**ತಸ್ಯಾಂತಿಕೇ ತಿರೋಧತ್ತ ಮಹಾಯೋಗೀಶ್ವರೋ ಹರಿಃ ॥ ೪೮ ॥**
**ಶರ್ವೋಽಪಿ ಸರ್ವತಶ್ಚಕ್ಷುರ್ಮುಹುರ್ವ್ಯಾಪಾರಯನ್ ಕ್ವಚಿತ್ ।**
**ಅದೃಷ್ಟಪೂರ್ವಮಾರಾಮಮಭಿರಾಮಂ ವ್ಯಲೋಕಯತ್ ॥ ೪೯ ॥**
**ವಿಕಸತ್ಕುಸುಮಶ್ರೇಣೀವಿನೋದಿಮಧುಪಾಲಿಕಂ ।**
**ಚಂಪಕಸ್ತಬಕಾಮೋದಸುರಭೀಕೃತದಿಕ್ತಟಂ ॥ ೫೦ ॥**
**ಮಾಕಂದವೃಂದಮಾಧ್ವೀಕಮಾದ್ಯದುಲ್ಲೋಲ ಕೋಕಿಲಂ ।**
**ಅಶೋಕಮಂಡಲೀಕಾಂಡ ಸತಾಂಡವಶಿಖಂಡಿಕಂ ॥ ೫೧ ॥**
**ಭೃಂಗಾಲಿರವಝುಂಕಾರಜಿತವಲ್ಲಕಿ ನಿಃಸ್ವನಂ ।**
**ಪಾಟಲೋದಾರಸೌಭಾಗ್ಯಪಟಲೀ ಕುಸುಮೋಜ್ಜ್ವಲಂ ॥ ೫೨ ॥**

---

ನೀನು ಆ ರೂಪವನ್ನು ನನಗೆ ಅವಶ್ಯವಾಗಿಯೂ ದರ್ಶನಮಾಡಿಸಬೇಕು.''

೪೮. ಹೀಗೆ ಪರಶಿವನು ಅಡಿಗಡಿಗೂ ತನ್ನನ್ನು ಪ್ರಾರ್ಥಿಸಲು ಮಹಾಯೋಗೀಶ್ವರನಾದ ಶ್ರೀಮನ್ನಾರಾಯಣನು ಹಾಗೆಯೇ ಆಗಲೆಂದು ನುಡಿದು ಅಲ್ಲಿಯೇ ಕಣ್ಮರೆಯಾದನು.

೪೯. ಶರ್ವನೂ ಸಹ ಆ ಸಮಯದಲ್ಲಿ ಎಲ್ಲೆಡೆಗಳಲ್ಲಿಯೂ ದೃಷ್ಟಿಯನ್ನು ಪ್ರಸರಿಸುತ್ತಾ ಅಲ್ಲಿಯೇ ಒಂದೆಡೆಯಲ್ಲಿ ಹಿಂದಾವಾಗಲೂ ನೋಡದಿದ್ದ ರಮಣೀಯವಾದ ಉದ್ಯಾನವೊಂದನ್ನು ನೋಡಿದನು.

೫೦. ಆ ವನವಾದರೋ ಬಹು ಮನೋಹರವಾಗಿದ್ದಿತು. ಅಲ್ಲಿನ ವೃಕ್ಷಗಳಲ್ಲಿ ಅರಳಿ ನಗೆಯನ್ನು ಬೀರುತ್ತಿದ್ದ ಹೂಗೊಂಚಲುಗಳಲ್ಲಿ ದುಂಬಿಗಳ ಸಾಲು ಸಂತೋಷದಿಂದ ಮೊರೆಯುತ್ತಿದ್ದಿತು. ಅಲ್ಲಿ ಸಂಪಗೆಯ ಹೂಗಳ ಸುವಾಸನೆಯಿಂದ ದಶದಿಶಗಳಾದ್ಯಂತವೂ ಸುವಾಸಿತಗಳಾಗಿದ್ದುವು.

೫೧. ಸಿಹಿ ಮಾವಿನ ಮರಗಳ ಹೂ ಚಿಗುರುಗಳನ್ನು ಮೆದ್ದು ಮದಿಸಿ ಕುಹೂರವವನ್ನು ಮಾಡುತ್ತಿದ್ದ ಕೋಗಿಲೆಗಳಿಂದ ಆ ವನವೆಲ್ಲವೂ ತುಂಬಿದ್ದಿತು. ಅಲ್ಲಲ್ಲಿ ನವಿಲುಗಳು ಅಶೋಕವೃಕ್ಷಗಳ ಕೊಂಬೆಗಳಲ್ಲಿ ಕುಳಿತು ನರ್ತನಮಾಡುತ್ತಿದ್ದವು.

೫೨. ಆ ವನದಲ್ಲಿ ಝೇಂಕರಿಸುತ್ತಿದ್ದ ದುಂಬಿಸಾಲುಗಳ ಧ್ವನಿಯು ವೀಣಾನಾದವನ್ನು ಮೀರಿಸಿದ್ದಿತು. ಕೆಂಪೂಗೆದು ಪರಿಮಳದಿಂದ ತುಂಬಿ ತುಳುಕುತ್ತಿರುವ ಪಾಟಲೀಕುಸುಮಗಳಿಂದ ಆ ವನವೇ ಬೆಳಗುತ್ತಿದ್ದಿತು.

ತಮಾಲತಾಲ ಹಿಂತಾಲಕೃತಮಾಲವಿಕಾಸಿತಂ।
ಪರ್ಯಂತದೀರ್ಘಿಕಾದೀರ್ಘ ಪಂಕಜ ಶ್ರೀ ಪರಿಷ್ಕೃತಂ ॥ ೫೩ ॥
ವಾತಪೋತಚಲಚ್ಚಾರು ಪಲ್ಲವೋತ್ಫುಲ್ಲಪುಷ್ಪಕಂ।
ಸಂತಾನಪ್ರಸವಾಮೋದ ಸಂತಾನಾಧಿಕವಾಸಿತಂ ॥ ೫೪ ॥
ತತ್ರ ಸರ್ವರ್ತು ಪುಷ್ಪಾಢ್ಯೇ ಸರ್ವಲೋಕಮನೋಹರೇ।
ಪಾರಿಜಾತತರೋರ್ಮೂಲೇ ಕಾಂತಾ ಕಾಚಿದದೃಶ್ಯತ ॥ ೫೫ ॥
ಬಾಲಾರ್ಕಪಾಟಲಾಕಾರಾ ನವಯೌವನದರ್ಪಿತಾ।
ಉತ್ಕೃಷ್ಟಪದ್ಮರಾಗಾಭ ಚರಣಾಬ್ಜನಖಚ್ಛಟಾ ॥ ೫೬ ॥
ಯಾವಕಶ್ರೀ ನಿರ್ವ್ಯಪೇಕ್ಷಪಾದಲೌಹಿತ್ಯವಾಹಿನೀ।
ಕಲನಿಃಸ್ವನಮಂಜೀರಕ್ವಣತ್ಕಿಂಕಿಣಿಮಂಡಿತಾ ॥ ೫೭ ॥

---

೫೩. ತಮಾಲ, ತಾಲ, ಹಿಂತಾಲ, ಕೃತಮಾಲ ಮೊದಲಾದ ವೃಕ್ಷಗಳಿಂದ ಅಲಂಕೃತವಾಗಿ ಅಕ್ಕಪಕ್ಕಗಳಲ್ಲಿರುವ ಕೊಳಗಳಲ್ಲಿನ ಅರಳಿದ ತಾವರೆಯ ಕಾಂತಿಯಿಂದ ಆ ವನವು ಕಂಗೊಳಿಸುತ್ತಿದ್ದಿತು.

೫೪. ಮಲಯಮಾರುತವು ಬೀಸಿ ಚಂಚಲವಾದ ತಳಿರೂ, ಅರಳೂ, ಉಳ್ಳುದಾಗಿ ಕಲ್ಪವೃಕ್ಷದ ಹೂಗಳ ಸುವಾಸನೆಗಿಂತಲೂ ಹಸನಾದ ವಾಸನೆಯನ್ನು ಸೂಸುತ್ತ ಆ ವನವು ಬಹು ಮನೋಹರವಾಗಿದ್ದಿತು.

೫೫. ಹೀಗೆ, ಎಲ್ಲಾ ಋತುಗಳಲ್ಲಿಯೂ ಕುಸುಮಿಸಿರುವ ಫಲಪುಷ್ಪ ವೃಕ್ಷಗಳಿಂದ ತುಂಬಿ ಸರ್ವಲೋಕ ಮನೋಹರವೆನಿಸಿದ ಆ ಮಹಾವನದ ಪಾರಿಜಾತವೃಕ್ಷವೊಂದರಡಿಯಲ್ಲಿ ಒಬ್ಬಾನೊಬ್ಬ ಕಾಂತಾಮಣಿಯು ಕಾಣಿಸಿದಳು.

೫೬. ಆಕೆಯ ಸೌಂದರ್ಯವು ಅನುಪಮವೂ ವರ್ಣನಾತೀತವೂ ಆಗಿದ್ದಿತು. ಆಗತಾನೇ ಉದಿಸಿದ ಸೂರ್ಯನಂತೆ ರಾಗರಂಜಿತೆಯಾಗಿ, ಹೊಸತಾದ ಯೌವನದಿಂದ ಬೀಗಿ, ಶ್ರೇಷ್ಠವಾದ ಪದ್ಮರಾಗಮಣಿಯ ಕಾಂತಿಯನ್ನೊಳಗೊಂಡು ಕಮಲೋಪಮವಾದ ಪಾದಗಳ ಉಗುರುಗಳ ಕಾಂತಿಯಿಂದ ಆ ಲಲನಾಮಣಿಯು ಶೋಭಿಸುತ್ತಿದ್ದಳು.

೫೭. ಅರಗಿನ ಅಲಂಕಾರವೇ ಬೇಕಿಲ್ಲದ ತನ್ನ ಪಾದಗಳ ಕೆಂಪು ಕಾಂತಿಯನ್ನು ಹೊರಚಿಮ್ಮುತ್ತ, ಘಲುಘಲನೆ ಇಂಪಾಗಿ ಧ್ವನಿಗೊಳಿಸುತ್ತಿರುವ ಕಾಲಂದುಗೆಗಳ ಕಿರುಗೆಜ್ಜೆಗಳಿಂದಲಂಕೃತೆಯಾಗಿ ಆ ಶೋಭನಾಂಗಿಯು ಮೆರೆಯುತ್ತಿದ್ದಳು.

**ಅನಂಗವೀರತೂಣೀರದರ್ಪೋನ್ಮಥನಜಂಘಿಕಾ ।**
**ಕರಿಶುಂಡಾಲಕದಲೀಕಾಂತಿತುಲ್ಯೋರು ಶೋಭಿನೀ ॥ ೫೮ ॥**
**ಅರುಣೇನ ದುಕೂಲೇನ ಸುಸ್ಪರ್ಶೇನ ತನೀಯಸಾ ।**
**ಅಲಂಕೃತನಿತಂಬಾಢ್ಯಾ ಜಘನಾಭೋಗಭಾಸುರಾ ॥ ೫೯ ॥**
**ನವಮಾಣಿಕ್ಯಸನ್ನದ್ಧ ಹೇಮಕಾಂಚೀ ವಿರಾಜಿತಾ ।**
**ನತನಾಭಿಮಹಾವರ್ತ ತ್ರಿವಲ್ಯೂರ್ಮಿಪ್ರಭಾಸ್ಫುರೀ ॥ ೬೦ ॥**
**ಸ್ತನಕುಡ್ಮಲಕಾಂದೋಲನ್ಮುಕ್ತಾದಾಮ ಶತಾವೃತಾ ।**
**ಅತಿಪೀವರವಕ್ಷೋಜ ಭಾರಭಂಗುರಮಧ್ಯಭೂಃ ॥ ೬೧ ॥**
**ಶಿರೀಷಕೋಮಲಭುಜಾ ಕಂಕಣಾಂಗದಶಾಲಿನೀ ।**
**ಸೋರ್ಮಿಕಾಂಗುಲಿರುನ್ಮೃಷ್ಟ ಶಂಖಸುಂದರಕಂಧರಾ ॥ ೬೨ ॥**

---

೫೮. ಆ ಸುಂದರಿಯು, ಮನ್ಮಥನ ಬಲವತ್ತರವಾದ ಬತ್ತಳಿಕೆಯ ಹೆಮ್ಮೆಯನ್ನಡಗಿಸುವಂತಹ ಜಂಘಾಪ್ರದೇಶವುಳ್ಳವಳಾಗಿ, ಆನೆಯ ಸೊಂಡಿಲನಂತೆಯೂ, ಬಾಳೆಯ ಕಂಬದಂತೆಯೂ ಇರುವ ತೊಡೆಗಳ ಕಾಂತಿಯಿಂದ ರಾರಾಜಿಸುತ್ತಿದ್ದಳು.

೫೯. ಮೃದುವಾಗಿಯೂ, ತೆಳುವಾಗಿಯೂ ಇರುವ ರಕ್ತದುಕೂಲ ದಿಂದ ಆಚ್ಛಾದಿತವಾಗಿ ಶೋಭಿಸುತ್ತಿರುವ ನಿತಂಬಪ್ರದೇಶವುಳ್ಳವ ಳಾಗಿಯೂ, ಕಾಂತಿಯುತವಾದ ಜಘನಪ್ರದೇಶವುಳ್ಳವಳಾಗಿಯೂ ಆ ತನ್ವಂಗಿಯು ಪ್ರಕಾಶಿಸುತ್ತಿದ್ದಳು.

೬೦. ಹೊಸತಾದ ಮಾಣಿಕ್ಯಮಣಿಗಳು ಕೆತ್ತಿದ ಚಿನ್ನದೊಡ್ಯಾಣ ದಿಂದ ವಿರಾಜಿಸುತ್ತ, ಆಳವಾದ ನಾಭಿಪ್ರದೇಶದಿಂದ ಸುಳಿಸುಳಿಯಾಗಿರುವ ತ್ರಿವಳಿಗಳೆಂಬ ಅಲೆಗಳ ಕಾಂತಿಪ್ರವಾಹದಿಂದ ಕೂಡಿ ಆ ಮನೋಹರಾ ಕಾರೆಯು ಅತ್ಯಂತವಾಗಿ ಶೋಭಿಸುತ್ತಿದ್ದಳು.

೬೧. ಕಮಲದ ಮೊಗ್ಗನ್ನನುಕರಿಸುವ ಸ್ತನಗಳ ಮೇಲೆ ಜೋಲಾ ಡುತ್ತಿರುವ ನೂರಾರು ಮುತ್ತಿನ ಮಾಲೆಗಳಿಂದಲಂಕೃತೆಯಾಗಿ, ಬಹು ಗಡುಸಾದ ಮತ್ತು ದುಂಡಗಿರುವ ಆ ಸ್ತನಗಳ ಭಾರದಿಂದಲೇ ಬಗ್ಗಿದ ನಡುವುಳ್ಳವಳಾಗಿ ಆ ಕಾಂತಾಮಣಿಯು ಒಪ್ಪುತ್ತಿದ್ದಳು.

೬೨. ಆ ವನಿತೆಯು ಶಿರೀಷಪುಷ್ಪಗಳಂತೆ ಕೋಮಲವಾದ ಭುಜ ಗಳುಳ್ಳವಳೂ, ಕಂಕಣಗಳನ್ನು ಬಾಹುಜಿಗೆಗಳನ್ನು ತೊಟ್ಟವಳೂ, ಉಂಗುರಗಳಿಂದ ಕಂಗೊಳಿಸುವ ಬೆರಳುಗಳುಳ್ಳವಳಾಗಿ, ಬೆಳ್ಳನೆ

**ಮುಖದರ್ಪಣವೃಂತಾಭಚುಬುಕಾ ಪಾಟಲಾಧರಾ ।**
**ಕುಂದಕುಡ್ಮಲಸಚ್ಛಾಯದಂತದರ್ಶಿತ ಚಂದ್ರಿಕಾ ॥ ೬೩ ॥**
**ಸ್ಥೂಲಮೌಕ್ತಿಕಸನ್ನದ್ಧ ನಾಸಾಭರಣ ಭಾಸುರಾ ।**
**ಕೇತಕಾಂತರ್ದಲದ್ರೋಣೀ ದೀರ್ಘದೀರ್ಘವಿಲೋಚನಾ ॥ ೬೪ ॥**
**ಅರ್ಧೇಂದುತುಲಿತಾ ಫಾಲೇ ಸಮ್ಯಕ್ಕ್ಲೃಪ್ತಾಲಕಚ್ಛದಾ ।**
**ವ್ಯಾಲೀವತಂಸಮಾಣಿಕ್ಯಕುಂಡಲಾ ಮಂಡಿತಶ್ರುತಿಃ ॥ ೬೫ ॥**
**ನವಕರ್ಪೂರಕಸ್ತೂರೀ ಸದಾಮೋದಿತವೀಟಿಕಾ ।**
**ಸ್ಫುರತ್ಕಸ್ತೂರೀತಿಲಕಾ ನೀಲಕುಂತಲಸಂಹತಿಃ ॥ ೬೬ ॥**
**ಸೀಮಂತರೇಖಾವಿನ್ಯಸ್ತಸಿಂದೂರಶ್ರೇಣಿ ಭಾಸುರಾ ।**
**ಸ್ಫುರಚ್ಚಂದ್ರಕಲೋತ್ತಂಸಾ ಮದಾಲೋಲವಿಲೋಚನಾ ॥ ೬೭ ॥**

---

ತೊಳೆದ ಶಂಖದಂತೆ ಸುಂದರವಾದ ಕಂಠವುಳ್ಳವಳೂ ಆಗಿ ಕಂಗೊಳಿಸುತ್ತಿದ್ದಳು.

೬೩. ಆ ಪ್ರಮದೆಯು, ಮುಖದರ್ಪಣದಂತೆಯೂ, ಬೀಸಣಿಗೆಯಂತೆಯೂ, ಗುಂಡಾದ ಗಲ್ಲವೂ, ಕೆಂಪಾದ ತುಟಿಗಳೂ ಉಳ್ಳವಳಾಗಿ ಮೆರೆಯುತ್ತಿದ್ದಳು. ಮೊಲ್ಲೆಯ ಮೊಗ್ಗುಗಳಂತೆ ಬೆಳಗುತ್ತಿರುವ ಆಕೆಯ ದಂತಪಂಕ್ತಿಯಿಂದ ಬೆಳುದಿಂಗಳ ಕಾಂತಿಯೇ ಪ್ರಕಟವಾಗುತ್ತಲಿದ್ದಿತು.

೬೪. ತೋರಮುತ್ತಿನ ಮೂಗುತಿಯನ್ನಿಟ್ಟು ಬೆಳಗುತ್ತಿರುವ ಆ ದೇವಿಯು, ತಾಳೆಯ ಎಸಳಿನಂತೆ ದೀರ್ಘವಾದ ಕಂಗಳುಳ್ಳವಳಾಗಿ ರಾರಾಜಿಸುತ್ತಿದ್ದಳು.

೬೫. ಅರ್ಧ ಚಂದ್ರನಂತೆ ಪ್ರಕಾಶಿಸುತ್ತಿರುವ ಹಣೆಯುಳ್ಳವಳಾಗಿ, ಚೆನ್ನಾಗಿ ನೇರ್ಪಡಿಸಿದ ಮುಂಗುರುಳುಗಳುಳ್ಳವಳಾಗಿ, ನಾಗಮಣಿಗಳು ಕೆತ್ತಿದ ಕರ್ಣಕುಂಡಲಗಳಿಂದಲಂಕೃತವಾದ ಕರ್ಣಗಳುಳ್ಳವಳಾಗಿ ಆಕೆಯು ಬಹುವಾಗಿ ಶೋಭಿಸುತ್ತಿದ್ದಳು.

೬೬. ಹೊಸತಾದ ಕರ್ಪೂರಕಸ್ತೂರಿಗಳಿಂದ ಸುವಾಸಿತವಾದ ತಾಂಬೂಲವನ್ನು ಮೆಲ್ಲುತ್ತ, ಥಳಥಳಿಸುತ್ತಿರುವ ಕಸ್ತೂರೀತಿಲಕವನ್ನಿಟ್ಟು, ಕಪ್ಪಾದ ಕೇಶರಾಶಿಯಿಂದ ಕೂಡಿ ಆಕೆಯು ಬಹುವಾಗಿ ಬೆಳಗುತ್ತಿದ್ದಳು.

೬೭. ಸೀಮಂತರೇಖೆಯುಲ್ಲಿಟ್ಟ ಚಂದ್ರದ ಗೆರೆಯಿಂದ ಪ್ರಕಾಶಿಸುವವಳಾಗಿ, ಬೆಳಗುತ್ತಿರುವ ಚಂದ್ರನ ಕಲೆಯನ್ನೇ ಕಿರೀಟವನ್ನಾಗಿ ಧರಿಸಿ,

ಸರ್ವ ಶೃಂಗಾರವೇಷಾಢ್ಯಾಂ ಸರ್ವಾಭರಣ ಭೂಷಿತಾಂ ।
ತಾಮಿಮಾಂ ಕಂದುಕಕ್ರೀಡಾಪರಾಮಾಲೋಲ ಭೂಷಣಾಂ । [೬೮॥
ದೃಷ್ಟ್ವಾ ಕ್ಷಿಪ್ರಮುಮಾಂ ತ್ಯಕ್ತ್ವಾ ಸೋಽನ್ವಧಾವದಥೇಶ್ವರಃ ॥
ಗೃಹೀತ್ವಾ ಕಥಮಪ್ಯೇನಾಮಾಲಿಲಿಂಗ ಮುಹುರ್ಮುಹುಃ ।
ಉದ್ಧೂಯೋದ್ಧೂಯ ಸಾಪ್ಯೇನಂ ಧಾವತಿ ಸ್ಮ ಸುದೂರತಃ ॥ ೬೯ ॥
ಪುನರ್ಗೃಹೀತ್ವಾ ತಾಮೀಶಃ ಕಾಮಂ ಕಾಮವಶೀಕೃತಃ ।
ಆಶ್ಲಿಷ್ಯದತಿವೇಗೇನ ತದ್ವೀರ್ಯಂ ಪ್ರಚ್ಯುತಂ ತದಾ ॥ ೭೦ ॥
ತತಃ ಸಮುದಿತೋ ದೇವೋ ಮಹಾಶಾಸ್ತಾ ಮಹಾಬಲಃ ।
ಅನೇಕ ಕೋಟಿ ದೈತ್ಯೇಂದ್ರ ಗರ್ವನಿರ್ವಾಪಣಕ್ಷಮಃ ॥ ೭೧ ॥
ತದ್ವೀರ್ಯಬಿಂದು ಸಂಸ್ಪರ್ಶಾತ್ಸಾಭೂಮಿಸ್ತತ್ರ ತತ್ರ ಚ ।
ರಜತಸ್ವರ್ಣವರ್ಣಾಭೂತ್ತತ್ಕ್ಷಣಾದ್ವಿಂಧ್ಯಮರ್ದನ ॥ ೭೨ ॥

---

ಮದದಿಂದ ಆಲುತ್ತಿರುವ ಕಣ್ಣುಗಳುಳ್ಳವಳಾಗಿ ಆ ಲಲನಾಮಣಿಯು ಕಂಗೊಳಿಸುತ್ತಿದ್ದಳು.

೬೮. ಸರ್ವಾಭರಣಭೂಷಿತೆಯಾಗಿ ಶೃಂಗಾರವೇ ಮೂರ್ತಿವೆತ್ತಂತೆ ತೋರುತ್ತ ಚಂಡನಾಡುವುದರಲ್ಲಿ ಆಸಕ್ತೆಯಾಗಿರಲು, ಭೂಷಣಗಳೆಲ್ಲವೂ ಅತ್ತಿತ್ತ ಜೋಲಾಡುತ್ತ ಮತ್ತಷ್ಟು ವಿಲಾಸವನ್ನು ಮೆರೆಯುತ್ತಿದ್ದ ಆ ಯುವತಿಯನ್ನು ಕಂಡು ಒಡನೆಯೇ ಪರಮೇಶ್ವರನು, ಪಾರ್ವತಿಯನ್ನು ತೊರೆದು ಅವಳಲ್ಲಿಗೆ ಓಡಿಹೋದನು.

೬೯. ತರುವಾಯ ಆತನು ಅವಳನ್ನು ಹೇಗೆಹೇಗೆಯೋ ಹಿಡಿದು ಅಡಿಗಡಿಗೂ ಆಲಿಂಗಿಸಿದನು. ಆ ದೇವಿಯೂ ಸಹ ಆ ಭವನಿಂದ ಮತ್ತೆ ಮತ್ತೆ ಬಿಡಿಸಿಕೊಂಡು ದೂರದೂರವಾಗಿ ಓಡಿಹೋಗುತ್ತಿದ್ದಳು.

೭೦. ಮನ್ಮಥನ ಹಿಡಿಗೊಳಗಾದ ಆ ಪರಮೇಶ್ವರನು ಅವಳನ್ನು ಹಿಂಬಾಲಿಸಿ ಹೋಗಿ ತನ್ನ ಮನಬಂದಂತೆ ಮತ್ತೆಮತ್ತೆ ಅವಳನ್ನು ಬಿಗಿದಪ್ಪಿಕೊಳ್ಳುತ್ತಿರಲು ಆತನ ವೀರ್ಯವು ಸ್ಖಲನವಾಗಿಹೋಯಿತು.

೭೧. ಒಡನೆಯೇ ಮಹಾಬಲಾಢ್ಯನೂ, ಅನೇಕಕೋಟಿ ದೈತ್ಯರ ಗರ್ವವನ್ನಳಿಸಲು ಸಮರ್ಥನೂ ಆದ ಶಾಸ್ತೃದೇವನು ಅಲ್ಲಿಯೇ ಜನಿಸಿದನು.

೭೨. ಎಲೈ ವಿಂಧ್ಯಮರ್ದನನಾದ ಅಗಸ್ತ್ಯನೇ! ಆ ಪರಮೇಶ್ವರನ ವೀರ್ಯಬಿಂದುಗಳ ಸೋಕಿನಿಂದ ಅಲ್ಲಲ್ಲಿನ ನೆಲವೆಲ್ಲವೂ ಬೆಳ್ಳಿಬಂಗಾರಗಳ ಗಣಿಗಳಾಗಿ ಪರಿಣಮಿಸಿದುವು.

**ತತ್ರೈವಾಂತರ್ದಧೇ ಸಾಪಿ ದೇವತಾ ವಿಶ್ವಮೋಹಿನೀ।**
**ನಿರ್ವೃತಃ ಸ ಗಿರೀಶೋಽಪಿ ಗಿರಿಂ ಗೌರೀಸಖೋ ಯಯೌ ॥ ೭೩ ॥**
**ಅಥಾದ್ಭುತಮಿದಂ ವಕ್ಷ್ಯೇ ಲೋಪಾಮುದ್ರಾಪತೇ ಶೃಣು।**
**ಯನ್ನ ಕಸ್ಯಚಿದಾಖ್ಯಾತಂ ಮಮೈವ ಹೃದಯೇ ಸ್ಥಿತಂ ॥ ೭೪ ॥**
**ಪುರಾ ಭಂಡಾಸುರೋ ನಾಮ ಸರ್ವದೈತ್ಯಶಿಖಾಮಣಿಃ। [೭೫ ॥**
**ಪೂರ್ವದೇವಾನ್‌ಬಹುವಿಧಾನ್ ಯಃ ಸ್ರಷ್ಟುಂ ಸ್ವೇಚ್ಛಯಾ ಪಟುಃ॥**
**ವಿಶುಕ್ರಂ ನಾಮ ದೈತೇಯವರ್ಗಸಂರಕ್ಷಣ ಕ್ಷಮಂ।**
**ಶುಕ್ರತುಲ್ಯಂ ವಿಚಾರಜ್ಞಂ ದಕ್ಷಾಂಸೇನ ಸಸರ್ಜ ಸಃ ॥ ೭೬ ॥**
**ವಾಮಾಂಸೇನ ವಿಷಂಗಂ ಚ ಸೃಷ್ಟವಾನ್‌ದುಷ್ಟಶೇಖರಃ।**
**ಧೂಮಿನೀ ನಾಮಧೇಯಾಂ ಚ ಭಗಿನೀಂ ಭಂಡದಾನವಃ ॥ ೭೭ ॥**

---

೭೩. ಅನಂತರದಲ್ಲಿ ಆ ವಿಶ್ವಮೋಹಿನಿಯೂ ಅಲ್ಲಿಯೇ ಅಂತರ್ಧಾನವಾದಳು. ಗೌರೀಸಖನಾದ ಗಿರೀಶನೂ ಸಹ ನಿರ್ವೃತಿಯನ್ನು ಪಡೆದು ಹಿಮಗಿರಿಗೈತಂದನು.

೭೪. ಎಲೈ ಲೋಪಾಮುದ್ರಾಪತಿಯಾದ ಅಗಸ್ತ್ಯನೇ! ಆಮೇಲಣ ಅದ್ಭುತವನ್ನಾದರೂ ಆಲಿಸು. ನಾನಿದುವರಿಗೆ ಈ ವಿಷಯವನ್ನು ಯಾರಿಗೂ ಹೇಳಿರುವುದಿಲ್ಲ. ಇದು ನನ್ನ ಹೃದಯದಲ್ಲಿಯೇ ಇರುವಂಥದು.

೭೫. ಪೂರ್ವದಲ್ಲಿ ಭಂಡಾಸುರನೆಂಬ ದಾನವನೊಬ್ಬನಿದ್ದನು. ಸಮಸ್ತ ದಾನವರಿಗೂ ಅವನೇ ಶಿಖಾಮಣಿಪ್ರಾಯನಾಗಿದ್ದನು. ಅವನು ಪೂರ್ವದೇವತೆಗಳೆನಿಸಿದ ಬಗೆಬಗೆಯ ದಾನವರನ್ನೂ ತನ್ನಿಷ್ಟಾನುಸಾರವಾಗಿ ಸೃಷ್ಟಿಮಾಡಲು ಸಮರ್ಥನಾಗಿದ್ದನು.

೭೬. ದಾನವಸಮೂಹವನ್ನು ಸಂರಕ್ಷಿಸುವುದರಲ್ಲಿ ದಕ್ಷನಾಗಿಯೂ, ದೈತ್ಯಗುರುವಾದ ಶುಕ್ರಾಚಾರ್ಯನಿಗೆ ಸಮಾನನಾಗಿಯೂ, ಮಂತ್ರಾಲೋಚನೆಯ ವಿಚಾರಗಳೆಲ್ಲವನ್ನೂ ತಿಳಿದವನಾಗಿಯೂ ಇರುವ ವಿಶುಕ್ರನೆಂಬ ದಾನವನನ್ನು ಆ ದೈತ್ಯನು ತನ್ನ ಬಲ ಹೆಗಲಿನಿಂದಲೇ ಸೃಜಿಸಿದನು.

೭೭. ದುಷ್ಟಶೇಖರನಾದ ಆ ಭಂಡದಾನವನು ತನ್ನೆಡಹೆಗಲಿನಿಂದ ವಿಷಂಗನೆಂಬ ದೈತ್ಯನನ್ನು ಸೃಜಿಸಿ, ತರುವಾಯ ಧೂಮಿನೀ ಎಂಬ ತಂಗಿಯೊಬ್ಬಳನ್ನೂ ಪಡೆದನು.

ಭ್ರಾತೃಭ್ಯಾಮುಗ್ರವೀರ್ಯಾಭ್ಯಾಂ ಸಹಿತಃ ಸಹತಾಹಿತಃ। [೭೮ ॥
ಬ್ರಹ್ಮಾಂಡಂ ಖಂಡಯಾಮಾಸ ಶೌರ್ಯವೀರ್ಯಸಮುಚ್ಛ್ರಿತಃ॥
ಬ್ರಹ್ಮವಿಷ್ಣುಮಹೇಶಾಶ್ಚ ತಂ ದೃಷ್ಟ್ವಾ ದೀಪ್ತತೇಜಸಂ।
ಪಲಾಯನಪರಾಃ ಸದ್ಯಃ ಸ್ವೇ ಸ್ವೇ ಧಾಮ್ನಿ ಸದಾಽವಸನ್ ॥ ೭೯ ॥
ತದಾನೀಮೇವ ತದ್ಬಾಹುಸಂಮರ್ದನವಿಮೂರ್ಛಿತಾಃ।
ಶ್ವಸಿತುಂ ಚಾಪಿ ಪಟವೋ ನಾಭವನ್ನಾಕಿನಾಂ ಗಣಾಃ ॥ ೮೦ ॥
ಕೇಚಿತ್ಪಾತಾಲಗರ್ಭೇಷು ಕೇಚಿದಂಬುಧಿವಾರಿಷು।
ಕೇಚಿದ್ದಿಗಂತಕೋಣೇಷು ಕುಂಜೇಷ್ವೇಕೇ ಚ ಭೂಭೃತಾಂ ॥ ೮೧ ॥
ವಿಪಿನಂ ಭೃಶವಿತ್ರಸ್ತಾಸ್ತ್ಯಕ್ತದಾರಸುತಶ್ರಿಯಃ।
ಭ್ರಷ್ಟಾಧಿಕಾರಾಃ ಪಶವೋ ವಿಚೇರುಶ್ಛನ್ನವೇಷಕಾಃ ॥ ೮೨ ॥

---

೭೮. ಇದಾದಮೇಲೆ ಆ ಭಂಡನು ಭಯಂಕರ ಪರಾಕ್ರಮಿಗಳಾದ ವಿಶುಕ್ರ ವಿಷಂಗರೆಂಬ ತನ್ನ ತಮ್ಮಂದಿರೊಡಗೂಡಿ, ಶೌರ್ಯ ಸ್ಥೈರ್ಯ ಪರಾಕ್ರಮಗಳಿಂದ ಕೊಬ್ಬಿ ಬ್ರಹ್ಮಾಂಡವನ್ನೇ ಖಂಡಿಸಲುಪಕ್ರಮಿಸಿದನು.

೭೯. ಆಗ ಬ್ರಹ್ಮ ವಿಷ್ಣು ಮಹೇಶ್ವರರು ಮೂವರೂ, ಉಗ್ರ ತೇಜಸ್ವಿಯಾದ ಆ ದಾನವನನ್ನು ಕಂಡು, ಕೂಡಲೇ ಓಡಿಹೋಗಿ ಯಾವಾಗಲೂ ತಮ್ಮ ತಮ್ಮ ನೆಲೆಗಳಲ್ಲಿಯೇ ವಾಸಮಾಡ ತೊಡಗಿದರು.

೮೦. ಆ ಸಮಯದಲ್ಲಿಯೇ ದೇವತೆಗಳ ಸಮೂಹಗಳೆಲ್ಲವೂ ಆ ದಾನವನ ತೋಳತೆಕ್ಕೆಯಲ್ಲಿ ಸಿಕ್ಕಿಬಿದ್ದು ಮೂರ್ಛೆಗೊಂಡು ಉಸಿರಾಡಲೂ ಶಕ್ತಿಯಿಲ್ಲದೆ ತಳಮಳಿಸಿಹೋದರು.

೮೧. ಅವರಲ್ಲಿ ಕೆಲವರು ಪಾತಾಳಲೋಕದ ನಡುವೆಯೂ, ಕೆಲವರು ಸಪ್ತಸಾಗರಗಳಲ್ಲಿಯೂ, ಮತ್ತೆ ಕೆಲವರು ಬೆಟ್ಟಗಳ ಬಳಿ ಮನೆಗಳಲ್ಲಿಯೂ, ಮತ್ತೆ ಕೆಲವರು ನಾನಾ ದಿಕ್ಕುಗಳಿಗೆ ಓಡಿಹೋಗಿ ಅಲ್ಲಿಯೂ ಅಡಗಿಕೊಂಡರು.

೮೨. ಕೆಲವರಂತೂ ತಮ್ಮ ತಮ್ಮ ಅಧಿಕಾರಪದವಿಗಳಿಂದ ಭ್ರಷ್ಟರಾಗಿ, ಹೆಂಡತಿ ಮಕ್ಕಳನ್ನೂ, ಸಕಲ ಸಂಪತ್ತನ್ನೂ ತೊರೆದು ಭಯದಿಂದ ತತ್ತಳಿಸಿಹೋಗಿ ಮಾರುವೇಷಗಳಿಂದ ಪಶುಗಳಂತೆ ಕಾಡು ಕಾಡುಗಳಲ್ಲಿಯೂ ಅಲೆದಾಡಲು ಮೊದಲಿಟ್ಟರು.

ಯಕ್ಷಾನ್ಮಹೋರಗಾನ್ಸಿದ್ಧಾನ್ಸಾಧ್ಯಾನ್ಸಮರದುರ್ಮದಾನ್ ।
ಬ್ರಹ್ಮಾಣಂ ಪದ್ಮನಾಭಂ ಚ ರುದ್ರಂ ವಜ್ರಿಣಮೇವ ಚ । [೮೩ ॥
ಮತ್ವಾ ತೃಣಾಯ ತಾನ್ಸರ್ವಾಂಲ್ಲೋಕಾನ್ಭಂಡಃ ಶಶಾಸ ಹ ॥
ಅಥ ಭಂಡಾಸುರಂ ಹಂತುಂ ತ್ರೈಲೋಕ್ಯಂ ಚಾಪಿ ರಕ್ಷಿತುಂ ।
ದ್ವಿತೀಯಮುದಭೂದ್ರೂಪಂ ಮಹಾಯಾಗಾನಲಾತ್ಪುನಃ ॥ ೮೪ ॥
ಯದ್ರೂಪಶಾಲಿನೀಮಾಹುರ್ಲಲಿತಾಂ ಪರದೇವತಾಂ ।
ಪಾಶಾಂಕುಶಧನುರ್ಬಾಣ ಪರಿಷ್ಕೃತಕರಾಂಬುಜಾಂ ॥ ೮೫ ॥
ಸಾ ದೇವೀ ಪರಮಾ ಶಕ್ತಿಃ ಪರಬ್ರಹ್ಮಸ್ವರೂಪಿಣೀ ।
ಜಘಾನ ಭಂಡದೈತ್ಯೇಂದ್ರಂ ಯುದ್ಧೇ ಯುದ್ಧವಿಶಾರದಾ ॥ ೮೬ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಪಂಚಮೋಽಧ್ಯಾಯಃ
॥ ಇತ್ಯುಪೋದ್ಘಾತಖಂಡಃ ॥

---

೮೩. ಭಂಡಾಸುರನಾದರೋ ಯಕ್ಷರನ್ನೂ, ನಾಗರನ್ನೂ, ಸಿದ್ಧ ಸಾಧ್ಯರನ್ನೂ, ಕಡೆಗೆ ರಣದುರ್ಮದರಾದ ದೇವತೆಗಳನ್ನೂ, ಬ್ರಹ್ಮವಿಷ್ಣು ಮಹೇಶ್ವರರನ್ನೂ, ವಜ್ರಧರನಾದ ದೇವೇಂದ್ರನನ್ನೂ ಹುಲ್ಲುಕಡ್ಡಿಗೆ ಸಮಾನವಾಗಿ ಕಾಣುತ್ತ ಎಲ್ಲಾ ಲೋಕಗಳನ್ನೂ ಆಳಲುಪಕ್ರಮಿಸಿದನು.

೮೪. ತರುವಾಯ ಈ ಭಂಡಾಸುರನನ್ನು ವಧಿಸುವ ನಿಮಿತ್ತವಾಗಿಯೂ, ಮೂರು ಲೋಕಗಳ ಸಂರಕ್ಷಣೆಯ ಸಲುವಾಗಿಯೂ, ಮಹಾಯಾಗದ ಅಗ್ನಿಕುಂಡದಿಂದ ಮಹಾದೇವಿಯ ಎರಡನೆಯ ರೂಪವು ಉದ್ಭವವಾಯಿತು.

೮೫–೮೬. ಆಕೆಯೇ ಅಪಾರ ರೂಪಶಾಲಿನಿಯೂ, ಪಾಶಾಂಕುಶ ಧನುರ್ಬಾಣಗಳಿಂದ ಪರಿಷ್ಕೃತವಾದ ಕರಕಮಲೆಯೂ, ಪರದೇವತೆಯೂ ಆದ ಶ್ರೀ ಲಲಿತಾದೇವಿಯೆಂದು ಹೇಳುತ್ತಾರೆ. ಪರಬ್ರಹ್ಮಸ್ವರೂಪಿಣಿಯೂ, ಪರಾಶಕ್ತಿಯೂ, ಯುದ್ಧವಿಶಾರದೆಯೂ ಆದ ಆ ದೇವಿಯೇ ಯುದ್ಧದಲ್ಲಿ ಭಂಡಾಸುರನನ್ನು ವಧಿಸಿದಳು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಐದನೆಯ ಅಧ್ಯಾಯವು ಮುಗಿದುದು
॥ ಇಂತಿದು ಉಪೋದ್ಘಾತಖಂಡವು ॥

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

[ಭಂಡಾಸುರೋತ್ಪತ್ತಿಃ— ಮಹಾದೇವೇನ ತಸ್ಯ ವರಪ್ರಾಪ್ತಿಃ]

ಯದ್ಧ್ಯಾನಾತ್ಪರಮೇಶ್ವರಸ್ಯ ಸಹಸಾ ಸಂಮೋಹಿನೀರೂಪಕಂ
ಧೃತ್ವಾನಂದವಿಲಾಸಪೂರ್ವಮತುಲಂ ಸಂಕ್ರೀಡಯುಚ್ಛೃಂಭುಣಾ ।
ಶಾಸ್ತಾರಂ ಜನಯನ್ ಪ್ರಭಾತಿ ರಮಯಾ ವಿಷ್ಣುಸ್ತಮೀಶಂ ಸದಾ
ಸರ್ವಜ್ಞಂ ಲಲಿತಾಂಬಿಕಾಯುತಮಹಂ ಶ್ರೀಸುಂದರೇಶಂ ಭಜೇ ॥

ಅಗಸ್ತ್ಯ:—

**ಕಥಂ ಭಂಡಾಸುರೋ ಜಾತಃ ಕಥಂ ವಾ ತ್ರಿಪುರಾಂಬಿಕಾ ।**
**ಕಥಂ ಸ ನಿಹತಃ ಸಂಖ್ಯೇ ತತ್ಸರ್ವಂ ವದ ವಿಸ್ತರಾತ್ ॥ ೧ ॥**

ಹಯಗ್ರೀವಃ—

**ಪುರಾ ದಾಕ್ಷಾಯಣೀಂ ತ್ಯಕ್ತ್ವಾ ಪಿತುರ್ಯಜ್ಞವಿನಾಶನಾತ್ ।**
**ಆತ್ಮಾನಮಾತ್ಮನಾ ಪಶ್ಯನ್ ಜ್ಞಾನಾನಂದರಸಾತ್ಮಕಃ ॥ ೨ ॥**
**ಉಪಾಸ್ಯಮಾನೋ ಮುನಿಭಿರಚಿಂತ್ಯಗುಣಲಕ್ಷಣಃ ।**
**ಗಂಗಾಕೂಲೇ ಹಿಮವತಃ ಪರ್ಯಂತೇ ಪ್ರವಿವೇಶ ಹ ॥ ೩ ॥**

---

### ಕನ್ನಡದ ಅನುವಾದ

[ಭಂಡಾಸುರನ ಉತ್ಪತ್ತಿ—ಮಹಾದೇವನಿಂದ ಅವನಿಗೆ ವರಗಳು ದೊರೆತುದು]

೧. ಅಗಸ್ತ್ಯನು ಕೇಳುತ್ತಾನೆ:—ಮಹಾಪ್ರಾಜ್ಞನಾದ ಹಯಗ್ರೀವ ಮುನಿಯೇ! ಭಂಡಾಸುರನು ಹುಟ್ಟಿದುದೆಂತು? ತ್ರಿಪುರಾಂಬಿಕೆಯು ಶ್ರೀ ಲಲಿತಾವತಾರವನ್ನು ಮಾಡಿದುದು ಹೇಗೆ? ಆ ಭಂಡಾಸುರನು ಕಾಳೆಗದಲ್ಲಿ ಹತನಾದುದು ಹೇಗೆ? ಎಂಬಿವೇ ಮೊದಲಾದ ಎಲ್ಲ ವೃತ್ತಾಂತವನ್ನೂ ವಿಸ್ತಾರವಾಗಿ ಅಪ್ಪಣೆಕೊಡಿಸಬೇಕು.

೨-೩. ಹಯಗ್ರೀವನು ಹೇಳುತ್ತಾನೆ:—ಎಲೈ ಮುನಿಯೇ! ಪೂರ್ವದಲ್ಲಿ ಪರಮೇಶ್ವರನು, ದಕ್ಷಬ್ರಹ್ಮನ ಯಜ್ಞವು ನಾಶವಾದ ತರುವಾಯ ದಾಕ್ಷಾಯಣಿಯನ್ನು ತೊರೆದು ತನ್ನನ್ನು ತನ್ನಲ್ಲಿಯೇ ಕಾಣುತ್ತ, ಕೇವಲ ಜ್ಞಾನಾನಂದರಸಸ್ವರೂಪನಾಗಿ, ಯೋಚಿಸಲಸದಳವಾದ ಗುಣಲಕ್ಷಣಗಳುಳ್ಳವನಾಗಿ, ಮುನಿಗಳೆಲ್ಲರೂ ತನ್ನನ್ನು ಸೇವಿಸುತ್ತಿರಲು ಹಿಮಗಿರಿಯಲ್ಲಿರುವ ಗಂಗಾನದಿಯ ತೀರಪ್ರದೇಶದ ವನವನ್ನು ಪ್ರವೇಶಿಸಿದನು.

ಸಾಪಿ ಶಂಕರಮಾರಾಧ್ಯ ಚಿರಕಾಲಂ ಮನಸ್ವಿನೀ ।
ಯೋಗೇನ ಸ್ವಾಂ ತನುಂ ತ್ಯಕ್ತ್ವಾ ಸುತಾಸೀದ್ಧಿಮಭೂಭೃತಃ ॥ ೪ ॥
ಸ ಶೈಲೋ ನಾರದಾಚ್ಛ್ರುತ್ವಾ ರುದ್ರಾಣೀತಿ ಸ್ವಕನ್ಯಕಾಂ ।
ತಸ್ಯ ಶುಶ್ರೂಷಣಾರ್ಥಾಯ ಸ್ಥಾಪಯಾಮಾಸ ಚಾಂತಿಕೇ ॥ ೫ ॥
ಏತಸ್ಮಿನ್ನಂತರೇ ದೇವಾಸ್ತಾರಕೇಣಾಭಿಪೀಡಿತಾಃ । [೬ ॥
ಬ್ರಹ್ಮಣೋಕ್ತಾಃ ಸಮಾಹೂಯ ಮದನಂ ಚೇದಮಬ್ರುವನ್ ॥
ಸರ್ಗಾದೌ ಭಗವಾನ್‌ಬ್ರಹ್ಮಾ ಸೃಜಮಾನೋಽಖಿಲಾಃ ಪ್ರಜಾಃ ।
ನ ನಿರ್ವೃತ್ತಿರಭೂತ್ತಸ್ಯ ಕದಾಚಿದಪಿ ಮಾನಸೇ ।
ತಪಶ್ಚಚಾರ ಸುಚಿರಂ ಮನೋವಾಕ್ಕಾಯಕರ್ಮಭಿಃ ॥ ೭ ॥
ತತಃ ಪ್ರಸನ್ನೋ ಭಗವಾನ್‌ಸಲಕ್ಷ್ಮೀಕೋ ಜನಾರ್ದನಃ ।
ವರೇಣ ಛಂದಯಾಮಾಸ ವರದಃ ಸರ್ವದೇಹಿನಾಂ ॥ ೮ ॥

---

೪. ದಾಕ್ಷಾಯಣೀದೇವಿಯೂ ಸಹ ಸ್ಥಿರಚಿತ್ತೆಯಾಗಿ ಶಂಕರನನ್ನು ಬಹುಕಾಲ ಆರಾಧಿಸಿದ ತರುವಾಯ, ಯೋಗದಿಂದ ತನ್ನ ಶರೀರವನ್ನು ತೊರೆದು ಆ ಹಿಮವಂತನಿಗೆ ಮಗಳಾಗಿ ಹುಟ್ಟಿದಳು.

೫. ಪರ್ವತರಾಜನೂ ಕೂಡ ತನ್ನ ಮಗಳು ಪರಶಿವನ ಪತ್ನಿಯೆಂಬ ವಿಷಯವನ್ನು ನಾರದಮುನೀಂದ್ರನಿಂದ ತಿಳಿದು ಅವಳನ್ನು ಆತನ ಸಮೀಪದಲ್ಲಿಯೇ ಸೇವೆಗಾಗಿ ನಿಯೋಜಿಸಿದನು.

೬. ಈ ನಡುವೆ, ತಾರಕಾಸುರನ ಕೋಟಲೆಗೆ ಸಿಕ್ಕಿ ತೊಂದರೆ ಪಡುತ್ತಿದ್ದ ದೇವತೆಗಳೆಲ್ಲರೂ ಬ್ರಹ್ಮದೇವನ ಮಾತಿನಂತೆ ಮನ್ಮಥನನ್ನು ಕರೆಯಿಸಿ ಅವನನ್ನು ಕುರಿತು ಹೀಗೆ ಹೇಳಿದರು :

೭. "ಎಲೈ ಮನ್ಮಥನೇ! ಸೃಷ್ಟಿಯ ಮೊದಲಿನಲ್ಲಿ ಪೂಜ್ಯನಾದ ಬ್ರಹ್ಮದೇವನು ಸಮಸ್ತ ಪ್ರಜೆಗಳನ್ನು ಸೃಜಿಸಿದರೂ ಮನಸ್ಸಿಗೆ ಶಾಂತಿಯನ್ನು ಕಾಣದೆ ಕಡೆಗೆ ತ್ರಿಕರಣಶುದ್ಧಿಯಾಗಿ ಬಹಳಕಾಲ ಪರಮಾತ್ಮನನ್ನು ಕುರಿತು ತಪಸ್ಸುಮಾಡಿದನು.

೮. ಆಗ ಎಲ್ಲಜನರಿಗೂ ವರಗಳನ್ನನುಗ್ರಹಿಸುವ ಜನಾರ್ದನನು ಆತನ ತಪಸ್ಸಿಗೆ ಪ್ರಸನ್ನನಾಗಿ ಲಕ್ಷ್ಮೀದೇವಿಯೊಡನೆ ಪ್ರತ್ಯಕ್ಷನಾಗಿ ವರವನ್ನು ಕೇಳೆಂದು ಅಪ್ಪಣೆಕೊಡಿಸಿದನು.

ಬ್ರಹ್ಮಾ:—
ಯದಿ ತುಷ್ಟೋಽಸಿ ಭಗವನ್ನನಾಯಾಸೇನ ವೈ ಜಗತ್ ।
ಚರಾಚರಮಿದಂ ಚೈವ ಸೃಜಾಮಿ ತ್ವತ್ಪ್ರಸಾದತಃ ॥ ೯ ॥
ಏವಮುಕ್ತೋ ವಿಧಾತ್ರಾ ತು ಮಹಾಲಕ್ಷ್ಮೀಮುದೈಕ್ಷತ ।
ತದಾ ಪ್ರಾದುರಭೂಸ್ತ್ವಂ ವೈ ಜಗನ್ಮೋಹನರೂಪಧೃಕ್ ॥ ೧೦ ॥
ತವಾಯುಧಾರ್ಥಂ ದತ್ತಂ ಚ ಪುಷ್ಪಬಾಣೇಕ್ಷುಕಾರ್ಮುಕೌ ।
ವಿಜಯತ್ವಮಲಂಘ್ಯತ್ವಂ ಪ್ರಾದಾತ್ಪ್ರಮುದಿತೋ ಹರಿಃ ॥ ೧೧ ॥
ಅಸೌ ಸೃಜತಿ ಭೂತಾನಿ ಕಾರಣೇನ ಸ್ವಕರ್ಮಣಾ ।
ಸಾಕ್ಷಿಭೂತೋಽಸ್ಯ ಜಗತೋ ಭವಾನ್ ಭಜತು ನಿರ್ವೃತಿಂ ॥ ೧೨ ॥
ಏವಂ ಲಬ್ಧವರೋ ಧಾತಾ ತ್ವಯಿ ವಿನ್ಯಸ್ಯ ತದ್ಭರಂ ।
ಮನಸೋ ನಿರ್ವೃತಿಂ ಪ್ರಾಪ್ಯ ವರ್ತತೇಽದ್ಯಾಪಿ ಮನ್ಮಥ ॥ ೧೩ ॥

---

೯. ಆಗ ಬ್ರಹ್ಮದೇವನು, "ಭೋ ಭಗವನ್, ನೀನು ನನ್ನ ತಪಸ್ಸಿನಿಂದ ಸಂತುಷ್ಟನಾಗಿರುವೆಯಾದರೆ ಚರಾಚರಾತ್ಮಕವಾದ ಈ ಜಗತ್ತನ್ನು ನಿನ್ನ ಅನುಗ್ರಹದಿಂದಲೇ ಅನಾಯಾಸವಾಗಿ ಸೃಜಿಸುವೆನು" ಎಂದು ಪ್ರಾರ್ಥಿಸಿದನು.

೧೦. ವಿಧಾತೃವು ಹೀಗೆ ನುಡಿಯಲು, ಶ್ರೀಮನ್ನಾರಾಯಣನು ಮಹಾಲಕ್ಷ್ಮಿಯನ್ನೊಮ್ಮೆ ದೃಷ್ಟಿಸಿ ನೋಡಿದನು. ಆ ಸಮಯದಲ್ಲಿಯೇ ಜಗನ್ಮೋಹನಾಕಾರನಾದ ನೀನು ಜನಿಸಿದೆ.

೧೧. ಆಗ ಶ್ರೀ ಹರಿಯು ನಿನ್ನ ಆಯುಧಗಳಿಗೋಸುಗ ಪುಷ್ಪ ಬಾಣಗಳನ್ನೂ ಕಬ್ಬಿನ ಬಿಲ್ಲನ್ನೂ ಕೊಟ್ಟುದು ಮಾತ್ರವಲ್ಲದೆ ನಿನಗೆ ಅಜೇಯತ್ವವನ್ನೂ, ಅಲಂಘ್ಯತ್ವವನ್ನೂ ಆನಂದದಿಂದ ಅನುಗ್ರಹಿಸಿದನು.

೧೨. ಹೀಗೆ ನಿನ್ನನ್ನು ಸೃಜಿಸಿ ಅನುಗ್ರಹಿಸಿದ ತರುವಾಯ ಆ ಪರಮಾತ್ಮನು ಬ್ರಹ್ಮದೇವನನ್ನು ಕುರಿತು "ಎಲೈ ಚತುರಾನನನೇ! ಈ ಮನ್ಮಥನು ತನ್ನ ಕಾರ್ಯಕಾರಣಗಳ ಮೂಲಕ ಸಮಸ್ತಭೂತಗಳನ್ನೂ ಸೃಜಿಸುತ್ತಾನೆ. ನೀನು ಮಾತ್ರ ಈ ಜಗತ್ತಿಗೆ ಸಾಕ್ಷಿಯಾಗಿದ್ದು ಕೊಂಡು ನಿರ್ವೃತ್ತಿಯನ್ನು ಪಡೆ" ಎಂದು ಹೇಳಿದನು.

೧೩. ಎಲೈ ಮನ್ಮಥನೇ! ಹೀಗೆ ಬ್ರಹ್ಮದೇವನು ಶ್ರೀಹರಿಯಿಂದ ವರವನ್ನು ಪಡೆದು ನಿನ್ನಲ್ಲಿಯೇ ಸೃಷ್ಟಿಯ ಭಾರವೆಲ್ಲವನ್ನೂ ಹೊರಿಸಿ ಇಂದಿಗೂ ಮನಶ್ಶಾಂತಿಯನ್ನು ಪಡೆದು ಸುಖದಿಂದಿರುವನು.

ಅಮೋಘಂ ಬಲವೀರ್ಯಂ ತೇ ನ ತೇ ಮೋಘಃ ಪರಾಕ್ರಮಃ।
ಸುಕುಮಾರಾಣ್ಯಮೋಘಾನಿ ಕುಸುಮಾಸ್ತ್ರಾಣಿ ತೇ ಸದಾ ॥ ೧೪ ॥
ಬ್ರಹ್ಮದತ್ತವರೋಽಯಂ ಹಿ ತಾರಕೋ ನಾಮ ದಾನವಃ।
ಬಾಧತೇ ಸಕಲಾಂಲ್ಲೋಕಾನಸ್ಮಾನಪಿ ವಿಶೇಷತಃ ॥ ೧೫ ॥
ಶಿವಪುತ್ರಾದೃತೇಽನ್ಯತ್ರ ಭಯಂ ತಸ್ಯ ನ ವಿದ್ಯತೇ।
ತ್ವಾಂ ವಿನಾಸ್ಮಿನ್ಮಹಾಕಾರ್ಯೇ ನ ಕಶ್ಚಿತ್ಪ್ರಭವೇದಪಿ ॥ ೧೬ ॥
ಸುಕರಂ ಚ ಭವೇತ್ಕಾರ್ಯಂ ಭವತೋ ನಾನ್ಯತಃ ಕ್ವಚಿತ್ ॥ ೧೭ ॥
ಆತ್ಮೈಕ್ಯಧ್ಯಾನನಿರತಃ ಶಿವೋ ಗೌರ್ಯಾ ಸಮನ್ವಿತಃ।
ಹಿಮಾಚಲತಟೇ ರಮ್ಯೇ ವರ್ತತೇ ಮುನಿಭಿರ್ವೃತಃ ॥ ೧೮ ॥
ತ್ವನ್ನಿಯೋಗಾಚ್ಚ ಗೌರ್ಯಾಂ ತು ಜನಿಷ್ಯತಿ ಚ ತತ್ಸುತಃ।
ಏತತ್ಕಾರ್ಯಮಿದಂ ಕೃತ್ವಾ ತ್ರಾಯಸ್ವಾಸ್ಮಾನ್ಮಹಾಬಲ ॥ ೧೯ ॥

---

೧೪. ನೀನು ಸಾಮಾನ್ಯನಲ್ಲ. ನಿನ್ನ ಬಲವೂ, ವೀರ್ಯವೂ ಅಮೋಘವಾದುದು. ನಿನ್ನ ಪರಾಕ್ರಮವು ಯಾವಾಗಲೂ ವಿಫಲವಾಗದು. ನಿನ್ನ ಅಸ್ತ್ರಗಳಾದರೋ ಬಹು ಸುಕುಮಾರಗಳಾದರೂ ವ್ಯರ್ಥವಾಗತಕ್ಕವುಗಳಲ್ಲ.

೧೫. ಎಲೈ ಸುಮಬಾಣನೇ! ಈಗ ಬ್ರಹ್ಮನಿಂದ ವರಗಳನ್ನು ಪಡೆದು ಮದೋನ್ಮತ್ತನಾಗಿರುವ ತಾರಕನೆಂಬ ದಾನವನು ಸಮಸ್ತ ಲೋಕಗಳನ್ನೂ ಬಾಧಿಸುತ್ತಿರುವುದಲ್ಲದೆ, ದೇವತೆಗಳಾದ ನಮ್ಮನ್ನೂ ಪೀಡಿಸುತ್ತಿರುವನಷ್ಟೆ!

೧೬. ಆ ದಾನವನಿಗಾದರೋ ಪರಮೇಶ್ವರನ ಪುತ್ರನಿಂದಲ್ಲದೆ ಮತ್ತಾರಿಂದಲೂ ಭಯವಿರುವುದಿಲ್ಲ. ಅಲ್ಲದೆ, ಈಗಿನ ಸಂದರ್ಭದಲ್ಲಿ ಈ ಮಹತ್ತರವಾದ ಕಾರ್ಯದಲ್ಲಿ ನಿನ್ನನ್ನು ಬಿಟ್ಟರೆ ಮತ್ತಾವನೂ ಸಮರ್ಥನಿರುವುದಿಲ್ಲ.

೧೭. ಈ ಕಾರ್ಯವು ನಿನಗಲ್ಲದೆ ಮತ್ತಾವನಿಗೂ ಸುಲಭಸಾಧ್ಯವೂ ಅಲ್ಲ.

೧೮. ಈಗ ಪರಶಿವನು ಆತ್ಮವನ್ನು ಆತ್ಮದಲ್ಲಿಯೇ ಐಕ್ಯಗೊಳಿಸಿ, ಗೌರಿಯೊಡನೆ ಮನೋಹರವಾದ ಹಿಮವತ್ಪರ್ವತದ ತಪ್ಪಲಿನಲ್ಲಿ ಮಹರ್ಷಿಗಳಿಂದಾವೃತನಾಗಿ ಧ್ಯಾನನಿರತನಾಗಿರುವನು.

೧೯. ನೀನು ನಿನ್ನ ಕೆಲಸವನ್ನು ಆಗಗೊಳಿಸಿದರೆ ಆತನು ಆ

**ಏವಮಭ್ಯರ್ಥಿತೋ ದೇವೈಃ ಸ್ತೂಯಮಾನೋ ಮುಹುರ್ಮುಹುಃ।**
**ಜಗಮಾತ್ಮವಿನಾಶಾಯ ಯತೋ ಹಿಮವತಸ್ತಟಂ ॥ ೨೦ ॥**
**ಕಿಮಪ್ಯಾರಾಧಯಂತಂ ತು ಗಂಧಪುಷ್ಪೋಪಹಾರಕೈಃ ।**
**ಶುಶ್ರೂಷಣಪರಾಂ ತಾಂ ತು ದದರ್ಶಾತಿಬಲಃ ಸ್ಮರಃ ॥ ೨೧ ॥**
**ಅದೃಶ್ಯಃ ಸರ್ವಭೂತಾನಾಂ ನಾತಿದೂರೇಽಸ್ಯ ಸಂಸ್ಥಿತಃ ।**
**ಸುಮನೋಮಾರ್ಗಣೈರುಗ್ರೈಸ್ತಂ ವಿವ್ಯಾಧ ಮಹೇಶ್ವರಂ ॥ ೨೨ ॥**
**ವಿಸ್ಮೃತ್ಯ ಸರ್ವಕರ್ಮಾಣಿ ವಿದ್ಧಸ್ತೈರಂತಿಕಸ್ಥಿತಾಂ ।**
**ಗೌರೀಂ ವಿಲೋಕಯಾಮಾಸ ಮನ್ಮಥಾವಿಷ್ಟಚೇತನಃ ॥ ೨೩ ॥**
**ಧೃತಿಮಾಲಂಬ್ಯ ಚ ಪುನಃ ಕಿಮೇತದಿತಿ ಚಿಂತಯನ್ ।**
**ದದರ್ಶಾಗ್ರೇ ತು ಸನ್ನದ್ಧಂ ಮನ್ಮಥಂ ಕುಸುಮಾಯುಧಂ ॥ ೨೪ ॥**

---

ಗೌರೀದೇವಿಯಲ್ಲಿ ಪುತ್ರನನ್ನು ಪಡೆಯುತ್ತಾನೆ. ಇದು ನಿನಗೆ ಬಹು ಸುಲಭವಾದ ಕಾರ್ಯ. ಇಷ್ಟನ್ನು ಮಾತ್ರ ನಡೆಸಿಕೊಟ್ಟು ಮಹಾ ಪರಾಕ್ರಮಿಯಾದ ನೀನು ನಮ್ಮನ್ನು ಕಾಪಾಡಬೇಕು.''

೨೦. ದೇವತೆಗಳೆಲ್ಲರೂ ಈ ಪ್ರಕಾರ ತನ್ನನ್ನು ಬೇಡಿ ಅಡಿಗಡಿಗೂ ಬಗೆಬಗೆಯಾಗಿ ಸ್ತುತಿಸಲು, ಆ ಮನ್ಮಥನು ಹಾಗೆಯೇ ಆಗಲೆಂದೊಪ್ಪಿ, ಆತ್ಮವಿನಾಶಕ್ಕೋಸುಗವೇ ಹಿಮವತ್ಪರ್ವತದ ತಪ್ಪಲಿಗೈತಂದನು.

೨೧. ಅಲ್ಲಿಯಾದರೋ ಪರಮೇಶ್ವರನು ಗಂಧಪುಷ್ಪಾಕ್ಷತೆಗಳಿಂದ ಅನಿರ್ದೇಶ್ಯವಾದ ಯಾವುದನ್ನೋ ಅರ್ಚಿಸುತ್ತಿದ್ದನು. ಅಲ್ಲಿಯೇ ಗೌರೀದೇವಿಯೂ ಸಹ ಆತನ ಸೇವೆಯಲ್ಲಿ ತೊಡಗಿರುವುದನ್ನೂ ಅವನು ಕಂಡನು.

೨೨. ಆಗ ಆ ಸ್ಮರನು ಸಮಸ್ತ ಭೂತಗಳಿಗೂ ಅದೃಶ್ಯನಾಗಿ ಆ ಪರಮೇಶ್ವರನ ಸಮೀಪದಲ್ಲಿಯೇ ನಿಂತು ಉಗ್ರಗಳಾದ ಕುಸುಮ ಬಾಣಗಳಿಂದ ಆತನನ್ನು ಹೊಡೆದನು.

೨೩. ಹೀಗೆ ಕುಸುಮಾಸ್ತ್ರವಿದ್ಧನಾದ ಆ ವಿಭುವು ಎಲ್ಲ ಕಾರ್ಯಗಳನ್ನೂ ಮರೆತು, ಮನ್ಮಥವಿಕಾರಕ್ಕೊಳಗಾದ ಮನಸ್ಸುಳ್ಳವನಾಗಿ ತನ್ನ ಬಳಿಯಲ್ಲಿಯೇ ಇದ್ದ ಗೌರೀದೇವಿಯನ್ನೊಮ್ಮೆ ವೀಕ್ಷಿಸಿದನು.

೨೪. ಬಳಿಕ, ಆತನು ಮತ್ತೆ ಧೈರ್ಯವನ್ನವಲಂಬಿಸಿ ಇದೇನೆಂದು ಯೋಚಿಸುತ್ತ, ತನ್ನ ಮುಂಗಡೆಯೇ ಕುಸುಮಾಯುಧವನ್ನು ಹಿಡಿದು ಸಿದ್ಧನಾಗಿ ನಿಂತಿದ್ದ ಆ ಮನ್ಮಥನನ್ನು ಕಂಡನು.

ತಂ ದೃಷ್ಟ್ವಾ ಕುಪಿತಃ ಶೂಲೀ ತ್ರೈಲೋಕ್ಯದಹನಕ್ಷಮಂ ।
ತಾರ್ತೀಯಂ ಚಕ್ಷುರುನ್ಮೀಲ್ಯ ದದಾಹ ಮಕರಧ್ವಜಂ ॥ ೨೫ ॥
ಶಿವೇನೈವಮವಜ್ಞಾತಾ ದುಃಖಿತಾ ಶೈಲಕನ್ಯಕಾ ।
ಅನುಜ್ಞಯಾ ಪಿತುಃ ಸ್ವಸ್ಯ ತಪಃ ಕರ್ತುಮಗಾದ್ವನಂ ॥ ೨೬ ॥
ಅಥ ತದ್ಭಸ್ಮ ಸಂವೀಕ್ಷ್ಯ ಚಿತ್ರಕರ್ಮಾ ಗಣೇಶ್ವರಃ ।
ತದ್ಭಸ್ಮನಾ ತು ಪುರುಷಂ ಚಿತ್ರಾಕಾರಂ ಚಕಾರ ಸಃ ॥ ೨೭ ॥
ತಂ ವಿಚಿತ್ರತನುಂ ರುದ್ರೋ ದದರ್ಶಾಗ್ರೇ ತು ಪೂರುಷಂ ।
ತತ್ಕ್ಷಣಾಜ್ಜಾತಜೀವೋಽಸೌ ಮೂರ್ತಿಮಾನಿವ ಮನ್ಮಥಃ ।
ಮಹಾಬಲೋಽತಿತೇಜಸ್ವೀ ಮಧ್ಯಾಹ್ನಾರ್ಕಸಮದ್ಯುತಿಃ ॥ ೨೮ ॥
ತಂ ಚಿತ್ರಸೇನೋ ಬಾಹುಭ್ಯಾಂ ಸಮಾಲಿಂಗ್ಯ ಮುದಾನ್ವಿತಂ ।
ಸ್ತುಹಿ ಬಾಲ ಮಹಾದೇವಂ ಸತು ಸರ್ವಾರ್ಥಸಾಧಕಃ ॥ ೨೯ ॥

---

೨೫. ಕೂಡಲೇ ಆ ಶೂಲಿಯು ಕುಪಿತನಾಗಿ ತನ್ನ ಮೂರನೆಯ ಕಣ್ಣನ್ನು ತೆರೆದು ಮಕರಧ್ವಜನಾದ ಆ ಮನ್ಮಥನನ್ನು ದಹಿಸಿಬಿಟ್ಟನು.

೨೬. ಆಗ ಶೈಲಕನ್ಯಕೆಯಾದರೋ, ಹೀಗೆ ಪರಶಿವನಿಂದ ತಿರಸ್ಕೃತೆಯಾಗಿ ತನ್ನ ತಂದೆಯ ಅಪ್ಪಣೆಯನ್ನು ಪಡೆದು ತಪವನ್ನೆಸಗಲು ವನವನ್ನು ಪ್ರವೇಶಿಸಿದಳು.

೨೭. ತರುವಾಯ ಚಿತ್ರಕರ್ಮನೆಂಬ ಗಣೇಶ್ವರನು ಆ ಮನ್ಮಥನ ಚಿತೆಯ ಭಸ್ಮವನ್ನು ಕಂಡು ಅದೆಲ್ಲವನ್ನೂ ಒಟ್ಟುಗೂಡಿಸಿ, ಅದನ್ನೊಂದು ಪುರುಷಾಕೃತಿಯನ್ನಾಗಿ ಮಾಡಿದನು.

೨೮. ವಿಚಿತ್ರ ಶರೀರವನ್ನೊಳಗೊಂಡು ತನ್ನ ಮುಂಗಡೆಯೇ ಇದ್ದ ಆ ಪುರುಷಾಕೃತಿಯನ್ನು ಪರಶಿವನೊಮ್ಮೆ ನೋಡಿದನು. ಒಡನೆಯೇ ಅದಕ್ಕೆ ಜೀವವುಂಟಾಯಿತು. ಕೂಡಲೇ ಆ ಚಿತ್ರಾಕೃತಿಯೇ ಸಾಕ್ಷಾತ್ ಮನ್ಮಥನ ರೂಪವನ್ನೊಳಗೊಂಡು ಮಹತ್ತರವಾದ ಬಲವೂ, ಅತಿಶಯವಾದ ತೇಜಸ್ಸೂ, ಮಧ್ಯಾಹ್ನ ಸೂರ್ಯನಂತೆ ಕಾಂತಿಯೂ ಉಳ್ಳುದಾಯಿತು.

೨೯. ಈ ರೀತಿ ಉದ್ಭವಿಸಿದ ಆ ಪುರುಷನನ್ನು ಕಂಡು, ಚಿತ್ರಸೇನನು ಸಂತೋಷದಿಂದ ಅವನನ್ನು ಬಿಗಿದಪ್ಪಿ, "ಎಲೈ ಬಾಲಕನೇ! ಮಹಾದೇವನನ್ನು ಸ್ತೋತ್ರಮಾಡು. ಆತನು ಸಮಸ್ತ ಇಷ್ಟಾರ್ಥಗಳನ್ನೂ ಅನುಗ್ರಹಿಸುವವನು" ಎಂದು ಹೇಳಿದನು.

ಇತ್ಯುಕ್ತ್ವಾ ಶತರುದ್ರೀಯಮುಪಾದಿಶದಮೇಯಧೀಃ ।
ನನಾಮ ಶತಶೋ ರುದ್ರಂ ಶತರುದ್ರಮನುಂ ಜಪನ್ ॥ ೩೦ ॥
ತತಃ ಪ್ರಸನ್ನೋ ಭಗವಾನ್ಮಹಾದೇವೋ ವೃಷಧ್ವಜಃ ।
ವರೇಣ ಛಂದಯಾಮಾಸ ವರಂ ವವ್ರೇ ಚ ಬಾಲಕಃ ॥ ೩೧ ॥
ಪ್ರತಿದ್ವಂದ್ವಿಬಲಾರ್ಧಂತು ಮದ್ಬಲೇನೋಪಯೋಕ್ಷ್ಯತ ।
ತದಸ್ತ್ರಶಸ್ತ್ರಮುಖ್ಯಾನಿ ವ್ಯಥಾಂ ಕುರ್ವಂತು ನೋ ಮಮ ॥ ೩೨ ॥
ತಥೇತಿ ತತ್ಪ್ರತಿಶ್ರುತ್ಯ ವಿಚಾರ್ಯ ಕಿಮಪಿ ಪ್ರಭುಃ ।
ಷಷ್ಟಿವರ್ಷಸಹಸ್ರಾಣಿ ರಾಜ್ಯಮಸ್ಮೈ ದದೌ ಪುನಃ ॥ ೩೩ ॥
ಏತದ್ದೃಷ್ಟ್ವಾ ತು ಚರಿತಂ ಧಾತಾ ಭಂಡಿತಿ ಭಂಡಿತಿ । [೩೪ ॥
ಯದುವಾಚ ತತೋ ನಾಮ್ನಾ ಭಂಡೋ ಲೋಕೇಷು ಕಥ್ಯತೇ ॥

---

೩೦. ಹೀಗೆ ಹೇಳಿ, ಮಹಾಬುದ್ಧಿಶಾಲಿಯಾದ ಆ ಚಿತ್ರಸೇನನು ಅವನಿಗೆ ಶತರುದ್ರೀಯ ಮಂತ್ರವನ್ನು ಉಪದೇಶಮಾಡಿದನು. ಆ ಪುರುಷನಾದರೋ ಅದೇ ಶತರುದ್ರೀಯವನ್ನು ನೂರಾರುಬಾರಿ ಜಪಿಸುತ್ತಾ ಪರಮೇಶ್ವರನನ್ನು ನಮಸ್ಕರಿಸಿದನು.

೩೧. ಬಳಿಕ ವೃಷಭವಾಹನನೂ, ಪೂಜ್ಯನೂ ಆದ ಮಹಾದೇವನು ಪ್ರಸನ್ನನಾಗಿ ಆ ಬಾಲಕನನ್ನು ಕುರಿತ ವರವನ್ನು ಬೇಡೆಂದು ಹೇಳಲು ಆ ಬಾಲಕನು ಹೀಗೆ ಕೇಳಿದನು:

೩೨. "ಎಲೈ ಪರಮೇಶ್ವರನೇ! ನನ್ನೊಡನೆ ಎದುರಾಳಿಯಾಗಿ ಯುದ್ಧಮಾಡುವವನ ಬಲದಲ್ಲಿ ಅರ್ಧಬಲವು ನನಗೆ ಸೇರಲಿ. ಅಲ್ಲದೆ ಶತ್ರುವಿನ ಬಳಿಯಲ್ಲಿ ಯಾವ ಅಸ್ತ್ರಶಸ್ತ್ರಗಳಿರುತ್ತವೆಯೋ ಅವು ನನ್ನನ್ನು ವ್ಯಥೆಗೊಳಿಸದಿರಲಿ."

೩೩. ಆಗ ಸರ್ವಲೋಕಪ್ರಭುವಾದ ಮಹಾದೇವನು ಹಾಗೆಯೇ ಆಗಲೆಂದು ಹೇಳಿ, ಆಮೇಲೆ ಏನನ್ನೋ ಆಲೋಚಿಸಿಕೊಂಡು ಅವನಿಗೆ ಅರುವತ್ತು ಸಾವಿರ ವರ್ಷಗಳವರೆಗೂ ರಾಜ್ಯವನ್ನು ಆಳೆಂದು ವರವನ್ನು ಅನುಗ್ರಹಿಸಿದನು.

೩೪. ಪರಮೇಶ್ವರನ ಈ ನಡವಳಿಯನ್ನು ಕಂಡು ಬ್ರಹ್ಮದೇವನು ಆ ಸಮಯದಲ್ಲಿ "ಭಂಡ್ ಭಂಡ್" ಎಂದು ಹೇಳಿದನು. ಅದರಿಂದಲೇ ಅವನು ಭಂಡನೆಂದು ಲೋಕದಲ್ಲಿ ಹೆಸರಾದನು.

**ಇತಿ ದತ್ವಾ ವರಂ ತಸ್ಮೈ ಸರ್ವೈರ್ಮುನಿಗಣೈರ್ವೃತಃ ।**
**ದತ್ವಾಸ್ತ್ರಾಣಿ ಚ ಶಸ್ತ್ರಾಣಿ ತತ್ರೈವಾಂತರಧೀಯತ ॥ ೩೫ ॥**

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಷಷ್ಠೋಽಧ್ಯಾಯಃ

---

೩೫. ಹೀಗೆ ವರವನ್ನು ಕೊಟ್ಟ ತರುವಾಯ ಆ ಪರಮೇಶ್ವರನು ಭಂಡನಿಗೆ ಅಸ್ತ್ರಶಸ್ತ್ರಗಳನ್ನೂ ಕೊಟ್ಟು ಋಷಿ ಸಮೂಹಗಳೊಡನೆ ಅಲ್ಲಿಯೇ ಅಂತರ್ಧಾನವಾದನು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಮೋಽಧ್ಯಾಯಃ

[ಭಂಡಾಸುರಸ್ಯ ಪಟ್ಟಾಭಿಷೇಕ ಮಹೋತ್ಸವಃ—ವಿಷ್ಣುಕೃತಮಾಯಾ ಸೃಷ್ಟಿಃ—ಸಪರಿವಾರೇಣ ಭಂಡಾಸುರೇಣ ತಸ್ಯಾಂ ಕೃತವ್ಯಾಮೋಹಃ]

ವಿಷ್ಣೋರ್ಲಕ್ಷ್ಮ್ಯಾ ಸಮಭೂದ್ಯಸ್ಸ್ಮರ ಇತಿ ವಿದಿತೋ ಯಸ್ಯ ಫಾಲೇಕ್ಷಣಾಗ್ನೇಃ।
ಜ್ವಾಲಾವೇಶಾದ್ವಿದಗ್ಧಃ ಪುನರಪಿ ಸಹಸಾ ಭಂಡಸಂಜ್ಞಾಸುರೋಽಭೂತ್॥
ಸ್ತುತ್ಯಾ ಯಸ್ಯೈವ ಶಂಭೋರಥವರಕೃಪಯಾ ಸರ್ವಲೋಕಾಧಿಪೋಽಭೂತ್।
ತತ್ತ್ವಂ ಮೀನಾಕ್ಷ್ಯಮೀಶಂ ಪರಶಿವ ಸತತಂ ಸುಂದರೇಶಂ ಭಜೇಽಹಂ॥

**ಹಯಗ್ರೀವಃ—**

**ರುದ್ರಕೋಪಾನಲಾಜ್ಜಾತೋ ಯತೋ ಭಂಡೋ ಮಹಾಬಲಃ।**
**ತಸ್ಮಾದ್ರೌದ್ರಸ್ವಭಾವಶ್ಚ ದಾನವಶ್ಚಾಭವತ್ತತಃ ॥ ೧ ॥**
**ಅಥಾಗಚ್ಛನ್ಮಹಾತೇಜಾಃ ಶುಕ್ರೋ ದೈತ್ಯಪುರೋಹಿತಃ।**
**ಸಮಾಯಾತಾಶ್ಚ ಶತಶೋ ದೈತೇಯಾಸ್ತು ಮಹಾಬಲಾಃ ॥ ೨ ॥**
**ಅಥಾಹೂಯ ಮಯಂ ಭಂಡೋ ದೈತ್ಯವಂಶಾದಿಶಿಲ್ಪಿನಂ।**
**ನಿಯುಕ್ತೋ ಭೃಗುಪುತ್ರೇಣ ಸ ಜಗಾದ ಮಯಂ ತತಃ ॥ ೩ ॥**

---

## ಕನ್ನಡದ ಅನುವಾದ

[ಭಂಡಾಸುರನ ಪಟ್ಟಾಭಿಷೇಕಮಹೋತ್ಸವ — ವಿಷ್ಣುವಿನ ಮಾಯಾಸೃಷ್ಟಿ — ಭಂಡಾಸುರನು ಪರಿವಾರಸಹಿತನಾಗಿ ಆ ಮಾಯೆಯ ಬಲೆಗೆ ಸಿಕ್ಕಿ ಬೀಳುವುದು]

೧. ಹಯಗ್ರೀವನು ಹೇಳುತ್ತಾನೆ:—ಎಲೈ ಕುಂಭಸಂಭವನೇ! ಮಹಾಬಲಿಷ್ಠನಾದ ಭಂಡನು ರುದ್ರನ ಕೋಪಾಗ್ನಿಯಿಂದ ಹುಟ್ಟಿದವನಾದಕಾರಣ ಬಹಳ ಕ್ರೂರಸ್ವಭಾವಿಯಾದ ದಾನವನಾದನು.

೨. ಆಗ ದಾನವರಿಗೆಲ್ಲ ಪುರೋಹಿತನೂ, ಮಹಾತೇಜಸ್ವಿಯೂ ಆದ ಶುಕ್ರಾಚಾರ್ಯನೂ, ಸಾವಿರಾರು ಮಂದಿ ಮಹಾಪರಾಕ್ರಮಶಾಲಿಗಳಾದ ದೈತ್ಯವೀರರೂ ಆ ಭಂಡದಾನವನ ಬಳಿಗೈದಿದರು.

೩. ಆಗ ಭಂಡಾಸುರನು, ದೈತ್ಯರಿಗೆ ಆದಿಶಿಲ್ಪಿಯಾದ ಮಯಾಸುರನನ್ನು ಕರೆದು ಶುಕ್ರಾಚಾರ್ಯನ ಮಾತಿನಂತೆ ಅವನನ್ನು ಕುರಿತು ಈ ರೀತಿ ಹೇಳಿದನು:

**ಯತ್ರ ಸ್ಥಿತ್ವಾತು ದೈತ್ಯೇಂದ್ರೈಸ್ತ್ರೈಲೋಕ್ಯಂ ಶಾಸಿತಂ ಪುರಾ।**
**ತದ್ಗತ್ವಾ ಶೋಣಿತಪುರಂ ನಿರ್ಮಾಣಂ ಕುರ್ವಿತೀರಿತಃ ॥ ೪ ॥**
**ತಚ್ಛ್ರುತ್ವಾ ವಚನಂ ಶಿಲ್ಪೀ ಸ ಗತ್ವಾ ತತ್ಪುರಂ ಮಹತ್।**
**ಚಕ್ರೇಽಮರಪುರಪ್ರಖ್ಯಂ ಮನಸೈವ ಕ್ಷಣೇನ ತು ॥ ೫ ॥**
**ಅಥಾಭಿಷಿಕ್ತಃ ಶುಕ್ರೇಣ ದೈತೇಯೈಶ್ಚ ಮಹಾಬಲೈಃ।**
**ಶುಶುಭೇ ಪರಯಾ ಲಕ್ಷ್ಮ್ಯಾ ತೇಜಸಾ ಚ ಸಮನ್ವಿತಃ ॥ ೬ ॥**
**ಹಿರಣ್ಯಾಯ ತು ಯದ್ದತ್ತಂ ಕಿರೀಟಂ ಬ್ರಹ್ಮಣಾ ಪುರಾ।**
**ಸಜೀವಮವಿನಾಶ್ಯಂ ಚ ದೈತ್ಯೇಂದ್ರೈಕ ವಿಭೂಷಣಂ ॥**
**ದದೌ ಭೃಗುಸುತೋತ್ಸೃಷ್ಟಂ ಭಂಡೋ ಬಾಲಾರ್ಕಸಂನಿಭಂ ॥ ೭ ॥**
**ಚಾಮರೇ ಚಂದ್ರಸಂಕಾಶೇ ಸಜೀವೇ ಬ್ರಹ್ಮನಿರ್ಮಿತೇ।**
**ನ ರೋಗಾ ನ ಚ ದುಃಖಾನಿ ದದೌ ಯದ್ವಿನಿಷೇವಣಾತ್ ॥ ೮ ॥**

---

೪. "ಅಯ್ಯಾ ಮಯಾಸುರನೇ! ಪೂರ್ವದಲ್ಲಿ ದಾನವಚಕ್ರವರ್ತಿಗಳು ಯಾವ ಪ್ರದೇಶದಲ್ಲಿ ನಿಂತು ಮೂರುಲೋಕಗಳನ್ನೂ ಆಳುತ್ತಿದ್ದರೋ ಅಲ್ಲಿಯೇ ಶೋಣಿತವೆಂಬ ಪಟ್ಟಣವನ್ನು ನಿರ್ಮಾಣಮಾಡು."

೫. ಈ ಮಾತನ್ನು ಕೇಳಿದೊಡನೆಯೇ ಆ ದೈತ್ಯಶಿಲ್ಪಿಯು ಅದೇ ಸ್ಥಳಕ್ಕೆ ಹೋಗಿ ಅಲ್ಲಿ ದೇವೇಂದ್ರನ ಅಮರಾವತಿಗೆ ಸಮಾನವಾದ ಮಹಾಪಟ್ಟಣವನ್ನು ಮನಸ್ಸಿನಿಂದಲೇ ಕ್ಷಣಮಾತ್ರದಲ್ಲಿ ನಿರ್ಮಿಸಿದನು.

೬. ಬಳಿಕ, ಆ ಭಂಡದಾನವನು ಶುಕ್ರಾಚಾರ್ಯನಿಂದಲೂ, ಮಹಾಬಲಾಢ್ಯರಾದ ದೈತ್ಯರಿಂದಲೂ ಆ ಪಟ್ಟಣದಲ್ಲಿ ಪಟ್ಟಾಭಿಷಿಕ್ತನಾಗಿ, ಪರಮೈಶ್ವರ್ಯದಿಂದಲೂ ಅಪಾರವಾದ ತೇಜಸ್ಸಿನಿಂದಲೂ ವಿರಾಜಿಸಿದನು.

೭. ಆ ಸಮಯದಲ್ಲಿಯೇ ದೈತ್ಯಗುರುವಾದ ಶುಕ್ರಾಚಾರ್ಯನು ಹಿಂದೆ ಬ್ರಹ್ಮದೇವನು ಹಿರಣ್ಯಕಶಿಪುವಿಗೆ ಯಾವ ಕಿರೀಟವನ್ನು ಕೊಟ್ಟಿದ್ದನೋ, ಅದೇ ಕಿರೀಟವನ್ನೇ ಭಂಡಾಸುರನಿಗೆ ತರಿಸಿಕೊಟ್ಟನು. ಆ ಕಿರೀಟವಾದರೋ ಜೀವವುಳ್ಳದ್ದೂ, ನಾಶವಾಗದುದೂ, ಬಾಲಸೂರ್ಯನಿಗೆ ಸಮಾನವಾದ ಕಾಂತಿಯುಳ್ಳದ್ದೂ, ದೈತ್ಯಚಕ್ರವರ್ತಿಗಳಿಗೆ ಮಾತ್ರ ಭೂಷಣಪ್ರಾಯವಾದುದೂ ಆಗಿದ್ದಿತು. ಇಂತಹ ಅನುಪಮವಾದ ಕಿರೀಟವನ್ನು ಆ ದಾನವನು ಧರಿಸಿ ಬೆಳಗಿದನು.

೮. ಕಾಂತಿಯಲ್ಲಿ ಚಂದ್ರನಿಗೆ ಸಮಾನಗಳಾಗಿ, ಸಜೀವವೂ, ಬ್ರಹ್ಮನಿರ್ಮಿತವೂ ಆದ ಚಾಮರಗಳೂ ಶುಕ್ರಾಚಾರ್ಯನಿಂದಲೇ ಅವನಿಗೆ

**ತಸ್ಯಾತಪತ್ರಂ ಪ್ರದದೌ ಬ್ರಹ್ಮಣೈವ ಪುರಾ ಕೃತಂ ।**
**ಯಸ್ಯ ಚ್ಛಾಯಾನಿಷಣ್ಣಸ್ತು ಬಾಧ್ಯತೇ ನಾಸ್ತ್ರಕೋಟಿಭಿಃ ॥ ೯ ॥**
**ಧನುಶ್ಚ ವಿಜಯಂ ನಾಮ ಖಡ್ಗಂ ಚ ರಿಪುಘಾತಿನಂ ।**
**ಅನ್ಯಾನ್ಯಪಿ ಮಹಾರ್ಹಾಣಿ ಭೂಷಣಾನಿ ಪ್ರದತ್ತವಾನ್ ।**
**ತಸ್ಯ ಸಿಂಹಾಸನಂ ಪ್ರಾದಾದಕ್ಷಯಂ ಸೂರ್ಯಸಂನಿಭಂ ॥ ೧೦ ॥**
**ತತಃ ಸಿಂಹಾಸನಾಸೀನಃ ಸರ್ವಾಭರಣಭೂಷಿತಃ ।**
**ಬಭೂವಾತೀವ ತೇಜಸ್ವೀ ರತ್ನಮುತ್ತೇಜಿತಂ ಯಥಾ ॥ ೧೧ ॥**
**ಬಭೂವುರಥ ದೈತೇಯಾಸ್ತಸ್ಯಾಷ್ಟೌ ತು ಮಹಾಬಲಾಃ ।**
**ಇಂದ್ರಶತ್ರುರಮಿತ್ರಘ್ನೋ ವಿದ್ಯುನ್ಮಾಲೀ ವಿಭೀಷಣಃ ।**
**ಉಗ್ರಕರ್ಮೋಗ್ರಧನ್ವಾ ಚ ವಿಜಯಃ ಶ್ರುತಿಪಾರಗಃ । ॥ ೧೨ ॥**
**ಸಂಮೋಹಿನೀ ಕುಮುದಿನೀ ಚಿತ್ರಾಂಗೀ ಸುಂದರೀ ತಥಾ ।**
**ಚತಸ್ರೋ ವನಿತಾಸ್ತಸ್ಯ ಬಭೂವುಃ ಪ್ರಿಯದರ್ಶನಾಃ ॥ ೧೩ ॥**

---

ದೊರೆತವು. ಈ ಚಾಮರಗಳ ಸೇವೆಯನ್ನು ಪಡೆದವರಿಗೆ ರೋಗಗಳಾಗಲಿ, ದುಃಖಗಳಾಗಲಿ ಇರುವುದೇ ಇಲ್ಲವು.

೯. ಶುಕ್ರನು ಆ ದೈತ್ಯೇಂದ್ರನಿಗೆ, ಪೂರ್ವದಲ್ಲಿ ಬ್ರಹ್ಮನೇ ನಿರ್ಮಿಸಿದ ಬೆಳುಗೊಡೆಯನ್ನೂ ಕೊಟ್ಟನು. ಅದರ ನೆರಳಿನಲ್ಲಿರುವವರಿಗೆ ಶತ್ರುಗಳು ಪ್ರಯೋಗಿಸಿದ ಅಸ್ತ್ರಶಸ್ತ್ರಗಳಿಂದ ಯಾವ ತೊಂದರೆಯೂ ಉಂಟಾಗದು.

೧೦. ತರುವಾಯ ಆ ದೈತ್ಯಗುರುವು ಅವನಿಗೆ ಅಮೂಲ್ಯಗಳಾದ ಇತರ ಭೂಷಣಗಳನ್ನೂ ಕೊಟ್ಟು, ಅಕ್ಷಯವೂ, ಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯುಳ್ಳದೂ ಆದ ಸಿಂಹಾಸನವನ್ನೂ ಅನುಗ್ರಹಿಸಿದನು.

೧೧. ಆಗಲಾ ಭಂಡಾಸುರನು, ಸರ್ವಾಭರಣಭೂಷಿತನಾಗಿ ಆ ಸಿಂಹಾಸನದಲ್ಲಿ ಕುಳಿತು, ಸಾಣೆಹಿಡಿದ ವಜ್ರದಂತೆ ಮಹಾತೇಜಸ್ವಿಯಾಗಿ ಬೆಳಗಿದನು.

೧೨. ತರುವಾಯ ಅವನಿಗೆ ಮಹಾಬಲಾಢ್ಯರಾದ ಇಂದ್ರಶತ್ರು, ಅಮಿತ್ರಘ್ನ, ವಿದ್ಯುನ್ಮಾಲೀ, ವಿಭೀಷಣ, ಉಗ್ರಕರ್ಮಾ, ಉಗ್ರಧನ್ವಾ, ವಿಜಯ, ಶ್ರುತಿಪಾರಗ ಎಂಬ ಎಂಟು ಮಂದಿ ದೈತ್ಯರು ಮಂತ್ರಿಗಳಾದರು.

೧೩. ಬಹು ಲಾವಣ್ಯವತಿಯರಾದ ಸಂಮೋಹಿನೀ, ಕುಮುದಿನೀ,

ತಮುಸೇವಂತ ಕಾಲಜ್ಞಾ ದೇವಾಃ ಸರ್ವೇ ಸವಾಸವಾಃ ॥ ೧೪ ॥
ಸ್ಯಂದನಾಸ್ತುರಗಾ ನಾಗಾಃ ಪಾದಾತಾಶ್ಚ ಸಹಸ್ರಶಃ ।
ಸಂಬಭೂವುರ್ಮಹಾಕಾಯಾ ಮಹಾಂತೋ ಜಿತಕಾಶಿನಃ ॥ ೧೫ ॥
ಬಭೂವುರ್ದಾನವಾಸ್ಸರ್ವೇ ಭೃಗುಪುತ್ರ ಮತಾನುಗಾಃ ।
ಅರ್ಚಯಂತೋ ಮಹಾದೇವಮಾಸ್ಥಿತಾಃ ಶಿವಶಾಸನೇ ॥ ೧೬ ॥
ಬಭೂವುರ್ದಾನವಾಸ್ತತ್ರ ಪುತ್ರಪೌತ್ರಧನಾನ್ವಿತಾಃ ।
ಗೃಹೇ ಗೃಹೇ ಚ ಯಜ್ಞಾಶ್ಚ ಸಂಬಭೂವುಃ ಸಮಂತತಃ ॥ ೧೭ ॥
ಋಚೋಯಜೂಂಷಿ ಸಾಮಾನಿ ಮೀಮಾಂಸಾನ್ಯಾಯಕಾದಯಃ ।
ಪ್ರವರ್ತಂತೇಽಸ್ಮ ದೈತ್ಯಾನಾಂ ಗೃಹಂ ಪ್ರತಿ ಗೃಹಂ ಪ್ರತಿ ॥ ೧೮ ॥

---

ಚಿತ್ರಾಂಗೀ, ಸುಂದರೀ ಎಂಬ ನಾಲ್ಕು ಜನ ಸ್ತ್ರೀಯರು ಅವನಿಗೆ ಮಡದಿಯರಾದರು.

೧೪. ಇಷ್ಟೆಲ್ಲ ವೈಭವದಿಂದ ಮೆರೆಯುತ್ತಿರುವ ಆ ದಾನವೇಂದ್ರನನ್ನು ನೋಡಿ, ಕಾಲವನ್ನು ಬಲ್ಲವರಾದ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಅವನನ್ನು ಸೇವಿಸಲುಪಕ್ರಮಿಸಿದರು.

೧೫. ಶತ್ರುಮರ್ದನನಾದ ಆ ಭಂಡಾಸುರನಿಗೆ ರಥ, ತುರಗ, ಗಜ, ಪದಾತಿಗಳೆಂಬ ಚತುರಂಗ ಸೇನೆಗಳೂ ಅಸಂಖ್ಯಾಕವಾಗಿ ಸೇರಿದವು. ಅವು ಬಹು ಬಲಾಢ್ಯವಾಗಿಯೂ ಮಹತ್ತರವಾಗಿಯೂ ಇದ್ದುವು.

೧೬. ಆಗ ದಾನವರೆಲ್ಲರೂ ಭೃಗುಪುತ್ರನಾದ ಶುಕ್ರಾಚಾರ್ಯನ ಅಪ್ಪಣೆಯಂತೆಯೇ ನಡೆಯುತ್ತ ಮಹಾದೇವನನ್ನು ಆರಾಧಿಸಿ ಆತನ ಅನುಗ್ರಹದಿಂದ ಸುಖವಾಗಿದ್ದರು.

೧೭. ದಾನವೇಂದ್ರನ ರಾಜಧಾನಿಯಾದ ಆ ಶೋಣಿತಪುರದಲ್ಲಿ ಸಮಸ್ತದಾನವರೂ ಮಕ್ಕಳು ಮೊಮ್ಮಕ್ಕಳನ್ನು ಪಡೆದು ಸರ್ವೈಶ್ವರ್ಯಯುಕ್ತರಾಗಿದ್ದರು. ಆ ಪಟ್ಟಣದಲ್ಲಿ ಮನೆಮನೆಯಲ್ಲಿಯೂ ಯಜ್ಞಗಳು ನಡೆಯುತ್ತಿದ್ದವು.

೧೮. ಆ ದಾನವರ ಪ್ರತಿಮನೆಯಲ್ಲಿಯೂ, ಋಕ್, ಯಜುಸ್ಸು, ಸಾಮಗಳೆಂಬ ವೇದಗಳ, ಮೀಮಾಂಸಾ ನ್ಯಾಯ ಮೊದಲಾದ ಶಾಸ್ತ್ರಗಳ ಪಾಠಪ್ರವಚನಗಳು ಯಾವಾಗಲೂ ನಡೆಯುತ್ತಿದ್ದವು.

**ಯಥಾಽಽಶ್ರಮೇಷು ಮುಖ್ಯೇಷು ಮುನೀನಾಂ ಚ ದ್ವಿಜನ್ಮನಾಂ ।**
**ತಥಾ ಯಜ್ಞೇಷು ದೈತ್ಯಾನಾಂ ಬಭೂವುರ್ಹವ್ಯಭೋಜಿನಃ ॥ ೧೯ ॥**
**ಏವಂ ಕೃತವತೋಽಪ್ಯಸ್ಯ ಭಂಡಸ್ಯ ಜಿತಕಾಶಿನಃ ।**
**ಷಷ್ಟಿವರ್ಷಸಹಸ್ರಾಣಿ ವ್ಯತೀತಾನಿ ಕ್ಷಣಾರ್ಧವತ್ ॥ ೨೦ ॥**
**ವರ್ಧಮಾನಮಥೋ ದೈತ್ಯಂ ತಪಸಾ ಚ ಬಲೇನ ಚ ।**
**ಹೀಯಮಾನಬಲಂ ಚೇಂದ್ರಂ ಸಂಪ್ರೇಕ್ಷ್ಯ ಕಮಲಾಪತಿಃ ॥ ೨೧ ॥**
**ಸಸರ್ಜ ಮನಸಾ ಕಾಂಚಿನ್ಮಾಯಾಂ ಲೋಕವಿಮೋಹಿನೀಂ ।**
**ತಾಮುವಾಚ ತತೋ ಮಾಯಾಂ ದೇವದೇವೋ ಜನಾರ್ದನಃ ॥೨೨॥**
**ತ್ವಂ ಹಿ ಸರ್ವಾಣಿ ಭೂತಾನಿ ಮೋಹಯಂತೀ ನಿಜೌಜಸಾ ।**
**ವಿಚರಸ್ವ ಯಥಾಕಾಮಂ ತ್ವಾಂ ನ ಜೇಷ್ಯತಿ ಕಶ್ಚನ ॥ ೨೩ ॥**
**ತ್ವಂ ತು ಶೀಘ್ರಮಿತೋ ಗತ್ವಾ ಭಂಡಂ ದೈತೇಯನಾಯಕಂ ।**
**ಮೋಹಯಿತ್ವಾಽಚಿರೇಣೈವ ವಿಷಯಾನುಪಭೋಕ್ಷ್ಯಸಿ ॥ ೨೪ ॥**

---

೧೯. ಬ್ರಹ್ಮ ಕ್ಷತ್ರಿಯ ವೈಶ್ಯಜಾತೀಯರಾದ ಮುನಿಗಳ ಆಶ್ರಮ ಗಳಲ್ಲಿ ಹೇಗೆಯೋ ಹಾಗೆಯೇ ಆ ದಾನವರ ಯಾಗ ಯಜನಾದಿ ಗಳಲ್ಲಿಯೂ ದೇವತೆಗಳು ಹವಿಸ್ಸನ್ನು ಭುಜಿಸುತ್ತಿದ್ದರು.

೨೦. ಮಹಾತೇಜಸ್ವಿಯಾದ ಆ ಭಂಡಾಸುರನು ಈ ರೀತಿ ಸುಖವಾಗಿ ರಾಜ್ಯಭಾರಮಾಡುತ್ತಿರುವಂತೆಯೇ, ಮಹಾದೇವನು ಅನುಗ್ರಹಿಸಿದ್ದ ಅರುವತ್ತು ಸಾವಿರ ವರ್ಷಗಳ ಕಾಲವೂ ಕ್ಷಣಾರ್ಧದಂತೆ ಕಳೆದುಹೋಯಿತು.

೨೧-೨೨. ತರುವಾಯ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು, ತಪಸ್ಸಿನಿಂದಲೂ ಬಲದಿಂದಲೂ ವೃದ್ಧಿಹೊಂದುತ್ತಿರುವ ಆ ದಾನವನನ್ನೂ, ದಿನದಿನವೂ ಬಲಗುಂದುತ್ತಿರುವ ಮಹೇಂದ್ರನನ್ನೂ ಕಂಡು, ಲೋಕವನ್ನೇ ಮುಗ್ಧಗೊಳಿಸುವ ಒಂದಾನೊಂದು ಮಾಯೆಯನ್ನು ತನ್ನ ಮನಸ್ಸಿನಿಂದಲೇ ಸೃಜಿಸಿದನು. ತರುವಾಯ ದೇವದೇವನಾದ ಆ ಜನಾರ್ದನನು ಆ ಮಾಯೆಯನ್ನು ಕುರಿತು ಹೀಗೆ ಹೇಳಿದನು:

೨೩. "ಎಲೌ! ನೀನು ಸಮಸ್ತ ಭೂತಗಳನ್ನೂ ನಿನ್ನ ತೇಜಸ್ಸಿನಿಂದಲೇ ಸಂಮೋಹಗೊಳಿಸುತ್ತ ಸ್ವೇಚ್ಛಾನುಸಾರವಾಗಿ ಸಂಚರಿಸುತ್ತಿರು. ನಿನ್ನನ್ನು ಯಾರೂ ಗೆಲ್ಲುವುದಿಲ್ಲ.

೨೪. ನೀನು ಜಾಗ್ರತೆಯಾಗಿ ದೈತ್ಯನಾಯಕನಾದ ಭಂಡಾಸುರನ

**ಏವಂ ಲಬ್ಧವರಾ ಮಾಯಾ ತಂ ಪ್ರಣಮ್ಯ ಜನಾರ್ದನಂ । [೨೫ ॥**
**ಯಯಾಚೇಽಪ್ಸರಸಾಂ ಮುಖ್ಯಾಃ ಸಹಾಯಾರ್ಥೇತು ಕಾಶ್ಚನ ॥**
**ತಥೇತ್ಯಪ್ಸರಸೋ ಮುಖ್ಯಾ ಯುಯೋಜ ಸ ತಯಾ ಹರಿಃ ।**
**ತಾಭಿರ್ವಿಶ್ವಾಚೀಮುಖ್ಯಾಭಿಃ ಸಂಯುಕ್ತಾ ಸಾ ಮೃಗೇಕ್ಷಣಾ ॥**
**ಪ್ರಯಯೌ ಮಾನಸಸ್ಯಾಗ್ರ್ಯಂ ತಟಮುಜ್ಜ್ವಲಭೂರುಹಂ ॥ ೨೬ ॥**
**ಯತ್ರ ಕ್ರೀಡತಿ ದೈತ್ಯೇಂದ್ರೋ ನಿಜನಾರೀಭಿರನ್ವಿತಃ ।**
**ತತ್ರೈವ ಮೃಗಶಾವಾಕ್ಷೀ ಮೂಲೇ ಚಂಪಕಶಾಖಿನಃ ॥**
**ನಿವಾಸಮಕರೋದ್ರಮ್ಯಂ ಗಾಯಂತೀ ಮಧುರಸ್ವನಂ ॥ ೨೭ ॥**
**ಅಥಾಗತಸ್ತು ದೈತ್ಯೇಂದ್ರೋ ಬಲಿಭಿರ್ಮಂತ್ರಿಭಿರ್ವೃತಃ ।**
**ಶ್ರುತ್ವಾ ವೀಣಾನಿನಾದಂ ತು ದದರ್ಶ ಚ ವರಾಂಗನಾಂ ॥ ೨೮ ॥**

---

ಬಳಿಗೆ ಹೋಗಿ ಸ್ವಲ್ಪಕಾಲದಲ್ಲಿಯೇ ಅವನನ್ನೂ ಸಂಮೋಹಗೊಳಿಸಿ ವಿಷಯಸುಖಗಳೆಲ್ಲವನ್ನೂ ಅನುಭವಿಸುವೆ.''

೨೫. ಹೀಗೆ ವರಗಳನ್ನು ಪಡೆದಾದಮೇಲೆ ಆ ಮಾಯೆಯು ಆತನನ್ನು ನಮಸ್ಕರಿಸಿ, ತನ್ನ ಸಹಾಯಕ್ಕೋಸುಗ ಕೆಲಮಂದಿ ಅಪ್ಸರೆಯರನ್ನು ಬೇಡಿದಳು.

೨೬. ಶ್ರೀ ಹರಿಯೂ ಸಹ ಅವಳ ಪ್ರಾರ್ಥನೆಯನ್ನು ಮನ್ನಿಸಿ ಅಪ್ಸರೆಯರ ಸಹಾಯವನ್ನೂ ಅವಳಿಗೆ ದೊರಕಿಸಿದನು. ಮಹಾ ಸುಂದರಿಯೂ, ಮೃಗೇಕ್ಷಣೆಯೂ ಆದ ಆ ಮಾಯೆಯು ವಿಶ್ವಾಚಿಯೇ ಮೊದಲಾದ ಅಪ್ಸರೆಯರೊಡನೆ ಹೊರಟು ಮಾನಸಸರೋವರದ ತೀರದಲ್ಲಿ ಬಹು ರಮಣೀಯವಾಗಿ ಕಂಗೊಳಿಸುತ್ತಿರುವ, ಫಲಪುಷ್ಪಸಮೂಹಗಳಿಂದ ತುಂಬಿ ತುಳುಕುತ್ತಿರುವ ಪ್ರದೇಶಕ್ಕೆ ಬಂದು ಸೇರಿದಳು.

೨೭. ದೈತ್ಯೇಂದ್ರನಾದ ಭಂಡಾಸುರನೂ ಸಹ ಅನುದಿನವೂ ಆ ಪ್ರದೇಶದಲ್ಲಿಯೇ ತನ್ನ ಮಡದಿಯರೊಡಗೂಡಿ ವಿಹರಿಸುತ್ತಿದ್ದನು. ಮೃಗಶಾವಾಕ್ಷಿಯಾದ ಆ ಮಾಯೆಯು ಆ ವನದ ಸಂಪಗೆಯ ಮರವೊಂದ ರಡಿಯಲ್ಲಿ ರಮಣೀಯವಾದ ಭವನವನ್ನು ನಿರ್ಮಿಸಿಕೊಂಡು ಇಂಪಾದ ಧ್ವನಿಯಿಂದ ಹಾಡಲುಪಕ್ರಮಿಸಿದಳು.

೨೮. ಬಳಿಕ ದೈತ್ಯೇಂದ್ರನಾದ ಭಂಡಾಸುರನು ಮಹಾ ಪರಾಕ್ರಮಿ ಗಳಾದ ತನ್ನ ಮಂತ್ರಿಗಳೊಡನೆ ಆ ವನಕ್ಕೆ ಬಂದು ಅಲ್ಲಿ ವೀಣೆಯ ಮಧುರ ಸ್ವನವನ್ನು ಕೇಳಿ ಅದನ್ನು ನುಡಿಸಿ ಹಾಡುತ್ತಿದ್ದ ಆ ಸುಂದರಿ ಯನ್ನು ಕಂಡನು.

**ತಾಂ ದೃಷ್ಟ್ವಾ ಚಾರುಸರ್ವಾಂಗೀಂ ವಿದ್ಯುಲ್ಲೇಖಾಮಿವಾಪರಾಂ ।**
**ಮಾಯಾಮೋಹಮಹಾಗರ್ತೇ ಪತಿತೋ ಮದನಾಭಿಧೇ ॥ ೨೯ ॥**
**ಅಥಾಸ್ಯ ಮಂತ್ರಿಣಃ ಪೇತುರ್ಹೃದಯೇ ಸ್ಮರತಾಪಿತಾಃ ॥ ೩೦ ॥**
**ತೇನ ದೈತೇಯನಾಥೇನ ಚಿರಂ ಸಂಪ್ರಾರ್ಥಿತಾ ಸತೀ ।**
**ತೈಶ್ಚ ಸಂಪ್ರಾರ್ಥಿತಾಸ್ತಾಶ್ಚ ಪ್ರತಿಶುಶ್ರುವುರಂಜಸಾ ॥ ೩೧ ॥**
**ಯಾಸ್ತ್ವಲಭ್ಯಾ ಮಹಾಯಜ್ಞೈರಶ್ವಮೇಧಾದಿಕೈರಪಿ । [೩೨ ॥**
**ತಾ ಲಬ್ಧ್ವಾ ಮೋಹಿನೀಮುಖ್ಯಾ ನಿರ್ವೃತಿಂ ಪರಮಾಂ ಯಯುಃ ॥**
**ವಿಸಸ್ಮರುಸ್ತತೋ ವೇದಾಂಸ್ತಥಾ ದೇವಮುಮಾಪತಿಂ । [೩೩ ॥**
**ವಿಸಸರ್ಜುಸ್ತಥಾ ಯಜ್ಞಾನ್ ಕ್ರಿಯಾಶ್ಚಾನ್ಯಾಃ ಶುಭಾವಹಾಃ ॥**
**ಅವಮಾನಾಹತಶ್ಚಾಸೀತ್ತೇಷಾಮಪಿ ಪುರೋಹಿತಃ । [೩೪ ॥**
**ಮುಹೂರ್ತಮಿವ ತೇಷಾಂ ತು ಯಯುರಷ್ಟೌ ಶತಂ ಸಮಾಃ ॥**

---

೨೯. ಸರ್ವಾಂಗಮನೋಹರೆಯಾಗಿ ಮತ್ತೊಂದು ವಿದ್ಯುಲ್ಲೇಖೆಯೋ ಎಂಬಂತೆ ವಿರಾಜಿಸುತ್ತಿದ್ದ ಆ ರಮಣಿಯನ್ನು ಕಂಡಕೂಡಲೇ ದೈತ್ಯರಾಜನು ಕಾಮವೆಂಬ ಹೆಸರಿನ ಮಾಯಾಮೋಹಗಳ ದೊಡ್ಡ ಹಳ್ಳದಲ್ಲಿ ಬಿದ್ದನು.

೩೦. ಅವನ ಮಂತ್ರಿಗಳೂ ಮದನತಾಪಕ್ಕೆ ತುತ್ತಾಗಿ ಅದೇ ಹಳ್ಳದಲ್ಲಿಯೇ ಬಿದ್ದುಹೋದರು.

೩೧. ಆ ಮಾಯೆಯಾದರೋ ದಾನವನಾಥನಾದ ಭಂಡನು ಬಹುವಾಗಿ ಪ್ರಾರ್ಥಿಸಿದ ಬಳಿಕ ಅವನ ಇಷ್ಟಾರ್ಥವನ್ನು ಸಲ್ಲಿಸಲೊಪ್ಪಿ ಅವನಿಗೆ ವಶಳಾದಳು. ಇತ್ತ ವಿಶ್ವಾಚಿಯೇ ಮೊದಲಾದ ಅಪ್ಸರೆಯರೂ ಸಹ ಆ ದೈತ್ಯರಾಜನ ಮಂತ್ರಿಗಳ ಬೇಡಿಕೆಗೆ ಒಳಗಾಗಿ ಹೋದರು.

೩೨. ಹೀಗೆ, ದಾನವೇಂದ್ರನೂ, ಅವನ ಮಂತ್ರಿಗಳೂ, ಅಶ್ವಮೇಧವೇ ಮೊದಲಾದ ಮಹಾಯಜ್ಞಗಳಿಂದಲೂ ಹೊಂದಲಸದಳ ರಾದ ಆ ಮೋಹಿನಿಯನ್ನೂ, ವಿಶ್ವಾಚಿಯೇ ಮೊದಲಾದ ಅಪ್ಸರೆಯರನ್ನೂ ಪಡೆದು ತೃಪ್ತಿಯನ್ನು ಹೊಂದಿದರು.

೩೩. ಅವರೊಡಗೂಡಿ ಭೋಗಪರಾಯಣರಾಗಿ ಮೆರೆಯುತ್ತಿದ್ದ ಅವರೆಲ್ಲರೂ ಬಹು ಬೇಗನೆಯೇ ವೇದಗಳನ್ನೂ, ದೇವದೇವನಾದ ಮಹಾ ದೇವನನ್ನೂ ಮರೆತೇಹೋದರು; ಮಂಗಳಕರವಾದ ಯಜ್ಞಾದಿ ಸಮಸ್ತ ಸತ್ಕರ್ಮಗಳನ್ನೂ ತೊರೆದುಬಿಟ್ಟರು.

೩೪. ಕಡೆಗೆ ಅವರಿಗೆ ಹಿತೋಪದೇಶವನ್ನು ಮಾಡಬಂದ ಅವರ

**ಮೋಹಿತೇಷ್ವಥ ದೈತ್ಯೇಷು ಸರ್ವೇ ದೇವಾಃ ಸವಾಸವಾಃ । [೩೫ ॥**
**ವಿಮುಕ್ತೋಪದ್ರವಾ ಬ್ರಹ್ಮನ್ನಾಮೋದಂ ಪರಮಂ ಯಯುಃ ॥**
**ಕದಾಚಿದಥ ದೇವೇಂದ್ರಂ ದಿವ್ಯಸಿಂಹಾಸನಸ್ಥಿತಂ ।**
**ಸರ್ವದೇವೈಃ ಪರಿವೃತಂ ನಾರದೋ ಮುನಿರಾಯಯೌ ॥ ೩೬ ॥**
**ಪ್ರಣಮ್ಯ ಮುನಿಶಾರ್ದೂಲಂ ಜ್ವಲಂತಮಿವ ಪಾವಕಂ । [೩೭ ॥**
**ಕೃತಾಂಜಲಿಪುಟೋ ಭೂತ್ವಾ ದೇವೇಶೋ ವಾಕ್ಯಮಬ್ರವೀತ್ ॥**
**ಭಗವನ್ ಸರ್ವಧರ್ಮಜ್ಞ ಪರಾವರವಿದಾಂ ವರ ।**
**ಅತ್ರೈವಾಗಮನಂ ತೇಽದ್ಯ ಮಾಂ ಧನ್ಯಂ ಕರ್ತುಮಿಚ್ಛತಃ ॥**
**ಭವಿಷ್ಯಚ್ಛೋಭನಾಕಾರಂ ತವಾಗಮನಕಾರಣಂ ॥ ೩೮ ॥**
**ತ್ವದ್ವಾಕ್ಯಾಮೃತಮಾಕರ್ಣ್ಯ ಶ್ರವಣಾನಂದನಿರ್ಭರಃ ।**
**ಅಶೇಷದುಃಖಾದುತ್ತೀರ್ಯ ಕೃತಾರ್ಥಃ ಸ್ಯಾಂ ಮುನೀಶ್ವರ ॥ ೩೯ ॥**

---

ಪುರೋಹಿತನಾದ ಶುಕ್ರಾಚಾರ್ಯನಿಗೂ ಅವಮಾನವಾಗಿಹೋಯಿತು. ಹೀಗೆ, ಆ ದಾನವರು ಕೇವಲ ಕಾಮಪುರುಷಾರ್ಥದಲ್ಲಿಯೇ ತೊಡಗಿರಲು, ಎಂಟು ನೂರು ಸಂವತ್ಸರಗಳು ಕಳೆದುಹೋದವು.

೩೫. ಅವರೆಲ್ಲರೂ ಈ ರೀತಿ ಮೋಹಿತರಾಗಿಹೋಗಿರಲು, ಇಂದ್ರಾದಿ ದೇವತೆಗಳೆಲ್ಲರೂ ಅವರ ಉಪದ್ರವಗಳಿಂದ ಬಿಡುಗಡೆ ಹೊಂದಿ ಸಂತೋಷವನ್ನುಪಡೆದರು.

೩೬. ಬಳಿಕ ಒಂದಾನೊಂದು ದಿವಸ, ದೇವೇಂದ್ರನು ಸಮಸ್ತ ದೇವತೆಗಳಿಂದಲೂ ಪರಿವೃತನಾಗಿ, ದಿವ್ಯಸಿಂಹಾಸನದಲ್ಲಿ ಕುಳಿತಿರಲು, ದೇವರ್ಷಿಯಾದ ನಾರದನು ಅಲ್ಲಿಗೆ ಬಂದನು.

೩೭. ಆಗ ಮಹೇಂದ್ರನು ಯಜ್ಞೇಶ್ವರನಂತೆ ಬೆಳಗುತ್ತಿರುವ ಆ ಮುನಿಶ್ರೇಷ್ಠನನ್ನು ನಮಸ್ಕರಿಸಿ ಬದ್ಧಾಂಜಲಿಪುಟನಾಗಿ ಆತನನ್ನು ಕುರಿತು ಈ ರೀತಿ ಹೇಳಿದನು:

೩೮. "ಎಲೈ ಪೂಜ್ಯನೇ! ಸಕಲ ಧರ್ಮಗಳನ್ನೂ ತಿಳಿದವನಾಗಿ ಪರಾಪರಗಳನ್ನರಿತವರಲ್ಲಿ ಶ್ರೇಷ್ಠನಾದ ನೀನು ನನ್ನನ್ನು ಧನ್ಯನನ್ನಾಗಿ ಮಾಡಲೋಸುಗವೇ ಇಲ್ಲಿಗೆ ಚಿತ್ತೈಸಿರುವೆ. ನಿನ್ನ ಈ ಆಗಮನದ ನಿಮಿತ್ತವು ಮುಂದಿನ ಮಂಗಳವನ್ನು ಸೂಚಿಸತಕ್ಕುದಾಗಿದೆ.

೩೯. ಎಲೈ ಮುನೀಶ್ವರನೇ! ಅಮೃತೋಪಮವಾದ ನಿನ್ನ ಮಾತನ್ನು ಕೇಳಿ ಶ್ರವಣಾನಂದವನ್ನು ಪಡೆದು ಸಮಸ್ತ ದುಃಖಗಳನ್ನೂ ದಾಟಿ ಕೃತಾರ್ಥನಾಗಲಪೇಕ್ಷಿಸುವೆನು."

ನಾರದಃ—

ಅದ್ಯಸಂಮೋಹಿತೋಭಂಡೋದೈತ್ಯೇಂದ್ರೋ ವಿಷ್ಣುಮಾಯಯಾ ।
ತಯಾ ವಿಮುಕ್ತೋ ಲೋಕಾಂಸ್ತ್ರೀನ್ ದಹತ್ಯಗ್ನಿರಿವಾಪರಃ ॥ ೪೦ ॥
ಅಧಿಕಸ್ತ್ವ ತೇಜೋಭಿರಸ್ತ್ರೈರ್ಮಾಯಾಬಲೇನ ಚ ।
ತಸ್ಯ ತೇಜೋಽಪಹಾರಸ್ತು ಕರ್ತವ್ಯೋಽತಿಬಲಸ್ಯ ಚ ॥ ೪೧ ॥
ವಿನಾರಾಧನತೋ ದೇವ್ಯಾಃ ಪರಾಶಕ್ತೇಸ್ತಥಾ ಸತಿ ।
ಅಶಕ್ಯೋಽನ್ಯೇನ ತಪಸಾ ಕಲ್ಪಕೋಟಿಶತೈರಪಿ ॥ ೪೨ ॥
ಪುರೈವೋದಯತಃ ಶತ್ರೋರಾರಾಧಯತ ಬಾಲಿಶಾಃ ।
ಆರಾಧಿತಾ ಭಗವತೀ ಸಾ ವಃ ಶ್ರೇಯೋ ವಿಧಾಸ್ಯತಿ ॥ ೪೩ ॥
ಏವಂ ಸಂಬೋಧಿತಸ್ತೇನ ಶಕ್ರೋ ದೇವಗಣೇಶ್ವರಃ ।
ತಂ ಮುನಿಂ ಪೂಜಯಾಮಾಸ ಸರ್ವದೇವೈಃ ಸಮನ್ವಿತಃ ॥ ೪೪ ॥

---

೪೦. ಆಗ ನಾರದಮುನೀಂದ್ರನು ಅವನನ್ನು ಕುರಿತು, "ಮಹೇಂದ್ರಾ! ಈಗ ದೈತ್ಯೇಂದ್ರನಾದ ಭಂಡನು ವಿಷ್ಣುಮಾಯೆಯಿಂದ ಮೋಹಿತನಾಗಿರುವನು. ಅವನೇನಾದರೂ ಅವಳನ್ನು ತೊರೆದುದಾದರೆ, ಮತ್ತೊಬ್ಬ ಯಜ್ಞೇಶ್ವರನಂತೆ ಮೂರು ಲೋಕಗಳನ್ನೂ ಸುಡಲುಪಕ್ರಮಿಸುತ್ತಾನೆ.

೪೧. ಅಪಾರವಾದ ನಿನ್ನ ತೇಜಸ್ಸಿನಿಂದಲೂ ಅಸ್ತ್ರಶಸ್ತ್ರಗಳಿಂದಲೂ, ಮಾಯಾಬಲದಿಂದಲೂ ಈಗ ನೀನು ಮಹಾಬಲಿಷ್ಠನಾದ ಅವನ ತೇಜಸ್ಸನ್ನು ಅಪಹರಿಸಬೇಕು.

೪೨. ಈ ಕಾರ್ಯವು ಪರಾಶಕ್ತಿಯ ಆರಾಧನೆಯಿಂದಲ್ಲದೆ ಕಲ್ಪಕೋಟಿಗಳ ತಪಸ್ಸಿನಿಂದಲೂ ಸಾಧ್ಯವಾಗುವುದಿಲ್ಲ.

೪೩. ಆದುದರಿಂದ ನೀವೆಲ್ಲರೂ, ಶತ್ರುವು ಅಭಿವೃದ್ಧಿಯಾಗುವ ಮೊದಲೇ ದೇವಿಯನ್ನಾರಾಧಿಸಿರಿ. ನಿಮ್ಮಿಂದ ವಿಧ್ಯುಕ್ತವಾಗಿ ಪೂಜಿತೆಯಾದ ಆ ಭಗವತಿಯು ನಿಮ್ಮೆಲ್ಲರಿಗೂ ಶ್ರೇಯಸ್ಸನ್ನುಂಟು ಮಾಡುವಳು."

೪೪. ದೇವಗಣೇಶ್ವರನಾದ ಮಹೇಂದ್ರನು ನಾರದಮಹರ್ಷಿಯ ಈ ಉಪದೇಶವನ್ನು ಕೈಕೊಂಡು ಸಮಸ್ತ ದೇವತೆಗಳೊಡಗೂಡಿ ಆತನನ್ನು ಸತ್ಕರಿಸಿದನು.

ತಪಸೇ ಕೃತಸನ್ನಾಹೋ ಯಯೌ ಹೈಮವತಂ ತಟಂ ॥ ೪೫ ॥
ತತ್ರ ಭಾಗೀರಥೀತೀರೇ ಸರ್ವರ್ತುಕುಸುಮೋಜ್ಜ್ವಲೇ ।
ಪರಾಶಕ್ತೇರ್ಮಹಾಪೂಜಾಂ ಚಕ್ರೇಽಖಿಲಸುರೈಃ ಸಹ ॥ ೪೬ ॥
ಇಂದ್ರಪ್ರಸ್ಥಮಭೂನ್ನಾಮ್ನಾ ತದಾದ್ಯಖಿಲಸಿದ್ಧಿದಂ ॥ ೪೭ ॥
ನಾರದೇನೋಪದಿಷ್ಟೇನ ವಿಧಿನಾ ಪರದೇವತಾಂ ।
ಕುರ್ವತಾಂ ಮಹತೀಂ ಪೂಜಾಂ ಜಪಧ್ಯಾನರತಾತ್ಮನಾಂ ॥ ೪೮ ॥
ಉಗ್ರೇ ತಪಸಿ ಸಂಸ್ಥಾನಾಮನನ್ಯಾಯತ್ತಚೇತಸಾಂ ।
ದಶವರ್ಷಸಹಸ್ರಾಣಿ ದಶಾಹಾನೀವ ಸಂಯಯುಃ ॥ ೪೯ ॥
ಮೋಹಿತಾನಥ ತಾನ್ ದೃಷ್ಟ್ವಾ ಭೃಗುಪುತ್ರೋ ಮಹಾಮತಿಃ ।
ಭಂಡಾಸುರಂ ಸಮಭ್ಯೇತ್ಯ ನಿಜಗಾದ ಪುರೋಹಿತಃ ॥ ೫೦ ॥
ತ್ವಾಮೇವಾಶ್ರಿತ್ಯ ರಾಜೇಂದ್ರ ಸದಾ ದಾನವಸತ್ತಮಾಃ ।
ನಿರ್ಭಯಾಸ್ತ್ರಿಷು ಲೋಕೇಷು ಚರಂತೀಚ್ಛಾವಿಹಾರಿಣಃ ॥ ೫೧ ॥

---

೪೫. ತರುವಾಯ ಅವನು ತಪಸ್ಸಿಗೆ ಸಿದ್ಧನಾಗಿ ಹಿಮಗಿರಿಯ ತಪ್ಪಲಿಗೆ ಬಂದನು.

೪೬. ಅಲ್ಲಿ ಭಾಗೀರಥಿಯ ತೀರದಲ್ಲಿ ಎಲ್ಲ ಋತುಗಳಲ್ಲಿಯೂ ಕುಸುಮ ಸಮೃದ್ಧವಾದ ವೃಕ್ಷಗಳಿಂದ ತುಂಬಿ ತುಳುಕುತ್ತಿದ್ದ ರಮಣೀಯವಾದ ಪ್ರದೇಶವೊಂದರಲ್ಲಿ ಸಮಸ್ತ ದೇವತೆಗಳೊಡಗೂಡಿ ಅವನು ಪರಾಶಕ್ತಿಯ ಮಹಾಪೂಜೆಯನ್ನು ಮಾಡಿದನು.

೪೭. ಅಂದಿನಿಂದ ಆ ಸ್ಥಳವು ಸಕಲ ಸಿದ್ಧಿಪ್ರದವಾದ ಇಂದ್ರಪ್ರಸ್ಥ ವೆಂದು ಹೆಸರಾಯಿತು.

೪೮-೪೯. ಹೀಗೆ ಆ ದೇವತೆಗಳು, ನಾರದಮಹರ್ಷಿಯು ಉಪದೇಶಿಸಿದ ವಿಧಾನದಿಂದ ಪರದೇವತೆಯ ಮಹಾಪೂಜೆಯನ್ನೆಸಗಿ ಜಪಧ್ಯಾನ ಗಳಲ್ಲಿ ನಿರತರಾಗಿ ಉಗ್ರವಾದ ತಪಸ್ಸನ್ನಾಚರಿಸುತ್ತಿರಲು, ಹತ್ತು ಸಾವಿರ ವರ್ಷಗಳು ಹತ್ತು ದಿನಗಳಂತೆ ಕಳೆದುಹೋದವು.

೫೦. ಇತ್ತ ದೈತ್ಯಪುರೋಹಿತನಾದ ಶುಕ್ರಾಚಾರ್ಯನು ದಾನವ ರೆಲ್ಲರೂ ವಿಷ್ಣು ಮಾಯಾಮೋಹಿತರಾಗಿರುವುದನ್ನು ಕಂಡು ಭಂಡಾಸುರನ ಬಳಿಗೆ ಬಂದು ಅವನನ್ನು ಕುರಿತು ಹೀಗೆ ಹೇಳಿದನು:

೫೧. "ಎಲೈ ರಾಜೇಂದ್ರನೇ! ದಾನವಶ್ರೇಷ್ಠರೆಲ್ಲರೂ ಪ್ರಭುವಾದ ನಿನ್ನನ್ನಾಶ್ರಯಿಸಿ ಮೂರು ಲೋಕಗಳಲ್ಲಿಯೂ ಏನೊಂದೂ ಭಯವಿಲ್ಲದೆ ಸ್ವೇಚ್ಛಾವಿಹಾರಿಗಳಾಗಿ ಸಂಚರಿಸುತ್ತಿರುವರು.

**ಜಾತಿಮಾತ್ರೇಣ ಭವತೋ ಹಂತಿ ಸರ್ವಾನ್ ಸದಾ ಹರಿಃ । [೫೨ ॥**
**ತೇನೈವ ನಿರ್ಮಿತಾ ಮಾಯಾ ಯಯಾ ಸಂಮೋಹಿತೋ ಭವಾನ್ ॥**
**ಭವಂತಂ ಮೋಹಿತಂ ದೃಷ್ಟ್ವಾ ರಂಧ್ರಾನ್ವೇಷಣತತ್ಪರಃ ।**
**ಭವತಾಂ ವಿಜಯಾರ್ಥಾಯ ಕರೋತೀಂದ್ರೋ ಮಹತ್ತಪಃ ।**
**ಯದಿ ತುಷ್ಟಾ ಜಗದ್ಧಾತ್ರೀ ತಸ್ಯೈವ ವಿಜಯೋ ಭವೇತ್ ॥ ೫೩ ॥**
**ಇಮಾಂ ಮಾಯಾಮಯೀಂ ತ್ಯಕ್ತ್ವಾ ಮಂತ್ರಿಭಿಃ ಸಹಿತೋಭವಾನ್।**
**ಗತ್ವಾ ಹೈಮವತಂ ಶೈಲಂ ಪರೇಷಾಂ ವಿಘ್ನಮಾಚರ ॥ ೫೪ ॥**
**ಏವಮುಕ್ತಸ್ತು ಗುರುಣಾ ಹಿತ್ವಾ ಪರ್ಯಂಕಮುತ್ಥಿತಃ ।**
**ಮಂತ್ರಿಶ್ರೇಷ್ಠಾನಥಾಹೂಯ ಯಥಾವೃತ್ತಾಂತಮಾಹ ಸಃ ॥೫೫॥**
**ತಚ್ಛ್ರುತ್ವಾ ನೃಪತಿಂ ಪ್ರಾಹ ಶ್ರುತವರ್ಮಾ ವಿಮೃಶ್ಯ ಚ ।**
**ಷಷ್ಟಿವರ್ಷಸಹಸ್ರಾಣಿ ರಾಜ್ಯಂ ತವ ಶಿವಾರ್ಪಿತಂ ॥**
**ತಸ್ಮಾದಪ್ಯಧಿಕಂ ವೀರ ಗತಮಾಸೀದನೇಕಶಃ ॥ ೫೬ ॥**

---

೫೨. ಮಹಾರಾಜ! ಶ್ರೀಹರಿಯು ಯಾವಾಗಲೂ ದಾನವ ಜಾತಿಯೆಂತಲೇ ನಿಮ್ಮನ್ನು ಕೊಲ್ಲುತ್ತಾನೆ. ನೀನು ಯಾವ ಮಾಯೆಯನ್ನು ಕಂಡು ಸಂಮೋಹಿತನಾಗಿರುವಿಯೋ ಅದನ್ನು ಆ ವಿಷ್ಣುವೇ ನಿರ್ಮಿಸಿದನು.

೫೩. ನೀನು ಈ ರೀತಿ ಆ ಮಾಯೆಗೆ ಒಳಗಾಗಿರುವುದನ್ನು ಕಂಡು ರಂಧ್ರಾನ್ವೇಷಣತತ್ಪರನಾದ ಮಹೇಂದ್ರನು ನಿಮ್ಮೆಲ್ಲರನ್ನೂ ಜಯಿಸುವುದಕ್ಕಾಗಿಯೇ ಮಹಾದೇವಿಯನ್ನು ಕುರಿತು ಮಹತ್ತರವಾದ ತಪಸ್ಸನ್ನೆಸಗುತ್ತಿರುವನು. ಜಗದ್ಧಾತ್ರಿಯಾದ ದೇವಿಯು ಅವನ ತಪಸ್ಸಿನಿಂದ ಸಂತುಷ್ಟಳಾದುದೇ ಆದರೆ ಅವನಿಗೇ ವಿಜಯವಾಗುತ್ತದೆ.

೫೪. ಆದುದರಿಂದ ನೀನು ಈ ಮಾಯೆಯನ್ನು ದೂರಮಾಡಿ, ಮಂತ್ರಿಗಳೊಡಗೂಡಿ ಈಗಲೇ ಹಿಮವತ್ಪರ್ವತಕ್ಕೆ ಹೋಗಿ ಶತ್ರುಗಳಾದ ಆ ದೇವತೆಗಳ ತಪಸ್ಸಿಗೆ ವಿಘ್ನವನ್ನು ಆಚರಿಸು."

೫೫. ಶುಕ್ರಾಚಾರ್ಯನು ಈ ರೀತಿ ಎಚ್ಚರಿಸಲು, ಆ ಭಂಡಾಸುರನು ತಕ್ಷಣವೇ ಮಂಚವನ್ನು ಬಿಟ್ಟೆದ್ದು ಮಂತ್ರಿಶ್ರೇಷ್ಠರೆಲ್ಲರನ್ನೂ ಕರೆದು ಅವರಿಗೆ ಈ ವಿಚಾರವೆಲ್ಲವನ್ನೂ ತಿಳಿಸಿದನು.

೫೬. ಅದನ್ನು ಕೇಳಿ ಶ್ರುತವರ್ಮನೆಂಬ ಮಂತ್ರಿಯು ಚೆನ್ನಾಗಿ ಆಲೋಚಿಸಿ ಆತನನ್ನು ಕುರಿತು ಹೀಗೆ ಹೇಳಿದನು:—"ಎಲೈ ವೀರನೇ! ಪರಮೇಶ್ವರನು ನಿನಗೆ ಅರುವತ್ತು ಸಾವಿರ ವರ್ಷಗಳ ಆಳ್ವಿಕೆಯನ್ನು

**ಅಶಕ್ಯಪ್ರತಿಕಾರ್ಯೋಽಯಂ ಯಃ ಕಾಲಃ ಶಿವಚೋದಿತಃ ।**
**ಕಾಲೇ ತು ಭೋಗಃ ಕರ್ತವ್ಯೋ ದುಃಖಸ್ಯ ಚ ಸುಖಸ್ಯ ಚ ॥ ೫೭ ॥**
**ತದಾಹ ಭೀಮುಕರ್ಮಾಖ್ಯೋ ನೋಪೇಕ್ಷ್ಯೋಽರಿರ್ಯಥಾಬಲಂ ।**
**ಕ್ರಿಯಾವಿಘ್ನೇ ಕೃತೇಽಸ್ಮಾಭಿರ್ವಿಜಯಸ್ತೇ ಭವಿಷ್ಯತಿ ॥ ೫೮ ॥**
**ತವ ಯುದ್ಧೇ ಮಹಾರಾಜ ಪರಾರ್ಧಬಲಹಾರಿಣೀ ।**
**ದತ್ತಾ ವಿದ್ಯಾ ಶಿವೇನೈವ ತಸ್ಮಾತ್ತೇ ವಿಜಯಃ ಸದಾ ॥ ೫೯ ॥**
**ಅನುಮೇನೇ ಚ ತದ್ವಾಕ್ಯಂ ಭಂಡೋ ದಾನವನಾಯಕಃ ।**
**ನಿರ್ಗತ್ಯ ಸಹ ಸೇನಾಭಿರ್ಯಯೌ ಹಿಮವತಸ್ತಟಂ ॥ ೬೦ ॥**
**ತಪೋವಿಘ್ನಕರಾನ್ ದೃಷ್ಟ್ವಾ ದಾನವಾನ್ ಜಗದಂಬಿಕಾ ।**
**ಅಲಂಘ್ಯಮಕರೋದಗ್ರೇ ಮಾಯಾಪ್ರಾಕಾರಮುಜ್ಜ್ವಲಂ ॥ ೬೧ ॥**

---

ಅನುಗ್ರಹಿಸಿದ್ದನು. ಈಗ ಅದಕ್ಕಿಂತಲೂ ಎಷ್ಟೋ ಹೆಚ್ಚಿನ ವರ್ಷಗಳು ಕಳೆದುಹೋದವು.

೫೭. ಪರಮೇಶ್ವರನೇ ಅನುಗ್ರಹಿಸಿದ ಈ ಕಾಲಕ್ಕೆ ಪ್ರತೀಕಾರವನ್ನೇನೂ ಮಾಡಲು ಸಾಧ್ಯವಾಗದು. ಆದುದರಿಂದ ಸುಖದುಃಖಗಳ ಅನುಭವವೆಲ್ಲವನ್ನೂ ಯುಕ್ತವಾದ ಕಾಲದಲ್ಲಿಯೇ ಪಡೆಯುವುದು ಸೂಕ್ತವಾಗಿ ತೋರುತ್ತದೆ."

೫೮. ಬಳಿಕ ಭೀಮುಕರ್ಮನೆಂಬ ಮಂತ್ರಿಯು, "ಪ್ರಭುವೇ! ಬಲಶಾಲಿಯಾಗಿರಲಿ, ಇಲ್ಲದಿರಲಿ ಶತ್ರುವೆನಿಸಿದವನನ್ನು ಉಪೇಕ್ಷೆ ಮಾಡತಕ್ಕುದಲ್ಲ. ಈಗ ನಿನ್ನ ಶತ್ರುಗಳಾದ ಆ ದೇವತೆಗಳು ಆಚರಿಸುತ್ತಿರುವ ತಪಸ್ಸಿಗೆ ವಿಘ್ನವನ್ನು ಮಾಡಿದಲ್ಲಿ ನಿನಗೇ ವಿಜಯವು ಲಭಿಸುತ್ತದೆ.

೫೯. ಮಹಾರಾಜ! ಯುದ್ಧದಲ್ಲಿ ಶತ್ರುವಿನ ಅರ್ಧಬಲವು ನಿನಗೆ ಬರುವಂತಹ ವಿದ್ಯೆಯನ್ನು ಪರಮೇಶ್ವರನೇ ನಿನಗೆ ಅನುಗ್ರಹಿಸಿರುವನಲ್ಲವೇ! ಆದುದರಿಂದ ಯಾವಾಗಲೂ ನಿನಗೇ ಜಯವು ಲಭಿಸುವುದು" ಎಂದು ಹೇಳಿದನು.

೬೦. ಭೀಮುಕರ್ಮನ ಈ ಮಾತುಗಳನ್ನು ಕೇಳಿ ಭಂಡಾಸುರನು, ಅದರಂತೆಯೇ ನಡೆಯಲೊಪ್ಪಿ, ಕೂಡಲೇ ಸೈನ್ಯಸಮೇತನಾಗಿ ಹೊರಟು ಹಿಮಗಿರಿಯ ತಪ್ಪಲಿಗೆ ಬಂದನು.

೬೧. ಹೀಗೆ ದೇವತೆಗಳ ತಪಸ್ಸಿಗೆ ವಿಘ್ನವನ್ನೆಸಗಲು ಬಂದಿರುವ

**ತಂ ದೃಷ್ಟ್ವಾ ದಾನವೇಂದ್ರೋಽಪಿ ಕಿಮೇತದಿತಿ ವಿಸ್ಮಿತಃ ।**
**ಸಂಕ್ರುದ್ಧೋ ದಾನವಾಸ್ತ್ರೇಣ ಬಭಂಜಾತಿಬಲೇನ ತು ॥ ೬೨ ॥**
**ಪುನರೇವ ತದಗ್ರೇಽಭೂದಲಂಘ್ಯಂ ಸರ್ವದಾನವೈಃ ।**
**ವಾಯವ್ಯಾಸ್ತ್ರೇಣ ತದ್ಧೀರೋ ಬಭಂಜ ಚ ನನಾದ ಚ ॥ ೬೩ ॥**
**ಪೌನಃಪುನ್ಯೇನ ತದ್ಭಗ್ನಮಭೂತ್ಪುನರುಪಸ್ಥಿತಂ । [೬೪ ॥**
**ಏತದ್ದೃಷ್ಟ್ವಾ ತು ದೈತ್ಯೇಂದ್ರೋ ವಿಷಣ್ಣಃ ಸ್ವಪುರಂ ಯಯೌ ॥**
**ತಾಂ ಚಾಽದೃಷ್ಟ್ವಾ ಜಗದ್ಧಾತ್ರೀಂ ದೃಷ್ಟ್ವಾ ತದ್ಘೋರಸೈನಿಕಂ ।**
**ಭಯಾದ್ದುದ್ರುವಿರೇ ದೇವಾ ವಿಮುಕ್ತಸಕಲಕ್ರಿಯಾಃ ॥ ೬೫ ॥**
**ತಾನುವಾಚ ವೃತೀ ಶಕ್ರೋ ದೈತ್ಯೇಂದ್ರೋಽಯಮಿಹಾಗತಃ ।**
**ಅಶಕ್ಯಂ ಸಮರೇ ಯೋದ್ಧುಮಸ್ಮಾಭಿರಖಿಲೈರಪಿ ॥ ೬೬ ॥**

---

ಆ ದಾನವರನ್ನು ಕಂಡು ಜಗದಂಬಿಕೆಯು ಅಲ್ಲಿಯೇ ದಾಟಲಸದಳವಾದ ಒಂದು ಮಾಯಾ ಪ್ರಾಕಾರವನ್ನು ನಿರ್ಮಿಸಿದಳು.

೬೨. ದಾನವೇಂದ್ರನೂ ಸಹ ಅದನ್ನು ನೋಡಿ ಇದೇನಿರಬಹುದೆಂದು ವಿಸ್ಮಿತನಾಗಿ, ಕೋಪಗೊಂಡು ಅತಿ ಬಲಿಷ್ಠವಾದ ದಾನವಾಸ್ತ್ರದಿಂದ ಒಡನೆಯೇ ಅದನ್ನು ಭೇದಿಸಿದನು.

೬೩. ಆದರೆ, ದಾನವರೆಲ್ಲರಿಗೂ ದಾಟಲಶಕ್ಯವಾದ ಆ ಮಾಯಾ ಪ್ರಾಕಾರವು ಅಲ್ಲಿಯೇ ಮತ್ತೆ ಉದ್ಭವಿಸಿತು. ಮಹಾವೀರನಾದ ಭಂಡಾಸುರನಾದರೋ ಅದನ್ನು ವಾಯವ್ಯಾಸ್ತ್ರದಿಂದ ಮತ್ತೆ ಭೇದಿಸಿ ಕೆಡವಿ ಸಿಂಹನಾದ ಮಾಡಿದನು.

೬೪. ಆದರೆ ಆ ದೈತ್ಯೇಂದ್ರನು ಮಾಯಾಪ್ರಾಕಾರವನ್ನು ಹೊಡೆದು ಕೆಡವಿದಷ್ಟೂ ಹೊಸ ಹೊಸತಾಗಿ ಅದು ಸಿದ್ಧವಾಗುತ್ತಲೇ ಇದ್ದಿತು. ಇಂತಹ ಅದ್ಭುತವಾದ ಪ್ರಾಕಾರವನ್ನು ನೋಡಿ ಆ ದಾನವನು ಕಡೆಗೆ ಏನೂ ಮಾಡಲಾರದೆ ಕೇವಲ ವಿಷಣ್ಣನಾಗಿ ತನ್ನ ಪಟ್ಟಣಕ್ಕೆ ಹಿಂತಿರುಗಿದನು.

೬೫. ದೇವತೆಗಳಾದರೋ ಪರದೇವತೆಯನ್ನು ಕಾಣದೆ, ಆ ಭಂಡಾಸುರನ ಭಯಂಕರ ಸೇನೆಯನ್ನು ಕಂಡು ಸಮಸ್ತ ಕಾರ್ಯಗಳನ್ನೂ ತೊರೆದು ಭಯದಿಂದ ಓಡಿಹೋದರು.

೬೬. ತರುವಾಯ ದೇವನಾಥನಾದ ಶಕ್ರನು ಎಲ್ಲರನ್ನೂ ಕುರಿತು, "ಎಲೈ ದೇವತೆಗಳಿರಾ! ದೈತ್ಯರಾಜನಾದ ಈ ಭಂಡನು ಇಲ್ಲಿಗೂ ಬಂದು

**ಪಲಾಯಿತಾನಾಮಪಿ ನೋ ಗತಿರನ್ಯಾ ನ ಕುತ್ರಚಿತ್ ।**
**ಕುಂಡಂ ಯೋಜನವಿಸ್ತಾರಂ ಸಮ್ಯಕ್ಕೃತ್ವಾ ತು ಶೋಭನಂ ॥ ೧೭ ॥**
**ಮಹಾಯಾಗವಿಧಾನೇನ ಪ್ರಣಿಧಾಯ ಹುತಾಶನಂ ।**
**ಯಜಾಮ ಪರಮಾಂ ಶಕ್ತಿಂ ಮಹಾಮಾಂಸೈರ್ವಯಂ ಸುರಾಃ ॥**
**ಬ್ರಹ್ಮಭೂತಾ ಭವಿಷ್ಯಾಮೋ ಭೋಕ್ಷ್ಯಾಮೋ ವಾ ತ್ರಿವಿಷ್ಟಪಂ ।**
**ಏವಮುಕ್ತಾಸ್ತತಃ ಸರ್ವೇ ದೇವಾಃ ಸೇಂದ್ರಪುರೋಗಮಾಃ ॥**
**ವಿಧಿವಜ್ಜುಹುವುರ್ಮಾಂಸಮುತ್ಕೃತ್ಯೋತ್ಕೃತ್ಯ ಮಂತ್ರತಃ ॥ ೧೯ ॥**
**ಹುತೇಷು ಸರ್ವಮಾಂಸೇಷು ಪಾದೇಷು ಚ ಕರೇಷು ಚ ।**
**ಹೋತುಮಿಚ್ಛತ್ಸು ದೇವೇಷು ಕಲೇವರಮಶೇಷತಃ ॥ ೨೦ ॥**
**ಪ್ರಾದುರ್ಬಭೂವ ಪರಮಂ ತೇಜಃಪುಂಜಮನೂಪಮಂ ।**
**ಕೋಟಿಸೂರ್ಯಪ್ರತೀಕಾಶಂ ಚಂದ್ರಕೋಟಿಸುಶೀತಲಂ ।**
**ತನ್ಮಧ್ಯೇ ಸಮುದಭೂಚ್ಚಕ್ರಾಕಾರಮನುತ್ತಮಂ ॥ ೨೧ ॥**

---

ಬಿಟ್ಟನು. ನಾವೆಲ್ಲರೂ ಒಟ್ಟುಗೂಡಿದರೂ ಇವನೊಡನೆ ಯುದ್ಧ ಮಾಡಲು ಸಾಧ್ಯವಾಗುವುದಿಲ್ಲ.

೧೭. ಈಗ ನಾವು ಪಲಾಯನವಾಗಿ ಹೋದರೂ ನಮಗೆ ದೇವಿಯನ್ನುಳಿದು ಮತ್ತೆ ಬೇರೆ ಗತಿಯೂ ಇರುವುದಿಲ್ಲ. ಆದುದರಿಂದ ಪ್ರಕೃತದಲ್ಲಿ ನಾವೆಲ್ಲರೂ ಒಂದು ಯೋಜನದಗಲವುಳ್ಳ ಮಂಗಳಕರವಾದ ಅಗ್ನಿಕುಂಡವನ್ನು ಶಾಸ್ತ್ರೋಕ್ತವಾಗಿ ರಚಿಸೋಣ.

೧೮. ಅಲ್ಲಿ ಮಹಾಯಾಗದ ವಿಧಾನದಿಂದಲೇ ಯಜ್ಞೇಶ್ವರನನ್ನೂ ಪ್ರಣಿಧಾನ ಮಾಡೋಣ. ತರುವಾಯ ಮಹಾಮಾಂಸಗಳಿಂದ ಪರಾಶಕ್ತಿಯನ್ನೂ ಯಜ್ಞದ ಮೂಲಕ ಅರ್ಚಿಸೋಣ. ಇದರಿಂದ ನಾವು ಮತ್ತೆ ಸ್ವರ್ಗಾಧಿಪತ್ಯವನ್ನು ಅನುಭವಿಸುವೆವು. ಅದು ಸಾಧ್ಯವಾಗದಿದ್ದರೆ ಬ್ರಹ್ಮೈಕ್ಯವನ್ನಾದರೂ ಪಡೆಯುತ್ತೇವೆ'' ಎಂದು ಹೇಳಿದನು.

೧೯. ಪ್ರಭುವಾದ ಮಹೇಂದ್ರನು ಹೀಗೆ ಹೇಳಿದಬಳಿಕ, ದೇವತೆಗಳೆಲ್ಲರೂ ಆ ರೀತಿಯಾಗಿಯೇ ಅಗ್ನಿಕುಂಡವನ್ನು ರಚಿಸಿ, ಯಜ್ಞೇಶ್ವರನನ್ನು ಪ್ರತಿಷ್ಠಾಪಿಸಿ, ಅಲ್ಲಿಯೇ ಪರಾಶಕ್ತಿಯನ್ನುದ್ದೇಶಿಸಿ ತಮ್ಮ ಶರೀರಗಳಿಂದ ಮಾಂಸಗಳನ್ನು ಕತ್ತರಿಸಿ ಕತ್ತರಿಸಿ ಸಮಂತ್ರಕವಾಗಿ ಹೋಮಮಾಡಿದರು.

೨೦-೨೧. ಹೀಗೆ ಆ ದೇವತೆಗಳು ತಮ್ಮ ಕೈಕಾಲುಗಳಲ್ಲಿದ್ದ

**ತನ್ಮಧ್ಯೇಚ ಮಹಾದೇವೀಮುದಯಾರ್ಕಸಮಪ್ರಭಾಂ ।**
**ಜಗದುಜ್ಜೀವನಾಕಾರಾಂ ಬ್ರಹ್ಮವಿಷ್ಣುಶಿವಾತ್ಮಿಕಾಂ ॥ ೭೨ ॥**
**ಸೌಂದರ್ಯಸಾರಸೀಮಾಂತಾಮಾನಂದರಸಸಾಗರಾಂ ।**
**ಜಪಾಕುಸುಮಸಂಕಾಶಾಂ ದಾಡಿಮೀಕುಸುಮಾಂಬರಾಂ ॥ ೭೩ ॥**
**ಸರ್ವಾಭರಣಸಂಯುಕ್ತಾಂ ಶೃಂಗಾರೈಕರಸಾಲಯಾಂ ।**
**ಕೃಪಾತರಂಗಿತಾಪಾಂಗನಯನಾಲೋಕಕೌಮುದೀಂ ॥**
**ಪಾಶಾಂಕುಶೇಕ್ಷುಕೋದಂಡಪಂಚಬಾಣಲಸತ್ಕರಾಂ ॥ ೭೪ ॥**
**ತಾಂ ವಿಲೋಕ್ಯ ಮಹಾದೇವೀಂ ದೇವಾಃ ಸರ್ವೇ ಸವಾಸವಾಃ ।**
**ಪ್ರಣೇಮುರ್ಮುದಿತಾತ್ಮಾನೋಭೂಯೋಭೂಯೋಽಖಿಲಾತ್ಮಿಕಾಂ॥**

---

ಮಾಂಸವೆಲ್ಲವನ್ನೂ ಹೋಮಮಾಡಿದ ಬಳಿಕ ತಮ್ಮ ಕಳೇಬರಗಳನ್ನೇ ಸಂಪೂರ್ಣವಾಗಿ ಹೋಮಮಾಡಬಯಸಿರಲು ಆ ಯಜ್ಞಕುಂಡದಿಂದ ಪರಮತೇಜಃಪುಂಜವೂ, ಅನುಪಮವೂ ಆಗಿ ಕೋಟಿ ಸೂರ್ಯರಿಗೆ ಸಮಾನವಾಗಿ ಬೆಳಗುತ್ತ, ಕೋಟಿ ಚಂದ್ರರಿಗೆ ಸಮಾನವಾಗಿ ಶೀತಲವಾಗಿರುವ ಸರ್ವಶ್ರೇಷ್ಠವಾದ ಚಕ್ರಾಕಾರವೊಂದು ಉದ್ಭವವಾಯಿತು.

೭೨-೭೪. ಆ ಚಕ್ರದ ಮಧ್ಯದಲ್ಲಿಯಾದರೋ, ಉದ್ಯತ್ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವಳಾಗಿ, ಜಗದುಜ್ಜೀವನಸ್ವರೂಪಿಣಿಯಾಗಿ, ಬ್ರಹ್ಮವಿಷ್ಣುಶಿವಾತ್ಮಿಕೆಯಾಗಿ, ಸೌಂದರ್ಯಸಾರಕ್ಕೇ ಸೀಮಂತಪ್ರಾಯಳಾಗಿಯೂ ಆನಂದರಸಕ್ಕೆ ಸಾಗರಪ್ರಾಯಳಾಗಿಯೂ, ಜಪಾಕುಸುಮದ ಕಾಂತಿಯುಳ್ಳವಳಾಗಿ, ದಾಳಿಂಬರೆಯ ಹೂಬಣ್ಣದ ಸೀರೆಯನ್ನುಟ್ಟು, ಸರ್ವಾಭರಣಭೂಷಿತೆಯಾಗಿ, ಶೃಂಗಾರಕ್ಕೆ ನೆಲೆಮನೆಯಾಗಿಯೂ, ಕೃಪಾರಸದ ತರಂಗಗಳನ್ನು ಹೊರಚೆಲ್ಲುತ್ತಿರುವ ಕುಡಿನೋಟಗಳುಳ್ಳ ಕಂಗಳುಳ್ಳವಳಾಗಿ, ನೋಡುವವರಿಗೆ ಬೆಳುದಿಂಗಳಂತೆ ವಿರಾಜಿಸುತ್ತ, ಪಾಶ–ಅಂಕುಶ–ಇಕ್ಷುಕೋದಂಡ— ಪಂಚಬಾಣಗಳು ಮುಂತಾದವುಗಳಿಂದ ಅಲಂಕೃತವಾದ ಕರಕಮಲಗಳುಳ್ಳವಳಾಗಿ ವಿರಾಜಿಸುತ್ತಿರುವ ಶ್ರೀ ಮಹಾದೇವಿಯು ಕಂಗೊಳಿಸಿದಳು.

೭೫. ಇಂದ್ರಾದಿದೇವತೆಗಳೆಲ್ಲರೂ ಆ ದೇವಿಯನ್ನು ಕಂಡು ಮಹಾನಂದಭರಿತರಾಗಿ ಅಖಿಲಾತ್ಮಿಕೆಯಾದ ಆಕೆಯನ್ನು ಮತ್ತೆ ಮತ್ತೆ ನಮಸ್ಕರಿಸಿದರು.

**ತಥಾ ವಿಲೋಕಿತಾಸ್ಸದ್ಯಸ್ತೇ ಸರ್ವೇ ವಿಗತಜ್ವರಾಃ ।**
**ಸಂಪೂರ್ಣಾಂಗಾ ದೃಢತರಾ ವಜ್ರದೇಹಾ ಮಹಾಬಲಾಃ ॥**
**ತುಷ್ಟುವುಶ್ಚ ತದಾ ದೇವೀಮಂಬಿಕಾಮಖಿಲಾರ್ಥದಾಂ ॥ ೭೬ ॥**

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಸಪ್ತಮೋಽಧ್ಯಾಯಃ

---

೭೬. ಆ ದೇವಿಯು ಕೃಪಾದೃಷ್ಟಿಯಿಂದೊಮ್ಮೆ ದೇವತೆಗಳೆಲ್ಲರನ್ನೂ ನೋಡಲು ಅವರೆಲ್ಲರೂ ಭಯವನ್ನು ತೊರೆದು, ಸಂಪೂರ್ಣಶರೀರಿಗಳೂ, ಮಹಾಬಲಾಢ್ಯರೂ, ವಜ್ರಕಾಯರೂ ಆದರು. ಇದಾದ ತರುವಾಯ ಮಹೇಂದ್ರನಾದಿಯಾದ ಆ ದೇವತೆಗಳೆಲ್ಲರೂ ಸಮಸ್ತ ಇಷ್ಟಾರ್ಥಗಳನ್ನೂ ಅನುಗ್ರಹಿಸುವ ಆ ಜಗದಂಬಿಕೆಯನ್ನು ಮುಂದೆ ಹೇಳುವ ಪ್ರಕಾರ ಸ್ತುತಿಸಿದರು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಏಳನೆಯ ಅಧ್ಯಾಯವು ಮುಗಿದುದು

ದೃಶಶ್ಚಂದ್ರಾರ್ಕದಹನಾ ದಿಶಸ್ತೇ ಬಾಹವೋಽಂಬಿಕೇ ।
ಮರುತಸ್ತೇ ತನೂಚ್ಛ್ವಾಸಾ ವಾಚಸ್ತೇ ಶ್ರುತಯೋಽಖಿಲಾಃ ॥೧೦॥
ಕ್ರೀಡಾ ತೇ ಲೋಕರಚನಾ ಸಖಾ ತೇ ಚಿನ್ಮಯಃ ಶಿವಃ ।
ಆಹಾರಸ್ತೇ ಸದಾನಂದೋ ವಾಸಸ್ತೇ ಹೃದಯಂ ಸತಾಂ ॥ ೧೧ ॥
ದೃಶ್ಯಾದೃಶ್ಯಸ್ವರೂಪಾಣಿ ರೂಪಾಣಿ ಭುವನಾನಿ ತೇ ।
ಶಿರೋರುಹಾ ನಭಸ್ತೇ ತು ತಾರಕಾಃ ಕುಸುಮಾನಿ ತೇ ॥ ೧೨ ॥
ಧರ್ಮಾದ್ಯಾ ಬಾಹವಸ್ತೇ ಸ್ಯುರಧರ್ಮಾದ್ಯಾಯುಧಾನಿ ತೇ ।
ಯಮಾಶ್ಚ ನಿಯಮಾಶ್ಚೈವ ಕರಪಾದರುಹಾಸ್ತಥಾ ॥ ೧೩ ॥
ಸ್ತನೌ ಸ್ವಾಹಾಸ್ವಧಾಕಾರೌ ಲೋಕೋಜ್ಜೀವನಕಾರಕೌ ।
ಪ್ರಾಣಾಯಾಮಾಸ್ತು ತೇ ನಾಸಾ ರಸನಾ ತೇ ಸರಸ್ವತೀ ॥ ೧೪ ॥
ಪ್ರತ್ಯಾಹಾರಸ್ತ್ವಿಂದ್ರಿಯಾಣಿ ಧ್ಯಾನಂ ತೇ ಧೀಸ್ತ್ವಡಾಸನಂ ।
ಮನಸ್ತೇ ಧಾರಣಾ ಶಕ್ತಿರ್ಹೃದಯಂ ತೇ ಸಮಾಧಿಕಾ ॥ ೧೫ ॥

---

೧೦. ನಿನ್ನ ಮೂರು ಕಣ್ಣುಗಳೇ ಚಂದ್ರ ಸೂರ್ಯಾಗ್ನಿಗಳು. ನಿನ್ನ ಬಾಹುಗಳೇ ದಿಶೆಗಳು. ಜಗದಂಬಿಕೇ! ನಿನ್ನ ಮೃದುವಾದ ಉಚ್ಛ್ವಾಸಗಳೇ ಮಾರುತಗಳು. ನಿನ್ನ ವಾಣಿಯೇ ಸಮಸ್ತ ಶ್ರುತಿಗಳೂ ಆಗಿರುವುವು.

೧೧. ಲೋಕ ರಚನೆಯೇ ನಿನ್ನ ಕ್ರೀಡೆ. ಆ ನಿನ್ನ ಕ್ರೀಡೆಗೆ ಸಖನೆನಿಸಿದವನೇ ಚಿನ್ಮಯನಾದ ಶಿವನು. ಸದಾನಂದವೇ ನಿನ್ನ ಆಹಾರ. ಸತ್ಪುರುಷರ ಹೃದಯವೇ ನಿನ್ನ ವಾಸಸ್ಥಾನ.

೧೨. ಕಣ್ಣಿಗೆ ಕಾಣುವ ಮತ್ತು ಕಾಣದ ಸ್ವರೂಪಗಳುಳ್ಳ ಭುವನಗಳೆಲ್ಲವೂ ನಿನ್ನ ರೂಪಗಳೇ! ನಿನ್ನ ತಲೆಗೂದಲೇ ಆಕಾಶ. ನಕ್ಷತ್ರಗಳೇ ನೀನು ಮುಡಿದಿರುವ ಹೂಗಳು.

೧೩. ಧರ್ಮಾರ್ಥ ಕಾಮಮೋಕ್ಷಗಳೇ ನಿನ್ನ ಬಾಹುಗಳು. ಅಧರ್ಮಾದಿಗಳೇ ನಿನ್ನ ಆಯುಧಗಳು. ಯಮಗಳೂ, ನಿಯಮಗಳೂ ನಿನ್ನ ಕೈಕಾಲುಗಳ ಉಗುರುಗಳು.

೧೪. ಲೋಕವನ್ನು ಉಜ್ಜೀವನಗೊಳಿಸುವ ಸ್ವರೂಪಗಳುಳ್ಳ ಸ್ವಾಹಾ ಸ್ವಧಾಕಾರಗಳೇ ನಿನ್ನ ಸ್ತನಗಳು. ನಿನ್ನ ನಾಸಿಕೆಯೇ ಪ್ರಾಣಾಯಾಮಗಳು. ನಿನ್ನ ನಾಲಗೆಯೇ ಸರಸ್ವತಿಯು.

೧೫. ನಿನ್ನ ಇಂದ್ರಿಯಗಳೇ ಪ್ರತ್ಯಾಹಾರಗಳು. ಧ್ಯಾನವೇ ನಿನ್ನ

ಮಹೀರುಹಾಸ್ತೇಽಂಗರುಹಾಃ ಪ್ರಭಾತಂ ವಸನಂ ತವ ।
ಭೂತಂ ಭವ್ಯಂ ಭವಿಷ್ಯಚ್ಚ ನಿತ್ಯಂ ಚ ತವ ವಿಗ್ರಹಂ ॥ ೧೬ ॥
ಯಜ್ಞರೂಪಾ ಜಗದ್ಧಾತ್ರೀ ವಿಷ್ವಗ್ರೂಪಾ ಚ ಪಾವನೀ ।
ಆಧಾರಂ ತ್ವಾಂ ಪ್ರಪಶ್ಯಂತಿ ನ ಸಮ್ಯಜ್ಞಿಖಿಲಾಃ ಪ್ರಜಾಃ ॥ ೧೭ ॥
ಹೃದಯಸ್ಥಾಪಿ ಲೋಕಾನಾಮದೃಶ್ಯಾ ಮೋಹನಾತ್ಮಿಕಾ ।
ನಾಮರೂಪವಿಭಾಗಂ ಚ ಯಾ ಕರೋತಿ ಸ್ವಲೀಲಯಾ ॥ ೧೮ ॥
ತಾನ್ಯಧಿಷ್ಠಾಯ ತಿಷ್ಠಂತೀ ತೇಷ್ವಸಕ್ತಾ ಚ ಕಾಮದಾ ।
ನಮಸ್ತಸ್ಯೈ ಮಹಾದೇವ್ಯೈ ಸರ್ವಶಕ್ತ್ಯೈ ನಮೋ ನಮಃ ॥ ೧೯ ॥
ಯಾ ದೇವೀ ಪರಮಾ ಶಕ್ತಿಃ ಪರಬ್ರಹ್ಮಾಭಿಧಾಯಿನೀ ।
ಬ್ರಹ್ಮಾನಂದಾಭಿಧಾನಾಯೈ ತಸ್ಯೈ ದೇವ್ಯೈ ನಮೋ ನಮಃ ॥ ೨೦ ॥

---

ಬುದ್ಧಿಯು. ಆಸನವೇ ನಿನ್ನ ತೃಷೆ. ಧಾರಣಾಶಕ್ತಿಯೇ ನಿನ್ನ ಮನಸ್ಸು. ಸಮಾಧಿಯೇ ನಿನ್ನ ಹೃದಯ.

೧೬. ವೃಕ್ಷಗಳೇ ನಿನ್ನ ಮೈಯ ರೋಮಗಳು. ಪ್ರಭಾತವೇ ನಿನ್ನ ವಸನವು. ಹಿಂದಿದ್ದುದು, ಈಗಿರುವುದು, ಮುಂದಾಗುವುದು, ಯಾವಾಗಲೂ ಇರುವುದು ಎಂಬುದೇ ನಿನ್ನ ಸ್ವರೂಪವಾಗಿರುವುದು.

೧೭. ಯಜ್ಞರೂಪಿಣಿಯೂ, ಜಗದ್ಧಾತ್ರಿಯೂ, ವಿಷ್ವಗ್ರೂಪಿಣಿಯೂ, ಪಾವನಿಯೂ ಆದ ನೀನು ಸಮಸ್ತಕ್ಕೂ ಆಧಾರೆಯಾಗಿರುವೆಯೆಂಬುದನ್ನು ಎಲ್ಲ ಪ್ರಜೆಗಳೂ ಚೆನ್ನಾಗಿ ತಿಳಿದುಕೊಳ್ಳುವುದಿಲ್ಲ.

೧೮-೧೯. ಸಮಸ್ತ ಪ್ರಜೆಗಳ ಹೃದಯಗಳಲ್ಲಿ ವಾಸವಾಗಿದ್ದರೂ ಮೋಹನಾತ್ಮಿಕೆಯಾದ (ಮಾಯಾರೂಪಿಣಿಯಾದ) ನೀನು ಅವರಿಗೆ ಗೋಚರವಾಗದೆಯೇ ಇರುವೆ. ಯಾವ ನೀನು ನಿನ್ನ ಲೀಲೆಯಿಂದಲೇ ನಾಮರೂಪಗಳನ್ನು ವಿಭಾಗಿಸಿ ಅವುಗಳನ್ನೇ ಅಧಿಷ್ಠಿಸಿ ಇರುತ್ತಿದ್ದರೂ, ಅವುಗಳಲ್ಲಿ ಆಸಕ್ತೆಯಾಗಿರುವೆಯೋ, ಅಂಥ ಅರ್ಥದಾಯಕಿಯೂ, ಕಾಮದಾಯಿಕಿಯೂ, ಮಹಾದೇವಿಯೂ, ಸರ್ವಶಕ್ತಿಸ್ವರೂಪಿಣಿಯೂ ಆದ ನಿನಗೆ ನಮೋ ನಮಃ!

೨೦. ಪರಾಶಕ್ತಿಯಾದ ಯಾವ ನೀನು ಪರಬ್ರಹ್ಮವೆಂಬ ಅಭಿಧಾನದಿಂದ ವಿರಾಜಿಸುತ್ತಿರುವೆಯೋ ಅಂಥ ಬ್ರಹ್ಮಾನಂದಸ್ವರೂಪಿಣಿಯಾದ ನಿನಗೆ ನಮೋ ನಮಃ!

**ಯದಾಜ್ಞಯಾ ಪ್ರವರ್ತಂತೇ ವಹ್ನಿಸೂರ್ಯೇಂದುಮಾರುತಾಃ ।**
**ಪೃಥಿವ್ಯಾದೀನಿ ಭೂತಾನಿ ತಸ್ಯೈ ದೇವ್ಯೈ ನಮೋ ನಮಃ ॥ ೨೧ ॥**
**ಯಾ ಸಸರ್ಜ ವಿಧಾತಾರಂ ಸರ್ಗಾದಾವಾದಿಭೂರಿಯಂ ।**
**ದಧಾರ ಸ್ವಯಮೇವೈಕಾ ತಸ್ಯೈ ದೇವ್ಯೈ ನಮೋ ನಮಃ ॥ ೨೨ ॥**
**ಯಯಾ ಧೃತಾತು ಧರಣೀ ಯಯಾಽಕಾಶಾದ್ಯಮೇಯಯಾ ।**
**ಯಸ್ಯಾಮುದೇತಿ ಸವಿತಾ ತಸ್ಯೈ ದೇವ್ಯೈ ನಮೋ ನಮಃ ॥ ೨೩ ॥**
**ಯದಂತರಸ್ಥಂ ತ್ರಿದಿವಂ ಯದಾಧಾರೋಽಂತರಿಕ್ಷಕಃ ।**
**ಯನ್ಮಯಶ್ಚಾಖಿಲೋ ಲೋಕಸ್ತಸ್ಯೈ ದೇವ್ಯೈ ನಮೋ ನಮಃ ॥ ೨೪ ॥**
**ಯತ್ರೋದೇತಿ ಜಗತ್ಕೃತ್ಸ್ನಂ ಯತ್ರ ತಿಷ್ಠತಿ ನಿರ್ಭರಂ ।**
**ಯತ್ರಾಂತಮೇತಿ ಕಾಲೇ ತು ತಸ್ಯೈ ದೇವ್ಯೈ ನಮೋ ನಮಃ ॥ ೨೫ ॥**

---

೨೧. ಯಾವಾಕೆಯ ಅಪ್ಪಣೆಯಿಂದಲೇ ಅಗ್ನಿ, ಸೂರ್ಯ, ಚಂದ್ರ, ಮಾರುತ ಮುಂತಾದವರೂ, ಪೃಥಿವಿಯೇ ಮೊದಲಾದ ಪಂಚಭೂತಗಳೂ ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವೃತ್ತಿಯನ್ನು ಹೊಂದುತ್ತಿರುವುವೋ ಅಂಥ ಪರದೇವತೆಯಾದ ನಿನಗೆ ನಮೋ ನಮಃ!

೨೨. ಸೃಷ್ಟ್ಯಾದಿಯಲ್ಲಿ ಆದಿಶಕ್ತಿಯಾದ ಯಾವಾಕೆಯು ಬ್ರಹ್ಮನನ್ನು ಸೃಜಿಸಿ ತಾನೊಬ್ಬಳೇ ಈ ಅಖಂಡ ಬ್ರಹ್ಮಾಂಡವನ್ನೂ ಧರಿಸಿದಳೋ ಅಂಥ ದೇವಿಯೇ ನೀನು. ಆ ನಿನಗೆ ನಮಸ್ಕಾರವು!

೨೩. ಅಮೇಯಳಾದ ಯಾವಾಕೆಯು, ಈ ಭೂಮಂಡಲವನ್ನೂ ಆಕಾಶವೇ ಮೊದಲಾದುವನ್ನೂ ಧರಿಸಿ ನಿಂತಿರುವಳೋ, ಯಾವಾಕೆಯಲ್ಲಿಯೇ ಸವಿತೃವು ಉದಿಸುವನೋ ಆ ದೇವಿಯಾದ ನಿನಗೆ ನಮಸ್ಕಾರವು!

೨೪. ಯಾವಾಕೆಯಲ್ಲಿಯೇ ಸ್ವರ್ಗವು ನೆಲೆಸಿರುವುದೋ, ಯಾವಾಕೆಯ ಆಧಾರದಿಂದಲೇ ಅಂತರಿಕ್ಷವು ನಿಂತಿರುವುದೋ, ಲೋಕವೆಲ್ಲವೂ ಯಾವಾಕೆಯ ಸ್ವರೂಪವೇ ಆಗಿರುವುದೋ ಅಂಥ ನಿನಗೆ ನಮಸ್ಕಾರವು!

೨೫. ಜಗತ್ತೆಲ್ಲವೂ ಯಾವಾಕೆಯಲ್ಲಿ ಉದಿಸುತ್ತದೆಯೋ, ಯಾವಾಕೆಯಲ್ಲಿ ನಿಶ್ಚಲವಾಗಿ ನಿಲ್ಲುತ್ತದೆಯೋ, ಪ್ರಳಯಕಾಲದಲ್ಲಿ ಯಾವಾಕೆಯಲ್ಲಿಯೇ ಅದು ಮುಗಿಯುತ್ತದೆಯೋ ಅಂಥ ಪರದೇವತೆಯಾದ ನಿನಗೆ ನಮಸ್ಕಾರವು!

ನಮೋ ನಮಸ್ತೇ ರಜಸೋ ಭವಾಯೈ
ನಮೋ ನಮಃ ಸಾತ್ತ್ವಿಕಸಂಸ್ಥಿತಾಯೈ ।
ನಮೋ ನಮಸ್ತೇ ತಮಸೋ ಹರಾಯೈ
ನಮೋ ನಮೋ ನಿರ್ಗುಣತಃ ಶಿವಾಯೈ ॥ ೨೬ ॥
ನಮೋ ನಮಸ್ತೇ ಜಗದೇಕಮಾತ್ರೇ
ನಮೋ ನಮಸ್ತೇ ಜಗದೇಕಪಿತ್ರೇ ।
ನಮೋ ನಮಸ್ತೇಽಖಿಲ ತಂತ್ರರೂಪೇ
ನಮೋ ನಮಸ್ತೇಽಖಿಲ ಯಜ್ಞರೂಪೇ ॥ ೨೭ ॥
ನಮೋ ನಮೋ ಲೋಕಗುರುಪ್ರಧಾನೇ
ನಮೋ ನಮಸ್ತೇಽಖಿಲವಾಗ್ವಿಭೂತ್ಯೈ ।
ನಮೋಽಸ್ತು ಲಕ್ಷ್ಮ್ಯೈ ಜಗದೇಕತುಷ್ಟ್ಯೈ
ನಮೋ ನಮಃ ಶಾಂಭವಿ ಸರ್ವಶಕ್ತ್ಯೈ ॥ ೨೮ ॥
ಅನಾದಿಮಧ್ಯಾಂತಮಪಾಂಚಭೌತಿಕಂ
ಹ್ಯವಾಙ್ಮನೋಗಮ್ಯಮತರ್ಕ್ಯ ವೈಭವಂ ।
ಅರೂಪಮದ್ವಂದ್ವಮದೃಷ್ಟಿಗೋಚರಂ
ಪ್ರಭಾವಮಗ್ರ್ಯಂ ಕಥಮಂಬ ವರ್ಣ್ಯತೇ ॥ ೨೯ ॥

---

೨೬. ರಜೋಗುಣದಿಂದುತ್ಪನ್ನವಾಗಿ, ಸತ್ತ್ವಗುಣದಲ್ಲಿ ನೆಲಸಿ ತಮೋಗುಣವನ್ನು ಕಳೆಯುವ ನಿರ್ಗುಣಸ್ವರೂಪಿಣಿಯಾದ ಪರಮಶಿವೇ! ನಿನಗೆ ನಮಸ್ಕಾರವು!!

೨೭. ಜಗತ್ತಿಗೆ ಏಕಮಾತ್ರಮಾತಾಪಿತೃ ಸ್ವರೂಪಿಣಿಯೂ, ಸಮಸ್ತ ತಂತ್ರರೂಪಿಣಿಯೂ, ಅಖಿಲ ಯಜ್ಞರೂಪಿಣಿಯೂ ಆದ ನಿನಗೆ ನಮಸ್ಕಾರವು!

೨೮. ಲೋಕಕ್ಕೆ ಮುಖ್ಯ ಗುರುಸ್ವರೂಪಿಣಿಯಾಗಿ ಸಮಸ್ತ ವೇದಗಳಲ್ಲಿಯೂ ಪ್ರತಿಪಾದಿತೆಯಾಗಿ, ವಾಗ್ವಿಭೂತಿಯೆನಿಸಿ ಜಗತ್ತಿಗೆಲ್ಲ ಆನಂದಸಂದಾಯಿಕಿಯಾದ ಲಕ್ಷ್ಮೀದೇವಿಯಾಗಿರುವ ಓ ಶಾಂಭವೀ! ಸರ್ವಶಕ್ತೇ!! ನಿನಗೆ ನಮಸ್ಕಾರವು!!!

೨೯. ಎಲೌ ತಾಯೇ! ಆದಿಮಧ್ಯಾಂತಗಳಿಲ್ಲದುದಾಗಿಯೂ, ಪೃಥಿವ್ಯಾದಿ ಪಂಚಭೂತಗಳ ಸಂಬಂಧವಿಲ್ಲದುದಾಗಿಯೂ, ಮನಸ್ಸಿಗೂ ಮಾತಿಗೂ ನಿಲುಕದುದಾಗಿಯೂ, ಯೋಚಿಸಲಸದಳವಾದ ವೈಭವ

**ಪ್ರಸೀದ ವಿಶ್ವೇಶ್ವರಿ ವಿಶ್ವವಂದಿತೇ**
**ಪ್ರಸೀದ ವಿಶ್ವೇಶ್ವರಿ ವೇದರೂಪಿಣಿ ।**
**ಪ್ರಸೀದ ಮಾಯಾಮಯಿ ಮಂತ್ರವಿಗ್ರಹೇ**
**ಪ್ರಸೀದ ಸರ್ವೇಶ್ವರಿ ಸರ್ವರೂಪಿಣಿ ॥ ೩೦ ॥**
**ಇತಿ ಸ್ತುತ್ವಾ ಮಹಾದೇವೀಂ ದೇವಾಃ ಸರ್ವೇ ಸವಾಸವಾಃ ।**
**ಭೂಯೋ ಭೂಯೋ ನಮಸ್ಕೃತ್ಯ ಶರಣಂ ಜಗ್ಮುರಂಜಸಾ ॥ ೩೧ ॥**
**ತತಃ ಪ್ರಸನ್ನಾ ಸಾ ದೇವೀ ಪ್ರಣತಂ ವೀಕ್ಷ್ಯ ವಾಸವಂ ।**
**ವರೇಣ ಛಂದಯಾಮಾಸ ವರದಾಖಿಲದೇಹಿನಾಂ ॥ ೩೨ ॥**
**ಇಂದ್ರಃ—**
**ಯದಿ ತುಷ್ಟಾಸಿ ಕಲ್ಯಾಣಿ ವಯಂ ದೈತ್ಯೇಂದ್ರನಿರ್ಜಿತಾಃ ।**
**ದುರ್ಧರಂ ಜೀವಿತಂ ದೇವಿ ತ್ವಾಂ ಗತಾಃ ಶರಣಾರ್ಥಿನಃ ॥ ೩೩ ॥**

---

ವುಳ್ಳುದಾಗಿಯೂ, ರೂಪವೇ ಇಲ್ಲದೆ, ಅದ್ವೈತಸ್ವರೂಪಿಣಿಯಾಗಿ, ಕಣ್ಣಿಗೆ ಕಾಣದೆಯೇ ಇರುವ ನಿನ್ನ ಉತ್ತಮೋತ್ತಮವಾದ ಪ್ರಭಾವವನ್ನು ವರ್ಣಿಸುವುದಾದರೂ ಹೇಗೆ?

೩೦. ದೇವೀ! ವಿಶ್ವೇಶ್ವರಿಯೂ ವಿಶ್ವವಂದಿತೆಯೂ ಆದ ನೀನು ಪ್ರಸನ್ನೆಯಾಗಬೇಕು. ವಿಶ್ವೇಶ್ವರಪ್ರಿಯೆಯೂ, ವೇದಸ್ವರೂಪಿಣಿಯೂ ಆದ ಓ ದೇವಿಯೇ!! ಪ್ರಸನ್ನೆಯಾಗು; ಮಾಯಾಮಯಿಯೂ, ಮಂತ್ರಸ್ವರೂಪಿಣಿಯೂ ಆದ ಓ ತಾಯೇ! ಪ್ರಸನ್ನೆಯಾಗು; ಸರ್ವೇಶ್ವರೀ! ಸರ್ವರೂಪಿಣೀ! ನೀನು ಪ್ರಸನ್ನೆಯಾಗಬೇಕು.

೩೧. ಅಯ್ಯಾ, ಅಗಸ್ತ್ಯಮುನಿಯೇ! ಈ ಪ್ರಕಾರ ದೇವೇಂದ್ರನಾದಿಯಾಗಿ ಎಲ್ಲ ದೇವತೆಗಳೂ ಆ ಮಹಾದೇವಿಯನ್ನು ಸ್ತುತಿಸಿ, ಪುನಃ ಪುನಃ ನಮಸ್ಕರಿಸಿ ಕೂಡಲೇ ಆಕೆಯನ್ನು ಶರಣುಹೊಂದಿದರು.

೩೨. ಆಗ ಸಮಸ್ತ ಪ್ರಾಣಿಗಳಿಗೂ ವರದಾಯಿಕಿಯಾದ ಆ ಲಲಿತಾದೇವಿಯು ಸುಪ್ರಸನ್ನೆಯಾಗಿ ಪ್ರಣತನಾಗಿರುವ ದೇವೇಂದ್ರನನ್ನು ನೋಡಿ, "ಮಹೇಂದ್ರ! ಇದೋ ಪ್ರಸನ್ನಳಾಗಿರುವೆನು, ವರವನ್ನು ಬೇಡು" ಎಂದು ಹೇಳಿದಳು.

೩೩. ಮಹೇಂದ್ರನು ಹೇಳುತ್ತಾನೆ:—"ದೇವೀ! ದೈತ್ಯೇಂದ್ರನಾದ ಭಂಡಾಸುರನಿಂದ ಪೀಡಿತರಾಗಿ, ಜೀವಿತವೇ ದುರ್ಭರವಾಗಿ ಹೋಗಿರುವ ನಾವೆಲ್ಲರೂ ನೀನೇ ಶರಣೆಂದು ನಿನ್ನಲ್ಲಿಗೆ ಬಂದಿರುವೆವು.

ಶ್ರೀ ದೇವೀಃ—

ಅಹಮೇವ ವಿನಿರ್ಜಿತ್ಯ ಭಂಡಂ ದೈತ್ಯಕುಲೇಶ್ವರಂ ।
ಅಚಿರಾತ್ತವ ದಾಸ್ಯಾಮಿ ತ್ರೈಲೋಕ್ಯಂ ಸಚರಾಚರಂ ॥ ೩೪ ॥
ನಿರ್ಭಯಾ ಮುದಿತಾಃ ಸಂತು ಸರ್ವೇ ದೇವಗಣಾಸ್ತಥಾ ।
ಯೇ ಸ್ತುವಂತಿ ಚ ಮಾಂ ಭಕ್ತ್ಯಾ ಸ್ತವೇನಾನೇನ ಮಾನವಾಃ ॥
ಭಾಜನಂ ತೇ ಭವಿಷ್ಯಂತಿ ಧರ್ಮಶ್ರೀಯಶಸಾಂ ಸದಾ ॥ ೩೫ ॥
ವಿದ್ಯಾವಿನಯಸಂಪನ್ನಾ ನೀರೋಗಾ ದೀರ್ಘಜೀವಿನಃ ।
ಪುತ್ರಮಿತ್ರಕಲತ್ರಾಢ್ಯಾ ಭವಂತು ಮದನುಗ್ರಹಾತ್ ॥ ೩೬ ॥
ಇತಿ ಲಬ್ಧವರಾ ದೇವಾ ದೇವೇಂದ್ರೋಽಪಿ ಮಹಾಬಲಃ । [ ೩೭ ॥
ಆಮೋದಂ ಪರಮಂ ಜಗ್ಮುಸ್ತಾಂ ವಿಲೋಕ್ಯ ಮುಹುರ್ಮುಹುಃ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಅಷ್ಟಮೋಽಧ್ಯಾಯಃ

---

ಓ ಕಲ್ಯಾಣೀ! ನಮ್ಮ ಪ್ರಾರ್ಥನೆಯಿಂದ ನೀನು ಸಂತುಷ್ಟೆಯಾಗಿರುವೆ ಯಾದರೆ ಶರಣಾಗತರಾದ ನಮ್ಮನ್ನು ನೀನೇ ಕಾಪಾಡಬೇಕು.''

೩೪. ಶ್ರೀ ದೇವಿಯು ಹೇಳುತ್ತಾಳೆ:—''ಮಹೇಂದ್ರಾ! ದೈತ್ಯ ಕುಲಕ್ಕೆ ಪ್ರಭುವಾದ ಆ ಭಂಡಾಸುರನನ್ನು ನಾನೇ ಗೆದ್ದು ಸ್ವಲ್ಪ ಕಾಲದಲ್ಲಿ ಚರಾಚರಾತ್ಮಕವಾದ ಈ ಮೂರು ಲೋಕಗಳನ್ನೂ ನಿನಗೆ ಕೊಡುವೆನು.

೩೫. ದೇವತೆಗಳ ಸಮೂಹಗಳೆಲ್ಲವೂ ಭಯವನ್ನುಳಿದು ಸಂತೋಷ ಗೊಳ್ಳಲಿ. ಎಲೈ ವಾಸವನೇ! ನೀವು ಸ್ತುತಿಸಿದ ಈ ಸ್ತೋತ್ರದಿಂದ ಯಾವ ಮಾನವರು ಭಕ್ತಿಭರಿತರಾಗಿ ನನ್ನನ್ನು ಸ್ತುತಿಸುವರೋ ಅವರು ಧರ್ಮಾರ್ಥಗಳಿಗೂ ಕೀರ್ತಿಗೂ ಸತತವೂ ಭಾಜನರಾಗಿರುತ್ತಾರೆ.

೩೬. ಈ ಸ್ತೋತ್ರದಿಂದ ನನ್ನನ್ನು ಸ್ತುತಿಸುವವರೆಲ್ಲರೂ ನನ್ನ ಅನುಗ್ರಹದಿಂದ ವಿದ್ಯಾ ವಿನಯಸಂಪನ್ನರೂ, ಅರೋಗದೃಢಕಾಯರೂ, ಚಿರಂಜೀವಿಗಳೂ ಆಗಿ ಪುತ್ರಮಿತ್ರಕಳತ್ರವಂತರಾಗಿರಲಿ.''

೩೭. ಈ ರೀತಿ ಶ್ರೀ ಲಲಿತಾದೇವಿಯು ವರವನ್ನನುಗ್ರಹಿಸಿದ ತರುವಾಯ ದೇವತೆಗಳೂ, ಮಹಾಬಲನಾದ ಇಂದ್ರನೂ, ಅಡಿಗಡಿಗೂ ಆ ದೇವಿಯನ್ನು ಭಕ್ತಿಭಾವದಿಂದ ನೋಡಿ ನೋಡಿ, ನಮಸ್ಕರಿಸಿ, ಪರಮಾನಂದಭರಿತರಾಗುತ್ತಿದ್ದರು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವಮೋಽಧ್ಯಾಯಃ

[ಶ್ರೀ ದೇವೀದರ್ಶನಾಯ ಬ್ರಹ್ಮಾದ್ಯಾಗಮನಂ—ತಸ್ಯಾಃ ಶ್ರೀಶಂಕರ ಏವ ಪತಿ ರ್ಭವಿತುಮರ್ಹತೀತಿ ಬ್ರಹ್ಮಣೋ ನಿರ್ಧಾರಃ—ಶಂಕರಸ್ಯ ಕಾಮೇಶ್ವರರೂಪೇಣಾ ವಿರ್ಭಾವಃ — ತಂ ಕಾಮಶಂಕರಂ ವರಯೇತಿ ಶ್ರೀ ಲಲಿತಾಂಬಿಕಾಂಪ್ರತಿ ಬ್ರಹ್ಮಣಃ ಪ್ರಾರ್ಥನಾ]

ದೇವೇಂದ್ರಾದಿ ಸುರೇಶ್ವರಾಸ್ತವ ವರೈರ್ಯಸ್ಯಾಃ ಪ್ರಸಾದೇನ ತೇ ।
ಲಬ್ಧಾಭೀಷ್ಟವರಾಃ ಸ್ಯುರತ್ರ ಭಗವತ್ಯಂಬಾದ್ಭುತಾನಂದದೇ ॥
ಸರ್ವಜ್ಞೇ ಪರದೇವತೇ ಪಶುಪತೇಃ ಪ್ರೇಮಾಸ್ಪದೇ ಶಂಕರಿ ।
ಮೀನಾಕ್ಷೀಲಲಿತೇ ಪ್ರಸೀದ ಸತತಂ ಶ್ರೀ ಸುಂದರೇಶಪ್ರಿಯೇ ॥

ಹಯಗ್ರೀವಃ—

**ಏತಸ್ಮಿನ್ನೇವ ಕಾಲೇ ತು ಬ್ರಹ್ಮಾ ಲೋಕಪಿತಾಮಹಃ ।**
**ಆಜಗಾಮಾಥ ದೇವೇಶೀಂ ದ್ರಷ್ಟುಕಾಮೋ ಮಹರ್ಷಿಭಿಃ ॥ ೧ ॥**
**ಆಜಗಾಮ ತತೋ ವಿಷ್ಣುರಾರೂಢೋ ವಿನತಾಸುತಂ ।**
**ಶಿವೋಽಪಿ ವೃಷಭಾರೂಢಃ ಸಮಾಯಾತೋಽಖಿಲೇಶ್ವರೀಂ ॥ ೨ ॥**
**ದೇವರ್ಷಯೋ ನಾರದಾದ್ಯಾಃ ಸಮಾಜಗ್ಮುರ್ಮಹೇಶ್ವರೀಂ ।**
**ಆಯಯುಸ್ತಾಂ ಮಹಾದೇವೀಂ ಸರ್ವೇ ಚಾಪ್ಸರಸಾಂ ಗಣಾಃ ॥**
**ವಿಶ್ವಾವಸುಪ್ರಭೃತಯೋ ಗಂಧರ್ವಾಶ್ಚೈವ ಯಕ್ಷಕಾಃ ॥ ೩ ॥**

---

### ಕನ್ನಡದ ಅನುವಾದ

[ದೇವಿಯ ಸಂದರ್ಶನಕ್ಕಾಗಿ ಬ್ರಹ್ಮಾದಿಗಳ ಆಗಮನ—ಬ್ರಹ್ಮನು ಶ್ರೀ ಲಲಿತಾ ದೇವಿಗೆ ಶಂಕರನೇ ಅನುರೂಪವರನೆಂದು ನಿರ್ಧರಿಸುವುದು—ಶಂಕರನು ಕಾಮೇಶ್ವರನ ರೂಪವನ್ನು ತಾಳುವುದು—ಬ್ರಹ್ಮನು ಆತನನ್ನು ವರಿಸೆಂದು ದೇವಿಯನ್ನು ಪ್ರಾರ್ಥಿಸು ವುದು]

೧. ಹಯಗ್ರೀವನು ಹೇಳುತ್ತಾನೆ:—"ಎಲೈ ಅಗಸ್ತ್ಯಮುನಿಯೇ ! ಇದೇ ಸಮಯದಲ್ಲಿಯೇ ಲೋಕಪಿತಾಮಹನಾದ ಬ್ರಹ್ಮದೇವನು ಶ್ರೀಲಲಿತಾದೇವಿಯನ್ನು ಸಂದರ್ಶಿಸಲೋಸುಗ ಮಹರ್ಷಿಗಳೆಲ್ಲರೊಡ ಗೂಡಿ ಅಲ್ಲಿಗೆ ಬಂದನು.

೨. ತರುವಾಯ ಗರುಡನನ್ನೇರಿ ವಿಷ್ಣುವೂ, ವೃಷಭಾರೂಢನಾಗಿ ಪರಶಿವನೂ ಆ ಅಖಿಲೇಶ್ವರಿಯ ಸಂದರ್ಶನಕ್ಕಾಗಿ ಅಲ್ಲಿಗೈತಂದರು.

೩. ನಾರದಾದಿ ದೇವರ್ಷಿಗಳೂ, ಸಮಸ್ತವಾದ ಅಪ್ಸರೆಯರ

ಬ್ರಹ್ಮಣಾಥ ಸಮಾದಿಷ್ಟೋ ವಿಶ್ವಕರ್ಮಾ ವಿಶಾಂಪತಿಃ ।
ಚಕಾರ ನಗರಂ ದೇವ್ಯಾ ಯಥಾಮರಪುರಂ ತಥಾ ॥ ೪ ॥
ತತೋ ಭಗವತೀ ದುರ್ಗಾ ಸರ್ವಮಂತ್ರಾಧಿದೇವತಾ ।
ವಿದ್ಯಾಧಿದೇವತಾ ಶ್ಯಾಮಾ ಸಮಾಜಗ್ಮತುರಂಬಿಕಾಂ ॥ ೫ ॥
ಬ್ರಾಹ್ಮ್ಯಾದ್ಯಾ ಮಾತರಶ್ಚೈವ ಸ್ವಸ್ವಭೂತಗಣಾವೃತಾಃ ।
ಸಿದ್ಧಯೋಽಪ್ಯಣಿಮಾದ್ಯಾಶ್ಚ ಯೋಗಿನ್ಯಶ್ಚೈವ ಕೋಟಿಶಃ ॥ ೬ ॥
ಭೈರವಾಃ ಕ್ಷೇತ್ರಪಾಲಾಶ್ಚ ಮಹಾಶಾಸ್ತಾ ಗಣಾಗ್ರಣೀಃ ।
ಮಹಾಗಣೇಶಃ ಸ್ಕಂದಶ್ಚ ಬಟುಕೋ ವೀರಭದ್ರಕಃ ॥
ಆಗತ್ಯ ತೇ ಮಹಾದೇವೀಂ ತುಷ್ಟುವುಃ ಪ್ರಣತಾಸ್ತಥಾ ॥ ೭ ॥

---

ಸಮೂಹಗಳೂ ಆ ಮಹೇಶ್ವರಿಯನ್ನು ಕಾಣಲು ಬಂದು ಸೇರಿದರು. ವಿಶ್ವಾವಸುವೇ ಮೊದಲಾದ ಗಂಧರ್ವರೂ, ಯಕ್ಷರೂ ಅಲ್ಲಿಗೆ ಬಿಜೆಗೈದರು.

೪. ಆಗ ಬ್ರಹ್ಮನ ಅಪ್ಪಣೆಯನ್ನು ಕೈಕೊಂಡು, ದೇವಶಿಲ್ಪಿಯಾದ ವಿಶ್ವಕರ್ಮನು ಆ ದೇವಿಗಾಗಿ, ಅಮರಪುರೋಪಮವಾದ ನಗರವೊಂದನ್ನು ನಿರ್ಮಾಣ ಮಾಡಿದನು.

೫. ಇದಾದ ಬಳಿಕ ಸಮಸ್ತ ಮಂತ್ರಗಳಿಗೂ ಅಧಿದೇವತೆಯಾದ ದುರ್ಗಾದೇವಿಯೂ, ವಿದ್ಯಾಧಿದೇವತೆಯಾದ ಶ್ಯಾಮಲಾಂಬಿಕೆಯೂ ಆ ಜಗದಂಬಿಕೆಯ ಬಳಿಗೈದಿವಂದರು.

೬. ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಎಂಬ ಸಪ್ತಮಾತೃಕೆಯರೂ, ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತಾ, ವಶಿತಾ, ಎಂಬ ಅಷ್ಟಸಿದ್ಧಿದೇವಿಯರೂ ಕೋಟ್ಯನುಕೋಟಿ ಯೋಗಿನಿಯರೂ ತಮ್ಮ ತಮ್ಮ ಭೂತಗಣಗಳಿಂದ ಪರಿವೃತರಾಗಿ ಅಲ್ಲಿಗೆ ಬಂದು ಸೇರಿದರು.

೭. ಭೈರವರೂ, ಕ್ಷೇತ್ರಪಾಲಕರೂ, ಗಣಗಳಿಗೆಲ್ಲ ಮುಂದಾಳಾದ ಮಹಾಶಾಸ್ತೃವೂ, ಮಹಾಗಣೇಶನೂ, ಷಣ್ಮುಖನೂ, ವಟುವಾದ ವೀರಭದ್ರನೂ ಅಲ್ಲಿಗೆ ಪ್ರಣತರಾಗಿ ಬಂದು ಆ ದೇವಿಯನ್ನು ಸ್ತುತಿಸಿ ಸಂತೋಷಗೊಳಿಸಿದರು.

ತದಾತು ನಗರೀಂ ರಮ್ಯಾಂ ಸಾಟ್ಟಪ್ರಾಕಾರತೋರಣಾಂ ।
ಗಜಾಶ್ವರಥಶಾಲಾಢ್ಯಾಂ ರಾಜವೀಥೀವಿರಾಜಿತಾಂ ॥ ೮ ॥
ಸಾಮಂತಾನಾಮಮಾತ್ಯಾನಾಂ ಸೈನಿಕಾನಾಂ ದ್ವಿಜನ್ಮನಾಂ ।
ವೈತಾಲದಾಸದಾಸೀನಾಂ ಗೃಹಾಣಿ ರುಚಿರಾಣಿ ಚ ॥ ೯ ॥
ಮಧ್ಯೇ ರಾಜಗೃಹಂ ದಿವ್ಯಂ ದ್ವಾರಗೋಪುರಶೋಭಿತಂ ।
ಶಾಲಾಭಿರ್ಬಹುಭಿರ್ಯುಕ್ತಂ ಸಭಾಭಿರುಪಶೋಭಿತಂ ॥ ೧೦ ॥
ಸಿಂಹಾಸನಸಭಾಂ ಚೈವ ನವರತ್ನಮಯೀಂ ಶುಭಾಂ ।
ಮಧ್ಯೇ ಸಿಂಹಾಸನಂ ದಿವ್ಯಂ ಚಿಂತಾಮಣಿವಿನಿರ್ಮಿತಂ ॥ ೧೧ ॥
ಸ್ವಯಂಪ್ರಕಾಶಮದ್ವಂದ್ವಮುದಯಾದಿತ್ಯಸಂನಿಭಂ ।
ವಿಲೋಕ್ಯ ಚಿಂತಯಾಮಾಸ ಬ್ರಹ್ಮಾ ಲೋಕಪಿತಾಮಹಃ ॥ ೧೨ ॥
ಯಸ್ತ್ವೇತತ್ಸಮಧಿಷ್ಠಾಯ ವರ್ತತೇ ಬಾಲಿಶೋಽಪಿ ವಾ ।
ಪುರಸ್ಯಾಸ್ಯ ಪ್ರಭಾವೇನ ಸರ್ವಲೋಕಾಧಿಪೋ ಭವೇತ್ ॥ ೧೩ ॥
ನ ಕೇವಲಾ ಸ್ತ್ರೀ ರಾಜ್ಯಾರ್ಹಾ ಪುರುಷೋಽಪಿ ತಯಾ ವಿನಾ ॥ ೧೪ ॥

---

೮–೯. ತರುವಾಯ ಅಟ್ಟಲೆಗಳಿಂದಲೂ, ಪೌಳಿಗೋಡೆಯಿಂದಲೂ, ಬುರುಜುಗಳಿಂದಲೂ ಕೂಡಿ, ಗಜಶಾಲೆ ಅಶ್ವಶಾಲೆಗಳಿಂದ ತುಂಬಿ, ರಾಜವೀಥಿಯಿಂದ ವಿರಾಜಿಸಿ, ಸಾಮಂತರು, ಅಮಾತ್ಯರು, ಸೈನಿಕರು ಮತ್ತು ಬ್ರಾಹ್ಮಣರು, ವೈತಾಲಿಕರು, ದಾಸದಾಸಿಯರು ಮುಂತಾದವರ ಭವನಗಳಿಂದ ತುಂಬಿ ತುಳುಕುತ್ತಿರುವ ಆ ದೇವೀಪುರವು ಬಹುವಾಗಿ ಶೋಭಿಸತೊಡಗಿತು.

೧೦-೧೩. ಆ ನಗರದ ಮಧ್ಯದಲ್ಲಿ ದ್ವಾರಗೋಪುರಗಳಿಂದ ಕಂಗೊಳಿಸುತ್ತಿರುವ ವಿವಿಧ ಶಾಲೆಗಳಿಂದಲೂ, ಸಭಾಮಂದಿರಗಳಿಂದಲೂ ಅಲಂಕೃತವಾಗಿರುವ ರಾಜಗೃಹವನ್ನೂ, ಅದರ ಮಧ್ಯಭಾಗದಲ್ಲಿ ಚಿಂತಾಮಣಿಗಳಿಂದ ರಚಿತವಾದ ಸಿಂಹಾಸನವನ್ನೊಳಗೊಂಡು, ಸ್ವಯಂಪ್ರಕಾಶವೂ, ಉದ್ಯತ್ಸೂರ್ಯನಂತೆ ವಿರಾಜಮಾನವೂ ಅನುಪಮವೂ ಆದ ರಾಜಸಭಾಮಂದಿರವನ್ನು ಕಂಡು, ಲೋಕಪಿತಾಮಹನಾದ ಬ್ರಹ್ಮದೇವನು ಈ ರೀತಿ ಯೋಚಿಸಿದನು :—"ಆಹಾ ! ಈ ಸಿಂಹಾಸನವನ್ನೇರಿ ಕುಳಿತವನು ಎಷ್ಟೇ ಮೂಢನಾದರೂ ಈ ನಗರದ ಪ್ರಭಾವದಿಂದಲೇ ಸರ್ವಲೋಕಗಳಿಗೂ ಅಧಿಪತಿಯಾಗುತ್ತಾನೆ.

೧೪. ಕೇವಲ ಸ್ತ್ರೀಯಾಗಲಿ, ಕೇವಲ ಪುರುಷನಾಗಲಿ, ಒಬ್ಬೊಬ್ಬರೇ ರಾಜ್ಯಕ್ಕೆ ಅರ್ಹರಾಗುವುದಿಲ್ಲ.

**ಮಂಗಲಾಚಾರಸಂಪನ್ನಂ ಮಹಾಪುರುಷಲಕ್ಷಣಂ ।**
**ಅನುರೂಪಾಂಗನಾಯುಕ್ತಮಭಿಷಿಂಚೇದಿತಿ ಸ್ಮೃತಿಃ ॥ ೧೫ ॥**
**ವಿಭಾತೀಯಂ ವರಾರೋಹಾ ಮೂರ್ತಾ ಶೃಂಗಾರದೇವತಾ ।**
**ವರೋಽಸ್ಯಾಸ್ತ್ರಿಷು ಲೋಕೇಷು ನ ಚಾನ್ಯಃ ಶಂಕರಾದೃತೇ ॥ ೧೬ ॥**
**ಜಟಿಲೋ ಮುಂಡಧಾರೀ ಚ ವಿರೂಪಾಕ್ಷಃ ಕಪಾಲಧೃತ್ ।**
**ಕಲ್ಮಾಷೀ ಭಸ್ಮದಿಗ್ಧಾಂಗಃ ಶ್ಮಶಾನಸ್ಥೋ ವಿಭೀಷಣಃ ॥ ೧೭ ॥**
**ಅಮಂಗಲಾಸ್ಪದಂ ನೈನಂ ವರಯೇತ್ಸಾ ಸುಮಂಗಲಾ ॥ ೧೮ ॥**
**ಇತಿ ಚಿಂತಯಮಾನಸ್ಯ ಬ್ರಹ್ಮಣೋಽಗ್ರೇ ಮಹೇಶ್ವರಃ ।**
**ಕೋಟಿಕಂದರ್ಪಲಾವಣ್ಯಯುಕ್ತೋ ದಿವ್ಯಶರೀರವಾನ್ ॥ ೧೯ ॥**
**ದಿವ್ಯಾಂಬರಧರಃ ಸ್ರಗ್ವೀ ದಿವ್ಯಗಂಧಾನುಲೇಪನಃ ।**
**ಕಿರೀಟಹಾರಕೇಯೂರಕುಂಡಲಾದ್ಯೈರಲಂಕೃತಃ ।**
**ಪ್ರಾದುರ್ಬಭೂವ ಪುರುಷೋ ಜಗನ್ಮೋಹನರೂಪಧೃತ್ ॥ ೨೦ ॥**

---

೧೫. ಮಹಾಪುರುಷಲಕ್ಷಣಗಳುಳ್ಳವನಾಗಿ ಸದಾಚಾರಸಂಪನ್ನನೂ ಅನುಕೂಲೆಯಾದ ಭಾರ್ಯೆಯೊಡಗೂಡಿದವನೂ ಆದ ಪುರುಷನನ್ನೇ ರಾಜ್ಯದಲ್ಲಿ ರಾಜನನ್ನಾಗಿ ಪಟ್ಟಾಭಿಷೇಕಮಾಡಬೇಕೆಂದು ಸ್ಮೃತಿಯು ಸಾರುತ್ತಿದೆ.

೧೬. ಈ ವರಾರೋಹೆಯಾದರೋ ಸಾಕ್ಷಾತ್ ಶೃಂಗಾರದೇವತೆಯಂತೆ ವಿರಾಜಿಸುತ್ತಿರುವಳು. ಶಂಕರನನ್ನು ಬಿಟ್ಟರೆ ಈಕೆಗೆ ವರನಾಗುವವನು ಮೂರು ಲೋಕಗಳಲ್ಲಿ ಯಾರೂ ಇರುವುದಿಲ್ಲ.

೧೭. ಈ ಶಂಕರನಾದರೋ ಜಟೆಗಳನ್ನು ಬಿಟ್ಟುಕೊಂಡು, ಮುಂಡಗಳನ್ನು ಧರಿಸಿ, ವಿರೂಪಾಕ್ಷನಾಗಿ ಕಪಾಲವನ್ನು ಹಿಡಿದು, ಮಲಿನನಾಗಿ, ಬೂದಿ ಬಳಿದ ದೇಹವುಳ್ಳವನೂ, ಶ್ಮಶಾನದಲ್ಲಿ ವಾಸಮಾಡುವವನೂ, ಭಯಂಕರನೂ ಆಗಿ ಕಾಣುತ್ತಿರುವನು.

೧೮. ಅಮಂಗಳಕ್ಕೆಡೆಯಾಗಿರುವ ಈತನನ್ನು ಸರ್ವಮಂಗಳೆಯಾದ ಈಕೆಯು ವರಿಸಿಯಾಳೇ!"

೧೯-೨೦. ಬ್ರಹ್ಮನು ಹೀಗೆ ಯೋಚಿಸುತ್ತಿರುವಂತೆಯೇ, ಆ ಮಹೇಶ್ವರನು, ಕೋಟಿಮನ್ಮಥರ ಸೌಂದರ್ಯದಿಂದ ಕೂಡಿದ ದಿವ್ಯ ಶರೀರವುಳ್ಳವನಾಗಿ ದಿವ್ಯವಾದ ಪೀತಾಂಬರವನ್ನುಟ್ಟು, ಕುಸುಮಮಾಲೆಗಳನ್ನು ಧರಿಸಿ ದಿವ್ಯಗಂಧಾನುಲೇಪನವುಳ್ಳವನಾಗಿ, ಕಿರೀಟಹಾರಕೇಯೂರ

ತಂ ಕುಮಾರಮಥಾಲಿಂಗ್ಯ ಬ್ರಹ್ಮಾ ಲೋಕಪಿತಾಮಹಃ ।
ಚಕ್ರೇ ಕಾಮೇಶ್ವರಂ ನಾಮ್ನಾ ಕಮನೀಯವಪುರ್ಧರಂ ॥ ೨೧ ॥
ತಸ್ಯಾಸ್ತು ಪರಮಾಶಕ್ತೇರನುರೂಪೋ ವರಸ್ತ್ವಯಂ ।
ಇತಿ ನಿಶ್ಚಿತ್ಯ ತೇನೈವ ಸಹಿತಸ್ತಾಮಥಾಯಯೌ ॥ ೨೨ ॥
ಅಸ್ತುವಂಸ್ತೇ ಪರಾಶಕ್ತಿಂ ಬ್ರಹ್ಮವಿಷ್ಣುಮಹೇಶ್ವರಾಃ ॥ ೨೩ ॥
ತಾಂ ದೃಷ್ಟ್ವಾ ಮೃಗಶಾವಾಕ್ಷೀಂ ಕುಮಾರೋ ನೀಲಲೋಹಿತಃ ।
ಅಭವನ್ಮನ್ಮಥಾವಿಷ್ಟೋ ವಿಸ್ಮೃತ್ಯ ಸಕಲಾಃ ಕ್ರಿಯಾಃ ॥ ೨೪ ॥
ಸಾಪಿ ತಂ ವೀಕ್ಷ್ಯ ತನ್ವಂಗೀ ಮೂರ್ತಿಮಂತಮಿವ ಸ್ಮರಂ ।
ಮದನಾವಿಷ್ಟಸರ್ವಾಂಗೀ ಸ್ವಾನುರೂಪಮಮನ್ಯತ ॥ ೨೫ ॥

---

ಕುಂಡಲಗಳೇ ಮೊದಲಾದ ಆಭರಣಗಳಿಂದ ಅಲಂಕೃತನಾಗಿ ಆತನ ಮುಂಗಡೆಯೇ ಜಗನ್ಮೋಹನಾಕಾರನಾಗಿ ಕಾಣಿಸಿಕೊಂಡನು.

೨೧. ಮಹಾಮನೋಹರವಾದ ರೂಪದಿಂದ ಶೋಭಿಸುತ್ತಿರುವ ಸುಕುಮಾರನಾದ ಆ ಶಂಕರನನ್ನು ಕಂಡು ಒಡನೆಯೇ ಕಮಲಾಸನನು ಆತನನ್ನಾಲಿಂಗಿಸಿಕೊಂಡು ಆತನಿಗೆ "ಕಾಮೇಶ್ವರ" ಎಂದು ನಾಮಕರಣ ಮಾಡಿದನು.

೨೨. ತರುವಾಯ ಆ ಕಮಲಭವನು; "ಈಗಲೀತನು ಈ ಪರಾಶಕ್ತಿಗನುರೂಪನಾದ ವರನಾಗಿರುವನು" ಎಂದು ನಿಶ್ಚಯಿಸಿ ಆತನೊಡನೆ ಆ ದೇವಿಯಿದ್ದೆಡೆಗೆ ಬಂದನು.

೨೩. ಆಗ ಬ್ರಹ್ಮವಿಷ್ಣು ಮಹೇಶ್ವರರು ಮೂವರೂ ಆ ಪರಾಶಕ್ತಿಯನ್ನು ಸ್ತೋತ್ರಮಾಡಿದರು.

೨೪. ಆ ಸಮಯದಲ್ಲಿಯೇ ಕುಮಾರನೂ, ನಿಲಲೋಹಿತನೂ ಆದ ಕಾಮೇಶ್ವರನು ಮೃಗಶಾವಾಕ್ಷಿಯಾದ ಆ ದೇವಿಯನ್ನು ಕಂಡು ಒಡನೆಯೇ ಸಮಸ್ತ ಕಾರ್ಯಗಳನ್ನೂ ಮರೆತು ಮನ್ಮಥತಾಪಕ್ಕೊಳಗಾದನು.

೨೫. ಮಹಾಲಾವಣ್ಯವತಿಯಾದ ಶ್ರೀ ಲಲಿತಾಂಬಿಕೆಯೂ, ಮೂರ್ತಿಮಂತನಾದ ಮನ್ಮಥನಂತಿರುವ ಆ ಕಾಮೇಶ್ವರನನ್ನು ನೋಡಿ ಮದನತಾಪಕ್ಕೊಳಗಾದ ಸರ್ವಾವಯವಗಳುಳ್ಳವಳಾಗಿ ಆತನೇ ತನಗೆ ಅನುರೂಪನೆಂದರಿತಳು.

**ಅನ್ಯೋನ್ಯಾಲೋಕನಾಸಕ್ತೌ ತಾವುಭೌ ಮದನಾತುರೌ ।**
**ಸರ್ವಭಾವವಿಶೇಷಜ್ಞೌ ಧೃತಿಮಂತೌ ಮನಸ್ವಿನೌ ।**

**ಪರೈರಜ್ಞಾತಚಾರಿತ್ರೌ ಮುಹೂರ್ತಂ ಸ್ವಸ್ಥಚೇತಸೌ ॥ ೨೬ ॥**
**ಅಥೋವಾಚ ಮಹಾದೇವೀಂ ಬ್ರಹ್ಮಾ ಲೋಕೈಕನಾಯಿಕಾಂ ।**

**ಇಮೇ ದೇವಾಶ್ಚ ಋಷಯೋ ಗಂಧರ್ವಾಪ್ಸರಸಾಂ ಗಣಾಃ ॥**
**ತ್ವಾಮಿಹಾಶಾಂ ದ್ರಷ್ಟುಮಿಚ್ಛಂತಿ ಸಪ್ರಿಯಾಂ ಪರಮಾಸನೇ ॥ ೨೭ ॥**

**ಕೋ ವಾಽನುರೂಪಸ್ತೇ ದೇವಿ ಪ್ರಿಯೋ ಧನ್ಯತಮಃ ಪುಮಾನ್ ।**
**ಲೋಕಸಂರಕ್ಷಣಾರ್ಥಾಯ ಭಜಸ್ವ ಪುರುಷಂ ಪರಂ ॥ ೨೮ ॥**

**ರಾಜ್ಞೀ ಭವ ಪುರಸ್ಯಾಽಸ್ಯ ಸ್ಥಿತಾ ಭವ ವರಾಸನೇ ।**
**ಅಭಿಷಿಕ್ತಾಂ ಮಹಾಭಾಗೇ ದೇವರ್ಷಿಭಿರಕಲ್ಮಷೈಃ ॥ ೨೯ ॥**

---

೨೬. ಮದನಾತುರರೂ, ಸಮಸ್ತ ಭಾವಗಳ ವಿಶೇಷಗಳನ್ನೂ ತಿಳಿದವರೂ ಆದರೂ, ಜಿತೇಂದ್ರಿಯರೂ, ಧೈರ್ಯಶೀಲರೂ, ಇತರರಿಂದ ತಿಳಿಯಲಾಗದ ನಡವಳಿಯುಳ್ಳವರೂ ಆದ ಲಲಿತಾಂಬಿಕೆಯೂ, ಆ ಕಾಮೇಶ್ವರನೂ ಒಂದು ಮುಹೂರ್ತಕಾಲ ಸ್ವಸ್ಥಮಾನಸರಾಗಿ ಒಬ್ಬರನ್ನೊಬ್ಬರು ನೋಡುವುದರಲ್ಲಿಯೇ ಆಸಕ್ತರಾದರು.

೨೭. ಆಗ ಬ್ರಹ್ಮದೇವನು ಲೋಕನಾಯಕಿಯಾದ ಆ ಮಹಾದೇವಿಯನ್ನು ಕುರಿತು—“ ಓ ದೇವೀ ! ಈ ದೇವತೆಗಳೂ, ಮಹರ್ಷಿಗಳೂ, ಗಂಧರ್ವಗಣಗಳೂ, ಅಪ್ಸರೋಗಣಗಳೂ ನೀನು ನಿನ್ನ ಪ್ರಿಯನೊಡನೆ ಈ ದಿವ್ಯ ಸಿಂಹಾಸನದಲ್ಲಿ ಕುಳಿತು ತಮ್ಮೆಲ್ಲರಿಗೂ ಒಡತಿಯಾಗುವುದನ್ನು ಕಾಣಲಪೇಕ್ಷಿಸುತ್ತಿರುವರು.

೨೮. ಓ ದೇವೀ ! ನಿನಗೆ ಅನುರೂಪನೂ, ಪ್ರಿಯನೂ, ಧನ್ಯತಮನೂ ಆದ ಪುರುಷನಾದರೂ ಯಾರು ? ಆದುದರಿಂದ ಕೇವಲ ಲೋಕಸಂರಕ್ಷಣೆಯ ಸಲುವಾಗಿ ನೀನು ಅಂಥ ಪರಮಪುರುಷನನ್ನು ವರಿಸುವವಳಾಗು.

೨೯-೩೦. ಓ ದೇವೀ ! ನೀನು ಈ ದಿವ್ಯಸಿಂಹಾಸನದಲ್ಲಿ ಕುಳಿತು ಈ ಪಟ್ಟಣಕ್ಕೆಲ್ಲ ರಾಜ್ಞಿಯಾಗು.

**ಸಾಮ್ರಾಜ್ಯಲಕ್ಷ್ಮೀಸಂಯುಕ್ತಾಂ ಸರ್ವಾಭರಣಸಂಯುತಾಂ ।**
**ಸಪ್ರಿಯಾಮಾಸನಗತಾಂ ದ್ರಷ್ಟುಮಿಚ್ಛಾಮಹೇ ವಯಂ ॥ ೩೦ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ**
**ಸಂವಾದೇ ಶ್ರೀ ಲಲಿತೋಪಾಖ್ಯಾನೇ**
**ನವಮೋಽಧ್ಯಾಯಃ**

---

ಓ ಮಹಾಭಾಗೇ!! ಮಹಾಭಾಗ್ಯಶಾಲಿಗಳೂ, ನಿಷ್ಕಲ್ಮಷರೂ ಆದ ಈ ದೇವರ್ಷಿಗಳಿಂದ ಪಟ್ಟಾಭಿಷಿಕ್ತೆಯಾಗಿ, ಸಾಮ್ರಾಜ್ಯಚಿಹ್ನೆಗಳಾದ ಛತ್ರಚಾಮರಾದಿಗಳಿಂದ ಸೇವಿತೆಯಾಗಿ ಪ್ರಿಯನೊಡನೆ ನೀನು ಈ ದಿವ್ಯ ಸಿಂಹಾಸನವನ್ನಲಂಕರಿಸುವುದನ್ನು ನೋಡಲು ನಾವೆಲ್ಲರೂ ಬಯಸುತ್ತಿರುವೆವು" ಎಂದು ಹೇಳಿದನು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದಶಮೋಽಧ್ಯಾಯಃ

[ವೈವಾಹಿಕೋತ್ಸವ ವರ್ಣನಂ— ಶ್ರೀಲಲಿತಾಂಬಾ ಪಟ್ಟಾಭಿಷೇಕಮಹೋತ್ಸವಶ್ಚ]

ಬ್ರಹ್ಮಾನಂದೈಕವಾರ್ಧಿಃ ಸುರವರವಿನುತಃ ಪೂರ್ಣಮಾಂಗಲ್ಯವೇಷಃ ।
ಶಂಭುಃ ಶಕ್ತ್ಯಾಪ್ಯಮೇಯೋ ಹರಿವಿಧಿಸುರರಾಡ್ಲೋಕಪಾಲೈಶ್ಚ ಸೇವ್ಯಃ ॥
ಕಾಮೇಶಾಖ್ಯಪ್ರಿಯೋಽಭೂದನುಪಮವಿಭವಾತ್ಸರ್ವಕಾಮೇಶ್ವರೀಶಃ ।
ತತ್ತ್ವಾವಿಶಂ ಸದಾಹಂ ಪರತರಮುಮಯಾ ಸುಂದರೇಶಂ ಭಜೇಽಹಂ ॥

ಹಯಗ್ರೀವಃ—

**ತಚ್ಛ್ರುತ್ವಾ ವಚನಂ ದೇವೀ ಮಂದಸ್ಮಿತಮುಖಾಂಬುಜಾ ।**
**ಉವಾಚ ಸಾ ತತೋ ವಾಕ್ಯಂ ಬ್ರಹ್ಮವಿಷ್ಣುಮುಖಾನ್ಸುರಾನ್ ॥೧॥**

ದೇವ್ಯುವಾಚ—

**ಸ್ವತಂತ್ರಾಽಹಂ ಸದಾ ದೇವಾಃ ಸ್ವೇಚ್ಛಾಚಾರವಿಹಾರಿಣೀ ।**
**ಮಮಾನುರೂಪಚರಿತೋ ಭವಿತಾ ತು ಮಮ ಪ್ರಿಯಃ ॥ ೨ ॥**
**ತಥೇತಿ ತತ್ಪ್ರತಿಶ್ರುತ್ಯ ಸರ್ವೈರ್ದೇವೈಃ ಪಿತಾಮಹಃ ।**
**ಉವಾಚ ಚ ಮಹಾದೇವೀಂ ಧರ್ಮಾರ್ಥಸಹಿತಂ ವಚಃ ॥ ೩ ॥**

---

### ಕನ್ನಡದ ಅನುವಾದ

[ವೈವಾಹಿಕೋತ್ಸವವರ್ಣನ— ಶ್ರೀ ಲಲಿತಾಂಬೆಯ ಪಟ್ಟಾಭಿಷೇಕಮಹೋತ್ಸವ]

೧. ಹಯಗ್ರೀವನು ಹೇಳುತ್ತಾನೆ:— ಅಗಸ್ತ್ಯಮುನಿವರಾ! ಈ ಪ್ರಕಾರವಾಗಿ ಪ್ರಾರ್ಥಿಸಿದ ಬ್ರಹ್ಮದೇವನ ಮಾತುಗಳನ್ನು ಕೇಳಿ, ಶ್ರೀಲಲಿತಾದೇವಿಯು ಮೆಲುನಗೆಯನ್ನು ಸೂಸುತ್ತಿರುವ ಮುಖಕಮಲವುಳ್ಳವಳಾಗಿ, ಅಲ್ಲಿದ್ದ ಬ್ರಹ್ಮವಿಷ್ಣುವೇ ಮೊದಲಾದ ಎಲ್ಲ ದೇವತೆಗಳನ್ನೂ ಕುರಿತು ಹೀಗೆ ಹೇಳಿದಳು:

೨. "ಎಲೈ ದೇವತೆಗಳಿರಾ! ನಾನು ಯಾವಾಗಲೂ ಸ್ವತಂತ್ರೆಯಾಗಿರತಕ್ಕವಳು; ಮನಸ್ಸುಬಂದಂತೆ ನಡೆಯುವವಳು; ಮನಸ್ಸುಬಂದಂತೆಯೇ ವಿಹರಿಸುವವಳು. ಹೀಗಿರುವ ನನಗೆ ಅನುರೂಪನಾದ ನಡವಳಿಯಿರುವವನೇ ಪ್ರಿಯನಾಗತಕ್ಕವನು."

೩. ಆಗಲಾಕೆಯ ಮಾತುಗಳನ್ನು ಕೇಳಿ ಲೋಕಪಿತಾಮಹನು ದೇವತೆಗಳೆಲ್ಲರೊಡಗೂಡಿ ಹಾಗೆಯೇ ಆಗಲೆಂದು ಸಮ್ಮತಿಸಿ ಆ ಮಹಾ

(ಕಾಲಕ್ರೀತಾ ಕ್ರಯಕ್ರೀತಾ ಪಿತೃದತ್ತಾ ಸ್ವಯಂಯುತಾ ।
ನಾರೀಪುರುಷಯೋರೇವಮುದ್ವಾಹಸ್ತು ಚತುರ್ವಿಧಃ ॥ ೪ ॥
ಕಾಲಕ್ರೀತಾ ತು ಸಾ ವೇಶ್ಯಾ ದಾಸೀ ಸ್ಯಾತ್ಕ್ರಯಸಂಯುತಾ ।
ಭಾರ್ಯಾ ಸ್ಯಾತ್ಪಿತೃದತ್ತಾ ತು ಗಾಂಧರ್ವೀತು ಸ್ವಯಂಯುತಾ ॥
ಸಮಧರ್ಮೇಣ ಯುಕ್ತಾ ಸಾ ಭಾರ್ಯಾ ಪಿತ್ರರ್ಪಿತಾ ಯಥಾ ॥ ೫ ॥)
ಬ್ರಹ್ಮಾದಯಸ್ತು ತಾಮೂಚುಃ ಪರಬ್ರಹ್ಮಸ್ವರೂಪಿಣೀಂ ॥ ೬ ॥
ಯದದ್ವೈತಂ ಪರಂ ಬ್ರಹ್ಮ ಸದಸದ್ಭಾವವರ್ಜಿತಂ ।
ಚಿದಾನಂದಾತ್ಮಕಂ ತಸ್ಮಾತ್ಪ್ರಕೃತಿಃ ಸಮಜಾಯತ ॥ ೭ ॥
ತ್ವಮೇವಾಸಿ ಚ ತದ್ಬ್ರಹ್ಮ ಪ್ರಕೃತಿಃ ಸಾ ತ್ವಮೇವ ಹಿ ।
ತ್ವಮೇವಾನಾದಿರಖಿಲಾ ಕಾರಣಾಕಾರಣಾತ್ಮಿಕಾ ।
ತ್ವಾಮೇವ ಹಿ ವಿಚಿನ್ವಂತಿ ಯೋಗಿನಃ ಸನಕಾದಯಃ ॥ ೮ ॥

---

ದೇವಿಯನ್ನು ಕುರಿತು ಧರ್ಮಾರ್ಥಸಹಿತವಾದ ಮಾತನ್ನು ಹೀಗೆ ಹೇಳಿದನು:

(೪. "ದೇವೀ! ಕಾಲಕ್ರೀತೆ, ಕ್ರಯಕ್ರೀತೆ, ಪಿತೃದತ್ತೆ, ಸ್ವಯಂಯುತೆ ಎಂಬುದಾಗಿ ಸ್ತ್ರೀಪುರುಷರ ವಿವಾಹಗಳು ನಾಲ್ಕು ಬಗೆ.

೫. ಕಾಲಕ್ರೀತೆಯು ವೇಶ್ಯೆಯೆನಿಸುತ್ತಾಳೆ. ಕ್ರಯಕ್ರೀತೆಯು ದಾಸಿಯೆನಿಸುತ್ತಾಳೆ. ತಂದೆಯೇ ಸಾಕ್ಷಾತ್ತಾಗಿ ಮದುವೆಮಾಡಿಕೊಟ್ಟ ಸ್ತ್ರೀಯು ಭಾರ್ಯೆಯೆನಿಸುತ್ತಾಳೆ. ಗಾಂಧರ್ವರೀತಿಯಿಂದ ವರಿಸಲಾದವಳು ಸ್ವಯಂಯುತೆ. ಇವಳು ತಂದೆಯ ಅಧೀನದಲ್ಲಿದ್ದು ಆತನೇ ಮದುವೆಮಾಡಿಕೊಟ್ಟ ಕನ್ಯೆಯಂತೆಯೇ ಸಮಾನವಾದ ಧರ್ಮವುಳ್ಳ ಆ ಪುರುಷನಿಗೆ ಅನುರೂಪಳಾದ ಭಾರ್ಯೆಯೆನಿಸುವಳು.")

೬. ಆಗ ಬ್ರಹ್ಮಾದಿದೇವತೆಗಳು ಪರಬ್ರಹ್ಮಸ್ವರೂಪಿಣಿಯಾದ ಆ ಲಲಿತಾದೇವಿಯನ್ನು ಕುರಿತು ಪುನಃ ಹೀಗೆ ಹೇಳಿದರು:

೭. "ಓ ಪರಮೇಶ್ವರೀ! ಸದಸತ್ತುಗಳ ಭಾವಗಳೇನೂ ಇಲ್ಲದ ಯಾವ ಅದ್ವೈತಸ್ವರೂಪವಾದ ಪರಬ್ರಹ್ಮವುಂಟೋ ಚಿದಾನಂದಾತ್ಮಕವಾದ ಆ ಪರಬ್ರಹ್ಮದಿಂದಲೇ ಪ್ರಕೃತಿಯು ಉದಿಸಿತು.

೮. ಎಲೌ ದೇವೀ! ನೀನೇ ಆ ಬ್ರಹ್ಮಸ್ವರೂಪಣಿಯಾಗಿರುವೆ. ಆ ಪ್ರಕೃತಿಯೂ ನೀನೇ. ಅನಾದಿಯೂ, ಅಖಿಲಸ್ವರೂಪಿಣಿಯೂ, ಕಾರ್ಯಕಾರಣರೂಪಿಣಿಯೂ ನೀನೇ. ಸನಕನೇ ಮೊದಲಾದ ಎಲ್ಲ ಯೋಗಿಗಳೂ ಹುಡುಕುತ್ತಿರುವುದು ನಿನ್ನನ್ನೇ!

**ಸದಸತ್ಕರ್ಮರೂಪಾಂ ಚ ವ್ಯಕ್ತಾವ್ಯಕ್ತೋದಯಾತ್ಮಿಕಾಂ ।**
**ತ್ವಾಮೇವ ಹಿ ಪ್ರಶಂಸಂತಿ ಪಂಚಬ್ರಹ್ಮಸ್ವರೂಪಿಣೀಂ ॥ ೯ ॥**
**ತ್ವಮೇವ ಹಿ ಸೃಜಸ್ಯಾದೌ ತ್ವಮೇವ ಹ್ಯವಸಿ ಕ್ಷಣಾತ್ ।**
**ತ್ವಮೇವ ಭೂಯೋ ಹರಸಿ ವಿದಧಾಸಿ ಮಹೇಶ್ವರಿ ॥ ೧೦ ॥**
**ತಸ್ಮಾತ್ತ್ವಾಸ್ವತಂತ್ರ್ಯನಾಶಸ್ತೇ ನ ಭವೇತ್ಪ್ರಿಯಸಂಗಮಾತ್ ।**
**ಭಜಸ್ವ ಪುರುಷಂ ಕಂಚಿಲ್ಲೋಕಾನುಗ್ರಹಕಾಮ್ಯಯಾ ॥ ೧೧ ॥**
**ಇತಿ ವಿಜ್ಞಾಪಿತಾ ದೇವೀ ಬ್ರಹ್ಮಣಾ ಸಕಲೈಃ ಸುರೈಃ ।**
**ಸ್ರಜಮುದ್ಧೃತ್ಯ ಹಸ್ತೇನ ಚಿಕ್ಷೇಪ ಗಗನಾಂತರೇ ॥ ೧೨ ॥**
**ತಯೋತ್ಸೃಷ್ಟಾ ತು ಸಾ ಮಾಲಾ ಶೋಭಯಂತೀ ನಭಸ್ತಲಂ ।**
**ಪಪಾತ ಕಂಠದೇಶೇ ಹಿ ತದಾ ಕಾಮೇಶ್ವರಸ್ಯ ತು ॥ ೧೩ ॥**
**ಮುಮುದುಶ್ಚ ತತೋ ದೇವಾ ಬ್ರಹ್ಮವಿಷ್ಣು ಪುರೋಗಮಾಃ ।**
**ವವರ್ಷುಃ ಪುಷ್ಪವರ್ಷಾಣಿ ಬಲಾರಾತೀರಿತಾ ಘನಾಃ ॥ ೧೪ ॥**

---

೯. ಅವರೆಲ್ಲರೂ ಸದಸತ್ಕರ್ಮರೂಪಿಣಿಯೂ, ತಿಳಿದೂ ತಿಳಿಯದಿರುವ ಹುಟ್ಟುಳ್ಳವಳೂ, ಪಂಚಬ್ರಹ್ಮಸ್ವರೂಪಿಣೀಯೂ ಆದ ನಿನ್ನನ್ನೇ ಪ್ರಶಂಸಿಸುತ್ತಾರೆ.

೧೦. ಓ ಮಹೇಶ್ವರೀ! ಆದಿಯಲ್ಲಿ ನೀನೇ ಈ ಜಗತ್ತನ್ನು ಕ್ಷಣಮಾತ್ರದಲ್ಲಿ ಸೃಜಿಸುವೆ. ಹೀಗೆ ಸೃಜಿಸಿದ ಈ ಜಗತ್ತನ್ನು ಕಾಪಾಡುವವಳೂ ನೀನೇ. ದೇವೀ! ಇಷ್ಟೆಯಲ್ಲದೆ ಈ ಜಗತ್ತನ್ನು ಧರಿಸಿ ಕಾಪಾಡಿದ ಬಳಿಕ ಇದನ್ನು ಉಪಸಂಹರಿಸುವವಳೂ ನೀನೇ.

೧೧. ಆದಕಾರಣ ನಿನಗೆ ಪ್ರಿಯನಾದ ವರನನ್ನು ವರಿಸುವುದರಿಂದ ನಿನಗೆ ಸ್ವತಂತ್ರನಾಶವೆಂಬುದು ಎಂದಿಗೂ ಉಂಟಾಗುವುದಿಲ್ಲ. ಅಲ್ಲದೆ ಈ ಜಗತ್ತನ್ನು ಅನುಗ್ರಹಿಸುವುದಕ್ಕಾದರೂ ಯಾವನಾದರೊಬ್ಬ ಪುರುಷನನ್ನು ನೀನು ವರಿಸಬೇಕು.''

೧೨. ಬ್ರಹ್ಮನೂ ಸಮಸ್ತ ದೇವತೆಗಳೂ ಈರೀತಿ ಅರಿಕೆಮಾಡಿಕೊಳ್ಳಲು, ಶ್ರೀಲಲಿತಾದೇವಿಯು ತನ್ನ ಕೈಯಿಂದಲೇ ಸುಮಮಾಲೆಯೊಂದನ್ನು ತೆಗೆದು ಆಕಾಶಕ್ಕೆಸೆದಳು.

೧೩. ಆ ಮಾಲಿಕೆಯಾದರೋ ಗಗನಾಂಗಣವನ್ನೇ ಬೆಳಗುತ್ತ ಆ ಸಭೆಯನ್ನಲಂಕರಿಸಿದ್ದ ಕಾಮೇಶ್ವರನ ಕಂಠಪ್ರದೇಶದಲ್ಲಿ ಬಿದ್ದಿತು.

೧೪. ಆಗ ಬ್ರಹ್ಮವಿಷ್ಣುವೇ ಮೊದಲಾದ ದೇವತೆಗಳೆಲ್ಲರೂ ಬಹಳ

**ಅಥೋವಾಚ ವಿಧಾತಾ ತು ಭಗವಂತಂ ಜನಾರ್ದನಂ ॥ ೧೫ ॥**
**ಕರ್ತವ್ಯೋ ವಿಧಿನೋದ್ವಾಹಸ್ತ್ವನಯೋಃ ಶಿವಯೋರ್ಹರೇ ।**
**ಮುಹೂರ್ತೋದ್ಯೈವ ಸಂಪ್ರಾಪ್ತೋ ಜಗನ್ಮಂಗಲಕಾರಕಃ ॥ ೧೬ ॥**
**ತ್ವದ್ರೂಪಿಣೀ ಮಹಾದೇವೀ ಸಹಜಶ್ಚ ಭವಾನಸಿ ।**
**ದಾತುಮರ್ಹಸಿ ಕಲ್ಯಾಣೀಮಸ್ಮೈ ಕಾಮಶಿವಾಯ ತು ॥ ೧೭ ॥**
**ತಚ್ಛ್ರುತ್ವಾ ವಚನಂ ತಸ್ಯ ದೇವದೇವಸ್ತ್ರಿವಿಕ್ರಮಃ ।**
**ದದೌ ತಸ್ಮೈ ವಿಧಾನೇನ ಪ್ರೀತ್ಯಾ ತಾಂ ಶಂಕರಾಯ ತು ॥ ೧೮ ॥**
**ದೇವರ್ಷಿಪಿತೃಮುಖ್ಯಾನಾಂ ಗಂಧರ್ವಾಪ್ಸರಸಾಂ ತಥಾ ।**
**ಸರ್ವಾಸಾಂ ದೇವಜಾತೀನಾಂ ಸಾನ್ನಿಧ್ಯೇ ಜಲಪೂರ್ವಕಂ ।**
**ಕಲ್ಯಾಣಂ ಕಾರಯಾಮಾಸ ಶಿವಯೋರಾದಿಕೇಶವಃ ॥ ೧೯ ॥**

---

ವಾಗಿ ಸಂತೋಷಿಸಿದರು. ಆ ಸಮಯದಲ್ಲಿಯೇ ಇಂದ್ರನಿಂದ ಪ್ರೇರಿಸಲ್ಪಟ್ಟ ಮೇಘವೃಂದಗಳೆಲ್ಲವೂ ಹೂಮಳೆಗರೆದವು.

೧೫. ತರುವಾಯ ಬ್ರಹ್ಮದೇವನು ಪೂಜ್ಯನಾದ ಜನಾರ್ದನನನ್ನು ಕುರಿತು ಹೀಗೆ ಹೇಳಿದನು :

೧೬-೧೭. "ಎಲೈ ನಾರಾಯಣನೇ! ಪೂಜ್ಯರಾದ ಈ ಕಾಮೇಶ್ವರೀ ಕಾಮೇಶ್ವರರ ವಿವಾಹವನ್ನು ಶಾಸ್ತ್ರೋಕ್ತವಾಗಿ ನೀನೇ ನಡೆಯಿಸಬೇಕು. ಜಗತ್ತಿಗೆಲ್ಲಾ ಮಂಗಳವನ್ನುಂಟುಮಾಡುವ ಶುಭಮುಹೂರ್ತವು ಈಗ ಸನ್ನಿಹಿತವಾಗಿರುವುದು. ಓ ಪ್ರಭುವೇ! ಈ ಮಹಾದೇವಿಯು ನಿನ್ನ ಸ್ವರೂಪವನ್ನೇ ಒಳಗೊಂಡಿರುವಳು. ನೀನೂ ಈಕೆಯೊಡನೆ ಹುಟ್ಟಿದವನು. ಆದುದರಿಂದ ಈ ಕಲ್ಯಾಣಿಯನ್ನು ಕಾಮೇಶ್ವರನಿಗೆ ಕೊಟ್ಟು ನೀನೇ ಕಲ್ಯಾಣಮಹೋತ್ಸವವನ್ನು ನೆರವೇರಿಸಬೇಕು."

೧೮-೧೯. ದೇವದೇವನಾದ ತ್ರಿವಿಕ್ರಮನು ಬ್ರಹ್ಮನ ಈ ಮಾತುಗಳನ್ನು ಕೇಳಿ ಬಹು ಪ್ರೀತಿಯಿಂದ, ಆ ಮಹಾದೇವಿಯನ್ನು ಕಾಮೇಶ್ವರನಾದ ಶಂಕರನಿಗೆ ಶಾಸ್ತ್ರೋಕ್ತವಿಧಿಯಿಂದ ವಿವಾಹಮಾಡಿಕೊಟ್ಟನು. ಆ ಆದಿಕೇಶವನು ದೇವರ್ಷಿಗಳ, ಪಿತೃದೇವತೆಗಳ, ಗಂಧರ್ವರೇ ಮೊದಲಾದ ಸಮಸ್ತದೇವತೆಗಳ ಸಾನ್ನಿಧ್ಯದಲ್ಲಿ ಆ ಕಾಮೇಶೀ ಕಾಮೇಶ್ವರರ ಕಲ್ಯಾಣಮಹೋತ್ಸವವನ್ನು ಜಲಧಾರಾಪೂರ್ವಕವಾಗಿ ನೆರವೇರಿಸಿಕೊಟ್ಟನು.

**ಉಪಾಯನಾನಿ ಪ್ರದದುಃ ಸರ್ವೇ ಬ್ರಹ್ಮಾದಯಃ ಸುರಾಃ ।**
**ದದೌ ಬ್ರಹ್ಮೇಕ್ಷುಚಾಪಂ ತು ವಜ್ರಸಾರಮನಶ್ವರಂ ।**
**ತಯೋಃ ಪುಷ್ಪಾಯುಧಂ ಪ್ರಾದಾದಮ್ಲಾನಂ ಹರಿರವ್ಯಯಂ॥ ೨೦ ॥**
**ನಾಗಪಾಶಂ ದದೌ ತಾಭ್ಯಾಂ ವರುಣೋ ಯಾದಸಾಂ ಪತಿಃ ।**
**ಅಂಕುಶಂ ಚ ದದೌ ತಾಭ್ಯಾಂ ವಿಶ್ವಕರ್ಮಾ ವಿಶಾಂ ಪತಿಃ ॥ ೨೧ ॥**
**ಕಿರೀಟಮಗ್ನಿಃ ಪ್ರಾಯಚ್ಛತ್ತಾಟಂಕೇ ಚಂದ್ರಭಾಸ್ಕರೌ ।**
**ನವರತ್ನಮಯೀಂ ಭೂಷಾಂ ಪ್ರಾದಾದ್ರತ್ನಾಕರಃ ಸ್ವಯಂ॥ ೨೨ ॥**
**ದದೌ ಸುರಾಣಾಮಧಿಪೋ ಮಧುಪಾತ್ರಮಥಾಕ್ಷಯಂ ।**
**ಚಿಂತಾಮಣಿಮಯೀಂ ಮಾಲಾಂ ಕುಬೇರಃ ಪ್ರದದೌ ತದಾ॥ ೨೩ ॥**
**ಸಾಮ್ರಾಜ್ಯಸೂಚಕಂ ಛತ್ರಂ ದದೌ ಲಕ್ಷ್ಮೀಪತಿಃ ಸ್ವಯಂ ।**
**ಗಂಗಾ ಚ ಯಮುನಾ ಚೌಭೇ ಚಾಮರೇ ಚಂದ್ರಭಾಸ್ವರೇ ॥ ೨೪ ॥**

---

೨೦. ಆ ಸಮಯದಲ್ಲಿ ಬ್ರಹ್ಮಾದಿಸಮಸ್ತದೇವತೆಗಳೂ ಆ ವಧೂವರರಿಗೆ ಉಪಾಯನಗಳನ್ನೊಪ್ಪಿಸಿದರು. ಬ್ರಹ್ಮನು ವಜ್ರಸಾರವೂ ಅನಶ್ವರವೂ ಆದ ಇಕ್ಷುಚಾಪವನ್ನು ಸಮರ್ಪಿಸಿದನು. ಶ್ರೀಮನ್ನಾರಾಯಣನು ಎಂದಿಗೂ ಬಾಡದಿರುವಂಥದೂ, ಸ್ಥಿರವಾದುದೂ ಆದ ಪುಷ್ಪಾಯುಧವನ್ನು ಕೊಟ್ಟನು.

೨೧. ಜಲಾಧಿಪನಾದ ವರುಣನು ನಾಗಪಾಶವನ್ನು ಕೊಟ್ಟನು. ವೈಶ್ಯಪತಿಯಾದ ವಿಶ್ವಕರ್ಮನು ಅಂಕುಶವನ್ನೊಪ್ಪಿಸಿದನು.

೨೨. ಅಗ್ನಿಯು ಕಿರೀಟವನ್ನೂ, ಸೂರ್ಯ ಚಂದ್ರರು ತಾಟಂಕಗಳನ್ನೂ, ರತ್ನಾಕರನಾದ ಸಮುದ್ರರಾಜನು ನವರತ್ನಮಣಿಮಯವಾದ ಭೂಷಣವನ್ನೂ ತಂದೊಪ್ಪಿಸಿದರು.

೨೩. ಸುರಾಧಿಪನಾದ ಮಹೇಂದ್ರನು ಅಕ್ಷಯವಾದ ಮಧುಪಾತ್ರೆಯನ್ನಿತ್ತನು. ಕುಬೇರನು ಚಿಂತಾಮಣಿಮಯವಾದ ಮಾಲಿಕೆಯನ್ನು ಕಾಣಿಕೆಯಾಗಿ ಸಲ್ಲಿಸಿದನು.

೨೪. ತರುವಾಯ ಶ್ರೀ ಲಕ್ಷ್ಮೀಪತಿಯು ಪುನಃ ತಾನೇ ಸಾಕ್ಷಾತ್ತಾಗಿ ಆ ದಂಪತಿಗಳಿಗೆ ಸಾಮ್ರಾಜ್ಯಸೂಚಕವಾದ ಬೆಳುಗೊಡೆಯನ್ನು ಕೊಟ್ಟನು. ಗಂಗಾಯಮುನೆಯರು ಅವರೀರ್ವರಿಗೂ ಚಂದ್ರನಂತೆ ಬೆಳುಬೆಳಗುತ್ತಿರುವ ಚಾಮರಗಳನ್ನು ತಂದೊಪ್ಪಿಸಿದರು.

ಬ್ರಹ್ಮಾ ಚ ವಸವೋ ರುದ್ರಾ ಹ್ಯಾದಿತ್ಯಾಶ್ಚಾಶ್ವಿನೌ ತಥಾ ।
ದಿಕ್ಪಾಲಾ ಮರುತಃ ಸಾಧ್ಯಾ ಗಂಧರ್ವಾಃ ಪ್ರಮಥೇಶ್ವರಾಃ ॥
ಸ್ವಾನಿ ಸ್ವಾನ್ಯಾಯುಧಾನ್ಯಸ್ಯೈ ಪ್ರದದುಃ ಪರಿತೋಷಿತಾಃ ॥ ೨೫ ॥
ರಥಾಂಶ್ಚ ತುರಗಾನ್‌ನಾಗಾನ್ಮಹಾವೇಗಾನ್ಮಹಾಬಲಾನ್ ।
ಪುಷ್ಟಾನರೋಗಾನಶ್ರಾಂತಾನ್ ಕ್ಷುತ್ತೃಷ್ಣಾಪರಿವರ್ಜಿತಾನ್ ॥
ದದುರ್ವಜ್ರೋಪಮಾಕಾರಾನಾಯುಧಾನ್ಸಪರಿಚ್ಛದಾನ್ ॥ ೨೬ ॥
ಅಥಾಭಿಷೇಕಮಾತೇನುಃ ಸಾಮ್ರಾಜ್ಯೇ ಸಶಿವಾಂ ಶಿವಾಂ ।
ಅಥಾಕರೋದ್ವಿಮಾನಂ ತು ನಾಮ್ನಾ ತು ಕುಸುಮಾಕರಂ ।
ವಿಧಾತಾಽಮ್ಲಾನಮಾಲ್ಯಂ ವೈ ನಿತ್ಯಮುಚ್ಛೇದ್ಯಮಾಯುಧೈಃ ॥೨೭॥
ದಿವಿ ಭೂಮ್ಯಂತರಿಕ್ಷೇ ಚ ಕಾಮಗಂ ಸುಸಮೃದ್ಧಿಮತ್ ।
ಯದ್ಗಂಧಾಘ್ರಾಣ ಮಾತ್ರೇಣ ಭ್ರಾಂತಿರೋಗಕ್ಷುಧಾರ್ತಯಃ ॥
ತತ್ಕ್ಷಣಾದೇವ ನಶ್ಯಂತಿ ಮನೋಹ್ಲಾದಕರಂ ಶುಭಂ ॥ ೨೮ ॥

---

೨೫. ಬ್ರಹ್ಮದೇವನು, ಅಷ್ಟವಸುಗಳು, ದ್ವಾದಶಾದಿತ್ಯರು, ಅಶ್ವಿನೀ ದೇವತೆಗಳು, ಅಷ್ಟದಿಕ್ಪಾಲಕರು, ಸಪ್ತಮರುತ್ತುಗಳು, ಸಾಧ್ಯರು, ಗಂಧರ್ವರು, ಪ್ರಮಥಗಣಾಧಿಪರು, ಎಲ್ಲರೂ ಪರಮಾನಂದಭರಿತರಾಗಿ ತಮ್ಮ ತಮ್ಮ ಆಯುಧಗಳನ್ನೇ ಆ ದೇವಿಗೆ ಕಾಣಿಕೆಯಾಗಿ ತಂದೊಪ್ಪಿಸಿದರು.

೨೬. ಇಷ್ಟೆಯಲ್ಲದೆ, ಅವರೆಲ್ಲರೂ ರಥಗಳನ್ನೂ, ಹಸಿವು ಬಾಯಾರಿಕೆಗಳೇ ಇಲ್ಲದವುಗಳೂ, ಮಹಾವೇಗಶಾಲಿಗಳೂ, ಮಹಾಬಲಿಷ್ಠಗಳೂ ಅರೋಗ ದೃಢಕಾಯಗಳೂ ಆದ ಕುದುರೆಗಳನ್ನೂ, ವಜ್ರಾಯುಧಕ್ಕೆ ಸಮಾನವಾದ, ಭೂಷಣಾದಿ ಪರಿಕರಗಳಿಂದ ಸಹಿತವಾದ ಆಯುಧಗಳನ್ನೂ ಕಾಣಿಕೆಯಾಗಿ ತಂದುಕೊಟ್ಟರು.

೨೭. ತರುವಾಯ ಎಲ್ಲರೂ ಸೇರಿ ಆ ಕಾಮೇಶ್ವರೀ ಕಾಮೇಶರನ್ನು ದಿವ್ಯ ಸಿಂಹಾಸನದಲ್ಲಿ ಕುಳ್ಳಿರಿಸಿ ವಿಧಿಪೂರ್ವಕವಾಗಿ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದರು. ಆ ಸಮಯದಲ್ಲಿ ಬ್ರಹ್ಮನು, ಎಂದಿಗೂ ಬಾಡದಿರುವಂತಹುದೂ, ಶತ್ರುಗಳ ಯಾವುದೇ ಆಯುಧಗಳಿಂದಲೂ ಭೇದಿಸಲಾಗದಿರುವುದೂ ಆದ ಕುಸುಮಮಾಲಿಕೆಯಿಂದಲಂಕೃತವಾದ 'ಕುಸುಮಾಕರ' ಎಂಬ ಹೆಸರುಳ್ಳ ವಿಮಾನವನ್ನು ಆ ಕಾಮೇಶ್ವರೀ ಕಾಮೇಶ್ವರರಿಗೆ ಕಾಣಿಕೆಯಾಗಿ ಸಮರ್ಪಿಸಿದನು.

೨೮. ಆ ವಿಮಾನವಾದರೋ ಭೂಮ್ಯಾಕಾಶಗಳಲ್ಲಿ ಸ್ವೇಚ್ಛೆಯಾಗಿ ಸಂಚರಿಸತಕ್ಕುದು. ಅದರ ವಾಸನೆಯನ್ನು ಮೂಸಿದ ಮಾತ್ರದಿಂದಲೇ

**ತದ್ವಿಮಾನಮಥಾರೋಪ್ಯ ತಾವುಭೌ ದಿವ್ಯದಂಪತೀ ।**
**ಚಾಮರವ್ಯಜನಚ್ಛತ್ರಧ್ವಜಯಷ್ಟಿಮನೋಹರಂ ॥ ೨೯ ॥**
**ವೀಣಾವೇಣುಮೃದಂಗಾದಿ ವಿವಿಧಾತೋದ್ಯವಾದನೈಃ ।**
**ಸೇವ್ಯಮಾನೌ ಸುರಗಣೈರ್ನಿರ್ಗತ್ಯ ನೃಪಮಂದಿರಾತ್ ॥**
**ಯಯೌ ವೀಥೀಂ ವಿಹಾರೇಣ ಶೋಭಯಂತೀ ನಿಜೌಜಸಾ ॥ ೩೦ ॥**
**ಪ್ರತಿಹರ್ಮ್ಯಾಗ್ರಸಂಸ್ಥಾಭಿರಪ್ಸರೋಭಿಃ ಸಹಸ್ರಶಃ ।**
**ಸಲಾಜಾಕ್ಷತಹಸ್ತಾಭಿಃ ಪುರಸ್ತ್ರೀಭಿಶ್ಚ ವರ್ಷಿತೌ ॥ ೩೧ ॥**
**ಗಾಥಾಭಿರ್ಮಂಗಲಾರ್ಥಾಭಿರ್ವೀಣಾವೇಣುವಿನಿಸ್ವನೈಃ ।**
**ತುಷ್ಯಂತೀ ವೀಥಿವೀಥೀಷು ಮಂದಂ ಮಂದಮಥಾಯಯೌ ॥ ೩೨ ॥**

---

ಭ್ರಾಂತ್ಯಾದಿ ಸಮಸ್ತ ರೋಗಗಳೂ ಹಸಿವು ಬಾಯಾರಿಕೆಗಳೂ ನಿವಾರಣೆಯಾಗಿ ಮನಸ್ಸಿಗೆ ಆಹ್ಲಾದವಾಗುವುದು.

೨೯-೩೦. ಆ ದಿವ್ಯದಂಪತಿಗಳು, ಚಾಮರ, ವ್ಯಜನ, ಛತ್ರ, ಧ್ವಜ, ಸ್ತಂಭ ಮೊದಲಾದವುಗಳಿಂದಲಂಕೃತವಾದ ಇಂತಹ ದಿವ್ಯ ವಿಮಾನವನ್ನೇರಿ ಕುಳಿತು, ವೀಣೆ, ಕೊಳಲು, ಮೃದಂಗವೇ ಮೊದಲಾದ ವಾದ್ಯಗಳೂ, ತುತ್ತೂರಿಗಳೂ ಭೋರ್ಗರೆಯುತ್ತಿರಲು, ಸಮಸ್ತ ದೇವ ಸಮೂಹಗಳಿಂದ ಸಂಸೇವಿತರಾಗಿ ತಮ್ಮ ದಿವ್ಯ ತೇಜಸ್ಸಿನಿಂದಲೇ ವಿರಾಜಿಸುತ್ತ ವಿಹಾರೇಚ್ಛೆಯುಳ್ಳವರಾಗಿ ರಾಜವೀಥಿಯಲ್ಲಿ ಮೆರವಣಿಗೆ ಬಂದರು.

೩೧. ಆ ರಾಜವೀಥಿಯ ಪ್ರತಿಯೊಂದು ಭವನದಲ್ಲಿಯೂ ವಾಸವಾಗಿದ್ದ ಸಾವಿರಾರು ಅಪ್ಸರೆಯರು ಅದೇ ಸಮಯದಲ್ಲಿಯೇ ತಮ್ಮ ಬೊಗಸೆಗಳಲ್ಲಿ ಆಚಾರಲಾಜಗಳನ್ನೂ ಹೂಗಳನ್ನೂ ತುಂಬಿಕೊಂಡು ಆ ದಿವ್ಯದಂಪತಿಗಳ ಮೇಲೆ ಮಳೆಗರೆದರು. ಪಟ್ಟಣದ ಮುತ್ತೈದೆಯರೆಲ್ಲರೂ ಲಾಜಾಕ್ಷತೆಗಳನ್ನೆಸೆದರು.

೩೨. ಮಂಗಳದ ಹಾಡುಗಳಿಂದಲೂ, ವೀಣೆ, ಕೊಳಲು ಮುಂತಾದ ವಾದ್ಯವಾದನಗಳಿಂದಲೂ ನಗರದ ಪ್ರಜೆಗಳೆಲ್ಲರೂ ಆ ದಂಪತಿಗಳನ್ನು ಸ್ತುತಿಸುತ್ತಿದ್ದರು. ಕಾಮೇಶ್ವರಿಯಾದ ಶ್ರೀಲಲಿತಾದೇವಿಯೂ, ಕಾಮೇಶ್ವರನೂ ಬೀದಿ ಬೀದಿಯಲ್ಲಿಯೂ ಈ ರೀತಿಯ ಮಹೋತ್ಸವದ ವೈಭವದಿಂದ ಪರಮಾನಂದಭರಿತರಾಗಿ ಮೆಲ್ಲಮೆಲ್ಲನೆ ಮುಂದುವರೆಯುತ್ತಿದ್ದರು.

**ಪ್ರತಿಗೃಹ್ಯಾಪ್ಸರೋಭಿಸ್ತು ಕೃತಾಂ ನೀರಾಜನಾವಿಧಿಂ ।**
**ಅವರುಹ್ಯ ವಿಮಾನಾಗ್ರ್ಯಾತ್ರ್ಯವಿವೇಶ ಮಹಾಸಭಾಂ ॥ ೩೩ ॥**
**ಸಿಂಹಾಸನಮಧಿಷ್ಠಾಯ ಸಹದೇವೇನ ಶಂಭುನಾ ।**
**ಯದ್ಯದ್ವಾಂಛಂತಿ ತತ್ರಸ್ಥಾ ಮನಸ್ಯೈವ ಮಹಾಜನಾಃ ॥**
**ಸರ್ವಜ್ಞಾ ಸಾಕ್ಷಿಪಾತೇನ ತತ್ತತ್ಕಾಮಾನಪೂರಯುತ್ ॥ ೩೪ ॥**
**ತದ್ದೃಷ್ಟ್ವಾ ಚರಿತಂ ದೇವ್ಯಾ ಬ್ರಹ್ಮಾಲೋಕಪಿತಾಮಹಃ ।**
**ಕಾಮಾಕ್ಷೀತಿ ತದಾಭಿಖ್ಯಾಂ ದದೌ ಕಾಮೇಶ್ವರೀತಿ ಚ ॥ ೩೫ ॥**
**ವವರ್ಷ ಕಾಲೇ ಮೇಘೋಽಪಿ ಪುರೇ ತಸ್ಮಿಂಸ್ತದಾಜ್ಞಯಾ ।**
**ಮಹಾರ್ಹಾಣಿ ಚ ವಸ್ತ್ರಾನಿ ದಿವ್ಯಾನ್ಯಾಭರಣಾನಿ ಚ ॥ ೩೬ ॥**
**ಚಿಂತಾಮಣಿಃ ಕಲ್ಪವೃಕ್ಷಾಃ ಕಮಲಾ ಕಾಮಧೇನವಃ ।**
**ಪ್ರತಿವೇಶ್ಮಾಂತತಸ್ತಸ್ಥುಃ ಪುರೇ ದೇವ್ಯಾಜ್ಞಯಾ ತದಾ ॥ ೩೭ ॥**

---

೩೩. ಆ ದೇವದೇವಿಯರು ಪ್ರತಿ ಮನೆಯಲ್ಲಿಯೂ ದಿವ್ಯಾಂಗನೆಯರಾದ ಅಪ್ಸರೆಯರು ನೀಡಿದ ನೀರಾಜನ ಆರತಿಗಳನ್ನು ಕೈಕೊಂಡು ತಮ್ಮ ಭವ್ಯಭವನಕ್ಕೆ ಬಳಿವಂದು ಆ ವಿಮಾನದಿಂದಿಳಿದು ಸಭಾಮಂದಿರವನ್ನು ಪ್ರವೇಶಿಸಿದರು.

೩೪. ಮಹಾಪೂಜ್ಯೆಯೂ ಸರ್ವಜ್ಞಳೂ ಆದ ಶ್ರೀ ಕಾಮೇಶ್ವರಿಯು ಪ್ರಿಯನಾದ ಕಾಮೇಶ್ವರನೊಡನೆ ಅಲ್ಲಿಯ ದಿವ್ಯಸಿಂಹಾಸನವನ್ನೇರಿ ಕುಳಿತು ಅಲ್ಲಿ ನೆರದಿದ್ದ ಮಹಾಜನಗಳ ಇಷ್ಟಾರ್ಥಗಳನ್ನೆಲ್ಲ ತನ್ನೊಂದು ಕಟಾಕ್ಷವೀಕ್ಷಣದಿಂದಲೇ ಅನುಗ್ರಹಿಸಿ ಪೂರ್ಣಗೊಳಿಸಿದಳು.

೩೫. ಲೋಕಪಿತಾಮಹನಾದ ಬ್ರಹ್ಮದೇವನು ಶ್ರೀ ಲಲಿತಾಮಹಾದೇವಿಯ ಈ ಚರಿತವನ್ನು ಕಂಡು ಆಕೆಗೆ ಕಾಮಾಕ್ಷಿಯೆಂದೂ, ಕಾಮೇಶ್ವರಿಯೆಂದೂ ಬಿರುದುಗಳನ್ನು ಸಮರ್ಪಿಸಿದನು.

೩೬. ತರುವಾಯ ಆ ದೇವೀಪುರದಲ್ಲಿ, ಶ್ರೀ ಕಾಮಾಕ್ಷಿಯ ಆಜ್ಞೆಯಿಂದಲೇ ಮೇಘವು ಯುಕ್ತ ಸಮಯಗಳಲ್ಲಿ ಮಳೆಗರೆಯಿತು; ಅಷ್ಟೆಯಲ್ಲದೆ ಉತ್ತಮೋತ್ತಮವಾದ ವಸ್ತ್ರಗಳನ್ನೂ, ದಿವ್ಯವಾದ ವಿವಿಧಾಭರಣಗಳನ್ನೂ ವರ್ಷಿಸಿತು.

೩೭. ಚಿಂತಾಮಣಿಯೂ, ಕಲ್ಪವೃಕ್ಷವೂ, ಲಕ್ಷ್ಮೀದೇವಿಯೂ, ಕಾಮಧೇನುವೂ ಆ ಲಲಿತಾದೇವಿಯ ಮುಂದಿನ ವಿಜಯಕ್ಕಾಗಿಯೇ ಆ ಪಟ್ಟಣದ ಪ್ರತಿಯೊಂದು ಮನೆಯಲ್ಲಿಯೂ ವಾಸಮಾಡತೊಡಗಿದವು.

**ತತ್ಸೇವೈಕರಸಾಕಾರಾ ವಿಮುಕ್ತಾನ್ಯಕ್ರಿಯಾಗುಣಾಃ ।**
**ಸರ್ವಕಾಮಾರ್ಥಸಂಯುಕ್ತಾ ಹೃಷ್ಯಂತಃ ಸಾರ್ವಕಾಲಿಕಂ ॥ ೩೮ ॥**
**ಪಿತಾಮಹೋ ಹರಿಶ್ಚೈವ ಹರಶ್ಚೈವ ಚ ವಾಸವಃ ।**
**ಅನ್ಯೇ ದಿಶಾಮಧೀಶಾಶ್ಚ ಸಕಲಾ ದೇವತಾಗಣಾಃ ॥ ೩೯ ॥**
**ದೇವರ್ಷಯೋ ನಾರದಾದ್ಯಾ ವಸಿಷ್ಠಾದ್ಯಾಸ್ತಪೋಧನಾಃ ।**
**ಗಂಧರ್ವಾಪ್ಸರಸೋ ಯಕ್ಷಾ ಯಾಶ್ಚಾನ್ಯಾ ದೇವಜಾತಯಃ ॥ ೪೦ ॥**
**ದಿವಿ ಭೂಮ್ಯಂತರಿಕ್ಷೇಷು ಸಸಂಬಾಧಂ ವಸಂತಿ ಯೇ ।**
**ತೇ ಸರ್ವೇ ಚಾಪ್ಯಸಂಬಾಧಂ ನಿವಸಂತಿ ಸ್ಮ ತತ್ಪುರೇ ॥ ೪೧ ॥**
**ಇಯಂ ಮದ್ವತ್ಸಲಾ ದೇವೀ ನಾನ್ಯಸ್ಯೇತ್ಯಖಿಲಾನ್ ಜನಾನ್ ।**
**ತೋಷಯಾಮಾಸ ಸತತಮನುರಾಗೇಣ ಭೂಯಸಾ ॥ ೪೨ ॥**
**ರಾಜಾ ಮಹತಿ ಭೂಲೋಕೇ ವಿದುಷಃ ಸಕಲೇಪ್ಸಿತಾನ್ ।**
**ರಾಜ್ಞೀ ದುದೋಹಾಭೀಷ್ಟಾನಿ ಸರ್ವಭೂತಲವಾಸಿನಾಂ ॥ ೪೩ ॥**

---

೩೮-೪೧. ಬ್ರಹ್ಮನೂ, ಹರಿಯೂ, ಮಹಾದೇವನೂ, ಮಹೇಂದ್ರನೂ, ಇತರ ದಿಕ್ಪಾಲಕರೂ, ಸಮಸ್ತ ದೇವಸಮೂಹಗಳವರೂ, ದೇವರ್ಷಿಗಳಾದ ನಾರದಾದಿಗಳೂ, ಸನಕಸನಂದನಾದಿ ಬ್ರಹ್ಮರ್ಷಿಗಳೂ, ಯೋಗಿಗಳೂ, ಮಹರ್ಷಿಗಳೂ, ಮನ್ವಾದಿಗಳೂ, ತಪೋಧನರಾದ ವಸಿಷ್ಠನೇ ಮೊದಲಾದವರೂ, ಗಂಧರ್ವರೂ, ಅಪ್ಸರೆಯರೂ, ಯಕ್ಷರೂ, ಇತರ ದೇವಜಾತಿಯ ಯಾವ ಯಾವ ದೇವತೆಗಳು ಭೂಮಿ ಮತ್ತು ಅಂತರಿಕ್ಷಗಳಲ್ಲಿ ನೆಲಸಿದ್ದರೋ ಅವರೂ, ಎಲ್ಲರೂ ಆ ಮಹಾದೇವಿಯ ಸೇವೆಯೆಂಬ ರಸವೊಂದನ್ನೇ ಸೇವಿಸುತ್ತ ಇತರ ಎಲ್ಲಾ ಕಾರ್ಯಗಳನ್ನೂ ತೊರೆದು ಆ ಪಟ್ಟಣದಲ್ಲಿಯೇ ವಾಸಮಾಡಲುಪಕ್ರಮಿಸಿದರು.

೪೨. ಈ ರೀತಿ, ಪರಮಭಕ್ತಿಭರಿತರಾದ ಅವರೆಲ್ಲರಿಂದಲೂ ಸೇವೆಯನ್ನು ಕೈಕೊಳ್ಳುತ್ತಲಿದ್ದ ಶ್ರೀ ಲಲಿತಾದೇವಿಯೂ ಸಹ, ತನ್ನ ಅಪಾರವಾದ ಕೃಪೆಯಿಂದ ಅವರೆಲ್ಲರನ್ನೂ, "ಮಹಾದೇವಿಯು ನನ್ನೊಬ್ಬನಲ್ಲಿಯೇ ವಾತ್ಸಲ್ಯವುಳ್ಳವಳಾಗಿರುವಳು; ಮತ್ತಾರಲ್ಲಿಯೂ ಈಕೆಗೆ ವಾತ್ಸಲ್ಯವಿರುವುದಿಲ್ಲ" ಎಂದು ಅವರು ಹೆಮ್ಮೆಪಡುವಷ್ಟುಮಟ್ಟಿಗೆ ಅನುಗ್ರಹಿಸಿ ಸಂತೋಷಗೊಳಿಸುತ್ತ ಅಲ್ಲಿಯೇ ನೆಲಸಿದಳು.

೪೩. ಭೂಲೋಕದಲ್ಲಿ ದೊರೆಯು ಪಂಡಿತರಾದವರ ಸಮಸ್ತ ಇಷ್ಟಾರ್ಥಗಳನ್ನೂ ಹೇಗೆ ಪೂರ್ಣಮಾಡುವನೋ ಹಾಗೆಯೇ, ದೇವಪುರಾ

**ತ್ರಿಲೋಕೈಕಮಹೀಪಾಲೇ ಸಾಂಬಿಕೇ ಕಾಮಶಂಕರೇ ।**
**ದಶವರ್ಷಸಹಸ್ರಾಣಿ ಯಯುಃ ಕ್ಷಣ ಇವಾಪರಃ ॥ ೪೪ ॥**
**ತತಃ ಕದಾಚಿದಾಗತ್ಯ ನಾರದೋ ಭಗವಾನೃಷಿಃ ।**
**ಪ್ರಣಮ್ಯ ಪರಮಾಂ ಶಕ್ತಿಮುವಾಚ ವಿನಯಾನ್ವಿತಃ ॥ ೪೫ ॥**
**ಪರಂ ಬ್ರಹ್ಮ ಪರಂಧಾಮ ಪವಿತ್ರಂ ಪರಮೇಶ್ವರಿ ।**
**ಸದಸದ್ಭಾವಸಂಕಲ್ಪವಿಕಲ್ಪಕಲನಾತ್ಮಿಕಾ ॥ ೪೬ ॥**
**ಜಗದಭ್ಯುದಯಾರ್ಥಾಯ ವ್ಯಕ್ತಭಾವಮುಪಾಗತಾ ।**
**ಅಸಜ್ಜನವಿನಾಶಾರ್ಥಂ ಸಜ್ಜನಾಭ್ಯುದಯಾರ್ಥಿನೀ ।**
**ಪ್ರವೃತ್ತಿಸ್ತವ ಕಲ್ಯಾಣಿ ಸಾಧೂನಾಂ ರಕ್ಷಣಾಯ ಹಿ ॥ ೪೭ ॥**
**ಅಯಂ ಭಂಡಾಸುರೋ ದೇವಿ ಬಾಧತೇ ಜಗತಾಂ ತ್ರಯಂ ।**
**ತ್ವಯೈಕಯೈವ ಜೇತವ್ಯೋ ನ ಶಕ್ಯಸ್ತ್ವಪರೈಃ ಸುರೈಃ ॥ ೪೮ ॥**

---

ಧೀಶ್ವರಿಯಾದ ಶ್ರೀ ಲಲಿತಾದೇವಿಯೂ ಸಹ ತನ್ನ ಪಟ್ಟಣದ ಜನಗಳು ಮಾತ್ರವಲ್ಲದೆ ಸಮಸ್ತ ಭೂತಲವಾಸಿಗಳ ಇಷ್ಟಾರ್ಥಗಳನ್ನೂ ಸಲ್ಲಿಸುತ್ತಿರುವಳು.

೪೪-೪೫. ಹೀಗೆ, ಅಂಬಿಕೆಯೊಡಗೂಡಿದ ಕಾಮಶಂಕರನಾದರೋ ಮೂರು ಲೋಕಗಳ ದೊರೆಯಾಗಿ ರಾಜ್ಯಭಾರಮಾಡುತ್ತಿರಲು, ಹತ್ತು ಸಾವಿರ ವರ್ಷಗಳು ಹತ್ತು ಕ್ಷಣಗಳಂತೆ ಕಳೆದುಹೋದವು. ತರುವಾಯ ಒಂದಾನೊಂದು ದಿನ ಪೂಜ್ಯನಾದ ನಾರದ ಮುನಿಯು ಆ ಪರಾಶಕ್ತಿಯ ಸನ್ನಿಧಿಗೆ ಬಂದು ಆಕೆಗೆ ಕೈಮುಗಿದು ವಿನಯಾನ್ವಿತನಾಗಿ ಹೀಗೆ ಹೇಳಿದನು :

೪೬-೪೮. "ದೇವೀ ! ಪರಂಧಾಮವೂ ಪವಿತ್ರವೂ ಆದ ಪರಬ್ರಹ್ಮವು ನೀನೇ ಆಗಿರುವೆ. ಪರಮೇಶ್ವರೀ ! ಸದಸದ್ಭಾವಗಳ ಸಂಕಲ್ಪವಿಕಲ್ಪಗಳ ಕರ್ತ್ರಿಯೆನಿಸಿದವಳೂ ನೀನೇ !! ನೀನು ಜಗತ್ತಿನ ಅಭ್ಯುದಯಕ್ಕಾಗಿಯೇ ವ್ಯಕ್ತವಾಗಿರುವೆಯಲ್ಲವೇ ! ದುಷ್ಟಶಿಕ್ಷಣಕ್ಕಾಗಿಯೂ, ಶಿಷ್ಟರಕ್ಷಣಕ್ಕಾಗಿಯೂ, ಸಾಧುಸಂರಕ್ಷಣಕ್ಕಾಗಿಯೂ ಪ್ರವರ್ತಿಸುವವಳಲ್ಲವೇ ನೀನು ! ಈ ಭಂಡಾಸುರನಾದರೋ ಮೂರು ಲೋಕಗಳನ್ನೂ ಬಹಳವಾಗಿ ಬಾಧೆಗೊಳಿಸುತ್ತಿರುವನು. ನಿನ್ನೊಬ್ಬಳನ್ನು ಬಿಟ್ಟರೆ ಉಳಿದ ಯಾವ ದೇವತೆಯೂ ಇವನನ್ನು ಗೆಲ್ಲಲು ಶಕ್ಯನಲ್ಲ. ಈ ದೇವತೆಗಳಾದರೋ ನಿನ್ನ ಸೇವೆಯಲ್ಲಿಯೇ ತೊಡಗಿ ಬಹಳ ಕಾಲದಿಂದಲೂ ಇಲ್ಲಿಯೇ ನೆಲಸಿಬಿಟ್ಟದ್ದಾರೆ. ನೀನು ಅಪ್ಪಣೆ ಕೊಟ್ಟುದಾದರೆ ಇವರೆಲ್ಲರೂ, ಈಗ ಅಮುಂಗಳಕರಗಳೂ, ಶೂನ್ಯ

**ತ್ವತ್ಸೇವೈಕಪರಾ ದೇವಾಶ್ಚಿರಕಾಲಮಿಹೋಷಿತಾಃ ।**
**ತ್ವದಾಜ್ಞಯಾ ಗಮಿಷ್ಯಂತು ಸ್ವಾನಿ ಸ್ವಾನಿ ಪುರಾಣಿತು ॥**
**ಅಮಂಗಲಾನಿ ಶೂನ್ಯಾನಿ ವ್ಯುಷಾರ್ಥಾನಿ ಚ ಸರ್ವತಃ ॥ ೪೯ ॥**
**ಏವಂ ವಿಜ್ಞಾಪಿತಾ ದೇವೀ ನಾರದೇನಾಖಿಲೇಶ್ವರೀ ।**
**ಸ್ವಸ್ವವಾಸನಿವಾಸಾಯ ಪ್ರೇಷಯಾಮಾಸ ಚಾಽಮರಾನ್ ॥ ೫೦ ॥**
**ಬ್ರಹ್ಮಾಣಂ ಚ ಹರಿಂ ಶಂಭುಂ ವಾಸವಾದೀನ್ ದಿಶಾಂಪತೀನ್ ।**
**ಯಥಾರ್ಹಂ ಪೂಜಯಿತ್ವಾತು ಪ್ರೇಷಯಾಮಾಸಚಾಽಂಬಿಕಾ ॥**
**ಅಪಾರಯಂತಸ್ತಾಂ ತ್ಯಕ್ತುಮಪಿ ಸಂಪ್ರೇಷಿತಾಃ ಸುರಾಃ ।**
**ಸ್ವಸ್ವಾಂಶೈಃ ಶಿವಯೋಃ ಸೇವಾಮಾದಿಪಿತ್ರೋರಕುರ್ವತ ॥ ೫೨ ॥**
**ಏತದಾಖ್ಯಾನಮಾಯುಷ್ಯಂ ಸರ್ವಮಂಗಲಕಾರಣಂ ।**
**ಆವಿರ್ಭಾವಂ ಮಹಾದೇವ್ಯಾಸ್ತಸ್ಯಾ ರಾಜ್ಯಾಭಿಷೇಚನಂ ॥ ೫೩ ॥**
**ಯಃ ಪ್ರಾತರುತ್ಥಿತೋ ವಿದ್ವಾನ್ ಭಕ್ತಿಶ್ರದ್ಧಾಸಮನ್ವಿತಃ ।**
**ಜಪೇದ್ಧನಸಮೃದ್ಧಃ ಸ್ಯಾತ್ಸುಧಾಸಂಮಿತವಾಗ್ಭವೇತ್ ॥ ೫೪ ॥**

---

ಗಳೂ ಆಗಿದ್ದರೂ, ಮುಂದೆ ನಿನ್ನ ಅನುಗ್ರಹದಿಂದ ಸಮೃದ್ಧಗಳಾಗುವ ತಮ್ಮ ತಮ್ಮ ವಾಸಸ್ಥಾನಗಳಿಗೆ ಹೋಗುವರು.''

೫೦-೫೧. ನಾರದಮಹರ್ಷಿಯು ಈ ರೀತಿ ಅರಿಕೆಮಾಡಲು, ಅಖಿಲೇಶ್ವರಿಯಾದ ಶ್ರೀ ಲಲಿತಾಪರಮೇಶ್ವರಿಯು, ಬ್ರಹ್ಮ ವಿಷ್ಣುಗಳನ್ನೂ, ಮಹೇಂದ್ರನೇ ಮೊದಲಾದ ಅಷ್ಟದಿಕ್ಪಾಲಕರನ್ನೂ, ಸಮಸ್ತ ದೇವತೆಗಳನ್ನೂ, ಅವರವರ ಯೋಗ್ಯತೆಗೆ ತಕ್ಕಂತೆ ಮರ್ಯಾದಿಸಿ ಅವರವರ ಲೋಕಗಳಿಗೆ ಕಳುಹಿಸಿಕೊಟ್ಟಳು.

೫೨. ಹೀಗೆ ತಮ್ಮನ್ನು ಮನ್ನಿಸಿ ಕಳುಹಿಸಿಕೊಟ್ಟರೂ ಆ ದೇವಿಯ ಸೇವೆಯನ್ನು ಬಿಡಲಾರದೆ, ದೇವತೆಗಳೆಲ್ಲರೂ ತಮ್ಮ ಲೋಕಗಳಿಗೆ ತೆರಳಿದರೂ ತಮ್ಮ ತಮ್ಮ ಅಂಶಗಳನ್ನು ಮಾತ್ರ ಅಲ್ಲಿಯೇ ಇರಿಸಿ, ಆದಿಮಾತಾಪಿತೃಗಳಾದ ಆ ಶಿವದಂಪತಿಗಳ ಸೇವೆಯನ್ನು ನಡಸಿದರು.

೫೩-೫೪. ಎಲೈ ಮುನಿಯೇ! ಆಯುಷ್ಕರವೂ, ಮಂಗಳಕರವೂ ಆಗಿ, ಶ್ರೀ ಲಲಿತಾದೇವಿಯ ಆವಿರ್ಭಾವವನ್ನೂ, ಆಕೆಯ ಪಟ್ಟಾಭಿಷೇಕವನ್ನೂ ಒಳಗೊಂಡಿರುವ ಈ ಆಖ್ಯಾನವನ್ನು ಯಾವ ವಿದ್ವಾಂಸನು ಪ್ರಾತಃಕಾಲದಲ್ಲೆದ್ದು ಭಕ್ತಿಶ್ರದ್ಧೆಗಳಿಂದ ಜಪಿಸುತ್ತಾನೆಯೋ ಅವನಿಗೆ ಧನಸಮೃದ್ಧಿಯುಂಟಾಗುವುದಲ್ಲದೆ, ಅಮೃತ ವಾಕ್ಕೂ ಲಭಿಸುತ್ತದೆ.

**ನಾಶುಭಂ ವಿದ್ಯತೇ ತಸ್ಯ ಪರತ್ರೇಹ ಚ ಧೀಮತಃ ।**
**ಯಶಃ ಪ್ರಾಪ್ನೋತಿ ವಿಪುಲಂ ಸಮಾನೋತ್ತಮತಾಮಪಿ ॥ ೫೫ ॥**
**ಅಚಲಾ ಶ್ರೀರ್ಭವೇತ್ತಸ್ಯ ಶ್ರೇಯಶ್ಚೈವ ಪದೇ ಪದೇ ।**
**ಕದಾಚಿನ್ನ ಭಯಂ ತಸ್ಯ ತೇಜಸ್ವೀ ವೀರ್ಯವಾನ್ ಭವೇತ್ ॥ ೫೬ ॥**
**ತಾಪತ್ರಯವಿಹೀನಶ್ಚ ಪುರುಷಾರ್ಥೈಶ್ಚ ಪೂರ್ಯತೇ ।**
**ತ್ರಿಸಂಧ್ಯಂ ಯೋ ಜಪೇನ್ನಿತ್ಯಂ ಧ್ಯಾತ್ವಾ ಸಿಂಹಾಸನೇಶ್ವರೀಂ ॥ ೫೭ ॥**
**ಷಣ್ಮಾಸಾನ್ಮಹತೀಂ ಲಕ್ಷ್ಮೀಂ ಪ್ರಾಪ್ನುಯಾಜ್ಜಾಪಕೋತ್ತಮಃ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ**
**ಸಂವಾದೇ ಶ್ರೀ ಲಲಿತೋಪಾಖ್ಯಾನೇ**
**ದಶಮೋಽಧ್ಯಾಯಃ**

---

೫೫-೫೬. ಧೀಮಂತನಾದ ಅವನಿಗೆ ಇಹಪರಗಳಲ್ಲಿ ಅಶುಭವೆಂಬುದಿರುವುದಿಲ್ಲ. ಅವನಿಗೆ ಯಾವಾಗಲೂ ಶುಭವೇ ಲಭಿಸುತ್ತದೆ; ಅಪಾರವಾದ ಕೀರ್ತಿಯು ದೊರಕುವುದು ಮಾತ್ರವಲ್ಲದೆ, ಸಮಾನನಾದವನಿಗಿಂತಲೂ ಶ್ರೇಷ್ಠತೆಯೂ ಲಭಿಸುತ್ತದೆ; ಸ್ಥಿರವಾದ ಸಂಪತ್ತಿರುವುದು ಮಾತ್ರವಲ್ಲದೆ, ಅಡಿಗಡಿಗೂ ಶ್ರೇಯಸ್ಸೂ ಲಭಿಸುವುದು; ಎಂದಿಗೂ ಭಯವೆಂಬುದಿರುವುದಿಲ್ಲ; ಮಹಾತೇಜಸ್ವಿಯೂ, ವೀರ್ಯವಂತನೂ ಆಗುತ್ತಾನೆ.

೫೭-೫೮. ಎಲೈ ಮಹರ್ಷಿಯೇ! ಈ ಆಖ್ಯಾನವನ್ನು ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಯಾರು ಸಿಂಹಾಸನೇಶ್ವರಿಯಾದ ಶ್ರೀ ಲಲಿತಾದೇವಿಯನ್ನು ಧ್ಯಾನಿಸಿ ಜಪಿಸುವರೋ ಅವರಿಗೆ ಯಾವ ತಾಪತ್ರಯವೂ ಇರುವುದಿಲ್ಲ; ಸಕಲ ಪುರುಷಾರ್ಥಗಳೂ ಲಭಿಸುತ್ತವೆ. ಮೇಲೆ ಹೇಳಿದ ರೀತಿಯಲ್ಲಿ ಈ ಆಖ್ಯಾನವನ್ನು ಆರು ತಿಂಗಳು ಜಪಮಾಡಿದುದಾದರೆ, ಜಾಪಕೋತ್ತಮನು ಅಪಾರ ಸಂಪತ್ತನ್ನು ಪಡೆಯುತ್ತಾನೆ.

**ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ**
**ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ**
**ಹತ್ತನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥೈಕಾದಶೋಽಧ್ಯಾಯಃ

[ಭಂಡಾಸುರವಧಾಯ ಶಕ್ತಿಸೇನಾಸಹಿತಾಯಾಃ ಶ್ರೀದೇವ್ಯಾಃ ಪ್ರಸ್ಥಾನಂ]

ಕಲ್ಯಾಣೋತ್ಸವವೈಭವೇನ ಲಸತೋಃ ಕಾಮೇಶ್ವರೀಶರ್ವಯೋ-
ರ್ವಿಷ್ಣುಬ್ರಹ್ಮಮಹೇಂದ್ರದೇವಪತಿಭಿರ್ದಿವ್ಯೈಶ್ಚ ಸರ್ವರ್ಷಿಭಿಃ ।
ಭಕ್ತ್ಯಾ ಸಂಸ್ತುತಯೋರ್ದಯಾರ್ದ್ರಸುದೃಶೋಃ ಸೌಭಾಗ್ಯಪಾದಾಂಬುಜ
ಶ್ರೀರೇಣೂತ್ಕರಸಂಪದಸ್ತ್ರಿಜಗತಾಂ ಸಂತ್ವಕ್ಷಯಾಃ ಸೌಖ್ಯದಾಃ ॥

**ಅಥ ಸಾ ಜಗತಾಂ ಮಾತಾ ಲಲಿತಾ ಪರಮೇಶ್ವರೀ ।**
**ತ್ರೈಲೋಕ್ಯಕಂಟಕಂ ಭಂಡಂ ದೈತ್ಯಂ ಜೇತುಂ ವಿನಿರ್ಯಯೌ ॥೧॥**
**ಕೃತ್ವಾ ಮಾರ್ದಲಿಕಾರೂಪಂ ಸಪ್ತಾಂಭೋರಾಶಯಸ್ತಥಾ ।**
**ಪ್ರಭೂತಮರ್ದಲಧ್ವಾನೈಃ ಪೂರಯಾಮಾಸುರಂಬರಂ ॥ ೨ ॥**
**ಮೃದಂಗಾ ಮುರಜಾಶ್ಚೈವ ಪಟಹಾ ಢಕ್ಕಲಿಂಗಣಾಃ ।**
**ಶೇಲುಕಾ ಝುಲ್ಲರೀಸಂಘಾ ಹುಡುಕ್ಕಾ ಹುಡುವಾ ಘಟಾಃ ॥ ೩ ॥**
**ಆನಕಾಃ ಪಣವಾಶ್ಚೈವ ಗೋಮುಖಾಶ್ಚಾರ್ಧಚಂದ್ರಕಾಃ ।**
**ಯವಮಧ್ಯಾ ಮುಷ್ಟಿಮಧ್ಯಾ ಮಡ್ಡವೋ ಡಿಂಡಿಮಾ ಅಪಿ ॥ ೪ ॥**
**ಝರ್ಝರಾಶ್ಚರ್ಚರೀತಾಲಾ ತುಂಗ್ಯಾಲಿಂಗ್ಯಪ್ರಭೇದಕಾಃ ।**
**ಊರ್ಧ್ವಕಾಶ್ಚೈವ ತಂಪೋಟ್ಟಾ ನಿಸ್ಸಣಾ ಬರ್ಬರಾಃ ಪರೇ ॥ ೫ ॥**
**ಹುಂಕಾರಾಃ ಕಾಕತುಂಡಾಶ್ಚ ವಾದ್ಯಭೇದಾಸ್ತಥಾ ಪರೇ ।**
**ದಧ್ವನುಃ ಶಕ್ತಿಸೇನಾಭಿರಾಹತಾಃ ಸಮರೋದ್ಯಮೇ ॥ ೬ ॥**

---

### ಕನ್ನಡದ ಅನುವಾದ

[ಭಂಡಾಸುರನ ವಧೆಗಾಗಿ ಶ್ರೀದೇವಿಯು ಶಕ್ತಿಸೇನೆಗಳೊಡನೆ ಬಿಜಯಮಾಡುವುದು]

೧. ತರುವಾಯ ಜಗನ್ಮಾತೆಯಾದ ಶ್ರೀ ಲಲಿತಾಪರಮೇಶ್ವರಿಯು, ಮೂರು ಲೋಕಗಳಿಗೂ ಕಂಟಕಪ್ರಾಯನಾದ ಭಂಡಾಸುರನನ್ನು ಜಯಿಸಲು ದಂಡಯಾತ್ರೆ ಹೊರಟಳು.

೨. ಆಗ ಸಪ್ತ ಸಮುದ್ರಗಳೇ ಮದ್ದಲೆಗಳ ರೂಪವನ್ನು ತಾಳಿ, ಆ ರಣಮರ್ದಲೆಗಳ ಪ್ರಚಂಡ ಧ್ವನಿಗಳಿಂದ ಆಕಾಶವನ್ನೇ ತುಂಬಿಬಿಟ್ಟವು.

೩-೬. ಮೃದಂಗ, ಮುರಜ, ಪಟಹ, ಢಕ್ಕಾ, ರಿಂಗಣ, ಶೇಲುಕೆ, ಝುಲ್ಲರಿ, ಹುಡುಕೆ, ಹುಡುವೆ, ಘಟ, ಆನಕ, ಪಣವ, ಗೋಮುಖ,

**ಲಲಿತಾಪರಮೇಶಾನ್ಯಾ ಅಂಕುಶಾಸ್ತ್ರಾತ್ಸಮುದ್ಗತಾ ।**
**ಸಂಪತ್ಕರೀನಾಮ ದೇವೀ ಚಚಾಲ ಸಹ ಶಕ್ತಿಭಿಃ ॥ ೭ ॥**
**ಅನೇಕಕೋಟಿಮಾತಂಗತುರಂಗರಥಪತ್ತಿಭಿಃ ।**
**ಸೇವಿತಾ ತರುಣಾದಿತ್ಯಪಾಟಲಾ ಸಂಪದೀಶ್ವರೀ ॥ ೮ ॥**
**ಮತ್ತಮುದ್ದಂಡಸಂಗ್ರಾಮರಸಿಕಂ ಶೈಲಸಂನಿಭಂ ।**
**ರಣಕೋಲಾಹಲಂ ನಾಮ ಸಾರುರೋಹ ಮತಂಗಜಂ ॥ ೯ ॥**
**ತಾಮನ್ವಗಾ ಯಯೌ ಸೇನಾ ಮಹತೀ ಘೋರರಾವಿಣೀ ।**
**ಲೋಲಾಭಿಃ ಕೇತುಮಾಲಾಭಿರುಲ್ಲಿಖಂತೀ ಘನಾಘನಂ ॥ ೧೦ ॥**
**ತಸ್ಯಾಶ್ಚ ಸಂಪನ್ನಾಥಾಯಾಃ ಪೀನಸ್ತನಸುಸಂಕಟಃ ।**
**ಕಂಕಟೋ ಘನಸಂನಾಹೋ ರುರುಚೇ ವಕ್ಷಸಿ ಸ್ಥಿತಃ ॥ ೧೧ ॥**

---

ಅರ್ಧಚಂದ್ರಕ, ಯಮಮಧ್ಯ, ಮುಷ್ಟಿಮಧ್ಯ, ಮಡ್ಡು, ಡಿಂಡಿಮ, ಜರ್ಝರಿ, ಚರ್ಚರಿ, ತಾಳ, ತುಂಗಿ, ಲಿಂಗಿ, ತಮ್ಮಟ, ನಿಸ್ಸಾಣ, ಬರ್ಬರ, ಹುಂಕಾರ, ಕಾಕತುಂಡ, ಮೊದಲಾದ ವಿಧವಿಧವಾದ ವಾದ್ಯಗಳು, ಆ ಸಮರಸನ್ನಾಹಸಮಯದಲ್ಲಿ ಪರಮೇಶ್ವರಿಯ ಶಕ್ತಿಸೇನೆಗಳವರಿಂದ ನುಡಿಸಲಾದವುಗಳಾಗಿ ಭೋರ್ಗರೆದವು.

೭. ತರುವಾಯ ಪೂಜ್ಯಳಾದ ಶ್ರೀ ಲಲಿತಾಪರಮೇಶ್ವರಿಯ ಅಂಕುಶಾಸ್ತ್ರದಿಂದ ಸಂಪತ್ಕರಿಯೆಂಬ ದೇವಿಯು ಶಕ್ತಿಗಳೊಡಗೂಡಿ ಅವತರಿಸಿ ಮುಂದೆ ಹೊರಟಳು.

೮-೯. ಆಗತಾನೆ ಉದಿಸಿದ ಸೂರ್ಯನ ಕಾಂತಿಯನ್ನೊಳಕೊಂಡು ವಿರಾಜಿಸುತ್ತಿರುವ ಆ ಸಂಪತ್ಕರೀದೇವಿಯು, ಅನೇಕಕೋಟಿ ಸಂಖ್ಯಾಕಗಳಾದ ಆನೆ, ಕುದುರೆ ಪದಾತಿಗಳಿಂದ ಸಂಸೇವಿತೆಯಾಗಿ, ಉದ್ದಂಡವಾದ ಯುದ್ಧದಲ್ಲಿ ಮಹಾರಸಿಕವೆನಿಸಿ ಪರ್ವತೋಪಮವೂ, ರಣಕೋಲಾಹಲವೆಂದು ಹೆಸರಾದುದೂ ಆದ ಗಜಶ್ರೇಷ್ಠವನ್ನೇರಿದಳು.

೧೦. ಮುಗಿಲ ಸಾಲುಗಳನ್ನೇ ಸೋಕಿ ಅಲುಗಾಡುತ್ತಿರುವ ಪತಾಕೆಗಳ ಸಾಲುಗಳಿಂದ ಕೂಡಿ, ಭೋರ್ಗರೆಯುತ್ತ, ಭಯಂಕರವಾದ ರಣಕೋಲಾಹಲ ಧ್ವನಿಗಳನ್ನು ಮಾಡುತ್ತಿರುವ ಮಹತ್ತರವಾದ ಆ ಸೇನೆಯು ದೇವಿಯನ್ನನುಸರಿಸಿ ಹೊರಟಿತು.

೧೧. ಆ ಸಂಪತ್ಕರೀದೇವಿಯ ಪೀನಸ್ತನಘಟಿತವಾದ ವಕ್ಷಸ್ಥಲದಲ್ಲಿ ಬಹು ಬಿಗಿಯಾದ ಬಲವಾದ ಕವಚವು ಬೆಳುಬೆಳಗಿ ರಾರಾಜಿಸುತ್ತಿದ್ದಿತು.

**ಕಂಪಮಾನಾ ಖಡ್ಗಲತಾ ವ್ಯರುಚತ್ತತ್ಕರೇ ಧೃತಾ ।**
**ಕುಟಿಲಾ ಕಾಲನಾಥಸ್ಯ ಭ್ರುಕುಟೀವ ಭಯಂಕರಾ ॥ ೧೨ ॥**
**ಉತ್ಪಾತವಾತಸಂಪಾತಚಾಲಿತಾ ಇವ ಪರ್ವತಾಃ । [೧೩ ॥**
**ತಾಮನ್ವಗಾ ಯಯುಃ ಕೋಟಿಸಂಖ್ಯಾತಾಃ ಕುಂಜರೋತ್ತಮಾಃ ॥**
**ಅಥ ಶ್ರೀ ಲಲಿತಾದೇವ್ಯಾಃ ಶ್ರೀಪಾಶಾಯುಧಸಂಭವಾ ।**
**ಅತಿತ್ವರಿತವಿಕ್ರಾಂತಿರಶ್ವಾರೂಢಾ ಚಲತ್ಪುರಃ ॥ ೧೪ ॥**
**ತಯಾ ಸಹ ಹಯಪ್ರಾಯಂ ಸೈನ್ಯಂ ಹೇಷಾತರಂಗಿತಂ ।**
**ವ್ಯಚಲತ್ಖುರಕುದ್ದಾಲ ನಿರ್ದಾರಿತಮಹೀತಲಂ ॥ ೧೫ ॥**
**ವನಾಯುಜಾಶ್ಚ ಕಾಂಭೋಜಾ ಆರಟ್ಟಾಃ ಸಿಂಧುದೇಶಜಾಃ ।**
**ಟಂಕಣಾಃ ಪಾರ್ವತೀಯಾಶ್ಚ ಪಾರಶೀಕಾಸ್ತಥಾಪರೇ ॥ ೧೬ ॥**
**ಆಜಾನೇಯಾ ಘಟ್ಟಪುರಾ ಘರಟ್ಟಾಃ ಕಾಲವಂತಿಜಾಃ । [೧೭ ॥**
**ಬಾಹ್ಲಿಕೇಯಾ ವನೋದ್ಭೂತಾ ಗಾಂಧರ್ವಾಶ್ಚಾಪರೇ ಹಯಾಃ ॥**
**ಪ್ರಾಗ್ದೇಶಜಾಶ್ಚ ಕೈರಾತಾಃ ಪ್ರಾಂತದೇಶೋದ್ಭವಾ ಅಪಿ ।**
**ವಿನೀತಾ ಸಾಧುವೋಢಾರೋ ವೇಗಿನಃ ಸ್ಥಿರಚೇತಸಃ ॥ ೧೮ ॥**

---

೧೨. ಆಕೆಯು ತನ್ನ ಕೈಯಲ್ಲಿ ಹಿಡಿದಿರುವ ಖಡ್ಗಲತೆಯು ಕಾಲನಾಥನಾದ ಯಮನ ಡೊಂಕು ಹುಬ್ಬಿನಂತೆ ಭಯಂಕರವಾಗಿ ಕಾಣುತ್ತಿದ್ದಿತು.

೧೩. ಪ್ರಳಯಕಾಲದ ಪ್ರಚಂಡಮಾರುತಗಳಿಂದ ಅಲುಗಿ ಮುನ್ನುಗ್ಗಿ ಹೊರಟ ಪರ್ವತಗಳಂತೆ ಕೋಟಿಸಂಖ್ಯೆಯ ಗಜೋತ್ತಮಗಳು ಆ ದೇವಿಯನ್ನು ಹಿಂಬಾಲಿಸಿ ಹೊರಟವು.

೧೪. ಇದಾದ ಬಳಿಕ ಶ್ರೀ ಲಲಿತಾಪರಮೇಶ್ವರಿಯ ಪಾಶಾಯುಧ ದಿಂದುದಿಸಿದ ಅಶ್ವಾರೂಢಾದೇವಿಯು ಬಹಳ ತ್ವರಿತವಾದ ನಡೆಯಿಂದ ಆ ಸೇನೆಯ ಮುಂಗಡೆ ಹೊರಟಳು.

೧೫. ಆಕೆಯ ಹಿಂಗಡೆ ಹೇಷಾರವಗಳನ್ನು ಮಾಡುತ್ತ, ತಮ್ಮ ಗೊರಸುಗಳ ತುಳಿತದಿಂದಲೇ ಭೂತಲವನ್ನು ಸೀಳುತ್ತಲಿರುವ ಅಶ್ವ ಸೇನೆಯು ಹೊರಟಿತು.

೧೬-೧೮. ವನಾಯುಜ, ಕಾಂಭೋಜ, ಆರಟ್ಟ, ಸಿಂಧು, ಟಂಕಣ ಮೊದಲಾದ ದೇಶಗಳಲ್ಲಿ ಹುಟ್ಟಿದವುಗಳೂ, ಪರ್ವತಪ್ರಾಂತಗಳಲ್ಲಿಯೂ ಮತ್ತು ಪಾರಸೀದೇಶದಲ್ಲಿಯೂ ಹುಟ್ಟಿದವುಗಳೂ, ಅಜನ, ಘಟ್ಟ, ಘರಟ್ಟ,

**ಸ್ವಾಮಿಚಿತ್ತವಿಶೇಷಜ್ಞಾ ಮಹಾಯುದ್ಧಸಹಿಷ್ಣವಃ ।**
**ಲಕ್ಷಣೈರ್ಬಹುಭಿರ್ಯುಕ್ತಾ ಜಿತಕ್ರೋಧಾ ಜಿತಶ್ರಮಾಃ ॥ ೧೯ ॥**
**ಪಂಚಧಾರಾಸು ಶಿಕ್ಷಾಢ್ಯಾ ವಿನೀತಾರ್ಧಪುಲಾಯಿತಾಃ ।**
**ಘಾಲಶುಕ್ತಿಶ್ರಿಯಾ ಯುಕ್ತಾಃ ಶ್ವೇತಶುಕ್ತಿಸಮನ್ವಿತಾಃ ॥ ೨೦ ॥**
**ದೇವಪದ್ಮಂ ದೇವಮಣಿಂ ದೇವಸ್ವಸ್ತಿಕಮೇವ ಚ ।**
**ಅರ್ಧಸ್ವಸ್ತಿಕಶುಕ್ತಿಂ ಚ ಪುಂಸ್ವರಂ ಪುಷ್ಪದಂಡಿಕಾಂ ॥ ೨೧ ॥**
**ಏತಾನಿ ಶುಭಲಕ್ಷ್ಮಾಣಿ ಜಯರಾಜ್ಯಪ್ರದಾನಿ ಚ ।**
**ವಹಂತೋ ವಾತಜವನಾ ವಾಜಿನಸ್ತಾಂ ಸಮನ್ವಯುಃ ॥ ೨೨ ॥**

---

ಕಾಲವಂತಿ, ಬಾಹ್ಲೀಕ ಮೊದಲಾದ ಪ್ರದೇಶದವುಗಳೂ, ಅರಣ್ಯದಲ್ಲಿ ಜನಿಸಿದವುಗಳೂ, ಗಾಂಧರ್ವಗಳೂ, ಪೂರ್ವದೇಶದವುಗಳೂ, ಕಿರಾತ ಪ್ರಾಂತದವುಗಳೂ, ಗಡಿನಾಡುಗಳವುಗಳೂ ಆದ ಅಸಂಖ್ಯಾತ ಜಾತ್ಯಶ್ವಗಳು ಆ ಸೇನೆಯನ್ನಲಂಕರಿಸಿದ್ದವು. ಅವುಗಳಲ್ಲಿ ಪ್ರತಿಯೊಂದೂ ವಿನೀತಗಳಾಗಿ, ಏರಲು ಸುಲಭಸಾಧ್ಯಗಳಾಗಿದ್ದವು. ಇಷ್ಟೆಯಲ್ಲದೆ ಆ ಕುದುರೆಗಳು ಮಹಾವೇಗವುಳ್ಳವುಗಳೂ, ಸ್ತಿಮಿತವಾದ ಬುದ್ಧಿಯುಳ್ಳವುಗಳೂ ಆಗಿದ್ದುವು.

೧೯. ಮತ್ತು, ಆ ಕುದುರೆಗಳು ಒಡೆಯನ ಮನಸ್ಸಿಗೆ ತಕ್ಕಂತೆ ನಡೆಯುವವುಗಳು; ಮಹಾಭಯಂಕರವಾದ ಯುದ್ಧವನ್ನು ಸಹಿಸುವಂಥವುಗಳು; ಅನೇಕ ಶುಭಲಕ್ಷಣಗಳಿಂದ ಕೂಡಿರುವವುಗಳು; ಕೋಪ ಮತ್ತು ಶ್ರಮಗಳೇ ಇಲ್ಲದವುಗಳು;

೨೦. ಐದು ಬಗೆಯ ನಡೆಯಲ್ಲಿಯೂ ಸುಶಿಕ್ಷಿತವಾದವುಗಳು; ಅರೆ ಬುರಿಕಿಗಳಿಂದಲಂಕೃತವಾದವುಗಳು. ಹಣೆಮುತ್ತಿನ ಮತ್ತು ಬೆಳುಮುತ್ತುಗಳ ಕಾಂತಿಯಿಂದ ಬೆಳಗುತ್ತ ಆ ಜಾತ್ಯಶ್ವಗಳೆಲ್ಲವೂ ಆ ಸೈನ್ಯದಲ್ಲಿ ಶೋಭಿಸುತ್ತಿದ್ದವು.

೨೧-೨೨. ವಿಜಯವನ್ನೂ, ರಾಜ್ಯೈಶ್ವರ್ಯವನ್ನೂ ದೊರಕಿಸಿಕೊಡುವ, ದೇವಪದ್ಮ, ದೇವಮಣಿ, ದೇವಸ್ವಸ್ತಿಕ, ಅರ್ಧ ಸ್ವಸ್ತಿಕ, ಶುಕ್ತಿ, ಪುಂಸ್ವರ, ಪುಷ್ಪದಂಡಕ ಮೊದಲಾದ ಶುಭಲಕ್ಷಣ ಲಕ್ಷಿತಗಳಾಗಿಯೂ, ವಾಯುವೇಗದಂತೆ ವೇಗವುಳ್ಳವುಗಳಾಗಿಯೂ ಇರುವ ಆ ಅಶ್ವಶ್ರೇಷ್ಠಗಳೆಲ್ಲವೂ ಆ ದೇವಿಯನ್ನು ಹಿಂಬಾಲಿಸಿ ಹೊರಟವು.

**ಅಪರಾಜಿತನಾಮಾನಮತಿತೇಜಸ್ವಿನಂ ಚಲಂ ।**
**ಅತ್ಯಂತೋತ್ತುಂಗವಷ್ಮಾರ್ಣಂ ಕಲಿಕಾವಿಲಸನ್ಮುಖಂ ॥ ೨೩ ॥**
**ಪಾರ್ಶ್ವದ್ವಯೇಽಪಿ ಪತಿತಸ್ಫುರತ್ಕೇಸರಮಂಡಲಂ ।**
**ಸ್ಥೂಲವಾಲಧಿವಿಕ್ಷೇಪಕ್ಷಿಪ್ಯಮಾಣಪಯೋಧರಂ ॥ ೨೪ ॥**
**ಜಂಘಾಕಾಂಡಸಮುನ್ನದ್ಧಮಣಿಕಿಂಕಿಣಿಭಾಸುರಂ ।**
**ವಾದಯಂತಮಿವೋಚ್ಚಂಡೈಃ ಖುರನಿಷ್ಠುರಕುಟ್ಟನೈಃ ॥ ೨೫ ॥**
**ಭೂಮಂಡಲಮಹಾವಾದ್ಯಂ ವಿಜಯಸ್ಯ ಸಮೃದ್ಧಯೇ ।**
**ಹೇಷಮಾಣಂ ಪ್ರತಿಮುಹುಃ ಸಂದರ್ಶಿತಗತಿಕ್ರಮಂ ॥ ೨೬ ॥**
**ಆಲೋಲಚಾಮರವ್ಯಾಜಾದ್ವಹಂತಂ ಪಕ್ಷತೀ ಇವ ।**
**ಭಾಂಡೈರ್ಮನೋಹರೈರ್ಯುಕ್ತಂ ಘುರ್ಘುರೀಜಾಲಮಂಡಿತಂ ॥೨೭॥**
**ಹೇಷಾಘೋಷಸ್ಯ ಕಪಟಾದ್ಧುಂಕುರ್ವಾಣಮಿವಾಸುರಾನ್ ।**
**ಅಶ್ವಾರೂಢಾ ಮಹಾದೇವಿ ಸಮಾರೂಢಾ ಹಯಂ ಯಯೌ ॥೨೮॥**

---

೨೩-೨೮. ಅಧಿಕಾಧಿಕವಾದ ತೇಜಸ್ಸಿನಿಂದ ಮೆರೆದು ಮುನ್ನಡೆಯುತ್ತಿರುವುದೂ, ಬಹಳವಾದ ನೊರೆಯನ್ನುಗುಳುತ್ತಿರುವ ಮುಖವುಳ್ಳದೂ ಆಗಿರುವ ಅಪರಾಜಿತವೆಂಬ ಅಶ್ವವನ್ನೇರಿ ಆ ಮಹಾದೇವಿಯು ಹೊರಟಳು. ಆ ಜಾತ್ಯಶ್ವವು, ಎರಡೂ ಕಡೆಗಳಲ್ಲಿ ಜೋಲಾಡಿ ಹೊಳೆಯುತ್ತಿರುವ ಕೇಶರಾಶಿಗಳುಳ್ಳದೂ ದಪ್ಪವಾದ ಬಾಲವನ್ನು ಅತ್ತಿತ್ತ ಬೀಸುವುದರಿಂದಲೇ ಗಗನಾಂಗಣದಲ್ಲಿನ ಮುಗಿಲ ಸಾಲುಗಳನ್ನು ಚದುರಿಸುತ್ತಿರುವುದೂ, ಕಾಲುಗಳಲ್ಲಿ ಕಟ್ಟಿದ ಮಣಿಕಿಂಕಿಣಿಗಳ ಕಾಂತಿಯಿಂದ ಕೂಡಿ, ಗೊರಸುಗಳ ತುಳಿತದಿಂದಲೇ ಪ್ರಚಂಡವಾದ ಧ್ವನಿಯನ್ನು ಮಾಡುತ್ತಿರುವುದೂ, ವಿಜಯದ ಸಮೃದ್ಧಿಗಾಗಿಯೋ ಎಂಬಂತೆ, ಅಡಿಗಡಿಗೂ ಭೂಮಂಡಲದಲ್ಲಿಯೇ ಇದು ಮಹಾವಾದ್ಯವೆಂಬ ಭ್ರಾಂತಿಯನ್ನುಂಟುಮಾಡುವ ಹೇಷಾರವದಿಂದ ಶೋಭಿಸುತ್ತ, ಅಡಿಗಡಿಗೂ ತನ್ನ ನಡೆಯ ಅದೊಂದು ಚಮತ್ಕೃತಿಯನ್ನು ತೋರುತ್ತಿರುವುದೂ, ಅತ್ತಿತ್ತ ಬೀಸಲಾಗುತ್ತಿದ್ದ ಚಾಮರಗಳ ವ್ಯಾಜದಿಂದ ಎರಡು ರೆಕ್ಕೆಗಳನ್ನು ಹೊತ್ತಿರುವುದೋ ಎಂಬಂತೆ ತೋರುತ್ತಿರುವುದೂ, ಮನೋಹರವಾದ ಭೂಷಣಗಳಿಂದ ಭೂಷಿತವಾಗಿ, ಕಾಲಂದುಗೆಗಳಿಂದ ಕೂಡಿ, ಅವುಗಳ ಧ್ವನಿಯಿಂದಲೇ ಅಸುರರೆಲ್ಲರನ್ನೂ ಹುಂಕರಿಸುವಂತಿರುವುದೂ ಆಗಿದ್ದಿತು. ಆ ಅಶ್ವಾರೂಢಾದೇವಿಯು ಇಂತಹ ಉತ್ತಮೋತ್ತಮವಾದ

**ಚತುರ್ಭಿರ್ಬಾಹುಭಿಃ ಪಾಶಮಂಕುಶಂ ವೇತ್ರಮೇವ ಚ ।**
**ಹಯವಲ್ಗಾಂ ಚ ದಧತೀ ಬಹುವಿಕ್ರಮಶಾಲಿನೀ ॥ ೨೯ ॥**
**ತರುಣಾದಿತ್ಯಸಂಕಾಶಾ ಜ್ವಲತ್ಕಾಂತಿತರಂಗಿಣೀ ।**
**ಸಂಚಚಾಲ ಹಯಾರೂಢಾ ನರ್ತಯಂತೀವ ವಾಜಿನಂ ॥ ೩೦ ॥**
**ಅಥ ಶ್ರೀದಂಡನಾಥಾಯಾ ನಿರ್ಯಾಣಪಟಹಧ್ವನಿಃ ।**
**ಉದ್ದಂಡ ಸಿಂಧುನಿರ್ಧ್ವಾನಶ್ಚಕಾರ ಬಧಿರಂ ಜಗತ್ ॥ ೩೧ ॥**
**ವಜ್ರಬಾಣೈಃ ಕಠೋರೈಶ್ಚ ಭಿಂದಂತ್ಯಃ ಕಕುಭೋ ದಶ ।**
**ಅತ್ಯುದ್ದಂಡಭುಜೋಷ್ಮಾಣಃ ಶಕ್ತಯಃ ಕಾಶ್ಚಿದುತ್ಥಿತಾಃ ॥ ೩೨ ॥**
**ಕಾಶ್ಚಿಚ್ಛ್ರೀದಂಡನಾಥಾಯಾಃ ಸೇನಾನಾಸೀರಸಂಗತಾಃ ।**
**ಖಡ್ಗಂ ಫಲಕಮಾದಾಯ ಪುಪ್ಲುವುಶ್ಚಂಡಶಕ್ತಯಃ ॥ ೩೩ ॥**

---

ಅಪರಾಜಿತವೆಂಬ ಅಶ್ವವನ್ನೇರಿ ಭಂಡಾಸುರನನ್ನು ಜಯಿಸಲೋಸುಗ ಹೊರಟಳು.

೨೯-೩೦. ತರುವಾಯ ನಾಲ್ಕು ಕೈಗಳಲ್ಲಿಯೂ ಪಾಶ, ಅಂಕುಶ, ಬೆತ್ತ, ಲಗಾಮು ಮುಂತಾದವುಗಳನ್ನು ಹಿಡಿದು, ಬಾಲಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವಳಾಗಿ, ಪ್ರಜ್ವಲಿಸುತ್ತಿರುವ ಆ ತನ್ನ ಕಾಂತಿಯ ತರಂಗಗಳಿಂದ ಎಲ್ಲೆಡೆಗಳನ್ನೂ ಬೆಳಗಿಸುತ್ತ, ಮಹಾಪರಾಕ್ರಮ ಶಾಲಿನಿಯಾಗಿ ಶೋಭಿಸುತ್ತಿರುವ ಆ ದೇವಿಯು ಹಯಾರೂಢೆಯಾಗಿ ಆ ಹಯವನ್ನೇ ಕುಣಿಕುಣಿಸುತ್ತಿರುವಳೋ ಎಂಬಂತೆ ತೋರುತ್ತ ಮುಂದುವರಿದಳು.

೩೧. ಇದಾದ ಬಳಿಕ ಶ್ರೀದಂಡನಾಥಾದೇವಿಯು ದಂಡಯಾತ್ರೆ ಗನುವಾಗಿ ಹೊರಟಳು. ಆ ಸಮಯದಲ್ಲಿ ಮೊಳಗಿದ ಪಟಹಧ್ವನಿಯು ಉದ್ದಂಡವಾದ ಮಹಾಸಾಗರಗಳ ಧ್ವನಿಯನ್ನನುಕರಿಸಿ ಜಗತ್ತೆಲ್ಲವನ್ನೂ ಕಿವುಡುಗೊಳಿಸಿತು.

೩೨. ಆಗಲಾ ದೇವಿಯ ಅತಿಪ್ರಚಂಡವಾದ ಭುಜದಂಡಗಳ ಜ್ವಾಲೆಗಳಿಂದ ಕೆಲಮಂದಿ ಶಕ್ತಿದೇವಿಯರುದ್ಭವಿಸಿ, ಮಹಾಕಠೋರವಾದ ವಜ್ರಬಾಣಗಳಿಂದ ದಶದಿಶೆಗಳನ್ನೇ ಭೇದಿಸುತ್ತ ಮುಂದೆ ಹೊರಟರು.

೩೩. ತರುವಾಯ ಮತ್ತೆ ಕೆಲವು ಚಂಡಶಕ್ತಿಗಳುದಿಸಿ ಆ ದಂಡ ನಾಥಾದೇವಿಯ ಮಹಾಸೇನೆಯ ಇಕ್ಕೆಲಗಳಲ್ಲಿಯೂ ಕತ್ತಿಗುರಾಣಿಗಳನ್ನು ಹಿಡಿದು ಹಾರಿ ಹೊರಟರು.

**ಅತ್ಯಂತಸೈನ್ಯಸಂಬಾಧಂ ವೇತ್ರಸಂತಾಡನಾಽಶತ್ಯೈಃ ।**
**ನಿವಾರಯಂತ್ಯೋ ವೇತ್ರಿಣ್ಯೋ ವ್ಯಚಲನ್ ಶಕ್ತಯಃ ಶತಂ॥ ೩೪ ॥**
**ಅಥ ತುಂಗಧ್ವಜಶ್ರೇಣೀರ್ಮಹಿಷಾಂಕಾ ಮೃಗಾಂಕಿತಾಃ ।**
**ಸಿಂಹಾಂಕಾಶ್ಚೈವ ಬಿಭ್ರಾಣಾಃ ಶಕ್ತಯೋ ವ್ಯಚಲನ್ ಪುನಃ ॥ ೩೫ ॥**

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಏಕಾದಶೋಽಧ್ಯಾಯಃ

---

೩೪. ನೂರಾರು ಮಂದಿ ಶಕ್ತಿದೇವಿಯರು ನೂರಾರು ಬಾರಿ ಬೆತ್ತದ ಹೊಡೆತಗಳಿಂದ ಕಿಕ್ಕಿರಿದು ಅತ್ತಿತ್ತ ಸ್ವೇಚ್ಛೆಯಾಗಿ ನುಗ್ಗಿಬರುತ್ತಿದ್ದ ಸೇನೆಗಳನ್ನೆಲ್ಲ ನಿವಾರಿಸುತ್ತ ಹೊರಟರು.

೩೫. ಇದಾದಮೇಲೆ ಮತ್ತೆ ಕೆಲಮಂದಿ ಶಕ್ತಿದೇವತೆಗಳು, ಎಮ್ಮೆ, ಜಿಂಕೆ, ಸಿಂಹ ಮುಂತಾದ ವಿವಿಧ ಪ್ರಾಣಿಗಳ ಗುರುತುಗಳುಳ್ಳ ಎತ್ತರವಾದ ಧ್ವಜಗಳನ್ನು ಧರಿಸಿ ಶೋಭಿಸುತ್ತ ಹೊರಟರು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾದಶೋಽಧ್ಯಾಯಃ

[ಶ್ರೀ ದಂಡನಾಥಾಯಾ ರಣಪ್ರಯಾಣಸಮಯೇ, ಅಸಂಖ್ಯಾಕಪೋತ್ರಿಣೀನಾಂ, ಮೂರ್ತಿಮತಾ ಧನುರ್ವೇದೇನ ಯಂತ್ರನಾಯಿಕಾಯಾಃ ಸಂಗೀತನಾಯಿಕಾಯಾಸ್ತತ್ಪರಿಚಾರಿಕಾನಾಂಚ ಪ್ರಸ್ಥಾನಂ]

ಯದ್ಭಾಂಡಾಸುರಸೈನ್ಯಸಂಘವಿಲಯಂ ಪ್ರತ್ಯುದ್ಯಮಃ ಶ್ರೀಪರಾ
ಶಕ್ತೇರದ್ಭುತಶಕ್ತಿಸೈನ್ಯಸುಲಭಃ ಪ್ರತ್ಯರ್ಥಿಸಂತಾಪಕಃ ।
ತತ್ತ್ವಾಂ ಸರ್ವಸುರೇಶ್ವರೈರ್ನುತಪದಾಂ ಶ್ರೀಕಾಮರಾಜೇಶ್ವರೀಂ
ಧ್ಯಾಯೇಽಮ್ಬಾಂ ಪ್ರಣತಃ ಪರಾತ್ಪರತರಾಂ ಶ್ರೀ ಸುಂದರೇಶಪ್ರಿಯಾಂ ॥

**ತದನು ಶ್ರೀದಂಡನಾಥಾ ಶ್ವೇತಚ್ಛತ್ರಕದಂಬಕೈಃ ।**
**ಸ್ಫುರತ್ಕರಾಃ ಪ್ರಚಲಿತಾಃ ಶಕ್ತಯಃ ಕಾಶ್ಚಿದುತ್ಥಿತಾಃ ॥ ೧ ॥**
**ದಂಡನಾಥಾವಿನಿರ್ಯಾಣೇ ಸಂಖ್ಯಾತೀತೈಃ ಸಿತಪ್ರಭೈಃ ।**
**ಛತ್ರೈರ್ಗಗನಮಾರೇಜೇ ನಿಃಸಂಖ್ಯಶಶಿಮಂಡಲಂ ॥ ೨ ॥**
**ಅನ್ಯೋನ್ಯಸಕ್ತೈರ್ಧವಲಚ್ಛತ್ರೈರಂತರ್ಘನೀಭವತ್ ।**
**ತಿಮಿರಂ ನುನುದೇ ಭೂಯಸ್ತತ್ಕಾಂಡಮಣಿರೋಚಿಷಾ ॥ ೩ ॥**

---

### ಕನ್ನಡದ ಅನುವಾದ

[ಶ್ರೀದಂಡನಾಥಾದೇವಿಯು ಪ್ರಯಾಣಸಮಯದಲ್ಲಿ ಅಸಂಖ್ಯಾಕರಾದ ಪೋತ್ರಮುಖೀದೇವಿಯರೂ, ಮೂರ್ತಿವೆತ್ತ ಧನುರ್ವೇದದೊಡನೆ ಯಂತ್ರನಾಯಿಕೆಯೂ, ಸಂಗೀತಯೋಗಿನಿಯೂ, ಆಕೆಯ ಪರಿಚಾರಿಕೆಯರೂ ರಣರಂಗಕ್ಕೆ ಪ್ರಯಾಣ ಮಾಡಿದುದು]

೧-೩. ಶ್ರೀ ದಂಡನಾಥಾದೇವಿಯು ಈ ಪ್ರಕಾರ ದಂಡಯಾತ್ರೆಗೆ ಹೊರಟತರುವಾಯ, ಶ್ರೀದಂಡನಾಥಾದೇವಿಯ ಬೆಳುಗೊಡೆಗಳ ಗುಂಪಿನಿಂದ ಕೆಲವರು ಶಕ್ತಿದೇವಿಯರು ಉದ್ಭವಿಸಿ, ಹೊಳೆವ ಕೈಗಳುಳ್ಳವರಾಗಿ ಮುಂದೆ ಹೊರಟರು. ಆ ಶುಭಸಮಯದಲ್ಲಿ, ಬೆಳ್ಳನೆ ಬೆಳಗುತ್ತಿರುವ ಲೆಕ್ಕವಿಲ್ಲದಷ್ಟು ಬೆಳುಗೊಡೆಗಳು ಗಗನಾಂಗಣದಲ್ಲಿಯ ಚಂದ್ರಮಂಡಲಗಳೋ ಎಂಬಂತೆ ವಿರಾಜಿಸುತ್ತಿದ್ದವು. ಒಂದಕ್ಕೊಂದು ಸೇರಿ ಇಕ್ಕಟ್ಟಾಗಿದ್ದ ಆ ಬೆಳುಗೊಡೆಗಳ ಕಾಂಡಗಳಲ್ಲಿ ಕೆತ್ತಿದ್ದ ವಿವಿಧಮಣಿಗಳ ಕಾಂತಿಗಳಿಂದ ಅಲ್ಲಲ್ಲಿ ಅಡಗಿದ್ದ ಕತ್ತಲೆಯೆಲ್ಲವೂ ಕಳೆದು ಪ್ರಕಾಶಮಾನವಾಗುತ್ತಿದ್ದಿತು.

ವಜ್ರಪ್ರಭಾಯುಧಗಣಚ್ಛಾಯಾಪೂರಿತದಿಙ್ಮುಖಾಃ ।
ತಾಲವೃಂತಾಃ ಶತವಿಧಾಃ ಕ್ರೋಡಮುಖ್ಯೋ ಬಲೇಽಚಲನ್ ॥೪॥
ಚಂಡೋಚ್ಚಂಡಾದಯಸ್ತೀವ್ರಾ ಭೈರವಾಃ ಶೂಲಪಾಣಯಃ ।
ಜ್ವಲತ್ಕೇಶಪಿಶಂಗಾಭಾಸ್ತಟದ್ಭಾಸುರದಿಙ್ಮುಖಾಃ ॥ ೫ ॥
ದಹಂತ ಇವ ದೈತ್ಯೌಘಾಂಸ್ತೀಕ್ಷ್ಣೈಸ್ತೀಕ್ಷ್ಣಾಕ್ಷಿವಹ್ನಿಭಿಃ ।
ಪ್ರಚೇಲುರ್ದಂಡನಾಥಾಯಾಃ ಸೇನಾನಾಸೀರಧಾವಿನಃ ॥ ೬ ॥
ಅಥ ಪೋತ್ರಮುಖೀ ದೇವೀ ಸಮಾನಾಕೃತಿಭೂಷಣಾಃ ।
ತತ್ಸಮಾನಾಯುಧಕರಾಸ್ತತ್ಸಮಾನಸ್ವವಾಹನಾಃ ॥ ೭ ॥
ತೀಕ್ಷ್ಣದಂಷ್ಟ್ರಾ ವಿನಿಷ್ಠ್ಯೂತವಹ್ನಿಧೂಮಾಯಿತಾಂಬರಾಃ ।
ತಮಾಲಶ್ಯಾಮಲಾಕಾರಾಃ ಕಪಿಲಕ್ರೂರಲೋಚನಾಃ ।
ಸಹಸ್ರಮಹಿಷಾರೂಢಾಃ ಪ್ರಚೇಲುಃ ಸೂಕರಾನನಾಃ ॥ ೮ ॥

---

೪. ವಜ್ರಪ್ರಭೆಯನ್ನೊಳಕೊಂಡು ರಾರಾಜಿಸುತ್ತಿರುವ ತಮ್ಮ ಆಯುಧಗಳ ಕಾಂತಿಯಿಂದ ದಿಗಂತಗಳನ್ನು ತುಂಬುತ್ತ ನೂರಾರು ಬೀಸಣಿಗೆಗಳನ್ನು ಹಿಡಿದು, ಪೋತ್ರಮುಖಿಯರಾದ ಶಕ್ತಿದೇವಿಯರು ಆ ಸೈನ್ಯದಲ್ಲಿ ಹೊರಟುಬರುತ್ತಿದ್ದರು.

೫-೬. ಚಂಡ ಉಚ್ಚಂಡರೇ ಮೊದಲಾದ ಪ್ರಚಂಡಭೈರವರು ಕೈಗಳಲ್ಲಿ ಶೂಲಗಳನ್ನು ಹಿಡಿದು, ಪ್ರಜ್ವಲಿಸುತ್ತಿರುವ ಕೆಂಗೂದಲುಗಳಿಂದ ಬೆಳಗಿ, ದಿಗಂತಗಳೆಲ್ಲವನ್ನೂ ತಮ್ಮ ಕಾಂತಿಯೆಂಬ ಮಿಂಚುಗಳಿಂದಲೇ ಬೆಳಗಿಸುತ್ತ, ಅತ್ಯುಗ್ರವಾದ ತಮ್ಮ ಕಣ್ಣ ಕಿಡಿಗಳಿಂದ ದೈತ್ಯಸಮೂಹವನ್ನು ಸುಡುವರೋ ಎಂಬಂತೆ ತೋರುತ್ತ ಆ ದೇವಿಯ ಸೈನ್ಯಗಳ ಇಕ್ಕೆಲಗಳಲ್ಲಿಯೂ ಬಹುವೇಗವಾಗಿ ಬರುತ್ತಿದ್ದರು.

೭-೮. ಆಮೇಲೆ, ಸಮಾನವಾದ ಆಕಾರಗಳೂ, ಅಲಂಕಾರಗಳೂ ಉಳ್ಳವರಾಗಿ, ಆ ಆಕಾರಗಳಿಗೂ ಅಲಂಕಾರಗಳಿಗೂ ಅನುಗುಣವಾದ ಆಯುಧಗಳಿಂದ ಶೋಭಿಸುತ್ತಿರುವ ಕರಕಮಲಗಳುಳ್ಳವರೂ, ಸಮಾನವಾದ ವಾಹನಗಳುಳ್ಳವರೂ, ಮೊನಚಾದ ಕೋರೆದಾಡೆಗಳುಳ್ಳವರೂ, ಧಗಧಗನುರಿಯುತ್ತಿರುವ ಬೆಂಕಿ ಹೊಗೆಗಳ ಬಣ್ಣದ ಸೀರೆಗಳನ್ನುಟ್ಟವರೂ, ತಮಾಲವೃಕ್ಷಗಳಂತೆ ಶ್ಯಾಮಲವರ್ಣವುಳ್ಳವರೂ, ಕಠ್ರುಗೂ ಕ್ರೂರವಾಗಿಯೂ ಇರುವ ಕಣ್ಣುಗಳುಳ್ಳವರೂ, ಸಾವಿರಾರು ಕೋಣಗಳನ್ನೇರಿರುವವರೂ ಆದ ಹಂದಿಮೊಗದ ಶಕ್ತಿದೇವಿಯರು ಹೊರಟರು.

**ಅಥ ಶ್ರೀ ದಂಡನಾಥಾ ಚ ಕಿರಿಚಕ್ರರಥೋತ್ತಮಾತ್ ।**
**ಅವರುಹ್ಯ ಮಹಾಸಿಂಹಮಾರುರೋಹ ಸ್ವವಾಹನಂ ॥ ೯ ॥**
**ವಜ್ರಘೋಷಮಿತಿ ಖ್ಯಾತಂ ಧುತಕೇಸರಮಂಡಲಂ ।**
**ವ್ಯಾತ್ತಾಸ್ಯಂ ವಿಕಟಾಕಾರಂ ವಿಶಂಕಟವಿಲೋಚನಂ ।**
**ದಂಷ್ಟ್ರಾಕಟಕಟಾಕಾರಬಧಿರೀಕೃತದಿಙ್ಮುಖಂ ॥ ೧೦ ॥**
**ಆದಿಕೂರ್ಮಕಠೋರಾಸ್ಥಿ ಕೂರ್ಪರ ಪ್ರತಿಮೈರ್ನಖೈಃ ।**
**ಕ್ಷಿಪಂತಮಿವ ಭೂಚಕ್ರಮಾಪಾತಾಲನಿಮಜ್ಜಿಭಿಃ ॥ ೧೧ ॥**
**ಯೋಜನತ್ರಯಮುತ್ತುಂಗಂ ವೇಗಾದುದ್ಧತವಾಲಧಿಂ ।**
**ಸಿಂಹವಾಹನಮಾರುಹ್ಯ ವ್ಯಚಲದ್ದಂಡನಾಯಿಕಾ ॥ ೧೨ ॥**
**ತಸ್ಯಾಮಸುರಸಂಹಾರ ಪ್ರವೃತ್ತಾಯಾಂ ಜ್ವಲತ್ಕ್ರುಧಿ ।**
**ಉದ್ವೇಗಂ ಬಹುಲಂ ಪ್ರಾಪ ತ್ರೈಲೋಕ್ಯಂ ಸಚರಾಚರಂ ॥ ೧೩ ॥**

---

೯. ಬಳಿಕ ಶ್ರೀದಂಡನಾಥಾದೇವಿಯು ಉತ್ತಮೋತ್ತಮವಾದ ತನ್ನ ಕಿರಿಚಕ್ರ ರಥದಿಂದಿಳಿದು, ಸ್ವವಾಹನವಾದ ವಜ್ರಘೋಷವೆಂಬ ಹೆಸರಿನ ಮಹಾಸಿಂಹವನ್ನೇರಿ ಕುಳಿತಳು.

೧೦. ಆ ವಜ್ರಘೋಷವೆಂಬ ಸಿಂಹವಾದರೋ ಬಹು ಭಯಂಕರ ವಾದುದು; ಕೆದರಿದ ಕೇಸರಮಂಡಲ; ಅಗಲವಾಗಿ ತೆರೆದ ಬಾಯಿ; ವಿಕಟವಾದ ಆಕಾರ; ಇಕ್ಕಟ್ಟಾದ ಕಣ್ಣುಗಳು. ಹೀಗೆ ಬಹು ಭಯಂಕರ ವಾಗಿದ್ದ ಆ ಸಿಂಹವು ಕಟಕಟನೆ ಹಲ್ಲುಗಳನ್ನು ಕಡಿಯುವುದರಿಂದಲೇ ದಿಗಂತಗಳೆಲ್ಲವನ್ನೂ ಕಿವುಡುಗೊಳಿಸುತ್ತಿದ್ದಿತು.

೧೧. ಆ ಮಹಾಸಿಂಹವು ಆದಿಕೂರ್ಮನ ಕಠೋರವಾದ ಕೋರೆ ದಾಡೆಗಳಂತೆ ಬಹುಮೊನಚಾಗಿ, ಪಾತಾಲದವರೆಗಿನ ಭೂಮಂಡಲವನ್ನು ಹೊಗುವ ಉಗುರುಗಳುಳ್ಳ ತನ್ನ ಪಂಜಗಳನ್ನೆತ್ತಿ ಅಪ್ಪಳಿಸಿ ಹೊಡೆಯುತ್ತ ಬಹು ಭಯಂಕರವಾಗಿ ತೋರುತ್ತಿದ್ದಿತು.

೧೨. ಅದರ ಬಾಲವು ಮೂರು ಯೋಜನಗಳಷ್ಟು ಉದ್ದ ವಾಗಿದ್ದಿತು. ಅದು ಆ ತನ್ನ ಬಾಲವನ್ನು ರಭಸವಾಗಿ ಅಪ್ಪಳಿಸಿ ಹೊಡೆ ಯುತಲಿದ್ದಿತು. ಇಂತಹ ಅದ್ಭುತ ಸಿಂಹವಾಹನವನ್ನೇರಿ ಶ್ರೀದಂಡ ನಾಥಾದೇವಿಯು ಹೊರಟಳು.

೧೩. ಆ ದೇವಿಯು ಅಸುರರ ಸಂಹಾರಕ್ಕೆ ಸಿದ್ಧಳಾಗಿ ಕ್ರೋಧ ದಿಂದ ಮುನ್ನುಗ್ಗುತ್ತಿರಲು ಚರಚರಾತ್ಮಕವಾದ ಜಗತ್ತ್ರಯವೂ ಬಹಳ ವಾಗಿ ತಳಮಳಿಸಿಹೋಯಿತು.

**ಕಿಮಸೌ ಧಕ್ಷ್ಯತಿ ರುಷಾ ವಿಶ್ವಮದ್ಯೈವ ಪೋತ್ರಿಣೀ ।**
**ಕಿಂ ವಾ ಮುಸಲಘಾತೇನ ಭೂಮಿಂ ದ್ವೇಧಾ ಕರಿಷ್ಯತಿ ॥**
**ಅಥವಾ ಹಲನಿರ್ಘಾತೈಃ ಕ್ಷೋಭಯಿಷ್ಯತಿ ವಾರಿಧೀನ್ ॥ ೧೪ ॥**
**ಇತಿ ತ್ರಸ್ತಮನಾಃ ಸರ್ವೋ ಗಗನೇ ನಾಕಿನಾಂ ಗಣಃ ।**
**ದೂರದ್ರುತವಿಮಾನಾಶ್ಚ ಸಂತ್ರಾಸಾತ್ತಾಮುದೈಕ್ಷತ ॥ ೧೫ ॥**
**ವವಂದಿರೇ ಚ ತೇ ದೇವಾ ಬದ್ಧಾಂಜಲಿಪುಟಾಂಚಿತಾಃ ।**
**ಮುಹುರ್ದ್ವಾದಶನಾಮಾನಿ ಕೀರ್ತಯಂತೋ ನಭಸ್ಸ್ಥಲೇ॥ ೧೬ ॥**

**ಅಗಸ್ತ್ಯ ಉವಾಚ :—**

**ಕಾನಿ ದ್ವಾದಶನಾಮಾನಿ ತಸ್ಯಾ ದೇವ್ಯಾ ವದ ಪ್ರಭೋ ।**
**ಅಶ್ವಾನನ ಮಹಾಪ್ರಾಜ್ಞ ಯೇಷು ಮೇ ಕೌತುಕಂ ಮಹತ್ ॥೧೭॥**

**ಹಯಗ್ರೀವ :—**

**ಶೃಣು ದ್ವಾದಶನಾಮಾನಿ ತಸ್ಯಾ ದೇವ್ಯಾ ಘಟೋದ್ಭವ ।**
**ಯೇಷಾಮಾಕರ್ಣನಾಮಾತ್ರಾತ್ಪ್ರಸನ್ನಾ ಸಾ ಭವಿಷ್ಯತಿ ॥ ೧೮ ॥**

---

೧೪-೧೬. "ಅಕಟಾ! ಈ ಪೋತ್ರಿಣೀದೇವಿಯು ಈಗಲೇ ರೋಷಾಗ್ನಿಯಿಂದ ಪ್ರಪಂಚವನ್ನೇ ಸುಡುವಳೋ! ಮುಸಲಾಯುಧದಿಂದ ಈ ಭೂಮಂಡಲವನ್ನೇ ಇಬ್ಭಾಗವಾಗಿ ಸಿಗಿದುಬಿಡುವಳೋ! ಅಥವಾ ಹಲಾಯುಧದ ಹೊಡೆತದಿಂದ ಸಪ್ತ ಸಾಗರಗಳನ್ನೂ ಕಲಕಿಬಿಡುವಳೋ! ಏನೊಂದೂ ತಿಳಿಯದಾಗಿದೆಯಲ್ಲ!" ಎಂದು ಹೆದರಿ ಮನಗುಂದಿ ದೇವತೆಗಳೆಲ್ಲರೂ ಗಗನಾಂಗಣದಲ್ಲಿ ತಮ್ಮ ವಿಮಾನಗಳನ್ನು ಬಹುದೂರದಲ್ಲಿ ನಿಲ್ಲಿಸಿಕೊಂಡು ಗಡಗಡನೆ ನಡುಗುತ್ತ ಆ ದೇವಿಯನ್ನು ನಿಟ್ಟುಗಣ್ಣುಗಳಿಂದ ನೋಡುತ್ತಿದ್ದರು. ಆ ಸಮಯದಲ್ಲಿ, ಅವರೆಲ್ಲರೂ ಗಗನದಲ್ಲಿಯೇ ಬದ್ಧಾಂಜಲಿಪುಟರಾಗಿ ನಿಂತು ಅಡಿಗಡಿಗೂ ಆ ದೇವಿಯ ಹನ್ನೆರಡು ನಾಮಗಳನ್ನು ಹೇಳಿಕೊಂಡು ಸ್ತುತಿಸಿ ನಮಸ್ಕರಿಸುತ್ತಿದ್ದರು.

೧೭. ಅಗಸ್ತ್ಯಮುನಿಯು ಕೇಳುತ್ತಾನೆ:—"ಪ್ರಭುವೇ! ಮಹಾಪ್ರಾಜ್ಞನಾದ ಅಶ್ವಾನನಾ!! ದೇವತೆಗಳು ಹೇಳಿಕೊಂಡು ದೇವಿಯನ್ನು ಸ್ತುತಿಸಿದ ಆ ಹನ್ನೆರಡು ನಾಮಗಳಾವುವು? ಅವುಗಳನ್ನು ಕೇಳಲು ಕುತೂಹಲವುಳ್ಳವನಾಗಿರುವ ನನಗೆ ಅಪ್ಪಣೆಕೊಡಿಸಬೇಕು."

೧೮. ಹಯಗ್ರೀವನು ಹೇಳುತ್ತಾನೆ:—"ಅಯ್ಯಾ, ಘಟೋದ್ಭವನೇ! ಆ ದಂಡನಾಥಾದೇವಿಯ ದ್ವಾದಶನಾಮಗಳನ್ನು ಆಲಿಸು. ಅವುಗಳನ್ನು ಕೇಳಿದ ಮಾತ್ರದಿಂದಲೇ ಆಕೆಯು ಪ್ರಸನ್ನಳಾಗುತ್ತಾಳೆ.

**ಪಂಚಮೀ ದಂಡನಾಥಾ ಚ ಸಂಕೇತಾ ಸಮಯೇಶ್ವರೀ ।**
**ತಥಾ ಸಮಯಸಂಕೇತಾ ವಾರಾಹೀ ಪೋತ್ರಿಣೀ ಶಿವಾ ॥ ೧೯ ॥**
**ವಾರ್ತಾಲೀ ಚ ಮಹಾಸೇನಾಽಪ್ಯಾಜ್ಞಾಚಕ್ರೇಶ್ವರೀ ತಥಾ ।**
**ಅರಿಘ್ನೀ ಚೇತಿ ಸಂಪ್ರೋಕ್ತಂ ನಾಮದ್ವಾದಶಕಂ ಮುನೇ ॥ ೨೦ ॥**
**ನಾಮದ್ವಾದಶಧಾಭಿಖ್ಯವಜ್ರಪಂಜರಮಧ್ಯಗಃ ।**
**ಸಂಕಟೇ ದುಃಖಮಾಪ್ನೋತಿ ನ ಕದಾಚನ ಮಾನವಃ ॥ ೨೧ ॥**
**ಏತೈರ್ನಾಮಭಿರಭ್ರಸ್ಥಾಃ ಸಂಕೇತಾಂ ಬಹು ತುಷ್ಟುವುಃ ।**
**ತೇಷಾಮನುಗ್ರಹಾರ್ಥಾಯ ಪ್ರಚಚಾಲ ಚ ಸಾ ಪುನಃ ॥ ೨೨ ॥**
**ಅಥ ಸಂಗೀತಯೋಗಿನ್ಯಾ ಮಂತ್ರಿರಾಜ್ಞೀಪದಸ್ಪೃಶಃ ।**
**ನಿರ್ಯಾಣಸೂಚನಕರೀ ದಿವಿ ದಧ್ವಾನ ಕಾಹಲೀ ॥ ೨೩ ॥**
**ಶೃಂಗಾರಪ್ರಾಯಭೂಷಾಣಾಂ ಶಾದ್ವಲಶ್ಯಾಮಲತ್ವಿಷಾಂ ।**
**ವೀಣಾಸನಾಥಪಾಣೀನಾಂ ಶಕ್ತೀನಾಂ ನಿರ್ಯಯೌ ಬಲಂ ॥ ೨೪ ॥**

---

೧೯-೨೦. ಪಂಚಮೀ, ದಂಡನಾಥಾ, ಸಂಕೇತಾ, ಸಮಯೇಶ್ವರೀ, ಸಮಯಸಂಕೇತಾ, ವಾರಾಹೀ, ಪೋತ್ರಿಣೀ, ಶಿವಾ, ವಾರ್ತಾಲೀ, ಮಹಾಸೇನಾ, ಆಜ್ಞಾಚಕ್ರೇಶ್ವರೀ, ಅರಿಘ್ನೀ ಎಂಬಿವೇ ಆ ಮಹಾದೇವಿಯ ಹನ್ನೆರಡು ನಾಮಗಳು.

೨೧. ಈ ಹನ್ನೆರಡು ದಿವ್ಯನಾಮಗಳೆಂಬ ವಜ್ರಪಂಜರದ ಮಧ್ಯದಲ್ಲಿ ಸುರಕ್ಷಿತನಾಗಿರುವ ಮಾನವನು ಯಾವಾಗಲೂ ಎಂತಹ ಕಷ್ಟವೇ ಬಂದರೂ ದುಃಖವನ್ನು ಹೊಂದುವುದಿಲ್ಲ.

೨೨. ಹೀಗೆ ಈ ನಾಮಗಳಿಂದ ದೇವತೆಗಳೆಲ್ಲರೂ ಗಗನದಲ್ಲಿ ನಿಂತು ಆ ಸಂಕೇತಾದೇವಿಯನ್ನು ಸ್ತುತಿಸಿ ಸಂತೋಷಗೊಳಿಸಿದರು. ಆಗಲಾ ದೇವಿಯು ಆ ದೇವತೆಗಳ ಅನುಗ್ರಹಕ್ಕಾಗಿಯೇ ಮತ್ತೆ ಪ್ರಸನ್ನೆಯಾಗಿ ಮುಂದುವರಿದಳು.

೨೩. ಇದಾದ ಬಳಿಕ ಮಂತ್ರಿರಾಜ್ಞೀಪದವಿಯನ್ನಲಂಕರಿಸಿದ್ದ ಸಂಗೀತಯೋಗಿನೀ ದೇವಿಯ ಪ್ರಯಾಣ ಸೂಚಕವಾದ ಕಹಳೆಯು ಗಗನದಲ್ಲಿ ಮೊಳಗಿತು.

೨೪. ಆ ಕೂಡಲೇ ಶೃಂಗಾರವಾಗಿರುವ ದಿವ್ಯಾಭರಣಗಳುಳ್ಳವರಾಗಿ, ಎಳೆ ಗರಿಕೆಯಂತೆ ಶ್ಯಾಮಲವಾದ ಕಾಂತಿಯುಳ್ಳವರಾಗಿ ವೀಣೆಯನ್ನು ಹಿಡಿದ ಕರಕಮಲಗಳುಳ್ಳ ಶಕ್ತಿದೇವತೆಗಳ ಸೇನೆಯು ಹೊರಟಿತು.

**ಕಾಶ್ಚಿದ್ಗಾಯಂತಿ ನೃತ್ಯಂತಿ ಮತ್ತಕೋಕಿಲನಿಃಸ್ವನಾಃ ।**
**ಕಾಶ್ಚಿತ್ಕಾದಂಬರೀಪಾನಕಷಾಯಿತವಿಲೋಚನಾಃ ॥ ೨೫ ॥**
**ವಂದಿಮಾಗಧರೂಪಾಶ್ಚ ಕಾಶ್ಚಿದನ್ಯಾಃ ಕಲಸ್ವನಾಃ ।**
**ವೀಣಾವೇಣುಮೃದಂಗಾಢ್ಯಾಃ ಸವಿಲಾಸಪದಕ್ರಮಾಃ ॥ ೨೬ ॥**
**ಪ್ರಚೇಲುಃ ಶಕ್ತಯಃ ಶ್ಯಾಮಾ ಹರ್ಷಯಂತೋ ಜಗಜ್ಜನಾನ್ ।**
**ಮಯೂರವಾಹಾಃ ಕತಿಚಿತ್ಕತಿಚಿದ್ಧಂಸವಾಹನಾಃ ॥ ೨೭ ॥**
**ಕತಿಚಿನ್ನಕುಲಾರೂಢಾಃ ಕತಿಚಿತ್ಕೋಕಿಲಾಸನಾಃ ।**
**ಸರ್ವಾಶ್ಚ ಶ್ಯಾಮಲಾಕಾರಾಃ ಕಾಶ್ಚಿತ್ಕರ್ಣೀರಥಸ್ಥಿತಾಃ ॥ ೨೮ ॥**
**ಕದಂಬಮಧುಮತ್ತಾಶ್ಚ ಕಾಶ್ಚಿದಾರೂಢಸೈಂಧವಾಃ ।**
**ಮಂತ್ರಿನಾಥಾಂ ನಮಸ್ಕೃತ್ಯ ಸಂಪ್ರಚೇಲುಃ ಪುರಃ ಪುರಃ ॥ ೨೯ ॥**

---

೨೫. ಆ ಸೇನೆಯಲ್ಲಿ ಮದಿಸಿದ ಕೋಗಿಲೆಯ ಧ್ವನಿಯುಳ್ಳ ಕೆಲ ಮಂದಿ ಶಕ್ತಿದೇವತೆಗಳು ಗಾನಮಾಡುತ್ತಲೂ, ವೀಣೆ, ಕೊಳಲು, ಮೃದಂಗನಾದಕ್ಕೆ ತಕ್ಕಂತೆ ಹೆಜ್ಜೆ ಹಾಕಿ ಕುಣಿಯುತ್ತಲೂ ಇದ್ದರು. ಮತ್ತೆ ಕೆಲಮಂದಿ ದೇವಿಯರು ಮಧುಪಾನದಿಂದ ಕೆಂಪಡರಿದ ಕಂಗಳುಳ್ಳವರಾಗಿ ಹಾಡುತ್ತ ಕುಣಿಯುತ್ತ ಹೊರಟರು.

೨೬. ಮಧುರ ಕಂಠಿಯರಾದ ಇನ್ನೂ ಕೆಲವು ಮಂದಿ ದೇವಿಯರು ವಂದಿಮಾಗಧರ ರೂಪಗಳನ್ನು ತಾಳಿ, ವೀಣೆ, ಕೊಳಲು, ಮೃದಂಗಗಳನ್ನು ಹಿಡಿದು ಬಾಜಿಸುತ್ತ ವಿಲಾಸವನ್ನು ಮೆರೆಯುತ್ತಿರುವ ಮನೋಹರವಾದ ನಡಿಗೆಯಿಂದ ಹೊರಟರು.

೨೭. ಹೀಗೆ ಶ್ಯಾಮಳೆಯರಾದ ಆ ಶಕ್ತಿದೇವಿಯರು ಜಗತ್ತಿನ ಜನಗಳನ್ನೇ ಹರ್ಷಗೊಳಿಸುತ್ತ ಮುಂದುವರಿಯುತ್ತಿದ್ದರು. ಅವರಲ್ಲಿ ಕೆಲವರು ನವಿಲುಗಳನ್ನೇರಿದವರು; ಕೆಲವರು ಹಂಸವಾಹನೆಯರು;

೨೮. ಕೆಲವರು ಮುಂಗುಸಿಗಳನ್ನೇರಿದವರು; ಕೆಲವರು ಕೋಗಿಲೆಗಳನ್ನೇ ವಾಹನಗಳನ್ನಾಗಿ ಮಾಡಿಕೊಂಡಿದ್ದವರು; ಎಲ್ಲರೂ ಶ್ಯಾಮಲ ವರ್ಣವುಳ್ಳವರಾಗಿದ್ದರು. ಅವರಲ್ಲಿಯೂ ಕೆಲವರು ಕರ್ಣೀರಥವನ್ನೇರಿದ್ದವರು.

೨೯. ಮಧುಪಾನದಿಂದ ಮತ್ತರಾಗಿದ್ದ ಕೆಲವರು ಅಶ್ವಗಳನ್ನೇರಿ ಮಂತ್ರಿನಾಥೆಯನ್ನು ನಮಸ್ಕರಿಸಿ ಮುಂದೆ ಮುಂದೆ ಹೊರಟು ಬಂದರು.

**ಅಥಾರುಹ್ಯ ಸಮುತ್ತುಂಗಂ ಗೇಯಚಕ್ರಂ ಮಹಾರಥಂ ।**
**ಬಾಲಾರ್ಕವರ್ಣಕವಚಾ ಮದಾರುಣವಿಲೋಚನಾ ॥ ೩೦ ॥**
**ಈಷತ್ಪ್ರಸ್ವೇದಕಣಿಕಾ ಮನೋಹರಮುಖಾಂಬುಜಾ ।**
**ಪ್ರೇಷಯಂತೀ ಕಟಾಕ್ಷೇಣ ಕಿಂಚಿದ್ಭ್ರೂವಲ್ಲಿತಾಂಡನ್ಯೈಃ ॥ ೩೧ ॥**
**ಸಮಸ್ತಮಪಿ ತತ್ಸೈನ್ಯಂ ಶಕ್ತೀನಾಮುದ್ಧತೋದ್ಧತಂ ।**
**ಪಿಂಛತ್ರಿಕೋಣಚಕ್ರೇಣ "ಬಿರುದೇನ" ಮಹೀಯಸಾ ॥ ೩೨ ॥**
**ಅಸಾಮಾನ್ಯೇನ ಚಾನ್ಯಾಸಾಂ ಶಕ್ತೀನಾಮುಜ್ಜ್ವಲೋದಯಾ ।**
**ನಿರ್ಜಗಾಮ ಘನಶ್ಯಾಮಾ ಶ್ಯಾಮಲಾ ಮಂತ್ರಿನಾಯಿಕಾ ॥ ೩೩ ॥**
**ತಾಂ ತುಷ್ಟುವುಃ ಷೋಡಶಭಿರ್ನಾಮಭಿರ್ನಾಕವಾಸಿನಃ ।**
**ತಾನಿ ಷೋಡಶ ನಾಮಾನಿ ಸಮಾಕರ್ಣಯ ಕುಂಭಜ ॥ ೩೪ ॥**
**ಸಂಗೀತಯೋಗಿನೀ ಶ್ಯಾಮಾ ಶ್ಯಾಮಲಾ ಮಂತ್ರಿನಾಯಿಕಾ ।**
**ಮಂತ್ರಿಣೀ ಸಚಿವೇಶಾನೀ ಪ್ರಧಾನೇಶೀ ಶುಕಪ್ರಿಯಾ ॥**

---

೩೦-೩೩. ತರುವಾಯ ಘನಶ್ಯಾಮೆಯೂ, ಶ್ಯಾಮಲೆಯೂ ಆದ ಶ್ರೀ ಮಂತ್ರಿನಾಥಾದೇವಿಯು ಮಹೋನ್ನತವಾದ ಗೇಯಚಕ್ರವೆಂಬ ಮಹಾರಥವನ್ನೇರಿ ಕುಳಿತಳು. ಆಕೆಯು ಬಾಲಸೂರ್ಯನಿಗೆ ಸಮಾನವಾದ ವರ್ಣವುಳ್ಳವಳಾಗಿ ಮತ್ತಿನಿಂದ ಕೆಂಪೊಗೆದು ಆಲುತ್ತಿರುವ ಕಣ್ಣುಗಳುಳ್ಳವಳಾಗಿದ್ದಳು. ಸ್ವಲ್ಪ ಸ್ವಲ್ಪವಾಗಿ ಹೊರಹೊಮ್ಮಿದ ಬೆಮರ್ಪನಿಗಳಿಂದಲೂ ಮನೋಹರವಾದ ಮುಖಕಮಲದಿಂದಲೂ ಆ ದೇವಿಯು ಮತ್ತಷ್ಟು ಮನೋಹರೆಯಾಗಿ ಮೆರೆಯುತ್ತಿದ್ದಳು. ಬಗ್ಗಿದ ಹುಬ್ಬು ಕುಣಿತವುಳ್ಳ ಕಟಾಕ್ಷವೀಕ್ಷಣದಿಂದಲೇ ಆ ದೇವಿಯು ಉದ್ಧತೋದ್ಧತವಾದ ಸಮಸ್ತ ಶಕ್ತಿಸೇನೆಯನ್ನೂ, ಬಹು 'ಶಿಸ್ತಿ'ನಿಂದ ನಡೆಸುತ್ತಿದ್ದಳು. ನವಿಲುಗರಿಗಳ ತ್ರಿಕೋಣ ಚಕ್ರಗಳ ಅಸಂಖ್ಯಾಕವಾದ ಬಿರುದುಗಳಿಂದ ವಿರಾಜಿಸಿ ಇತರ ಎಲ್ಲಾ ಶಕ್ತಿಗಳಿಗಿಂತಲೂ ಅಧಿಕಾಧಿಕವಾಗಿ ಪ್ರಜ್ವಲಿಸುತ್ತಿದ್ದ ಘನಶ್ಯಾಮೆಯೂ ಶ್ಯಾಮಲೆಯೂ ಆದ ಆ ಮಂತ್ರಿನಾಥಾದೇವಿಯು ಈ ರೀತಿ ಬಹು ವೈಭವದಿಂದ ಪ್ರಯಾಣ ಬೆಳೆಸಿದಳು.

೩೪. ಅದೇ ಸಮಯದಲ್ಲಿಯೇ ಸ್ವರ್ಗವಾಸಿಗಳಾದ ದೇವತೆಗಳೆಲ್ಲರೂ ಆ ದೇವಿಯನ್ನು ಹದಿನಾರು ದಿವ್ಯ ನಾಮಗಳ ಸಂಕೀರ್ತನದಿಂದ ಸ್ತುತಿಸಿ ಸಂತೋಷಗೊಳಿಸಿದರು. ಕುಂಭಸಂಭವಾ! ಆ ದಿವ್ಯನಾಮಗಳನ್ನು ಅಕ್ಕರೆಯಿಂದ ಆಲಿಸು.

ವೀಣಾವತೀ ವೈಣಿಕೀ ಚ ಮುದ್ರಿಣೀ ಪ್ರಿಯಕಪ್ರಿಯಾ ।
ನೀಪಪ್ರಿಯಾ ಕದಂಬೇಶೀ ಕದಂಬವನವಾಸಿನೀ ॥
ಸದಾಮದಾ ಚ ನಾಮಾನಿ ಷೋಡಶೈತಾನಿ ಕುಂಭಜ ॥ ೩೫ ॥
ಏತೈರ್ಯಃ ಸಚಿವೇಶಾನೀಂ ಸಕೃತ್ಸ್ತೌತಿ ಶರೀರವಾನ್ ।
ತಸ್ಯ ತ್ರೈಲೋಕ್ಯಮಖಿಲಂ ವಶೇ ತಿಷ್ಠತ್ಯಸಂಶಯಃ ॥ ೩೬ ॥
ಮಂತ್ರಿನಾಥಾ ಯತ್ರ ಯತ್ರ ಕಟಾಕ್ಷಂ ವಿಕಿರತ್ಯಸೌ ।
ತತ್ರ ತತ್ರ ಗತಾಶಂಕಂ ಶಕ್ತಿಸೈನ್ಯಂ ಪತತ್ಯಲಂ ॥ ೩೭ ॥
ಲಲಿತಾಪರಮೇಶಾನ್ಯಾ ರಾಜ್ಯಚರ್ಚಾ ತು ಯಾವತೀ ।
ಶಕ್ತೀನಾಮಪಿ ಚರ್ಚಾಯಾ ಸಾ ಸರ್ವಾ ತದ್ವಶಂವದಾ ॥ ೩೮ ॥
ಅಥ ಸಂಗೀತಯೋಗಿನ್ಯಾಃ ಕರಸ್ಥಶುಕಪೋತಕಾತ್ ।
ನಿರ್ಜಗಾಮ ಧನುರ್ವೇದೋ ವಹನ್ ಸಜ್ಜಂ ಶರಾಸನಂ ॥ ೩೯ ॥
ಚತುರ್ಬಾಹುಯುತೋ ವೀರಸ್ತ್ರಿಶಿರಾಸ್ತ್ರಿವಿಲೋಚನಃ ।
ನಮಸ್ಕೃತ್ಯ ಪ್ರಧಾನೇಶೀಮಿದಮಾಹ ಸಭಕ್ತಿಮಾನ್ ॥ ೪೦ ॥

---

೩೫. ಸಂಗೀತಯೋಗಿನೀ, ಶ್ಯಾಮಾ, ಶ್ಯಾಮಲಾ, ಮಂತ್ರಿನಾಯಿಕಾ, ಮಂತ್ರಿಣೀ, ಸಚಿವೇಶಾನೀ, ಪ್ರಧಾನೇಶೀ, ಶುಕಪ್ರಿಯಾ, ವೀಣಾವತೀ, ವೈಣಿಕೀ, ಮುದ್ರಿಣೀ, ಪ್ರಿಯಕಪ್ರಿಯಾ, ನೀಪಪ್ರಿಯಾ, ಕದಂಬೇಶೀ, ಕದಂಬವನವಾಸಿನೀ, ಸದಾಮದಾ, ಎಂಬಿವೇ ಆ ಷೋಡಶನಾಮಗಳು.

೩೬. ಎಲೈ ಅಗಸ್ತ್ಯನೇ! ಈ ದಿವ್ಯ ಷೋಡಶನಾಮಗಳಿಂದ ಯಾವ ಮಾನವನು ಮಂತ್ರಿನಾಥಾ ದೇವಿಯನ್ನು ಒಮ್ಮೆಯಾದರೂ ಸ್ತೋತ್ರ ಮಾಡುವನೋ ಅವನಿಗೆ ಆಕೆಯ ಅನುಗ್ರಹವು ದೊರೆತು ಮೂರು ಲೋಕಗಳೂ ಅವನ ವಶವಾಗುವುದೆಂಬುದರಲ್ಲಿ ಸಂಶಯವೇ ಇರುವುದಿಲ್ಲ.

೩೭. ಮಂತ್ರಿನಾಥೆಯು ಯಾವ ಯಾವ ಕಡೆಗಳಲ್ಲಿ ದೃಷ್ಟಿಕ್ಷೇಪ ಮಾಡುವಳೋ ಆ ಆ ಪ್ರದೇಶಗಳಲ್ಲೆಲ್ಲಾ ಶಕ್ತಿಸೇನೆಗಳು ಯಾವೊಂದು ಸಂಶಯವೂ ಇಲ್ಲದೆ ಮುನ್ನುಗ್ಗಿ ಶತ್ರುಗಳ ಮೇಲೆ ಬೀಳುವುವು.

೩೮. ಶ್ರೀ ಲಲಿತಾದೇವಿಯ ರಾಜ್ಯದ ಮಂತ್ರಾಲೋಚನೆಯು ಎಲ್ಲಿಯವರೆಗಿದ್ದಿತೋ ಅಲ್ಲಿಯವರೆಗೂ ಶಕ್ತಿಸೇನೆಗಳ ಮಂತ್ರಿತ್ವವೂ ಆ ಮಂತ್ರನಾಥಾದೇವಿಯ ಸ್ವಾಧೀನವಾಗಿದ್ದಿತು.

೩೯-೪೦. ಬಳಿಕ ಆ ಸಂಗೀತಯೋಗಿನಿಯ ಕೈಯಲ್ಲಿದ್ದ ಗಿಳಿಮರಿಯ ದೆಸೆಯಿಂದ ವೀರನಾದ ಧನುರ್ವೇದಪುರುಷನು, ಹೆದೆಯೇರಿಸಿದ

**ದೇವಿ ಭಂಡಾಸುರೇಂದ್ರಸ್ಯ ಯುದ್ಧಾಯ ತ್ವಂ ಪ್ರವರ್ತಸೇ ।**
**ಅತಸ್ತವ ಮಯಾ ಸಾಹ್ಯಂ ಕರ್ತವ್ಯಂ ಮಂತ್ರಿನಾಯಕೇ ॥ ೪೧ ॥**
**ಚಿತ್ರಜೀವಮಿದಂ ನಾಮ್ನಾ ಕೋದಂಡಂ ಸುಮಹತ್ತರಂ ।**
**ಗೃಹಾಣ ಜಗತಾಮಂಬ ದಾನವಾನಾಂ ನಿಬರ್ಹಣಂ ॥ ೪೨ ॥**
**ಇಮೌ ಚಾಕ್ಷಯಬಾಣಾಢ್ಯೌ ತೂಣೀರೌ ಸ್ವರ್ಣಚಿತ್ರಿತೌ ।**
**ಗೃಹಾಣ ದೈತ್ಯನಾಶಾಯ ಮಮಾನುಗ್ರಹಹೇತವೇ ॥ ೪೩ ॥**
**ಇತಿ ಪ್ರಣಮ್ಯ ಶಿರಸಾ ಧನುರ್ವೇದೇನ ಭಕ್ತಿತಃ ।**
**ಅರ್ಪಿತಂ ಚಾಪತೂಣೀರಂ ಜಗ್ರಾಹ ಪ್ರಿಯಕಪ್ರಿಯಾ ॥ ೪೪ ॥**
**ಚಿತ್ರಜೀವಂ ಮಹಚ್ಚಾಪಮಾದಾಯ ಚ ಶುಕಪ್ರಿಯಾ ।**
**ವಿಸ್ಫಾರಂ ಜನಯಾಮಾಸ ಮೌರ್ವೀಮುದ್ಘಾಟ್ಯ ಭೂರಿಶಃ ॥೪೫॥**

---

ಬಿಲ್ಲನ್ನು ಹಿಡಿದು, ನಾಲ್ಕು ಭುಜಗಳುಳ್ಳವನೂ, ಮೂರು ತಲೆಗಳೂ, ಮೂರು ಕಣ್ಣುಗಳೂ ಉಳ್ಳವನೂ ಆಗಿ ಆವಿರ್ಭವಿಸಿ ಆ ಪ್ರಧಾನೇಶ್ವರಿಯನ್ನು ನಮಸ್ಕರಿಸಿ ಭಕ್ತಿನಮ್ರನಾಗಿ ಆಕೆಯನ್ನು ಕುರಿತು ಹೀಗೆಂದನು:

೪೧. "ಮಂತ್ರಿನಾಯಿಕೇ! ದೇವೀ!! ಈಗ ನೀನು ಭಂಡಾಸುರನೊಡನೆ ಯುದ್ಧಕ್ಕಾಗಿ ಹೊರಡುತ್ತಿರುವೆ. ಆದುದರಿಂದ ನಾನು ನಿನಗೆ ಸಹಾಯಮಾಡಬೇಕಾಗಿರುವುದು.

೪೨. ಜಗದಂಬೆ! ಈ ಧನುಸ್ಸು ಚಿತ್ರಜೀವವೆಂದು ಹೆಸರಾದುದು; ಮಹತ್ತರವಾದುದು; ದಾನವರನ್ನು ನಿರ್ಮೂಲಮಾಡುವಂಥದು! ತಾಯೇ! ನೀನಿದನ್ನು ಸ್ವೀಕರಿಸಬೇಕು.

೪೩. ಇದೋ! ಅಕ್ಷಯಬಾಣಗಳಿಂದ ತುಂಬಿ, ಸ್ವರ್ಣಚಿತ್ರಿತಗಳಾಗಿರುವ ಬತ್ತಳಿಕೆಗಳು. ಇವನ್ನು ತೆಗೆದುಕೊ. ಇವುಗಳನ್ನು ನನ್ನ ಅನುಗ್ರಹಾರ್ಥವಾಗಿ ನೀನು ಸ್ವೀಕರಿಸಬೇಕು."

೪೪. ಈ ರೀತಿ ಧನುರ್ವೇದಪುರುಷನು ಭಕ್ತಿಯಿಂದ ನಮಸ್ಕರಿಸಿ ಸಮರ್ಪಿಸಿದ ಬಿಲ್ಲು ಬತ್ತಳಿಕೆಗಳನ್ನು ಪ್ರಿಯಕ (ಮಧು) ಪ್ರಿಯೆಯಾದ ಆ ಮಂತ್ರಿನಾಥಾದೇವಿಯು ಪರಿಗ್ರಹಿಸಿದಳು.

೪೫. ತರುವಾಯ ಆ ಶುಕಪ್ರಿಯೆಯು ಚಿತ್ರಜೀವವೆಂಬ ಮಹಾಧನುಸ್ಸನ್ನು ಹಿಡಿದು ಅದರ ನಾರಿಯನ್ನು ಸೆಳೆದು ಬಲವಾಗಿ ಒಮ್ಮೆ ದೊಡ್ಡದಾಗಿ ಟಂಕಾರಗೊಳಿಸಿದಳು.

**ಸಂಗೀತಯೋಗಿನೀಚಾಪಧ್ವನಿನಾ ಪೂರಿತಂ ಜಗತ್ ।**
**ನಾಕಾಲಯಾನಾಂ ಚ ಮನೋನಯನಾನಂದ ಸಂಪದಾ ॥ ೪೬ ॥**
**ಯಂತ್ರಿಣೀ ತಂತ್ರಿಣೀ ಚೈವ ದ್ವೇ ತಸ್ಯಾಃ ಪರಿಚಾರಿಕೇ ।**
**ಶುಕಂ ವೀಣಾಂ ಚ ಶಿರಸಾ ವಹಂತ್ಯೌ ಪರಿಚೇರತುಃ ॥ ೪೭ ॥**
**ಆಲೋಲವಲಯಕ್ವಾಣವರ್ಧಿಷ್ಣುಗುಣನಿಃಸ್ವನಂ ।**
**ಧಾರಯಂತೀ ವಪುಃ ಶ್ಯಾಮಾ ಚಕಾರಾರಿಮನೋಜ್ವರಂ ॥ ೪೮ ॥**
**ಚಿತ್ರಜೀವಶರಾಸೇನ ಭೂಷಿತಾ ಗೀತಯೋಗಿನೀ ।**
**ಕಾದಂಬಿನೀವ ರುರುಚೇ ಕಂದಲಚ್ಛಕ್ರಕಾರ್ಮುಕಾ ॥ ೪೯ ॥**
**ಕಾಲೀಕಟಾಕ್ಷವತ್ತೀಕ್ಷ್ಣೋ ನೃತ್ಯದ್ಭುಜಗಸಂನಿಭಃ ।**
**ಉಲ್ಲಸನ್ ದಕ್ಷಿಣೇ ಪಾಣೌ ವಿಲಲಾಸ ಶಿಲೀಮುಖಃ ॥ ೫೦ ॥**
**ಗೇಯಚಕ್ರರಥಾರೂಢಾಂ ತಾಂ ಪಶ್ಚಾಚ್ಚ ನಿಷೇವಿರೇ ।**
**ತದ್ವಚ್ಛ್ಯಾಮಲಶೋಭಾಢ್ಯಾ ದೇವ್ಯೋ ಬಾಣಧನುರ್ಧರಾಃ ॥ ೫೧ ॥**

---

೪೬. ಹೀಗೆ ಆ ದೇವಿಯು ಧ್ವನಿಗೊಳಿಸಿದ ಆ ಚಿತ್ರಜೀವಧನುಸ್ಸಿನ ಟಂಕಾರದಿಂದ ಜಗತ್ತೇ ತುಂಬಿಹೋಯಿತಲ್ಲದೆ, ಸಮಸ್ತ ದೇವತೆಗಳಿಗೂ ಅಮಿತಾನಂದವಾಯಿತು.

೪೭. ಯಂತ್ರಿಣೀ ತಂತ್ರಿಣೀ ಎಂಬೀರ್ವರೂ ಆ ಮಂತ್ರಿನಾಥಾ ದೇವಿಯ ಪರಿಚಾರಿಕೆಯರು. ಅವರು ಗಿಳಿಯನ್ನೂ ವೀಣೆಯನ್ನೂ ತಮ್ಮ ಶಿರಸ್ಸುಗಳಲ್ಲಿ ಧರಿಸಿ ಆಕೆಯನ್ನುಪಚರಿಸುತ್ತಿದ್ದರು.

೪೮. ಎಣಿಕೆಯಿಲ್ಲದಂತೆ ತೊಟ್ಟಿರುವ ಸಡಿಲವಾದ ಕೈಬಳೆಗಳ ಘಲುಘಲುಧ್ವನಿಗಳಿಂದ ಬಿಲ್ಲಿನ ನಾರಿಯ ಧ್ವನಿಯನ್ನು ಬೆಳೆಸುತ್ತ ಶ್ಯಾಮಲವರ್ಣ ದೇಹಧಾರಿಣಿಯಾದ ಆ ದೇವಿಯು ಶತ್ರುಗಳ ಮನಸ್ಸಿಗೆ ಭಯಜ್ವರವನ್ನುಂಟುಮಾಡುತ್ತಿದ್ದಳು.

೪೯. ಚಿತ್ರಜೀವಧನುಸ್ಸಿನಿಂದ ಅಲಂಕೃತೆಯಾದ ಆ ಸಂಗೀತ ಯೋಗಿನಿಯು ಸುತ್ತುವರೆದ ಕಾಮನಬಿಲ್ಲುಳ್ಳ ಮುಗಿಲ ಮಾಲೆಯಂತೆ ಬೆಳಗುತ್ತಿದ್ದಳು.

೫೦. ಕಾಳಿಕಾದೇವಿಯ ಕಟಾಕ್ಷದಂತೆ ಬಹಳ ತೀಕ್ಷ್ಣವಾಗಿ, ಕುಣಿಯುತ್ತಿರುವ ನಾಗಸರ್ಪಕ್ಕೆ ಸಮಾನವಾದ ಬಾಣವು ಆ ದೇವಿಯ ಬಲಗೈಯಲ್ಲಿ ಮಹಾಪ್ರಕಾಶಮಾನವಾಗಿ ವಿರಾಜಿಸುತ್ತಿದ್ದಿತು.

೫೧-೫೨. ಆ ದೇವಿಯಂತೆಯೇ ಶ್ಯಾಮಲವರ್ಣಶೋಭಿತೆಯರಾಗಿ,

ಸಹಸ್ರಾಕ್ಷೌಹಿಣೀಸಂಖ್ಯಾಸ್ತ್ರೀವ್ರವೇಗಾ ಮದಾಲಸಾಃ ।
ಅಪೂರಯಂತ್ಯಃ ಕಕುಭಃ ಕಲೈಃ ಕಿಲಕಿಲಾರವೈಃ ॥ ೫೨ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ದ್ವಾದಶೋಽಧ್ಯಾಯಃ

---

ಧನುರ್ಬಾಣಗಳನ್ನು ಧರಿಸಿ, ಮಹಾವೇಗಶಾಲಿನಿಯರೂ, ಮದಲಾಲಸೆಯರೂ ಆದ ಒಂದು ಸಾವಿರ ಅಕ್ಷೌಹಿಣೀ ಸಂಖ್ಯೆಯ ಶಕ್ತಿದೇವಿಯರು ಕಲಕಲ ಧ್ವನಿಗಳಿಂದಲೂ, ರಣಕೋಲಾಹಲ ಧ್ವನಿಗಳಿಂದಲೂ ದಶದಿಶೆಗಳನ್ನು ತುಂಬುತ್ತ ಗೇಯಚಕ್ರರಥವನ್ನೇರಿ ಹೊರಟ ಮಂತ್ರಿಣೀ ದೇವಿಯನ್ನು ಹಿಂಬಾಲಿಸಿ ಹೊರಟರು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋದಶೋಽಧ್ಯಾಯಃ

[ಶ್ರೀ ಲಲಿತಾಂಬಿಕಾಯಾ ರಣಪ್ರಸ್ಥಾನಂ]

ಶಕ್ತಿರ್ಯಾ ಪರಮೇಶ್ವರೀ ಭಗವತೀ ಶ್ರೀದಂಡನಾಥಾಭಿಧಾಂ
ಸರ್ವಜ್ಞಾದ್ಭುತಕೋಲವಕ್ತ್ರಕಮಲಾಂ ಧ್ಯಾಯಾಮಹೇ ಶ್ಯಾಮಲಾಂ ।
ಯಂತ್ರೇಶೀಂ ಲಲಿತಾಂಬಿಕೇ ಪರಶಿವೇ ಭಂಡೈಕಸೇನಾಪಹಾಂ
ವಂದೇತ್ವಾಂ ವರಕಾಮರಾಜಮಹಿಷೀಂ ಶ್ರೀಸುಂದರೇಶಾಂಕಗಾಂ ॥

**ಅಥ ಚಕ್ರರಾಜರಥನಾಯಿಕಾಶ್ರಿತಾ**
**ಜ ಲಿತಾಂಕುಶಾ ಫಣಿಸಮಾನಪಾಶಭೃತ್ ।**
**ಕಲನಿಕ್ವಣದ್ವಲಯಮೈಕ್ಷವಂ ಧನು-**
**ರ್ದಧತೀ ಪ್ರದೀಪ್ತಕುಸುಮೇಷು ಪಂಚಕಾ ॥ ೧ ॥**
**ಉದಯತ್ಸಹಸ್ರಮಹಸಾಂ ಸಹಸ್ರತೋಽ-**
**ಪ್ಯತಿಪಾಟಲಂ ನಿಜವಪುಃ ಪ್ರಭಾಝರಂ ।**
**ಕಿರತೀ ದಿಶಾಸು ವದನಸ್ಯ ಕಾಂತಿಭಿಃ**
**ಸೃಜತೀವ ಚಂದ್ರಮಯಮಭ್ರಮಂಡಲಂ ॥ ೨ ॥**

---

### ಕನ್ನಡದ ಅನುವಾದ

[ಶ್ರೀ ಲಲಿತಾಂಬಿಕೆಯ ರಣಪ್ರಸ್ಥಾನ]

೧. (ಈ ಪ್ರಕಾರ, ಮಂತ್ರಿಣೀದೇವಿಯು ರಣರಂಗಕ್ಕೆ ಪ್ರಯಾಣ ಮಾಡಿದ ಬಳಿಕ) ಶ್ರೀ ಲಲಿತಾಂಬಿಕೆಯು ಸಮರಸನ್ನದ್ಧೆಯಾಗಿ ಶ್ರೀ ಚಕ್ರ ರಾಜ ರಥವನ್ನೇರಿ ಹೊರಟಳು. ಆಗಲಾ ದೇವಿಯು ಶ್ರೀ ಚಕ್ರರಾಜ ರಥವನ್ನೇರಿ ಕುಳಿತು, ಪ್ರಜ್ವಲಿಸುತ್ತಿರುವ ಅಂಕುಶವನ್ನೂ, ನಾಗಸರ್ಪಕ್ಕೆ ಸಮಾನವಾದ ಪಾಶವನ್ನೂ ಧರಿಸಿ, ಘಲುಘಲನೆ ಕಿವಿಗಿಂಪಾಗಿ ದನಿಗೈಯು ತ್ತಿರುವ ಬಳೆಗಳಿಂದ ಬೆಳಗಿ, ಕಬ್ಬಿನ ಬಿಲ್ಲನ್ನೂ ಅರವಿಂದ, ಅಶೋಕ, ಚೂತ, ನವಮಲ್ಲಿಕೆ, ನೀಲೋತ್ಪಲಗಳೆಂಬ ಐದು ಹೂವಂಬುಗಳನ್ನೂ ಹಿಡಿದು ವಿರಾಜಿಸುತ್ತಿದ್ದಳು.

೨. ಆಗತಾನೇ ಉದಿಸಿದ ಸಹಸ್ರ ಸೂರ್ಯರ ಕಾಂತಿಗಿಂತಲೂ ಸಾವಿರಮಡಿಯಾದ ಕೆಂಪು ಕಾಂತಿಯ ಹೊಳೆಯನ್ನು ಹರಿಯಿಸುತ್ತಿರುವ ನಿಜಶರೀರದಿಂದ ವಿರಾಜಿತೆಯಾಗಿ ದಶದಿಶೆಗಳ ಮೇಘಮಂಡಲಗಳೆಲ್ಲ

ದಶಯೋಜನಾಯತಿಮತಾ ಜಗತ್ತ್ರಯೀ-
ಮಭಿವೃಣ್ವತಾ ವಿಶದಮೌಕ್ತಿಕಾತ್ಮನಾ ।
ಧವಲಾತಪತ್ರವಲಯೇನ ಭಾಸುರಾ
ಶಶಿಮಂಡಲಸ್ಯ ಸಖಿತಾಮುಪೇಯುಷಾ ॥ ೩ ॥
ಅಭಿವೀಜಿತಾ ಚ ಮಣಿಕಾಂಡಶೋಭಿನಾ
ವಿಜಯಾದಿಮುಖ್ಯ ಪರಿಚಾರಿಕಾಜನೈಃ ।
ನವಚಂದ್ರಿಕಾಲಹರಿಕಾಂತಿಕಂದಲೀ-
ಚತುರೇಣ ಚಾಮರಚತುಷ್ಟಯೇನ ಚ ॥ ೪ ॥
ಶಕ್ತ್ಯೈಕರಾಜ್ಯಪದವೀಮಭಿಸೂಚಯಂತೀ
ಸಾಮ್ರಾಜ್ಯಚಿಹ್ನ ಶತಮಂಡಿತಸೈನ್ಯದೇಶಾ ।
ಸಂಗೀತವಾದ್ಯರಚನಾಭಿರಥಾಮರಾಣಾಂ
ಸಂಸ್ತೂಯಮಾನವಿಭವಾ ವಿಶದಪ್ರಕಾಶಾ ॥ ೫ ॥

---

ವನ್ನೂ ಚಂದ್ರಮಯುಗಳನ್ನಾಗಿಸುತ್ತಿರುವ ತನ್ನ ವದನಪ್ರಭೆಯನ್ನು ಹೊರಚಿಮ್ಮುತ್ತ ಆ ದೇವಿಯು ಮತ್ತಷ್ಟು ಮನೋಹರವಾಗಿ ಶೋಭಿಸುತ್ತಿದ್ದಳು.

೩. ಹತ್ತು ಹರಿದಾರಿಗಳ ಅಗಲವುಳ್ಳುದಾಗಿ ತಮ್ಮೊಂದು ಬೆಳುಮುತ್ತುಗಳ ಬೆಳಕಿನಿಂದ ಜಗತ್ತ್ರಯವನ್ನೇ ಬೆಳಗಿಸುತ್ತಿರುವ ಆ ದೇವಿಯ ಬೆಳುಗೊಡೆಗಳ ಗುಂಪು ಚಂದ್ರಮಂಡಲದೊಡನೆ ಗೆಳೆತನವನ್ನು ಹೊಂದಿರುವುದೋ ಎಂಬಂತೆ ವಿರಾಜಿಸುತ್ತಿದ್ದುವು.

೪. ನವರತ್ನಮಣಿಮಯವಾದ ಹಿಡಿಕೋಲುಗಳುಳ್ಳವರಾಗಿ, ಹೊಸ ಬೆಳುದಿಂಗಳ ಹೊಳೆಗಳ ಹೊಳಪಿನಿಂದ ಹೊಳೆಯುತ್ತಿರುವ ನಾಲ್ಕು ಚಾಮರಗಳನ್ನು ಹಿಡಿದು ವಿಜಯೆಯೇ ಮೊದಲಾದ ಸಖಿಯರು ನಾಲ್ವರೂ ಆ ದೇವಿಯನ್ನು ಓಲೈಸುತ್ತಿದ್ದರು.

೫. ನೂರಾರು ಸಂಖ್ಯೆಯ ಸಾಮ್ರಾಜ್ಯ ಚಿಹ್ನೆಗಳನ್ನೊಳಗೊಂಡು, ಶೃಂಗಾರವಾಗಿರುವ ಸೈನ್ಯಗಳುಳ್ಳವಳಾಗಿ, ದೇವತೆಗಳೆಲ್ಲರೂ ಸಂಗೀತಗಳಿಂದಲೂ ವಾದ್ಯಧ್ವನಿಗಳಿಂದಲೂ ತನ್ನ ವೈಭವವನ್ನು ಹೊಗಳುತ್ತಿರಲು ಪ್ರಕಟವಾದ ಪ್ರಕಾಶವುಳ್ಳ ಆ ಲಲಿತಾಂಬಿಕೆಯು ಜಗತ್ತಿನಲ್ಲಿ ಶಿಕ್ತಿರಾಜ್ಯವೇ ರಾಜ್ಯವೆಂದೂ, ಅದಕ್ಕೆ ತಾನೇ ಚಕ್ರವರ್ತಿನಿಯೆಂದೂ ಸೂಚಿಸುತ್ತಿದ್ದಳು.

ವಾಚಾಮಗೋಚರಮಗೋಚರಮೇವ ಬುದ್ಧೇ-
ರೀದೃಕ್ತಯಾ ನ ಕಥನೀಯಮನನ್ಯತುಲ್ಯಂ ।
ತ್ರೈಲೋಕ್ಯಗರ್ಭಪರಿಪೂರಿತಶಕ್ತಿಚಕ್ರ
ಸಾಮ್ರಾಜ್ಯಸಂಪದಭಿಮಾನಮಭಿಸ್ಪೃಶಂತೀ ॥ ೬ ॥
ಆಬದ್ಧ ಭಕ್ತಿಪಿಶುನಾಂಜಲಿಶೇಖರಾಣಾ-
ಮಾರಾದಹಂಪ್ರಥಮಿಕಾಕೃತಸೇವನಾನಾಂ ।
ಬ್ರಹ್ಮೇಂದ್ರರುದ್ರಹರಿಮುಖ್ಯ ಸುರೋತ್ತಮಾನಾಂ
ವಕ್ತ್ರಾಣಿ ವರ್ಧಿತನುತೀನಿ ಕಟಾಕ್ಷಯಂತೀ ॥ ೭ ॥
ಉದ್ದೀಪ್ತಪುಷ್ಪಶರಪಂಚಕತಃ ಸಮುತ್ಥೈ-
ರ್ಜ್ಯೋತಿರ್ಮಯಂ ತ್ರಿಭುವನಂ ಮಹಸಾ ದಧಾನೈಃ ।
ವಿದ್ಯುತ್ಸಮದ್ಯುತಿಭಿರಪ್ಸರಸಾಂ ಸಮೂಹೈ-
ರ್ವಿಕ್ಷಿಪ್ಯಮಾಣ ಜಯಮಂಗಲಲಾಜವರ್ಷಾ ॥ ೮ ॥
ಕಾಮೇಶ್ವರೀಪ್ರಭೃತಿಭಿಃ ಕಮನೀಯಭಾಭಿಃ
ಸಂಗ್ರಾಮವೇಷರಚನಾಸು ಮನೋಹರಾಭಿಃ ।
ದೀಪ್ತಾಯುಧದ್ಯುತಿ ತಿರಸ್ಕೃತಭಾಸ್ಕರಾಭಿ-
ರ್ನಿತ್ಯಾಭಿರಂಘ್ರಿಸವಿಧೇ ಸಮುಪಾಸ್ಯಮಾನಾ ॥ ೯ ॥

---

೬-೮. ಆ ದೇವಿಯು, ಮಾತಿಗೂ ಅಗೋಚರವಾಗಿ, ಬುದ್ಧಿಗೂ ಅಗೋಚರವೇ ಆದ, ಹೀಗೆಂದು ಹೇಳುವುದಕ್ಕೂ ಬಾರದ, ಮೂರು ಲೋಕಗಳನ್ನೂ ತುಂಬಿ ಮೆರೆಯುತ್ತಿರುವ ಶಕ್ತಿಚಕ್ರಾಧಿಪತ್ಯದ ಸಂಪತ್ತಿನ ಅಭಿಮಾನವನ್ನು ಪ್ರಕಟಗೊಳಿಸುತ್ತಲಿದ್ದಳು. ಭಕ್ತಿನಮ್ರರಾಗಿ ಕೈಗಳನ್ನು ಜೋಡಿಸಿ ಅಡಿಗಡಿಗೂ ನಾನು ತಾನೆಂದು ಮುನ್ನುಗ್ಗಿ ಸೇವೆಮಾಡಿ ಸ್ತುತಿಸುತ್ತಿರುವ ಬ್ರಹ್ಮ, ಇಂದ್ರ, ರುದ್ರ, ಹರಿಪ್ರಮುಖರಾದ ದೇವತೆಗಳ ಮುಖಗಳನ್ನು ಕಟಾಕ್ಷಿಸುತ್ತ ಆ ದೇವಿಯು ಮುಂದೆ ಹೊರಟಳು. ಮಹಾ ಪ್ರಕಾಶಮಾನಗಳಾದ ಪಂಚಸುಮಬಾಣಗಳಿಂದುದಿಸಿದ ದಿವ್ಯ ತೇಜಸ್ಸಿನಿಂದ ಆ ದೇವಿಯು ತ್ರಿಭುವನವನ್ನೂ ಜ್ಯೋತಿರ್ಮಯವನ್ನಾಗಿ ಮಾಡುತ್ತಿದ್ದಳು. ಆ ಸಮಯದಲ್ಲಿ ಮಿಂಚಿನ ಬಳ್ಳಿಗಳಿಗೆ ಸಮಾನವಾದ ಕಾಂತಿಗಳುಳ್ಳ ಅಪ್ಸರೆಯರ ಸಮೂಹಗಳು ಜಯಮಂಗಳಸೂಚಕವಾದ ಲಾಜಾಕ್ಷತೆಗಳನ್ನು ಆಕೆಯಮೇಲೆ ಚೆಲ್ಲುತ್ತಿದ್ದರು.

೯-೧೦. ಕಮನೀಯ ಕಾಂತಿಸಂಪನ್ನೆಯರಾಗಿ ಯುದ್ಧಕ್ಕೆ ತಕ್ಕ ವೇಷಗಳನ್ನು ಅಳವಡಿಸುವುದರಲ್ಲಿ ಚತುರೆಯರಾಗಿ, ಪ್ರಜ್ವಲಿಸುತ್ತಿರುವ ತಮ್ಮ

ಶ್ರೀಚಕ್ರನಾಮತಿಲಕಂ ದಶಯೋಜನಾತಿ-
ತುಂಗಧ್ವಜೋಲ್ಲಿಖಿತಮೇಘಕದಂಬಮುಚ್ಚೈಃ ।
ತೀವ್ರಾಭಿರಾವರಣಶಕ್ತಿ ಪರಂಪರಾಭಿ-
ರ್ಯುಕ್ತಂ ರಥಂ ಸಮರಕರ್ಮಣಿಚಾಲಯಂತೀ ॥೧೦॥
ಪಂಚಾಧಿಕೈರ್ವಿಂಶತಿನಾಮ ರತ್ನೈಃ
ಪ್ರಪಂಚ ಪಾಪಪ್ರಶಮಾಯ ದಕ್ಷೈಃ ।
ಸಂಸ್ತೂಯಮಾನಾ ಲಲಿತಾ ಮರುದ್ಭಿಃ
ಸಂಗ್ರಾಮಮುದ್ದಿಶ್ಯ ಸಮುಚ್ಚಚಾಲ ॥ ೧೧ ॥

ಅಗಸ್ತ್ಯಃ—

ವಾಜಿವಕ್ತ್ರ ಮಹಾಬುದ್ಧೇ ಪಂಚವಿಂಶತಿನಾಮಭಿಃ ।
ಲಲಿತಾಪರಮೇಶಾನ್ಯಾ ದೇಹಿ ಕರ್ಣರಸಾಯನಂ ॥ ೧೨ ॥

ಹಯಗ್ರೀವಃ—

ಸಿಂಹಾಸನೇಶೀ ಲಲಿತಾ ಮಹಾರಾಜ್ಞೀ ವರಾಂಕುಶಾ ।
ಚಾಪಿನೀ ತ್ರಿಪುರಾ ಚೈವ ಮಹಾತ್ರಿಪುರಸುಂದರೀ ॥ ೧೩ ॥

---

ಆಯುಧಗಳ ತೇಜಸ್ಸಿನಿಂದಲೇ ಸೂರ್ಯನ ತೇಜಸ್ಸನ್ನೂ ತಿರಸ್ಕರಿಸುತ್ತಿರುವ ಕಾಮೇಶ್ವರಿಯೇ ಮೊದಲಾದ ನಿತ್ಯದೇವಿಯರು ಆ ಲಲಿತಾಂಬಿಕೆಯ ಪಾದಸಮೀಪದಲ್ಲಿಯೇ ಸೇವೆಯನ್ನು ಸಲ್ಲಿಸುತ್ತಿದ್ದರು. ಹತ್ತು ಹರಿದಾರಿಗಳಷ್ಟು ಎತ್ತರವಾಗಿ, ಮೇಘಮಂಡಲವನ್ನೇ ಒರೆಯುತ್ತಿರುವ ಶ್ರೀಚಕ್ರವೆಂಬ ತಿಲಕವುಳ್ಳ ಉನ್ನತಧ್ವಜದಿಂದ ಶೋಭಿಸುತ್ತಿರುವುದಾಗಿಯೂ, ಮಹಾತೀಕ್ಷ್ಣೆಯರಾದ ಆವರಣಶಕ್ತಿ ದೇವಿಯರ ಸಾಲುಗಳಿಂದ ಕೂಡಿ ಸರ್ವಸಮೃದ್ಧವಾಗಿಯೂ ಇರುವ ದಿವ್ಯರಥವನ್ನು ನಡೆಸುತ್ತ ಆ ದೇವಿಯು ಸಮರಸನ್ನದ್ಧೆಯಾಗಿ ಹೊರಟಳು.

೧೧. ಆ ಸಮಯದಲ್ಲಿ ಸಮಸ್ತ ದೇವತೆಗಳೂ, ಪ್ರಪಂಚದ ಪಾಪವನ್ನೇ ಹೋಗಲಾಡಿಸುವುದರಲ್ಲಿ ಸಮರ್ಥಗಳಾದ ಇಪ್ಪತ್ತೈದು ನಾಮರತ್ನಗಳಿಂದ ಆ ಲಲಿತಾಂಬಿಕೆಯನ್ನು ಸ್ತುತಿಸುತ್ತಿರಲು ಆಕೆಯು ಭಂಡಾಸುರನ ಸಂಹಾರಕ್ಕಾಗಿ ಪ್ರಯಾಣಮಾಡಿದಳು.

೧೨. ಅಗಸ್ತ್ಯನು ಕೇಳುತ್ತಾನೆ:—"ಮಹಾಬುದ್ಧಿಶಾಲಿಯಾದ ಹಯಗ್ರೀವಮೂರ್ತಿಯೇ! ದೇವತೆಗಳು ಸ್ತುತಿಸಿದ ಶ್ರೀಲಲಿತಾಪರಮೇಶ್ವರಿಯ ಆ ಇಪ್ಪತ್ತೈದು ನಾಮಗಳಾವುವು? ಕರ್ಣರಸಾಯನವಾದ ಆ ದಿವ್ಯನಾಮಗಳನ್ನು ನನಗೆ ಅಪ್ಪಣೆಕೊಡಿಸಬೇಕು."

೧೩-೧೭. ಹಯಗ್ರೀವ ಮುನಿಯು ಹೇಳುತ್ತಾನೆ:— ಅಗಸ್ತ್ಯ

**ಸುಂದರೀ ಚಕ್ರನಾಥಾ ಚ ಸಮ್ರಾಜ್ಞೀ ಚಕ್ರಿಣೀ ತಥಾ ।**
**ಚಕ್ರೇಶ್ವರೀ ಮಹಾದೇವೀ ಕಾಮೇಶೀ ಪರಮೇಶ್ವರೀ ॥ ೧೪ ॥**
**ಕಾಮರಾಜಪ್ರಿಯಾ ಕಾಮಕೋಟಿಕಾ ಚಕ್ರವರ್ತಿನೀ ।**
**ಮಹಾವಿದ್ಯಾ ಶಿವಾನಂಗವಲ್ಲಭಾ ಸರ್ವಪಾಟಲಾ ॥ ೧೫ ॥**
**ಕುಲನಾಥಾಮ್ನಾಯನಾಥಾ ಸರ್ವಾಮ್ನಾಯನಿವಾಸಿನೀ ।**
**ಶೃಂಗಾರನಾಯಿಕಾ ಚೇತಿ ಪಂಚವಿಂಶತಿನಾಮಭಿಃ ॥ ೧೬ ॥**
**ಸ್ತುವಂತಿ ಯೇ ಮಹಾಭಾಗಾಂ ಲಲಿತಾಂ ಪರಮೇಶ್ವರೀಂ ।**
**ತೇ ಪ್ರಾಪ್ನುವಂತಿ ಸೌಭಾಗ್ಯಮಷ್ಟೌ ಸಿದ್ಧೀರ್ಮಹದ್ಯಶಃ ॥ ೧೭ ॥**
**ಇತಿ ಪ್ರಚಂಡಸಂರಂಭಂ ಚಾಲಯಂತೀ ಮಹದ್ಬಲಂ ।**
**ಭಂಡಾಸುರಂ ಪ್ರತಿಕ್ರುದ್ಧಾ ಚಚಾಲ ಲಲಿತಾಂಬಿಕಾ ॥ ೧೮ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ**
**ಸಂವಾದೇ ಶ್ರೀ ಲಲಿತೋಪಾಖ್ಯಾನೇ**
**ತ್ರಯೋದಶೋಽಧ್ಯಾಯಃ**

---

ಮುನಿಯೇ! ಕೇಳು; ಸಿಂಹಾಸನೇಶ್ವರೀ, ಲಲಿತಾ, ಮಹಾರಾಜ್ಞೀ, ವರಾಂಕುಶಾ, ಚಾಪಿನೀ, ತ್ರಿಪುರಾ, ಮಹಾತ್ರಿಪುರಸುಂದರೀ, ಸುಂದರೀ, ಚಕ್ರನಾಥಾ, ಸಮ್ರಾಜ್ಞೀ, ಚಕ್ರಿಣೀ, ಚಕ್ರೇಶ್ವರೀ, ಮಹಾದೇವೀ, ಕಾಮೇಶೀ, ಪರಮೇಶ್ವರೀ, ಕಾಮರಾಜಪ್ರಿಯಾ, ಕಾಮಕೋಟಿಕಾ, ಚಕ್ರವರ್ತಿನೀ, ಮಹಾವಿದ್ಯಾ, ಶಿವಾನಂಗವಲ್ಲಭಾ, ಸರ್ವಪಾಟಲಾ, ಕುಲನಾಥಾ, ಆಮ್ನಾಯನಾಥಾ, ಸರ್ವಾಮ್ನಾಯನಿವಾಸಿನೀ, ಶೃಂಗಾರ ನಾಯಿಕಾ—ಎಂಬಿವೇ ಆ ಪಂಚವಿಂಶತಿ ನಾಮಗಳು. ಯಾರು ಈ ಪಂಚವಿಂಶತಿನಾಮಗಳಿಂದ ಮಹಾಭಾಗೆಯಾದ ಶ್ರೀಲಲಿತಾ ಪರಮೇಶ್ವರಿ ಯನ್ನು ಸ್ತುತಿಸುವರೋ ಅವರಿಗೆ ಸಕಲ ಸೌಭಾಗ್ಯಗಳೂ, ಅಷ್ಟಸಿದ್ಧಿ ಗಳೂ, ಮಹಾ ಯಶಸ್ಸೂ ದೊರಕುತ್ತದೆ.

೧೮. ಹೀಗೆ ಶ್ರೀ ಲಲಿತಾಂಬಿಕೆಯು ಆ ಭಂಡಾಸುರನಲ್ಲಿ ಕ್ರುದ್ಧೆ ಯಾಗಿ ಪ್ರಚಂಡ ಸಂರಂಭದಿಂದ ತನ್ನ ಮಹಾಸೇನೆಯನ್ನು ನಡೆಸುತ್ತ ಹೊರಟಳು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

[ಶ್ರೀ ಚಕ್ರರಾಜಗೇಯ ಚಕ್ರರಥಪರ್ವದೇವತಾ ವರ್ಣನಂ]

ಶ್ರೀಚಕ್ರೇ ನವರತ್ನಜಾಲವಿಲಸದ್ಧೇಮೈಕ ಸಿಂಹಾಸನೇ
ತೀವ್ರಾಭಿರ್ವರ ಚಕ್ರಮಧ್ಯವಿಲಸದ್ಗಂಭೀರಸಚ್ಛಕ್ತಿಭಿಃ ।
ಶಕ್ತಿರ್ಯಾ ಲಲಿತಾಂಬಿಕಾದ್ಭುತ ಮಹಾಭಂಡಂ ಪ್ರತಿ ಪ್ರಸ್ಥಿತಾ
ತಾಂ ತ್ರೈಲೋಕ್ಯಕುಟುಂಬಿನೀಂ ಭವಸತೀಂ ಶ್ರೀಮೀನನೇತ್ರಾಂ ಭಜೇ ॥

ಅಗಸ್ತ್ಯಃ—

**ಚಕ್ರರಾಜರಥೇಂದ್ರಸ್ಯ ಯಾಃ ಪರ್ವಣಿ ಸಮಾಶ್ರಿತಾಃ ।**
**ದೇವತಾಃ ಪ್ರಕಟಾ ಮುಖ್ಯಾಸ್ತಾಸಾಮಾಖ್ಯಾಶ್ಚ ಮೇ ವದ ॥ ೧ ॥**
**ಸಂಖ್ಯಾಶ್ಚ ತಾಸಾಮಖಿಲಾನ್ವರ್ಣ ಭೇದಾಂಶ್ಚ ಶೋಭನಾನ್ ।**
**ಆಯುಧಾನಿ ಚ ದಿವ್ಯಾನಿ ಕಥಯಸ್ವ ಹಯಾನನ ॥ ೨ ॥**

ಹಯಗ್ರೀವಃ—

**ನವಮಂ ಪರ್ವ ದೀಪ್ತಸ್ಯ ರಥಸ್ಯ ಸಮುಪಾಶ್ರಿತಾಃ ।**
**ದಶ ಪ್ರೋಕ್ತಾಃ ಸಿದ್ಧಿದೇವ್ಯಸ್ತಾಸಾಂ ನಾಮಾನಿ ಮಚ್ಛೃಣು ॥ ೩ ॥**

---

### ಕನ್ನಡದ ಅನುವಾದ

[ಶ್ರೀ ಚಕ್ರರಾಜರಥ ಮತ್ತು ಗೇಯಚಕ್ರರಥಗಳ ಪರ್ವದೇವತಾ ವರ್ಣನ]

೧-೨. ಅಗಸ್ತ್ಯಮುನಿಯು ಹೇಳುತ್ತಾನೆ:—"ಎಲೈ ಅಶ್ವಾನನೇ! ಶ್ರೀ ಚಕ್ರರಾಜರಥದ ಪರ್ವಗಳನ್ನಾಶ್ರಯಿಸಿ ಪ್ರಕಟವಾಗಿರುವ ಮುಖ್ಯ ದೇವತೆಗಳ ದಿವ್ಯನಾಮಗಳಾವುವು? ಆ ದೇವತೆಗಳ ಸಂಖ್ಯೆಯೆಷ್ಟು? ಮಂಗಳಪ್ರದೆಯರಾದ ಆ ದೇವತೆಗಳ ವರ್ಣಭೇದಗಳೇನು? ಅವರ ದಿವ್ಯಾಯುಧಗಳಾವುವು? ಈ ಎಲ್ಲ ಸಂಗತಿಯನ್ನೂ ನನಗೆ ತಿಳಿಯ ಹೇಳಬೇಕು."

೩. ಹಯಗ್ರೀವನು ಹೇಳುತ್ತಾನೆ:—ಅಯ್ಯಾ ಅಗಸ್ತ್ಯಮುನಿಯೇ! ಶ್ರೀ ಚಕ್ರರಾಜರಥದ ಮಹಾಕಾಂತಿಯುಕ್ತವಾದ ಒಂಬತ್ತನೆಯ ಪರ್ವವನ್ನಾಶ್ರಯಿಸಿರುವ ಸಿದ್ಧಿದೇವಿಯರು ಹತ್ತು ಮಂದಿಯೆಂದು ಹೇಳಿದೆ. ಅವರ ಹೆಸರುಗಳನ್ನು ಹೇಳುವೆನು; ಕೇಳು.

ಅಣಿಮಾ ಮಹಿಮಾ ಚೈವ ಲಘಿಮಾ ಗರಿಮಾ ತಥಾ ।
ಈಶಿತಾ ವಶಿತಾ ಚೈವ ಪ್ರಾಪ್ತಿಃ ಸಿದ್ಧಿಶ್ಚ ಸಪ್ತಮಿ ॥ ೪ ॥
ಪ್ರಾಕಾಮ್ಯಾ ಮುಕ್ತಿಸಿದ್ಧಿಶ್ಚ ಸರ್ವಕಾಮಾಭಿಧಾ ಪರಾ ।
ಏತಾದೇವ್ಯಶ್ಚತುರ್ಬಾಹಾ ಜಪಾಕುಸುಮಸಂನಿಭಾಃ ॥ ೫ ॥
ಚಿಂತಾಮಣಿಂ ಕಪಾಲಂ ಚ ತ್ರಿಶೂಲಂ ಸಿದ್ಧಿಕಜ್ಜಲಂ ।
ದಧಾನಾ ದಯಯಾ ಪೂರ್ಣಾ ಯೋಗಿಭಿಶ್ಚ ನಿಷೇವಿತಾಃ ॥ ೬ ॥
ತತ್ರ ಪರ್ವೋರ್ಧ್ವಭಾಗೇ ಚ ಬ್ರಾಹ್ಮ್ಯಾದ್ಯಾ ಅಷ್ಟ ಶಕ್ತಯಃ ।
ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ॥ ೭ ॥
ವಾರಾಹೀ ಚೈವ ಮಾಹೇಂದ್ರೀ ಚಾಮುಂಡಾ ಚೈವ ಸಪ್ತಮಿ ।
ಮಹಾಲಕ್ಷ್ಮೀರಷ್ಟಮಿ ಚ ದ್ವಿಭುಜಾಃ ಶೋಣವಿಗ್ರಹಾಃ ।
ಕಪಾಲಮುತ್ಪಲಂ ಚೈವ ಬಿಭ್ರಾಣಾ ರಕ್ತವಾಸಸಃ ॥ ೮ ॥
ಅಥವಾನ್ಯಪ್ರಕಾರೇಣ ಕೇಚಿದ್ಧ್ಯಾನಂ ಪ್ರಚಕ್ಷತೇ ।
ಬ್ರಹ್ಮಾದಿಸದೃಶಾಕಾರಾ ಬ್ರಹ್ಮಾದಿಸದೃಶಾಯುಧಾಃ ॥ ೯ ॥
ಬ್ರಹ್ಮಾದೀನಾಂ ಪರಂ ಚಿಹ್ನಂ ಧಾರಯಂತ್ಯಃ ಪ್ರಕೀರ್ತಿತಾಃ ।
ತಸ್ಯಾಪ್ಯೂರ್ಧ್ವಸ್ಥಾನಗತಾ ಮುದ್ರಾದೇವ್ಯೋ ಮಹತ್ತರಾಃ ॥ ೧೦ ॥

---

೪-೫. ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಈಶಿತಾ, ವಶಿತಾ, ಪ್ರಾಪ್ತಿ, ಪ್ರಾಕಾಮ್ಯಾ, ಮುಕ್ತಿಸಿದ್ಧಿ, ಸರ್ವಕಾಮಾ—ಈ ಸಿದ್ಧಿ ದೇವಿಯರೆಲ್ಲರೂ ಚತುರ್ಬಾಹುಸಮನ್ವಿತೆಯರು; ಜಪಾಕುಸುಮಕಾಂತಿಯುಳ್ಳವರು.

೬. ಎಲ್ಲರೂ ಚಿಂತಾಮಣಿಯನ್ನೂ, ಕಪಾಲವನ್ನೂ, ತ್ರಿಶೂಲ ಮತ್ತು ಕಜ್ಜಲಗಳನ್ನೂ ಧರಿಸಿದವರು; ದಯಾಪೂರ್ಣೆಯರು. ಯೋಗಿಗಳು ಈ ಸಿದ್ಧಿದೇವಿಯರನ್ನು ಯಾವಾಗಲೂ ಸೇವಿಸುತ್ತಿರುವರು.

೭-೮. ಒಂಬತ್ತನೆಯ ಪರ್ವದ ಪೂರ್ವಕ್ಕೆ ಮೇಲ್ಭಾಗದಲ್ಲಿ ಬ್ರಾಹ್ಮಿಯೇ ಮೊದಲಾದ ಎಂಟು ಮಂದಿ ಶಕ್ತಿದೇವಿಯರಿರುವರು. ಅವರೇ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಮಾಹೇಂದ್ರೀ, ಚಾಮುಂಡಾ—ಎಂಟನೆಯ ದೇವತೆಯೇ ಮಹಾಲಕ್ಷ್ಮೀ. ಈ ಶಕ್ತಿದೇವಿಯರೆಲ್ಲರೂ ದ್ವಿಭುಜೆಯರು ; ರಕ್ತವರ್ಣವುಳ್ಳವರು ; ಎಲ್ಲರೂ ಕಪಾಲಗಳನ್ನೂ, ಕನ್ನೈದಿಲೆಗಳನ್ನೂ ಧರಿಸಿ ಕೆಂಪು ವಸ್ತ್ರಗಳನ್ನು ಉಟ್ಟಿರುವರು.

೯-೧೦. ಕೆಲವರು ಈ ದೇವಿಯರನ್ನು ಇನ್ನೊಂದು ರೀತಿ ಧ್ಯಾನ

**ಮುದ್ರಾವಿರಚನಾಯುಕ್ತೈರ್ಹಸ್ತೈಃ ಕಮಲಕಾಂತಿಭಿಃ ।**
**ದಾಡಿಮೀಪುಷ್ಪಸಂಕಾಶಾಃ ಪೀತಾಂಬರಮನೋಹರಾಃ ॥ ೧೧ ॥**
**ಚತುರ್ಭುಜಾ ಭುಜದ್ವಂದ್ವಧೃತಚರ್ಮಕೃಪಾಣಿಕಾಃ ।**
**ಮದರಕ್ತವಿಲೋಲಾಕ್ಷ್ಯಸ್ತಾಸಾಂ ನಾಮಾನಿ ಮಚ್ಛೃಣು ॥ ೧೨ ॥**
**ಸರ್ವಸಂಕ್ಷೋಭಿಣೀ ಚೈವ ಸರ್ವವಿದ್ರಾವಿಣೀ ತಥಾ ।**
**ಸರ್ವಾಕರ್ಷಿಣಿಕಾ ಮುದ್ರಾ ತಥಾ ಸರ್ವವಶಂಕರೀ ॥ ೧೩ ॥**
**ಸರ್ವೋನ್ಮಾದನಮುದ್ರಾ ಚ ಷಷ್ಠೀ ಸರ್ವಮಹಾಂಕುಶಾ ।**
**ಸರ್ವಖೇಚರಮುದ್ರಾ ಚ ಸರ್ವಬೀಜಾ ತಥಾಪರಾ ॥ ೧೪ ॥**
**ಸರ್ವಯೋನಿಶ್ಚ ನವಮೀ ತಥಾ ಸರ್ವತ್ರಿಖಂಡಿಕಾ ।**
**ಸಿದ್ಧಿಬ್ರಾಹ್ಮ್ಯಾದಿಮುದ್ರಾಶ್ಚ ಹ್ಯೇತಾಃ ಪ್ರಕಟಶಕ್ತಯಃ ॥ ೧೫ ॥**

---

ಮಾಡುತ್ತಾರೆ. ಅವರ ಧ್ಯಾನದಂತೆ, ಈ ದೇವಿಯರೆಲ್ಲರೂ ಅವರವರ ಹೆಸರುಗಳಿಗೆ ತಕ್ಕಂತೆ ಬ್ರಹ್ಮಾದಿದೇವತೆಗಳ ಆಕಾರವುಳ್ಳವರಾಗಿಯೂ, ಅವರ ಆಯುಧಗಳಿಗೆ ಸಮಾನವಾದ ಆಯುಧಗಳುಳ್ಳವರಾಗಿಯೂ, ಅವರ ಗುರುತುಗಳನ್ನೇ ಧರಿಸಿದವರಾಗಿಯೂ ಇರುವರೆಂದು ಹೇಳಿದೆ. ಈ ಒಂಬತ್ತನೆಯ ಪರ್ವಕ್ಕೂ ಮೇಲ್ಪಟ್ಟ ಸ್ಥಾನದಲ್ಲಿ ಮಹತ್ತರೆಯರಾದ ಮುದ್ರಾದೇವಿಯರು ನೆಲಸಿರುವರು.

೧೧. ಇವರೆಲ್ಲರೂ ಮುದ್ರೆಗಳನ್ನು ವಿರಚಿಸಿರುವ ಕಮಲ ಸದೃಶವಾದ ಹಸ್ತಗಳುಳ್ಳವರಾಗಿ ದಾಳಿಂಬರೆ ಹೂವಿನ ಕಾಂತಿಯನ್ನೊಳಗೊಂಡು, ಪೀತಾಂಬರವನ್ನುಟ್ಟು ಮನೋಹರೆಯರಾಗಿ ಕಂಗೊಳಿಸುತ್ತಿರುವರು.

೧೨. ಇವರೆಲ್ಲರೂ ಚತುರ್ಭುಜೆಯರು; ಎರಡೂ ಕೈಗಳಲ್ಲಿ ಚರ್ಮದ ಒರೆಯನ್ನೂ ಕತ್ತಿಯನ್ನೂ ಹಿಡಿದಿರುವವರು; ಮದದಿಂದ ಕೆಂಪೂಗೆದು ಆಲುತ್ತಿರುವ ಕಣ್ಣುಗಳುಳ್ಳವರು. ಇವರ ಹೆಸರುಗಳನ್ನು ಹೇಳುತ್ತೇನೆ ಕೇಳು.

೧೩-೧೫. ಸರ್ವಸಂಕ್ಷೋಭಿಣೀ, ಸರ್ವವಿದ್ರಾವಿಣೀ, ಸರ್ವಾಕರ್ಷಿಣಿಕಾ, ಸರ್ವವಶಂಕರೀ, ಸರ್ವೋನ್ಮಾದನಾ, ಸರ್ವಮಹಾಂಕುಶಾ, ಸರ್ವಖೇಚರಾ, ಸರ್ವಬೀಜಾ, ಸರ್ವಯೋನಿ, ಸರ್ವತ್ರಿಖಂಡಿಕಾ, ಸಿದ್ಧಿ, ಬ್ರಾಹ್ಮೀ—ಇವರೆಲ್ಲರೂ ಪ್ರಕಟೆಯರಾದ ಶಕ್ತಿದೇವಿಯರು.

ಭಂಡಾಸುರಸ್ಯ ಸಂಹಾರಂ ಕರ್ತುಂ ಚಕ್ರರಥೇ ಸ್ಥಿತಾಃ । [ ೧೬ ॥
ಯಾಗುಪ್ತಾಖ್ಯಾಃ ಪೂರ್ವಮುಕ್ತಾಸ್ತಾಸಾಂ ನಾಮಾನಿ ಮಚ್ಛೃಣು॥
ಕಾಮಾಕರ್ಷಿಣಿಕಾ ಚೈವ ಬುದ್ಧ್ಯಾಕರ್ಷಿಣಿಕಾ ಕಲಾ ।
ಅಹಂಕಾರಾಕರ್ಷಿಣೀ ಚ ಶಬ್ದಾಕರ್ಷಿಣಿಕಾ ಕಲಾ ॥ ೧೭ ॥
ಸ್ಪರ್ಶಾಕರ್ಷಿಣಿಕಾ ನಿತ್ಯಾ ರೂಪಾಕರ್ಷಿಣಿಕಾ ಕಲಾ ।
ರಸಾಕರ್ಷಿಣಿಕಾ ಚೈವ ಗಂಧಾಕರ್ಷಿಣಿಕಾ ಕಲಾ ॥ ೧೮ ॥
ಚಿತ್ತಾಕರ್ಷಿಣಿಕಾ ಚೈವ ಧೈರ್ಯಾಕರ್ಷಿಣಿಕಾ ಕಲಾ ।
ಸ್ಮೃತ್ಯಾಕರ್ಷಿಣಿಕಾ ನಿತ್ಯಾ ನಾಮಾಕರ್ಷಿಣಿಕಾ ಕಲಾ ॥ ೧೯ ॥
ಬೀಜಾಕರ್ಷಿಣಿಕಾ ನಿತ್ಯಾ ಚಾತ್ಮಾಕರ್ಷಿಣಿಕಾ ಕಲಾ ।
ಅಮೃತಾಕರ್ಷಿಣೀ ನಿತ್ಯಾ ಶರೀರಾಕರ್ಷಿಣೀ ಕಲಾ ॥ ೨೦ ॥
ಏತಾಃ ಷೋಡಶ ಶೀತಾಂಶೋಃ ಕಲಾರೂಪಾಶ್ಚ ಶಕ್ತಯಃ ।
ಅಷ್ಟಮಂ ಪರ್ವ ಸಂಪ್ರಾಪ್ತಾ ಗುಪ್ತಾ ನಾಮ್ನಾ ಪ್ರಕೀರ್ತಿತಾಃ॥
ವಿದ್ರುಮದ್ರುಮಸಂಕಾಶಾ ಮಂದಪ್ರಹಸಿತಾನನಾಃ । [ ೨೧ ॥
ಚತುರ್ಭುಜಾಸ್ತ್ರಿಣೇತ್ರಾಶ್ಚ ಚಂದ್ರಾರ್ಧಮುಕುಟೋಜ್ಜ್ವಲಾಃ॥
ಚಾಪಬಾಣೌ ಚರ್ಮಖಡ್ಗೌ ದಧಾನಾ ದಿವ್ಯಕಾಂತಯಃ ।
ಭಂಡಾಸುರವಧಾರ್ಥಾಯ ಪ್ರವೃತ್ತಾಃ ಕುಂಭಸಂಭವ ॥ ೨೩ ॥

---

೧೬. ಇನ್ನೂ ಕೆಲವು ಮಂದಿ ಶಕ್ತಿದೇವಿಯರು ಶ್ರೀಚಕ್ರರಥದಲ್ಲಿ ಗುಪ್ತವಾಗಿ ನೆಲಸಿ ಭಂಡಾಸುರನ ವಧೆಯಲ್ಲಿ ತೊಡಗಿರುವರೆಂದು ನಾನು ಹಿಂದೆಯೇ ಹೇಳಿದ್ದೆನಷ್ಟೆ. ಅವರ ಹೆಸರುಗಳನ್ನು ಹೇಳುವೆನು; ಕೇಳು.

೧೭-೨೧. ಕಾಮಾಕರ್ಷಣಿಕಾ, ಬುದ್ಧ್ಯಾಕರ್ಷಣಿಕಾ, ಅಹಂಕಾರಾಕರ್ಷಿಣಿಕಾ, ಶಬ್ದಾಕರ್ಷಿಣಿಕಾ, ರೂಪಾಕರ್ಷಿಣಿಕಾ, ರಸಾಕರ್ಷಿಣಿಕಾ, ಗಂಧಾಕರ್ಷಿಣಿಕಾ, ಚಿತ್ತಾಕರ್ಷಿಣಿಕಾ, ಧೈರ್ಯಾಕರ್ಷಿಣಿಕಾ, ಸ್ಮೃತ್ಯಾಕರ್ಷಿಣಿಕಾ, ನಾಮಾಕರ್ಷಿಣಿಕಾ, ಬೀಜಾಕರ್ಷಿಣಿಕಾ, ಆತ್ಮಾಕರ್ಷಿಣಿಕಾ, ಅಮೃತಾಕರ್ಷಿಣಿಕಾ, ಶರೀರಾಕರ್ಷಿಣಿಕಾ:— ಇವರೆಲ್ಲರೂ ಚಂದ್ರನ ಹದಿನಾರು ಕಲೆಗಳ ರೂಪವನ್ನೊಳಗೊಂಡವರು; ಇವರೇ ಶ್ರೀಚಕ್ರರಥದ ಎಂಟನೆಯ ಪರ್ವದಲ್ಲಿ ನೆಲಸಿರುವ ಶಕ್ತಿದೇವತೆಗಳು.

೨೨-೨೩. ಅಯ್ಯಾ ಕುಂಭಸಂಭವನೇ! ಈ ದೇವತೆಗಳೆಲ್ಲರೂ ಹವಳದ ಬಳ್ಳಿಯ ಕಾಂತಿಯುಳ್ಳವರು; ಮೆಲುನಗೆಯ ಮುಖಗಳುಳ್ಳವರು; ನಾಲ್ಕು ಭುಜಗಳೂ, ಮೂರು ಕಣ್ಣುಗಳೂ ಉಳ್ಳವರಾಗಿ ಅರ್ಧ

ಸಾಯಂತನಜ್ವಲದ್ದೀಪಪ್ರಖ್ಯೇ ಚಕ್ರರಥಸ್ಯ ತು ।
ಸಪ್ತಮೇ ಪರ್ವಣಿ ಕೃತಾವಾಸಾ ಗುಪ್ತತರಾಭಿಧಾಃ ।
ಅನಂಗಶಕ್ತಯಸ್ತ್ವಷ್ಟೌ ತಾಸಾಂ ನಾಮಾನಿ ಮಚ್ಛೃಣು ॥ ೨೪ ॥
ಅನಂಗಕುಸುಮಾನಂಗಮೇಖಲಾ ಚ ದ್ವಿತೀಯಕಾ ।
ಅನಂಗಮದನಾನಂಗಮದನಾತುರಯಾ ಸಹ ॥ ೨೫ ॥
ಅನಂಗರೇಖಾ ಚಾನಂಗವೇಗಾಽನಂಗಾಂಕುಶಾಪಿ ಚ ।
ಅನಂಗಮಾಲಿನ್ಯಪರಾ ಏತಾ ದೇವ್ಯೋ ಜಪಾತ್ವಿಷಃ ॥ ೨೬ ॥
ಇಕ್ಷುಚಾಪಂ ಪುಷ್ಪಶರಾನ್ ಪುಷ್ಪಕಂದುಕಮುತ್ಪಲಂ ।
ಬಿಭ್ರತ್ಯೋಽದಭ್ರವಿಕ್ರಾಂತಿಶಾಲಿನ್ಯೋ ಲಲಿತಾಜ್ಞಯಾ ॥ ೨೭ ॥
ಭಂಡಾಸುರಂ ಪ್ರತಿಕ್ರುದ್ಧಾಃ ಪ್ರಜ್ವಲಂತ್ಯ ಇವ ಸ್ಥಿತಾಃ ।
ಚಕ್ರರಾಜರಥೇಂದ್ರಸ್ಯ ಷಷ್ಠಂ ಪರ್ವ ಸಮಾಶ್ರಿತಾಃ ॥ ೨೮ ॥

---

ಚಂದ್ರಕಿರೀಟದಿಂದ ಬೆಳಗುತ್ತಿರುವವರು; ನಾಲ್ಕೂ ಕೈಗಳಲ್ಲಿ ಬಿಲ್ಲು ಬಾಣಗಳನ್ನೂ, ಒರೆಕತ್ತಿಗಳನ್ನೂ ಧರಿಸಿ ದಿವ್ಯಕಾಂತಿಯುಳ್ಳವರಾಗಿ ಬೆಳಗುತ್ತಿರುವವರು; ಇವರು ಭಂಡಾಸುರನ ವಧೆಗಾಗಿಯೇ ಹೊರ ಟಿರುವವರು.

೨೪. ಇನ್ನು, ಸಂಧ್ಯಾಕಾಲದಲ್ಲಿ ಪ್ರಜ್ವಲಿಸುವ ದೀಪದಂತೆ ಬೆಳಗುತ್ತಿರುವ ಆ ಶ್ರೀಚಕ್ರರಥದ ಏಳನೆಯ ಪರ್ವದಲ್ಲಿ ವಾಸಮಾಡುತ್ತಿರುವ ಶಕ್ತಿ ದೇವಿಯರು ಗುಪ್ತತರೆಯರೆನಿಸುವರು. ಇವರೆಲ್ಲರೂ ಅನಂಗಶಕ್ತಿಗಳು; ಸಂಖ್ಯೆಯಲ್ಲಿ ಇವರು ಎಂಟು ಮಂದಿ. ಇವರ ಹೆಸರುಗಳನ್ನು ಕೇಳು.

೨೫-೨೬. ಅನಂಗಕುಸುಮಾ, ಅನಂಗಮೇಖಲಾ, ಅನಂಗಮದನಾ, ಅನಂಗಮದನಾತುರಾ, ಅನಂಗರೇಖಾ, ಅನಂಗವೇಗಾ, ಅನಂಗಾಂಕುಶಾ, ಅನಂಗಮಾಲಿನೀ — ಈ ಅನಂಗಶಕ್ತಿ ದೇವಿಯರೆಲ್ಲರೂ ಜಪಾಕುಸುಮ ಕಾಂತಿಯುಳ್ಳವರು.

೨೭-೨೮. ಇವರು ಕಬ್ಬಿನ ಬಿಲ್ಲನ್ನೂ, ಹೂವಂಬುಗಳನ್ನೂ ಚೆಂಡು ಕನ್ನೈದಿಲೆಗಳನ್ನೂ ಹಿಡಿದಿರುವವರು; ಮಹಾಪರಾಕ್ರಮಶಾಲಿನಿಯರು. ಎಲೈ ಮುನಿಯೇ! ಇನ್ನು ಶ್ರೀ ಲಲಿತಾದೇವಿಯ ಆಜ್ಞೆಯಿಂದ ಭಂಡಾಸುರನ ವಿಷಯದಲ್ಲಿ ಕ್ರುದ್ಧರಾಗಿ, ಪ್ರಜ್ವಲಿಸುತ್ತ ಆ ದೇವಿಯ ದಿವ್ಯರಥದ ಆರನೆಯ ಪರ್ವದಲ್ಲಿ ನೆಲಸಿರುವ ಶಕ್ತಿದೇವಿಯರ ವಿಷಯ ವನ್ನು ಹೇಳುವೆನು, ಕೇಳು.

ಸರ್ವಸಂಕ್ಷೋಭಿಣೀಮುಖ್ಯಾಃ ಸಂಪ್ರದಾಯಾಖ್ಯಯಾ ಯುತಾಃ ।
ವೇಣೀಕೃತಕಚಸ್ತೋಮಾಃ ಸಿಂದೂರತಿಲಕೋಜ್ಜ್ವಲಾಃ ॥ ೨೯ ॥
ಅತಿತೀವ್ರಸ್ವಭಾವಾಶ್ಚ ಕಾಲಾನಲಸಮತ್ವಿಷಃ ।
ವಹ್ನಿಚಾಪಂ ವಹ್ನಿಬಾಣಂ ವಹ್ನಿರೂಪಮಸಿಂ ತಥಾ ॥ ೩೦ ॥
ವಹ್ನಿಚಕ್ರಾಖ್ಯಫಲಕಂ ದಧಾನಾ ದೀಪ್ತವಿಗ್ರಹಾಃ ।
ಅಸುರೇಂದ್ರಂ ಪ್ರತಿಕ್ರುದ್ಧಾಃ ಕಾಮಭಸ್ಮಸಮುದ್ಭವಂ ।
ಆಜ್ಞಾಶಕ್ತಯ ಏವೈತಾ ಲಲಿತಾಯಾ ಮಹೌಜಸಃ ॥ ೩೧ ॥
ಸರ್ವಸಂಕ್ಷೋಭಿಣೀ ಚೈವ ಸರ್ವವಿದ್ರಾವಿಣೀ ತಥಾ ।
ಸರ್ವಾಕರ್ಷಣಿಕಾ ಶಕ್ತಿಃ ಸರ್ವಾಹ್ಲಾದನಿಕಾ ತಥಾ ॥ ೩೨ ॥
ಸರ್ವಸಂಮೋಹಿನೀ ಶಕ್ತಿಃ ಸರ್ವಸ್ತಂಭನಶಕ್ತಿಕಾ ।
ಸರ್ವಜೃಂಭಣಶಕ್ತಿಶ್ಚ ತಥಾ ಸರ್ವವಶಂಕರೀ ॥ ೩೩ ॥
ಸರ್ವರಂಜನಶಕ್ತಿಶ್ಚ ಸರ್ವೋನ್ಮಾದನಶಕ್ತಿಕಾ ।
ಸರ್ವಾರ್ಥಸಾಧನೀ ಶಕ್ತಿಃ ಸರ್ವಸಂಪತ್ತಿಪೂರಣೀ ॥ ೩೪ ॥
ಸರ್ವಮಂತ್ರಮಯೀ ಶಕ್ತಿಃ ಸರ್ವದ್ವಂದ್ವಕ್ಷಯಂಕರೀ ।
ಇತ್ಯೇವಂ ಸಂಪ್ರದಾಯಾನಾಂ ನಾಮಾನಿ ಕಥಿತಾನಿ ವೈ ॥ ೩೫ ॥

---

೨೯. ಈ ದೇವಿಯರು ಸರ್ವಸಂಕ್ಷೋಭಿಣಿಯೇ ಮುಂತಾದವರು; ಸಂಪ್ರದಾಯದೇವತೆಗಳೆಂದು ಪ್ರಸಿದ್ಧರಾದವರು; ಎಲ್ಲರೂ ಜಡೆ ಹೆಣೆದ ಕೇಶರಾಶಿಗಳುಳ್ಳವರು; ಸಿಂದೂರತಿಲಕಗಳನ್ನಿಟ್ಟು ಬೆಳಗುತ್ತಿರುವವರು.

೩೦-೩೧. ಈ ದೇವಿಯರೆಲ್ಲರೂ ಬಹಳ ತೀಕ್ಷ್ಣವಾದ ಸ್ವಭಾವವುಳ್ಳವರು; ಪ್ರಳಯಕಾಲದ ಯಜ್ಞೇಶ್ವರನಿಗೆ ಸಮಾನವಾದ ಕಾಂತಿಯುಳ್ಳವರು; ವಹ್ನಿಚಾಪ, ವಹ್ನಿಬಾಣ, ವಹ್ನಿರೂಪವಾದ ಖಡ್ಗಗಳನ್ನು ಧರಿಸಿ ವಹ್ನಿಚಕ್ರವೆಂಬ ಗುರಾಣಿಯನ್ನು ಹಿಡಿದು ಪ್ರಜ್ವಲಿಸುತ್ತಿರುವ ಶರೀರವುಳ್ಳವರಾಗಿ, ಮದನದಹನವಾದ ಬಳಿಕ ಆ ಬೆಂಬೂದಿಯಿಂದ ಹುಟ್ಟಿದ ಭಂಡಾಸುರನಲ್ಲಿ ಬಹಳವಾಗಿ ಕೋಪಗೊಂಡಿರುವರು. ಇವರೆಲ್ಲರೂ ಮಹಾತೇಜಸ್ಸಂಪನ್ನೆಯಾದ ಶ್ರೀ ಲಲಿತಾಪರಮೇಶ್ವರಿಯ ಆಜ್ಞಾಶಕ್ತಿಗಳೇ.

೩೨-೩೫. ಸರ್ವಸಂಕ್ಷೋಭಿಣೀ, ಸರ್ವವಿದ್ರಾವಿಣೀ, ಸರ್ವಾಕರ್ಷಣಿಕಾ, ಸರ್ವಾಹ್ಲಾದನಿಕಾ, ಸರ್ವಸಂಮೋಹಿನೀ, ಸರ್ವಸ್ತಂಭನಿಕಾ, ಸರ್ವಜೃಂಭಣಿಕಾ, ಸರ್ವವಶಂಕರೀ, ಸರ್ವರಂಜನಿಕಾ,

**ರಥಪಂಚಮ ಪರ್ವಸ್ಥಾಃ ಕುಲೋತ್ತೀರ್ಣಾ ಇತಿ ಸ್ಮೃತಾಃ ।**
**ತಾಶ್ಚ ಸ್ಫಟಿಕಸಂಕಾಶಾಃ ಪರಶುಂ ಪಾಶಮೇವ ಚ ॥ ೩೬ ॥**
**ಗದಾಂ ಘಂಟಾಂ ಮಣಿಂ ಚೈವ ದಧಾನಾ ದೀಪ್ತವಿಗ್ರಹಾಃ ।**
**ದೇವದ್ವಿಷಮಭಿಕ್ರುದ್ಧಾ ಭ್ರುಕುಟೀಕುಟಿಲಾನನಾಃ ।**
**ಏತಾಸಾಮಪಿ ನಾಮಾನಿ ಸಮಾಕರ್ಣಯ ಕುಂಭಜ ॥ ೩೭ ॥**
**ಸರ್ವಸಿದ್ಧಿಪ್ರದಾ ದೇವೀ ಸರ್ವಸಂಪತ್ಪ್ರದಾ ಪುನಃ ।**
**ಸರ್ವಪ್ರಿಯಂಕರೀ ದೇವೀ ಸರ್ವಮಂಗಲಕಾರಿಣೀ ॥ ೩೮ ॥**
**ಸರ್ವಕಾಮಪ್ರದಾ ದೇವೀ ಸರ್ವದುಃಖವಿಮೋಚಿನೀ ।**
**ಸರ್ವಮೃತ್ಯುಪ್ರಶಮನೀ ಸರ್ವವಿಘ್ನನಿವಾರಿಣೀ ॥ ೩೯ ॥**
**ಸರ್ವಾಂಗಸುಂದರೀ ದೇವೀ ಸರ್ವಸೌಭಾಗ್ಯದಾಯಿನೀ ।**
**ದಶೈತಾಃ ಕಥಿತಾ ದೇವ್ಯೋ ದಯಯಾ ಪೂರಿತಾಶಯಾಃ ॥ ೪೦ ॥**
**ಚಕ್ರೇ ತುರೀಯ ಪರ್ವಸ್ಥಾ ಮುಕ್ತಾಗೌರಸಮುತ್ವಿಷಃ ।**
**ನಿಗರ್ಭಯೋಗಿನೀನಾಮ್ನಾ ಪ್ರಥಿತಾ ದಶ ಕೀರ್ತಿತಾಃ ॥ ೪೧ ॥**

---

ಸರ್ವೋನ್ಮಾದನಿಕಾ, ಸರ್ವಾರ್ಥಸಾಧನೀ, ಸರ್ವಸಂಪತ್ತಿಪೂರಿಣೀ, ಸರ್ವಮಂತ್ರಮಯೀ, ಸರ್ವದ್ವಂದ್ವಕ್ಷಯಂಕರೀ ಎಂಬುದಾಗಿ ಈ ಸಂಪ್ರದಾಯ ಶಕ್ತಿದೇವಿಯರ ಹೆಸರುಗಳು.

೩೬-೩೭. ಎಲೈ ಕುಂಭಸಂಭವನೇ! ಇನ್ನು ಶ್ರೀಚಕ್ರರಾಜರಥದ ಐದನೆಯ ಪರ್ವದಲ್ಲಿರುವ ಶಕ್ತಿದೇವಿಯರು ಕುಲೋತ್ತೀರ್ಣದೇವತೆಯರೆಂದು ಪ್ರಖ್ಯಾತರಾದವರು. ಇವರೆಲ್ಲರೂ ಸ್ಫಟಿಕಕಾಂತಿಯುಳ್ಳವರು; ಗಂಡುಗೊಡಲಿಯನ್ನೂ, ಪಾಶವನ್ನೂ, ಗದೆ, ಘಂಟೆ, ಮಣಿಗಳನ್ನೂ ಧರಿಸಿ ಬೆಳಗುತ್ತಿರುವ ಶರೀರವುಳ್ಳವರು. ಎಲ್ಲರೂ ದೇವಶತ್ರುವಾದ ಭಂಡಾಸುರನ ವಿಷಯದಲ್ಲಿ ಕನಲಿ ಹುಬ್ಬುಗಂಟಿಕ್ಕಿದ ಮುಖಗಳುಳ್ಳವರಾಗಿರುವರು. ಇವರ ಹೆಸರುಗಳನ್ನೂ ಹೇಳುವೆನು, ಕೇಳು.

೩೮-೪೦. ಸರ್ವಸಿದ್ಧಿಪ್ರದಾ, ಸರ್ವಸಂಪತ್ಪ್ರದಾ, ಸರ್ವಪ್ರಿಯಂಕರೀ, ಸರ್ವಮಂಗಳಕಾರಿಣೀ, ಸರ್ವಕಾಮಪ್ರದಾ, ಸರ್ವದುಃಖವಿಮೋಚಿನೀ, ಸರ್ವಮೃತ್ಯುಪ್ರಶಮನೀ, ಸರ್ವವಿಘ್ನನಿವಾರಿಣೀ, ಸರ್ವಾಂಗಸುಂದರೀ, ಸರ್ವಸೌಭಾಗ್ಯದಾಯಿನೀ. ಈ ಹತ್ತು ಮಂದಿ ದೇವಿಯರೂ ದಯಾಪೂರ್ಣಹೃದಯರೆಂದು ಹೇಳುತ್ತಾರೆ.

೪೧. ಇನ್ನು ನಾಲ್ಕನೆಯ ಪರ್ವದಲ್ಲಿ ನೆಲಸಿರುವ ದೇವತೆಗಳೆಲ್ಲರೂ

ಸರ್ವಜ್ಞಾ ಸರ್ವಶಕ್ತಿಶ್ಚ ಸರ್ವೈಶ್ವರ್ಯಪ್ರದಾಯಿನೀ ।
ಸರ್ವಜ್ಞಾನಮಯೀ ದೇವೀ ಸರ್ವವ್ಯಾಧಿವಿನಾಶಿನೀ ॥ ೪೨ ॥
ಸರ್ವಾಧಾರಸ್ವರೂಪಾ ಚ ಸರ್ವಪಾಪಹರಾ ತಥಾ ।
ಸರ್ವಾನಂದಮಯೀ ದೇವೀ ಸರ್ವರಕ್ಷಾಸ್ವರೂಪಿಣೀ ।
ದಶಮೀ ದೇವತಾಜ್ಞೇಯಾ ಸರ್ವೇಪ್ಸಿತಫಲಪ್ರದಾ ॥ ೪೩ ॥
ಏತಾಶ್ಚತುರ್ಭುಜಾ ಜ್ಞೇಯಾ ವಜ್ರಂ ಶಕ್ತಿಂ ಚ ತೋಮರಂ ।
ಚಕ್ರಂ ಚೈವಾಭಿಬಿಭ್ರಾಣಾ ಭಂಡಾಸುರವಧೋದ್ಯತಾಃ ॥ ೪೪ ॥
ಅಥ ಚಕ್ರರಥೇಂದ್ರಸ್ಯ ತೃತೀಯಂ ಪರ್ವ ಸಂಶ್ರಿತಾಃ ।
ರಹಸ್ಯಯೋಗಿನೀ ನಾಮ್ನಾ ಪ್ರಖ್ಯಾತಾ ವಾಗಧೀಶ್ವರಾಃ ॥ ೪೫ ॥
ರಕ್ತಾಶೋಕಪ್ರಸೂನಾಭಾ ಬಾಣಕಾರ್ಮುಕಪಾಣಯಃ ।
ಕವಚಚ್ಛನ್ನಸರ್ವಾಂಗ್ಯೋ ವೀಣಾಪುಸ್ತಕಶೋಭಿತಾಃ ॥ ೪೬ ॥

---

ಮುತ್ತಿನಂತೆ ಗೌರವರ್ಣದ ಕಾಂತಿಯುಳ್ಳವರು. ನಿಗರ್ಭಯೋಗಿನಿಯರೆಂಬ ಹೆಸರಿನ ಈ ದೇವತೆಗಳು ಹತ್ತು ಮಂದಿಯೆಂದು ಪ್ರಸಿದ್ಧವಾಗಿರುವುದು.

೪೨-೪೩. ಸರ್ವಜ್ಞಾ, ಸರ್ವಶಕ್ತಿ, ಸರ್ವೈಶ್ವರ್ಯಪ್ರದಾಯಿನೀ, ಸರ್ವಜ್ಞಾನಮಯೀ, ಸರ್ವವ್ಯಾಧಿವಿನಾಶಿನೀ, ಸರ್ವಾಧಾರಸ್ವರೂಪಾ, ಸರ್ವಪಾಪಹರಾ, ಸರ್ವಾನಂದಮಯೀ, ಸರ್ವರಕ್ಷಾಸ್ವರೂಪಿಣೀ ಮತ್ತು, ಹತ್ತನೆಯ ದೇವತೆಯೇ ಸರ್ವೇಪ್ಸಿತಫಲಪ್ರದೆಯೆಂದು ತಿಳಿಯಬೇಕು.

೪೪. ಈ ದೇವಿಯರೆಲ್ಲರೂ ಚತುರ್ಭುಜೆಯರು; ವಜ್ರ, ಶಕ್ತಿ, ತೋಮರ, ಚಕ್ರ—ಇವೇ ಇವರ ಆಯುಧಗಳು. ಇವರೆಲ್ಲರೂ ಭಂಡಾಸುರನ ವಧೆಯಲ್ಲಿ ಉದ್ಯುಕ್ತರಾದವರು.

೪೫. ಇನ್ನು, ಶ್ರೀಚಕ್ರರಾಜರಥದ ಮೂರನೆಯ ಪರ್ವದಲ್ಲಿ ನೆಲಸಿರುವ ದೇವಿಯರು ರಹಸ್ಯಯೋಗಿನಿಯರೆಂದೂ, ವಾಗಧೀಶ್ವರಿಯರೆಂದೂ ಪ್ರಖ್ಯಾತರಾದವರು.

೪೬. ಇವರೆಲ್ಲರೂ ರಕ್ತಾಶೋಕಪುಷ್ಪಗಳಿಗೆ ಸಮಾನವಾದ ಕಾಂತಿಯುಳ್ಳವರು. ಬಿಲ್ಲುಬಾಣಗಳನ್ನು ಹಿಡಿದಿರುವ ಕರಕಮಲಗಳುಳ್ಳವರಾಗಿಯೂ, ಕವಚಗಳಿಂದ ಮುಚ್ಚಿದ ಮೈಯುಳ್ಳವರಾಗಿಯೂ, ವೀಣೆ, ಪುಸ್ತಕಗಳನ್ನು ಕೈಯಲ್ಲಿ ಹಿಡಿದವರಾಗಿಯೂ ಶೋಭಿಸುತ್ತಿರುವರು.

ವಶಿನೀ ಚೈವ ಕಾಮೇಶೀ ಮೋದಿನೀ ವಿಮಲಾ ತಥಾ ।
ಅರುಣಾ ಚ ಜಯಿನ್ಯಾಖ್ಯಾ ಸರ್ವೇಶೀ ಕೌಲಿನೀ ತಥಾ ।
ಅಷ್ಟಾವೇತಾಃ ಸ್ಮೃತಾ ದೇವ್ಯೋ ದೈತ್ಯಸಂಹಾರಮೃತ್ಯವಃ ॥ ೪೭ ॥
ಅಥ ಚಕ್ರರಥೇಂದ್ರಸ್ಯ ದ್ವಿತೀಯಂ ಪರ್ವ ಸಂಶ್ರಿತಾಃ ।
ತಿಸ್ರಸ್ತ್ರಿಪೀಠನಿಲಯಾ ಅಷ್ಟಬಾಹುಸಮನ್ವಿತಾಃ ॥ ೪೮ ॥
ಚಾಪಬಾಣೌ ಪಾನಪಾತ್ರಂ ಮಾತುಲುಂಗಂ ಕೃಪಾಣಿಕಾಂ ।
ಫಲಕಂ ನಾಗಪಾಶಂ ಚ ಘಂಟಾಂ ಚೈವ ಮಹಾಧ್ವನಿಂ ।
ಬಿಭ್ರಾಣಾ ಮದಿರಾಮತ್ತಾ ಅತಿಪೂರ್ವರಹಸ್ಯಕಾಃ ॥ ೪೯ ॥
ಕಾಮೇಶೀ ಚೈವ ವಜ್ರೇಶೀ ಭಗಮಾಲಿನ್ಯಥಾಪರಾ ।
ತಿಸ್ರ ಏತಾಃ ಸ್ಮೃತಾ ದೇವ್ಯೋ ಭಂಡಶಾಸನತತ್ಪರಾಃ ॥ ೫೦ ॥
ಲಲಿತಾಸಮಮಾಹಾತ್ಮ್ಯ ಲಲಿತಾಸಮತೇಜಸಃ ।
ಏತಾಸ್ತು ನಿತ್ಯಂ ಶ್ರೀದೇವ್ಯಾ ಅಂತರಂಗಾಃ ಪ್ರಕೀರ್ತಿತಾಃ ॥ ೫೧ ॥

---

೪೭. ವಶಿನೀ, ಕಾಮೇಶೀ, ಮೋದಿನೀ, ವಿಮಲಾ, ಅರುಣಾ, ಜಯಿನೀ, ಸರ್ವೇಶೀ, ಕೌಲಿನೀ ಎಂಬುದಾಗಿ ಈ ದೇವಿಯರು ಎಂಟು ಮಂದಿ. ಇವರೆಲ್ಲರೂ ದೈತ್ಯಸಂಹಾರ ಕಾರ್ಯದಲ್ಲಿ ಮೃತ್ಯುದೇವತೆಯರೆನಿಸಿದವರು.

೪೮. ಅಯ್ಯಾ, ಮುನಿಯೇ! ಶ್ರೀಚಕ್ರರಾಜರಥದ ಎರಡನೆಯ ಪರ್ವವನ್ನು ಆಶ್ರಯಿಸಿರುವ ದೇವಿಯರು ಮೂವರು ಮಾತ್ರ. ಇವರೆಲ್ಲರೂ ಮುಕ್ಕಾಲುಮಣೆಗಳಲ್ಲಿ (ತ್ರಿಪೀಠಗಳಲ್ಲಿ) ಕುಳಿತಿರುವವರು ; ಎಂಟು ಭುಜಗಳುಳ್ಳವರು.

೪೯. ಬಿಲ್ಲುಬಾಣಗಳು, ಪಾನಪಾತ್ರೆ, ಮಾದಳದ ಹಣ್ಣು, ಖಡ್ಗ, ಗುರಾಣಿ, ನಾಗಪಾಶ, ಮಹಾಧ್ವನಿಯುಕ್ತವಾದ ಘಂಟೆ, ಇವುಗಳು ಇವರ ಆಯುಧಗಳು. ಮಧುಪಾನಮತ್ತೆಯರಾದ ಇವರೆಲ್ಲರೂ ಈ ಆಯುಧಗಳನ್ನು ಧರಿಸಿ ಶ್ರೀಚಕ್ರರಾಜರಥದ ಎರಡನೆಯ ಪರ್ವದಲ್ಲಿ ಬಹಳ ರಹಸ್ಯವಾಗಿ ನೆಲಸಿರುವರು.

೫೦. ಕಾಮೇಶೀ, ವಜ್ರೇಶೀ, ಭಗಮಾಲಿನೀ, ಎಂದು ಇವರ ಹೆಸರುಗಳು. ಇವರು ಮೂವರೂ ಭಂಡದಂಡನೆಯ ವಿಷಯದಲ್ಲಿ ಆಸಕ್ತರಾದವರು.

೫೧. ಈ ಮೂವರು ದೇವಿಯರೂ ಶ್ರೀಲಲಿತಾದೇವಿಗೆ ಸಮಾನವಾದ

**ಅಥಾನಂದಮಹಾಪೀಠೇ ರಥಮಧ್ಯಮಪರ್ವಣಿ ।**
**ಪರಿತೋ ರಚಿತಾವಾಸಾಃ ಪ್ರೋಕ್ತಾಃ ಪಂಚದಶಾಪರಾಃ ॥ ೫೨ ॥**
**ತಿಥಿನಿತ್ಯಾಃ ಕಾಲರೂಪಾ ವಿಶ್ವಂ ವ್ಯಾಪ್ಯೈವ ಸಂಸ್ಥಿತಾಃ**
**ಭಂಡಾಸುರಾದಿದೈತ್ಯೇಷು ಪ್ರಾರಬ್ಧಭ್ರುಕುಟೀಘನಾಃ ॥ ೫೩ ॥**
**ದೇವ್ಯಾ ಸಮನಿಜಾಕಾರಾ ದೇವೀಸಮನಿಜಾಯುಧಾಃ ।**
**ಜಗತಾಮುಪಕಾರಾಯ ವರ್ತಮಾನಾ ಯುಗೇ ಯುಗೇ ॥ ೫೪ ॥**
**ತಾಸಾಂ ನಾಮಾನಿ ಮತ್ತಸ್ತ್ವಮವಧಾರಯ ಕುಂಭಜ ॥ ೫೫ ॥**
**ಕಾಮೇಶೀ ಭಗಮಾಲಾ ಚ ನಿತ್ಯಕ್ಲಿನ್ನಾ ತಥೈವ ಚ ।**
**ಭೇರುಂಡಾವಹ್ನಿವಾಸಿನ್ಯೌ ಮಹಾವಜ್ರೇಶ್ವರೀ ತಥಾ ॥ ೫೬ ॥**
**ದೂತೀ ಚ ತ್ವರಿತಾ ದೇವೀ ನವಮೀ ಕುಲಸುಂದರೀ ।**
**ನಿತ್ಯಾ ನೀಲಪತಾಕಾ ಚ ವಿಜಯಾ ಸರ್ವಮಂಗಲಾ ।**
**ಜ್ವಾಲಾಮಾಲಿನಿಕಾ ಚಿತ್ರಾ ದಶ ಪಂಚ ಚ ಕೀರ್ತಿತಾಃ ॥ ೫೭ ॥**

---

ಮಾಹಾತ್ಮ್ಯವುಳ್ಳವರಾಗಿಯೂ, ಆಕೆಗೆ ಸಮಾನವಾದ ತೇಜಸ್ಸುಳ್ಳವರಾಗಿಯೂ ಇರುವರು. ಅಲ್ಲದೆ, ಇವರು ಶ್ರೀದೇವಿಗೆ ಯಾವಾಗಲೂ ಅಂತರಂಗದೇವಿಯರೆಂದು ಕೀರ್ತಿತರಾಗಿದ್ದಾರೆ.

೫೨. ಇವರಾದ ತರುವಾಯ ರಥದ ಮಧ್ಯಮಪರ್ವದ ಆನಂದ ಮಹಾಪೀಠದ ಸುತ್ತಲೂ ನೆಲಸಿರುವ ದೇವಿಯರು ಹದಿನೈದು ಮಂದಿ ಎಂದು ಹೇಳಲಾಗಿದೆ.

೫೩. ತಿಥಿನಿತ್ಯೆಯರೂ, ಕಾಲರೂಪಿಣಿಯರೂ ಆದ ಈ ದೇವಿಯರು ವಿಶ್ವವನ್ನೇ ವ್ಯಾಪಿಸಿದ್ದಾರೆ. ಇವರೆಲ್ಲರೂ ಭಂಡನೇ ಮೊದಲಾದ ದೈತ್ಯರ ವಿಷಯದಲ್ಲಿ ಕನಲಿ ಹುಬ್ಬುಗಂಟಿಕ್ಕಿ ನೆಲಸಿರುವರು.

೫೪. ಶ್ರೀ ಲಲಿತಾದೇವಿಯನ್ನೇ ಹೋಲಿ, ಆಕೆಯ ಆಯುಧಗಳಿಗೆ ಸಮಾನವಾದ ಆಯುಧಗಳನ್ನೇ ಉಳ್ಳವರಾಗಿ, ಯುಗಯುಗದಲ್ಲಿಯೂ ಜಗತ್ತಿನ ಕ್ಷೇಮಕ್ಕಾಗಿಯೇ ಈ ದೇವಿಯರು ಪ್ರವರ್ತಿಸುತ್ತಿರುವರು.

೫೫. ಎಲೈ ಕುಂಭಸಂಭವನೇ! ಈ ದೇವಿಯರ ದಿವ್ಯನಾಮಗಳನ್ನು ಹೇಳುವೆನು, ಕೇಳು.

೫೬-೫೭. ಕಾಮೇಶೀ, ಭಗಮಾಲಾ, ನಿತ್ಯಕ್ಲಿನ್ನಾ, ಭೇರುಂಡಾ, ವಹ್ನಿವಾಸಿನೀ, ಮಹಾವಜ್ರೇಶ್ವರೀ, ದೂತೀ, ತ್ವರಿತಾ, ಕುಲಸುಂದರೀ, ನಿತ್ಯಾ, ನೀಲಪತಾಕಾ, ವಿಜಯಾ, ಸರ್ವಮಂಗಲಾ, ಜ್ವಾಲಾಮಾಲಿನಿಕಾ, ಚಿತ್ರಾ ಎಂಬಿವರೇ ಆ ಹದಿನೈದು ಮಂದಿ.

**ಏತಾಭಿಃ ಸಹಿತಾ ದೇವೀ ಸದಾ ಸೇವೈಕಬುದ್ಧಿಭಿಃ ।**
**ದುಷ್ಟಂ ಭಂಡಾಸುರಂ ಜೇತುಂ ನಿರ್ಯಯೌ ಲಲಿತೇಶ್ವರೀ ॥ ೫೮ ॥**
**ಮಂತ್ರಿನಾಥಾ ಮಹಾಚಕ್ರೇ ಗೀತಿಚಕ್ರರಥೋತ್ತಮೇ ।**
**ಸಪ್ತಪರ್ವಾಣಿ ಚೋಕ್ತಾನಿ ತತ್ರ ದೇವ್ಯಶ್ಚ ತಾಃ ಶೃಣು ॥ ೫೯ ॥**
**ಗೇಯಚಕ್ರರಥೇ ಪರ್ವಮಧ್ಯಪೀಠನಿಕೇತನಾ ।**
**ಸಂಗೀತಯೋಗಿನೀ ಪ್ರೋಕ್ತಾ ಶ್ರೀದೇವ್ಯಾ ಅತಿವಲ್ಲಭಾ ॥ ೬೦ ॥**
**ತಥೈವ ಪ್ರಥಮಂ ಪರ್ವ ಮಂತ್ರಿಣ್ಯಾಸ್ತು ನಿವಾಸಭೂಃ ।**
**ಅಥ ದ್ವಿತೀಯಪರ್ವಸ್ಥಾ ಗೇಯಚಕ್ರ ರಥೋತ್ತಮೇ ॥ ೬೧ ॥**
**ರತಿಃ ಪ್ರೀತಿರ್ಮನೋಜಾ ಚ ವೀಣಾಕಾರ್ಮುಕಪಾಣಯಃ ।**
**ತಮಾಲಶ್ಯಾಮಲಾಕಾರಾ ದಾನವೋನ್ಮರ್ದನಕ್ಷಮಾಃ ॥ ೬೨ ॥**
**ತೃತೀಯಂ ಪರ್ವಸಂರೂಢಾ ಮನೋಭೂಬಾಣದೇವತಾಃ ।**
**ದ್ರಾವಿಣೀ ಶೋಷಿಣೀ ಚೈವ ಬಂಧಿನೀ ಮೋಹಿನೀ ತಥಾ ।**
**ಉನ್ಮಾದಿನೀ ಚ ಪಂಚೈತಾ ದೀಪ್ತಕಾರ್ಮುಕಪಾಣಯಃ ॥ ೬೩ ॥**

---

೫೮. ಮುನಿಪುಂಗವಾ! ಶ್ರೀಲಲಿತಾಪರಮೇಶ್ವರಿಯು ಯಾವಾಗಲೂ ತನ್ನ ಸೇವೆಯಲ್ಲಿಯೇ ನಟ್ಟ ಮನಸ್ಸುಳ್ಳವರಾದ ಈ ಎಲ್ಲ ದೇವಿಯರಿಂದಲೂ ಕೂಡಿ, ದುಷ್ಟನಾದ ಭಂಡಾಸುರನನ್ನು ಜಯಿಸಲು ಪ್ರಯಾಣಮಾಡಿದಳು.

೫೯. ಶ್ರೀಮಂತ್ರಿನಾಥಾದೇವಿಯ ಮಹಾಚಕ್ರವಾದ ಗೇಯಚಕ್ರ ರಥದಲ್ಲಿ ಏಳು ಪರ್ವಗಳುಂಟೆಂದು ಹೇಳಿದೆ. ಆ ಪರ್ವಗಳಲ್ಲಿರುವ ದೇವತೆಗಳನ್ನು ಈಗ ವರ್ಣಿಸುವೆನು ಕೇಳು.

೬೦. ಗೇಯಚಕ್ರರಥದ ಪೂರ್ವದಲ್ಲಿನ ಮಧ್ಯಪೀಠದಲ್ಲಿ ನೆಲಸಿರುವ ದೇವತೆಯು ಸಂಗೀತಯೋಗಿನಿ. ಈಕೆಯು ಶ್ರೀಲಲಿತಾದೇವಿಗೆ ಅತ್ಯಂತ ಪ್ರಿಯಳಾದವಳು.

೬೧-೬೨. ಮೊದಲ ಪರ್ವದಲ್ಲಿಯೇ ಮಂತ್ರಿಣೀದೇವಿಯು ನೆಲಸಿರುವುದು. ಎರಡನೆಯ ಪರ್ವದಲ್ಲಿ ರತಿ, ಪ್ರೀತಿ, ಮನೋಜಾ ಎಂಬ ದೇವಿಯರಿರುವರು. ಇವರು ಮೂವರೂ ವೀಣೆ ಮತ್ತು ಬಿಲ್ಲುಗಳನ್ನು ಧರಿಸಿ ತಮಾಲಶ್ಯಾಮಲವರ್ಣೆಯರಾಗಿರುವರು. ದಾನವಮರ್ದನದಲ್ಲಿ ಇವರು ಮೂವರೂ ಸಮರ್ಥೆಯರು.

೬೩. ಇನ್ನು ಈ ಗೇಯಚಕ್ರರಥಶ್ರೇಷ್ಠದ ಮೂರನೆಯ ಪರ್ವದಲ್ಲಿ

ತತ್ರ ಪರ್ವಣ್ಯಧಸ್ತಾತ್ತು ವರ್ತಮಾನಾ ಮಹೌಜಸಃ ।
ಕಾಮರಾಜಶ್ಚ ಕಂದರ್ಪೋ ಮನ್ಮಥೋ ಮಕರಧ್ವಜಃ ॥ [ ೬೪ ॥
ಮನೋಭವಃ ಪಂಚಮಃ ಸ್ಯಾದೇತೇ ತ್ರೈಲೋಕ್ಯಮೋಹನಾಃ ॥
ಕಸ್ತೂರೀತಿಲಕೋಲ್ಲಾಸಿಫಾಲಾ ಮುಕ್ತಾವಿಭೂಷಣಾಃ ।
ಕವಚಚ್ಛನ್ನಸರ್ವಾಂಗಾಃ ಪಲಾಶಪ್ರಸವತ್ವಿಷಃ ।
ಪಂಚಕಾಮಾ ಇಮೇ ಪ್ರೋಕ್ತಾ ಭಂಡಾಸುರವಧಾರ್ಥಿನಃ ॥ ೬೫ ॥
ಗೇಯಚಕ್ರರಥೇಂದ್ರಸ್ಯ ಚತುರ್ಥಂ ಪರ್ವ ಸಂಶ್ರಿತಾಃ । [ ೬೬ ॥
ಬ್ರಾಹ್ಮೀಮುಖ್ಯಾಸ್ತು ಪೂರ್ವೋಕ್ತಾಶ್ಚಂಡಿಕಾ ತ್ವಷ್ಟಮಿ ಪರಾ ॥
ತತ್ರ ಪರ್ವಣ್ಯಧಸ್ತಾತ್ತು ಲಕ್ಷ್ಮೀಶ್ಚೈವ ಸರಸ್ವತೀ ।
ರತಿಃ ಪ್ರೀತಿಃ ಕೀರ್ತಿಶಾಂತೀ ಪುಷ್ಟಿಸ್ತುಷ್ಟಿಶ್ಚ ಶಕ್ತಯಃ ॥ ೬೭ ॥
ಏತಾಶ್ಚ ಕ್ರೋಧರಕ್ತಾಕ್ಷ್ಯೋ ದೈತ್ಯಂ ಪ್ರತಿ ಮಹಾಬಲಾಃ ।
ಕುಂತಚಕ್ರಧರಾಃ ಪ್ರೋಕ್ತಾಃ ಕುಮಾರ್ಯಃ ಕುಂಭಸಂಭವ ॥ ೬೮ ॥

---

ನೆಲಸಿರುವ ದೇವಿಯರು, ಮನೋಭೂಬಾಣ ದೇವತೆಗಳೆಂದು ಪ್ರಸಿದ್ಧರಾದವರು; ಇವರು ಐದು ಮಂದಿ. ದ್ರಾವಿಣೀ, ಶೋಷಿಣೀ, ಬಂಧಿನೀ, ಮೋಹಿನೀ, ಉನ್ಮಾದಿನೀ ಎಂದು ಇವರ ಹೆಸರುಗಳು; ಎಲ್ಲರೂ ಪ್ರಜ್ವಲಿಸುತ್ತಿರುವ ಬಿಲ್ಲುಗಳನ್ನು ಧರಿಸಿರುವರು.

೬೪-೬೫. ಆ ಪರ್ವದ ಕೆಳಭಾಗದಲ್ಲಿರುವವರು ಭಂಡಾಸುರನ ವಧೆಯಲ್ಲಿ ಆಸಕ್ತರಾದ ಪಂಚಕಾಮರು. ಇವರೇ ಮಹಾತೇಜಸ್ವಿಗಳಾದ ಕಾಮರಾಜ, ಕಂದರ್ಪ, ಮನ್ಮಥ, ಮಕರಧ್ವಜ, ಮನೋಭವ ಎಂಬುವರು. ತ್ರೈಲೋಕ್ಯಮೋಹನರಾದ ಇವರೆಲ್ಲರೂ ಕಸ್ತೂರಿಯ ತಿಲಕದಿಂದಲಂಕೃತವಾದ ಫಾಲಪ್ರದೇಶವುಳ್ಳವರಾಗಿ, ಮುತ್ತಿನ ಒಡವೆಗಳನ್ನಿಟ್ಟು ಕವಚಗಳನ್ನು ತೊಟ್ಟು ಕಂಗೊಳಿಸುತ್ತಿರುವರು. ಮುತ್ತುಗದ ಹೂವಿನ ಕಾಂತಿಯುಳ್ಳ ಇವರೇ ಭಂಡಾಸುರನ ವಧೆಯನ್ನು ಅಪೇಕ್ಷಿಸುತ್ತಿರುವ ಪಂಚಕಾಮರೆಂದು ಹೆಸರಾಗಿರುವವರು.

೬೬-೬೮. ಇನ್ನು ಗೇಯಚಕ್ರರಥದ ನಾಲ್ಕನೆಯ ಪರ್ವದಲ್ಲಿ ನೆಲಸಿರುವವರು ಹಿಂದೆಯೇ ಹೇಳಿದ ಬ್ರಾಹ್ಮಿಯೇ ಮೊದಲಾದ ಏಳು ಮಂದಿ ದೇವತೆಗಳು. ಎಂಟನೆಯಾಕೆಯೇ ಚಂಡಿಕೆ. ಆ ಪರ್ವದ ಕೆಳಭಾಗದಲ್ಲಿ, ಲಕ್ಷ್ಮೀ, ಸರಸ್ವತೀ, ರತಿ, ಪ್ರೀತಿ, ಕೀರ್ತಿ, ಶಾಂತಿ, ಪುಷ್ಟಿ, ತುಷ್ಟಿ ಎಂಬ ದೇವಿಯರಿರುವರು. ಮಹಾ ಬಲಶಾಲಿನಿಯರಾದ ಈ ದೇವಿಯರು

**ಪಂಚಮಂ ಪರ್ವ ಸಂಪ್ರಾಪ್ತಾ ವಾಮಾದ್ಯಾಃ ಷೋಡಶಾಪರಾಃ ।**
**ಗೀತಿಚಕ್ರರಥೇಂದ್ರಸ್ಯ ತಾಸಾಂ ನಾಮಾನಿ ಮಚ್ಛೃಣು ॥ ೬೯ ॥**
**ವಾಮಾ ಜ್ಯೇಷ್ಠಾ ಚ ರೌದ್ರೀ ಚ ಶಾಂತಿಃ ಶ್ರದ್ಧಾ ಸರಸ್ವತೀ ।**
**ಕ್ರಿಯಾಶಕ್ತಿಶ್ಚ ಲಕ್ಷ್ಮೀಶ್ಚ ತುಷ್ಟಿಶ್ಚೈವ ತು ಮೋಹಿನೀ ॥ ೭೦ ॥**
**ತಥಾ ಪ್ರಮಾಥಿನೀ ಚಾಶ್ವಾಸಿನೀ ವೀಚಿಸ್ತಥೈವ ಚ ।**
**ವಿದ್ಯುನ್ಮಾಲಿನ್ಯಥ ಸುರಾನಂದಾಥೋ ನಾಗಬುದ್ಧಿಕಾ ॥ ೭೧ ॥**
**ಏತಾಸ್ತು ಕುರುವಿಂದಾಭಾ ಜಗತ್ಕ್ಷೋಭಣಲಂಪಟಾಃ ।**
**ಮಹಾಸಮರಸನ್ನಾಹಮಾದದಾನಾಃ ಪದೇ ಪದೇ ॥ ೭೨ ॥**
**ವಜ್ರಕಂಕಟಸಂಛನ್ನಾಃ ಕಠೋರಾಟ್ಟಹಸೋಜ್ಜ್ವಲಾಃ ।**
**ವಜ್ರದಂಡೌ ಶತಘ್ನೀಂ ಚ ಸಂಬಿಭ್ರಾಣಾ ಭುಸುಂಡಿಕಾಂ ॥ ೭೩ ॥**
**ಅಥ ಗೀತಿರಥೇಂದ್ರಸ್ಯ ಷಷ್ಠಂ ಪರ್ವ ಸಮಾಶ್ರಿತಾಃ ।**
**ಅಸಿತಾಂಗಪ್ರಭೃತಯೋ ಭೈರವಾಃ ಶಸ್ತ್ರಭೀಷಣಾಃ ॥ ೭೪ ॥**

---

ಭಂಡದೈತ್ಯನ ವಧೆಗಾಗಿ ಕನಲಿ ಕೆಂಪಾದ ಕಂಗಳುಳ್ಳವರಾಗಿರುವರು. ಕುಂತಚಕ್ರಧಾರಿಣಿಯರಾದ ಈ ದೇವಿಯರು ಕುಮಾರಿಯರೆಂದು ಹೇಳಿದೆ.

೬೯-೭೧. ಗೇಯಚಕ್ರದ ಐದನೆಯ ಪರ್ವವನ್ನಾಶ್ರಯಿಸಿರುವ ವಾಮಾ ಮೊದಲಾದ ದೇವತೆಗಳು ಹದಿನಾರು ಮಂದಿ. ಅವರ ಹೆಸರುಗಳನ್ನು ಕೇಳು. ವಾಮಾ, ಜ್ಯೇಷ್ಠಾ, ರೌದ್ರೀ, ಶಾಂತಿ, ಶ್ರದ್ಧಾ, ಸರಸ್ವತೀ, ಕ್ರಿಯಾಶಕ್ತಿ, ಲಕ್ಷ್ಮೀ, ತುಷ್ಟಿ, ಮೋಹಿನೀ, ಪ್ರಮಾಥಿನೀ, ಅಶ್ವಾಸಿನೀ, ವೀಚಿ, ವಿದ್ಯುನ್ಮಾಲಿನೀ, ಸುರಾನಂದಾ, ನಾಗಬುದ್ಧಿಕಾ ಎಂಬಿವೇ ಅವರ ಹೆಸರುಗಳು.

೭೨-೭೩. ಈ ದೇವಿಯರೆಲ್ಲರೂ ಗೋರಂಟಿಯ ಹೂವಿನ ವರ್ಣವುಳ್ಳವರು; ಜಗತ್ತನ್ನೇ ಕ್ಷೋಭೆಗೊಳಿಸುವುದರಲ್ಲಿ ಲಂಪಟರಾದವರು; ಅಡಿಗಡಿಗೂ ಉಗ್ರವಾದ ಯುದ್ಧಕ್ಕೆ ಬೇಕಾದ ಸಾಮಗ್ರಿಗಳೆಲ್ಲವನ್ನೂ ತೆಗೆದುಕೊಳ್ಳುತ್ತಿರುವವರು; ವಜ್ರಕವಚಗಳುಳ್ಳವರಾಗಿ ಭಯಂಕರವಾದ ಅಟ್ಟಹಾಸವನ್ನು ಮೆರೆದು ಪ್ರಜ್ವಲಿಸುತ್ತಿರುವವರು; ವಜ್ರದಂಡ, ಶತಘ್ನಿ, ಭುಸುಂಡಿ ಮೊದಲಾದ ಆಯುಧಗಳನ್ನು ಧರಿಸಿರುವವರು.

೭೪-೭೫. ಇವರಾದ ತರುವಾಯ, ಶ್ರೀ ಗೇಯಚಕ್ರರಥದ ಆರನೆಯ ಪರ್ವವನ್ನಾಶ್ರಯಿಸಿರುವ ದೇವತೆಗಳು ಅಸಿತಾಂಗರೇ ಮೊದಲಾದ ಶಸ್ತ್ರ ಭೀಷಣರಾದ ಭೈರವರು. ಇವರೆಲ್ಲರೂ ತ್ರಿಶೂಲ

**ತ್ರಿಶಿಖಂ ಪಾನಪಾತ್ರಂ ಚ ಬಿಭ್ರಾಣಾ ನೀಲವರ್ಚಸಃ ।**
**ಅಸಿತಾಂಗೋ ರುರುಶ್ಚಂಡಃ ಕ್ರೋಧೋನ್ಮತ್ತಶ್ಚ ಭೈರವಃ ।**
**ಕಪಾಲೀ ಭೀಷಣಶ್ಚೈವ ಸಂಹಾರಶ್ಚಾಷ್ಟ ಭೈರವಾಃ ॥ ೭೫ ॥**
**ಅಥ ಗೀತಿರಥೇಂದ್ರಸ್ಯ ಸಪ್ತಮಂ ಪರ್ವ ಸಂಶ್ರಿತಾಃ ।**
**ಮಾತಂಗೀ ಸಿದ್ಧಲಕ್ಷ್ಮೀಶ್ಚ ಮಹಾಮಾತಂಗಿಕಾ ತಥಾ ।**
**ಮಹತೀ ಸಿದ್ಧಲಕ್ಷ್ಮೀಶ್ಚ ಶೋಣಾ ಬಾಣಧನುರ್ಧರಾಃ ॥ ೭೬ ॥**
**ತಸ್ಯೈವ ಪರ್ವಣೋಽಧಸ್ತಾದ್ಗಣಪಃ ಕ್ಷೇತ್ರಪಸ್ತಥಾ ।**
**ದುರ್ಗಾಂಬಾ ಬಟುಕಶ್ಚೈವ ಸರ್ವೇ ತೇ ಶಸ್ತ್ರಪಾಣಯಃ ॥ ೭೭ ॥**
**ತತ್ರೈವ ಪರ್ವಣೋಽಧಸ್ತಾಲ್ಲಕ್ಷ್ಮೀಶ್ಚೈವ ಸರಸ್ವತೀ ।**
**ಶಂಖಪದ್ಮನಿಧೀ ಚೈವ ತೇ ಸರ್ವೇ ಶಸ್ತ್ರಪಾಣಯಃ ।**
**ಲೋಕದ್ವಿಷಂ ಪ್ರತಿಕ್ರುದ್ಧಾ ಭಂಡಂ ಚಂಡಪರಾಕ್ರಮಂ ॥ ೭೮ ॥**
**ಶಕ್ರಾದಯಶ್ಚ ವಿಷ್ಣ್ವಂತಾ ದಶ ದಿಕ್ಚಕ್ರನಾಯಕಾಃ ।**
**ಶಕ್ತಿರೂಪಾಸ್ತತ್ರ ಪರ್ವಣ್ಯಧಸ್ತಾತ್ಕೃತಸಂಶ್ರಯಾಃ ॥ ೭೯ ॥**

---

ಗಳನ್ನೂ, ಪಾನಪಾತ್ರೆಗಳನ್ನೂ ಧರಿಸಿ, ನೀಲವರ್ಣರಾಗಿರುವರು. ಇವರೇ ಅಸಿತಾಂಗ, ರುರು, ಚಂಡ, ಕ್ರೋಧ, ಉನ್ಮತ್ತ, ಕಪಾಲಿ, ಭೀಷಣ, ಸಂಹಾರ ಎಂಬ ಅಷ್ಟಭೈರವರು.

೭೬. ಇನ್ನು ಗೇಯಚಕ್ರರಥದ ಏಳನೆಯ ಪರ್ವವನ್ನಾಶ್ರಯಿಸಿರುವ ದೇವತೆಗಳ ದಿವ್ಯನಾಮಗಳನ್ನು ಕೇಳು. ಮಾತಂಗೀ, ಸಿದ್ಧಲಕ್ಷ್ಮೀ, ಮಹಾಮಾತಂಗಿಕಾ, ಮಹತೀ, ಸಿದ್ಧಲಕ್ಷ್ಮೀ—ಇವರೆಲ್ಲರೂ ರಕ್ತವರ್ಣೆಯರು ; ಎಲ್ಲರೂ ಬಿಲ್ಲುಬಾಣಗಳನ್ನು ಧರಿಸಿರುವವರು.

೭೭. ಅದೇ ಪರ್ವದ ಕೆಳಭಾಗದಲ್ಲಿಯೇ ಗಣಪತಿಯೂ, ಕ್ಷೇತ್ರಪಾಲಕನೂ, ದುರ್ಗಾಂಬಾ, ಬಟುಕ ಮುಂತಾದವರೂ ಶಸ್ತ್ರಪಾಣಿಗಳಾಗಿ ನೆಲಸಿರುವರು.

೭೮. ಅಲ್ಲಿಯೇ ಇನ್ನೂ ಕೆಳಭಾಗದಲ್ಲಿ ಲಕ್ಷ್ಮೀ ಸರಸ್ವತಿಯರೂ, ಶಂಖ ಪದ್ಮನಿಧಿಗಳ ಅಭಿಮಾನದೇವಿಯರೂ ಶಸ್ತ್ರಪಾಣಿಯರಾಗಿ ನೆಲಸಿ ಲೋಕಕ್ಕೇ ಶತ್ರುವೂ, ಚಂಡಪರಾಕ್ರಮಿಯೂ ಆದ ಭಂಡನಲ್ಲಿ ಕನಲಿರುವರು.

೭೯. ಅವರಿಗೂ ಕೆಳಭಾಗದಲ್ಲಿ ಶಕ್ರನು ಮೊದಲಾಗಿ ವಿಷ್ಣುವಿನ ವರೆಗಣ ಹತ್ತು ಮಂದಿ ದಿಕ್ಪಾಲಕರು ಶಕ್ತಿರೂಪರಾಗಿ ನೆಲಸಿದ್ದಾರೆ.

**ವಜ್ರಂ ಶಕ್ತಿಂ ಕಾಲದಂಡಮಸಿಂ ಪಾಶಂ ಧ್ವಜಂ ತಥಾ ।**
**ಗದಾಂ ತ್ರಿಶೂಲಂ ದರ್ಭಾಸ್ತ್ರಂ ಚಕ್ರಂ ಚ ದಧತಸ್ತ್ವಮೀ ॥ ೮೦ ॥**
**ಸೇವಂತೇ ಮಂತ್ರಿನಾಥಾಂ ತಾಂ ನಿತ್ಯಂ ಭಕ್ತಿಪರಾಯಣಾಃ ।**
**ಭಂಡಾಸುರಾದಿದುರ್ದಾಂತಾನ್ನಿರ್ಜೇತುಂ ವಿಶ್ವಕಂಟಕಾನ್ ॥ ೮೧ ॥**
**ಮಂತ್ರಿನಾಥಾಶ್ರಯದ್ವಾರಾ ಲಲಿತಾಜ್ಞಾಪನೋತ್ಸುಕಾಃ ।**
**ಗೀತಿಚಕ್ರರಥೇಂದ್ರಸ್ಯ ದಿಕ್ಪಾಲಾಃ ಸಂಶ್ರಯಂ ದಧುಃ ॥ ೮೨ ॥**
**ಸರ್ವೇಷಾಂ ಚೈವ ದೇವಾನಾಂ ಮಂತ್ರಿಣೀ ದ್ವಾರತಃ ಕೃತಾ ।**
**ವಿಜ್ಞಾಪನಾ ಮಹಾದೇವ್ಯಾಃ ಕಾರ್ಯಸಿದ್ಧಿಂ ಪ್ರಯಚ್ಛತಿ ॥ ೮೩ ॥**
**ರಾಜ್ಞಿ ವಿಜ್ಞಾಪನಾ ಚೇತ್ಸ್ಯಾತ್ಪ್ರಧಾನದ್ವಾರತಃ ಕೃತಾ ।**
**ತದಾ ಖಲು ಫಲಪ್ರಾಪ್ತಿಃ ಸೇವಕಾನಾಂ ಪ್ರಜಾಯತೇ ॥ ೮೪ ॥**
**ಅನ್ಯಥಾ ಕುತ ಏತೇಷಾಂ ಸಾಮರ್ಥ್ಯಂ ಜ್ವಲಿತೌಜಸಃ ।**
**ಅಪ್ರಧೃಷ್ಯ ಪ್ರಭಾವಾಯಾಃ ಶ್ರೀದೇವ್ಯಾ ಉಪಸರ್ಪಣೇ ॥ ೮೫ ॥**

---

೮೦. ಇವರು ವಜ್ರ, ಶಕ್ತಿ, ಕಾಲದಂಡ, ಖಡ್ಗ, ಪಾಶ, ಧ್ವಜ, ಗದೆ, ತ್ರಿಶೂಲ, ದರ್ಭಾಸ್ತ್ರ, ಚಕ್ರ ಮುಂತಾದ ಆಯುಧಗಳನ್ನು ಧರಿಸಿರುವರು.

೮೧. ಮುಕ್ತಿಪರಾಯಣರಾದ ಈ ದಶದಿಕ್ಪಾಲಕರೆಲ್ಲರೂ, ಮಹಾ ಗರ್ವಿಷ್ಠರಾದ ಭಂಡನೇ ಮೊದಲಾದ ಲೋಕಕಂಟಕದಾನವರನ್ನು ಜಯಿಸಲೋಸುಗ ಆ ಮಂತ್ರಿಣೀದೇವಿಯನ್ನು ಯಾವಾಗಲೂ ಸೇವಿಸುತ್ತಿರುವರು.

೮೨. ಅಗಸ್ತ್ಯಮುನಿಯೇ! ಈ ದಿಕ್ಪಾಲಕರೆಲ್ಲರೂ, ಮಂತ್ರಿನಾಥೆಯ ಮೂಲಕ ಶ್ರೀ ಲಲಿತಾಪರಮೇಶ್ವರಿಯ ಅಪ್ಪಣೆಯನ್ನು ಕೈಕೊಳ್ಳುವುದರಲ್ಲಿ ಆಸಕ್ತರಾಗಿ ಆಕೆಯನ್ನು ಆಶ್ರಯಿಸಿ ಅಲ್ಲಿಯೇ ನೆಲಸಿರುವರು.

೮೩. ಮಂತ್ರಿಣೀದೇವಿಯ ಮೂಲಕ ಶ್ರೀ ಲಲಿತಾಂಬಿಕೆಯಲ್ಲಿ ತಮ್ಮ ಕೋರಿಕೆಗಳನ್ನು ವಿಜ್ಞಾಪಿಸಿಕೊಂಡ ದೇವತೆಗಳೆಲ್ಲರಿಗೂ ಆ ಮಹಾದೇವಿಯು ಕಾರ್ಯಸಿದ್ಧಿಯನ್ನುಂಟುಮಾಡಿಕೊಡುವಳು.

೮೪-೮೫. ಮುನಿಯೇ! ಲೋಕದಲ್ಲಿ ಪ್ರಧಾನಿಯ ಮೂಲಕ ದೊರೆಯಲ್ಲಿ ಅರಿಕೆ ಮಾಡಿಕೊಂಡರಲ್ಲವೆ ಸೇವಕರಿಗೆ ಫಲ ದೊರಕುವುದು! ಹಾಗಿಲ್ಲದಿದ್ದ ಪಕ್ಷದಲ್ಲಿ ಅವರು ಎಷ್ಟೇ ಪರಾಕ್ರಮಿಗಳಾದರೂ ಎದುರಿಸಲಾಗದ ಪ್ರಭಾವವುಳ್ಳ ಶ್ರೀ ಲಲಿತಾಂಬಿಕೆಯ ಬಳಿಯಲ್ಲಿ ಅವರಿಗೆ ಪ್ರವೇಶವು ದೊರಕುವುದೆಂದರೇನು?

**ಸಾ ಹಿ ಸಂಗೀತವಿದ್ಯೇಶೀ ಶ್ರೀದೇವ್ಯಾ ಅತಿವಲ್ಲಭಾ ।**
**ನಾತಿಲಂಘಯತಿ ಕ್ವಾಪಿ ತದುಕ್ತಂ ಕಾರ್ಯಸಿದ್ಧಿಷು ॥ ೮೬ ॥**
**ಶ್ರೀ ದೇವ್ಯಾಃ ಶಕ್ತಿಸಾಮ್ರಾಜ್ಯೇ ಸರ್ವಕರ್ಮಾಣಿ ಮಂತ್ರಿಣೀ ।**
**ಅಕರ್ತುಮನ್ಯಥಾಕರ್ತುಂ ಕರ್ತುಂ ಚೈವ ಪ್ರಗಲ್ಭತೇ ॥ ೮೭ ॥**
**ತಸ್ಮಾತ್ಸರ್ವೇಽಪಿ ದಿಕ್ಪಾಲಾಃ ಶ್ರೀದೇವ್ಯಾ ಜಯಕಾಂಕ್ಷಿಣಃ ।**
**ತಸ್ಯಾಃ ಪ್ರಧಾನಭೂತಾಯಾಃ ಸೇವಾಮೇವ ವಿತನ್ವತೇ ॥ ೮೮ ॥**
**ಇತಿ ಶ್ರೀ ಲಲಿತಾದೇವ್ಯಾಶ್ಚಕ್ರರಾಜರಥೋತ್ತಮೇ ।**
**ಪರ್ವಸ್ಥಿತಾನಾಂ ದೇವೀನಾಂ ನಾಮಾನಿ ಕಥಿತಾನ್ಯಲಂ ॥ ೮೯ ॥**
**ಭಂಡಾಸುರಸ್ಯ ಸಂಹಾರೇ ತಾಸಾಂ ದಿವ್ಯಾಯುಧಾನ್ಯಪಿ ।**
**ಪ್ರೋಕ್ತಾನಿ ಗೇಯಚಕ್ರಸ್ಯ ಪರ್ವದೇವ್ಯಶ್ಚ ಕೀರ್ತಿತಾಃ ॥ ೯೦ ॥**

---

೮೬. ಸಂಗೀತ ವಿದ್ಯೇಶ್ವರಿಯಾದ ಆ ಮಂತ್ರಿಣೀದೇವಿಯಾದರೋ ಶ್ರೀದೇವಿಯಾದ ಲಲಿತಾಪರಮೇಶ್ವರಿಗೆ ಅತ್ಯಂತ ಪ್ರಿಯತಮೆಯಾದವಳು. ಕಾರ್ಯವನ್ನು ಆಗಮಾಡುವ ವಿಷಯಗಳಲ್ಲಿ ಆ ಮಹಾದೇವಿಯು ಆಕೆಯ ಮಾತನ್ನು ಎಂದಿಗೂ ತೆಗೆದುಹಾಕುವುದೇ ಇಲ್ಲವು.

೮೭. ಶ್ರೀ ಮಂತ್ರಿಣೀದೇವಿಯು, ಶ್ರೀದೇವಿಯ ಶಕ್ತಿಸಾಮ್ರಾಜ್ಯದಲ್ಲಿ ಸಮಸ್ತ ಕಾರ್ಯಗಳನ್ನೂ ಮಾಡದಿರುವುದಕ್ಕೂ, ಬೇರ್ಪಡಿಸುವುದಕ್ಕೂ, ಆಗಮಾಡುವುದಕ್ಕೂ ಸಮರ್ಥಳೇ ಆಗಿರುವವಳು.

೮೮. ಆದುದರಿಂದಲೇ ಶ್ರೀದೇವಿಯ ವಿಜಯವನ್ನೇ ಬಯಸುತ್ತಿರುವ ಸಮಸ್ತ ದಿಕ್ಪಾಲಕರೂ ಪ್ರಧಾನೆಯಾದ ಶ್ರೀಮಂತ್ರಿಣೀದೇವಿಯ ಸೇವೆಯಲ್ಲಿಯೇ ತೊಡಗಿರುವರು.

೮೯. ಅಯ್ಯಾ ಕುಂಭಸಂಭವನೇ! ಹೀಗೆ ಶ್ರೀ ಲಲಿತಾಂಬಿಕೆಯ ಶ್ರೀಚಕ್ರರಾಜರಥಶ್ರೇಷ್ಠದ ನವಪರ್ವಗಳಲ್ಲಿಯೂ ನೆಲಸಿರುವ ಶಕ್ತಿದೇವಿಯರ ದಿವ್ಯನಾಮಗಳೆಲ್ಲವನ್ನೂ ನಿನಗೆ ತಿಳಿಸಿದುದಾಯಿತು.

೯೦. ಭಂಡಾಸುರನ ಸಂಹಾರಕಾಲದಲ್ಲಿ ಆ ದೇವಿಯರು ಧರಿಸಿದ್ದ ದಿವ್ಯಾಯುಧಗಳನ್ನೂ ನಿನಗೆ ತಿಳಿಯಹೇಳಿದೆನು. ಗೇಯಚಕ್ರರಥದ ಪರ್ವಗಳನ್ನಾಶ್ರಯಿಸಿರುವ ದೇವಿಯರ ನಾಮಧೇಯಗಳನ್ನೂ ಹೇಳಿಯಾಯಿತು.

ಇಮಾನಿ ಪರ್ವದೇವೀನಾಂ ನಾಮಾನ್ಯಾಕರ್ಣಯಂತಿ ಯೇ ।
ಸರ್ವಪಾಪವಿನಿರ್ಮುಕ್ತಾ ಯುದ್ಧೇ ವಿಜಯಿನೋ ನರಾಃ ॥ ೯೧ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಚತುರ್ದಶೋಽಧ್ಯಾಯಃ

---

೯೧. ಯಾವ ಮಾನವನವರು ಈ ಪರ್ವದೇವತೆಗಳ ದಿವ್ಯನಾಮಗಳನ್ನು ಶ್ರವಣಮಾಡುತ್ತಾರೆಯೋ ಅವರು ಸಮಸ್ತ ಪಾಪಗಳಿಂದಲೂ ವಿಮುಕ್ತರಾಗಿ ಯುದ್ಧದಲ್ಲಿ ವಿಜಯವನ್ನು ಪಡೆಯುತ್ತಾರೆ.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚದಶೋಽಧ್ಯಾಯಃ

[ಕಿರಿಚಕ್ರರಥಪರ್ವದೇವತಾನುವರ್ಣನಂ]

ಶ್ರೀದೇವ್ಯಾ ನವಚಕ್ರಪರ್ವನಿಹಿತಾ ಶ್ರೀಮಂತ್ರಿಣೀ ಚಕ್ರಗಾ
ಶೃಂಗಾರೈಕಸುವಿಗ್ರಹೋತ್ಕರಲಸನ್ನಾನಾಯುಧೋದ್ಯತ್ಕರಾಃ ।
ವಿಷ್ಣ್ವಾದ್ಯಾ ಅಪಿ ಲೋಕಪಾಲವಿಭವೋ ಯಸ್ಯಾಂಘ್ರಿಸೇವಾಪರಾ-
ಸ್ಸ್ಯಸ್ತಾಂ ಪರ್ವಸು ಸುಂದರೇಶಮಹಿಷೀಂ ಶ್ರೀಮೀನನೇತ್ರಾಂ ಭಜೇ ॥

ಹಯಗ್ರೀವಃ—

**ಕಿರಿಚಕ್ರರಥೇಂದ್ರಸ್ಯ ಪಂಚಪರ್ವ ಸಮಾಶ್ರಿತಾಃ ।**
**ದೇವತಾಶ್ಚ ಶೃಣು ಪ್ರಾಜ್ಞ ನಾಮ ಯಚ್ಛೃಣ್ವತಾಂ ಜಯಃ ॥ ೧ ॥**
**ಪ್ರಥಮಂ ಪರ್ವ ಬಿಂದ್ವಾಖ್ಯಂ ಸಂಪ್ರಾಪ್ತಾ ದಂಡನಾಯಿಕಾ ।**
**ಸಾ ತತ್ರ ಜಗದುದ್ದಂಡಕಂಟಕವ್ರಾತಘಸ್ಮರೀ ॥ ೨ ॥**
**ನಾನಾವಿಧಾಸ್ತ್ರಜ್ವಾಲಾಭಿರ್ನರ್ತಯಂತೀ ಜಯಶ್ರಿಯಂ ।**
**ಉದ್ದಂಡಪೋತ್ರನಿರ್ಘಾತನಿರ್ಭಿನ್ನೋದ್ಧತದಾನವಾ ॥ ೩ ॥**

---

## ಕನ್ನಡದ ಅನುವಾದ

[ಕಿರಿಚಕ್ರರಥಪರ್ವದೇವತಾನುವರ್ಣನ]

೧. ಹಯಗ್ರೀವ ಮುನಿಯು ಹೇಳುತ್ತಾನೆ:—ಅಗಸ್ತ್ಯಮುನಿವರಾ! ಪ್ರಾಜ್ಞನಾದ ನೀನು, ಈಗ ಕಿರಿಚಕ್ರರಥಶ್ರೇಷ್ಠದ ಪಂಚಪರ್ವಗಳಲ್ಲಿಯೂ ನೆಲಸಿರುವ ಶಕ್ತಿದೇವತೆಗಳ ದಿವ್ಯನಾಮಗಳನ್ನು ಕೇಳು; ಇವುಗಳನ್ನು ಕೇಳುವವರಿಗೆ ವಿಜಯವು ಲಭಿಸುತ್ತದೆ.

೨. ಮೊದಲಿನ ಪರ್ವವು ಬಿಂದುವೆಂದು ಹೆಸರಾದುದು. ಅಲ್ಲಿ ಶ್ರೀದಂಡನಾಥಾದೇವಿಯು ನೆಲಸಿರುವಳು. ಆ ದೇವಿಯು ಅಲ್ಲಿದ್ದುಕೊಂಡೇ ಜಗತ್ತಿನ ಮಹಾಕಂಟಕಗಳೆಲ್ಲವನ್ನೂ ಧೂಳೀಪಟಗೊಳಿಸುತ್ತಿರುವಳು.

೩. ಆಕೆಯು ಬಗೆಬಗೆಯ ಆಯುಧಗಳಿಂದಲೂ, ಅಸ್ತ್ರಗಳ ಜ್ವಾಲೆಗಳಿಂದಲೂ, ಜಯಲಕ್ಷ್ಮಿಯನ್ನು ಕುಣಿಸುತ್ತಿರುವಳು. ಉದ್ದಂಡವಾದ ಮುಖಾಗ್ರದಿಂದಲೇ ಉದ್ಧತರಾದ ದಾನವರೆಲ್ಲರನ್ನೂ ಸೀಳುತ್ತಿರುವಳು.

**ದಂಷ್ಟ್ರಾ ಬಾಲಮೃಗಾಂಕಸ್ಯ ವಿಹಾಸನವಿಭಾವರೀ ।**
**ಪ್ರಾವೃಷೇಣ್ಯಪಯೋವಾಹವ್ಯೂಹನೀಲವಪುರ್ಲತಾ ॥ ೪ ॥**
**ಕಿರಿಚಕ್ರರಥೇಂದ್ರಸ್ಯ ಸಾಲಂಕಾರಯತೇ ಸದಾ ।**
**ಪೋತ್ರಿಣೀ ಪುತ್ರಿತಾಶೇಷವಿಶ್ವಾ ವಾರ್ತಾಲಿಕಾಂಬಿಕಾ ॥ ೫ ॥**
**ತಸ್ಯೈವ ರಥನಾಥಸ್ಯ ದ್ವಿತೀಯಂ ಪರ್ವ ಸಂಶ್ರಿತಾಃ ।**
**ಜೃಂಭಿನೀ ಮೋಹಿನೀ ಚೈವ ಸ್ತಂಭಿನೀ ತಿಸ್ರ ಏವ ಚ ।**
**ಉತ್ಫುಲ್ಲದಾಡಿಮಪ್ರಖ್ಯಾಃ ಸರ್ವದಾನವಮರ್ದನಾಃ ॥ ೬ ॥**
**ಮುಸಲಂ ಚ ಹಲಂ ಹಾಲಾಪಾತ್ರಂ ಫಣಿಮಹಾಗುಣಂ ।**
**ಜ್ವಲನ್ಮಾಣಿಕ್ಯವಲಯೈರ್ಬಿಭ್ರಾಣಾಃ ಪಾಣಿಭಿರ್ನಿಜೈಃ ॥ ೭ ॥**
**ಅತಿದೀಪ್ತಕರಾಲಾಕ್ಷಿಜ್ವಾಲಾಭಿರ್ದೈತ್ಯಸೈನಿಕಾನ್ ।**
**ದಹಂತ್ಯ ಇವ ನಿಶ್ಶಂಕಂ ಸೇವಂತೇ ಸೂಕರಾನನಾಂ ॥ ೮ ॥**
**ಕಿರಿಚಕ್ರರಥೇಂದ್ರಸ್ಯ ತೃತೀಯಂ ಪರ್ವ ಸಂಶ್ರಿತಾಃ ।**
**ಅಂಧಿನ್ಯಾದ್ಯಾಃ ಪಂಚ ದೇವ್ಯೋ ದೇವೀಮಂತ್ರ ಕೃತಾಸ್ಪದಾಃ ॥ ೯ ॥**

---

೪-೫. ಕೋರೆದಾಡೆಯೆಂಬ ಬಾಲಚಂದ್ರನನ್ನು ನಗಿಸುವ ರಾತ್ರಿಯ ಸ್ವರೂಪವನ್ನು ತಾಳಿ, ಮಳೆ ಮೋಡಗಳ ಗುಂಪಿನಂತೆ ನೀಲವರ್ಣವಾದ ದೇಹಲತೆಯುಳ್ಳವಳಾಗಿ ಸಮಸ್ತ ಬ್ರಹ್ಮಾಂಡಗಳನ್ನೂ ಮಕ್ಕಳನ್ನಾಗಿಸಿ ಕೊಂಡಿರುವ ಈ ಪೋತ್ರಿಣೀದೇವಿಯು ಶ್ರೇಷ್ಠವಾದ ಕಿರಿಚಕ್ರರಥಕ್ಕೆ ಯಾವಾಗಲೂ ಅಲಂಕಾರಪ್ರಾಯಳಾಗಿರುವಳು.

೬. ಅದೇ ಕಿರಿಚಕ್ರರಥದ ಎರಡನೆಯ ಪರ್ವವನ್ನು ಆಶ್ರಯಿಸಿರುವ ದೇವತೆಗಳು ಮೂವರು ಮಾತ್ರ. ಜೃಂಭಿನೀ, ಮೋಹಿನೀ, ಸ್ತಂಭಿನೀ ಎಂದು ಅವರ ಹೆಸರುಗಳು. ಅರಳಿದ ದಾಳಿಂಬರೆಹೂವಿನ ಬಣ್ಣವುಳ್ಳವರಾಗಿ ರುವ ಈ ಮೂವರು ದೇವಿಯರೂ ಸಮಸ್ತದಾನವರನ್ನೂ ಮರ್ದಿಸುವವರು.

೭-೮. ಮುಸಲ, ಹಲ, ಹಾಲಾ (ಮದ್ಯ) ಪಾತ್ರೆ, ಹಾವಿನ ಹಗ್ಗ — ಇವುಗಳನ್ನು ಹಿಡಿದು ಚಿಗುರಿನಂತಿರುವ ತಮ್ಮ ಕೈಗಳಲ್ಲಿ ಪ್ರಜ್ವಲಿಸುತ್ತಿರುವ ಮಾಣಿಕ್ಯದ ಬಳೆಗಳನ್ನು ತೊಟ್ಟು, ಅತಿ ತೀಕ್ಷ್ಣ ಗಳೂ, ಕರಾಳಗಳೂ ಆದ ಕಂಗಳುಳ್ಳವರಾಗಿ, ಅವುಗಳ ಕಿಡಿಗಳಿಂದಲೇ ದಾನವರೆಲ್ಲರನ್ನೂ ಸುಡುತ್ತಿರುವ ಈ ದೇವಿಯರು ಸೂಕರಾನನೆಯಾದ ದಂಡನಾಥಾದೇವಿಯನ್ನು ನಿಶ್ಶಂಕೆಯಿಂದ ಸೇವಿಸುತ್ತಿರುವರು.

೯. ಕಿರಿಚಕ್ರರಥದ ಮೂರನೆಯ ಪರ್ವವನ್ನು ಆಶ್ರಯಿಸಿರುವ

**ಕಠೋರೇಣಾಟ್ಟಹಾಸೇನ ಭಿಂದಂತ್ಯೋ ಭುವನತ್ರಯಂ ।**
**ಜ್ವಾಲಾ ಇವ ಚ ಕಲ್ಪಾಗ್ನೇರಂಗನಾವೇಷಮಾಶ್ರಿತಾಃ ॥ ೧೦ ॥**
**ಭಂಡಾಸುರಸ್ಯ ಸೈನ್ಯಾನಾಂ ಸರ್ವೇಷಾಂ ರುಧಿರಪ್ಲುತಿಂ ।**
**ಲಿಲಿಕ್ಷಮಾಣಾ ಜಿಹ್ವಾಭಿರ್ಲೇಲಿಹಾನಾಭಿರುಜ್ಜ್ವಲಾಃ ।**
**ಸೇವಂತೇ ಸತತಂ ದಂಡನಾಥಾಮುದ್ದಂಡವಿಕ್ರಮಾಂ ॥ ೧೧ ॥**
**ಕಿರಿಚಕ್ರರಥೇಂದ್ರಸ್ಯ ಚತುರ್ಥಂ ಪರ್ವ ಸಂಶ್ರಿತಾಃ ।**
**ಬ್ರಾಹ್ಮ್ಯಾದ್ಯಾಃ ಪಂಚಮೀವರ್ಜ್ಯಾ ಅಷ್ಟಮೀವರ್ಜಿತಾ ಅಪಿ ॥ ೧೨ ॥**
**ಷಡೇವ ದೇವ್ಯಃ ಷಟ್ಚಕ್ರಂ ಜ್ವಲಜ್ಜ್ವಾಲಾಕಲೇವರಾಃ ।**
**ಮಹತಾ ವಿಕ್ರಮೌಘೇನ ಪಿಬಂತ್ಯ ಇವ ದಾನವಾನ್ ।**
**ಆಜ್ಞಯಾ ದಂಡನಾಥಾಯಾಸ್ತಂ ಪ್ರದೇಶಮುಪಾಸತೇ ॥ ೧೩ ॥**

---

ದೇವತೆಗಳು ಅಂಧಿನಿಯೇ ಮೊದಲಾದ ಐದು ಮಂದಿಯೆಂದು ಹೇಳಿದೆ. ಇವರು ದೇವೀ ಮಂತ್ರದಲ್ಲಿಯೂ ಅವಕಾಶವುಳ್ಳವರು.

೧೦. ಇವರೆಲ್ಲರೂ ಕಠೋರವಾದ ಅಟ್ಟಹಾಸದಿಂದಲೇ ಭುವನತ್ರಯವನ್ನೂ ಸೀಳುವವರಾಗಿ, ಪ್ರಳಯಕಾಲದ ಬೆಂಕಿಯ ಕಿಡಿಗಳೇ ಹೆಂಗಸರ ರೂಪವನ್ನು ತಾಳಿರುವರೋ ಎಂಬಂತಿರುವರು.

೧೧. ಭಂಡಾಸುರನ ಸೇನೆಗಳ ರಕ್ತಪ್ರವಾಹವನ್ನು ಪಾನಮಾಡುವುದಕ್ಕೋ ಎಂಬಂತೆ ಈ ದೇವಿಯರೆಲ್ಲರೂ ತಮ್ಮ ನಾಲಗೆಗಳನ್ನು ಸವರಿಕೊಳ್ಳುತ್ತ ಪ್ರಜ್ವಲಿಸುತ್ತಿರುವರು; ಎಲ್ಲರೂ ಉದ್ದಂಡ ಪರಾಕ್ರಮಶಾಲಿನಿಯಾದ ಶ್ರೀ ದಂ ಡ ನಾ ಥಾ ದೇ ವಿ ಯ ಸೇವೆಯನ್ನು ಸತತವೂ ಮಾಡುತ್ತಿರುವರು.

೧೨-೧೩. ಕಿರಿಚಕ್ರರಥದ ನಾಲ್ಕನೆಯ ಪರ್ವವನ್ನಾಶ್ರಯಿಸಿರುವ ಶಕ್ತಿದೇವಿಯರು ಆರು ಮಂದಿ. ಇವರು ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ಇಂದ್ರಾಣೀ, ಚಾಮುಂಡಾ ಎಂಬುವರು. ಪ್ರಜ್ವಲಿಸುತ್ತಿರುವ ಜ್ವಾಲೆಗಳಿಗೆ ಸಮಾನವಾದ ಶರೀರಗಳುಳ್ಳವರಾಗಿ ಮಹತ್ತರವಾದ ಪರಾಕ್ರಮಪ್ರವಾಹದಿಂದಲೇ ದಾನವರೆಲ್ಲರನ್ನೂ ಪಾನ ಮಾಡುವಂತಿರುವ ಈ ಆರು ಮಂದಿ ದೇವಿಯರೂ ಕಿರಿಚಕ್ರರಥದಲ್ಲಿ ಶ್ರೀದಂಡನಾಥಾದೇವಿಯ ಅಪ್ಪಣೆಯಂತೆ ಷಟ್ಚಕ್ರಗಳನ್ನಾಶ್ರಯಿಸಿ ನೆಲಸಿರುವರು.

**ತಸ್ಯೈವ ಪರ್ವಣೋಽಧಸ್ತಾತ್ಪರಿತಃ ಸ್ಥಾನಮಾಶ್ರಿತಾಃ ।**
**ಯಾಕಿನೀ ರಾಕಿನೀ ಚೈವ ಲಾಕಿನೀ ವಾಕಿನೀ ತಥಾ ॥ ೧೪ ॥**
**ಶಾಕಿನೀ ಡಾಕಿನೀ ಚೈವ ತಾಸಾಮೈಕ್ಯಸ್ವರೂಪಿಣೀ ।**
**ಹಾಕಿನೀ ಸಪ್ತಮಿತ್ಯೇತಾಶ್ಚಂಡದೋರ್ದಂಡವಿಕ್ರಮಾಃ ॥ ೧೫ ॥**
**ಪಿಬಂತ್ಯ ಇವ ಭೂತಾನಿ ಪಿಂಕ್ಷಂತ್ಯ ಇವ ಮೇದಿನೀಂ । [ ೧೬ ॥**
**ತ್ವಚಂ ರಕ್ತಂ ತಥಾ ಮಾಂಸಂ ಮೇದೋಽಸ್ಥಿ ಚ ವಿರೋಧಿನಾಂ॥**
**ಮಜ್ಜಾಂ ಪ್ಲೀಹಂ ಚ ಶುಕ್ಲಂ ಚ ಪಿಬಂತ್ಯೋ ವಿಕಟಾನನಾಃ ।**
**ನಿಷ್ಠುರೈಃ ಸಿಂಹನಾದೈಶ್ಚ ಪೂರಯಂತ್ಯೋ ದಿಶೋ ದಶ ।**
**ಧಾತುನಾಥಾ ಇತಿ ಪ್ರೋಕ್ತಾ ಅಣಿಮಾದ್ಯಷ್ಟಸಿದ್ಧಿದಾಃ ॥ ೧೭ ॥**
**ಮೋಹನೇ ಮಾರಣೇ ಚೈವ ಸ್ತಂಭನೇ ತಾಡನೇ ತಥಾ ।**
**ಭಕ್ಷಣೇ ದುಷ್ಟದೈತ್ಯಾನಾಮಾಮೂಲಂ ಚ ನಿಕೃಂತನೇ ॥ ೧೮ ॥**
**ಪಂಡಿತಾಃ ಖಂಡಿತಾಶೇಷವಿಪದೋ ಭಕ್ತಿಶಾಲಿಷು । [ ೧೯ ॥**
**ಧಾತುನಾಥಾ ಇಮಾಃ ಪ್ರೋಕ್ತಾಃ ಸರ್ವಧಾತುಷು ಸಂಸ್ಥಿತಾಃ ॥**

---

೧೪-೧೫. ಆ ನಾಲ್ಕನೆಯ ಪರ್ವದ ಕೆಳಭಾಗದ ಸುತ್ತಮುತ್ತಣ ಸ್ಥಾನಗಳನ್ನಾಶ್ರಯಿಸಿರುವವರು, ಯಾಕಿನೀ, ರಾಕಿನೀ, ಲಾಕಿನೀ, ವಾಕಿನೀ, ಶಾಕಿನೀ, ಡಾಕಿನೀ, ಮತ್ತು ಇವರೆಲ್ಲರ ಸ್ವರೂಪಗಳನ್ನೂ ಒಳಗೊಂಡಿರುವ ಏಳನೆಯವಳಾದ ಹಾಕಿನೀ ಎಂಬ ದೇವತೆ. ಇವರೆಲ್ಲರೂ ಪ್ರಚಂಡವಾದ ಭುಜಬಲಪರಾಕ್ರಮಗಳುಳ್ಳವರು.

೧೬-೧೭. ಸಮಸ್ತ ಭೂತಗಳನ್ನೂ ಪಾನಮಾಡುವರೋ, ಭೂಮಂಡಲವನ್ನೇ ಭೇದಿಸುವರೋ ಎಂಬಂತೆ ತೋರಿ ವಿರೋಧಿಗಳ ಚರ್ಮ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜೆ, ಪ್ಲೀಹ, ಶುಕ್ಲಗಳನ್ನು ಪಾನಮಾಡುತ್ತ ವಿಕಾರವಾದ ಮುಖಗಳುಳ್ಳವರಾಗಿರುವ ಈ ದೇವಿಯರು ಬಹು ಕಠೋರವಾದ ಸಿಂಹನಾದಗಳಿಂದ ದಶದಿಶೆಗಳನ್ನೂ ತುಂಬುತ್ತಿರುವರು. ಇವರು ಧಾತುನಾಥೆಯರೆಂದೂ, ಅಣಿಮಾದಿ ಅಷ್ಟಸಿದ್ಧಿಗಳನ್ನು ದಯಪಾಲಿಸುವವರೆಂದೂ ಹೇಳಲಾಗಿದೆ.

೧೮-೧೯. ಈ ಧಾತುನಾಥಾದೇವಿಯರೆಲ್ಲರೂ ದುಷ್ಟರಾದ ದೈತ್ಯರನ್ನು ಮೋಹಗೊಳಿಸುವುದರಲ್ಲಿಯೂ, ಮೃತಿಹೊಂದಿಸುವುದರಲ್ಲಿಯೂ, ಸ್ತಂಭನಗೊಳಿಸುವುದರಲ್ಲಿಯೂ, ಹೊಡೆಯುವುದರಲ್ಲಿಯೂ, ಭಕ್ಷಣದಲ್ಲಿಯೂ, ಕುಟ್ಟಿ ಕೆಡಹುವುದರಲ್ಲಿಯೂ ಪಂಡಿತೆಯರಾಗಿ ತಮ್ಮಲ್ಲಿ ಭಕ್ತಿ

**ಸಪ್ತಾಪಿ ವಾರಿಧೀನೂರ್ಮಿಮಾಲಾ ಸಂಚೂಷಿತಾಂಬರಾನ್ ।**
**ಕ್ಷಣಾರ್ಧೇನೈವ ನಿಷ್ಪಾತುಂ ನಿಷ್ಪನ್ನಬಹುಸಾಹಸಾಃ ॥ ೨೦ ॥**
**ಶಕಟೀಚಕ್ರವದ್ವೃತ್ತಭಯಂಕರವಿಲೋಚನಾಃ ।**
**ಸ್ವಸ್ವಾಮಿನೀದ್ರೋಹಕೃತಾಂ ಸ್ವಕೀಯಸಮಯದ್ರುಹಾಂ ॥ ೨೧ ॥**
**ವೈದಿಕದ್ರೋಹಿಣಾಂ ದೇವದ್ರೋಹಿಣಾಂ ವೀರವೈರಿಣಾಂ ।**
**ಯಜ್ಞದ್ರೋಹಕೃತಾಂ ದುಷ್ಟದೈತ್ಯಾನಾಂ ಭಕ್ಷಣೇ ಕ್ಷಮಾಃ ।**
**ನಿತ್ಯಮೇವ ಹಿ ಸೇವಂತೇ ಪೋತ್ರಿಣೀಂ ದಂಡನಾಯಿಕಾಂ ॥ ೨೨ ॥**
**ತತ್ರೈವ ಪರ್ವಣಃ ಪಾರ್ಶ್ವದ್ವಿತಯೇ ಕೃತಮಂದಿರೇ ।**
**ಕ್ರೋಧಿನೀಸ್ತಂಭಿನೀ ಖ್ಯಾತೇ ವರ್ತೇತೇ ದೇವತೇ ಉಭೇ ॥ ೨೩ ॥**
**ಚಾಮರೇ ವೀಜಯಂತ್ಯೌ ಚ ಲೋಲಕಂಕಣದೋರ್ಲತೇ ।**
**ದೇವದ್ವಿಷಾಂ ಚಮೂರಕ್ತಹಾಲಾಪಾನಮದೋದ್ಧತೇ ।**
**ಸದೈವ ಘೂರ್ಣಮಾನಾಕ್ಷ್ಯೌ ಸದಾ ಪ್ರಹಸಿತಾನನೇ ॥ ೨೪ ॥**

---

ಸಂಪನ್ನರಾದವರ ಸಮಸ್ತ ವಿಪತ್ತುಗಳನ್ನೂ ಖಂಡಿಸುವ ಸಾಮರ್ಥ್ಯ ವಂತೆಯರಾಗಿ ಸಮಸ್ತ ಧಾತುಗಳಲ್ಲಿಯೂ ನೆಲಸಿರುವವರೆಂದು ಹೇಳಿದೆ.

೨೦. ಈ ಧಾತುನಾಥೆಯರು ಅಲೆಗಳಿಂದ ಬಾನನ್ನೇ ಹೊದ್ದು ನಿಂತಿರುವ ಸಪ್ತ ಸಾಗರಗಳನ್ನೂ ಅರೆಗಳಿಗೆಯಲ್ಲಿಯೇ ಕುಡಿದುಬಿಡಲು ಸಮರ್ಥೆಯರಾಗಿರುವರು.

೨೧-೨೨. ಬಂಡಿಯ ಗಾಲಿಗಳಂತೆ ಗುಂಡಗೂ ದೊಡ್ಡದಾಗಿಯೂ ಇರುವ ಹಲ್ಲುಗಳುಳ್ಳವರೂ, ಭಯಂಕರವಾದ ಕಣ್ಣುಗಳುಳ್ಳವರೂ ಆದ ಈ ಧಾತುನಾಥೆಯರು ತಮ್ಮ ಒಡತಿಯಾದ ದಂಡನಾಥೆಗಾಗಲಿ, ತಮ್ಮ ನಿಯಮಗಳಿಗಾಗಲಿ ದ್ರೋಹಮಾಡುವವರನ್ನೂ, ವೇದ ಮತ್ತು ವೇದೋಕ್ತ ಕರ್ಮಗಳಿಗೆ ದ್ರೋಹಿಗಳಾದವರನ್ನೂ, ಶತ್ರುವೀರರನ್ನೂ, ಯಜ್ಞಶತ್ರುಗಳನ್ನೂ, ದುರುಳ ದೈತ್ಯರನ್ನೂ ಅಗಿದು ತಿನ್ನುವುದರಲ್ಲಿ ಸಮರ್ಥರು. ಇವರೆಲ್ಲರೂ ಪೋತ್ರಿಣಿಯಾದ ಶ್ರೀದಂಡನಾಥಾ ದೇವಿಯನ್ನು ಯಾವಾಗಲೂ ಸೇವಿಸುತ್ತಿರುವರು.

೨೩. ಅದೇ ಪರ್ವದ ಎರಡೂ ಪಾರ್ಶ್ವಗಳಲ್ಲಿರುವ ದಿವ್ಯ ಮಂದಿರ ಗಳಲ್ಲಿ ಕ್ರೋಧಿನೀ ಸ್ತಂಭಿನಿಯರೆಂಬ ಈರ್ವರು ಶಕ್ತಿದೇವಿಯರಿರುವರು.

೨೪. ಇವರೀರ್ವರೂ ಸಡಿಲವಾಗಿ ಜೋಲಾಡುತ್ತಿರುವ ಬಳೆಗ ಳಿಂದಲಂಕೃತವಾದ ಬಾಹಾಲತೆಗಳುಳ್ಳವರಾಗಿ ಶ್ರೀದಂಡನಾಥೆಗೆ ಚಾಮರ

**ಅಥ ತಸ್ಯ ರಥೇಂದ್ರಸ್ಯ ಕಿರಿಚಕ್ರಾಭಿಧಾಜುಷಃ ।**
**ಪಾರ್ಶ್ವದ್ವಯಕೃತಾವಾಸಮಾಯುಧದ್ವಯಮುದ್ಧತಂ ।**
**ಹಲಂ ಚ ಮುಸಲಂ ಚೈವ ದೇವತಾರೂಪಮಾಸ್ಥಿತಂ ॥ ೨೫ ॥**
**ಸ್ವಕೀಯಮುಕುಟಸ್ಥಾನೇ ಸ್ವಕೀಯಾಯುಧವಿಗ್ರಹಂ ।**
**ಆಬಿಭ್ರಾಣಂ ಜಗದ್ವೇಷಿಘಸ್ಮರಂ ವಿಬುಧೈಃ ಸ್ಮೃತಂ ॥ ೨೬ ॥**
**ಏತದಾಯುಧಯುಗ್ಮೇನ ಲಲಿತಾದಂಡನಾಯಿಕಾ ।**
**ಖಂಡಯಿಷ್ಯತಿ ಸಂಗ್ರಾಮೇ ವಿಷಂಗಂ ನಾಮ ದಾನವಂ ॥ ೨೭ ॥**
**ತಸ್ಯೈವ ಪರ್ವಣೋ ದಂಡನಾಥಾಯಾಸ್ತ್ವಗ್ರಸೀಮನಿ ।**
**ವರ್ತಮಾನೋ ಮಹಾಭೀಮ ಸಿಂಹನಾದಧ್ವನನ್ನಭಾಃ ॥ ೨೮ ॥**
**ದಂಷ್ಟ್ರಾಕಟಕಟಾತ್ಕಾರಬಧಿರೀಕೃತದಿಙ್ಮುಖಃ ।**
**ಚಂಡೋಚ್ಚಂಡ ಇತಿ ಖ್ಯಾತಶ್ಚತುರ್ಹಸ್ತಸ್ತ್ರಿಲೋಚನಃ ॥ ೨೯ ॥**

---

ಗಳನ್ನು ಹಾಕುತ್ತ ದೇವಶತ್ರುಗಳಾದ ದಾನವಸೇನೆಗಳ ರಕ್ತಪ್ರವಾಹಗಳನ್ನು ಪಾನಮಾಡಿ ಮದದಿಂದಾಲುತ್ತಿರುವ ಕಂಗಳುಳ್ಳವರಾಗಿ ಯಾವಾಗಲೂ ನಗೆಮುಖವುಳ್ಳವರಾಗಿಯೇ ಇರುವರು.

೨೫. ಕಿರಿಚಕ್ರರಥಶ್ರೇಷ್ಠದ ಎರಡು ಪಾರ್ಶ್ವಗಳಲ್ಲಿಯೂ ಉದ್ಧತವಾದ ಹಲ ಮತ್ತು ಮುಸಲಗಳೆಂಬ ಆಯುಧದ್ವಯಗಳು ದೇವತಾರೂಪಗಳನ್ನು ಧರಿಸಿ ನೆಲಸಿರುವುವು.

೨೬. ಈ ದೇವತೆಗಳೀರ್ವರೂ ತಮ್ಮ ಕಿರೀಟಪ್ರದೇಶದಲ್ಲಿ ದೇವತೆಗಳು ಸ್ಮರಿಸುತ್ತಿರುವುವೂ, ಜಗತ್ತಿನಲ್ಲಿರುವ ಶತ್ರುಗಳೆಲ್ಲರನ್ನೂ ನಿರ್ಮೂಲಗೊಳಿಸುವುವೂ ಆದ ಆಯುಧಗಳನ್ನೇ ಅಲಂಕಾರವಾಗಿ ಧರಿಸಿರುವರು.

೨೭. ಶ್ರೀ ಲಲಿತಾದೇವಿಯ ದಂಡನಾಯಿಕೆಯಾದ ಶ್ರೀ ಪೋತ್ರಿಣೀದೇವಿಯು ಈ ಆಯುಧಯುಗ್ಮದಿಂದಲೇ ಮುಂದೆ ನಡೆಯುವ ಭಂಡಯುದ್ಧದಲ್ಲಿ ವಿಷಂಗನೆಂಬ ದಾನವನನ್ನು ಖಂಡಿಸುತ್ತಾಳೆ.

೨೮-೨೯. ಶ್ರೀದಂಡನಾಥಾದೇವಿಯ ಮುಂಭಾಗದಲ್ಲಿಯೇ, ಮಹಾಭಯಂಕರವಾದ ಸಿಂಹನಾದದಿಂದ ಗಗನಾಂಗಣವನ್ನೇ ಪ್ರತಿಧ್ವನಿತವನ್ನಾಗಿಸುತ್ತಿರುವವನೂ, ಕಟಕಟನೆ ಕಡಿಯುತ್ತಿರುವ ಕೋರೆ ಹಲ್ಲುಗಳ ಧ್ವನಿಯಿಂದ ದಿಗಂತಗಳನ್ನು ಕಿವುಡುಗೊಳಿಸುತ್ತಿರುವವನೂ· ಚಂಡೋಚ್ಚಂಡನೆಂದು ಪ್ರಸಿದ್ಧನಾದವನೂ ಆದ ದೇವತೆಯಿರುವನು. ಈತನಿಗೆ ನಾಲ್ಕು ಹಸ್ತಗಳೂ ಮೂರು ಕಣ್ಣುಗಳೂ ಇರುವುವು.

**ಶೂಲಂ ಖಡ್ಗಂ ಪ್ರೇತಪಾಶೌ ದಧಾನೋ ದೀಪ್ತವಿಗ್ರಹಃ ।**
**ಸದಾ ಸಂಸೇವತೇ ದೇವೀಂ ಪಶ್ಯನ್ನೇವ ಹಿ ಪೋತ್ರಿಣೀಂ ॥ ೩೦ ॥**
**ಕಿರಿಚಕ್ರರಥೇಂದ್ರಸ್ಯ ಪಂಚಮಂ ಪರ್ವ ಸಂಶ್ರಿತಾಃ ।**
**ವಾರ್ತಾಲ್ಯಾದ್ಯಾ ಅಷ್ಟ ದೇವ್ಯೋ ದಿಕ್ಷ್ವಷ್ಟಸು ಚ ವಿಶ್ರುತಾಃ ॥ ೩೧॥**
**ಅಷ್ಟಪರ್ವತ ನಿಷ್ಪಾತಿ ಘೋರನಿರ್ಘಾತ ನಿಃಸ್ವನಾಃ ।**
**ಅಷ್ಟನಾಗಸ್ಫುರದ್ಭೂಷಾ ಅನಷ್ಟಬಲತೇಜಸಃ ॥ ೩೨ ॥**
**ಪ್ರಕೃಷ್ಟದೋಃಪ್ರಕಾಂಡೋಷ್ಮ ಹುತದಾನವಕೋಟಯಃ ।**
**ಸೇವಂತೇ ಲಲಿತಾದೇವ್ಯಾ ದಂಡನಾಥಾಮಹರ್ನಿಶಂ ॥ ೩೩ ॥**
**ತಾಸಾಮಾಖ್ಯಾಶ್ಚ ವಿಖ್ಯಾತಾಃ ಸಮಾಕರ್ಣಯ ತಾಪಸ ॥ ೩೪ ॥**
**ವಾರ್ತಾಲೀ ಚೈವ ವಾರಾಹೀ ಸಾ ವರಾಹಮುಖೀ ಪರಾ ।**
**ಅಂಧಿನೀ ರುಂಧಿನೀ ಚೈವ ಜೃಂಭಿನೀ ಚೈವ ಮೋಹಿನೀ ॥**
**ಸ್ತಂಭಿನೀತಿ ರಿಪುಕ್ಷೋಭಸ್ತಂಭನೋಚ್ಚಾಟನಕ್ಷಮಾಃ ॥ ೩೫ ॥**

---

೩೦. ಈತನು ಶೂಲ, ಖಡ್ಗ, ಪ್ರೇತಪಾಶಗಳನ್ನು ಧರಿಸಿ ಪ್ರಜ್ವಲಿಸುತ್ತಿರುವ ಶರೀರವುಳ್ಳವನಾಗಿರುವನು. ಅಲ್ಲದೆ ಈತನು ಪೋತ್ರಿಣೀದೇವಿಯನ್ನು ಸತತವೂ ನಟ್ಟನೆ ನೋಡುತ್ತ ಆಕೆಯ ಇಂಗಿತವನ್ನರಿತು ಆಕೆಯನ್ನೇ ಸೇವಿಸುತ್ತಿರುವನು.

೩೧. ಆ ರಥಶ್ರೇಷ್ಠದ ಐದನೆಯ ಪರ್ವವನ್ನು ಎಂಟು ದಿಕ್ಕುಗಳಲ್ಲಿಯೂ ಆಶ್ರಯಿಸಿರುವ ದೇವತೆಗಳು ಪ್ರಸಿದ್ಧರಾದ ವಾರ್ತಾಲಿಯೇ ಮೊದಲಾದ ಎಂಟು ಮಂದಿ ಶಕ್ತಿದೇವಿಯರು.

೩೨-೩೩. ಇವರು ಏಕಕಾಲದಲ್ಲಿಯೇ ಎಂಟು ಪರ್ವತಗಳು ಬೀಳುವುದರಿಂದುಂಟಾಗುವ ಘೋರಧ್ವನಿಯುಳ್ಳವರಾಗಿ, ಎಂಟು ನಾಗಸರ್ಪಗಳೇ ಭೂಷಣಗಳುಳ್ಳವರಾಗಿ, ನಷ್ಟವಾಗದ ಬಲವೂ ತೇಜಸ್ಸೂ ಉಳ್ಳ ಶ್ರೇಷ್ಠವಾದ ಭುಜದಂಡಗಳ ಜ್ವಾಲೆಗಳಿಂದಲೇ ಕೋಟ್ಯನುಕೋಟಿ ದಾನವರನ್ನು ಸುಡುವ ಸಾಮರ್ಥ್ಯವುಳ್ಳವರಾಗಿ ಶ್ರೀ ಲಲಿತಾದೇವಿಯ ದಂಡನಾಯಿಕೆಯನ್ನು ಹಗಲಿರುಳೂ ಸೇವಿಸುತ್ತಿರುವರು.

೩೪-೩೫. ಎಲೈ ತಾಪಸನೇ ಈ ಶಕ್ತಿದೇವಿಯರ ಪ್ರಖ್ಯಾತವಾದ ಹೆಸರುಗಳನ್ನು ಕೇಳು: ವಾರ್ತಾಲೀ, ವಾರಾಹೀ, ವರಾಹಮುಖೀ, ಅಂಧಿನೀ, ರುಂಧಿನೀ, ಜೃಂಭಿನೀ, ಮೋಹಿನೀ, ಸ್ತಂಭಿನೀ—ಇವರೆಲ್ಲರೂ

**ತಸ್ಯೈವ ಪರ್ವಣೋ ವಾಮಭಾಗೇ ಸಂತತಸಂಸ್ಥಿತಿಃ ।**
**ದಂಡನಾಥಾ ಪವಾಹ್ಯಸ್ತು ಕಾಸರೋ ಧೂಸರಾಕೃತಿಃ ॥ ೩೬ ॥**
**ಅರ್ಧಕ್ರೋಶಾಯತಃ ಶೃಂಗದ್ವಿತಯಃ ಕ್ರೋಶವಿಗ್ರಹಃ ।**
**ಖಡ್ಗವನ್ನಿಷ್ಠುರೈರ್ಲೋಮಜಾಲೈಃ ಸಂವೃತವಿಗ್ರಹಃ ॥ ೩೭ ॥**
**ನೀಲಾಂಜನಾಚಲಪ್ರಸ್ಥವಿಕಟೋನ್ನತಪೃಷ್ಠಭೂಃ ।**
**ಮಹಾನೀಲಗಿರಿಶ್ರೇಷ್ಠಗರಿಷ್ಠಸ್ಕಂಧಮಂಡಲಃ ॥ ೩೮ ॥**
**ಪ್ರಭೂತೋಷ್ಮಲ ನಿಃಶ್ವಾಸಪ್ರಸರಾಕಂಪಿತಾಂಬುಧಿಃ ।**
**ಘುರ್ಘುರಧ್ವನಿನಾ ಕಾಲಮಹಿಷಂ ವಿಹಸನ್ನಿವ ॥**
**ವರ್ತತೇ ಖುರವಿಕ್ಷಿಪ್ತಪುಷ್ಕಲಾವರ್ತವಾರಿದಃ ॥ ೩೯ ॥**
**ತಸ್ಯೈವ ಪರ್ವಣೋಽಧಸ್ತಾದುಚ್ಚಸ್ಥಾನಕೃತಾಲಯಾಃ ।**
**ಇಂದ್ರಾದಯೋಽನೇಕಭೇದಾ ದಿಶಾಮಷ್ಟಕದೇವತಾಃ ॥ ೪೦ ॥**

---

ಶತ್ರುಗಳನ್ನು ಕ್ಷೋಭೆಗೊಳಿಸುವುದರಲ್ಲಿಯೂ ಉಚ್ಚಾಟನಗೊಳಿಸುವುದರಲ್ಲಿಯೂ ಸಮರ್ಥರು.

೩೬. ಅದೇ ಪರ್ವದ ಎಡಭಾಗದಲ್ಲಿ ಸಂತತವೂ ನೆಲೆಸಿರುವ ಶ್ರೀದಂಡನಾಥಾದೇವಿಯ ವಾಹನವಾದ ಬೂದುಬಣ್ಣದ ಕೋಣವಿರುವುದು.

೩೭-೩೯. ಇದರ ಕೊಂಬುಗಳು ಎರಡು ಕ್ರೋಶಗಳುದ್ದವಾಗಿರುವುವು; ದೇಹವು ಒಂದು ಕ್ರೋಶದಷ್ಟಿರುವುದು; ಕತ್ತಿಯಂತೆ ಬಹು ಚೂಪಾದ ರೋಮಗಳಿಂದ ಮುಚ್ಚಿದ ಶರೀರವುಳ್ಳದಾಗಿ, ಯಮದಂಡದಂತೆ ಪ್ರಚಂಡವಾದ ವಾಲದಂಡದಿಂದ ಮಹಾ ಭಯಂಕರವಾಗಿ, ಕಾಡಿಗೆಯ ಬೆಟ್ಟವನ್ನು ಹೋಲಿ, ವಿಕಾರವೂ, ಎತ್ತರವೂ ಆದ ಪೃಷ್ಠಭಾಗಗಳುಳ್ಳದಾಗಿ, ಮಹಾ ನೀಲಪರ್ವತದಂತೆ ಶ್ರೇಷ್ಠವಾದ ಹೆಗಲಗುಬ್ಬೆಯುಳ್ಳದಾಗಿ ಅಧಿಕವಾದ ಜ್ವಾಲೆಗಳನ್ನುಗುಳುತ್ತಿರುವ ನಿಃಶ್ವಾಸಪ್ರಸರಗಳಿಂದ ಸಪ್ತಸಮುದ್ರಗಳನ್ನೇ ಉಲ್ಲೋಲಕಲ್ಲೋಲವಾಗಿ ಮಾಡುತ್ತ, ಘುರುಘುರುಧ್ವನಿಯಿಂದ ಯಮನ ಮಹಿಷವನ್ನೂ ಅಣಕಿಸುವಂತೆ ತೋರಿ ತನ್ನ ಗೊರಸುಗಳ ಹೊಡತದಿಂದಲೇ ಪುಷ್ಕಲಾವರ್ತಕ ಮೇಘಗಳನ್ನು ಚದರಿಸುತ್ತಿರುವ ಆ ಮಹಿಷವು ಕಿರಿಚಕ್ರದ ವಾಮಭಾಗದಲ್ಲಿಯೇ ಇರುವುದು.

೪೦. ಆ ಪರ್ವದ ಕೆಳಭಾಗದಲ್ಲಿಯೇ ಎತ್ತರ ಸ್ಥಾನಗಳಲ್ಲಿ ನೆಲಸಿರುವವರು ಇಂದ್ರನೇ ಮೊದಲಾದ ಅನೇಕ ಬಗೆಯ ಅಷ್ಟದಿಕ್ಪಾಲಕರು.

ಲಲಿತಾಯಾಂ ಕಾರ್ಯಸಿದ್ಧಿಂ ವಿಜ್ಞಾಪಯಿತುಮಾಗತಾಃ ।
ಲೋಕಸ್ಯಾಪಿ ಚ ಸಂರಕ್ಷಾಂ ಸಂಪಾದಯಿತುಮಾಗತಾಃ ॥ ೪೧ ॥
ತನ್ನಾಮಾನಿ ಶೃಣು ಪ್ರಾಜ್ಞ ಸಂಕ್ಷೇಪಾತ್ಕಥಿತಾನಿ ಮತ್ ।
ಇಂದ್ರಶ್ಚಾಪ್ಸರಶ್ಚೈವ ಸಚತುಷ್ಷಷ್ಟಿಕೋಟಯಃ ॥ ೪೨ ॥
ಸಿದ್ಧಾ ಅಗ್ನಿಶ್ಚ ಸಾಧ್ಯಾಶ್ಚ ವಿಶ್ವೇದೇವಾಸ್ತಥಾಪರೇ ।
ವಿಶ್ವಕರ್ಮಾ ಮಯಶ್ಚೈವ ಮಾತರಶ್ಚ ಬಲೋನ್ನತಾಃ ॥ ೪೩ ॥
ರುದ್ರಸ್ಯ ಪರಿವಾರಾಶ್ಚ ರುದ್ರಾಶ್ಚೈವ ಪಿಶಾಚಕಾಃ ।
ನಿರ್ಋತೀ ರಕ್ಷಸಾಂ ನಾಥೋ ರಾಕ್ಷಸಾ ಬಹವಸ್ತಥಾ ॥ ೪೪ ॥
ಮಿತ್ರಾಶ್ಚ ತತ್ರ ಗಂಧರ್ವಾಃ ಸದಾ ಗಾನವಿಶಾರದಾಃ ।
ವಿಶ್ವಾವಸುಪ್ರಭೃತಯೋ ವಿಖ್ಯಾತಾಸ್ತತ್ಪುರೋಗಮಾಃ ॥ ೪೫ ॥
ತಥಾ ಭೂತಗಣಾಶ್ಚಾನ್ಯೇ ವರುಣೋ ವಸವಃ ಪರೇ ।
ವಿದ್ಯಾಧರಾಃ ಕಿನ್ನರಾಶ್ಚ ಮಾರುತೇಶ್ವರ ಏವ ಚ ॥ ೪೬ ॥
ತಥಾ ಚಿತ್ರರಥಶ್ಚೈತ್ರರಥಕಾನನಕಾರಕಃ । [ ೪೭ ॥
ತುಂಬುರುರ್ನಾರದೋ ಯಕ್ಷಃ ಸೋಮೋ ಯಕ್ಷೇಶ್ವರಸ್ತಥಾ ॥
ದೇವಾಶ್ಚ ಭಗವಾಂಸ್ತತ್ರ ಗೋವಿಂದಃ ಕಮಲಾಪತಿಃ ।
ಈಶಾನಶ್ಚ ಜಗಚ್ಚಕ್ರರಕ್ಷಕಃ ಶೂಲಭೀಷಣಃ ॥ ೪೮ ॥
ಬ್ರಹ್ಮಾ ಚಾಶ್ವಿನಿಪುತ್ರೌ ಚ ವೈದ್ಯವಿದ್ಯಾವಿಶಾರದೌ ।
ಧನ್ವಂತರಿಶ್ಚ ಭಗವಾನಥಾನ್ಯೇ ಗಣನಾಯಕಾಃ ॥ ೪೯ ॥
ಕಟಿಕ್ರೋಡಗಲದ್ದಾನಸಂತರ್ಪಿತಮಧುವ್ರತಾಃ ।
ಏವಂ ಪ್ರಕಾರಾ ಬಹವೋ ದೇವತಾಸ್ತತ್ರ ಜಾಗ್ರತಿ ।
ಪೂರ್ವಾದಿದಿಶಮಾರಭ್ಯ ಪರಿತಃ ಕೃತಮಂದಿರಾಃ ॥ ೫೦ ॥

---

೪೧. ಇವರೆಲ್ಲರೂ ಶ್ರೀ ಲಲಿತಾಂಬಿಕೆಯಲ್ಲಿ ಕಾರ್ಯಸಿದ್ಧಿಯನ್ನು ವಿಜ್ಞಾಪಿಸಿಕೊಳ್ಳುವುದಕ್ಕೂ ಲೋಕದ ರಕ್ಷಣೆಯನ್ನು ಸಾಧಿಸುವುದಕ್ಕೂ ಅಲ್ಲಿಗೈತಂದು ನೆಲಸಿರುವರು.

೪೨-೫೦. ಎಲೈ ಬುದ್ಧಿಶಾಲಿಯೇ! ಇವರ ನಾಮಧೇಯಗಳನ್ನು ಸೂಕ್ಷ್ಮವಾಗಿ ತಿಳಿಸುತ್ತೇನೆ, ಕೇಳು—ಇಂದ್ರ, ಅರವತ್ತುನಾಲ್ಕು ಕೋಟಿ ಸಂಖ್ಯೆಯ ಅಪ್ಸರರು, ಸಿದ್ಧರು, ಅಗ್ನಿ, ಸಾಧ್ಯರು, ವಿಶ್ವೇದೇವತೆಗಳು, ವಿಶ್ವಕರ್ಮ, ಮಯ, ಬಲೋನ್ನತರಾದ ಮಾತೃದೇವತೆಗಳು, ರುದ್ರನ ಪರಿವಾರದೇವತೆಗಳು, ಏಕಾದಶರುದ್ರರು,

ತತ್ರೈವ ದೇವತಾಶ್ಚಕ್ರೇ ಶಕ್ರಾಸುರವರುದ್ದಿಶಃ ।
ಆಶ್ರಿತ್ಯ ಕಿಲ ವರ್ತಂತೇ ತದಧಿಷ್ಠಾನದೇವತಾಃ ॥ ೫೧ ॥
ಜೃಂಭಿಣೀ ಸ್ತಂಭಿನೀ ಚೈವ ಮೋಹಿನೀ ತಿಸ್ರ ಏವ ಹಿ ।
ತಸ್ಯೈವ ಪರ್ವಣಃ ಪ್ರಾಂತೇ ಕಿರಿಚಕ್ರಸ್ಯ ಭಾಸ್ವತಃ ॥ ೫೨ ॥
ಕಪಾಲಂ ಚ ಗದಾಂ ಬಿಭ್ರದೂರ್ಧ್ವಕೇಶೋ ಮಹಾವಪುಃ ।
ಪಾತಾಲತಲಜಂಬಾಲ ಬಹುಲಾಕಾರಕಾಲಿಮಾ ॥ ೫೩ ॥
ಅಟ್ಟಹಾಸಮಹಾವಜ್ರದೀರ್ಣಬ್ರಹ್ಮಾಂಡಮಂಡಲಃ ।
ಭಿಂದನ್ ಡಮರುಕಧ್ವಾನೈ ರೋದಸೀಕಂದರೋದರಂ ॥ ೫೪ ॥
ಫೂತ್ಕಾರಿತ್ರಿಫಣಾಯುಕ್ತಂ ಫಣಿಪಾಶಂ ಕರೇ ವಹನ್ ।
ಕ್ಷೇತ್ರಪಾಲಃ ಸದಾ ಭಾತಿ ಸೇವಮಾನಃ ಕಿಟೀಶ್ವರೀಂ ॥ ೫೫ ॥

---

ಪಿಶಾಚರು, ರಾಕ್ಷಸನಾಥನಾದ ನಿರ್ಋತಿ, ಅಸಂಖ್ಯಾಕರಾದ ರಾಕ್ಷಸರು, ಮಿತ್ರರು, ಯಾವಾಗಲೂ ಗಾನವಿಶಾರದರಾದ ಗಂಧರ್ವರು, ವಿಶ್ವಾವಸುವೇ ಮೊದಲಾದ ವಿಖ್ಯಾತಪುರೋಗಮರು, ಇತರ ಭೂತಗಣಗಳು, ವರುಣ, ಅಷ್ಟವಸುಗಳು, ವಿದ್ಯಾಧರರು, ಕಿನ್ನರರು, ಮಾರುತೇಶ್ವರ, ಚೈತ್ರರಥವೆಂಬ ವನವನ್ನು ರಚಿಸಿದ ಚಿತ್ರರಥ, ತುಂಬುರು, ನಾರದ, ಯಕ್ಷ, ಯಕ್ಷೇಶ್ವರನಾದ ಸೋಮ, ದೇವತೆಗಳು, ಷಡ್ಗುಣೈಶ್ವರ್ಯ ಸಂಪನ್ನನೂ, ಕಮಲಾಪತಿಯೂ ಆದ ಶ್ರೀಮನ್ನಾರಾಯಣ, ಜಗಚ್ಚಕ್ರ ರಕ್ಷಕನೂ, ಶೂಲಭೀಷಣನೂ ಆದ ಈಶಾನ, ಬ್ರಹ್ಮ, ವೈದ್ಯವಿದ್ಯಾ ವಿಶಾರದರಾದ ಅಶ್ವಿನಿಕುಮಾರದೇವತೆಗಳು, ಭಗವಾನ್ ಧನ್ವಂತರಿ, ಮದೋದಕವು ಸುರಿದು ಅದಕ್ಕೆರಗುತ್ತಿರುವ ದುಂಬಿಗಳುಳ್ಳ ಗಂಡಸ್ಥಳಗಳಿಂದಲಂಕೃತರಾದ ಗಣನಾಯಕರು—ಈ ಪ್ರಕಾರ ಅನೇಕಮಂದಿ ದೇವತೆಗಳು ಆ ಪ್ರದೇಶದ ಮೂಡಲು ಮೊದಲಾದ ದಿಕ್ಕುಗಳಲ್ಲಿ ಸುತ್ತಲೂ ನೆಲಸಿ ಜಾಗರೂಕರಾಗಿರುವರು.

೫೧. ಆ ದೇವತಾಚಕ್ರದ ಇಂದ್ರ, ಕುಬೇರ, ವಾಯುದಿಶೆಗಳಲ್ಲಿ ಅವುಗಳ ಅಧಿಷ್ಠಾನ ದೇವತೆಗಳು ಆಶ್ರಯಿಸಿ ನೆಲಸಿರುವರು.

೫೨. ಜೃಂಭಿಣೀ, ಸ್ತಂಭಿನೀ, ಮೋಹಿನೀ ಎಂಬ ಮೂವರು ಶಕ್ತಿ ದೇವಿಯರು ಮಾತ್ರ, ಪ್ರಕಾಶಮಾನವಾದ ಆ ಕಿರಿಚಕ್ರರಥದ ಐದನೆಯ ಪರ್ವದ ಪ್ರಾಂತಭಾಗದಲ್ಲಿಯೇ ನೆಲಸಿರುವರು.

೫೩-೫೫. ಇವರಾದ ತರುವಾಯ ಕಪಾಲವನ್ನೂ, ಗದೆಯನ್ನೂ ಧರಿಸಿ, ಊರ್ಧ್ವಕೇಶನೂ, ಮಹಾಕಾಯನೂ, ಪಾತಾಳದ ಪಾಚಿಯಂತೆ

**ತಸ್ಯೈವ ಚ ಸಮೀಪಸ್ಥಸ್ತಸ್ಯಾ ವಾಹನಕೇಸರೀ ।**
**ಯಮಾರುಹ್ಯ ಪ್ರವವೃಧೇ ಭಂಡಾಸುರವಧೈಷಿಣೀ ॥ ೫೬ ॥**
**ಪ್ರಾಗುಕ್ತಮೇವ ದಂಡೇಶೀವಾಹಸಿಂಹಸ್ಯ ಲಕ್ಷಣಂ ।**
**ತಸ್ಯೈವ ಪರ್ವಣೋಽಧಸ್ತಾದ್ದಂಡನಾಥಾಸಮತ್ವಿಷಃ ॥ ೫೭ ॥**
**ದಂಡಿನೀಸದೃಶಾಶೇಷ ಭೂಷಣಾಯುಧಮಂಡಿತಾಃ ।**
**ಶ್ಯಾಮಾಃ ಕ್ರೋಡಾನನಾಶ್ಚಂದ್ರರೇಖೋತ್ತಂಸಿತಕುಂತಲಾಃ ॥೫೮॥**
**ಹಲಂ ಚ ಮುಸಲಂ ಹಸ್ತೇ ಘೂರ್ಣಯಂತ್ಯೋಮುಹುರ್ಮುಹುಃ।**
**ಲಲಿತಾದ್ರೋಹಿಣಾಂ ಶ್ಯಾಮಾದ್ರೋಹಿಣಾಂ ಸ್ವಾಮಿನೀದ್ರುಹಾಂ॥**
**ರಕ್ತಸ್ರೋತೋಭಿರುತ್ಫುಲೈಃ ಪೂರಯಂತ್ಯಃ ಕಪಾಲಕಂ ।**
**ನಿಜಭಕ್ತದ್ರೋಹಕೃತಾಮಾಂತ್ರಮಾಲಾವಿಭೂಷಣಾಃ ॥ ೬೦ ॥**
**ಸ್ವಗೋಷ್ಠೀ ಸಮಯಾಕ್ಷೇಪಕಾರಿಣಾಂ ಮುಂಡಮಂಡಲೈಃ ।**
**ಅಖಂಡರಕ್ತವಿಚ್ಛೇದೈಃ ಕೃತವೈಕಕ್ಷ್ಯಕಶ್ರಿಯಃ ।**
**ಸಹಸ್ರಂ ದೇವತಾಃ ಪ್ರೋಕ್ತಾಃ ಸೇವಮಾನಾಃ ಕಿಟೇಶ್ವರೀಂ ॥೬೧॥**

---

ಕರ್ರ್ರಗಿರುವವನೂ, ಅಟ್ಟಹಾಸವೆಂಬ ವಜ್ರಾಯುಧದಿಂದ ಬ್ರಹ್ಮಾಂಡ ಮಂಡಲವನ್ನೇ ಸೀಳುತ್ತಿರುವವನೂ, ಡಮರುಕದ ಭಯಂಕರಧ್ವನಿಗಳಿಂದ ಭೂಮ್ಯಂತರಿಕ್ಷಗಳನ್ನು ಭೇದಿಸುತ್ತಿರುವವನೂ, ಫೂತ್ಕಾರ ಮಾಡುತ್ತಿರುವ ಮೂರು ಹೆಡೆಗಳುಳ್ಳ ಫಣಿಪಾಶವನ್ನು ಕೈಯಲ್ಲಿ ಹಿಡಿದಿರುವವನೂ ಆದ ಕ್ಷೇತ್ರಪಾಲಕನು ಯಾವಾಗಲೂ ಕಿಟೇಶ್ವರಿಯಾದ ಆ ದಂಡನಾಥಾದೇವಿಯ ಸೇವೆ ಮಾಡುತ್ತ ನೆಲಸಿರುವನು.

೫೬. ಅವನ ಸಮೀಪದಲ್ಲಿಯೇ ಶ್ರೀದಂಡನಾಥಾದೇವಿಯು ಯಾವ ವಾಹನವನ್ನೇರಿ ವಿಜೃಂಭಿಸಿ ಭಂಡಾಸುರನನ್ನು ವಧಿಸಬಯಸಿರುವಳೋ ಆ ಸಿಂಹವು ವಿರಾಜಿಸುತ್ತಿರುವುದು.

೫೭-೬೧. ಅಯ್ಯಾ, ಅಗಸ್ತ್ಯಮುನಿಯೇ! ದಂಡನಾಥಾದೇವಿಯ ಈ ವಾಹನಸಿಂಹದ ಲಕ್ಷಣವನ್ನು ಹಿಂದೆಯೇ ನಿರೂಪಿಸಿರುವೆನಷ್ಟೆ. ಇನ್ನು, ಅದೇ ಪರ್ವದ ಕೆಳಭಾಗದಲ್ಲಿ ನೆಲಸಿ ಒಡತಿಯಾದ ದಂಡನಾಯಕಿಯ ಕಾಂತಿಯನ್ನೇ ಒಳಗೊಂಡು, ಆಕೆಗೆ ಸದೃಶವಾದ ಭೂಷಣಗಳಿಂದಲೂ, ಆಯುಧಗಳಿಂದಲೂ ಅಲಂಕೃತರಾಗಿ, ಶ್ಯಾಮಲೆಯರೂ, ಕೋರೆಹಲ್ಲುಗಳುಳ್ಳ ಮುಖಗಳುಳ್ಳವರೂ, ಚಂದ್ರರೇಖೆಗಳೇ ಕಿರೀಟವಾಗಿರುವ ಕುಂತಲಗಳುಳ್ಳವರೂ, ಹಲ, ಮುಸಲಗಳನ್ನು ಕೈಯಲ್ಲಿ ಹಿಡಿದು

**ತಾಸಾಂ ನಾಮಾನಿ ಸರ್ವಾಸಾಂ ದಂಡಿನ್ಯಾಃ ಕುಂಭಸಂಭವ ।**
**ಸಹಸ್ರನಾಮಾಧ್ಯಾಯೇ ತು ವಕ್ಷ್ಯಂತೇ ನಾಧುನಾ ಪುನಃ ॥ ೬೨ ॥**
**ಅಥಾಸಾಂ ದೇವತಾನಾಂ ಚ ಕೋಲಾಸ್ಯಾನಾಂ ಸಮೀಪತಃ ।**
**ವಾಹನಃ ಕೃಷ್ಣಸಾರಂಗೋ ದಂಡಿನ್ಯಾಃ ಸಮುಪಸ್ಥಿತಃ ॥ ೬೩ ॥**
**ಕ್ರೋಶಾರ್ಧಾರ್ಧಾಯತಃ ಶೃಂಗೇ ತದರ್ಧಾರ್ಧಾಯತೋ ಮುಖೇ**
**ಕ್ರೋಶಪ್ರಮಾಣಪಾದಶ್ಚ ಸದಾ ಚೋದ್ಧೃತವಾಲಧಿಃ ॥ ೬೪ ॥**
**ಉದರೇ ಧವಲಚ್ಛಾಯೋ ಹುಂಕಾರೇಣ ಮಹೀಯಸಾ ।**
**ಹಸತ್ಮಾರುತವಾಹಸ್ಯ ಹರಿಣಸ್ಯ ಪರಾಕ್ರಮಂ ।**
**ತಸ್ಯೈವ ಪರ್ವಣೋ ದೇಶೇ ವರ್ತತೇ ವಾಹನೋತ್ತಮಃ ॥ ೬೫ ॥**

---

ಅಡಿಗಡಿಗೂ ಗಿರಗಿರನೆ ತಿರುಗಿಸುತ್ತಿರುವವರೂ, ಶ್ರೀಲಲಿತಾದೇವಿಗೂ, ಶ್ಯಾಮಲಾದೇವಿಗೂ, ತಮ್ಮ ಒಡತಿಗೂ ದ್ರೋಹವೆಣಿಸುವವರ ರಕ್ತ ಪ್ರವಾಹಗಳಿಂದ ತಮ್ಮ ಕೈಯಲ್ಲಿರುವ ಕಪಾಲವನ್ನು ತುಂಬುತ್ತಿರುವವರೂ, ಭಕ್ತರಿಗೆ ದ್ರೋಹಿಗಳಾದವರ ಕರಳುಮಾಲೆಗಳಿಂದಲಂಕೃತರಾಗಿ, ತಮ್ಮ ಗೋಷ್ಠಿಯ ನಿಬಂಧನೆಗಳನ್ನು ಆಕ್ಷೇಪಿಸುವವರ, ಒಡೆದು ರಕ್ತ ಸೋರುತ್ತಿರುವ ಮುಂಡಗಳ ಮಾಲೆಗಳನ್ನು ವಕ್ಷಸ್ಥಳಗಳಲ್ಲಿ ಧರಿಸಿ ಶ್ರೀದಂಡನಾಯಕಿಯನ್ನು ಸೇವಿಸುತ್ತಿರುವ ದೇವತೆಗಳು ಸಾವಿರ ಮಂದಿಯೆಂದು ಹೇಳಲಾಗಿದೆ.

೬೨. ಎಲೈ ಕುಂಭಸಂಭವನೇ! ಈ ದೇವತೆಗಳೆಲ್ಲರ ದಿವ್ಯನಾಮಗಳನ್ನು ಸಹಸ್ರನಾಮಾಧ್ಯಾಯದಲ್ಲಿ ಹೇಳಲಾಗುವುದರಿಂದ ಇಲ್ಲಿ ಅವುಗಳನ್ನು ಮತ್ತೆ ಹೇಳುವುದಿಲ್ಲ.

೬೩. ಇವರಾದ ಬಳಿಕ ವರಾಹಮುಖಿಯರಾದ ಈ ದೇವತೆಗಳ ಸಮೀಪದಲ್ಲಿಯೇ, ದಂಡಿನೀದೇವಿಯ ಮತ್ತೊಂದು ವಾಹನವಾದ ಕೃಷ್ಣ ಸಾರಂಗವು ಆಕೆಯ ಆಜ್ಞೆಯನ್ನನುಸರಿಸಿ ನಿಂತಿರುವುದು.

೬೪-೬೫. ಆ ಸಾರಂಗದ ಕೊಂಬುಗಳು ಅರ್ಧಕ್ರೋಶದಷ್ಟು ಉದ್ದವಾಗಿರುವುವು; ಮುಖವು ಮುಕ್ಕಾಲು ಕ್ರೋಶ; ಕಾಲುಗಳು ಒಂದೊಂದೂ ಒಂದೊಂದು ಕ್ರೋಶದಷ್ಟಿರುವುದು. ಅದು ತನ್ನ ಬಾಲವನ್ನು ಯಾವಾಗಲೂ ಎತ್ತಿಕೊಂಡೇ ಇರುವುದು. ಬೆಳ್ಳಗಿರುವ ಉದರ. ಹುಂಕಾರಧ್ವನಿಯಿಂದಲೇ ವಾಯುದೇವನ ಸಾರಂಗದ ಪರಾಕ್ರಮವನ್ನೂ ಅಲ್ಲಗಳೆಯುತ್ತಿರುವುದು. ಈ ರೀತಿಯಾದ ಹರಿಣ ವಾಹನವೂ ಅದೇ ಐದನೆಯ ಪರ್ವದ ಪ್ರಾಂತದಲ್ಲಿಯೇ ನೆಲಸಿರುವುದು.

ಕಿರಿಚಕ್ರರಥೇಂದ್ರಸ್ಯ ತಸ್ಯ ತತ್ರೈವ ಪರ್ವಣಿ ।
ವರ್ತತೇ ಮದಿರಾಸಿಂಧುರ್ದೇವತಾರೂಪಮಾಸ್ಥಿತಃ ॥ ೬೬ ॥
ಮಾಣಿಕ್ಯಗಿರಿವಚ್ಛೋಣಂ ಹಸ್ತೇ ಪಿಶಿತಪಿಂಡಕಂ ।
ದಧಾನೋ ಘೂರ್ಣಮಾನಾಕ್ಷಃ ಸ್ವರ್ಣಾಂಭೋಜಸ್ರಗಾವೃತಃ ।
ಮದಶಕ್ತ್ಯಾ ಸಮಾಶ್ಲಿಷ್ಟೋ ಧೃತರಕ್ತಸರೋಜಯಾ ॥ ೬೭ ॥
ಯದಾ ಯದಾ ಭಂಡದೈತ್ಯಸಂಗ್ರಾಮಃ ಸಂಪ್ರವರ್ತತೇ ।
ಯುದ್ಧೇ ಖೇದಮನುಪ್ರಾಪ್ತಾಃ ಶಕ್ತಯಃ ಸ್ಯುಃ ಪಿಪಾಸಿತಾಃ ॥೬೮॥
ತದಾ ತದಾ ಸುರಾಸಿಂಧುರಾತ್ಮಾನಂ ಬಹುಧಾ ಕ್ಷಿಪನ್ ।
ರಣಖೇದಂ ದೇವತಾನಾಮಂಜಸಾಽಪಾಕರಿಷ್ಯತಿ ॥ ೬೯ ॥
ತದತ್ಯದ್ಭುತಮೇವರ್ಷೇ ಭವಿಷ್ಯತಿ ನ ಸಂಶಯಃ ।
ತದಾ ಶ್ರೋಷ್ಯಸಿ ಸಂಗ್ರಾಮೇ ಕಥ್ಯಮಾನಂ ಮಯಾ ಮುದಾ ॥೭೦॥
ತಸ್ಯೈವ ಪರ್ವಣೋಽಧಸ್ತಾದಷ್ಟದಿಕ್ಷ್ವಥ ಏವ ಚ ।
ಉಪರ್ಯಪಿ ಕೃತಾವಾಸಾ ಹೇತುಕಾದ್ಯಾ ದಶ ಸ್ಮೃತಾಃ ॥ ೭೧ ॥

---

೬೬-೬೭. ಕಿರಿಚಕ್ರರಥಶ್ರೇಷ್ಠದ ಆ ಪರ್ವದ ಪ್ರಾಂತದಲ್ಲಿಯೇ ಸುರಾಸಮುದ್ರವು ದೇವತಾರೂಪವನ್ನು ತಾಳಿ ನೆಲಸಿರುವುದು. ಈ ದೇವತೆಯು ಮಾಣಿಕ್ಯಗಿರಿಯಂತೆ ಕೆಂಪುಬಣ್ಣವುಳ್ಳವನಾಗಿ ಕೈಯಲ್ಲಿ ಮಾಂಸದ ಮುದ್ದೆಯನ್ನು ಹಿಡಿದಿರುವನು. ಆಲುತ್ತಿರುವ ಕಂಗಳುಳ್ಳವನಾಗಿ ಸ್ವರ್ಣಕಮಲಮಾಲಿಕೆಯಿಂದಲಂಕೃತನಾಗಿ, ರಕ್ತ ಕಮಲಾಲಂಕೃತೆಯಾದ ಮದನಶಕ್ತಿಯು ತನ್ನನ್ನು ಆಲಿಂಗಿಸಿರುವಳು.

೬೮-೬೯. ಭಂಡದೈತ್ಯನು ಯಾವ ಯಾವ ಸಮಯಗಳಲ್ಲಿ ರಣ ರಂಗಕ್ಕೆ ನುಗ್ಗಿ ಬರುವನೋ, ಆಯಾ ಸಮಯಗಳಲ್ಲೆಲ್ಲಾ ಅವನೊಡನೆ ಯುದ್ಧಮಾಡಿ ಆಯಾಸಗೊಂಡು ಬಾಯಾರಿ ಬಳಲುವ ಶಕ್ತಿದೇವಿಯ ರೆಲ್ಲರಿಗೂ ಈ ಸುರಾಸಮುದ್ರದೇವತೆಯು ಅನೇಕರೂಪಗಳನ್ನು ತಾಳಿ ಸುರೆಯನ್ನು ಹಂಚಿ ಅವರ ಬಳಲಿಕೆಯನ್ನು ನಿವಾರಿಸುವನು.

೭೦. ಮಹರ್ಷಿಯೇ! ಸುರಾಸಮುದ್ರನ ಈ ಕಾರ್ಯವು ಅತ್ಯದ್ಭುತ ವಾಗಿರುವುದು. ಈ ವಿಷಯವನ್ನು ಮುಂದಣ ಯುದ್ಧಾಧ್ಯಾಯದಲ್ಲಿ ಸಂತೋಷದಿಂದ ವರ್ಣಿಸುತ್ತೇನೆ. ಆಗ ನೀನೂ ಇದನ್ನು ಕೇಳುವೆಯಂತೆ.

೭೧. ಆ ಪರ್ವದ ಕೆಳಭಾಗದ ಎಂಟು ದಿಕ್ಕುಗಳಲ್ಲಿಯೂ ಮೇಲ್ಭಾಗಗಳಲ್ಲಿ ನೆಲಸಿರುವವರು ಹೇತುಕನೇ ಮೊದಲಾದ ಹತ್ತುಮಂದಿ ಭೈರವರೆಂದು ತಿಳಿಯಲಾಗಿದೆ.

ಮಹಾಂತೋ ಭೈರವಶ್ರೇಷ್ಠಾ ಖ್ಯಾತಾ ವಾತಾಪಿತಾಪನ ।
ಉದ್ದೀಪ್ತಾಯುಧತೇಜೋಭಿರ್ದಿವಾ ದೀಪಿತಭಾನವಃ ॥ ೭೨ ॥
ಕಲ್ಪಾಂತಕಾಲೇ ದಂಡಿನ್ಯಾ ಆಜ್ಞಯಾ ವಿಶ್ವಘಸ್ಮರಾಃ ।
ಅತ್ಯುದಗ್ರಪ್ರಕೃತಯಃ ಕಟುದಂಷ್ಟ್ರಾರಟನ್ಮುಖಾಃ ॥ ೭೩ ॥
ತ್ರಿಶೂಲಾಗ್ರವಿನಿರ್ಭಿಣ್ಣಮಹಾವಾರಿದಮಂಡಲಾಃ ।
ಹೇತುಕಸ್ತ್ರಿಪುರಾರಿಶ್ಚ ತೃತೀಯಶ್ಚಾಗ್ನಿಭೈರವಃ ॥ ೭೪ ॥
ಯಮಜಿಹ್ವೈಕಪಾದೌ ಚ ತೌ ಚ ಕಾಲಕರಾಲಕೌ ।
ಭೀಮರೂಪೋ ಹಾಟಕೇಶಸ್ತಥೈವಾಚಲನಾಮವಾನ್ ॥ ೭೫ ॥
ಏತೇ ದಶೈವ ವಿಖ್ಯಾತಾ ದಶಕೋಟಿಭಟಾನ್ವಿತಾಃ ।
ತಸ್ಯೈವ ಕಿರಿಚಕ್ರಸ್ಯ ವರ್ತಂತೇ ಪರ್ವಸೀಮನಿ ॥ ೭೬ ॥
ಏವಂ ಹಿ ದಂಡನಾಥಾಯಾಃ ಕಿರಿಚಕ್ರಸ್ಥದೇವತಾಃ । [ ೭೭ ॥
ಜೃಂಭಿಣ್ಯಾದ್ಯಚಲೇಂದ್ರಾಂತಾಃ ಪ್ರೋಕ್ತಾಸ್ತ್ರೈಲೋಕ್ಯಪಾಲನಾಃ ॥

---

೭೨. ಇವರು ಮಹಾತ್ಮರೂ, ಪರಾಕ್ರಮಶಾಲಿಗಳೂ ಎಂದು ಪ್ರಸಿದ್ಧರಾಗಿರುವರು; ಪ್ರಜ್ವಲಿಸುತ್ತಿರುವ ತಮ್ಮ ತೇಜಸ್ಸಿನಿಂದಲೇ ಗಗನಾಂಗಣದಲ್ಲಿರುವ ಸೂರ್ಯನನ್ನೇ ಬೆಳಗಿಸುತ್ತಿರುವರು.

೭೩. ದಂಡಿನೀದೇವಿಯ ಆಜ್ಞೆಯಂತೆ ಈ ಹತ್ತುಮಂದಿ ಭೈರವರೂ ಪ್ರಳಯಕಾಲದಲ್ಲಿ ಬ್ರಹ್ಮಾಂಡವನ್ನೇ ಪುಡಿಗುಟ್ಟುವವರು; ಭಯಂಕರ ಪರಾಕ್ರಮಶಾಲಿಗಳಾದ ಈ ದಶ ಭೈರವರು ಮಹಾಕ್ರುದ್ಧರಾಗಿ ಔಡು ಕಚ್ಚಿ ಕುಳಿತಿರುವರು.

೭೪-೭೫. ತ್ರಿಶೂಲಾಗ್ರದಿಂದ ಮಹಾಮೇಘಸಮೂಹಗಳನ್ನೇ ಸೀಳಿಹಾಕಿದ ಈ ದಶಭೈರವರು, ಹೇತುಕ, ತ್ರಿಪುರಾರಿ, ಅಗ್ನಿಭೈರವ, ಯಮಜಿಹ್ವ, ಏಕಪಾದ, ಕಾಳ, ಕರಾಳ, ಭೀಮರೂಪ, ಹಾಟಕೇಶ, ಅಚಲ ಎಂಬ ಹೆಸರುಗಳುಳ್ಳವರಾಗಿರುವರು.

೭೬. ಹೀಗೆ ವಿಖ್ಯಾತರಾದ ಈ ಹತ್ತುಮಂದಿ ಭೈರವರು ಹತ್ತು ಕೋಟಿ ಭಟರಿಂದಾವೃತರಾಗಿ ಕಿರಿಚಕ್ರರಥದ ಪರ್ವಗಳ ಸಮೀಪ ದಲ್ಲಿಯೇ ನೆಲಸಿರುವರು.

೭೭. ಎಲೈ ಮುನಿಯೇ! ಹೀಗೆ, ಜೃಂಭಿಣೀದೇವಿಯಿಂದ ಮೊದಲಾಗಿ ಅಚಲನವರೆಗೆ ಶ್ರೀದಂಡನಾಥಾದೇವಿಯ ಕಿರಿಚಕ್ರವನ್ನಾ ಶ್ರಯಿಸಿರುವ ಎಲ್ಲ ದೇವತೆಗಳ ವಿಷಯವನ್ನೂ ನಿನಗೆ ತಿಳಿಸಿದುದಾಯಿತು.

ತತ್ರತ್ಯೈರ್ದೇವತಾವೃಂದೈರ್ಬಹವಸ್ತತ್ರ ಸಂಗರೇ ।
ದಾನವಾ ಮಾರಯಿಷ್ಯಂತೇ ಪಾಸ್ಯಂತೇ ರಕ್ತವೃಷ್ಟಯಃ ॥ ೭೮ ॥
ಇತ್ಥಂ ಬಹುವಿಧತ್ರಾಣಂ ಪರ್ವಸ್ಥೈರ್ದೇವತಾಗಣೈಃ ।
ಕಿರಿಚಕ್ರಂ ದಂಡನೇತ್ರ್ಯಾ ರಥರತ್ನಂ ಚಚಾಲ ಹ ॥ ೭೯ ॥
ಚಕ್ರರಾಜರಥೋ ಯತ್ರ ತತ್ರ ಗೇಯರಥೋತ್ತಮಃ ।
ಯತ್ರ ಗೇಯರಥಸ್ತತ್ರ ಕಿರಿಚಕ್ರರಥೋತ್ತಮಃ ॥ ೮೦ ॥
ಏತದ್ರಥತ್ರಯಂ ತತ್ರ ತ್ರೈಲೋಕ್ಯಮಿವ ಜಂಗಮಂ ।
ಶಕ್ತಿಸೇನಾಸಹಸ್ರಸ್ಯ ಮಧ್ಯೇ ವಿರುರುಚೇತರಾಂ ॥ ೮೧ ॥
ಮೇರುಮಂದರವಿಂಧ್ಯಾನಾಂ ಸಮವಾಯ ಇವಾಭವತ್ ।
ಮಹಾಘೋಷಃ ಪ್ರವವೃಧೇ ಶಕ್ತೀನಾಂ ಸೈನ್ಯಮಂಡಲೇ ॥
ಚಚಾಲ ವಸುಧಾ ಸರ್ವಾ ತಚ್ಚಕ್ರೈರವದಾರಿತಾ ॥ ೮೨ ॥
ಲಲಿತಾಚಕ್ರರಾಜಾಖ್ಯರಥನಾಥಸ್ಯ ಕೀರ್ತಿತಾಃ ।
ಷಟ್‌ಸಾರಥಯ ಉದ್ದಂಡ ಪಾಶಗ್ರಹಣಕೋವಿದಾಃ ॥ ೮೩ ॥

---

೭೮. ಈ ಕಿರಿಚಕ್ರರಥೋತ್ತಮದಲ್ಲಿರುವ ದೇವತೆಗಳೆಲ್ಲರೂ ಮುಂದೆ ನಡೆಯುವ ಭಂಡಯುದ್ಧದಲ್ಲಿ ದಾನವರನ್ನು ಸಂಹರಿಸಿ ಅವರ ರುಧಿರ ವೃಷ್ಟಿಗಳನ್ನು ಪಾನಮಾಡುತ್ತಾರೆ.

೭೯. ತರುವಾಯ ಈ ಪ್ರಕಾರ ಪರ್ವಪರ್ವದಲ್ಲಿಯೂ ನೆಲಸಿರುವ ಶಕ್ತಿದೇವತೆಗಳಿಂದ ಕೂಡಿ ಬಹಳ ಬಲವತ್ತರವಾಗಿರುವ ಶ್ರೀ ದಂಡನಾಥಾ ದೇವಿಯ ಕಿರಿಚಕ್ರವೆಂಬ ರಥಶ್ರೇಷ್ಠವು ಮುಂದಕ್ಕೆ ಚಲಿಸಿತು.

೮೦-೮೧. ಶ್ರೀ ಚಕ್ರರಾಜರಥವೆಲ್ಲಿಯೋ ಅಲ್ಲಿಯೇ ಗೇಯಚಕ್ರ ರಥ; ಎಲ್ಲಿ ಗೇಯಚಕ್ರರಥವೋ ಅಲ್ಲಿಯೇ ಉತ್ತಮವಾದ ಕಿರಿಚಕ್ರರಥ; ಶುಭಕರವಾದ ಈ ಮೂರು ರಥಗಳೂ ಚಲಿಸುತ್ತಿರುವ ಮುರು ಜಗತ್ತು ಗಳೋ ಎಂಬಂತೆ ಸಾವಿರಾರು ಶಕ್ತಿಸೇನೆಗಳ ನಡುವೆ ಹೊರಟವು.

೮೨. ಮೇರು, ಮಂದರ, ವಿಂಧ್ಯಗಳೆಂಬ ಮೂರು ಪರ್ವತಗಳೂ ಒಕ್ಕಡೆ ಸೇರಿದಂತೆ ಈ ಮೂರು ರಥಗಳೂ ಬೆಳಗುತ್ತ ಚಲಿಸಿದಾಗ ಶಕ್ತಿಗಳ ಸೈನ್ಯಸಮೂಹಗಳಲ್ಲಿ ಮಹತ್ತರವಾದ ಕೋಲಾಹಲ ಧ್ವನಿ ಯಾಯಿತು. ವಸುಧೆಯೇ ಆ ರಥಚಕ್ರಗಳಿಂದ ಭೇದಿಸಿದುದಾಗಿ ನಡುಗಿಹೋಯಿತು.

೮೩. ಶ್ರೀಲಲಿತಾದೇವಿಯ ಶ್ರೀಚಕ್ರವೆಂಬ ರಥೋತ್ತಮಕ್ಕೆ

ಇರಾದೇವೀ ಪ್ರಥಮತಸ್ತಥಾ ತ್ರಿಪುರಭೈರವೀ ।
ಸಂಹಾರಭೈರವಶ್ಚಾನ್ಯೋ ರಕ್ತಯೋಗಿನಿವಲ್ಲಭಃ ॥ ೮೪ ॥
ಸಾರಸಃ ಪಂಚಮಶ್ಚೈವ ಚಾಮುಂಡಾ ಚ ತಥಾ ಪರಾ ।
ಏತಾಸ್ತು ದೇವತಾಸ್ತತ್ರ ರಥಸಾರಥಯಃ ಸ್ಮೃತಾಃ ॥ ೮೫ ॥
ಗೇಯಚಕ್ರರಥೇಂದ್ರಸ್ಯ ಸಾರಥಿಸ್ತು ಹಸಂತಿಕಾ ।
ಕಿರಿಚಕ್ರರಥೇಂದ್ರಸ್ಯ ಸ್ತಂಭಿನೀ ಸಾರಥಿಃ ಸ್ಮೃತಾ ॥ ೮೬ ॥
ದಶಯೋಜನಮುನ್ನಮ್ರೋ ಲಲಿತಾರಥಪುಂಗವಃ ।
ಸಪ್ತಯೋಜನಮುಚ್ಛ್ರಾಯಿ ಗೀತಿಚಕ್ರರಥೋತ್ತಮಃ ॥
ಷಡ್ಯೋಜನಸಮುನ್ನಮ್ರಃ ಕಿರಿಚಕ್ರರಥೋ ಮುನೇ ॥ ೮೭ ॥
ಮಹಾಮುಕ್ತಾತಪತ್ರಂ ತು ದಶಯೋಜನವಿಸ್ತೃತಂ ।
ವರ್ತತೇ ಲಲಿತೇಶಾನ್ಯಾ ರಥ ಏವ ನ ಚಾನ್ಯತಃ ॥ ೮೮ ॥

---

ಆರುಮಂದಿ ಸಾರಥಿಗಳಿರುವರೆಂದು ಹೇಳಿದೆ. ಇವರೆಲ್ಲರೂ ಉದ್ದಂಡವಾದ ಪಾಶಗಳನ್ನು ಹಿಡಿಯುವುದರಲ್ಲಿ ಸಮರ್ಥರಾದವರು.

೮೪-೮೫. ಮೊದಲನೆಯವಳು ಇರಾ; ಎರಡನೆಯವಳು ತ್ರಿಪುರಭೈರವೀ; ಮೂರನೆಯವನು ಸಂಹಾರಭೈರವ; ನಾಲ್ಕನೆಯವನು ರಕ್ತಯೋಗಿನೀವಲ್ಲಭನು; ಐದನೆಯವನು ಸಾರಸ; ಆರನೆಯ ಶಕ್ತಿದೇವಿಯೇ ಚಾಮುಂಡಾ. ಈ ದೇವತೆಗಳು ಶ್ರೀಚಕ್ರರಾಜರಥಕ್ಕೆ ಸಾರಥಿಗಳೆಂದು ತಿಳಿಯಲಾಗಿದೆ.

೮೬. ಗೇಯಚಕ್ರರಥಕ್ಕೆ ಸಾರಥಿಯು ಹಸಂತಿಕಾದೇವಿ. ಕಿರಿಚಕ್ರರಥಕ್ಕೆ ಸ್ತಂಭಿನಿಯು ಸಾರಿಥಿನಿ.

೮೭. ಎಲೈ ಅಗಸ್ತ್ಯಮುನಿಯೇ! ಶ್ರೀಲಲಿತಾದೇವಿಯ ಶ್ರೀಚಕ್ರರಥಶ್ರೇಷ್ಠವು ಹತ್ತುಯೋಜನಗಳ ಅಗಲವಿರುವುದು. ಗೇಯಚಕ್ರವು ಏಳುಯೋಜನಗಳ ಅಗಲ. ಕಿರಿಚಕ್ರರಥವಾದರೋ ಆರು ಯೋಜನಗಳ ಅಗಲವುಳ್ಳುದು.

೮೮. ಮಹತ್ತರವಾದ ಮುಕ್ತಾತಪತ್ರವು (ಮುತ್ತಿನ ಸತ್ತಿಗೆಯು) ಶ್ರೀಲಲಿತಾದೇವಿಯ ಶ್ರೀಚಕ್ರರಥದಲ್ಲಿಯೇ ಇರುವುದು. ಅದು ಹತ್ತು ಯೋಜನಗಳ ಅಗಲವುಳ್ಳುದು. ಉಳಿದ ಎರಡು ರಥಗಳಲ್ಲಿ ಆ ಬಗೆಯ ಆತಪತ್ರವಿರುವುದಿಲ್ಲ.

**ತದೇವ ಶಕ್ತಿಸಾಮ್ರಾಜ್ಯಸೂಚಕಂ ಪರಿಕೀರ್ತಿತಂ ।**
**ಸಾಮಾನ್ಯಮಾತಪತ್ರಂ ತು ರಥದ್ವಂದ್ವೇಽಪಿ ವರ್ತತೇ ॥ ೮೯ ॥**
**ಅಥ ಸಾ ಲಲಿತೇಶಾನೀ ಸರ್ವಶಕ್ತಿಮಹೇಶ್ವರೀ ।**
**ಮಹಾಸಾಮ್ರಾಜ್ಯಪದವೀಮಾರೂಢಾ ಭುವನೇಶ್ವರೀ ॥**
**ಚಚಾಲ ಭಂಡದೈತ್ಯಸ್ಯ ಜಯಸಿದ್ಧ್ಯಭಿಕಾಂಕ್ಷಿಣೀ ॥ ೯೦ ॥**
**ಶಬ್ದಾಯಂತೇ ದಿಶಃ ಸರ್ವಾಃ ಕಂಪತೇ ಚ ವಸುಂಧರಾ ।**
**ಕ್ಷುಭ್ಯಂತಿ ಸರ್ವಭೂತಾನಿ ಲಲಿತೇಶ್ಯಾ ವಿನಿರ್ಗಮೇ ॥**
**ದೇವದುಂದುಭಯೋ ನೇದುರ್ನಿಪೇತುಃ ಪುಷ್ಪವೃಷ್ಟಯಃ ॥ ೯೧ ॥**
**ವಿಶ್ವಾವಸುಪ್ರಭೃತಯೋ ಗಂಧರ್ವಾಃ ಸುರಗಾಯಕಾಃ ।**
**ತುಂಬುರುರ್ನಾರದಶ್ಚೈವ ಸಾಕ್ಷಾದೇವ ಸರಸ್ವತೀ ॥ ೯೨ ॥**
**ಜಯಮಂಗಲಶಬ್ದಾನಿ ಪಠಂತಿ ಪಟುಗೀತಿಭಿಃ ।**
**ಹರ್ಷಸಂಫುಲ್ಲವದನಾಃ ಸ್ಫುರತ್ಪುಲಕಭೂಷಣಾಃ ॥**
**ಮುಹುರ್ಜಯಜಯೇತ್ಯೇವಂ ಸ್ತುವಾನಾ ಲಲಿತೇಶ್ವರೀಂ ॥ ೯೩ ॥**

---

೮೯. ಈ ಮುಕ್ತಾತಪತ್ರವೇ ಶಕ್ತಿಸಾಮ್ರಾಜ್ಯಕ್ಕೆ ಚಿಹ್ನೆಯೆಂದು ಕೀರ್ತಿತವಾಗಿದೆ. ಗೇಯಚಕ್ರ ಕಿರಿಚಕ್ರರಥಗಳಲ್ಲಿ ಸಾಮಾನ್ಯವಾದ ಬೆಳುಗೊಡೆ (ಶ್ವೇತಚ್ಛತ್ರ)ಗಳಿರುವುವು.

೯೦. ಈ ಪ್ರಕಾರ, ಸರ್ವಸನ್ನದ್ಧೆಯಾಗಿ, ಸರ್ವಶಕ್ತಿಮಹೇಶ್ವರಿಯೂ ಶಕ್ತಿಮಹಾಸಾಮ್ರಾಜ್ಯದ ಪದವಿಯನ್ನೇರಿರುವವಳೂ, ಪರಮೇಶ್ವರಿಯೂ ಆದ ಶ್ರೀಲಲಿತಾದೇವಿಯು ಭಂಡಾಸುರನ ಸೈನ್ಯಗಳ ವಿನಾಶವನ್ನು ಕೋರಿ ರಣಾಭಿಮುಖವಾಗಿ ಪ್ರಯಾಣಮಾಡಿದಳು.

೯೧. ಆ ಸಮಯದಲ್ಲಿ ದಶದಿಶೆಗಳೂ ಆಕೆಯ ಸೈನ್ಯಗಳ ಕೋಲಾಹಲಧ್ವನಿಗಳಿಂದ ಪ್ರತಿಧ್ವನಿತವಾಗುತ್ತಿದ್ದವು. ವಸುಂಧರೆಯೇ ನಡುಗಿಹೋಯಿತು. ಸಮಸ್ತ ಭೂತಗಳೂ ಕ್ಷೋಭೆಗೊಂಡವು. ದೇವದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿಯಾಯಿತು.

೯೨-೯೩. ಸುರಗಾಯಕರಾದ ವಿಶ್ವಾವಸುವೇ ಮೊದಲಾದ ಗಂಧರ್ವರೂ, ತುಂಬುರು ನಾರದರೂ, ಸಾಕ್ಷಾತ್ ಸರಸ್ವತೀದೇವಿಯೂ, ಸೊಗಸಾದ ಹಾಡುಗಳಿಂದ ಜಯಮಂಗಳವನ್ನು ಹಾಡಿ, ಸಂತೋಷದಿಂದ ಅರಳಿದ ಮುಖಗಳುಳ್ಳವರಾಗಿ, ರೋಮಾಂಚದಿಂದ ಸ್ಫುರಿಸಿ ಅಲುಗಾಡುತ್ತಿರುವ ಭೂಷಣಗಳುಳ್ಳವರಾಗಿ ಅಡಿಗಡಿಗೂ ಆ ಲಲಿತಾಪರಮೇಶ್ವರಿಯನ್ನು ಜಯಜಯಕಾರಗಳಿಂದ ಸ್ತುತಿಸುತ್ತಿದ್ದರು.

**ಹರ್ಷೇಣಾಂಧಾ ಮದೋನ್ಮತ್ತಾಃ ಪ್ರನೃತ್ಯಂತಃ ಪದೇ ಪದೇ ।**
**ಸಪ್ತರ್ಷಯೋ ವಸಿಷ್ಠಾದ್ಯಾ ಋಗ್ಯಜುಸ್ಸಾಮರೂಪಿಭಿಃ ॥ ೯೪ ॥**
**ಅಥರ್ವರೂಪೈರ್ಮಂತ್ರೈಶ್ಚ ವರ್ಧಯಂತೋ ಜಯಶ್ರಿಯಂ ।**
**ಹವಿಷೇವ ಮಹಾವಹ್ನಿಶಿಖಾಮತ್ಯಂತಪಾವನೀಂ ॥**
**ಆಶೀರ್ವಾದೇನ ಮಹತಾ ವರ್ಧಯಾಮಾಸುರುತ್ತಮಾಃ ॥ ೯೫ ॥**
**ತೈಃ ಸ್ತೂಯಮಾನಾ ಲಲಿತಾ ಪ್ರಚಚಾಲ ರಥೋತ್ತಮೇ ।**
**ಭಂಡಾಸುರಂ ವಿನಿರ್ಜೇತುಮುದ್ದಂಡೈಃ ಸಹ ಸೈನಿಕೈಃ ॥ ೯೬ ॥**

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಪಂಚದಶೋಽಧ್ಯಾಯಃ

---

೯೪-೯೫. ಹರ್ಷವು ಮಿತಿಮಿರಿ, ಮೈಮರೆತು ಮದೋನ್ಮತ್ತರಾದವರಂತೆ ಕುಣಿಯುತ್ತ, ಅಡಿಗಡಿಗೂ ಋಗ್ಯಜುಸ್ಸಾಮರೂಪಗಳೂ ಅಥರ್ವರೂಪಗಳೂ ಆದ ಮಹಾಮಂತ್ರಗಳಿಂದ ಅತ್ಯಂತ ಪಾವನೆಯಾದ ಶ್ರೀಲಲಿತಾದೇವಿಯ ವಿಜಯೈಶ್ವರ್ಯವನ್ನು, ಹವಿಸ್ಸುಗಳಿಂದ ಮಹತ್ತರವಾದ ಯಜ್ಞೇಶ್ವರನ ಜ್ವಾಲೆಗಳನ್ನೆಂತೋ ಅಂತು ವೃದ್ಧಿಗೊಳಿಸುತ್ತಿರುವ ವಸಿಷ್ಠಾದಿ ಸಪ್ತರ್ಷಿಗಳು ಶ್ರೇಷ್ಠವಾದ ಆಶೀರ್ವಚನಗಳಿಂದ ಆ ದೇವಿಯನ್ನು ವೃದ್ಧಿಗೊಳಿಸಿ ಸ್ತುತಿಸುತ್ತಿದ್ದರು.

೯೬. ಹೀಗೆ ಶ್ರೀಲಲಿತಾಪರಮೇಶ್ವರಿಯು ಅವರೆಲ್ಲರಿಂದಲೂ ಸಂಸ್ತುತೆಯಾಗಿ ಶ್ರೀಚಕ್ರರಾಜರಥದಲ್ಲಿ ಕುಳಿತು ವಿರಾಜಿಸುತ್ತ ಭಂಡಾಸುರನನ್ನು ಜಯಿಸಲೋಸುಗ ಉದ್ದಂಡವಾದ ತನ್ನ ಸೇನೆಗಳೊಡನೆ ಪ್ರಯಾಣ ಬೆಳೆಸಿದಳು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷೋಡಶೋಽಧ್ಯಾಯಃ

[ಭಂಡಾಸುರಸ್ಯ ಶೂನ್ಯನಗರೇ ಉತ್ಪಾತಾವಿರ್ಭಾವಃ–ಭಂಡಾಸುರಾದಿ ದಾನವ ಕೃತ ಮಂತ್ರಾಲೋಚನಾಪ್ರಕಾರಃ]

ನಾನಾ ದಿವ್ಯಸುವಿಗ್ರಹಾಃ ಕರಲಸನ್ನಾನಾಯುಧಾಶ್ಶಕ್ತಯಃ
ಸ್ವಾನಂದಾಃ ಕಿರಿಚಕ್ರಪರ್ವನಿಲಯಾಃ ಶ್ರೀದಂಡನಾಥಾಂಬಿಕಾಂ।
ಸೇವಂತೇ ವರಭೈರವಾಶ್ಶುಭತರಾ ದಿಗ್ದೇವಪಾಲಾಭಿಧಾಃ
ಯಸ್ಯಾಜ್ಞಾವಶಗಾಃ ಶಿವಾಮಿಹ ಭಜೇ ತಾಂ ಸುಂದರೇಶಪ್ರಿಯಾಂ॥

ಹಯಗ್ರೀವಃ–

**ಆಕರ್ಣ್ಯ ಲಲಿತಾದೇವ್ಯಾ ಯಾತ್ರಾನಿಃಸಾಣನಿಸ್ಸ್ವನಂ।**
**ಮಹಾಂತಂ ಕ್ಷೋಭಮಾಯಾತಾ ಭಂಡಾಸುರಪುರಾಲಯಾಃ॥ ೧ ॥**
**ಯತ್ತತ್ರಾಸೀದ್ದುರಾಶಸ್ಯ ಭಂಡದೈತ್ಯಸ್ಯ ದುರ್ಧಿಯಃ।**
**ಮಹೇಂದ್ರಪರ್ವತೋಪಾಂತೇ ಮಹಾರ್ಣವತಟೇ ಪುರಂ ॥ ೨ ॥**
**ತತ್ತು ಶೂನ್ಯಕನಾಮ್ನೈವ ವಿಖ್ಯಾತಂ ಭುವನತ್ರಯೇ।**
**ವಿಷಂಗಾಗ್ರಜದೈತ್ಯಸ್ಯ ಸದಾವಾಸಃ ಕಿಲಾಭವತ್ ॥ ೩ ॥**
**ತಸ್ಮಿನ್ನೇವ ಪುರೇ ತಸ್ಯ ಶತಯೋಜನವಿಸ್ತರೇ।**
**ವಿತ್ರೇಸುರಸುರಾಃ ಸರ್ವೇ ಶ್ರೀದೇವ್ಯಾಗಮಸಂಭ್ರಮಾತ್। ॥ ೪ ॥**

---

## ಕನ್ನಡದ ಅನುವಾದ

[ಭಂಡಾಸುರನ ಶೂನ್ಯನಗರದಲ್ಲಿ ಉತ್ಪಾತಗಳುಂಟಾದುದು—ಭಂಡಾಸುರನೇ ಮೊದಲಾದ ದಾನವರು ಮಂತ್ರಾಲೋಚನೆಮಾಡಿದುದು]

೧. ಹಯಗ್ರೀವಮುನಿಯು ಹೇಳುತ್ತಾನೆ—ಎಲೈ ಅಗಸ್ತ್ಯ ಮಹರ್ಷಿಯೇ! ಇತ್ತ ಭಂಡಾಸುರನ ಪಟ್ಟಣದ ಪ್ರಜೆಗಳೆಲ್ಲರೂ, ಶ್ರೀಲಲಿತಾದೇವಿಯ ರಣಪ್ರಯಾಣ ಸಮಯದಲ್ಲುಂಟಾದ ಕೋಲಾಹಲ ಧ್ವನಿಯನ್ನು ಕೇಳಿ ಬಹಳವಾಗಿ ತಳಮಳಸಿಹೋದರು.

೨-೩. ಆ ಪಟ್ಟಣವು ಮೂರು ಲೋಕಗಳಲ್ಲಿಯೂ ಶೂನ್ಯನಗರವೆಂದೇ ಪ್ರಸಿದ್ಧವಾಗಿ ವಿಷಂಗದೈತ್ಯನ ಅಣ್ಣನಾದ ಆ ಭಂಡದಾನವನಿಗೆ ಯಾವಾಗಲೂ ಆವಾಸಸ್ಥಾನವಾಗಿ, ಮಹೇಂದ್ರಪರ್ವತದ ತಪ್ಪಲಿನ ಮಹಾರ್ಣವತಟದಲ್ಲಿರುವುದು.

೪. ಶತಯೋಜನವಿಸ್ತೀರ್ಣವಾದ ಆ ಪಟ್ಟಣದಲ್ಲಿರುವ ಅಸುರ

**ಶತಯೋಜನವಿಸ್ತೀರ್ಣಂ ತತ್ಸರ್ವಂ ಪುರಮಾಸುರಂ ।**
**ಧೂಮೈರಿವಾವೃತಮಭೂದುತ್ಪಾತಜನಿತೈರ್ಮುಹುಃ ॥ ೫ ॥**
**ಅಕಾಂಡ ಇವ ನಿರ್ಭಿಣ್ಣಾ ಭಿತ್ತಯೋ ದೈತ್ಯಪತ್ತನೇ ।**
**ಘೂರ್ಣಮಾನಾಃ ಪತಂತಿ ಸ್ಮ ಮಹೋಲ್ಕಾ ಗಗನಸ್ಥಲಾತ್ ॥ ೬ ॥**
**ಉತ್ಪಾತಾನಾಂ ಪ್ರಾಥಮಿಕೋ ಭೂಕಂಪಃ ಪರ್ಯವರ್ತತ ।**
**ಮಹೀ ಜಜ್ವಾಲ ಸಕಲಾ ತತ್ರ ಶೂನ್ಯಕಪತ್ತನೇ ॥ ೭ ॥**
**ಅಕಾಂಡ ಏವ ಹೃತ್ಕಂಪಂ ಭೇಜುರ್ದೈತ್ಯಪುರೌಕಸಃ ।**
**ಧ್ವಜಾಗ್ರವರ್ತಿನಃ ಕಾಕಾ ಗೃಧ್ರಾಶ್ಚೈವ ಬಲಾಃ ಖಗಾಃ ॥**
**ಆದಿತ್ಯಮಂಡಲಂ ದೃಷ್ಟ್ವಾ ದೃಷ್ಟ್ವಾ ಚಕ್ರಂದುರುಚ್ಚಕೈಃ ॥ ೮ ॥**
**ಕ್ರವ್ಯಾದಾ ಬಹವಸ್ತತ್ರ ಲೋಚನೈರ್ನಾವಲೋಕಿತಾಃ ।**
**ಮುಹುರಾಕಾಶವಾಣೀಭಿಃ ಪರುಷಾಭಿರ್ಬಭಾಷಿರೇ ॥ ೯ ॥**

---

ರೆಲ್ಲರೂ ಶ್ರೀದೇವಿಯ ಆಗಮನಸಂರಂಭದಿಂದ ಭಯಗೊಂಡು ತತ್ತಳಿಸಿ ಹೋದರು.

೫. ಅಸುರರು ಕಿಕ್ಕಿರಿದು ತುಂಬಿದ ಆ ಪಟ್ಟಣವೆಲ್ಲವೂ ಅಡಿಗಡಿಗೂ ಉಂಟಾಗುತ್ತಿದ್ದ ಉತ್ಪಾತಗಳ ದೆಸೆಯಿಂದ ಹೊಗೆ ತುಂಬಿ ಕತ್ತಲು ಕವಿದಂತಾಯಿತು.

೬. ಆ ಪಟ್ಟಣದ ಮನೆಗಳ ಗೋಡೆಗಳೆಲ್ಲವೂ ಅಕಾಲದಲ್ಲಿಯೇ ಒಡೆದುಹೋದುವು. ಗಗನಸ್ಥಳದಿಂದ ಉಲ್ಕೆಗಳು ಗಿರಗಿರನೆ ತಿರುತಿರುಗಿ ಭೂಮಿಗೆ ಬೀಳುತ್ತಿದ್ದವು.

೭. ಉತ್ಪಾತಗಳಿಗೆಲ್ಲಾ ಮೊದಲನೆಯದಾಗಿ ಭೂಕಂಪವುಂಟಾಯಿತು. ಅದೇ ಸಮಯದಲ್ಲಿಯೇ ಆ ಪಟ್ಟಣದ ವಾಸಭೂಮಿಯೂ ಧಗಧಗನೆ ಉರಿಯತೊಡಗಿತು.

೮. ಅಲ್ಲಿಯ ಜನಗಳಿಗೆಲ್ಲ ಅಕಾಲದಲ್ಲಿಯೇ ಎದೆಯು ಡವಡವನೆ ಹೊಡೆದುಕೊಳ್ಳಲಾರಂಭಿಸಿತು. ಕಾಗೆಗಳೂ, ಹದ್ದುಗಳೂ, ರಣಹದ್ದುಗಳೂ, ಗೂಬೆಗಳೂ ಇತರ ಪಕ್ಷಿಗಳೂ ಧ್ವಜಾಗ್ರಗಳಲ್ಲಿ ಸೇರಿ ಸೂರ್ಯಮಂಡಲವನ್ನು ನೋಡಿ, ನೋಡಿ ಅರಚಿಕೊಳ್ಳುತ್ತಿದ್ದವು.

೯. ಕಣ್ಣಿಗೆ ಕಾಣಿಸದೆಯೇ ಪಿಶಾಚಗಳು ಅಡಿಗಡಿಗೂ ಆಕಾಶವಾಣಿಗಳಿಂದ ಬಹಳ ಕಠಿನವಾದ ವಾಕ್ಕುಗಳನ್ನಾಡುತ್ತಿದ್ದವು.

ಸರ್ವತೋ ದಿಕ್ಷು ದೃಶ್ಯಂತೇ ಕೇತವಸ್ತು ಮಲೀಮಸಾಃ ।
ಧೂಮಾಯಮಾನಾಃ ಪ್ರಕ್ಷೋಭಜನಕಾ ದೈತ್ಯರಕ್ಷಸಾಂ ॥ ೧೦ ॥
ದೈತ್ಯಸ್ತ್ರೀಣಾಂ ಚ ವಿಭ್ರಷ್ಟಾ ಅಕಾಂಡಾದ್ಭೂಷಣಸ್ರಜಃ ।
ಹಾಹೇತಿ ದೂರಂ ಕ್ರಂದಂತ್ಯಃ ಪರ್ಯಶ್ರು ಸಮರೋದಿಷುಃ ॥೧೧॥
ದರ್ಪಣಾನಾಂ ವರ್ಮಣಾಂ ಚ ಧ್ವಜಾನಾಂ ಖಡ್ಗಸಂಪದಾಂ ।
ಮಣೀನಾಮಂಬರಾಣಾಂ ಚ ಮಾಲಿನ್ಯಮಭವನ್ಮುಹುಃ ॥ ೧೨ ॥
ಸೌಧೇಷು ಚಂದ್ರಶಾಲಾಸು ಕೇಲೀವೇಶ್ಮಸು ಸರ್ವಶಃ ।
ಅಟ್ಟಾಲಕೇಷು ಗೋಷ್ಠೀಷು ವಿಪಣೀಷು ಸಭಾಸು ಚ ॥ ೧೩ ॥
ಚತುಷ್ಕಿಕಾಸ್ವಲಿಂದೇಷು ಪ್ರಕ್ರೀಡೇಷು ಬಲೇಷು ಚ ।
ಸರ್ವತೋಭದ್ರವಾಸೇಷು ನಂದ್ಯಾವರ್ತಾದಿವೇಶ್ಮಸು ॥ ೧೪ ॥
ವಿಚ್ಛಂದಕೇಷು ಶುದ್ಧಾಂತೇಷ್ವವರೋಧನಪಾಲಿಷು ।
ಸ್ವಸ್ತಿಕೇಷು ಚ ಸರ್ವೇಷು ಗರ್ಭಾಗಾರಪುಟೇಷು ಚ ॥ ೧೫ ॥
ಗೋಪುರೇಷು ಕವಾಟೇಷು ವಲಭೀನಾಂ ಚ ಸೀಮಸು ।
ವಾತಾಯನೇಷು ಕಕ್ಷ್ಯಾಸು ಧಿಷ್ಣ್ಯೇಷು ಚ ಖಲೂರಿಷು ॥ ೧೬ ॥

---

೧೦. ಪಟ್ಟಣದ ಎಲ್ಲ ದಿಕ್ಕುಗಳಲ್ಲಿಯೂ ಬಾಲಚುಕ್ಕೆಗಳು ಮೂಡಿ ಹೊಗೆಯಾಡುತ್ತ ಮಲಿನಗಳಾಗಿ ತೋರಿ ದೈತ್ಯರ ಅಳಿವನ್ನು ಸೂಚಿಸುತ್ತಿದ್ದವು.

೧೧. ಆ ಪಟ್ಟಣದೆಲ್ಲೆಡೆಗಳಲ್ಲಿಯೂ ದೈತ್ಯಾಂಗನೆಯರ ಭೂಷಣ ಮಾಲೆಗಳು ಕಾರಣವಿಲ್ಲದೆಯೇ ಅಕಾಲದಲ್ಲಿ ಕಳಚಿ ಬೀಳುತ್ತಿದ್ದವು. ಅವರೆಲ್ಲರೂ ಇದನ್ನು ಕಂಡು ಹಾಹಾಕಾರಮಾಡಿ ಕಂಬನಿಗರೆದು ಗಟ್ಟಿಯಾಗಿ ಅಳತೊಡಗಿದರು.

೧೨. ಕನ್ನಡಿಗಳು, ಕವಚ, ಧ್ವಜ, ಖಡ್ಗವೇ ಮೊದಲಾದ ಯುದ್ಧಸಾಮಗ್ರಿಗಳು ಬಾರಿಬಾರಿಗೂ ಮಂಕಾಗತೊಡಗಿದವು.

೧೩-೧೬. ಉಪ್ಪರಿಗೆಮನೆಗಳು, ಚಂದ್ರಶಾಲೆಗಳು, ಕ್ರೀಡಾ ಮಂದಿರಗಳು, ಅಟ್ಟಲೆಗಳು, ದನದ ಕೊಟ್ಟಿಗೆ, ಅಂಗಡೀಬೀದಿಗಳು, ಸಭಾಮಂದಿರಗಳು, ಚೌಕಗಳು, ಅಂಗಳಗಳು, ವಿಹಾರಮಂದಿರಗಳು, ಸೈನ್ಯಭವನಗಳು, ಸರ್ವತೋಭದ್ರನಂದ್ಯಾವರ್ತಗಳೆಂಬ ಉನ್ನತ ಮಂದಿರಗಳು, ಅಂತಃಪುರಪ್ರದೇಶಗಳು, ಸ್ವಸ್ತಿಕಮಂದಿರಗಳು, ಹೊಲೆಮನೆಗಳು, ಗೋಪುರಗಳು, ಬಾಗಿಲುಗಳು, ಜಂತೆಗಳು, ಗವಾಕ್ಷಿಗಳು, ಕೋಣೆಗಳು,

**ಸರ್ವತ್ರ ದೈತ್ಯನಗರಾವಾಸಿಭಿರ್ಜನಮಂಡಲೈಃ ।**
**ಅಶ್ರೂಯಂತ ಮಹಾಘೋಷಾಃ ಪರುಷಾ ಭೂತಭಾಷಿತಾಃ ॥೧೭॥**
**ಶಿಥಿಲೀ ಸರ್ವತೋ ಜಾತಾ ಘೋರವರ್ಣಾ ಭಯಾನಕಾಃ ।**
**ಕರಟೈಃ ಕಟುಕಾಲಾಪೈರವಲೋಕ್ಯ ದಿವಾಕರಂ ॥ ೧೮ ॥**
**ಸಮರಾಟಕರೋಟೀನಾಂ ಕೋಟಯಶ್ಚಾಪತನ್ ಭುವಿ ।**
**ಅಪತನ್ವೇದಿಮಧ್ಯೇಷು ಬಿಂದವಃ ಶೋಣಿತಾಂಭಸಾಂ ॥ [ ೧೯ ॥**
**ಕೇಶೋಂಡ್ರಕಾಶ್ಚ ನಿಷ್ಪೇತುಃ ಸರ್ವತೋ ಧೂಮಧೂಮಲಾಃ ॥**
**ಭೌಮಾಂತರಿಕ್ಷದಿವ್ಯಾನಾಮುತ್ಪಾತಾನಾಮಿತಿ ವ್ರಜಂ ।**
**ಅವಲೋಕ್ಯ ಭೃಶಂ ತ್ರಸ್ತಾಃ ಸರ್ವೇ ನಗರವಾಸಿನಃ ॥**
**ನಿವೇದಯಾಮಾಸುರಮಾ ಭಂಡಾಯ ಪ್ರಥಿತೌಜಸೇ ॥ ೨೦ ॥**
**ಸ ಚ ಭಂಡಃ ಪ್ರಚಂಡೋಷ್ಮಾ ತೈರುತ್ಪಾತಕದಂಬಕೈಃ ।**
**ಅಸಂಜಾತಧೃತಿಭ್ರಂಶೋ ಮಂತ್ರಸ್ಥಾನಮುಪಾಗಮತ್ ॥ ೨೧ ॥**

---

ಮುಂತಾದ ಸಮಸ್ತ ಪ್ರದೇಶಗಳಲ್ಲಿಯೂ, ಉತ್ತ ನೆಲಗಳಲ್ಲಿಯೂ ಎಲ್ಲೆಲ್ಲಿಯೂ ಆ ಪಟ್ಟಣವಾಸಿಗಳೆಲ್ಲರಿಗೂ ಭಯಂಕರವಾದ ಧ್ವನಿ ಯೊಡಗೂಡಿದ ಭೂತಗಳ ಕಠಿನವಾಕ್ಕುಗಳು ಕೇಳಬಂದವು.

೧೮. ಗಗನಾಂಗಣದಲ್ಲಿನ ಸೂರ್ಯಮಂಡಲವನ್ನು ಮುತ್ತಿ ವಿಕಾರ ವಾಗಿ ಅರಚುತ್ತಿರುವ ಕಾಗೆಗಳ ಗುಂಪನ್ನು ಕಂಡು, ಎಲ್ಲೆಡೆಗಳಲ್ಲಿಯೂ ಇದ್ದ, ಘೋರವರ್ಣದವರೂ, ಭಯಂಕರಾಕಾರರೂ ಆದ ರಾಕ್ಷಸರೆಲ್ಲರೂ ಭಯದಿಂದ ತತ್ತಳಿಸಿ ಉಡುಗಿಹೋದರು.

೧೯. ಕಾಗೆಗಳೆಲ್ಲವೂ ಹೀಗೆ ಅರಚುತ್ತಿರುವಂತೆಯೇ ಲೆಕ್ಕವಿಲ್ಲದಷ್ಟು ಕರೋಟಿಗಳು (ಕೇಶರಾಶಿಗಳು) ನೆಲಕ್ಕೆ ಬಿದ್ದವು. ಯಜ್ಞವೇದಿಕೆಗಳ ನಡುವೆ ಕೆನ್ನೀರಿನ ತೊಟ್ಟುಗಳೂ, ಹೊಗೆಯಂತೆ ಬೂದುಬಣ್ಣವುಳ್ಳ ಕೂದಲ ಕಟ್ಟುಗಳೂ ಬಿದ್ದವು.

೨೦. ಈ ಪ್ರಕಾರ ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ತಲೆದೋರಿದ ದುರ್ನಿಮಿತ್ತಗಳ ಗುಂಪನ್ನು ಕಂಡು, ಆ ನಗರವಾಸಿಗಳೆಲ್ಲರೂ ಬಹುವಾಗಿ ಭಯಗೊಂಡು, ಮಹಾಪರಾಕ್ರಮಶಾಲಿಯೂ ತಮ್ಮ ಸ್ವಾಮಿಯೂ ಆದ ಭಂಡಾಸುರನ ಬಳಿಗೈದಿ ಆ ವಿಷಯವನ್ನು ಅವನಲ್ಲಿ ಅರಿಕೆಮಾಡಿಕೊಂಡರು.

೨೧. ದೈತ್ಯೇಂದ್ರನಾದ ಭಂಡಾಸುರನಾದರೋ ತನ್ನ ನಗರಪ್ರವೇಶ

ಮೇರೋರಿವ ವಪುರ್ಭೇದಂ ಬಹುರತ್ನವಿಚಿತ್ರಿತಂ ।
ಅಧ್ಯಾಸಾಮಾಸ ದೈತ್ಯೇಂದ್ರಃ ಸಿಂಹಾಸನಮನುತ್ತಮಂ ॥ ೨೨ ॥
ಸ್ಫುರನ್ಮುಕುಟಲಗ್ನಾನಾಂ ರತ್ನಾನಾಂ ಕಿರಣೋದ್ಗಮೈಃ ।
ದೀಪಯನ್ನಖಿಲಾಶಾಂತಾನದ್ಯುತದ್ದಾನವೇಶ್ವರಃ ॥ ೨೩ ॥
ಏಕಯೋಜನವಿಸ್ತಾರೇ ಮಹತ್ಯಾಸ್ಥಾನಮಂಟಪೇ ।
ತುಂಗಸಿಂಹಾಸನಸ್ಥಂ ತು ನಿಷೇವಾತೇ ತದಾನುಜೌ ॥ ೨೪ ॥
ವಿಶುಕ್ರಶ್ಚ ವಿಷಂಗಶ್ಚ ಮಹಾಬಲಪರಾಕ್ರಮೌ ।
ತ್ರೈಲೋಕ್ಯಕಂಟಕೀಭೂತಭುಜದಂಡಭಯಂಕರೌ ॥ ೨೫ ॥
ಅಗ್ರಜಸ್ಯ ಸದೈವಾಜ್ಞಾಮವಿಲಂಘ್ಯ ಮುಹುರ್ಮುಹುಃ ।
ತ್ರೈಲೋಕ್ಯವಿಜಯೋಲಬ್ಧಂ ವರ್ಧಯಂತೌ ಮಹದ್ಯಶಃ ॥ ೨೬ ॥
ನತೇನ ಶಿರಸಾ ತಸ್ಯ ಮೃದ್ನಂತೌ ಪಾದಪೀಠಿಕಾಂ ।
ಕೃತಾಂಜಲಿಪ್ರಣಾಮೌ ಚ ಸಮುಪಾವಿಶತಾಂ ಭುವಿ ॥ ೨೭ ॥

---

ಗಳಲ್ಲಿ ತಲೆದೋರಿರುವ ಪ್ರಚಂಡವಾದ ಈ ಉತ್ಪಾತಗಳ ವಿಷಯವನ್ನರಿತೂ ಸ್ವಲ್ಪವೂ ಧೈರ್ಯಗೆಡದೆ, ಅಂತೆಯೇ ಸಭಾಮಂದಿರಕ್ಕೆ ಬಿಜಿಮಾಡಿದನು.

೨೨-೨೩. ಮಹಾಮೇರುಪರ್ವತವನ್ನು ಹೋಲಿ, ಅನೇಕರತ್ನಗಳಿಂದ ಚಿತ್ರಿತವಾಗಿರುವ ಆ ಸಭಾಮಂದಿರದ ಭವ್ಯಸಿಂಹಾಸನವನ್ನೇರಿ ಕುಳಿತ, ಆ ದಾನವೇಶ್ವರನು, ತನ್ನ ಕಿರೀಟದಲ್ಲಿ ಕೆತ್ತಿರುವ ರತ್ನಗಳ ಕಾಂತಿಯಿಂದ ದಿಗಂತಗಳನ್ನೇ ಬೆಳಗಿಸುವವನಾಗಿ ಕಂಗೊಳಿಸಿದನು.

೨೪-೨೫. ಒಂದು ಯೋಜನ ವಿಸ್ತಾರವಾಗಿದ್ದ ಆ ಸಭಾಮಂದಿರದ ಮಹೋನ್ನತವಾದ ಸಿಂಹಾಸನದಲ್ಲಿ ಸುಖಾಸೀನನಾಗಿರುವ ಆ ದೈತ್ಯೇಂದ್ರನನ್ನು, ಮಹಾಬಲಪರಾಕ್ರಮವಂತರೂ, ಮೂರು ಲೋಕಗಳಿಗೂ ಕಂಟಕಪ್ರಾಯವಾದ ಭುಜದಂಡಗಳಿಂದ ಭಯಂಕರರೂ ಆದ ವಿಶುಕ್ರ ವಿಷಂಗರೆಂಬ ಅವನ ತಮ್ಮಂದಿರೀರ್ವರೂ ಓಲೈಸುತ್ತಿದ್ದರು.

೨೬-೨೭. ಅಗ್ರಜನಾದ ಭಂಡದಾನವೇಂದ್ರನ ಆಣತಿಯನ್ನು ಯಾವಾಗಲೂ ಮೀರದೆ, ತ್ರೈಲೋಕ್ಯವಿಜಯದಿಂದ ದೊರಕಿದ ಆತನ ಕೀರ್ತಿಯನ್ನು ಅಡಿಗಡಿಗೂ ವೃದ್ಧಿಗೊಳಿಸುತ್ತಿರುವ ಆ ವಿಶುಕ್ರವಿಷಂಗರೀರ್ವರೂ, ಆತನು ಮಂಡಿಸಿದ್ದ ಸಿಂಹಾಸನದ ಪಾದಪೀಠದಲ್ಲಿ ನಮ್ರತೆಯಿಂದ ಬಾಗಿ ತಮ್ಮ ಶಿರಸ್ಸುಗಳನ್ನು ಸೋಕಿಸಿ ಬದ್ಧಾಂಜಲಿಪುಟರಾಗಿ ನಮಸ್ಕರಿಸಿ ತರುವಾಯ ನೆಲದಲ್ಲಿಯೇ ಕುಳಿತುಕೊಂಡರು.

ಅಥಾಸ್ಥಾನಸ್ಥಿತೇ ತಸ್ಮಿನ್ನಮರದ್ವೇಷಿಣಾಂ ವರೇ । [ ೨೮ ॥
ಸರ್ವೇ ಸಾಮಂತದೈತ್ಯೇಂದ್ರಾಸ್ತಂ ದ್ರಷ್ಟುಂ ಸಮುಪಾಗತಾಃ ॥
ತೇಷಾಮೇಕೈಕಸೈನ್ಯಾನಾಂ ಗಣನಾ ನ ಹಿ ವಿದ್ಯತೇ ।
ಸ್ವಸ್ವನಾಮ ಸಮುಚ್ಚಾರ್ಯ ಪ್ರಣೇಮುಃ ಶೂನ್ಯಕೇಶ್ವರಂ ॥ ೨೯ ॥
ಸ ಚ ತಾನಸುರಾನ್ ಸರ್ವಾನತಿಧೀರಕನೀನಿಕೈಃ ।
ಸಂಭಾವಯನ್ ಸಮಾಲೋಕೈಃ ಕಿಯಂತಂ ಚಿತ್ ಕ್ಷಣಂ ಸ್ಥಿತಃ ॥ ೩೦ ॥
ಅವೋಚತ ವಿಶುಕ್ರಸ್ತಮಗ್ರಜಂ ದಾನವೇಶ್ವರಂ ।
ಮಥ್ಯಮಾನಮಹಾಸಿಂಧು ಸಮಾನಗಲನಿಃಸ್ವನಃ ॥ ೩೧ ॥
ದೇವ ತ್ವದೀಯದೋರ್ದಂಡ ವಿಧ್ವಸ್ತಬಲವಿಕ್ರಮಾಃ ।
ಪಾಪಿನಃ ಪಾಮರಾಚಾರಾ ದುರಾತ್ಮಾನಃ ಸುರಾಧಮಾಃ ॥ ೩೨ ॥
ಶರಣ್ಯಮನ್ಯತಃ ಕ್ವಾಪಿ ನಾಪ್ನುವಂತೋ ವಿಷಾದಿನಃ ।
ಜ್ವಲಜ್ಜ್ವಾಲಾಮಯೇ ವಹ್ನೌ ಪತಿತಾ ನಾಶಮಾಗತಾಃ ॥ ೩೩ ॥

---

೨೮. ಹೀಗೆ ದೇವಶತ್ರುಗಳಲ್ಲಿ ಅಗ್ಗಳೆಯನಾದ ಆ ಭಂಡದಾನವನು ಸಭಾಸ್ಥಾನದಲ್ಲಿ ಸಿಂಹಾಸನವನ್ನು ಮಂಡಿಸಿರಲು, ಸಾಮಂತರಾದ ದೈತ್ಯ ರಾಜರೆಲ್ಲರೂ ಅಲ್ಲಿಗೈತಂದರು.

೨೯. ಅವರಲ್ಲಿ ಒಬ್ಬೊಬ್ಬ ಸಾಮಂತರಾಜನ ಸೈನ್ಯವೂ ಗಣನಾತೀತ ವಾಗಿದ್ದಿತು. ಅವರೆಲ್ಲರೂ ತಮ್ಮ ತಮ್ಮ ಹೆಸರುಗಳನ್ನು ಗಟ್ಟಿಯಾಗಿ ಹೇಳಿ ಕೊಂಡು ಒಡೆಯನಾದ ಆ ಶೂನ್ಯನಗರಾಧಿಪತಿಯನ್ನು ನಮಸ್ಕರಿಸಿದರು.

೩೦. ದೈತ್ಯರಾಜನಾದ ಭಂಡಾಸುರನಾದರೋ, ಮಹಾಧೀರರಾದ ತನ್ನ ಅನುಜರೊಡಗೂಡಿ ಅವರೆಲ್ಲರನ್ನೂ ಗೌರವಿಸಿ ಸ್ವಲ್ಪಕಾಲ ಅವರನ್ನೇ ನೆಟ್ಟನೆ ನೋಡುತ್ತ ಕುಳಿತಿದ್ದನು.

೩೧. ಆ ಸಮಯದಲ್ಲಿ, ವಿಶುಕ್ರದಾನವನು ತನ್ನ ಅಣ್ಣನಾದ ಭಂಡ ದಾನವೇಶ್ವರನನ್ನು ಕುರಿತು, ಕದಡಿ ಭೋರ್ಗರೆಯುತ್ತಿರುವ ಮಹಾ ಸಮುದ್ರಕ್ಕೆ ಸಮಾನವಾದ ಧ್ವನಿಯಿಂದ ಹೀಗೆಂದನು :

೩೨-೩೩. "ದೇವ! ನಿನ್ನ ಭುಜದಂಡದಿಂದಲೇ ಧ್ವಂಸಗೊಳಿಸಲಾದ ಬಲಪರಾಕ್ರಮಗಳುಳ್ಳವರೂ, ಪಾಪಿಷ್ಠರೂ, ಪಾಮರರ ಆಚಾರಗಳುಳ್ಳ ವರೂ, ಅಧಮರೂ ಆದ ಆ ದೇವತೆಗಳು ಬೇರೆಲ್ಲಿಯೂ ರಕ್ಷಣೆಯನ್ನು ಕಾಣದೆ ದುಃಖಗೊಂಡು ಧಗಧಗನುರಿಯುತ್ತಿರುವ ಬೆಂಕಿಯಲ್ಲಿ ಬಿದ್ದು ನಾಶವಾಗಿಹೋದರು.

ತಸ್ಮಾದ್ದೈವಾತ್ಸಮುತ್ಪನ್ನಾ ಕಾಚಿತ್ಸ್ತ್ರೀ ಬಲಗರ್ವಿತಾ । [ ೩೪ ॥
ಸ್ವಯಮೇವ ಕಿಲಾಸ್ರಾಕ್ಷೀತ್ತಾನ್ ದೇವಾನ್ ವಾಸವಾದಿಕಾನ್ ॥
ತೈಃ ಪುನಃ ಪ್ರಬಲೋತ್ಸಾಹೈಃ ಪ್ರೋತ್ಸಾಹಿತಪರಾಕ್ರಮಾ ।
ಬಹುಸ್ತ್ರೀಪರಿವಾರಾ ಚ ವಿವಿಧಾಯುಧಮಂಡಿತಾ ॥ ೩೫ ॥
ಅಸ್ಮಾನ್ ಜೇತುಂ ಕಿಲಾಯಾತಿ ಹಾ ಕಷ್ಟಂ ವಿಧಿವೈಶಸಂ ।
ಅಬಲಾನಾಂ ಸಮೂಹಶ್ಚೇದ್ಬಲಿನೋऽಸ್ಮಾನ್ ವಿಜೇಷ್ಯತೇ॥ ೩೬ ॥
ತರ್ಹಿ ಪಲ್ಲವಭಂಗೇನ ಪಾಷಾಣಸ್ಯ ವಿದಾರಣಂ ।
ಉಚ್ಯಮಾನಮಿದಂ ಹಂತ ಪರಿಹಾಸಾಯ ಕಲ್ಪತೇ ॥
ವಿಡಂಬನಾ ನ ಕಿಮಸೌ ಲಜ್ಜಾಕರಮಿದಂ ನ ಕಿಂ ॥ ೩೭ ॥
ಅಸ್ಮತ್ಸೈನಿಕನಾಸೀರಭಟೇಭ್ಯೋऽಪಿ ಭವೇದ್ಭಿಯಃ ॥ ೩೮ ॥
ಕಾಂದಿಶೀಕತ್ವಮಾಪನ್ನಾಃ ಶಕ್ರಾದ್ಯಾಸ್ತ್ರಿದಿವೌಕಸಃ ।
ಬ್ರಹ್ಮಾದಯಶ್ಚ ನಿರ್ಭಿಣ್ಣವಿಗ್ರಹಾ ಮದ್ಬಲಾಯುಧೈಃ ॥ ೩೯ ॥

---

೩೪. ಅದೇ ಅಗ್ನಿಕುಂಡದಿಂದಲೇ ಯಾವಳೋ ಒಬ್ಬ ಸ್ತ್ರೀಯು ವಿಧಿವಶದಿಂದ ಉತ್ಪನ್ನಳಾಗಿ ಬಂದು, ಬಲದಿಂದ ಕೊಬ್ಬಿ ಇಂದ್ರನೇ ಮೊದಲಾದ ದೇವತೆಗಳನ್ನು ತಾನೇ ಸ್ವತಂತ್ರವಾಗಿ ಮತ್ತೆ ಸೃಜಿಸಿದಳು.

೩೫-೩೬. ಪ್ರಬಲವಾದ ಉತ್ಸಾಹವುಳ್ಳ ಆ ದೇವತೆಗಳಿಂದಲೇ ಪ್ರೋತ್ಸಾಹಗೊಳಿಸಲಾದ ಪರಾಕ್ರಮವುಳ್ಳವಳೂ, ಬಗೆ ಬಗೆಯ ಆಯುಧಗಳಿಂದ ಅಲಂಕೃತೆಯರಾದ ಅನೇಕಮಂದಿ ಸ್ತ್ರೀಯರ ಪರಿವಾರವುಳ್ಳವಳೂ ಆದ ಆ ಸ್ತ್ರೀಯು ಇದೀಗ ನಮ್ಮನ್ನು ಜಯಿಸಲು ಬರುತ್ತಿರುವಳು. ಆಹಾ! ಒಂದು ವೇಳೆ ಆ ಅಬಲೆಯು ಸಬಲರಾದ ನಮ್ಮನ್ನೇನಾದರೂ ಜಯಿಸಿದುದೇ ಆದರೆ ಅದು ವಿಧಿಯ ವೈಚಿತ್ರ್ಯವಲ್ಲದೆ ಮತ್ತೇನು? ಇದು ಮಹಾಕಷ್ಟ!

೩೭-೩೮. ಹೀಗೊಂದು ವೇಳೆ ನಡೆದುದಾದರೆ, ಚಿಗುರಿನಿಂದ ಬಂಡೆಯನ್ನು ಸಿಗಿದಂತಾಗುವುದಲ್ಲವೇ? ಹೇಗೇ ಊಹಿಸಿದರೂ ಇದು ಹಾಸ್ಯಾಸ್ಪದವಾಗಿಯೇ ಆಗುತ್ತದೆ. ನಮ್ಮ ಸೈನ್ಯಗಳ ಮುಂದಾಳುಗಳಾದ ವೀರಭಟರಿಗೆ ಇದರಿಂದ ಭಯವುಂಟಾದೀತೆಂಬ ಈ ಮಾತಂತು ಕೇವಲ ಅಣಕದ ಮಾತಲ್ಲದೆ ಮತ್ತೇನು? ಇದು ನಾಚಿಕೆಯನ್ನುಂಟುಮಾಡುವ ವಿಷಯವಲ್ಲವೇ?

೩೯. ನಮ್ಮ ಸೇನೆಗಳ ಆಯುಧಗಳ ದೆಸೆಯಿಂದ ದೇವೇಂದ್ರನೇ

**ವಿಷ್ಣೋರಪಿ ಕಾ ಕಥಾ ವಾಸ್ತಿ ವಿತ್ರಸ್ತಃ ಸ ಮಹೇಶ್ವರಃ ।**
**ಅನ್ಯೇಷಾಮಿಹ ಕಾ ವಾರ್ತಾ ದಿಕ್ಪಾಃ ಸರ್ವೇ ಪಲಾಯಿತಾಃ ॥೪೦॥**
**ಅಸ್ಮಾಕಮಿಷುಭಿಸ್ತೀಕ್ಷ್ಣೈರದೃಶ್ಯೈರಂಗಪಾತಿಭಿಃ । [ ೪೧ ॥**
**ಸರ್ವತ್ರ ವಿದ್ಧವರ್ಮಾಣೋ ದುರ್ಮನಾ ವಿಬುಧಾಃ ಕೃತಾಃ ॥**
**ತಾದೃಶಾನಾಮಪಿ ಮಹಾಪರಾಕ್ರಮಭುಜೋಷ್ಮಣಾಂ ।**
**ಅಸ್ಮಾಕಂ ವಿಜಯಾಯಾದ್ಯ ಸ್ತ್ರೀ ಕಾಚಿದಭಿಧಾವತಿ ॥ ೪೨ ॥**
**ಯದ್ಯಪಿ ಸ್ತ್ರೀ ತದಾಪ್ಯೇಷಾ ನಾವಮಾನ್ಯಾ ಕದಾಚನ ।**
**ಅಲ್ಪೋಽಪಿ ರಿಪುರಾತ್ಮಜ್ಞೈರ್ನಾವಮಾನ್ಯೋ ಜಿಗೀಷುಭಿಃ ॥ ೪೩ ॥**
**ತಸ್ಮಾತ್ತದುತ್ಸಾರಣಾರ್ಥಂ ಪ್ರೇಷಣೀಯಾಸ್ತು ಕಿಂಕರಾಃ ।**
**ಸಕಚಗ್ರಾಹಮಾಕೃಷ್ಯ ಸಾಽಽನೇತವ್ಯಾ ಮದೋದ್ಧತಾ ॥ ೪೪ ॥**
**ದೇವ ತವದೀಯಶುದ್ಧಾಂತವರ್ತಿನೀನಾಂ ಮೃಗೀದೃಶಾಂ ।**
**ಚಿರೇಣ ಚೇಟಿಕಾಭಾವಂ ಸಾ ದುಷ್ಟಾ ಸಂಶ್ರಯಿಷ್ಯತಿ ॥ ೪೫ ॥**

---

ಮೊದಲಾದ ದೇವತೆಗಳೆಲ್ಲರೂ ದಿಕ್ಕೆಟ್ಟು ಪಲಾಯನವಾಗಿದ್ದಾರೆ. ಮುಸಲಾಯುಧಗಳ ಹೊಡತಗಳಿಂದ ಬ್ರಹ್ಮಾದಿಗಳೂ ಭೇದಿಸಿಹೋದ ಶರೀರವುಳ್ಳವರಾದರು.

೪೦. ವಿಷ್ಣುವಿನ ಮಾತೇನು? ಮಹೇಶ್ವರನೇ ಹೆದರಿಹೋದನು. ದಿಕ್ಪಾಲಕರ ಕಥೆಯನ್ನು ಕಟ್ಟಿಕೊಂಡೇನು? ಅವರು ಓಡಿಯೇಹೋದರು.

೪೧-೪೨. ದುರ್ಮದರಾದ ಆ ದೇವತೆಗಳು, ಕಣ್ಣಿಗೆ ಕಾಣಿಸದೆಯೇ ಮೈಯಲ್ಲಿ ನಾಟುತ್ತಿದ್ದ ನಮ್ಮ ತೀಕ್ಷ್ಣಬಾಣಗಳಿಂದ ಒಡೆದ ಮರ್ಮಸ್ಥಳಗಳುಳ್ಳವರಾಗುತ್ತಿದ್ದರು. ಅಂತಹ ಭುಜಬಲಪರಾಕ್ರಮಶಾಲಿಗಳಾದ ನಮ್ಮನ್ನು ಜಯಿಸುವುದಕ್ಕೆ ಒಬ್ಬ ಹೆಂಗಸು ಅಟ್ಟಬರುತ್ತಿರುವಳಂತೆ.

೪೩. ಅವಳು ಸಾಮಾನ್ಯಸ್ತ್ರೀಯಾದರೂ ಅವಳನ್ನು ಕಡೆಗಾಣಬಾರದು. ವಿಜಯವನ್ನು ಕೋರುವ ಪ್ರಾಜ್ಞರು ಶತ್ರುವು ಎಷ್ಟೇ ಅಲ್ಪನಾದರೂ ಅವನನ್ನು ಕಡೆಗಣಿಸಬಾರದಷ್ಟೆ!

೪೪. ಆದುದರಿಂದ ಎಲೈ ಸ್ವಾಮಿಯೇ! ಈಗಲೇ ನೀನು ಅವಳನ್ನು ಓಡಿಸುವುದಕ್ಕಾಗಿ ಕಿಂಕರರನ್ನಟ್ಟಬೇಕು. ಅವರು ಮದೋದ್ಧತೆಯಾದ ಆ ಸ್ತ್ರೀಯ ಮುಂದಲೆಯನ್ನು ಹಿಡಿದು ಎಳೆದುತರಲಿ.

೪೫. ಬಳಿಕ ಆ ದುಷ್ಟೆಯು ಜಾಗ್ರತೆಯಾಗಿಯೇ ನಿನ್ನ ಅಂತಃಪುರದಲ್ಲಿರುವ ಮೃಗಾಕ್ಷಿಯರಿಗೆ ದಾಸಿಯಾಗುತ್ತಾಳೆ.

ಏಕೈಕಸ್ಮಾದ್ಭಟಾದಸ್ಮಾತ್ಸೈನ್ಯೇಷು ಪರಿಪಂಥಿನಃ ।
ಶಂಕತೇ ಖಲು ವಿತ್ರಸ್ತಂ ತ್ರೈಲೋಕ್ಯಂ ಸಚರಾಚರಂ ॥ ೪೬ ॥
ಅತ್ರ ದೇವಸ್ಯ ಚಿತ್ತಂ ತು ಪ್ರಮಾಣಮಿತಿ ದಾನವಃ ।
ನಿವೇದ್ಯ ಭಂಡದೈತ್ಯಾಯ ಕ್ರೋಧಂ ತಸ್ಯ ವ್ಯವೀವೃಧತ್ ॥ ೪೭ ॥
ವಿಷಂಗಸ್ತು ಮಹಾಸತ್ತ್ವೋ ವಿಚಾರಜ್ಞೋ ವಿಚಕ್ಷಣಃ ।
ಇದಮಾಹ ಮಹಾದೈತ್ಯಮಗ್ರಜನ್ಮಾನಮುದ್ಧತಂ ॥ ೪೮ ॥
ದೇವ ತ್ವಮೇವ ಜಾನಾಸಿ ಸರ್ವಕಾರ್ಯಮರಿಂದಮ ।
ನ ತು ತೇ ಕ್ವಾಪಿ ವಕ್ತವ್ಯಂ ನೀತಿವರ್ತ್ಮನಿ ವರ್ತನೇ ॥ ೪೯ ॥
ಸರ್ವಂ ವಿಚಾರ್ಯ ಕರ್ತವ್ಯಂ ವಿಚಾರಃ ಪರಮಾ ಗತಿಃ ।
ಅವಿಚಾರೇಣ ಚೇತ್ಕಾರ್ಯಂ ಸಮೂಲಮವಕೃಂತತಿ ॥ ೫೦ ॥
ಪರಸ್ಯ ಕಟಕೇ ಚಾರಾಃ ಪ್ರೇಷಣೀಯಾಃ ಪ್ರಯತ್ನತಃ ।
ತೇಷಾಂ ಬಲಾಬಲಂ ಜ್ಞೇಯಂ ಜಯಸಂಸಿದ್ಧಿಮಿಚ್ಛತಾ ॥ ೫೧ ॥

---

೪೬-೪೭. ನಮ್ಮ ಸೈನ್ಯದ ಒಬ್ಬೊಬ್ಬ ಭಟನಿಂದಲೇ ಚರಾಚರಾತ್ಮಕವಾದ ಜಗತ್ತ್ರಯವೂ ಹೆದರುವುದೆಂದು ಶತ್ರುಗಳು ಶಂಕಿಸುತ್ತಾರೆ. ಇನ್ನುಳಿದ ವಿಷಯದಲ್ಲಿ ಸ್ವಾಮಿಯ ಚಿತ್ತವೇ ಪ್ರಮಾಣ" ಎಂದು ವಿಶುಕ್ರದೈತ್ಯನು ಅಗ್ರಜನಿಗೆ ಅರಿಕೆಮಾಡಿ ಅವನ ಕ್ರೋಧವನ್ನು ಹುರಿಗೊಳಿಸಿದನು.

೪೮. ತರುವಾಯ ಮಹಾಪರಾಕ್ರಮಿಯೂ, ವಿಚಾರಜ್ಞನೂ, ವಿಚಕ್ಷಣನೂ ಆದ ವಿಷಂಗನು ಬಹಳವಾಗಿ ಗರ್ವಿಸಿರುವ ತನ್ನ ಅಗ್ರಜನಾದ ಭಂಡದೈತ್ಯೇಂದ್ರನನ್ನು ಕುರಿತು ಈ ರೀತಿ ಅರಿಕೆಮಾಡಿದನು:

೪೯. "ಎಲೈ ಸ್ವಾಮಿಯೇ! ಶತ್ರುಮರ್ದನನಾದ ನೀನೇ ಸಮಸ್ತ ಕಾರ್ಯಗಳನ್ನೂ ತಿಳಿದಿರುವೆ. ರಾಜನೀತಿಯ ವಿಷಯದಲ್ಲಂತು ನಿನಗೆ ಹೇಳಬೇಕಾದುದೇನೂ ಇರುವುದಿಲ್ಲ.

೫೦. ಯಾವ ಕಾರ್ಯವನ್ನು ಮಾಡಬೇಕಾದರೂ ಎಲ್ಲವನ್ನೂ ವಿಚಾರಮಾಡಿಯೇ ಮಾಡಬೇಕು. ವಿಚಾರವೇ ಶ್ರೇಷ್ಠವಾದ ಮಾರ್ಗವಲ್ಲವೇ? ವಿಚಾರಮಾಡದೆ ಆರಂಭಿಸಿದ ಯಾವ ಕಾರ್ಯವಾದರೂ ಸಮೂಲವಾಗಿ ನಾಶವನ್ನುಂಟುಮಾಡುತ್ತದೆ.

೫೧. ಗೂಢಚಾರರನ್ನು ಪ್ರಯತ್ನಪೂರ್ವಕವಾಗಿ ಶತ್ರುಗಳ ಪಾಳೆಯಕ್ಕೆ ಕಳುಹಿಸಬೇಕು. ವಿಜಯಸಿದ್ಧಿಯನ್ನಪೇಕ್ಷಿಸುವವನು ಶತ್ರುಗಳ ಬಲಾಬಲಗಳನ್ನು ತಿಳಿದುಕೊಳ್ಳುವುದು ಆವಶ್ಯಕ.

ಚಾರಚಕ್ಷುರ್ದೃಢಪ್ರಜ್ಞಃ ಸದಾ ಶಂಕಿತಮಾನಸಃ ।
ಅಶಂಕಿತಾಕಾರವಾಂಶ್ಚ ಗುಪ್ತಮಂತ್ರಃ ಸ್ವಮಂತ್ರಿಷು ॥ ೫೨ ॥
ಷಡುಪಾಯಾನ್ ಪ್ರಯುಂಜಾನಃ ಸರ್ವತ್ರಾಭ್ಯರ್ಹಿತೇ ಪದೇ ।
ವಿಜಯಂ ಲಭತೇ ರಾಜಾ ಜಾಲ್ಮೋ ಮಂಕ್ಷು ವಿನಶ್ಯತಿ ॥ ೫೩ ॥
ಅವಿಮೃಶ್ಯೈವ ಯಃ ಕಶ್ಚಿದಾರಂಭಃ ಸ ವಿನಾಶಕಃ ।
ವಿಮೃಶ್ಯ ತು ಕೃತಂ ಕರ್ಮ ವಿಶೇಷಾಜ್ಜಯದಾಯಕಂ ॥ ೫೪ ॥
ತಿರ್ಯಗಿತ್ಯಪಿ ನಾರೀತಿ ಕ್ಷುದ್ರ ಇತ್ಯಪಿ ರಾಜಭಿಃ ।
ಕಾರ್ಯಾ ವೈರಿಣಿ ನಾವಜ್ಞಾ ಶಕ್ತೇಃ ಸರ್ವತ್ರ ಸಂಭವಾತ್ ॥೫೫॥
ಸ್ತಂಭೋತ್ಪನ್ನೇನ ಕೇನಾಪಿ ನರತಿರ್ಯಗ್ವಪುರ್ಧೃತಾ ।
ಭೂತೇನ ಸರ್ವಭೂತಾನಾಂ ಹಿರಣ್ಯಃ ಕಂಟಕೋ ಹತಃ ॥ ೫೬ ॥
ಪುರಾ ಹಿ ಚಂಡಿಕಾ ನಾಮ ನಾರೀ ಮಾಯಾವಿಜೃಂಭಿಣೀ ।
ನಿಶುಂಭಶುಂಭೌ ಮಹಿಷಂ ವ್ಯಾಪಾದಿತವತೀ ರಣೇ ॥ ೫೭ ॥

---

೫೨-೫೩. ಗೂಢಚಾರರೆಂಬ ಕಣ್ಣುಗಳುಳ್ಳವನೂ, ಸ್ಥಿರಬುದ್ಧಿಯುಳ್ಳವನೂ,' ಯಾವಾಗಲೂ ಮನಸ್ಸಿನಲ್ಲಿ ಸಂಶಯವನ್ನಿಟ್ಟುಕೊಂಡಿದ್ದರೂ ತನ್ನ ಭಾವವನ್ನು ಇತರರಿಗೆ ತೋರ್ಪಡಿಸದೆ, ತನ್ನ ಮಂತ್ರಿಗಳಲ್ಲಿಯೇ ಗುಟ್ಟಾಗಿ ಎಲ್ಲವನ್ನೂ ಆಲೋಚಿಸಿ ಸರಿಯಾದ ಸಮಯಗಳಲ್ಲಿ ಸಮಾದಾನವೇ ಮೊದಲಾದ ಆರು ಉಪಾಯಗಳನ್ನು ಹೂಡುವ ದೊರೆಯು ವಿಜಯವನ್ನು ಪಡೆಯುತ್ತಾನೆ. ಇದಕ್ಕೆ ಮೀರಿ ನಡೆಯುವ ತಿಳಿಗೇಡಿಯು ಜಾಗ್ರತೆಯಾಗಿಯೇ ನಾಶವಾಗುತ್ತಾನೆ.

೫೪. ಚೆನ್ನಾಗಿ ವಿಮರ್ಶೆಮಾಡದೆ ಆರಂಭಿಸಿದ ಕಾರ್ಯವಾದರೋ ವಿಶೇಷವಾಗಿ ಕೆಡುಕನ್ನೇ ಉಂಟುಮಾಡುವುದು. ವಿಮರ್ಶೆಮಾಡಿ ಆರಂಭಿಸಿದ ಕಾರ್ಯವು ಅತಿಶಯವಾದ ವಿಜಯವನ್ನುಂಟುಮಾಡುವುದು.

೫೫. ಪಶು, ನಾರಿ, ಅಲ್ಪಳು ಎಂದು ರಾಜರಾದವರು ಶತ್ರುಗಳನ್ನು ಕಡೆಗಾಣಬಾರದು. ಏಕೆಂದರೆ ಶಕ್ತಿಯೆಂಬುದು ಎಲ್ಲೆಡೆಗಳಲ್ಲಿಯೂ ಇದ್ದೇ ಇರುತ್ತದೆ.

೫೬. ಕಂಬವನ್ನೊಡೆದುಕೊಂಡು ಹುಟ್ಟಿದ ನರಸಿಂಹದೇಹಧಾರಿಯಾದ ಯಾವನೋ ಒಬ್ಬನಿಂದ ಸರ್ವಭೂತಗಳಿಗೂ ಕಂಟಕಪ್ರಾಯನಾಗಿದ್ದ ಹಿರಣ್ಯಕಶಿಪುವು ಹತನಾಗಲಿಲ್ಲವೇ?

೫೭. ಪೂರ್ವದಲ್ಲಿ ಮಾಯೆಯನ್ನು ವಿಜೃಂಭಿಸಿದ ಚಂಡಿಕೆ

ತತ್ಪ್ರಸಂಗೇನ ಬಹವಸ್ತಯಾ ದೈತ್ಯಾ ವಿನಾಶಿತಾಃ । [ ೫೮ ॥
ಅತೋ ವದಾಮಿ ನಾವಜ್ಞಾ ಸ್ತ್ರೀಮಾತ್ರೇ ಕ್ರಿಯತಾಂ ಕ್ವಚಿತ್ ॥
ಶಕ್ತಿರೇವ ಹಿ ಸರ್ವತ್ರ ಕಾರಣಂ ವಿಜಯಶ್ರಿಯಃ । [ ೫೯ ॥
ಶಕ್ತೇರಾಧಾರತಾಂ ಪ್ರಾಪ್ತೈಸ್ತ್ರೀಪುಲ್ಲಿಂಗೈರ್ನ ನೋ ಭಯಂ ॥
ಶಕ್ತಿಶ್ಚ ಸರ್ವತೋ ಭಾತಿ ಸಂಸಾರಸ್ಯ ಸ್ವಭಾವತಃ । [ ೬೦ ॥
ತರ್ಹಿ ತಸ್ಯಾ ದುರಾಶಾಯಾಃ ಪ್ರವೃತ್ತಿರ್ಜ್ಞಾಯತಾಂ ತ್ವಯಾ ॥
ಕೇಯಂ ಕಸ್ಮಾತ್ಸಮುತ್ಪನ್ನಾ ಕಿಮಾಚಾರಾ ಕಿಮಾಶ್ರಯಾ ।
ಕಿಂಬಲಾ ಕಿಂಸಹಾಯಾ ವಾ ದೇವ ತತ್ಪ್ರವಿಚಾರ್ಯತಾಂ ॥ ೬೧ ॥
ಇತ್ಯುಕ್ತಃ ಸ ವಿಷಂಗೇಣ ನೀತಿಮಾರ್ಗವಿದಾಽಮುನಾ ।
ಅವಜ್ಞಾಭ್ರುಕುಟೀಂ ಚಕ್ರೇ ಸ್ತ್ರೀತಿ ಹೇಲಾಪರಾಯಣಃ ॥ ೬೨ ॥

---

ಎಂಬವಳೊಬ್ಬಳು ನಿಶುಂಭ ಶುಂಭರನ್ನೂ, ಮಹಿಷಾಸುರನನ್ನೂ ರಣರಂಗದಲ್ಲಿ ಮೃತಿಹೊಂದಿಸಲಿಲ್ಲವೇ?

೫೮. ಆ ಕಾಳಗದ ನೆಪದಿಂದಲೇ ಆ ಸ್ತ್ರೀಯು ಅನೇಕಮಂದಿ ದಾನವವೀರರನ್ನು ನಾಶಗೊಳಿಸಲಿಲ್ಲವೇ? ಆದುದರಿಂದ ಎಂದಿಗೇ ಆಗಲಿ ಸ್ತ್ರೀಮಾತ್ರದವಳೆಂದು ತಾತ್ಸಾರವನ್ನು ಮಾಡಕೂಡದು.

೫೯. ಪ್ರಭುವೇ! ಎಲ್ಲೆಡೆಗಳಲ್ಲಿಯೂ ವಿಜಯವು ಲಭಿಸುವುದಕ್ಕೆ ಶಕ್ತಿಯೇ ಕಾರಣವೆನಿಸುವುದಷ್ಟೆ! ಆ ಶಕ್ತಿಯ ಆಧಾರವಿರುವವರು ಸ್ತ್ರೀಯರಾಗಲಿ, ಪುರುಷರಾಗಲಿ, ಅವರಿಂದ ನಮಗೆ ಭಯವಿದ್ದೇ ಇರುತ್ತದೆಯಲ್ಲವೇ.

೬೦. ಸ್ವಾಭಾವಿಕವಾಗಿ ಈ ಜಗತ್ತಿನಲ್ಲಿ ಶಕ್ತಿಯೆಂಬುದು ಎಲ್ಲೆಡೆಗಳಲ್ಲಿಯೂ ವ್ಯಕ್ತವಾಗಿಯೇ ಇರುವುದು. ಆದುದರಿಂದ ದುರಾಶೆಯುಳ್ಳ ಈ ಹೆಂಗಸಿನ ಆಶಯವೇನೆಂಬುದನ್ನೂ, ಏತಕ್ಕಾಗಿ ದಂಡೆತ್ತಿ ಬಂದಿರುವಳೆಂಬುದನ್ನೂ ಈಗ ನಾವು ತಿಳಿಯಬೇಕಾಗಿರುವುದು.

೬೧. ಇವಳಾರು? ಇವಳ ಜನ್ಮಕಥೆಯೇನು? ಇವಳ ನಡತೆಯೇನು? ಇವಳಿಗಿರುವ ಆಶ್ರಯವೆಂತಹುದು? ಇವಳ ಬಲವೆಷ್ಟು? ಇವಳಿಗಿರುವ ಸಹಾಯವೇನು? ಎಂಬೀ ಸಂಗತಿಗಳನ್ನು ಸ್ವಾಮಿಯು ವಿಚಾರಮಾಡುವುದಾಗಲಿ."

೬೨. ನೀತಿಮಾರ್ಗವನ್ನು ತಿಳಿದವನಾದ ವಿಷಂಗದಾನವನು ಈ ರೀತಿ ನುಡಿಯಲು, ಆ ಭಂಡಾಸುರನು ಕೇವಲ ಸ್ತ್ರೀಯೆಂದು ಹಾಸ್ಯ

ಅರೇ ನೀತಿವಿಚಾರೋಽಯಂ ಸಮಸತ್ತ್ವೇಷು ಶತ್ರುಷು । [ ೬೩ ॥
ಯುಜ್ಯತೇ ವನಿತಾಯಾಂ ತು ಕೋಽವಿಚಾರೋ ಮಹೌಜಸಾಂ ॥
ಅಸ್ಮದ್ಬಲೇ ಮಹಾಸತ್ತ್ವಾ ಅಕ್ಷೌಹಿಣ್ಯಧಿಪಾಃ ಶತಂ ।
ಪಾತುಂ ಸಮಸ್ತಜಲಧೀನಲಂ ದಗ್ಧುಂ ತ್ರಿವಿಷ್ಟಪಂ ॥ ೬೪ ॥
ಅರೇ ಪಾಪಸಮಾಚಾರ ಕಿಂ ವೃಥಾ ಶಂಕಸೇ ಸ್ತ್ರಿಯಂ ।
ತತ್ಸರ್ವಂ ಹಿ ಮಯಾ ಪೂರ್ವಂ ಚಾರದ್ವಾರಾ ವಿಲೋಕಿತಂ ॥ ೬೫ ॥
ಅಗ್ನೇಃ ಸಮುತ್ಥಿತಾ ಕಾಚಿಲ್ಲಲಿತಾನಾಮಧಾರಿಣೀ ।
ಯಥಾರ್ಥನಾಮವತ್ಯೇಷಾ ಪುಷ್ಪವತ್ಪೇಶಲಾಕೃತಿಃ ॥ ೬೬ ॥
ನ ಸತ್ತ್ವಂ ನ ಚ ವಾ ವೀರ್ಯಂ ನ ಸಂಗ್ರಾಮೇಷು ವಾ ಗತಿಃ ।
ಅಶ್ರಾವಿ ಚಾರನಿವಹಾತ್ಕಿಂತು ಮಾಯಾಪರಾಯಣಾ ॥ ೬೭ ॥

---

ಮಾಡುವುದಕ್ಕೇ ತೊಡಗಿ ನಸುನಕ್ಕು ತಿರಸ್ಕಾರದಿಂದ ಹುಬ್ಬುಕೊಂಕಿಸಿ ಅವನನ್ನು ಕುರಿತು ಹೀಗೆಂದನು:

೬೩. "ಎಲಾ! ನೀನು ಹೇಳಿದ ಈ ನೀತಿವಿಚಾರಗಳೆಲ್ಲ ಶತ್ರುಗಳು ಸಮಾನವಾದ ಬಲಪರಾಕ್ರಮಗಳುಳ್ಳವರಾಗಿದ್ದರೆ ಮಾತ್ರ ಯುಕ್ತವೆನಿಸುತ್ತವೆ. ಹಾಗಲ್ಲದೆ ಒಬ್ಬ ಸಾಮಾನ್ಯ ವನಿತೆಯ ವಿಷಯದಲ್ಲಿ ಮಹಾಪರಾಕ್ರಮಶಾಲಿಗಳಾದವರಿಗೆ ಇಂತಹ ವಿಚಾರವೆಂದರೇನು?

೬೪. ನಮ್ಮ ಸೈನ್ಯದಲ್ಲಿ ಮಹಾಬಲಿಷ್ಠರಾದ ನೂರಾರು ಮಂದಿ ಅಕ್ಷೋಹಿಣೀ ಸೇನೆಗಳ ನಾಯಕರಿರುವರು. ಇವರೆಲ್ಲರೂ ಸಪ್ತಸಾಗರಗಳನ್ನು ಪಾನಮಾಡುವುದಕ್ಕೂ, ಸ್ವರ್ಗವನ್ನೇ ಸುಡುವುದಕ್ಕೂ ಸಮರ್ಥರಾಗಿದ್ದಾರೆ.

೬೫. ಎಲಾ ಪಾಪಿಷ್ಠನೇ! ನೀನು ಒಬ್ಬ ಹೆಂಗಸಿಗೆ ಹೆದರುವೆಯಾ? ನೀನು ಹೇಳಿದ ವಿಷಯಗಳೆಲ್ಲವನ್ನೂ ಮೊದಲೇ ನಾನು ಗೂಢಚಾರರ ಮೂಲಕ ತಿಳಿದುಕೊಂಡಿರುವೆನು.

೬೬. ಲಲಿತೆಯೆಂಬವಳಾವಳೋ ಒಬ್ಬಳು ಅಗ್ನಿಯಿಂದ ಹುಟ್ಟಿದಳಂತೆ. ಅವಳು ತನ್ನ ಹೆಸರಿಗೆ ತಕ್ಕಂತೆಯೇ ಕುಸುಮಕೋಮಲವಾದ ಶರೀರವುಳ್ಳವಳಂತೆ.

೬೭. ಅವಳಿಗೆ ಬಲವಾಗಲಿ, ಪರಾಕ್ರಮವಾಗಲಿ ಇರುವುದಿಲ್ಲ. ಯುದ್ಧ ವಿಷಯವಂತು ಅವಳಿಗೆ ಏನೂ ತಿಳಿಯದು. ಆದರೂ ಅವಳು ಮಾಯಾಪರಾಯಣೆಯೆಂದು (ಬಹು ಠಕ್ಕಿನವಳೆಂದು) ನಾನು ಚಾರರಿಂದ ಕೇಳಿ ತಿಳಿದಿರುವೆನು.

ತತ್ಸತ್ತ್ವೇನಾವಿದ್ಯಮಾನಂ ಸ್ತ್ರೀಕದಂಬಕಮಾತ್ಮನಃ ।
ಉತ್ಪಾದಿತವತೀ ಕಿಂಚಿತ್ತೇನ ಚೈವಂ ವಿಚೇಷ್ಟತೇ ॥ ೬೮ ॥
ಅಥವಾ ಭವದುಕ್ತೇನ ನ್ಯಾಯೇನಾಸ್ತು ಮಹದ್ಬಲಂ ।
ತ್ರೈಲೋಕ್ಯೋಲ್ಲಂಘಿಮಹಿಮಾ ಭಂಡಃ ಕೇನ ವಿಜೀಯತೇ ॥ ೬೯ ॥
ಇದಾನೀಮಪಿ ಮದ್ಬಾಹುಬಲಸಂಮರ್ದಮೂರ್ಚ್ಛಿತಾಃ ।
ಶ್ವಸಿತುಂ ಚಾಪಿ ಪಟವೋ ನ ಕದಾಚನ ನಾಕಿನಃ ॥ ೭೦ ॥
ಕೇಚಿತ್ಪಾತಾಲಗರ್ಭೇಷು ಕೇಚಿದಂಬುಧಿವಾರಿಷು ।
ಕೇಚಿದ್ದಿಗಂತಕೋಣೇಷು ಕೇಚಿತ್ಕುಂಜೇಷು ಭೂಭೃತಾಂ ॥ ೭೧ ॥
ವಿಲೀನಾ ಭೃಶವಿತ್ರಸ್ತಾಸ್ತ್ಯಕ್ತದಾರಸುತಶ್ರಿಯಃ ।
ಭ್ರಷ್ಟಾಧಿಕಾರಾ ಬಹವಶ್ಛನ್ನವೇಷಾಶ್ಚರಂತಿ ತೇ ॥ ೭೨ ॥
ಏತಾದೃಶಂ ನ ಜಾನಾತಿ ಮಮ ಬಾಹುಪರಾಕ್ರಮಂ ।
ಅಬಲಾ ನ ಚಿರೋತ್ಪನ್ನಾ ತೇನೈಷಾ ದರ್ಪಮಶ್ನುತೇ ॥ ೭೩ ॥

---

೬೮. ಆ ಮಾಯೆಯ ಬಲದಿಂದ ಅವಳು ಗೊತ್ತಿಲ್ಲದಂತೆ ಯಾವುದೋ ಒಂದು ಹೆಂಗಸರ ಪಡೆಯನ್ನು ಸೃಜಿಸಿರುವಳು. ಅದರಿಂದಲೇ ಹೀಗೆ ಸ್ವಲ್ಪಮಟ್ಟಿಗೆ ಚೇಷ್ಟೆಮಾಡುತ್ತಿರುವಳು.

೬೯. ಅಥವಾ ನೀನು ಹೇಳಿದಂತೆ ಅವಳಿಗೆ ನ್ಯಾಯವಾಗಿಯೇ ದೊಡ್ಡ ಸೈನ್ಯವಿರುವುದೆಂದು ಭಾವಿಸೋಣ. ಹಾಗಿದ್ದರೂ ಮೂರು ಲೋಕಗಳಿಗೂ ಮೀರಿರುವ ಮಹಿಮೆಯುಳ್ಳ ಈ ಭಂಡನನ್ನು ಗೆಲ್ಲುವವರು ಯಾರಿರುವರು?

೭೦. ನನ್ನ ಭುಜಬಲದ ಸಮ್ಮರ್ದದಿಂದ ಮೂರ್ಛಿತರಾದ ದೇವತೆಗಳು ಈಗಲೂ ಕೂಡ ಉಸಿರಾಡಲೂ ಶಕ್ತಿಯಿಲ್ಲದವರಾಗಿದ್ದಾರೆ!

೭೧-೭೨. ಬಹಳವಾದ ಭಯದಿಂದ ತತ್ತಳಿಸಿ ಹೆಂಡಿರುಮಕ್ಕಳನ್ನೂ ರಾಜ್ಯೈಶ್ವರ್ಯವನ್ನೂ ತೊರೆದು, ಅಧಿಕಾರದಿಂದ ಭ್ರಷ್ಟರಾಗಿರುವ ಆ ದೇವತೆಗಳಲ್ಲಿ ಬಹುಮಂದಿ ಮಾರುವೇಷಗಳಿಂದ ಸಂಚರಿಸುತ್ತಿದ್ದಾರೆ. ಅಲ್ಲದೆ, ಅವರಲ್ಲಿ ಕೆಲವರು ಪಾತಾಳಲೋಕದ ಮಧ್ಯಭಾಗಗಳಲ್ಲಿಯೂ, ಕೆಲವರು ಸಮುದ್ರಗಳ ಮಧ್ಯಪ್ರದೇಶಗಳಲ್ಲಿಯೂ, ಕೆಲವರು ದಿಗಂತಗಳಲ್ಲಿಯೂ, ಇನ್ನೂ ಕೆಲವರು ಗಿರಿ ಗುಹೆಗಳಲ್ಲಿಯೂ ಅಡಗಿರುವರು.

೭೩. ನಿನ್ನೆ ಮೊನ್ನೆ ತಾನೇ ಹುಟ್ಟಿದ ಆ ಅಬಲೆಯು ಇಂತಹ ನನ್ನ ಭುಜ ಪರಾಕ್ರಮವನ್ನು ತಿಳಿಯಳಾದಕಾರಣ ಈ ರೀತಿ ಗರ್ವ ಪಡುತ್ತಿರುವಳು.

**ನ ಜಾನಂತಿ ಸ್ತ್ರಿಯೋ ಮೂಢಾ ವೃಥಾ ಕಲ್ಪಿತಸಾಹಸಾಃ ।**
**ವಿನಾಶಮನುಧಾವಂತಿ ಕಾರ್ಯಾಕಾರ್ಯವಿಮೋಹಿತಾಃ ॥ ೨೪ ॥**
**ಅಥವಾ ತಾಂ ಪುರಸ್ಕೃತ್ಯ ಯದ್ಯಾಗಚ್ಛಂತಿ ನಾಕಿನಃ । [ ೨೫ ॥**
**ಯಕ್ಷಾ ಮಹೋರಗಾಃ ಸಿದ್ಧಾ ಸಾಧ್ಯಾ ವಾ ಯುದ್ಧದುರ್ಮದಾಃ ॥**
**ಬ್ರಹ್ಮಾ ವಾ ಪದ್ಮನಾಭೋ ವಾ ರುದ್ರೋ ವಾಥ ಸುರಾಧಿಪಃ ।**
**ಅನ್ಯೇ ವಾ ಹರಿತಾಂ ನಾಥಾಸ್ತೇಷಾಂ ಪೇಷ್ಟುಮಹಂ ಪಟುಃ ॥೨೬॥**
**ಅಥವಾ ಮಮ ಸೇನಾಸು ಸೇನಾನ್ಯೋ ರಣದುರ್ಮದಾಃ ।**
**ಪಕ್ವಕರ್ಕರಿಕಾಪೇಷಮಿವ ಪೇಕ್ಷ್ಯಂತಿ ವೈರಿಣಃ ॥ ೨೭ ॥**
**[ಕುಟಿಲಾಕ್ಷಃ ಕುರಂಡಶ್ಚ ಕರುಂಕಃ ಕಾಕವಾಶಿತಃ ।**
**ವಜ್ರದಂತೋ ವಜ್ರಮುಖೋ ವಜ್ರಲೋಮಾ ಬಲಾಹಕಃ ॥ ೨೮ ॥**
**ಸೂಚೀಮುಖಃ ಫಾಲಮುಖೋ ವಿಕರ್ಣೋ ವಿಕಟಾನನಃ ।**
**ಕರಾಲಾಕ್ಷಃ ಕರಟಕೋ ದಮನೋ ದೀರ್ಘಜೀವಕಃ ॥ ೨೯ ॥**
**ಹುಂಬೇಕೋ ಹುಲುಮುಲ್ಲಶ್ಚ ಕಲ್ಕಸಃ ಕಲ್ಕಿವಾಹನಃ ।**
**ಪುಲ್ಕಸಃ ಪುಂಡ್ರಕೇತುಶ್ಚ ಚಂಡಬಾಹುಶ್ಚ ಕುಕ್ಕುರಃ ॥ ೩೦ ॥**
**ಜಂಬೂಕಾಕ್ಷೋ ಜಂಭನಶ್ಚ ತೀಕ್ಷ್ಣಶೃಂಗಸ್ತ್ರಿಕಂಟಕಃ ।**
**ಚಂದ್ರಗುಪ್ತಶ್ಚತುರ್ಬಾಹುಶ್ಚಕೋರಾಕ್ಷಶ್ಚತುಶ್ಶಿರಾಃ ॥ ೩೧ ॥**
**ವಜ್ರಘೋಷಶ್ಚೋರ್ಧ್ವಕೇಶೋ ಮಹಾಮಾಯೋ ಮಹಾಹನುಃ ।**
**ಮಖಶತ್ರುರ್ಮಖಾಸ್ಕಂದೀ ಸಿಂಹಘೋಷಃ ಸಿರಾಲಕಃ ॥ ೩೨ ॥**

---

೨೪. ಸಾಮಾನ್ಯವಾಗಿ ಸ್ತ್ರೀಯರು ತಿಳುವಳಿಕೆಯಿಲ್ಲದವರು; ನಿಷ್ಪ್ರಯೋಜನವಾಗಿ ಸಾಹಸವನ್ನು ವಿಜೃಂಭಿಸುವವರು. ಆದುದರಿಂದಲೇ ಅವರು, ಮಾಡಬೇಕಾದ ಮತ್ತು ಮಾಡಬಾರದ ಕಾರ್ಯಗಳಲ್ಲಿ ಭ್ರಾಂತಿಗೊಂಡು ನಾಶವಾಗುವರು.

೨೫-೨೬. ಅಥವಾ ಯುದ್ಧದುರ್ಮದರಾದ ಯಕ್ಷ ಮಹೋರಗ ಸಿದ್ಧ ಸಾಧ್ಯರಾಗಲಿ, ಬ್ರಹ್ಮನಾಗಲಿ, ಪದ್ಮನಾಭನಾಗಲಿ, ರುದ್ರನೇ ಆಗಲಿ, ಇಂದ್ರನಾಗಲಿ, ಇತರ ದಿಕ್ಪಾಲಕರಾಗಲಿ ಆ ಹೆಂಗಸನ್ನು ಮುಂದಿಟ್ಟುಕೊಂಡು ಯುದ್ಧಕ್ಕೆ ಬಂದುದೇ ಆದರೆ ಅವರೆಲ್ಲರನ್ನೂ ಧ್ವಂಸ ಮಾಡುವುದಕ್ಕೆ, ಇದೋ! ನಾನು ಶಕ್ತನಾಗಿಯೇ ಇದ್ದೇನೆ.

೨೭-೩೧. ಅಥವಾ ನನ್ನ ಸೇನೆಗಳಲ್ಲಿರುವ ರಣದುರ್ಮದರಾದ ಸೇನಾನಾಯಕರೂ ಸಮರ್ಥರೇ ಆಗಿರುವರು. ಅವರೆಲ್ಲರೂ ವೈರಿ

ಅಂಧಕಃ ಸಿಂಧುನೇತ್ರಶ್ಚ ಕೂಪಕಃ ಕೂಪಲೋಚನಃ ।
ಗುಹಾಕ್ಷೋ ಗಂಡಗಲ್ಲಶ್ಚ ಚಂಡವರ್ಮಾ ಯಮಾಂತಕಃ ॥ ೮೩ ॥
ಲಟ್ವಣಃ ಪಂಡಸೇನಶ್ಚ ಪುರುಜಿತ್ಪೂರ್ವಮಾರಕಃ ।
ಸ್ವರ್ಗಶತ್ರುಃ ಸ್ವರ್ಗಬಲೋ ದುರ್ಗಾಖ್ಯಃ ಸ್ವರ್ಗಕಂಟಕಃ ॥ ೮೪ ॥
ಅತಿಮಾಯೋ ಬೃಹನ್ಮಾಯ ಉಪಮಾಯ ಉಲೂಕಜಿತ್ ।
ಪುರುಷೇಣೋ ವಿಶೇಣಶ್ಚ ಕುಂತಿಷೇಣಃ ಕುರೂಷಕಃ ॥ ೮೫ ॥
ಮಲದಶ್ಚ ಕರೂಶಶ್ಚ ಮಂಗಲೋ ದ್ರುಘಣಸ್ತಥಾ ।
ಕೊಲ್ಲಾಟಃ ಕುಟಿಲಾಕ್ಷಶ್ಚ ದಾಶೇರೋ ಬಭ್ರುವಾಹನಃ ॥ ೮೬ ॥
ದುಷ್ಟಹಾಸೋ ಧೃಷ್ಟಕೇತುಃ ಪರಿಕ್ಷಿತ್ಪಾಪಕಂಚುಕಃ । [ ೮೭ ॥
ಮಹಾಮೋಹೋ ಮಹಾದಂಷ್ಟ್ರೋ ದುರ್ಮತಿಃ ಸ್ವರ್ಗಮೋಜಯಃ॥
ಶಠಕೇತುಃ ಶಠವಸುಃ ಶಠದಂತಃ ಶಠಪ್ರಿಯಃ ।
ದುಃಶಠೋ ದುರ್ವಿನೀತಶ್ಚ ಭಿನ್ನಕರ್ಣಶ್ಚ ಮೂರುಹಃ ॥ ೮೮ ॥
ಅಟ್ಟಹಾಸೀ ಮಹಾಹಾಸೀ ಸಿಂಹಹಾಸೀ ಮದೋತ್ಕಟಃ ।
ಕುಂಭೋತ್ಕಚಃ ಕುಂಭನಾಸಃ ಕುಂಭಗ್ರೀವಃ ಕುಟೋದರಃ ॥೮೯॥
ಹಸ್ತಿಮೇಢ್ರೋ ಮಹಾಂಡಶ್ಚ ಕುಂಭಾಂಡಃ ಪೂತಿನಾಸಿಕಃ ।
ಪೂತಿದಂತಃ ಪೂತಿಚಕ್ಷುಃ ಪತ್ಯಾಸ್ಯಃ ಪೂತಿಮೋಹನಃ ॥ ೯೦ ॥
ಇತ್ಯೇವಮಾದಯಃ ಶೂರಾ ಹಿರಣ್ಯಕಶಿಪೋಃ ಸಮಾಃ ॥ ೯೧ ॥]

---

ಗಳನ್ನು ಬೇಲದ ಹಣ್ಣನ್ನು ಎಂತೋ ಅಂತು ನಜ್ಜುಗುಟ್ಟುತ್ತಾರೆ. ಅವರ ಹೆಸರುಗಳನ್ನು ಕೇಳು :

[ಕುಟಿಲಾಕ್ಷ, ಕುರಂಡ, ಕರಂಕ, ಕಾಕವಾಶಿತ, ವಜ್ರದಂತ, ವಜ್ರಮುಖ, ವಜ್ರಲೋಮ, ಬಲಾಹಕ, ಸೂಚೀಮುಖ, ಫಾಲಮುಖ, ವಿಕರ್ಣ, ವಿಕಟಾನನ, ಕರಾಲಾಕ್ಷ, ಕರಟಕ, ದಮನ, ದೀರ್ಘ ಜೀವಕ, ಹುಂಬೇಕ, ಹುಲುಮುಲ್ಲ, ಕಲ್ಕಸ, ಕಲ್ಕಿವಾಹನ, ಪುಲ್ಕಸ, ಪುಂಡ್ರಕೇತು, ಚಂಡಬಾಹು, ಕುಕ್ಕುರ, ಜಂಬೂಕಾಕ್ಷ, ಜಂಭನ, ತೀಕ್ಷ್ಣಶೃಂಗ, ತ್ರಿಕಂಟಕ, ಚಂದ್ರಗುಪ್ತ, ಚತುರ್ಬಾಹು, ಚಕೋರಾಕ್ಷ, ಚತುಶ್ಶಿರ, ವಜ್ರಘೋಷ, ಊರ್ಧ್ವಕೇಶ, ಮಹಾಮಾಯ, ಮಹಾಹನು, ಮಖಶತ್ರು, ಮಖಾಸ್ಕಂದಿ, ಸಿಂಹಘೋಷ, ಸಿರಾಲಕ, ಅಂಧಕ, ಸಿಂಧುನೇತ್ರ, ಕೂಪಕ, ಕೂಪಲೋಚನ, ಗುಹಾಕ್ಷ, ಗಂಡಗಲ್ಲ, ಚಂಡವರ್ಮ, ಯಮಾಂತಕ, ಲಟ್ವಣ, ಪಂಡಸೇನ, ಪುರುಜಿತ್,

**ಹಿರಣ್ಯಾಕ್ಷಸಮಾಶ್ಚೈವ ಮಮ ಪುತ್ರಾ ಮಹಾಬಲಾಃ ।**
**ಏಕೈಕಸ್ಯ ಸುತಾಸ್ತೇಷು ಜಾತಾಃ ಶೂರಾಃ ಶತಂ ಶತಂ ॥ ೯೨ ॥**
**ಸೇನಾನ್ಯಶ್ಚ ಮದೋದ್ವೃತ್ತಾ ಮಮ ಪುತ್ರೈರನುದ್ರುತಾಃ ।**
**ನಾಶಯಿಷ್ಯಂತಿ ಸಮರೇ ದುರ್ವೃತ್ತಾನಮರಾಧಮಾನ್ ॥ ೯೩ ॥**
**ಏತೇ ಚೇತ್ಕುಪಿತಾ ಯುದ್ಧೇ ಸಹಸ್ರಾಕ್ಷೌಹಿಣೀಶ್ವರಾಃ ।**
**ಭಸ್ಮಶೇಷಿ ಭವೇದ್ಯುದ್ಧಂ ಹಾ ಹಂತ ಕಿಮುತಾಬಲಾ ॥ ೯೪ ॥**
**ಮಾಯಾವಿಲಾಸಃ ಸರ್ವೋಽಪಿ ತಸ್ಯಾಃ ಸಮರಸೀಮನಿ ।**
**ಮಹಾಮಾಯಾವಿನಾಮಸ್ಮದ್ಬಲಾನಾಮಾಮಿಷಂ ಭವೇತ್ ॥ ೯೫ ॥**

---

ಪೂರ್ವಮಾರಕ, ಸ್ವರ್ಗಶತ್ರು, ಸ್ವರ್ಗಬಲ, ದುರ್ಗಾಖ್ಯ, ಸ್ವರ್ಗಕಂಟಕ, ಅತಿಮಾಯ, ಬೃಹನ್ಮಾಯ, ಉಪಮಾಯ, ಉಲೂಕಜಿತ್, ಪುರುಷೇಣ, ವಿಷೇಣ, ಕುಂತಿಷೇಣ, ಕುರೂಷಕ, ಮಲದ, ಕರೂಶ, ಮಂಗಲ, ದ್ರುಘಣ, ಕೊಲ್ಲಾಟ, ಕುಟಿಲಾಕ್ಷ, ಪಾರ್ೀರ, ಬಭ್ರುವಾಹನ, ದುಷ್ಟಹಾಸ, ಧೃಷ್ಟಕೇತು, ಪರಿಕ್ಷಿತ್, ಪಾಪಕಂಚುಕ, ಮಹಾಮೋಹ, ಮಹಾದಂಷ್ಟ್ರ, ದುರ್ಮತಿ, ಸ್ವರ್ಗಮೇಜಯ, ಶಠಕೇತು, ಶಠವಸು, ಶಠದಂತ, ಶಠಪ್ರಿಯ, ದುಃಶಠ, ದುರ್ವಿನೀತ, ಭಿನ್ನಕರ್ಣ, ಚಮೂರುಹ, ಅಟ್ಟಹಾಸಿ, ಮಹಾಹಾಸಿ, ಸಿಂಹಹಾಸಿ, ಮದೋತ್ಕಟ, ಕುಂಭೋತ್ಸ್ವಜ, ಕುಂಭನಾಸ, ಕುಂಭಗ್ರೀವ, ಕುಟೋದರ, ಹಸ್ತಿಮೇಢ್ರ, ಮಹಾಂಡ, ಕುಂಭಾಂಡ, ಪೂತಿನಾಸಿಕ, ಪೂತಿದಂತ, ಪೂತಿಚಕ್ಷು, ಪೂತ್ಯಾಸ್ಯ, ಪೂತಿಮೇಹನ,—ಇವರೇ ಮೊದಲಾದ ದಾನವಸೇನಾನಿಗಳೆಲ್ಲರೂ ಮಹಾ ಶೂರರಾದವರು. ಎಲ್ಲರೂ ಹಿರಣ್ಯಕಶಿಪುವಿಗೆ ಸಮಾನರಾದವರು.]

೯೨-೯೩. ಮಹಾಬಲಿಷ್ಠರಾದ ನನ್ನ ಮಕ್ಕಳೆಲ್ಲರೂ ಹಿರಣ್ಯಾಕ್ಷನಿಗೆ ಸಮಾನರು. ಅವರಲ್ಲಿ ಒಬ್ಬೊಬ್ಬನಿಗೂ ಶೂರರಾದ ನೂರುನೂರು ಮಂದಿ ಮಕ್ಕಳಿರುವರು. ಇವರೆಲ್ಲರೂ ಹಿಂಬಾಲಿಸಿ ಹೊರಟರೆ ನನ್ನ ಸೇನಾನಿಗಳು ರಣದಲ್ಲಿ ದುರಾತ್ಮರಾದ ಆ ಅಮರಾಧಮನ್ನು ನಾಶ ಗೊಳಿಸದೆ ಬಿಡರು.

೯೪. ಸಹಸ್ರಾಕ್ಷೌಹಿಣೀಶ್ವರರಾದ ಇವರೆಲ್ಲರೂ ಕೋಪಗೊಂಡು ಯುದ್ಧಮಾಡಲು ನಿಂತಪಕ್ಷ ಆದರೆ ಶತ್ರುವು ಸುಟ್ಟು ಬೂದಿಯಾಗುವ ವರೆಗೂ ಬಿಡರು ಎಂದಬಳಿಕ ಆ ಅಬಲೆಯ ಮಾತೇನು?

೯೫. ಯುದ್ಧದಲ್ಲಿ ಅವಳು ಪ್ರದರ್ಶಿಸುವ ಪರಾಕ್ರಮವೆಲ್ಲವೂ

**ತದ್ವೃಥಾ ಶಂಕಯಾ ಖಿನ್ನಂ ಮಾ ತೇ ಭವತು ಮಾನಸಂ ॥ ೯೬ ॥**
**ಇತ್ಯುಕ್ತ್ವಾ ಭಂಡದೈತ್ಯೇಂದ್ರಃ ಸಮುತ್ಥಾಯ ನೃಪಾಸನಾತ್ ।**
**ಉವಾಚ ನಿಜಸೇನಾನ್ಯಂ ಕುಟಿಲಾಕ್ಷಂ ಮಹಾಬಲಂ ॥ ೯೭ ॥**
**ಉತ್ತಿಷ್ಠ ರೇ ಬಲಂ ಸರ್ವಂ ಸನ್ನಾಹಯ ಸಮಂತತಃ ।**
**ಶೂನ್ಯಕಸ್ಯ ಸಮಂತಾಚ್ಚ ದ್ವಾರೇಷು ಬಲಮರ್ಪಯ ॥ ೯೮ ॥**
**ದುರ್ಗಾಣಿ ಸಂಗೃಹಾಣ ತ್ವಂ ಕುರು ಕ್ಷೇಪಣಿಕಾಶತಂ ॥**
**ದುಷ್ಟಾಭಿಚಾರಾಃ ಕರ್ತವ್ಯಾ ಮಂತ್ರಿಭಿಶ್ಚ ಪುರೋಹಿತೈಃ ।**
**ಸಜ್ಜೀಕುರು ಚ ಶಸ್ತ್ರಾಣಿ ಯುದ್ಧಮೇತದುಪಸ್ಥಿತಂ ॥ ೯೯ ॥**
**ಸೇನಾಪತಿಷು ಯಂ ಕಂಚಿದಗ್ರೇ ಪ್ರಸ್ಥಾಪಯಾಧುನಾ ।**
**ಅನೇಕಬಲಸಂಘಾತಸಹಿತಂ ಘೋರದರ್ಶನಂ ॥ ೧೦೦ ॥**
**ತೇನ ಸಂಗ್ರಾಮಸಮಯೇ ಸಂನಿಪಾತ್ಯ ವಿನಿರ್ಜಿತಾ ।**
**ಕೇಶೇಷ್ವಾಕೃಷ್ಯತಾಂ ಮೂಢಾ ದೇವಸತ್ತ್ವೇನ ದರ್ಪಿತಾ ॥ ೧೦೧ ॥**

---

ಕೇವಲ ಮಾಯಾವಿಲಾಸವೇ ಆಗಿರುತ್ತದೆ. ಇದರಿಂದ ಮಹಾಮಾಯಾವಿಗಳಾದ ನಮ್ಮ ಸೈನಿಕರೆಲ್ಲರಿಗೂ ಬೇಕಾದಷ್ಟು ಮಾಂಸವೂ ದೊರಕುತ್ತದೆ.

೯೬. ಎಲೈ ವಿಷಂಗನೇ! ಆದುದರಿಂದ ಆ ಹೆಂಗಸಿನ ವಿಷಯದಲ್ಲಿ ವೃಥಾ ಸಂದೇಹಪಟ್ಟು ಕುಗ್ಗಿರುವ ನಿನ್ನ ಮನಸ್ಸು ನೆಮ್ಮದಿಯಾಗಿರಲಿ.''

೯೭. ಭಂಡಾಸುರನು ಈ ರೀತಿ ಹೇಳಿ ಸಿಂಹಾಸನದಿಂದೆದ್ದು, ಮಹಾಬಲನೂ, ಸೈನ್ಯಾಧಿಪನೂ ಆದ ಕುಟಿಲಾಕ್ಷನೆಂಬವನನ್ನು ಕುರಿತು ಹೇಳಿದನು :

೯೮. " ಎಲವೋ! ಏಳು ; ಈಗಲೇ ಸೈನ್ಯಗಳೆಲ್ಲವನ್ನೂ ಸಿದ್ಧಗೊಳಿಸಿ ನಮ್ಮ ಶೂನ್ಯನಗರದ ಸುತ್ತಮುತ್ತಣ ದ್ವಾರಪ್ರದೇಶಗಳಲ್ಲೆಲ್ಲ ಅವುಗಳನ್ನು ಸರಿಯಾಗಿ ನೆಲೆಗೊಳಿಸು.

೯೯. ದುರ್ಗಪ್ರದೇಶಗಳೆಲ್ಲವನ್ನೂ ಬಲಪಡಿಸಿಕೊಂಡು, ಆಯುಧಗಳೆಲ್ಲವನ್ನೂ ಸಿದ್ಧಗೊಳಿಸು. ಮಂತ್ರಿಗಳಿಂದಲೂ, ಪುರೋಹಿತರಿಂದಲೂ ದುಷ್ಟವಾದ ಆಭಿಚಾರಿಕಕ್ರಿಯೆಗಳನ್ನು ಮಾಡಿಸು. ಈಗ ಯುದ್ಧವು ಸಮಿಾಪಿಸಿದೆ. ಅಸ್ತ್ರ ಶಸ್ತ್ರಗಳೆಲ್ಲವೂ ಸಿದ್ಧವಾಗಿರಲಿ.

೧೦೦-೧೦೧. ಮೊದಲು ನಮ್ಮ ಸೇನಾಧಿಪತಿಗಳಲ್ಲಿ ಯಾವನಾದರೊಬ್ಬನನ್ನು ಯುದ್ಧಕ್ಕೆ ಕಳುಹಿಸು. ಅವನೊಡನೆ ಭಯಂಕರವಾದ ಸೈನ್ಯಸಮೂಹವೂ ಹೊರಡಲಿ. ಆ ಸೇನಾನಾಯಕನು ದೇವತೆಗಳ

**ಇತ್ಯಾಭಾಷ್ಯ ಚಮೂನಾಥಂ ಸಹಸ್ರಪೃತನಾಧಿಪಂ ।**
**ಕುಟಿಲಾಕ್ಷಂ ಮಹಾಸತ್ತ್ವಂ ಸ್ವಯಂ ಚಾಂತಃಪುರಂ ಗತಃ ॥ ೧೦೨ ॥**
**ಆಪತಂತ್ಯಾ ಮಹಾದೇವ್ಯಾ ಯಾತ್ರಾನಿಃಸಾಣನಿಸ್ವನಃ ।**
**ಅಶ್ರೂಯತ ಚ ದೈತ್ಯೇಂದ್ರೈರತಿಕರ್ಣಜ್ವರಾವಹಃ ॥ ೧೦೩ ॥**

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಷೋಡಶೋಽಧ್ಯಾಯಃ

---

ಬಲದಿಂದ ಗರ್ವಿತೆಯಾಗಿರುವ ಆ ಸ್ತ್ರೀಯನ್ನು ಸೋಲಿಸಿ, ತಿಳಿಗೇಡಿಯಾದ ಅವಳನ್ನು ಮುಂದಲೆ ಹಿಡಿದೆಳೆದು ತರಲಿ.''

೧೦೨. ಆ ಭಂಡಾಸುರನು ಈ ಪ್ರಕಾರ ಸಾವಿರ ದಾನವ ಸೇನಾದಳಗಳಿಗೆ ಅಧಿಪತಿಯೂ, ಮಹಾಪರಾಕ್ರಮಶಾಲಿಯೂ ಆದ ಕುಟಿಲಾಕ್ಷನಿಗೆ ಅಪ್ಪಣೆಮಾಡಿ ತಾನೂ ಅಂತಃಪುರಕ್ಕೆ ಹೊರಟುಹೋದನು.

೧೦೩. ಇದೇ ಸಮಯದಲ್ಲಿಯೇ, ಅತ್ತ ಶ್ರೀ ಲಲಿತಾದೇವಿಯ ರಣಪ್ರಯಾಣಸಮಯದ ಕೋಲಾಹಲಧ್ವನಿಯೂ ಸಹ ದೈತ್ಯೇಂದ್ರರ ಕಿವಿಗಳಿಗೆ ಜ್ವರವನ್ನುಂಟುಮಾಡುವುದಾಗಿ ಕೇಳಬಂದಿತು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತದಶೋಽಧ್ಯಾಯಃ

[ಭಂಡಾಸುರಸ್ಯ ಸೇನಾಸನ್ನಾಹಃ—ಶ್ರೀ ಸಂಪತ್ಕರೀದೇವ್ಯಾ, ಶ್ರೀಮದಶ್ವಾರೂಢಯಾ ಚ ಕೃತ ದುರ್ಮದ ಕುರಂಡ ದಾನವಯೋರ್ವಧಃ]

ಯನ್ಮಾಯಾಪರಿಮೋಹಿತೈಃ ಪರಿವೃತೋ ಭಂಡಾಸುರೇಂದ್ರೋಽಸುರೈಃ
ಪ್ರಾಪ್ತಾಹಂಕೃತಿಮಾತ್ಮನಾಶಜನನೀಂ ಮಂಶ್ಚೈರಶೇಷೈಃ ಸ್ವಕೈಃ ।
ಸಂಖ್ಯಾತೀತಮಹಾಪರಾಕ್ರಮಯುತೈರ್ಯುದ್ಧೇ ಕೃತೋದ್ಯೋಗವಾನ್
ತತ್ತ್ವಾಂ ಸರ್ವಸುರೇಶ್ವರಪ್ರಣಯಿನೀಂ ಶ್ರೀಮೀನನೇತ್ರಾಂ ಭಜೇ ॥

**ಹಯಗ್ರೀವಃ—**

**ಅಥ ಶ್ರೀಲಲಿತಾಸೇನಾನಿಃಸಾಣಪ್ರತಿನಿಸ್ವನಃ ।**
**ಉಚ್ಚಚಾಲಾಽಸುರೇಂದ್ರಾಣಾಮುದ್ಧತೋ ದುಂದುಭಿಸ್ವನಃ ॥ ೧ ॥**
**ತೇನ ಮರ್ದಿತದಿಕ್ಕೇನ ಕ್ಷುಭ್ಯದ್ಗರ್ಭಪಯೋಧಿನಾ ।**
**ಬಧಿರೀಕೃತಲೋಕೇನ ಚಕಂಪೇ ಜಗತಾಂ ತ್ರಯೀ ॥ ೨ ॥**
**ಮರ್ದಯನ್ಕಕುಭಾಂ ವೃಂದಂ ಭಿಂದನ್ ಭೂಧರಕಂದರಾನ್ ।**
**ವವೃಧೇ ಗಗನಾಭೋಗೇ ದೈತ್ಯನಿಃಸಾಣನಿಸ್ವನಃ ॥ ೩ ॥**

---

## ಕನ್ನಡದ ಅನುವಾದ

[ಭಂಡಾಸುರನ ಸೇನಾಸನ್ನಾಹ—ಶ್ರೀ ಸಂಪತ್ಕರೀದೇವಿಯು ದುರ್ಮದನನ್ನೂ ಶ್ರೀ ಅಶ್ವಾರೂಢಾದೇವಿಯು ಕುರುಂಡನನ್ನೂ ವಧಿಸಿದುದು]

೧. ಹಯಗ್ರೀವಮುನಿಯು ಹೇಳುತ್ತಾನೆ—ಬಳಿಕ, ಶ್ರೀ ಲಲಿತಾಂಬೆಯ ಸೈನ್ಯಗಳ ಪ್ರಯಾಣ ಕಾಲದಲ್ಲಿನ ಕೋಲಾಹಲಧ್ವನಿಗಳಿಗೆ ಪ್ರತಿಧ್ವನಿಯಾಗಿ, ಇತ್ತ ಅಸುರೇಂದ್ರರು ಮೊಳಗಿಸಿದ ರಣದುಂದುಭಿಗಳ ಧ್ವನಿಯು ಎಲ್ಲೆಡೆಗೂ ಕೇಳಿಸಿತು.

೨. ದಿಕ್ಕುಗಳೆಲ್ಲವನ್ನೂ ಕಲಕಿ, ಸಾಗರಗಳ ಗರ್ಭವನ್ನೇ ಭೇದಿಸಿ ಸಮಸ್ತ ಲೋಕಗಳನ್ನೂ ಕಿವುಡುಗೊಳಿಸಿದ ಆ ದೈತ್ಯರ ರಣದುಂದುಭಿ ಧ್ವನಿಯಿಂದ ಮೂರು ಲೋಕಗಳೂ ಗಡಗಡನೆ ನಡುಗಿಹೋದವು.

೩. ಪ್ರಯಾಣಕಾಲದಲ್ಲಿ ದಿಕ್ಕುಗಳ ಗುಂಪನ್ನು ಮರ್ದಿಸಿ, ಗಿರಿಗುಹೆಗಳನ್ನು ಭೇದಿಸಿಕೊಂಡು ಹೊರಹೊರಟ ಆ ದೈತ್ಯಸೇನೆಗಳ ಕೋಲಾಹಲ ಧ್ವನಿಯು ಗಗನಾಂಗಣವನ್ನೇ ಮುತ್ತಿ ಹರಡಿತು.

ಮಹಾನರಹರಿಕ್ರೋಧಹುಂಕಾರೋದ್ಧತಮಧ್ವನಿಃ ।
ವಿರಸಂ ವಿರರಾಸೋಚ್ಚೈರ್ವಿಬುಧದ್ವೇಷಿಝಲ್ಲರೀ ॥ ೪ ॥
ತತಃ ಕಿಲಕಿಲಾರಾವಮುಖರಾ ದೈತ್ಯಕೋಟಯಃ ।
ಸಮುಹನ್ಯಂತ ಸಂಕ್ರುದ್ಧಾಃ ಪ್ರತಿ ತಾಂ ಪರಮೇಶ್ವರೀಂ ॥ ೫ ॥
ಕಶ್ಚಿದ್ರತ್ನವಿಶೇಷೇಣ ವರ್ಮಣಾ ಛನ್ನವಿಗ್ರಹಃ ।
ಚಕಾಶೇ ಜಂಗಮ ಇವ ಪ್ರೋತ್ತುಂಗೋ ರೋಹಣಾಚಲಃ ॥ ೬ ॥
ಕಾಲರಾತ್ರಿಮಿವೋದಗ್ರಾಂ ಶಸ್ತ್ರಾಕಾರೇಣ ಗೋಪಿತಾಂ ।
ಅಧುನೀತ ಭಟಃ ಕಶ್ಚಿದತಿಧೌತಾಂ ಕೃಪಾಣಿಕಾಂ ॥ ೭ ॥
ಉಲ್ಲಾಸಯನ್‌ಕರಾಗ್ರೇಣ ಕುಂತಪಲ್ಲವಮೇಕತಃ ।
ಆರೂಢತುರಗೋ ವೀಥ್ಯಾಂ ಚಾರಿಭೇದಂ ಚಕಾರ ಹ ॥ ೮ ॥
ಕೇಚಿದಾರುರುಹುರ್ಯೋಧಾ ಮಾತಂಗಾಂಸ್ತುಂಗವರ್ಷ್ಮಣಃ ।
ಉತ್ಪಾತವಾತಸಂಪಾತ ಪ್ರೇರಿತಾನಿವ ಪರ್ವತಾನ್ ॥ ೯ ॥

---

೪. ಕನಲಿದ ಮಹಾಸಿಂಹದ ಗರ್ಜನೆಯಂತೆ ಭಯಂಕರವಾದ ಆ ದೇವದ್ವೇಷಿಗಳ ಕೋಲಾಹಲ ಧ್ವನಿಯು ಬಹು ಘೋರವಾಗಿ ಮೊರೆಯಿತು.

೫. ಆಗ ಕೋಟ್ಯನುಕೋಟಿ ದೈತ್ಯರು ಕಿಲಕಿಲಧ್ವನಿಗಳನ್ನು ಮಾಡುತ್ತ ಮಹಾಕೋಪದಿಂದ ಕೂಡಿದವರಾಗಿ ಶ್ರೀ ಲಲಿತಾಪರಮೇಶ್ವರಿ ಯೊಡನೆ ಯುದ್ಧಮಾಡಲು ಸನ್ನದ್ಧರಾದರು.

೬. ಆ ಸೇನೆಯಲ್ಲಿ ದೈತ್ಯನೊಬ್ಬನು ಚಿತ್ರವಿಚಿತ್ರವಾಗಿ ಕೆತ್ತಿದ ರತ್ನಕವಚವನ್ನು ತೊಟ್ಟು ಉನ್ನತವಾದ ಉದಯಾಚಲವೇ ಮೂರ್ತಿ ಗೊಂಡಂತೆ ತೋರಿ ಬೆಳಗುತ್ತಿದ್ದನು.

೭-೮. ಕಾಳರಾತ್ರಿಯಂತೆ ಭಯಂಕರವಾದುದಾಗಿ, ಶಸ್ತ್ರದಂತೆ ಗೋಪ್ಯವಾಗಿ ಫಳಫಳನೆ ಹೊಳೆಯುತ್ತಿದ್ದ ಕತ್ತಿಯನ್ನು ಸೆಳೆದು ತಿರುಗಿಸುತ್ತಿದ್ದ ಭಟನೊಬ್ಬನು ಇನ್ನೊಂದು ಕೈಯಲ್ಲಿ ಕುಂತಾಯುಧವನ್ನು ಹಿಡಿದು ಕುದುರೆಯನ್ನೇರಿ ರಾಜಬೀದಿಯಲ್ಲಿ ಚಮತ್ಕಾರವಾದ ನಡಿಗೆ ಗಳನ್ನು ತೋರಿ ಮೆರೆಯುತ್ತಿದ್ದನು.

೯. ಇನ್ನು ಕೆಲವರು ಯೋಧರು ಉತ್ಪಾತಕಾಲಗಳಲ್ಲಿನ ಬಿರುಗಾಳಿ ಗಳಿಂದ ಚಲಿಸಿದ ಪರ್ವತಗಳನ್ನು ಹೋಲುತ್ತಿದ್ದ ಮದದಾನೆಗಳನ್ನೇರಿ ಹೊರಟರು.

ಪಟ್ಟಸೈರ್ಮುದ್ಗರೈಶ್ಚೈವ ಭಿದುರೈರ್ಭಿಂದಿಪಾಲಕೈಃ ।
ದ್ರುಘಣೈಶ್ಚ ಮುಸುಂಡೀಭಿಃ ಶಣಯೈರ್ಮುಸಲೈರಪಿ ॥ ೧೦ ॥
ಗದಾಭಿಶ್ಚ ಶತಘ್ನೀಭಿಸ್ತ್ರಿಶಿಖೈರ್ದ್ವಿಶಿಖೈಸ್ತಥಾ ।
ಅರ್ಧಚಕ್ರೈರ್ಮಹಾಚಕ್ರೈರ್ವಕ್ರಾಸ್ತ್ರೈರುರಗಾನನೈಃ ॥ ೧೧ ॥
ಫಣಿಶೀರ್ಷಪ್ರಭೇದೈಶ್ಚ ಧನುರ್ಭಿಃ ಶಾರ್ಙ್ಗಧನ್ವಿಭಿಃ ।
ದಂಡೈಃ ಕ್ಷೇಪಣಿಕಾಶಸ್ತ್ರೈರ್ವಜ್ರಬಾಣೈರ್ಘರಟ್ಟಕೈಃ ॥ ೧೨ ॥
ಯವಮಧ್ಯೈರ್ಮುಷ್ಟಿಮಧ್ಯೈರ್ವಲಲೈಃ ಖಂಡಲೈರಪಿ ।
ಕಟಾರೈಃ ಕೋಣಮಧ್ಯೈಶ್ಚ ಫಣಿದಂತೈಃ ಪರಶ್ವಧೈಃ ॥ ೧೩ ॥
ಪಾಶಾಯುಧೈಃ ಪಾಶತುಂಡೈಃ ಕಾಕತುಂಡೈಃ ಸಹಸ್ರಶಃ ।
ಏವಮಾದಿಭಿರತ್ಯುಗ್ರೈರಾಯುಧೈರ್ಜೀವಹಾರಿಭಿಃ ।
ಪರಿಕರ್ಮಿತಹಸ್ತಾಗ್ರಾ ವರ್ಮಿತಾ ದೈತ್ಯಕೋಟಯಃ ॥ ೧೪ ॥
ಅಶ್ವಾರೋಹಾ ಗಜಾರೋಹಾ ಗರ್ದಭಾರೋಹಿಣಃ ಪರೇ ।
ಉಷ್ಟ್ರಾರೋಹಾ ವೃಕಾರೋಹಾಃ ಶುನಕಾರೋಹಿಣಸ್ತಥಾ ॥ ೧೫ ॥
ಕಾಕಾಧಿರೋಹಿಣೋ ಗೃಧ್ರಾರೋಹಾಃ ಕಂಕಾಧಿರೋಹಿಣಃ ।
ವ್ಯಾಘ್ರಾಧಿರೋಹಾಶ್ಚ ಪರೇ ತಥಾ ಸಿಂಹಾಧಿರೋಹಿಣಃ ॥ ೧೬ ॥
ಶರಭಾರೋಹಿಣಶ್ಚಾನ್ಯೇ ಭೇರುಂಡಾರೋಹಿಣಃ ಪರೇ ।
ಸೂಕರಾರೋಹಿಣೋ ವ್ಯಾಲಾರೂಢಾಃ ಪ್ರೇತಾಧಿರೋಹಿಣಃ ॥ ೧೭ ॥
ಏವಂ ನಾನಾವಿಧೈರ್ವಾಹವಾಹಿಭಿರ್ಲಲಿತಾಂ ಪ್ರತಿ ।
ಪ್ರಚೇಲೇ ಪ್ರಬಲಕ್ರೋಧಸಂಮೂರ್ಛಿತನಿಜಾಶಯೈಃ ॥ ೧೮ ॥

---

೧೦-೧೮. ಪಟ್ಟಸ, ಮುದ್ಗರ, ಭಿದುರ, ಭಿಂಡಿಪಾಲ, ದ್ರುಘಣ, ಮುಸುಂಡಿ, ಕುಠಾರ, ಮುಸಲ, ಗದೆ, ಶತಘ್ನಿ, ತ್ರಿಶೂಲ, ದ್ವಿಶೂಲ, ಅರ್ಧಚಕ್ರ, ಮಹಾಚಕ್ರ, ಡೊಂಕುಡೊಂಕಾಗಿರುವ ಫಣರಶೀರ್ಷಗಳು, ಧನುಸ್ಸುಗಳು, ಶಾರ್ಙ್ಗಧನುಸ್ಸುಗಳು, ದಂಡಗಳು, ಕವಣೆ, ಸಿಡಿಕೋಲು ಮುಂತಾದವುಗಳು, ವಜ್ರಬಾಣಗಳು, ಘರಟ್ಟಗಳು, ಯವಮಧ್ಯ, ಮುಷ್ಟಿಮಧ್ಯ, ವಲಲ, ಖಂಡಲ, ಕಟಾರ, ಕೋಣಮಧ್ಯ, ಫಣಿದಂತ, ಪರಶು, ಪಾಶ, ಪಾಶತುಂಡ, ಕಾಕತುಂಡ—ಇವೇ ಮೊದಲಾದ ಅತ್ಯುಗ್ರಗಳೂ, ಪ್ರಾಣಾಪಹಾರಕಗಳೂ ಆದ ಆಯುಧಗಳನ್ನು ಧರಿಸಿ ಕವಚಗಳನ್ನು ತೊಟ್ಟು ಶೋಭಿಸುತ್ತಿರುವ ಕೋಟ್ಯನುಕೋಟಿ ದೈತ್ಯರು, ಕುದುರೆ, ಆನೆ, ಕತ್ತೆ, ಒಂಟೆ, ತೋಳ, ನಾಯಿ, ಕಾಗೆ, ಹದ್ದು, ರಣಹದ್ದು, ಹುಲಿ,

ಕುಟಿಲಾಕ್ಷಶ್ಚಮೂಭರ್ತಾ ದುರ್ಮದಂ ನಾಮ ದಾನವಂ ।
ದಶಾಕ್ಷೌಹಿಣಿಕಾಯುಕ್ತಂ ಪ್ರಾಹಿಣೋಲ್ಲಲಿತಾಂ ಪ್ರತಿ ॥ ೧೯ ॥
ದಿಧಕ್ಷುಭಿರಿವಾಶೇಷವಿಶ್ವಂ ಸಹ ಬಲೋತ್ಕಟೈಃ । [ ೨೦ ॥
ಭಟೈರ್ಯುಕ್ತಃ ಸ ಸೇನಾನೀರ್ಲಲಿತಾಭಿಮುಖೋ ಯಯೌ ॥
ಭಿಂದನ್ ಪಟಹಸಂರಾವೈಶ್ಚತುರ್ದಶಜಗದ್ದರೀಂ । [ ೨೧ ॥
ಅಟ್ಟಹಾಸಂ ವಿತನ್ವಾನೋ ದುರ್ಮುಖಸ್ತನ್ಮುಖೋ ಯಯೌ ॥
ಅಥ ಭಂಡಾಸುರಾಜ್ಞಪ್ತಃ ಕುಟಿಲಾಕ್ಷೋ ಮಹಾಬಲಃ ।
ಶೂನ್ಯಕಸ್ಯ ಪುರದ್ವಾರೇ ಪ್ರಾಚೀನೇ ಸಮಕಲ್ಪಯತ್ ॥
ರಕ್ಷಣಾರ್ಥಂ ದಶಾಕ್ಷೋಹಿಣ್ಯುಪೇತಂ ತಾಲಜಂಘಕಂ ॥ ೨೨ ॥
ಅವಾರ್ಚೀನೇ ಪುರದ್ವಾರೇ ದಶಾಕ್ಷೌಹಿಣಿಸಂಯುತಂ ।
ನಾಮ್ನಾ ತಾಲಭುಜಂ ದೈತ್ಯಂ ರಕ್ಷಣಾರ್ಥಮಕಲ್ಪಯತ್ ॥ ೨೩ ॥

---

ಸಿಂಹ, ಶರಭ, ಗಂಡಭೇರುಂಡ, ಹಂದಿ, ಹೆಬ್ಬಾವು, ಪ್ರೇತ—ಮೊದಲಾದ ಬಗೆಬಗೆಯ ವಾಹನಗಳನ್ನೇರಿ ಶ್ರೀ ಲಲಿತಾದೇವಿಯೊಡನೆ ಯುದ್ಧ ಮಾಡಲು ಬಹಳವಾದ ಕೋಪದಿಂದ ಮೈಮರೆತು ಮುನ್ನುಗ್ಗುತ್ತಿದ್ದರು.

೧೯. ಹೀಗೆ ದೈತ್ಯಸೇನೆಗಳಿಗೆ ಮುಖ್ಯ ಸೇನಾಧಿಪತಿಯಾದ ಕುಟಿಲಾಕ್ಷನು ಹತ್ತು ಅಕ್ಷೌಹಿಣೀ ಸೇನೆಗಳೊಡನೆ ದುರ್ಮದನೆಂಬ ದಾನವನನ್ನು ಆ ದೇವಿಯೊಡನೆ ಯುದ್ಧಮಾಡಲು ಕಳುಹಿಸಿದನು.

೨೦. ಆ ದುರ್ಮದನಾದರೋ ಮಹಾಬಲಿಷ್ಠರಾದ ದಾನವ ಭಟರೊಡಗೂಡಿ ಸಮಸ್ತ ಪ್ರಪಂಚವನ್ನೂ ಸುಡುವನೋ ಎಂಬಂತೆ ತೋರುತ್ತ ಶ್ರೀ ಲಲಿತಾದೇವಿಯನ್ನೆದುರಿಸಲು ಹೊರಟನು.

೨೧. ಪಟಹಧ್ವನಿಗಳಿಂದ ಹದಿನಾಲ್ಕು ಲೋಕಗಳನ್ನು ಭೇದಿಸುತ್ತಲೂ, ಅಟ್ಟಹಾಸವನ್ನು ಮೆರೆಯುತ್ತಲೂ ಹೊರಟ ಆ ದುರ್ಮದನು ರಣಾಭಿಮುಖವಾಗಿ ಹೊರಟುಬಂದನು.

೨೨. ಈ ರೀತಿ, ಮಹಾಬಲಾಧ್ಯಕ್ಷನಾದ ಕುಟಿಲಾಕ್ಷನು ಭಂಡಾಸುರನಿಂದ ಆಜ್ಞಪ್ತನಾಗಿ, ಆ ಶೂನ್ಯನಗರದ ಪೂರ್ವದ್ವಾರದ ರಕ್ಷಣೆಗಾಗಿ ಹತ್ತು ಅಕ್ಷೋಹಿಣೀ ಸೇನೆಗಳೊಡನೆ ತಾಲಜಂಘನೆಂಬ ದಾನವನನ್ನು ನಿಯಮಿಸಿ ಭದ್ರಪಡಿಸಿದನು.

೨೩. ಆ ಪಟ್ಟಣದ ದಕ್ಷಿಣದ್ವಾರದಲ್ಲಿ ಹತ್ತು ಅಕ್ಷೌಹಿಣೀ ಸೈನ್ಯದೊಡನೆ ಆ ದ್ವಾರರಕ್ಷಣಾರ್ಥವಾಗಿ ತಾಲಭುಜನೆಂದು ಪ್ರಸಿದ್ಧನಾದ ದಾನವನನ್ನು ನಿಯಮಿಸಿದನು.

**ಪ್ರತೀಚೀನೇ ಪುರದ್ವಾರೇ ದಶಾಕ್ಷೌಹಿಣಿಸಂಯುತಂ ।**
**ತಾಲಗ್ರೀವಂ ನಾಮ ದೈತ್ಯಂ ರಕ್ಷಣಾರ್ಥಮಕಲ್ಪಯತ್ ॥ ೨೪ ॥**
**ಉತ್ತರೇ ತು ಪುರದ್ವಾರೇ ಕಾಲಕೇತುಂ ಮಹಾಬಲಂ ।**
**ಆದಿದೇಶ ಸುರಕ್ಷಾರ್ಥಂ ದಶಾಕ್ಷೌಹಿಣಿಸಂಯುತಂ ॥ ೨೫ ॥**
**ಪುರಸ್ಯ ಸಾಲವಲಯೇ ಕಟಿಶೀರ್ಷಕವೇಶ್ಮಸು ।**
**ಮಂಡಲಾಕಾರತೋ ವಸ್ತುಂ ದಶಾಕ್ಷೌಹಿಣಿಮಾದಿಶತ್ ॥ ೨೬ ॥**
**ಏವಂ ಪಂಚಶತಾ ಕೃತ್ವಾಽಕ್ಷೌಹಿಣೀಭಿಸ್ತು ರಕ್ಷಣಂ ।**
**ಶೂನ್ಯಕಸ್ಯ ಪುರಸ್ಯೈಷ ತದ್ವೃತ್ತಂ ಸ್ವಾಮಿನೇಽವದತ್ ॥ ೨೭ ॥**

**ಕುಟಿಲಾಕ್ಷಃ—**

**ದೇವ ತ್ವದಾಜ್ಞಯಾ ದತ್ತಂ ಸೈನ್ಯೈರ್ನಗರರಕ್ಷಣಂ । [ ೨೮ ॥**
**ದುರ್ಮದಃ ಪ್ರೇಷಿತಃ ಪೂರ್ವಂ ತಾಂ ದುಷ್ಟಾಂ ಲಲಿತಾಂ ಪ್ರತಿ ॥**
**ಅಸ್ಮತ್ಕಿಂಕರಮಾತ್ರೇಣ ಸುನಿರಾಸಾ ಹಿ ಸಾಽಬಲಾ ।**
**ತಥಾಪಿ ರಾಜ್ಞಾಮಾಚಾರಃ ಕರ್ತವ್ಯಂ ಪುರರಕ್ಷಣಂ ॥ ೨೯ ॥**

---

೨೪. ಪಶ್ಚಿಮದ್ವಾರರಕ್ಷಣೆಗಾಗಿ ಹತ್ತು ಅಕ್ಷೌಹಿಣೀ ಸೈನ್ಯದೊಡನೆ ತಾಲಗ್ರೀವನೆಂಬವನನ್ನು ನೇಮಿಸಿದನು.

೨೫. ಉತ್ತರದ್ವಾರದಲ್ಲಿ ಹತ್ತು ಅಕ್ಷೌಹಿಣೀ ಸೈನ್ಯದೊಡನೆ ಮಹಾಬಲಾಢ್ಯನಾದ ತಾಲಕೇತುವನ್ನು ಆ ದ್ವಾರರಕ್ಷಣೆಯನ್ನು ಮಾಡುವಂತೆ ಆಜ್ಞಾಪಿಸಿದನು.

೨೬. ಪಟ್ಟಣದ ಕೋಟೆಯಲ್ಲಿದ್ದ ಕಟಿಶೀರ್ಷಗೃಹಗಳಲ್ಲಿ ಮಂಡಲಾಕಾರವಾಗಿ ನೆಲಸಿ ಕಾವಲು ಕೊಡಲು, ಆ ಕುಟಿಲಾಕ್ಷನು ಹತ್ತು ಅಕ್ಷೌಹಿಣೀ ಸೇನೆಗಳನ್ನು ನಿಯಮಿಸಿದನು.

೨೭. ಹೀಗೆ ಪ್ರಧಾನಸೇನಾಧಿಪನಾದ ಕುಟಿಲಾಕ್ಷನು ನಗರದ ರಕ್ಷಣೆಗಾಗಿ ಐವತ್ತು ಅಕ್ಷೌಹಿಣೀ ಸೇನೆಗಳನ್ನು ನಿಲ್ಲಿಸಿ ಆ ವಿಷಯವನ್ನು ಒಡೆಯನಾದ ಭಂಡಾಸುರನಿಗೆ ಅರಿಕೆಮಾಡಿದನು.

೨೮. ಕುಟಿಲಾಕ್ಷನು ಹೇಳುತ್ತಾನೆ—"ಪ್ರಭುವೇ, ನಿನ್ನ ಅಪ್ಪಣೆಯಂತೆ ನಗರರಕ್ಷಣೆಗಾಗಿ ಸೇನೆಗಳನ್ನೆಲ್ಲ ನಿಯಮಿಸಿರುವೆನು. ದುಷ್ಟೆಯಾದ ಆ ಲಲಿತೆಯೊಡನೆ ಯುದ್ಧಮಾಡಲು ದುರ್ಮದದಾನವನನ್ನು ಅಟ್ಟಿರುವೆನು.

೨೯. ಅಬಲೆಯಾದ ಆ ಲಲಿತೆಯು ನಮ್ಮ ಕಡೆಯ ಒಬ್ಬ

**ಇತ್ಯುಕ್ತ್ವಾ ಭಂಡದೈತ್ಯೇಂದ್ರಂ ಕುಟಿಲಾಕ್ಷೋಽತಿಗರ್ವಿತಃ ।**
**ಸ್ವಸೈನ್ಯಂ ಸಜ್ಜಯಾಮಾಸ ಸೇನಾಪತಿಭಿರನ್ವಿತಃ ॥ ೩೦ ॥**
**ಯಸ್ತು ಸಂಪ್ರೇಷಿತಃ ಪೂರ್ವಂ ಕುಟಿಲಾಕ್ಷೇಣ ದಾನವಃ ।**
**ಸ ಧ್ವನನ್ ಧ್ವಜಿನೀಯುಕ್ತೋ ಲಲಿತಾಸೈನ್ಯಮಕ್ಷಿಪೋತ್ ॥ ೩೧ ॥**
**ಕೃತ್ವಾ ಕಿಲಕಿಲಾರಾವಂ ಭಟಾಸ್ತಸ್ಯ ಸಹಸ್ರಶಃ ।**
**ದೋಧೂಯಮಾನೈರಸಿಭಿರ್ನಿಪೇತುಃ ಶಕ್ತಿಸೈನಿಕೇ ॥ ೩೨ ॥**
**ತಾಶ್ಚ ಶಕ್ತಯ ಉದ್ದಂಡಸ್ಫುರಿತಾಟ್ಟಹಸಸ್ವನಾಃ ।**
**ದೇದೀಪ್ಯಮಾನಶಸ್ತ್ರಾಭಾಃ ಸಮಯುಧ್ಯಂತ ದಾನವೈಃ ॥ ೩೩ ॥**
**ಶಕ್ತೀನಾಂ ದಾನವಾನಾಂ ಚ ಸಂಕ್ಷೋಭಿತಜಗತ್ತ್ರಯಂ ।**
**ಸಮವರ್ತತ ಸಂಗ್ರಾಮೋ ಧೂಲಿಗ್ರಾಮಂ ತದಾಂಬರಂ ॥ ೩೪ ॥**
**ರಥವಂಶೇಷು ಮೂರ್ಚ್ಛಂತ್ಯಃ ಕರಿಕರ್ಣೈಃ ಪ್ರಚಾಲಿತಾಃ ।**
**ಅಶ್ವನಿಃಶ್ವಾಸವಿಕ್ಷಿಪ್ತಾ ಧೂಲಯಃ ಪ್ರಜುಘೂರ್ಣಿರೇ ॥ ೩೫ ॥**

---

ಭಟನಿಂದಲೇ ಪರಾಜಿತಳಾಗಿ ಹೋಗುತ್ತಾಳೆ. ಆದರೂ ರಾಜರ ನಡವಳಿಯಂತೆ ನಗರದ ರಕ್ಷಣೆಯನ್ನು ಏರ್ಪಡಿಸಬೇಕಲ್ಲವೇ! ಅದಕ್ಕಾಗಿಯೇ ನಿನ್ನ ಆಣತಿಯಂತೆ ಎಲ್ಲವನ್ನೂ ನೇರ್ಪಡಿಸಲಾಗಿದೆ.''

೩೦. ಕುಟಿಲಾಕ್ಷನು ಈ ರೀತಿ ಭಂಡಾಸುರನಿಗೆ ಅರಿಕೆಮಾಡಿ, ಸೇನಾಪತಿಗಳೊಡಗೂಡಿ ತನ್ನ ಸೈನ್ಯವನ್ನೂ ಯುದ್ಧಕ್ಕೆ ಸಿದ್ಧಗೊಳಿಸಿದನು.

೩೧. ಅತ್ತ ಮೊದಲೇ ಕಾಳೆಗಕ್ಕೆ ಕಳುಹಿಸಲ್ಪಟ್ಟಿದ್ದ ದುರ್ಮದ ನಾದರೋ ಸೇನಾಸಮೇತನಾಗಿ ಹೊರಟು ಶ್ರೀ ಲಲಿತಾದೇವಿಯ ಸೇನೆಯನ್ನು ಮುತ್ತಿದನು.

೩೨. ಸಾವಿರಾರು ದಾನವಭಟರು ಕೋಲಾಹಲ ಧ್ವನಿಗಳನ್ನು ಮಾಡುತ್ತ ಕತ್ತಿಗಳನ್ನು ಝಳಪಿಸಿ ಶಕ್ತಿಸೇನೆಗಳ ಮೇಲೆ ಬಿದ್ದರು.

೩೩. ಉದ್ದಂಡೆಯರಾದ ಶಕ್ತಿದೇವಿಯರಾದರೋ ಅಟ್ಟಹಾಸ ಧ್ವನಿಗಳನ್ನು ಮಾಡುತ್ತ ಪ್ರಜ್ವಲಿಸುತ್ತಿರುವ ವಿವಿಧಾಯುಧಗಳಿಂದ ಬೆಳಗಿ ಆ ದಾನವರೊಡನೆ ಕಾಳೆಗಮಾಡಲುಪಕ್ರಮಿಸಿದರು.

೩೪. ಆಗ, ಶಕ್ತಿದೇವಿಯರಿಗೂ ದಾನವರಿಗೂ ಮೂರು ಲೋಕಗಳನ್ನೂ ಕ್ಷೋಭೆಗೊಳಿಸುವಂತಹ ಭಯಂಕರ ಯುದ್ಧವು ಮೊದಲಾಯಿತು. ಗಗನತಲವೆಲ್ಲ ಧೂಳಿನಿಂದ ತುಂಬಿಹೋಯಿತು.

೩೫. ರಥಗಳ ಗುಂಪುಗಳನ್ನೆರಗಿ, ಆನೆಗಳ ಕಂಠಪ್ರದೇಶಗಳಿಂದ

**ತನೂಪತಂತಮಾಲೋಕ್ಯ ದೃಷ್ಟ್ವಾಕ್ಷೌಹಿಣಿಸಂವೃತಂ ।**
**ಸಂಪತ್ಕರೀ ತ್ವತಿಕ್ರೋಧಾದಭಿದುದ್ರಾವ ಸಂಗರೇ ॥ ೩೬ ॥**
**ಸಂಪತ್ಕರೀಸಮಾನಾಭಿಃ ಶಕ್ತಿಭಿಃ ಸಮಧಿಷ್ಠಿತಾಃ । [೩೭॥**
**ಅಶ್ವಾಶ್ಚ ದಂತಿನೋ ಮತ್ತಾ ವ್ಯಮೃದ್ನನ್ ದಾನವೀಂ ಚಮೂಂ ॥**
**ಅನ್ಯೋನ್ಯಂ ತುಮುಲೇ ಯುದ್ಧೇ ಜಾತೇ ಕಿಲಕಿಲಾರವೇ ।**
**ಧೂಲೀಷು ಧೂಯಮಾನಾಸು ತಾಡ್ಯಮಾನಾಸು ಭೇರಿಷು ॥ ೩೮ ॥**
**ಇತಸ್ತತಃ ಪ್ರವವೃಧೇ ರಕ್ತಸಿಂಧುರ್ಮಹೀಯಸೀ ।**
**ಶಕ್ತಿಭಿಃ ಪಾತ್ಯಮಾನಾನಾಂ ದಾನವಾನಾಂ ಸಹಸ್ರಶಃ ॥ ೩೯ ॥**
**ಧ್ವಜಾನಿ ಲುಠಿತಾನ್ಯಾಸನ್ ವಿಲೂನಾನಿ ಶಿಲೀಮುಖೈಃ ।**
**ವಿಸ್ರಸ್ತತತ್ತಚ್ಚಿಹ್ನಾನಿ ಸಮಂ ಛತ್ರಕದಂಬಕೈಃ ॥ ೪೦ ॥**
**ರಕ್ತಾರುಣಾಯಾಂ ಯುದ್ಧೋರ್ವ್ಯಾಂ ಪತಿತೈಶ್ಛತ್ರಮಂಡಲೈಃ ।**
**ಆಲಂಬಿ ತುಲನಾಂ ಸಂಧ್ಯಾ ರಕ್ತಾಭ್ರಹಿಮರೋಚಿಷಾ ॥ ೪೧ ॥**

---

ಪ್ರಕಟವಾಗಿ, ಕುದುರೆಗಳ ನಿಃಶ್ವಾಸಗಳಿಂದ ಮೇಲಕ್ಕೆ ಹಾರಿದ ಆ ಧೂಳಿಗಳು ಆಕಾಶವನ್ನು ಅಮರಿದವು.

೩೬. ಹೀಗೆ ಹತ್ತು ಅಕ್ಷೌಹಿಣೀ ಸೇನೆಗಳೊಡಗೂಡಿ ತನ್ನ ಸೇನೆಯನ್ನಟ್ಟಿಬರುತ್ತಿರುವ ಆ ದುರ್ಮದದಾನವನನ್ನು ಕಂಡು ಸಂಪತ್ಕರೀ ದೇವಿಯು ಬಹಳವಾಗಿ ಕನಲಿ ರಣರಂಗಕ್ಕೆ ನುಗ್ಗಿ ಹೊರಟಳು.

೩೭. ಆಕೆಗೆ ಸಮಾನರಾದ ಶಕ್ತಿದೇವಿಯರೇರಿದ್ದ ಕುದುರೆಗಳೂ ಮದದಾನೆಗಳೂ ದಾನವ ಸೇನೆಯನ್ನು ಮರ್ದಿಸುತ್ತ ನುಗ್ಗಿದವು.

೩೮-೩೯. ಶಕ್ತಿ-ದಾನವಸೇನೆಗಳಿಗೆ ಪರಸ್ಪರವಾಗಿ ಯುದ್ಧವು ತುಮುಲವಾಗಲು, ಧೂಳಿಗಳೆದ್ದು ಎಲ್ಲೆಲ್ಲಿಯೂ ರಣಕೋಲಾಹಲಧ್ವನಿ ಯುಂಟಾಗಿ ರಣಭೇರಿಗಳು ಭೋರ್ಗರೆಯುತ್ತಿರಲು, ಶಕ್ತಿದೇವಿಯರು ಹೊಡೆದು ಕೆಡವಿದ ದಾನವರ ರಕ್ತಪ್ರವಾಹಗಳು ಅಲ್ಲಲ್ಲಿಯೇ ದೊಡ್ಡ ನದಿಗಳಂತೆ ಉಕ್ಕಿ ಹರಿಯತೊಡಗಿದವು.

೪೦. ಆ ಶಕ್ತಿಸೇನೆಗಳು ಪ್ರಯೋಗಿಸಿದ ತೀಕ್ಷ್ಣವಾದ ಬಾಣಗಳಿಂದ ದಾನವಸೇನೆಯ ಧ್ವಜಗಳೆಲ್ಲವೂ ಮುರಿದುಬಿದ್ದು ನೆಲದಲ್ಲಿ ಹೊರಳಾಡುತ್ತಿದ್ದವು. ದಾನವಸಾಮ್ರಾಜ್ಯದ ರಾಜಚಿಹ್ನೆಗಳೆಲ್ಲವೂ ಬೆಳುಗೊಡೆಗಳ ಗುಂಪಿನೊಡನೆಯೇ ಜಾರಿ ಬೀಳುತ್ತಿದ್ದವು.

೪೧. ರಕ್ತಪ್ರವಾಹಗಳಿಂದ ಕೆಂಪೊಗೆದ ಆ ಸಮರಭೂಮಿಯು

**ಜ್ವಾಲಾಕಲಾಪಾಃ ಕಲ್ಪಾಗ್ನೇರಿವ ವಾರಿ ಪಯೋನಿಧೇಃ ।**
**ದೈತ್ಯಸೈನ್ಯಾನಿ ನಿವಹಾಃ ಶಕ್ತೀನಾಂ ಪರ್ಯವಾರಯನ್ ॥ ೪೨ ॥**
**ಶಕ್ತಿಚ್ಛಟೋಜ್ಜ್ವಲಚ್ಛಸ್ತ್ರಧಾರಾನಿಷ್ಕೃತ್ತಕಂಧರಾಃ ।**
**ದಾನವಾನಾಂ ರಣತಲೇ ನಿಪೇತುರ್ಮುಂಡಮಂಡಲಾಃ ॥ ೪೩ ॥**
**ದಷ್ಟೋಷ್ಠೈರ್ಭ್ರುಕುಟೀಕ್ರೂರೈಃ ಕ್ರೋಧಸಂರಕ್ತಲೋಚನೈಃ ।**
**ಮುಂಡೈರಖಂಡಮಭವತ್ಸಂಗ್ರಾಮಧರಣೀತಲಂ ॥ ೪೪ ॥**
**ಏವಂ ಪ್ರವೃತ್ತೇ ಸಮರೇ ಜಗಚ್ಚಕ್ರಭಯಂಕರೇ ।**
**ಶಕ್ತಯೋ ಭೃಶಸಂಕ್ರುದ್ಧಾ ದೈತ್ಯಸೇನಾಮಮರ್ದಯನ್ ॥ ೪೫ ॥**
**ಇತಸ್ತತಃ ಶಕ್ತಿಶಸ್ತ್ರೈಸ್ತಾಡಿತಾ ಮೂರ್ಛಿತಾ ಇತಿ ।**
**ವಿನೇದುರ್ದಾನವಾಸ್ತತ್ರ ಸಂಪದ್ದೇವೀಬಲಾಹತಾಃ ॥ ೪೬ ॥**
**ಅಥ ಭಗ್ನಂ ಸಮಾಶ್ವಾಸ್ಯ ನಿಜಂ ಬಲಮರಿಂದಮಃ ।**
**ಉಷ್ಟ್ರಮಾರುಹ್ಯ ಸಹಸಾ ದುರ್ಮದೋಽಭ್ಯದ್ರವಚ್ಚಮೂಂ ॥ ೪೭ ॥**

---

ನೆಲಕ್ಕುರುಳಿದ ಬೆಳುಗೊಡೆಗಳ ಗುಂಪುಗಳಿಂದ ಕೂಡಿ, ಕೆಮ್ಮೋಡಗಳ ನಡುವಣ ಚಂದ್ರನಿಂದ ಕೂಡಿದ ಸಂಧ್ಯಾಕಾಲವನ್ನು ಹೋಲುತ್ತಿದ್ದಿತು.

೪೨. ಪ್ರಳಯಾಗ್ನಿಯ ಜ್ವಾಲೆಗಳು ಕಡಲ ನೀರನ್ನೆಂತೋ ಅಂತು, ಆ ಶಕ್ತಿಗಳ ಗುಂಪುಗಳು ದೈತ್ಯಸೇನೆಗಳನ್ನು ಮುತ್ತಿದುವು.

೪೩. ಶಕ್ತಿದೇವಿಯರ ಮಹಾ ಜಾಜ್ವಲ್ಯಮಾನವಾದ ಶಸ್ತ್ರಧಾರೆಗಳಿಂದ ಕತ್ತರಿಸಿದ ಕಂಠಪ್ರದೇಶಗಳುಳ್ಳ ದಾನವರ ರುಂಡಗಳ ಸಮೂಹಗಳು ರಣಭೂಮಿಯಲ್ಲಿ ಬಿದ್ದು ಹೊರಳಾಡತೊಡಗಿದುವು.

೪೪. ತುಟಿಗಳನ್ನು ಕಚ್ಚಿ, ಹುಬ್ಬು ಗಂಟಿಕ್ಕಿ ಭಯಂಕರವಾಗಿ ತೋರಿ, ಕನಲಿ ಕೆಂಪೇರಿದ ಕಣ್ಣುಗಳುಳ್ಳ ಆ ದಾನವರ ರುಂಡಗಳು ಸಮರಭೂಮಿಯಲ್ಲಿ ಎಲ್ಲೆಲ್ಲಿಯೂ ತುಂಬಿಹೋದವು.

೪೫. ಈ ರೀತಿ, ಬ್ರಹ್ಮಾಂಡವೇ ಭಯದಿಂದ ತತ್ತಳಿಸುವಂತಹ ಯುದ್ಧವು ಪ್ರಾರಂಭವಾಗಲು ಶಕ್ತಿದೇವಿಯರೆಲ್ಲರೂ ಬಹುವಾಗಿ ಕನಲಿ ದೈತ್ಯಸೇನೆಯೆಲ್ಲವನ್ನೂ ಮರ್ದಿಸತೊಡಗಿದರು.

೪೬. ಸಂಪತ್ಕರೀದೇವಿಯ ಸೇನೆಯಲ್ಲಿನ ಆ ಶಕ್ತಿದೇವಿಯರು ದಾನವರೆಲ್ಲರನ್ನೂ ಹೊಡೆದು ಕೆಡವುತ್ತಿರಲು, "ಅಯ್ಯೋ! ಹೊಡೆದರು! ಮೂರ್ಛೆಹೋದೆವು!!" ಎಂಬುದಾಗಿ ಅವರೆಲ್ಲರೂ ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದರು.

೪೭. ಆಗ, ಹಗೆಗಳನ್ನು ಸದೆಬಡಿಯುವವನಾದ ದುರ್ಮದ

**ದೀರ್ಘಗ್ರೀವಃ ಸಮುನ್ನಮ್ರಃ ಪೃಷ್ಠೇ ನಿಮ್ನೋದರೋ ವದನಃ ।**
**ಅಧಿಷ್ಠಿತೋ ದುರ್ಮದೇನ ವಾಹನೋಽಪ್ಯಶ್ಚಚಾಲ ಹ ॥ ೪೮ ॥**
**ತಮನುಪ್ರವಾಹನಂ ದುಷ್ಟಮನ್ವಯುಃ ಕ್ರುದ್ಧಚೇತಸಃ ।**
**ದಾನವಾ ನಿಃಶ್ವಸತ್ಸರ್ಪಭೀಮಶಸ್ತ್ರಾ ಯುಯುತ್ಸಯಾ ॥ ೪೯ ॥**
**ಅವಾಕಿರದಸೌ ಭಲ್ಲೈರುಲ್ಲಸತ್ಫಲಶಾಲಿಭಿಃ ।**
**ಸಂಪತ್ಕರೀಚಮೂಚಕ್ರಂ ವನಂ ವಾರ್ಭಿರಿವಾಂಬುದಃ ॥ ೫೦ ॥**
**ತಸ್ಯ ದುಸ್ಸಹಸತ್ತ್ವಸ್ಯ ತಾಡಿತಾ ಬಹುಭಿಃ ಶರೈಃ ।**
**ಸ್ತಂಭಿತೇವಾಭವತ್ಸೇನಾ ಸಂಪತ್ಕರ್ಯಾ ಕ್ಷಣಂ ರಣೇ ॥ ೫೧ ॥**
**ಅಥ ಕ್ರೋಧಾರುಣಂ ಚಕ್ಷುರ್ದಧಾನಾ ಸಂಪದಂಬಿಕಾ ।**
**ರಣಕೋಲಾಹಲಂ ನಾಗಮಾರೂಢಾ ಯುಧ್ಯತಾಽಮುನಾ ॥ ೫೨ ॥**

---

ನಾದರೋ, ಭಗ್ನವಾದ ತನ್ನ ಸೇನೆಯನ್ನು ಸಮಾಧಾನಕ್ಕೆ ತಂದುಕೊಂಡು, ಒಂಟೆಯನ್ನೇರಿ, ಬಹು ವೇಗವಾಗಿ ಆ ಶಕ್ತಿಸೇನೆಯನ್ನಟ್ಟಿ ಬಂದನು.

೪೮. ದುರ್ಮದದಾನವನೇರಿದ್ದ ಕಾಳಗಕ್ಕೆ ಸಿದ್ಧವಾಗಿಯೇ ಇದ್ದುದೂ, ಉದ್ದನೆಯ ಕತ್ತುಳ್ಳುದೂ ಆದ ಆ ಒಂಟೆಯು ತನ್ನೊಡೆಯನು ಅತಿ ಕಠಿನವಾಗಿ ತಿವಿದೋಡಿಸಲು ಬಹು ತೀವ್ರವಾಗಿಯೇ ಮುನ್ನುಗ್ಗಿ ಹೊರಟಿತು.

೪೯. ಕೂಡಲೇ ದಾನವರೆಲ್ಲರೂ ಬಹಳವಾಗಿ ಕನಲಿ ಯುದ್ಧ ಮಾಡುವ ಬಯಕೆಯುಳ್ಳವರಾಗಿ, ಬುಸುಗುಟ್ಟುತ್ತಿರುವ ನಾಗಸರ್ಪಗಳಿಗೆ ಸಮಾನವಾದ ಭಯಂಕರ ಶಸ್ತ್ರಗಳುಳ್ಳವರಾಗಿ, ಒಂಟೆಯಮೇಲೆ ಕುಳಿತು ಮುನ್ನುಗ್ಗಿ ಹೋಗುತ್ತಿರುವ ಆ ದುರ್ಮದ ದಾನವನನ್ನು ಹಿಂಬಾಲಿಸಿ ಹೊರಟರು.

೫೦-೫೧. ಆಗ, ದುರ್ಮದನು ಶಕ್ತಿಸೇನೆಗಳಮೇಲೆ ಮುಗಿಲಿನಂತೆ ಭಯಂಕರವಾದ ಭಲ್ಲಾಯುಧಗಳ ಮಳೆಗರೆದನು. ಈ ರೀತಿ ತಡೆಯಲು ಅಸಾಧ್ಯವಾದ ಪರಾಕ್ರಮವುಳ್ಳ ಆ ದುರ್ಮದನು ಅನೇಕ ಬಾಣಗಳನ್ನು ಪ್ರಯೋಗಿಸುತ್ತಿರಲು, ಒಂದು ಕ್ಷಣಕಾಲಮಾತ್ರ ಆ ಸಂಪತ್ಕರೀದೇವಿಯ ಶಕ್ತಿಸೇನೆಯು ಸ್ತಂಭಿತವಾಗಿಹೋಯಿತು.

೫೨. ತರುವಾಯ, ಆ ದೇವಿಯು ತಾನೇ ಸಾಕ್ಷಾತ್ತಾಗಿ ರಣಕೋಲಾಹಲವೆಂಬ ಗಜಶ್ರೇಷ್ಠವನ್ನೇರಿ ಕನಲಿ ಕೆಂಪಡರಿದ ಕಂಗಳುಳ್ಳವಳಾಗಿ ಆ ದುರ್ಮದನೊಡನೆ ಯುದ್ಧಮಾಡಿದಳು.

ಆಲೋಲಕಂಕಣಕ್ವಾಣರಮಣೀಯತರಃ ಕರಃ ।
ತಸ್ಯಾಶ್ಚ ಕರ್ಷ ಕೋದಂಡಮೌರ್ವೀಮಾಕರ್ಣಮಾಹವೇ ॥ ೫೩ ॥
ಲಘುಹಸ್ತತಯಾ ತಸ್ಯಾ ನಾಕೃಷ್ಟಂ ನ ಚ ಮೋಕ್ಷಣಂ ।
ದದೃಶೇ ಧನುಷಶ್ಚಕ್ರಾತ್ಕೇವಲಂ ಶರಧೋರಣೀ ॥ ೫೪ ॥
ಅರ್ಕಾಂಶು ಭರಸಂಪರ್ಕಸ್ಫುರತ್ಪ್ರತಿಫಲತ್ಫಲಾಃ ।
ಶರಾಃ ಸಂಪತ್ಕರೀಚಾಪಚ್ಯುತಾಃ ಸಮುದಹನ್ನರೀನ್ ॥ ೫೫ ॥
ದುರ್ಮದಸ್ಯ ಚ ತಸ್ಯಾಶ್ಚ ಸುಮಹದ್ಯುದ್ಧಮದ್ಭುತಂ ।
ಅಭೂದನ್ಯೋನ್ಯಸಂಘಟ್ಟಸಸ್ಫುಲಿಂಗಶಿಲೀಮುಖಂ ॥ ೫೬ ॥
ಪ್ರಥಮಂ ಪ್ರಸೃತೈರ್ಬಾಣೈಃ ಸಂಪದ್ದೇವೀಸುರದ್ವಿಷೋಃ ।
ಅಂಧಕಾರಃ ಸಮಭವತ್ತಿರಸ್ಕುರ್ವನ್ನಹಸ್ಕರಂ ॥ ೫೭ ॥

---

೫೩. ಸಡಿಲವಾಗಿ ಜೋಲಾಡುತ್ತಿರುವ ಬಳೆಗಳ ಘಲು ಘಲುನಾದ ದಿಂದ ಅತ್ಯಂತ ರಮಣೀಯವಾಗಿ ಕಂಗೊಳಿಸುತ್ತಿದ್ದ ಆಕೆಯ ಕರ ಕಮಲವು ಬಿಲ್ಲಿನ ನಾರಿಯನ್ನು ಕಿವಿಯವರೆಗೂ ಸೆಳೆಯಿತು.

೫೪. ಆ ದೇವಿಯ ಕೈಚಳಕವು ಅನುಪಮವಾಗಿದ್ದುದರಿಂದ, ಆಕೆಯು ಬಿಲ್ಲಿನ ನಾರಿಯನ್ನು ಸೆಳೆದುದಾಗಲಿ, ಬಾಣಗಳನ್ನು ಬಿಟ್ಟುದಾಗಲಿ ಯಾರಿಗೂ ಗೋಚರವಾಗುತ್ತಿರಲಿಲ್ಲ. ಆದರೆ ಧನುಸ್ಸಿನಿಂದ ಒಂದೇ ಸಮನಾಗಿ ಬಂದು ಬೀಳುತ್ತಿದ್ದ ಬಾಣಗಳ ಧೋರಣೆಯು ಮಾತ್ರ ಕಾಣ ಬರುತ್ತಿದ್ದಿತು.

೫೫. ಸೂರ್ಯಕಿರಣಗಳ ಬೇಗೆಯ ಸೋಕಿನಿಂದ ಬಿರುಕು ಬಿಡುತ್ತಿರುವ ಹಣ್ಣುಗಳ ಅವಸ್ಥೆಯನ್ನು ಶತ್ರುಸೇನೆಯವರ ತಲೆಗಳಿಗೆ ಉಂಟುಮಾಡುವ ಬಾಣಗಳು ಆ ದೇವಿಯ ಬಿಲ್ಲಿನಿಂದ ಹೊರಟು ಅವರೆಲ್ಲರನ್ನೂ ದಹಿಸತೊಡಗಿದುವು.

೫೬. ಹೀಗೆ, ಆ ದೇವಿಯ ಮತ್ತು ದುರ್ಮದದಾನವನ ಬಾಣಗಳು ಒಂದಕ್ಕೊಂದು ತಗುಲಿ ಕಿಡಿಗಳೆದ್ದು ಭಯಂಕರವಾಗಿ ತೋರುತ್ತಿರಲು, ಅವರೀರ್ವರಿಗೂ ಮಹಾಯುದ್ಧವು ನಡೆಯಿತು.

೫೭. ಸಂಪತ್ಕರೀದೇವಿಯೂ ಆ ದಾನವನೂ ಪ್ರಯೋಗಿಸಿದ ಬಾಣಗಳು ಮೊದಮೊದಲು ಸೂರ್ಯಮಂಡಲವನ್ನೇ ಮುಚ್ಚಿ ಎತ್ತೆತ್ತಲೂ ಹರಡಿ ಎಲ್ಲೆಡೆಗಳಲ್ಲಿಯೂ ಕತ್ತಲು ಕವಿಸಿದವು.

ತದಂತರೇ ಚ ಬಾಣಾನಾಮತಿಸಂಘಟ್ಟಯೋರ್ನಯಃ ।
ವಿಸ್ಫುಲಿಂಗಾ ವಿದಧಿರೇ ಖದ್ಯೋತಭ್ರಮಚಾತುರೀಂ ॥ ೫೮ ॥
ತಯಾಧಿರೂಢಃ ಸುಶ್ರೇಣ್ಯಾ ರಣಕೋಲಾಹಲಃ ಕರೀ ।
ಪರಾಕ್ರಮಂ ಬಹುವಿಧಂ ದರ್ಶಯಾಮಾಸ ಸಂಗರೇ ॥ ೫೯ ॥
ಕರೇಣ ಕತಿಚಿದ್ದೈತ್ಯಾನ್ ಪಾದಾಘಾತೇನ ಕಾಂಶ್ಚನ ।
ಉದಗ್ರದಂತಮುಸಲಾಘಾತೈರನ್ಯಾಂಶ್ಚ ದಾನವಾನ್ ॥ ೬೦ ॥
ವಾಲದಂಡಾಹತೈರನ್ಯಾನ್ ಘೀಟ್ಕಾರೈರಪರಾನ್ ರಿಪೂನ್ ।
ಗಾತ್ರನ್ಯಾಮರ್ದನೈರನ್ಯಾನ್ ನಖಾಘಾತೈಸ್ತಥಾಪರಾನ್ ॥ ೬೧ ॥
ಪೃಥಿಮಾನಾಭಿಘಾತೇನ ಕಾಂಶ್ಚಿದ್ದೈತ್ಯಾನ್ ವಿಮರ್ದಯನ್ ।
ಚತುರಂ ಚರಿತಂ ಚಕ್ರೇ ಸಂಪದ್ದೇವೀಮತಂಗಜಃ ॥ ೬೨ ॥
ಸ ದುರ್ಮದಃ ಕ್ರುಧಾ ರಕ್ತದೃಷ್ಟಿರೇಕೇನ ಪತ್ರಿಣಾ ।
ಸಂಪತ್ಕರೀಮುಕುಟಗಂ ಮಣಿಮೇಕಮಪಾತಯತ್ ॥ ೬೩ ॥
ಅಥ ಕ್ರೋಧಾರುಣದೃಶಾ ತಯಾ ಮುಕ್ತೈಃ ಶಿಲೀಮುಖೈಃ ।
ವಿಕ್ಷತೋ ವಕ್ಷಸಿ ಕ್ಷಿಪ್ರಂ ಜೀವಿತಂ ದುರ್ಮದೋ ಜಹೌ ॥ ೬೪ ॥

---

೫೮. ಆಮೇಲೆ ಅವರೀರ್ವರ ಬಾಣಗಳೂ ಒಂದಕ್ಕೊಂದು ಸೇರಿ ಕಿಡಿಗಳೆದ್ದು, ಮಿಣುಕು ಹುಳುಗಳ ತಿರುಗಾಟದ ಸೊಬಗನ್ನು ಮೆರೆಯುತ್ತಿದ್ದುವು.

೫೯. ಆ ಯುದ್ಧದಲ್ಲಿ ಸಂಪತ್ಕರೀದೇವಿಯ ವಾಹನವಾದ ರಣಕೋಲಾಹಲವೆಂಬ ಆನೆಯು ಬಹು ಪರಾಕ್ರಮವನ್ನು ಪ್ರದರ್ಶಿಸಿತು.

೬೦-೬೨. ಆ ಆನೆಯು ತನ್ನ ಸೊಂಡಲಿನಿಂದ ಕೆಲದಾನವರನ್ನೂ, ಕಾಲ್ತುಳಿತಗಳಿಂದ ಕೆಲವರನ್ನೂ, ಮುಸಲಾಯುಧದಂತಿರುವ ಉದ್ದವಾದ ತನ್ನ ದಂತಗಳಿಂದ ಇನ್ನು ಕೆಲವರನ್ನೂ, ಬಾಲವೆಂಬ ಕೋಲಿನಿಂದ ಹೊಡೆದು ಮತ್ತೆ ಕೆಲವರನ್ನೂ, ಫೂತ್ಕಾರಗಳಿಂದ ಕೆಲವರನ್ನೂ, ಮೈಯನ್ನುಜ್ಜಿ ನೂಕುವುದರಿಂದಲೇ ಕೆಲವರನ್ನೂ ಮರ್ದಿಸಿಕೆಡವಿ ಬಹು ಚಮತ್ಕಾರವಾದ ನಡಿಗೆಗಳನ್ನು ತೋರಿ ಮೆರೆಯಿತು.

೬೩. ತರುವಾಯ ಮಹಾಕ್ರೋಧಪೂರಿತನಾಗಿ ರಕ್ತನೇತ್ರನಾದ ಆ ದುರ್ಮದದಾನವನು ಬಾಣವೊಂದನ್ನು ಪ್ರಯೋಗಿಸಿ ಆ ಸಂಪತ್ಕರೀ ದೇವಿಯ ಕಿರೀಟದಲ್ಲಿನ ರತ್ನವೊಂದನ್ನು ಹಾರಿಸಿದನು.

೬೪. ಆ ದೇವಿಯು ಇದರಿಂದ ಬಹಳವಾಗಿ ಮುನಿದು, ಅನೇಕ

**ತತಃ ಕಿಲಕಿಲಾರಾವಂ ಕೃತ್ವಾ ಶಕ್ತಿಚಮೂವರೈಃ ।**
**ತತ್ಸೈನಿಕಚರಾಸ್ತ್ವನ್ಯೇ ನಿಹತಾ ದಾನವೋತ್ತಮಾಃ ॥ ೬೫ ॥**
**ಹತಾವಶಿಷ್ಟಾ ದೈತ್ಯಾಸ್ತು ಶಕ್ತಿಬಾಣಖಿಲೀಕೃತಾಃ ।**
**ಪಲಾಯಿತಾ ರಣಕ್ಷೋಣ್ಯಾಃ ಶೂನ್ಯಕಂ ಪುರಮಾಶ್ರಯನ್ ॥ ೬೬ ॥**
ಹಯಗ್ರೀವಃ—
**ತಂ ವೃತ್ತಾಂತಂ ಸಮಾಕರ್ಣ್ಯ ಸಂಕ್ರುದ್ಧೋ ದಾನವೇಶ್ವರಃ ।**
**ಪ್ರಚಂಡೇನ ಪ್ರಭಾವೇನ ದೀಪ್ಯಮಾನ ಇವಾತ್ಮನಿ ॥ ೬೭ ॥**
**ಸ ಶೀಘ್ರಸ್ಪರ್ಶಮುದ್ಧೂಯ ಖಡ್ಗಮುಗ್ರವಿಲೋಚನಃ ।**
**ಕುಟಿಲಾಕ್ಷಂ ನಿಕಟಗಂ ಬಭಾಷೇ ಪೃತನಾಪತಿಂ ॥ ೬೮ ॥**
**ಕಥಂ ಸಾ ದುಷ್ಟವನಿತಾ ದುರ್ಮದಂ ಬಲಶಾಲಿನಂ ।**
**ನಿಪಾತಿತವತೀ ಯುದ್ಧೇ ಕಷ್ಟ ಏವ ವಿಧೇಃ ಕ್ರಮಃ ॥ ೬೯ ॥**
**ನ ಸುರೇಷು ನ ಮರ್ತ್ಯೇಷು ನೋರಗೇಂದ್ರೇಷು ಯದ್ಬಲಂ ।**
**ಅಭೂತ್ತತಿಹತಂ ಸೋಽಪಿ ದುರ್ಮದೋಽಬಲಯಾ ಹತಃ ॥ ೭೦ ॥**

---

ಬಾಣಗಳನ್ನು ಆ ರಾಕ್ಷಸನ ವಕ್ಷಸ್ಥಳಕ್ಕೆಸೆದಳು. ಆ ಕೂಡಲೇ ಅವನು ಪ್ರಾಣಗಳನ್ನು ತೊರೆದನು.

೬೫. ತರುವಾಯ ಶಕ್ತಿಸೇನೆಯವರೆಲ್ಲರೂ ಕೋಲಾಹಲಧ್ವನಿಗಳನ್ನು ಮಾಡುತ್ತ ಶತ್ರುಸೇನೆಯಲ್ಲಿದ್ದ ದಾನವೋತ್ತಮರೆಲ್ಲರನ್ನೂ ಮರ್ದಿಸಿ ಕೆಡವಿದರು.

೬೬. ಕಳೆದುಳಿದ ದಾನವರೆಲ್ಲರೂ ಶಕ್ತಿದೇವಿಯರ ಬಾಣಗಳಿಂದ ಬೇಸತ್ತು ರಣಭೂಮಿಯನ್ನು ತೊರೆದು ಪಲಾಯನವಾಗಿ ಶೂನ್ಯನಗರವನ್ನು ಸೇರಿಕೊಂಡರು.

೬೭-೬೮. ಹಯಗ್ರೀವನು ಹೇಳುತ್ತಾನೆ.—ಅಯ್ಯಾ ಮಹರ್ಷಿಯೇ! ತರುವಾಯ ಈ ಸಮಾಚಾರವನ್ನು ಕೇಳಿ, ದಾನವೇಶ್ವರನಾದ ಭಂಡನು, ಪ್ರಚಂಡವಾದ ತನ್ನ ಪ್ರಭಾವದಿಂದಲೇ ಪ್ರಜ್ವಲಿಸುತ್ತಿರುವನೋ ಎಂಬಂತೆ ತೋರುತ್ತ ಬಹಳವಾಗಿ ಕೋಪಗೊಂಡು, ತನ್ನ ಕಣ್ಣುಗಳನ್ನು ಭಯಂಕರವಾಗಿ ತಿರುವುತ್ತ, ಶೀಘ್ರಸ್ಪರ್ಶವೆಂಬ ಖಡ್ಗವನ್ನು ಒರೆಯಿಂದ ತಟಕ್ಕನೆ ಹಿರಿದು, ಸಮೀಪದಲ್ಲಿಯೇ ಕುಳಿತಿರುವ ಸೇನಾಪತಿಯಾದ ಕುಟಿಲಾಕ್ಷನನ್ನು ಕುರಿತು ಹೀಗೆ ನುಡಿದನು:

೬೯-೭೦. "ಏನಿದು! ಆ ದುಷ್ಟವನಿತೆಯು ಯುದ್ಧದಲ್ಲಿ ಮಹಾ

**ತಾಂ ದುಷ್ಟವನಿತಾಂ ಜೇತುಮಾಕೃಷ್ಟುಂ ಚ ಕಚೇ ಹಠಾತ್ ।**
**ಸೇನಾಪತಿಂ ಕುರುಂಡಾಖ್ಯಂ ಪ್ರೇಷಯಾಽಹವದುರ್ಮದಂ॥ ೭೧ ॥**
**ಇತಿ ಸಂಬೋಧಿತಸ್ತೇನ ಕುಟಿಲಾಕ್ಷೋ ಮಹಾಬಲಂ ।**
**ಕುರುಂಡಂ ಚಂಡದೋರ್ದಂಡಮಾಜುಹಾವ ಪ್ರಭೋಃ ಪುರಃ॥೭೨॥**
**ಸ ಕುರುಂಡಃ ಸಮಾಗತ್ಯ ಪ್ರಣಾಮಂ ಸ್ವಾಮಿನೇಽದಿಶತ್ ।**
**ಉವಾಚ ಕುಟಿಲಾಕ್ಷಸ್ತಂ ಗಚ್ಛ ಸಜ್ಜಯ ಸೈನಿಕಂ ॥ ೭೩ ॥**
**ಮಾಯಾಯಾಂ ಚತುರೋಽಸಿ ತ್ವಂ ಚಿತ್ರಯುದ್ಧವಿಶಾರದಃ ।**
**ಕೂಟಯುದ್ಧೇ ಚ ನಿಪುಣಸ್ತಾಂ ಸ್ತ್ರಿಯಂ ಪರಿಮರ್ದಯ ॥ ೭೪ ॥**
**ಇತಿ ಸ್ವಾಮಿಪುರಸ್ಥೇನ ಕುಟಿಲಾಕ್ಷೇಣ ದೇಶಿತಃ ।**
**ನಿರ್ಜಗಾಮ ಪುರಾತ್ತೂರ್ಣಂ ಕುರುಂಡಶ್ಚಂಡವಿಕ್ರಮಃ ॥ ೭೫ ॥**

---

ಪರಾಕ್ರಮಶಾಲಿಯಾದ ನಮ್ಮ ದುರ್ಮದನನ್ನು ಕೊಂದಿರುವಳೇ! ಆಹಾ!! ವಿಧಿಯ ವೈಚಿತ್ರ್ಯವು ಬಹು ಕಷ್ಟವಾದುದು. ಮಾನವ ಪನ್ನಗ ದೇವತೆಗಳೇ ಮೊದಲಾದವರ ಸೇನೆಗಳೆಲ್ಲವನ್ನೂ ನಾಶಗೊಳಿಸಿರುವ ನಮ್ಮ ದುರ್ಮದನು ಒಬ್ಬ ಅಬಲೆಯಿಂದ ಹತನಾಗಿಹೋದನೇ!

೭೧. ಎಲವೋ, ಕುಟಿಲಾಕ್ಷನೇ! ಇಂಥ ದುಷ್ಟಸ್ತ್ರೀಯನ್ನು ಜಯಿಸಿ ಅವಳ ಮುಂದಲೆಯನ್ನು ಹಿಡಿದೆಳೆದುತರುವುದಕ್ಕಾಗಿ ಯುದ್ಧನಿಪುಣನಾದ ಕುರುಂಡನೆಂಬ ಸೇನಾಪತಿಯನ್ನು ಈಗಲೇ ಕಳಕ್ಕೆ ಕಳುಹಿಸು.''

೭೨. ಭಂಡಾಸುರನಿಂತು ನುಡಿಯಲು ಕುಟಿಲಾಕ್ಷನು ಚಂಡದೋರ್ದಂಡನೂ ಮಹಾಬಲಶಾಲಿಯೂ ಆದ ಆ ಕುರುಂಡನನ್ನು, ತನ್ನೊಡೆಯನ ಮುಂಗಡಯೇ ಕರೆಯಿಸಿದನು.

೭೩-೭೪. ಕುರುಂಡನು ಕೂಡಲೇ ಅಲ್ಲಿಗೆ ಬಂದು ತನ್ನೊಡೆಯನಿಗೆ ಪ್ರಣಾಮವನ್ನು ಮಾಡಿ ನಿಂತನು. ಕುಟಿಲಾಕ್ಷನು ಅವನನ್ನು ನೋಡಿ, '' ಎಲೈ ಕುರುಂಡನೇ, ಹೊರಡು; ಸೈನ್ಯವನ್ನು ಸಿದ್ಧಪಡಿಸು. ನೀನು ಮಾಯೆಗಳಲ್ಲಿ ಚತುರನಾಗಿರುವೆ; ಚಿತ್ರಯುದ್ಧದಲ್ಲಿಯೂ ವಿಶಾರದನು; ಕೂಟಯುದ್ಧದಲ್ಲಂತು ನಿಪುಣನು. ಇಂತಹ ನೀನು, ಈಗ ನಮ್ಮ ಮೇಲೆ ಯುದ್ಧಕ್ಕೆ ಬಂದಿರುವ ಆ ಸ್ತ್ರೀಯನ್ನು ಮರ್ದಿಸಿ ಕೆಡವಬೇಕು '' ಎಂದು ಹೇಳಿದನು.

೭೫. ತನ್ನ ಸ್ವಾಮಿಯಾದ ಭಂಡಾಸುರನೆದುರಿನಲ್ಲಿಯೇ ಕುಟಿಲಾಕ್ಷನು ತನಗೆ ಈ ಪ್ರಕಾರ ಅಪ್ಪಣೆಕೊಡಲು, ಚಂಡವಿಕ್ರಮನಾದ ಆ ಕುರುಂಡನು ಕೂಡಲೇ ಪಟ್ಟಣದಿಂದ ಹೊರಟನು.

**ವಿಂಶತ್ಯಕ್ಷೌಹಿಣೀಭಿಶ್ಚ ಸಮಂತಾತ್ಪರಿವಾರಿತಃ ।**
**ಮರ್ದಯನ್ ಸ ಮಹೀಗೋಲಂ ಹಸ್ತಿವಾಜಿಪದಾತಿಭಿಃ ॥**
**ದುರ್ಮದಸ್ಯಾಗ್ರಜಶ್ಚಂಡಃ ಕುರುಂಡಃ ಸಮರಂ ಯಯೌ ॥ ೭೬ ॥**
**ಧೂಲಿಭಿಸ್ತುಮುಲೀಕುರ್ವನ್ ದಿಗಂತಂ ಧೀರಮಾನಸಃ ।**
**ಶೋಕರೋಷಗ್ರಹಗ್ರಸ್ತೋ ಜವನಾಶ್ವಗತೋ ಯಯೌ ॥ ೭೭ ॥**
**ಶಾರ್ಙ್ಗಂ ಧನುಃ ಸಮಾದಾಯ ಘೋರಟಂಕಾರನಿಸ್ವನಂ ।**
**ವವರ್ಷ ಶರಧಾರಾಭಿಃ ಸಂಪತ್ಕರ್ಯಾ ಮಹಾಚಮೂಂ ॥ ೭೮ ॥**
**ಪಾಪೇ ಮದನುಜಂ ಹತ್ವಾ ದುರ್ಮದಂ ಯುದ್ಧದುರ್ಮದಂ ।**
**ವೃಥಾ ವಹಸಿ ವಿಕ್ರಾಂತಿಲವಲೇಶಾನ್ಮಹಾಮದಂ ॥ ೭೯ ॥**
**ಇದಾನೀಮೇವ ಭವತೀಮೇಭಿರ್ನಾರಾಚಮಂಡಲೈಃ ।**
**ಅಂತಕಸ್ಯ ಪುರೀಮದ್ಯ ಪ್ರಾಪಯಿಷ್ಯಾಮಿ ಪಶ್ಯ ಮಾಂ ॥ ೮೦ ॥**
**ಅತಿಹೃದ್ಯಮತಿಸ್ವಾದು ತ್ವದ್ವಪುರ್ವಲ್ಲಿನಿರ್ಗತಂ ।**
**ಅಪೂರ್ವಮಂಗನಾರಕ್ತಂ ಪಿಬಂತು ರಣಪೂತನಾಃ ॥ ೮೧ ॥**
**ಮಮಾನುಜವಧೋತ್ಥಸ್ಯ ಪ್ರತ್ಯವಾಯಸ್ಯ ದುಷ್ಫಲಂ । [ ೮೨ ॥**
**ಅಧುನಾ ಭೋಕ್ಷ್ಯಸೇ ದುಷ್ಟೇ ಪಶ್ಯ ಮೇ ಭುಜಯೋರ್ಬಲಂ ॥**

---

೭೬. ಇಪ್ಪತ್ತು ಅಕ್ಷೌಹಿಣೀ ಸೇನೆಗಳು ತನ್ನನ್ನು ಹಿಂಬಾಲಿಸಿ ಬರುತ್ತಿರಲು, ದುರ್ಮದನ ಅಣ್ಣನಾದ ಆ ಕುರುಂಡನು ಆನೆ ಕುದುರೆಗಳಿಂದಲೂ, ಕಾಲಾಳುಗಳಿಂದಲೂ ಭೂಮಂಡಲವನ್ನೇ ನಜ್ಜುಗುಟ್ಟುತ್ತ ಯುದ್ಧಾಭಿಮುಖವಾಗಿ ಹೊರಟನು.

೭೭. ತಮ್ಮನಾದ ದುರ್ಮದನ ಮರಣದಿಂದ ದುಃಖಿತನಾದರೂ, ಆ ದಾನವನು ರೋಷಸಮನ್ವಿತನಾಗಿ ಶೀಘ್ರಗಾಮಿಯಾದ ಕುದುರೆಯನ್ನೇರಿ ಹೊರಟು, ಧೂಳಿಗಳಿಂದ ದಿಗಂತಗಳನ್ನೇ ತುಂಬುತ್ತ ಯುದ್ಧಭೂಮಿಗೆ ನಡೆದುಬಂದನು.

೭೮. ಆ ದಾನವನು ಶಾರ್ಙ್ಗವೆಂಬ ಧನುಸ್ಸನ್ನು ಹಿಡಿದು ಭಯಂಕರನಾದ ಟಂಕಾರವನ್ನು ಮಾಡಿ, ಅಲ್ಲಿದ್ದ ಸಂಪತ್ಕರೀದೇವಿಯ ಸೇನೆಯ ಮೇಲೆ ಬಾಣವೃಷ್ಟಿಯನ್ನು ಸುರಿಸಿದನು.

೭೯-೮೨. ಇಷ್ಟೆಯಲ್ಲದೆ ಅವನು ಆ ಸಂಪತ್ಕರೀದೇವಿಯನ್ನು ಕುರಿತು, “ ಎಲೆ ಪಾಪಿಷ್ಠೇ! ನೀನು ನನ್ನ ಅನುಜನಾದ ದುರ್ಮದನನ್ನು ಸಂಹರಿಸಿದ ಮಾತ್ರದಿಂದಲೇ ಮಹಾಪರಾಕ್ರಮವತಿಯೆಂದು ಗರ್ವಿಸಿ

**ಇತಿ ಸಂತರ್ಜಯನ್‌ಸಂಪತ್ಕರೀಂ ಕರಿವರಸ್ಥಿತಾಂ ।**
**ಸೈನ್ಯಂ ಪ್ರೋತ್ಸಾಹಯಾಮಾಸ ಶಕ್ತಿಸೇನಾವಿಮರ್ದನೇ ॥ ೮೩ ॥**
**ಅಥ ತಾಂ ಪೃತನಾಂ ಚಂಡೀಂ ಕುರುಂಡಸ್ಯ ಮಹೌಜಸಃ ।**
**ವಿಮರ್ದಯಿತುಮುದ್ಯುಕ್ತಾ ಸ್ವಸೈನ್ಯಂ ಪ್ರೋದಸೀಸಹತ್ ॥ ೮೪ ॥**
**ಅಪೂರ್ವಾಹವಸಂಜಾತಕೌತುಕಾಥ ಜಗಾದ ತಾಂ ।**
**ಅಶ್ವಾರೂಢಾ ಸಮಾಗತ್ಯ ಸ್ನೇಹೇನಾರ್ದ್ರಮಿದಂ ವಚಃ ॥ ೮೫ ॥**
**ಸಖಿ ಸಂಪತ್ಕರಿ ಪ್ರೀತ್ಯಾ ಮಮ ವಾಣೀ ನಿಶಮ್ಯತಾಂ ।**
**ಅಸ್ಯ ಯುದ್ಧಮಿದಂ ದೇಹಿ ಮಮ ಕರ್ತುಂ ಗುಣೋತ್ತರೇ ॥೮೬॥**
**ಕ್ಷಣಂ ಸಹಸ್ವ ಸಮರೇ ಮಯ್ಯೈವೈಷ ನಿಯೋತ್ಸ್ಯತೇ ।**
**ಯಾಚಿತಾಸಿ ಸಖಿತ್ವೇನ ನಾತ್ರ ಸಂಶಯಮಾಚರ ॥ ೮೭ ॥**

---

ಹೋಗಿರುವೆ. ಇದೋ ಈಗಲೇ ನಾನು ಈ ಬಾಣಸಮೂಹಗಳಿಂದ ನಿನ್ನನ್ನು ಯಮಪುರಿಗೆ ಕಳುಹುವೆನು; ನೋಡುತ್ತಿರು. ರಣಪೂತನಿಯರು ಬಹುಮನೋಹರವೂ, ಬಹು ರುಚಿಕರವೂ ಆಗಿ ಬಳ್ಳಿಯಂತೆ ಕೋಮಲವಾಗಿರುವ ನಿನ್ನ ಮೈಯಿಂದ ಹೊರಹೊರಟ ಅಪೂರ್ವವಾದ ರಕ್ತವನ್ನು ಕುಡಿಯಲಿ. ಎಲೇ ದುಷ್ಟೇ! ನನ್ನ ತಮ್ಮನನ್ನು ವಧಿಸಿದ ಪಾಪಕ್ಕೆ ಇದೀಗ ಫಲವನ್ನು ಅನುಭವಿಸುವೆ. ನನ್ನ ಭುಜಬಲವನ್ನಾದರೂ ನೋಡು" ಎಂದು ಹೇಳಿದನು.

೮೩. ಕುರುಂಡದಾನವನು, ಈರೀತಿ ಗಜಶ್ರೇಷ್ಠವನ್ನೇರಿ ಕುಳಿತಿದ್ದ ಆ ಸಂಪತ್ಕರಿಯನ್ನು ಬೆದರಿಸುತ್ತ ತನ್ನ ಸೈನ್ಯವನ್ನೆಲ್ಲ ಶಕ್ತಿಸೇನೆಗಳನ್ನು ನಾಶಗೊಳಿಸಲು ಪ್ರೇರೇಪಿಸಿದನು.

೮೪. ತರುವಾಯ, ಸಂಪತ್ಕರೀದೇವಿಯಾದರೋ ಪ್ರಚಂಡವಾದ ಆ ಕುರುಂಡನ ಸೇನೆಯನ್ನು ತಾನೇ ಮರ್ದಿಸಬಯಸಿ ತನ್ನ ಸೈನ್ಯವನ್ನು ಮುಂದಕ್ಕೆ ತಂದು ಅದನ್ನು ಪ್ರೋತ್ಸಾಹಿಸಿದಳು.

೮೫. ಆಗ, ಅಶ್ವಾರೂಢಾದೇವಿಯು ಎಂದೂ ಇಲ್ಲದ ರಣೋತ್ಸಾಹವುಳ್ಳವಳಾಗಿ ಮುಂದಕ್ಕೈದಿವಂದು ಆ ಸಂಪತ್ಕರೀದೇವಿಯನ್ನು ಕುರಿತು ಸ್ನೇಹಪೂರಿತವಾಗಿ ಈ ಮಾತನ್ನು ಹೇಳಿದಳು:

೮೬-೮೭. "ಸಖಿ, ಸಂಪತ್ಕರಿ! ನನ್ನ ಮೇಲಣ ಪ್ರೀತಿಯಿಂದ ಈ ಮಾತನ್ನು ನೀನು ಕೇಳಬೇಕು. ಗುಣವತಿಯಾದ ನೀನು, ಈ ದಾನವನೊಡನೆ ಯುದ್ಧಮಾಡಲು ನನಗೆ ಅವಕಾಶವನ್ನು ಕೊಡು. ಒಂದು

**ಇತಿ ತಸ್ಯಾ ವಚಃ ಶ್ರುತ್ವಾ ಸಂಪದ್ದೇವೀ ಕೃತಸ್ಮಿತಾ ।**
**ನಿವರ್ತಯಾಮಾಸ ಚಮೂಂ ಕುರುಂಡಾಭಿಮುಖೋತ್ಥಿತಾಂ ॥೮೮॥**
**ಅಥ ಬಾಲಾರ್ಕವರ್ಣಾಭಿಃ ಶಕ್ತಿಭಿಃ ಸಮಧಿಷ್ಠಿತಾಃ ।**
**ತರಂಗಾ ಇವ ಸೈನ್ಯಾಬ್ಧೇಸ್ತುರಂಗಾ ವಾತರಂಹಸಃ ॥ ೮೯ ॥**
**ಖುರೈಃ ಖುರಪುಟೈಃ ಕ್ಷೋಣೀಮುಲ್ಲಿಖಂತೋ ಮುಹುರ್ಮುಹುಃ।**
**ಪೇತುರೇಕಪ್ರವಾಹೇಣ ಕುರುಂಡಸ್ಯ ಚಮೂಮುಖೇ ॥ ೯೦ ॥**
**ವಲ್ಗಾವಿಭಾಗಕೃತ್ಯೇಷು ಸಂವರ್ತನನಿವರ್ತನೇ ।**
**ಗತಿಭೇದೇಷು ಚಾರೀಷು ಪಂಚಧಾರಾಸು ಪಾತನೇ ॥ ೯೧ ॥**
**ಪ್ರೋತ್ಸಾಹನೇ ಚ ಸಂಜ್ಞಾಭಿಃ ಕರಸಾದಾಗ್ರ್ಯಯೋನಿಭಿಃ ।**
**ಚತುರಾಭಿಸ್ತುರಂಗಸ್ಯ ಹೃದಯಜ್ಞಾಭಿರಾಹವೇ ॥ ೯೨ ॥**
**ಅಶ್ವಾರೂಢಾಂಬಿಕಾಸೈನ್ಯಶಕ್ತಿಭಿಃ ಸಹ ದಾನವಾಃ । [ ೯೩ ॥**
**ಪ್ರೋತ್ಸಾಹಿತಾಃ ಕುರುಂಡೇನ ಸಮಯುಧ್ಯಂತ ದುರ್ಮದಾಃ ॥**

---

ಕ್ಷಣಕಾಲ ವಿಶ್ರಮಿಸಿಕೋ. ಇವನು ನನ್ನೊಡನೆ ಯುದ್ಧಮಾಡಲಿ. ಸಖೀ ಭಾವದಿಂದ ನಿನ್ನನ್ನು ಹೀಗೆ ಕೇಳಿದೆನೇ ಹೊರತು ಮತ್ತೆ ಬೇರೆಯಲ್ಲ. ನನ್ನ ವಿಷಯದಲ್ಲಿ ಸಂಶಯಪಡಬೇಡ.''

೮೮. ಹೀಗೆ ನುಡಿದ ಅಶ್ವಾರೂಢಾದೇವಿಯ ಮಾತುಗಳನ್ನು ಕೇಳಿ, ಸಂಪತ್ಕರೀದೇವಿಯು ನಸುನಕ್ಕು ಕುರುಂಡನಮೇಲೆ ನುಗ್ಗಲು ಸಿದ್ಧ ವಾಗಿದ್ದ ತನ್ನ ಸೇನೆಯನ್ನು ಹಿಂತಿರುಗಿಸಿದಳು.

೮೯-೯೦. ಆಮೇಲೆ, ಬಾಲಸೂರ್ಯನಿಗೆ ಸಮಾನವಾದ ವರ್ಣ ವುಳ್ಳವಾಗಿ, ಶಕ್ತಿದೇವಿಯರೇರಿ ಕುಳಿತಿದ್ದ ವಾಯುವೇಗವುಳ್ಳ ಕುದುರೆ ಗಳು ಗಾಳಿಯಿಂದ ಹೊಡೆಯಲ್ಪಟ್ಟ ಉಲ್ಲೋಲಕಲ್ಲೋಲವಾಗಿರುವ ಸಮರಸಮುದ್ರದ ತರಂಗಗಳೋ ಎಂಬಂತೆ, ಅಡಿಗಡಿಗೂ ಕಠಿನವಾದ ತಮ್ಮ ಗೊರಸುಗಳ ತುಳಿತದಿಂದ ಭೂಮಿಯನ್ನೊರೆಯುತ್ತ ಆ ಕುರುಂಡ ದಾನವನ ಸೈನ್ಯದಮೇಲೆ ಏಕಪ್ರವಾಹವಾಗಿ ನುಗ್ಗಿ ಹೊರಟವು.

೯೧-೯೩. ದೌಡುಗೊಳಿಸುವುದಕ್ಕೂ, ಸುತ್ತಿಸುವುದಕ್ಕೂ, ಹಿಂತಿರುಗಿ ಸುವುದಕ್ಕೂ ಸಮರ್ಥರಾಗಿ, ಗತಿಭೇದಗಳಲ್ಲಿಯೂ, ಚಾರಿಗಳಲ್ಲಿಯೂ ಪಂಚಧಾರೆಗಳಲ್ಲಿಯೂ, ಕೈಕಾಲ್ಮುದಿಗಳೊತ್ತಡದ ಸಂಜ್ಞೆಗಳಿಂದ ಪ್ರೋತ್ಸಾಹಿಸುವುದರಲ್ಲಿಯೂ ಚತುರೆಯರಾಗಿ, ಅಶ್ವಹೃದಯವನ್ನು ಚೆನ್ನಾಗಿ ಬಲ್ಲವರಾಗಿರುವ ಆ ಅಶ್ವಾರೂಢಾದೇವಿಯ ಸೈನ್ಯದ

**ಏವಂ ಪ್ರವೃತ್ತೇ ಸಮರೇ ಶಕ್ತೀನಾಂ ಚ ಸುರದ್ವಿಷಾಂ ।**
**ಅಪರಾಜಿತನಾಮಾನಂ ಹಯಮಾರುಹ್ಯ ವೇಗಿನಂ ॥**
**ಅಭ್ಯದ್ರವದ್ದುರಾಚಾರಮಶ್ವಾರೂಢಾ ಕುರುಂಡಕಂ ॥ ೯೪ ॥**
**ಪ್ರಚಲದ್ವೇಣಿಸುಭಗಾ ಚಲಚ್ಚಂದ್ರಕಲೋಜ್ಜ್ವಲಾ ।**
**ಸಂಧ್ಯಾನುರಕ್ತಶೀತಾಂಶುಮಂಡಲೀಸುಂದರಾನನಾ ॥ ೯೫ ॥**
**ಸ್ಮಯಮಾನೇವ ಸಮರೇ ಗೃಹೀತಮಣಿಕಾರ್ಮುಕಾ ।**
**ಅವಾಕಿರಚ್ಛರಾಸಾರೈಃ ಕುರುಂಡಂ ತುರಗಾಸನಾ ॥ ೯೬ ॥**
**ತುರಗಾರೂಢಯಾ ಕ್ಷಿಪ್ತಾಃ ಸಮಾಕ್ರಾಂತದಿಗಂತರಾಃ ।**
**ದಿಶೋ ದಶ ವ್ಯಾನಶಿರೇ ರುಕ್ಮಪುಂಖಾಃ ಶಿಲೀಮುಖಾಃ ॥ ೯೭ ॥**
**ದುರ್ಮದಸ್ಯಾಗ್ರಜಃ ಕ್ರುದ್ಧಃ ಕುರುಂಡಶ್ಚಂಡವಿಕ್ರಮಃ ।**
**ವಿಶಿಖೈಃ ಶಾರ್ಙ್ಗನಿಷ್ಮ್ಯೂತೈರಶ್ವಾರೂಢಾಮವಾಕಿರತ್ ॥ ೯೮ ॥**

---

ಶಕ್ತಿದೇವಿಯರೊಡನೆ ದುರ್ಮದರಾದ ಆ ದಾನವರು ಕುರುಂಡನಿಂದ ಪ್ರೋತ್ಸಾಹಿತರಾಗಿ ಯುದ್ಧಮಾಡತೊಡಗಿದರು.

೯೪. ಶಕ್ತಿದೇವಿಯರಿಗೂ, ದೇವಶತ್ರುಗಳಾದ ದಾನವರಿಗೂ ಈ ರೀತಿ ಯುದ್ಧವು ನಡೆಯುತ್ತಿರಲು ಅಶ್ವಾರೂಢಾದೇವಿಯು ಮಹಾ ವೇಗಶಾಲಿಯಾದ ಅಪರಾಜಿತವೆಂಬ ಅಶ್ವವನ್ನೇರಿ ದುರಾಚಾರನಾದ ಆ ಕುರುಂಡನನ್ನಟ್ಟಿಹೊರಟಳು.

೯೫-೯೬. ಅಲುಗಾಡುತ್ತಿರುವ ಜಡೆಯಿಂದ ಕಂಗೊಳಿಸಿ, ಶರತ್ಕಾಲದ ಚಂದ್ರಕಲೆಯಿಂದ ಬೆಳಗುತ್ತ, ಸಂಧ್ಯೆಯಲ್ಲಿ ಅನುರಕ್ತನಾದ ಚಂದ್ರನಂತೆ ಸುಂದರವಾದ ಮುಖದಿಂದ ಶೋಭಿಸುತ್ತಿದ್ದ ಅಶ್ವಾರೂಢಾದೇವಿಯು ಸಮರದಲ್ಲಿಯೂ ನಸುನಗುವಳೋ ಎಂಬಂತೆ ತೋರುತ್ತ ಮಣಿ ಕಾರ್ಮುಕವನ್ನು ತೆಗೆದುಕೊಂಡು ಕುರುಂಡನಮೇಲೆ ಸಂತತವಾಗಿ ಬಾಣದ ಮಳೆಯನ್ನು ಕರೆದಳು.

೯೭. ಹೀಗೆ ತುರಗಾರೂಢೆಯಾದ ಆ ದೇವಿಯು ಪ್ರಯೋಗಿಸಿದ ರುಕ್ಮಪುಂಖಗಳಾದ ಬಾಣಗಳು ದಿಗಂತಗಳನ್ನೂ ದಶದಿಶೆಗಳನ್ನೂ ತುಂಬಿದವು.

೯೮. ಆಗ ದುರ್ಮದನ ಅಣ್ಣನೂ, ಚಂಡವಿಕ್ರಮನೂ ಆದ ಕುರುಂಡನು ಕೋಪಗೊಂಡು ತನ್ನ ಶಾರ್ಙ್ಗಧನುಸ್ಸನ್ನು ಸಜ್ಜುಗೊಳಿಸಿ ಆ ದೇವಿಯ ಮೇಲೆ ಅಂಬುಗಳನ್ನೆಸೆದನು.

ಚಂಡೈಃ ಖುರಪುಟೈಃ ಸೈನ್ಯಂ ಖಂಡಯನ್ನತಿವೇಗತಃ ।
ಅಶ್ವಾರೂಢಾತುರಂಗೋಽಪಿ ಮರ್ದಯಾಮಾಸ ದಾನವಾನ್ ॥೯೯॥
ತಸ್ಯ ಹೇಷಾರವಾದ್ದೂರಮುತ್ಪಾತಾಂಬುದನಿಸ್ವನಾಃ ।
ಅಮೂರ್ಚ್ಛಯನ್ನನೇಕಾನಿ ತಸ್ಯಾನೀಕಾನಿ ವೈರಿಣಃ ॥ ೧೦೦ ॥
ಇತಸ್ತತಃ ಪ್ರಚಲಿತಾ ದೈತ್ಯಚಕ್ರೇ ಹಯಾಸನಾ ।
ನಿಜಂ ಪಾಶಾಯುಧಂ ದಿವ್ಯಂ ಮುಮೋಚ ಜ್ವಲಿತಾಕೃತಿ ॥ ೧೦೧ ॥
ತಸ್ಮಾತ್ಪಾಶಾತ್ಕೋಟಿಶೋಽನ್ಯೇ ಪಾಶಾ ಭುಜಗಭೀಷಣಾಃ ।
ಸಮಸ್ತಮಪಿ ತತ್ಸೈನ್ಯಂ ಬಧ್ವಾ ಬಧ್ವಾ ವ್ಯಮೂರ್ಚ್ಛಯನ್ ॥
ಅಥ ಸೈನಿಕಬಂಧೇನ ಕ್ರುದ್ಧಃ ಸ ಚ ಕುರುಂಡಕಃ ।
ಶರೇಣೈಕೇನ ಚಿಚ್ಛೇದ ತಸ್ಯಾ ಮಣಿಧನುರ್ಗುಣಂ ॥ ೧೦೩ ॥
ಛಿನ್ನಮೌರ್ವಿ ಧನುಸ್ತ್ಯಕ್ತ್ವಾ ಭೃಶಂ ಕ್ರುದ್ಧಾ ಹಯಾಸನಾ ।
ಅಂಕುಶಂ ಪಾತಯಾಮಾಸ ತಸ್ಯ ವಕ್ಷಸಿ ದುರ್ಮತೇಃ ॥ ೧೦೪ ॥

---

೯೯. ಅದೇ ಸಮಯದಲ್ಲಿಯೇ, ದೇವಿಯ ಅಪರಾಜಿತವೆಂಬ ಅಶ್ವಶ್ರೇಷ್ಠವೂ ಸಹ ಭಯಂಕರವಾದ ತನ್ನ ಗೊರಸುಗಳ ಹೊಡೆತಗಳಿಂದಲೇ ಅನೇಕ ದಾನವರನ್ನು ಮರ್ದಿಸಿ ಕೆಡವಿತು.

೧೦೦. ಪ್ರಳಯಕಾಲದ ಮೇಘಗಳ ಧ್ವನಿಯನ್ನು ಹೋಲಿದ ಆ ಕುದುರೆಯ ಹೇಷಾರವವನ್ನು ಬಹುದೂರದಿಂದಲೇ ಕೇಳಿ, ವೈರಿಯಾದ ಕುರುಂಡನ ಅನೇಕ ಸೈನ್ಯಗಳು ಅಲ್ಲಲ್ಲಿಯೇ ಮೂರ್ಛೆಹೋದುವು.

೧೦೧. ತರುವಾಯ ಅಶ್ವಾರೂಢಾದೇವಿಯು ಶತ್ರುಸೇನೆಗಳಲ್ಲಿ ಅಲ್ಲಿಂದಿಲ್ಲಿಗೆ ಮುನ್ನುಗ್ಗಿ ಹೋಗುತ್ತ, ಅವುಗಳಮೇಲೆ ದಿವ್ಯವೂ ಜಾಜ್ವಲ್ಯಮಾನವೂ ಆದ ಪಾಶಾಯುಧವನ್ನು ಪ್ರಯೋಗಿಸಿದಳು.

೧೦೨. ಆ ಒಂದು ಪಾಶಾಯುಧದಿಂದಲೇ ಸರ್ಪಗಳಂತೆ ಬಹು ಭಯಂಕರವಾದ ಅನೇಕಕೋಟಿ ಪಾಶಗಳು ಹುಟ್ಟಿ ದಾನವ ಸೇನೆಯೆಲ್ಲವನ್ನೂ ಬಿಗಿದುಬಿಗಿದು ಮೂರ್ಛೆಗೊಳಿಸಿದವು.

೧೦೩. ಹೀಗೆ ತನ್ನ ಸೇನೆಯವರೆಲ್ಲರೂ ಬಂಧನಕ್ಕೊಳಗಾಗಲು ಕುರುಂಡನು ಬಹುವಾಗಿ ಕೋಪಗೊಂಡು ಒಂದೇಬಾಣವನ್ನು ಪ್ರಯೋಗಿಸಿ ಆ ದೇವಿಯ ಮಣಿಕಾರ್ಮುಕದ ನಾರಿಯನ್ನು ಕತ್ತರಿಸಿದನು.

೧೦೪. ಅಶ್ವಾರೂಢಾದೇವಿಯು, ನಾರಿಯು ಮುರಿದ ಆ ಧನುಸ್ಸನ್ನು ಕೂಡಲೇ ತೊರೆದು, ಬಹಳವಾಗಿ ಕೋಪಗೊಂಡು ದುರಾತ್ಮನಾದ ಆ ರಾಕ್ಷಸನ ವಕ್ಷಸ್ಥಳಕ್ಕೆ ಅಂಕುಶವನ್ನೆಸೆದಳು.

**ತೇನಾಂಕುಶೇನ ಜ್ವಲತಾ ಪೀತಜೀವಿತಶೋಣಿತಃ ।**
**ಕುರುಂಡೋ ನ್ಯಪತದ್ಭೂಮೌ ವಜ್ರರುಗ್ಣ ಇವ ದ್ರುಮಃ ॥ ೧೦೫ ॥**
**ತದಂಕುಶವಿನಿಷ್ಕ್ರಾಂತಾಃ ಪೂತನಾಃ ಕಾಶ್ಚಿದುದ್ಭಟಾಃ ।**
**ತತ್ಸೈನ್ಯಂ ಪಾಶನಿಷ್ಪಂದಂ ಭಕ್ಷಯಿತ್ವಾ ಕ್ಷಯಂ ಗತಾಃ ॥ ೧೦೬ ॥**
**ಇತ್ಥಂ ಕುರುಂಡೇ ನಿಹತೇ ವಿಂಶತ್ಯಕ್ಷೌಹಿಣೀಪತೌ ।**
**ಹತಾವಶಿಷ್ಟಾಸ್ತದ್ಭೃತ್ಯಾಃ ಪ್ರಪಲಾಯಿಷತ ದ್ರುತಂ ॥ ೧೦೭ ॥**
**ಕುರುಂಡಂ ಸಾನುಜಂ ಯುದ್ಧೇ ಶಕ್ತಿಸೈನ್ಯನಿಪಾತಿತಂ ।**
**ಶ್ರುತ್ವಾ ಶೂನ್ಯಕನಾಥೋಽಪಿ ನಿಶಶ್ವಾಸ ಭುಜಂಗವತ್ ॥ ೧೦೮ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ ಸಂವಾದೇ ಶ್ರೀ ಲಲಿತೋಪಾಖ್ಯಾನೇ ಸಪ್ತದಶೋಽಧ್ಯಾಯಃ**

---

೧೦೫. ಜಾಜ್ವಲ್ಯಮಾನವಾದ ಆ ಅಂಕುಶವಾದರೋ ಅವನ ಜೀವರಕ್ತವನ್ನೇ ಪಾನಮಾಡಿತು. ಕುರುಂಡದಾನವನು ಈ ರೀತಿ ವಜ್ರಾಯುಧದಿಂದ ಕತ್ತರಿಸಿದ ವೃಕ್ಷದಂತೆ ನೆಲಕ್ಕುರುಳಿದನು.

೧೦೬. ಅದೇ ಸಮಯದಲ್ಲಿಯೇ, ಆ ಅಂಕುಶಾಯುಧದಿಂದ ಭಯಂಕರಾಕಾರವುಳ್ಳ ಕೆಲವುಮಂದಿ ಪೂತನೆಯರುದಿಸಿ ಬಂದು, ಪಾಶಗಳಿಗೆ ಸಿಕ್ಕಿ ಅತ್ತಿತ್ತ ಕದಲದೆ ಬಿದ್ದಿದ್ದ ಆ ದಾನವಸೇನೆಯೆಲ್ಲವನ್ನೂ ಭಕ್ಷಿಸಿ ಹೊರಟುಹೋದರು.

೧೦೭. ಹೀಗೆ ಇಪ್ಪತ್ತು ಅಕ್ಷೋಹಿಣೀ ಸೇನೆಗಳಿಗೆ ಒಡೆಯನಾದ ಕುರುಂಡನು ಹತನಾದಮೇಲೆ ಕಳೆದುಳಿದ ದೈತ್ಯ ಸೈನಿಕರು ಬಹು ಬೇಗನೆಯೇ ರಣರಂಗದಿಂದ ಓಡಿಹೋದರು.

೧೦೮. ಶೂನ್ಯನಗರದ ರಾಜನಾದ ಭಂಡಾಸುರನಾದರೋ, ಕುರುಂಡನೂ ಅವನ ತಮ್ಮನೂ ಇಬ್ಬರೂ ಸಮರದಲ್ಲಿ ಶಕ್ತಿಸೇನೆಗಳಿಂದ ಹತರಾದ ವಾರ್ತೆಯನ್ನು ಕೇಳಿ ಮಹಾಸರ್ಪದಂತೆ ನಿಟ್ಟುಸಿರುಬಿಟ್ಟನು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಾದಶೋಽಧ್ಯಾಯಃ

[ಕರಂಕಾದಿ ಪಂಚಸೇನಾಧಿಪತೀನಾಂ ವಧಃ— ಶತಾಕ್ಷೋಹಿಣೀಸೇನಾನಾಶಶ್ಚ]

ಶ್ರೀವಿದ್ಯಾದ್ಭುತಕಾಮರಾಜಮಹಿಷೀ ಶ್ರೀಶಕ್ತಿಸೈನ್ಯೇಽದ್ಭುತೇ
ಯುದ್ಧಾರ್ಥಂ ಚಲಿತೇ ಮಹಾಯುಧಯುತೇ ಭೀತಸ್ಸ ಭಂಡಾಸುರಃ ।
ಪ್ರಾಪ್ತೋಽಭೂದ್ಬಹುದೈತ್ಯಕೋಟಿಸಹಿತೋ ಲೋಕಾಶ್ಚ ಭೀತಿಂಗತಾಃ
ತ್ರಾತುಂ ತಾನ್ ದಯಮಾನಪೂರ್ಣಹೃದಯಾಂ ಶ್ರೀಮೀನನೇತ್ರಾಂ ಭಜೇ ॥

**ಹಯಗ್ರೀವಃ—**

**ಅಥಾಶ್ವಾರೂಢಯಾ ಧ್ವಸ್ತೇ ಕುರುಂಡೇ ಭಂಡದಾನವಃ ।**
**ಕುಟಿಲಾಕ್ಷಮಿದಂ ಪ್ರೋಚೇ ಪುನರೇವ ಯುಯುತ್ಸಯಾ ॥ ೧ ॥**
**ಸ್ವಪ್ನೇಽಪಿ ಯನ್ನ ಸಂಭಾವ್ಯಂ ಯನ್ನ ಶ್ರುತಮಿತಃ ಪುರಾ ।**
**ಯಚ್ಚ ನೋ ಶಂಕಿತಂ ಚಿತ್ತೇ ತದೇತತ್ಕಷ್ಟಮಾಗತಂ ॥ ೨ ॥**
**ಕುರುಂಡದುರ್ಮದೌ ಸತ್ತ್ವಶಾಲಿನೌ ಭ್ರಾತರೌ ಹತೌ ।**
**ದುಷ್ಟದಾಸ್ಯಾಃ ಪ್ರಭಾವೋಽಯಂ ಮಾಯಾವಿನ್ಯಾ ಮಹತ್ತರಃ ॥ ೩ ॥**
**ಇತಃ ಪರಂ ಕರಂಕಾದೀನ್ ಪಂಚ ಸೇನಾಧಿನಾಯಕಾನ್ ।**
**ಶತಮಕ್ಷೌಹಿಣೀನಾಂ ಚ ಪ್ರಸ್ಥಾಪಯ ರಣಾಂಗಣಂ ॥ ೪ ॥**

---

### ಕನ್ನಡದ ಅನುವಾದ

[ಕರಂಕನೇ ಮೊದಲಾದ ಪಂಚಸೇನಾಧಿಪತಿಗಳ ವಧೆ ಮತ್ತು ನೂರು ಅಕ್ಷೋಹಿಣೀ ಸೇನೆಗಳ ನಾಶ]

೧. ಹಯಗ್ರೀವನು ಹೇಳುತ್ತಾನೆ.—ಕುರುಂಡದಾನವನು ಅಶ್ವಾರೂಢಾದೇವಿಯಿಂದ ಧ್ವಂಸವಾದ ಬಳಿಕ, ಭಂಡಾಸುರನು ಪುನಃ ಯುದ್ಧಮಾಡಲಪೇಕ್ಷೆಯುಳ್ಳವನಾಗಿ ಕುಟಿಲಾಕ್ಷನನ್ನು ಕುರಿತು ಹೀಗೆ ಹೇಳಿದನು :

೨-೫. "ಎಲೈ ಕುಟಿಲಾಕ್ಷನೇ! ಸ್ವಪ್ನದಲ್ಲಿಯೂ ಯಾವುದನ್ನು ಊಹಿಸಲು ಅಸಾಧ್ಯವೋ, ನಾವಿದುವರೆಗೂ ಯಾವುದನ್ನು ಹಿಂದೆ ಯಾವಾಗಲೂ ಕೇಳಿಯೇ ಇರುವುದಿಲ್ಲವೋ ಯಾವುದನ್ನು ಮನಸ್ಸಿನಲ್ಲಿಯೂ ಯೋಚಿಸಿಯೇ ಇರಲಿಲ್ಲವೋ ಅಂತಹ ಕಷ್ಟವು ಇದೀಗ ಪ್ರಾಪ್ತವಾಗಿರುವುದು. ಅಣ್ಣತಮ್ಮಂದಿರಾದ ಕುರುಂಡದುರ್ಮದರೀ

**ತೇ ಯುದ್ಧದುರ್ಮದಾಃ ಶೂರಾಃ ಸಂಗ್ರಾಮೇಷು ತನುತ್ಯಜಃ ।**
**ಸರ್ವಥೈವ ವಿಜೇಷ್ಯಂತಿ ದುರ್ವಿದಗ್ಧವಿಲಾಸಿನೀಂ ॥ ೫ ॥**
**ಇತಿ ಭಂಡವಚಃ ಶ್ರುತ್ವಾ ಭೃಶಂ ಚ ತ್ವರಯಾನ್ವಿತಃ ।**
**ಕುಟಿಲಾಕ್ಷಃ ಕರಂಕಾದೀನಾಜುಹಾವ ಚಮೂಪತೀನ್ ॥ ೬ ॥**
**ತೇ ಸ್ವಾಮಿನಂ ನಮಸ್ಕೃತ್ಯ ಕುಟಿಲಾಕ್ಷೇಣ ದರ್ಶಿತಾಃ ।**
**ಅಗ್ನೌ ಪತಿಷ್ಣವ ಇವ ಕ್ರುಧಾಂಧಾ ನಿರ್ಯಯುಃ ಪುರಾತ್ ॥ ೭ ॥**
**ತೇಷಾಂ ಪ್ರಯಾಣನಿಸ್ಸಾಣರಣಿತಂ ಭೃಶದುಸ್ಸಹಂ ।**
**ಆಕರ್ಣ್ಯ ದಿಗ್ಗಜಾಸ್ತೂರ್ಣಂ ಶೀರ್ಣಕರ್ಣಾ ವಿಘೂರ್ಣಿರೇ ॥ ೮ ॥**
**ಶತಮಕ್ಷೋಹಿಣೀನಾಂ ಚ ಪ್ರಚಲತ್ಕೇತುಮಾಲಿಕಂ ।**
**ಉತ್ತರಂಗತುರಂಗಾಲಿ ಬಭೌ ಮತ್ತಮತಂಗಜಂ ॥ ೯ ॥**

---

ರ್ವರೂ ಹತರಾದರು! ಅವರೀರ್ವರೂ ಮಹಾಪರಾಕ್ರಮಶಾಲಿಗಳು. ಮಾಯಾವಿನಿಯಾದ ಆ ದುಷ್ಟದಾಸಿಯ ಇಂತಹ ಪ್ರಭಾವವು ಮಹತ್ತರವಾದುದೇ! ಆದುದಾಗಿಹೋಯಿತು!! ಇನ್ನು ಕರಂಕನೇ ಮೊದಲಾದ ನಮ್ಮ ಪಂಚಸೇನಾಧಿಪತಿಗಳೊಡನೆ ನೂರು ಅಕ್ಷೋಹಿಣೀ ಸೇನೆಗಳನ್ನು ರಣರಂಗಕ್ಕೆ ಕಳುಹಿಸು. ಅವರೆಲ್ಲರೂ ಯುದ್ಧದಲ್ಲಿ ಮದೋನ್ಮತ್ತರಾದವರು; ಶೂರರು; ರಣಾಂಗಣದಲ್ಲಿ ಪ್ರಾಣಗಳನ್ನಾದರೂ ಬಿಡುವರೇ ಹೊರತು ಸೋತು ಹಿಂತಿರುಗುವವರಲ್ಲ. ಅವರು, ಖಂಡಿತವಾಗಿಯೂ ಗರ್ವದಿಂದ ಕೊಬ್ಬಿ ಚೇಷ್ಟೆಮಾಡುತ್ತಿರುವ ಆ ಅಬಲೆಯನ್ನು ಗೆದ್ದು ಬರುತ್ತಾರೆ.''

೬. ಭಂಡಾಸುರನ ಈ ಮಾತುಗಳನ್ನು ಕೇಳಿದೊಡನೆಯೇ ಕುಟಿಲಾಕ್ಷನು ಬಹು ಜಾಗ್ರತೆಯಾಗಿ ಕರಂಕನೇ ಮೊದಲಾದ ಆ ಸೇನಾಪತಿಗಳನ್ನು ಕರೆಯಿಸಿದನು.

೭. ಒಡನೆಯೇ ಅವರು ಅಲ್ಲಿಗೈತಂದು ತಮ್ಮ ಸ್ವಾಮಿಯನ್ನು ನಮಸ್ಕರಿಸಿ, ತರುವಾಯ ಕೋಪದಿಂದ ಕುರುಡರಾಗಿ ಬೆಂಕಿಯಲ್ಲಿ ಬೀಳುವುದಕ್ಕೋ ಎಂಬಂತೆ ತೋರುತ್ತ ಪಟ್ಟಣದಿಂದ ಹೊರಹೊರಟರು.

೮. ಅವರ ಪ್ರಯಾಣಸಮಯದಲ್ಲಿ ಮೊಳಗಿಸಿದ ರಣಭೇರಿಗಳ ಸಹಿಸಲಸಾಧ್ಯವಾದ ಭಯಂಕರಧ್ವನಿಯನ್ನು ಕೇಳಿ ದಿಗ್ಗಜಗಳ ಕಿವಿಗಳೊಡೆದು ಅವೆಲ್ಲವೂ ಅಲ್ಲಾಡಿಹೋದವು.

೯. ತರಂಗತರಂಗವಾಗಿ ಮೇಲೆಮೇಲೆ ಬರುತ್ತಲೇ ಇರುವ

**ಹೇಷಮಾಣಹಯಾಕೀರ್ಣಂ ಕ್ರಂದದ್ಭಟಕುಲೋದ್ಭಟಂ ।**
**ಬೃಂಹ್ಯಮಾಣಗಜಂ ಗರ್ಜದ್ರಥಚಕ್ರಂ ಚಚಾಲ ತತ್ ॥ ೧೦ ॥**
**ಚಕ್ರನೇಮಿಹತಕ್ಷೋಣೀಕ್ಷೋದಕ್ಷಪಿತರೋಚಿಷಾ ।**
**ಬಭೂವೇ ತುಹಿನಾಸಾರಚ್ಛನ್ನೇನೇವ ವಿವಸ್ವತಾ ॥ ೧೧ ॥**
**ಧೂಲೀಮಯಮಿವಾಶೇಷಮಭವದ್ವಿಶ್ವಮಂಡಲಂ ।**
**ಕ್ವಚಿಚ್ಛಬ್ದಮಯಂ ಚೈವ ನಿಃಸಾಣಕಠಿನಸ್ವನೈಃ ॥ ೧೨ ॥**
**ಉದ್ಧೂತೈರ್ಧೂಲಿಕಾಜಾಲೈರಾಕ್ರಾಂತೇ ದೈತ್ಯಸೈನಿಕೇ ।**
**ಇಯತ್ತಯಾ ನ ಸೇನಾಯಾಃ ಸಂಖ್ಯಾಪಿ ಪರಿಭಾವಿತಾ ॥ ೧೩ ॥**
**ಧ್ವಜಾ ಬಹುವಿಧಾಕಾರಾ ಮೀನವ್ಯಾಲಾದಿಚಿತ್ರಿತಾಃ ।**
**ಪ್ರಚೇಲುರ್ಧೂಲಿಕಾಜಾಲೇ ಮತ್ಸ್ಯಾ ಇವ ಮಹೋದಧೌ ॥ ೧೪ ॥**

---

ತುರಂಗಸಮೂಹಗಳುಳ್ಳುದೂ, ಮದದಾನೆಗಳೊಡಗೂಡಿದುದೂ ಆದ ಆ ಸೇನಾನಾಯಕರ ನೂರು ಅಕ್ಷೋಹಿಣೀ ಸೇನೆಗಳೂ ಅಲುಗಾಡುತ್ತಿರುವ ಧ್ವಜಗಳ ಸಾಲುಗಳುಳ್ಳವಾಗಿ ಸಮರಾಂಗಣಕ್ಕೆ ಹೊರಟವು.

೧೦. ಹೇಷಾರವಗಳನ್ನು ಮಾಡುತ್ತಿರುವ ತುರಂಗಗಳುಳ್ಳುದಾಗಿಯೂ, ಸಿಂಹನಾದವನ್ನು ಮಾಡುತ್ತಿರುವ ಭಟರ ಸಮೂಹಗಳುಳ್ಳುದಾಗಿಯೂ, ಘೀಂಕಾರಧ್ವನಿಗಳನ್ನು ಮಾಡುತ್ತಿರುವ ಗಜಗಳನ್ನೊಳಗೊಂಡು ಗರ್ಜಿಸುತ್ತಿರುವ ರಥಚಕ್ರಧ್ವನಿಗಳಿಂದ ತುಂಬಿರುವುದಾಗಿಯೂ ಇರುವ ಆ ಸೇನೆಯು ಮುನ್ನುಗ್ಗಿ ಹೊರಟಿತು.

೧೧. ಚಕ್ರನೇಮಿಗಳ ಹೊಡೆತದಿಂದ ಧೂಳೆದ್ದು ಕೆಂಪಾದ ಭೂಮಿಯು ಮಂಜುಕವಿದ ಸೂರ್ಯನಂತೆ ಶೋಭಿಸುತ್ತಿದ್ದಿತು.

೧೨. ಭೂಮಂಡಲವೆಲ್ಲ ಧೂಳಿನಿಂದ ತುಂಬಿಹೋಯಿತು. ಕೆಲವೆಡೆಗಳಲ್ಲಿ ರಣಕಹಳೆಗಳ ಕಠಿನವಾದ ಶಬ್ದಗಳಿಂದ ಪ್ರಪಂಚವೇ ಶಬ್ದಮಯವಾಗಿ ತೋರುತ್ತಿದ್ದಿತು.

೧೩. ಹೀಗೆ, ದೈತ್ಯರ ಸೇನೆಗಳೆಲ್ಲವೂ ಧೂಳಿನಿಂದ ಕವಿದು ಕಾಣಿಸದುದಾಗಲು, ಆ ಸೇನೆಯ ಸಂಖ್ಯೆಯು ಇಷ್ಟೆಂಬುದೇ ಯಾರಿಗೂ ಗೊತ್ತಾಗದೇ ಹೋಯಿತು.

೧೪. ಮೀನು, ಹಾವು ಮೊದಲಾದ ಚಿತ್ರಗಳಿಂದ ಚಿತ್ರಿತವಾಗಿದ್ದ ಅನೇಕ ಬಗೆಯ ನಿಶಾನಿಗಳು ಧೂಳುಮುಚ್ಚಿದ್ದ ಆ ಸೇನೆಯಲ್ಲೆಲ್ಲ ಸಮುದ್ರದಲ್ಲಿ ಮೀನುಗಳೆಂತೋ ಅಂತು ಅಲುಗಾಡುತ್ತಿದ್ದವು.

ತಾನಾಪತತ ಆಲೋಕ್ಯ ಲಲಿತಾಸೈನಿಕಂ ಪ್ರತಿ ।
ವಿತ್ರೇಸುರಮರಾಃ ಸರ್ವೇ ಶಕ್ತೀನಾಂ ಭಂಗಶಂಕಯಾ ॥ ೧೫ ॥
ತೇ ಕರಂಕಮುಖಾಃ ಪಂಚ ಸೇನಾಪತಯ ಉದ್ಧತಾಃ । [ ೧೬ ॥
ಸರ್ಪಿಣೀಂ ನಾಮ ಸಮರೇ ಮಾಯಾಂ ಚಕ್ರುರ್ಮಹೀಯಸೀಂ ॥
ತೈಃ ಸಮುತ್ಪಾದಿತಾ ದುಷ್ಟಾ ಸರ್ಪಿಣೀ ರಣಶಾಂಬರೀ । [ ೧೭ ॥
ಧೂಮ್ರವರ್ಣಾ ಚ ಧೂಮ್ರೋಷ್ಠೀ ಧೂಮ್ರಲಂಬಪಯೋಧರಾ ॥
ಮಹೋದಧಿವದತ್ಯಂತಗಂಭೀರಕುಹರೋದರಾ ।
ಪುರಶ್ಚಚಾಲ ಶಕ್ತೀನಾಂ ತ್ರಾಸಯಂತೀ ಮನೋ ರಣೇ ॥ ೧೮ ॥
ಕದ್ರೂರಿವ ಪರಾ ದುಷ್ಟಾ ಬಹುಸರ್ಪವಿಭೂಷಣಾ ।
ಸರ್ಪಾಣಾಮುದ್ಭವಸ್ಥಾನಂ ಮಾಯಾಮಯಶರೀರಿಣಾಂ ॥ ೧೯ ॥
ಸೇನಾಪತೀನಾಂ ನಾಸೀರೇ ಕಂಪಯಂತೀ ಮಹೀತಲಂ ।
ವಲ್ಗಿತಂ ಬಹುಧಾ ಚಕ್ರೇ ಶಿವಾಘೋರವಿರಾವಿಣೀ ॥ ೨೦ ॥

---

೧೫. ದಾನವರ ಇಂತಹ ನೂರು ಅಕ್ಷೋಹಿಣೀ ಸೇನೆಗಳು ಶ್ರೀ ಲಲಿತಾದೇವಿಯ ಸೇನೆಯನ್ನೆದುರಿಸಬರುತ್ತಿರುವುದನ್ನು ಕಂಡು ದೇವತೆಗಳೆಲ್ಲರೂ, ಶಕ್ತಿದೇವಿಯರು ಸೋತುಹೋಗುವರೆಂಬ ಸಂದೇಹದಿಂದ ಬಹಳವಾಗಿ ಹೆದರಿದರು.

೧೬. ದುಷ್ಟರಾದ ಕರಂಕಾದಿ ಪಂಚಸೇನಾಪತಿಗಳಾದರೋ ಆ ಯುದ್ಧದಲ್ಲಿ ಸರ್ಪಿಣಿಯೆಂಬ ಹೆಸರಿನ ಮಹಾಮಾಯೆಯನ್ನು ಸೃಜಿಸಿದರು.

೧೭-೧೮. ಈ ರೀತಿ ಆ ದಾನವರು ಸೃಷ್ಟಿಮಾಡಿದ, ದುಷ್ಟೆಯೂ ರಣಶಾಂಬರಿಯೂ ಆದ ಸರ್ಪಿಣೀಮಾಯೆಯಾದರೋ ಬೂದುಬಣ್ಣದವಳಾಗಿದ್ದಳು; ಬೂದುಬಣ್ಣದ ತುಟಿಗಳೂ, ಕುಚಗಳೂ ಉಳ್ಳ ಅವಳ ಹೊಟ್ಟೆಯು ಮಹಾಸಮುದ್ರದಂತೆ ಬಹಳ ದೊಡ್ಡದಾಗಿಯೂ ಆಳವಾಗಿಯೂ ಇದ್ದಿತು. ಇಂತಹ ಭಯಂಕರಾಕಾರೆಯಾದ ಆ ಸರ್ಪಿಣಿಯು ಶಕ್ತಿದೇವಿಯರ ಮನಸ್ಸನ್ನು ಭೀತಿಗೊಳಿಸುತ್ತ ರಣರಂಗದಲ್ಲಿ ಮುಂದೆ ನಡೆದಳು.

೧೯-೨೦. ಬೇರೊಬ್ಬ ಕದ್ರೂದೇವಿಯೋ ಎಂಬಂತೆ ತೋರಿ, ಅನೇಕ ಸರ್ಪಗಳನ್ನೇ ಆಭರಣಗಳನ್ನಾಗಿ ಧರಿಸಿ, ಮಾಯಾಮಯವಾದ ಶರೀರಗಳುಳ್ಳ ಆ ಸರ್ಪಗಳಿಗೆ ಉದ್ಭವಸ್ಥಾನವೆನಿಸಿದ ಆ ಮಾಯೆಯು, ಆ ಪಂಚಸೇನಾಪತಿಗಳ ಮುಂದೆ ನಡೆಯುತ್ತ, ಭೂತಲವನ್ನೇ ನಡುಗಿಸಿ

**ತಯೈವ ಮಾಯಯಾ ಪೂರ್ವಂ ತೇ ಸುರೇಂದ್ರಾನ್ ವ್ಯಜೇಷ್ಯತ ।**
**ಕರಂಕಾದ್ಯಾ ದುರಾತ್ಮಾನಃ ಪಂಚ ಪಂಚತ್ವಕಾಮುಕಾಃ ॥ ೨೧ ॥**
**ಅಥ ಪ್ರವವೃಧೇ ಯುದ್ಧಂ ಶಕ್ತೀನಾಮಮರದ್ವಿಷಾಂ ।**
**ಅನ್ಯೋನ್ಯಂ ವೀರಭಾಷಾಭಿಃ ಪ್ರೋತ್ಸಾಹಿತರಣಕ್ರುಧಾ ॥ ೨೨ ॥**
**ಅತ್ಯಂತಸಂಕುಲತಯಾ ನ ವಿಜ್ಞಾತಪರಸ್ಪರಾಃ ।**
**ಶಕ್ತಯೋ ದಾನವಾಶ್ಚೈವ ಪ್ರಜಹ್ರುಃ ಶಸ್ತ್ರಪಾಣಯಃ ॥ ೨೩ ॥**
**ಅನ್ಯೋನ್ಯಶಸ್ತ್ರಸಂಘಟ್ಟಸಮುತ್ಥಿತಹುತಾಶನೇ ।**
**ಪವೃತ್ತವಿಶಿಖಸ್ತೋಮಪ್ರಚ್ಛನ್ನಹರಿದಂತರೇ ॥ ೨೪ ॥**
**ಬಹುರಕ್ತನದೀಪೂರ ಹ್ರಿಯಮಾಣಹತದ್ವಿಪೇ ।**
**ಮಾಂಸಕರ್ದಮನಿರ್ಮಗ್ನನಿಷ್ಪಂದರಥಮಂಡಲೇ ॥ ೨೫ ॥**
**ವಿಕೀರ್ಣಕೇಶಶೈವಾಲ ವಿಲಸದ್ರಕ್ತನಿರ್ಝರೇ ।**
**ಅತಿನಿಷ್ಠುರವೀರೋತ್ಥಸಿಂಹನಾದಭಯಂಕರೇ ॥ ೨೬ ॥**

---

ಭಯಂಕರವಾಗಿ ಅರಚುತ್ತ ಅನೇಕ ಬಗೆಯ ಗತಿಭೇದಗಳನ್ನು ತೋರುತ್ತಿದ್ದಳು.

೨೧. ಸಾಯಬಯಸಿದವರೂ, ದುರಾತ್ಮರೂ ಆದ ಕರಂಕನೇ ಮೊದಲಾದ ಆ ಪಂಚಸೇನಾಧಿಪತಿಗಳು, ಪೂರ್ವದಲ್ಲಿ ಈ ಸರ್ಪಿಣಿಯೆಂಬ ಶಾಂಬರೀ ಮಾಯೆಯ ಬೆಂಬಲದಿಂದಲೇ ದೇವತೆಗಳನ್ನು ಗೆದ್ದಿದ್ದರು.

೨೨. ತರುವಾಯ ಶಕ್ತಿದೇವಿಯರಿಗೂ, ಆ ದೇವಶತ್ರುಗಳಿಗೂ ಯುದ್ಧವು ಬೆಳೆಯಿತು. ಆಗ, ಉಭಯಪಕ್ಷದವರೂ ಪರಸ್ಪರವಾಗಿ ವೀರಾಲಾಪಗಳನ್ನು ಮಾಡುತ್ತ ಕೋಪದಿಂದ ಕೆರಳಿ ಕಾಳಗಮಾಡಲು ಉಪಕ್ರಮಿಸಿದರು.

೨೩. ಬಹಳ ಸಂಕುಲವಾದುದರಿಂದ ಆ ಯುದ್ಧದಲ್ಲಿ ಶಕ್ತಿದೇವಿಯರೂ ದಾನವರೂ ಒಬ್ಬರನ್ನೊಬ್ಬರು ಗುರುತಿಸದೆಯೇ ಶಸ್ತ್ರಗಳನ್ನು ಹಿಡಿದು ಹೊಡೆದಾಡಿದರು.

೨೪-೨೮. ಆ ಸಮಯದಲ್ಲಿ, ಆಯುಧಗಳಿಂದ ಪರಸ್ಪರವಾಗಿ ಹೊಡೆದಾಡುತ್ತಿದ್ದುದರಿಂದ ಎಲ್ಲೆಲ್ಲಿಯೂ ಅಗ್ನಿಜ್ವಾಲೆಗಳೇಳುತ್ತಿದ್ದವು. ಆ ಜ್ವಾಲೆಗಳ ಗುಂಪುಗಳಿಂದ ದಿಗಂತಗಳೆಲ್ಲವೂ ಮುಚ್ಚಿಹೋದವು. ರಕ್ತನದಿಗಳು ರಭಸವಾಗಿ ಹರಿದು, ಮಡಿದುರುಳಿದ ಆನೆಗಳೆಲ್ಲವೂ ಅವುಗಳಲ್ಲಿ ಕೊಚ್ಚಿಹೋಗುತ್ತಿದ್ದವು. ರಥಗಳ ಗುಂಪು ಮಾಂಸದ ಕೆಸರಿನಲ್ಲಿ ಹೂತು ಅತ್ತಿತ್ತ ಕದಲದಾದವು. ರಕ್ತಪ್ರವಾಹಗಳಲ್ಲಿ

ರಜೋಽಂಧಕಾರತುಮುಲೇ ರಾಕ್ಷಸೀತೃಪ್ತಿದಾಯಿನಿ ।
ನಿಸ್ತ್ರಿಂಶಕ ವಿನಿರ್ಭಿಣ್ಣದೈತ್ಯಕಂಠೋತ್ಥಿತಾಸೃಜಿ ॥ ೨೭ ॥
ಪ್ರವೃತ್ತೇ ಘೋರಸಂಗ್ರಾಮೇ ಶಕ್ತೀನಾಂ ಚ ಸುರದ್ವಿಷಾಂ ।
ಅಥ ಸ್ವಂ ಬಲಮಾದಾಯ ಪಂಚಭಿಃ ಪ್ರೇರಿತಾ ಸತೀ ।
ಸರ್ಪಿಣೀ ಬಹುಧಾ ಸರ್ಪಾನ್ ವಿಸಸರ್ಜ ಶರೀರತಃ ॥ ೨೮ ॥
ತಕ್ಷಕಕರ್ಕೋಟಕಸಮಾ ವಾಸುಕಿಪ್ರತಿಮತ್ವಿಷಃ ।
ನಾನಾವಿಧವಪುರ್ವರ್ಣಾ ನಾನಾದಂಷ್ಟ್ರಾಭಯಂಕರಾಃ ॥ ೨೯ ॥
ನಾನಾವಿಧವಿಷಜ್ವಾಲಾ ನಿರ್ದಗ್ಧಭುವನತ್ರಯಾಃ ।
ದಾರದಂ ವತ್ಸನಾಭಂ ಚ ಕಾಲಕೂಟಮಥಾಪರಂ ॥ ೩೦ ॥
ಸೌರಾಷ್ಟ್ರಜವಿಷಂ ಘೋರಂ ಬ್ರಹ್ಮಪುತ್ರಮಥಾಪರಂ ।
ಪ್ರದೀಪನಂ ಶೌಕ್ತಿಕೇಯಮನ್ಯಾನ್ಯಪಿ ವಿಷಾಣಿ ಚ ॥ ೩೧ ॥
ವ್ಯಾತ್ತೈಃ ಸ್ವಕೀಯವದನೈರ್ವಿಲೋಲರಸನಾದ್ವಯೈಃ ।
ವಿಕಿರಂತಃ ಶಕ್ತಿಸೈನ್ಯೇ ವಿಸಸ್ರುಃ ಸರ್ಪಿಣೀತನೋಃ ॥ ೩೨ ॥

---

ಕೂದಲುಗಳೆಂಬ ಪಾಚಿಗಳು ಹರಡಿ ಕಂಗೊಳಿಸುತ್ತಿದ್ದವು. ಎತ್ತೆತ್ತಲೂ ರಣಶೂರರು ಅತಿಕಠಿನವಾದ ಸಿಂಹನಾದಗಳನ್ನು ಮಾಡುತ್ತಿರಲು ಆ ಸಮರವು ಬಹು ಭಯಂಕರವಾಗಿ ಬೆಳೆಯಿತು. ಧೂಳೆದ್ದು ಎತ್ತೆತ್ತಲೂ ಕತ್ತಲು ಮುತ್ತಿರಲು, ರಾಕ್ಷಸಿಯರೆಲ್ಲರಿಗೂ ತೃಪ್ತಿಯನ್ನುಂಟುಮಾಡುವುದಾಗಿಯೂ, ಶಕ್ತಿದೇವಿಯರು ಖಡ್ಗಗಳಿಂದ ಕತ್ತರಿಸಿ ಕೆಡವಿದ ದೈತ್ಯರ ಕಂಠಪ್ರದೇಶದಿಂದ ಪ್ರವಹಿಸಿದ ರಕ್ತನದಿಗಳುಳ್ಳುದಾಗಿಯೂ ಇರುವ ಆ ಯುದ್ಧವು ಬಹು ಘೋರವಾಯಿತು. ಇಂತು ಶಕ್ತಿದೇವಿಯರಿಗೂ ದೈತ್ಯರಿಗೂ ಘೋರಸಂಗ್ರಾಮವು ನಡೆಯುತ್ತಿರಲು, ಕರಂಕನೇ ಮೊದಲಾದ ಪಂಚಸೇನಾಪತಿಗಳು ಸೇನೆಗಳೊಡಗೂಡಿದವರಾಗಿ ಸರ್ಪಿಣೀ ಮಾಯೆಯನ್ನು ಶಕ್ತಿದೇವಿಯರಮೇಲೆ ಪ್ರೇರಿಸಿದರು. ಕೂಡಲೇ ಆ ಮಾಯೆಯು ಪರಾಕ್ರಮವನ್ನು ಮೆರೆದು ತನ್ನ ಶರೀರದಿಂದ ಒಮ್ಮೆಯೇ ಅನೇಕ ಸರ್ಪಗಳನ್ನು ಸೃಜಿಸಿದಳು.

೨೯-೩೨. ಆ ಸರ್ಪಗಳಾದರೋ ತಕ್ಷಕ, ಕರ್ಕೋಟಕರಿಗೆ ಸಮಾನಗಳಾಗಿ, ವಾಸುಕಿಗೆ ಸಮಾನವಾದ ಕಾಂತಿಯಿಂದ ಬೆಳಗುತ್ತ, ಬಗೆ ಬಗೆಯ ಮೈಬಣ್ಣದವುಗಳೂ, ಅನೇಕ ಬಗೆಯ ಕೋರೆಹಲ್ಲುಗಳಿಂದ ಭಯಂಕರಗಳೂ ಆಗಿ ತೋರುತ್ತ, ಬಗೆ ಬಗೆಯ ವಿಷಜ್ವಾಲೆಗಳಿಂದ

**ಧೂಮ್ರವರ್ಣಾ ದ್ವಿವದನಾಃ ಸರ್ಪಾ ಅತಿಭಯಂಕರಾಃ ।**
**ಸರ್ಪಿಣ್ಯಾ ನಯನದ್ವಂದ್ವಾದುತ್ಥಿತಾಃ ಸರ್ಪಕೋಟಯಃ ॥ ೩೩ ॥**
**ಅಗ್ರೇ ಪುಚ್ಛೇ ಚ ವದನಂ ಧಾರಯಂತಃ ಫಣಾನ್ವಿತಂ ।**
**ಆಸ್ಯಾದಾನೀಲವಪುಷಃ ಸರ್ಪಿಣ್ಯಾಃ ಫಣಿನೋಽಭವನ್ ॥ ೩೪ ॥**
**ಅನ್ಯೇ ಶಬಲವರ್ಣಾಭಾಶ್ಚತುರ್ವಕ್ತ್ರಾಶ್ಚತೂರದಾಃ ।**
**ನಾಸಿಕಾವಿವರಾತ್ತಸ್ಯಾ ಉದ್ಗತಾ ಉಗ್ರರೋಚಿಷಃ ॥ ೩೫ ॥**
**ಪೀತವರ್ಣಾಸ್ತ್ರಿಫಣಕಾ ದಂಷ್ಟ್ರಾತಿವಿಕಟಾನನಾಃ ।**
**ಸರ್ಪಿಣ್ಯಾಃ ಕರ್ಣಕುಹರಾದುತ್ಥಿತಾಃ ಕ್ರೋಧದೀಪಿತಾಃ ॥ ೩೬ ॥**
**ಲಂಬಮಾನಮಹಾಚರ್ಮಾದತಿಸ್ಥೂಲಪಯೋಧರಾತ್ ।**
**ನಾಭಿಕುಂಡಾಚ್ಚ ಬಹವೋ ರಕ್ತವರ್ಣಾ ಭಯಾನಕಾಃ ॥ ೩೭ ॥**

---

ಮೂರು ಲೋಕಗಳನ್ನೂ ಸುಡುತ್ತಿದ್ದವು; ಅವು, ದಾರದ, ವತ್ಸನಾಭ, ಕಾಲಕೂಟ, ಸೌರಾಷ್ಟ್ರ, ಬ್ರಹ್ಮಪುತ್ರ, ಪ್ರದೀಪನ, ಶೌಕ್ತಿಕೇಯ ಮುಂತಾದ ಒಂಬತ್ತು ಬಗೆಯ ಭಯಂಕರವಾದ ವಿಷಗಳನ್ನು, ಸೀಳಾಗಿ ಜೋಲುತ್ತಿರುವ ನಾಲಗೆಗಳುಳ್ಳ ತಮ್ಮ ಬಾಯಿಗಳಿಂದುಗುಳುತ್ತಾ ಆ ಸರ್ಪಿಣಿಯ ಶರೀರದಿಂದ ಹೊರಟುಬಂದವು.

೩೩. ಬೂದುಬಣ್ಣದವುಗಳೂ, ಎರಡು ಮುಖಗಳುಳ್ಳವುಗಳೂ, ಮಹಾಭಯಂಕರಗಳೂ ಆದ ಕೋಟ್ಯಂತರ ಸರ್ಪಗಳು ಆ ಸರ್ಪಿಣಿಯ ಕಣ್ಣುಗಳಿಂದ ಹೊರಹೊರಟವು.

೩೪. ನೀಲವರ್ಣವಾದ ಮೈಯುಳ್ಳ ಆ ಸರ್ಪಿಣಿಯ ಮುಖದಿಂದ, ಮುಖದ ಕಡೆಯೂ, ಬಾಲದ ಕಡೆಯೂ ಹೆಡೆಗಳುಳ್ಳ ಅನೇಕ ಸರ್ಪಗಳು ಹುಟ್ಟಿದವು.

೩೫. ಅವಳ ಮೂಗಿನ ಹೊಳ್ಳೆಗಳಿಂದ ಚಿತ್ರವರ್ಣವುಳ್ಳವುಗಳಾಗಿ, ನಾಲ್ಕು ಹೆಡೆಗಳೂ, ನಾಲ್ಕು ಹಲ್ಲುಗಳೂ, ಭಯಂಕರ ಕಾಂತಿಯೂ ಉಳ್ಳ ಇನ್ನೂ ಇತರ ಸರ್ಪಗಳುದಿಸಿದವು.

೩೬. ಅವಳ ಕಿವಿಗಳಿಂದ ಬಿಳಿಯಬಣ್ಣವುಳ್ಳವಾಗಿ, ಮೂರು ಹೆಡೆಗಳಿಂದ ಕಂಗೊಳಿಸಿ, ಕೋರೆಹಲ್ಲುಗಳಿಂದ ವಿಕಾರವಾದ ಮುಖಗಳುಳ್ಳ ಭಯಂಕರವಾದ ಅನೇಕ ಸರ್ಪಗಳು ಹುಟ್ಟಿ ಕೆರಳಿ ಹೊರಟವು.

೩೭. ಆ ಮಾಯೆಯ ಜೋಲಾಡುತ್ತಿರುವ ಚರ್ಮದಿಂದಲೂ, ಬಹಳ ದಪ್ಪವಾದ ಅವಳ ಕುಚಗಳಿಂದಲೂ, ಹೊಕ್ಕಳಿನಿಂದಲೂ, ರಕ್ತ ವರ್ಣವುಳ್ಳವುಗಳೂ, ಭಯಂಕರಗಳೂ ಆದ ಅನೇಕ ಸರ್ಪಗಳುದಿಸಿದವು.

ಹಾಲಾಹಲಂ ವಮಂತಶ್ಚ ಪ್ರೋತ್ಥಿತಾಃ ಪನ್ನಗಾಧಿಪಾಃ ।
ವಿದಶಂತಃ ಶಕ್ತಿಸೇನಾಂ ದಹಂತೋ ವಿಷವಹ್ನಿಭಿಃ ॥ ೩೮ ॥
ಬಧ್ನಂತೋ ಭೋಗಪಾಶೈಶ್ಚ ನಿಘ್ನಂತಃ ಫಣಮಂಡಲೈಃ ।
ಅತ್ಯಂತಮಾಕುಲೀಚಕ್ರುರ್ಲಲಿತೇಶೀಚಮೂಮಮೂ ॥ ೩೯ ॥
ಖಂಡ್ಯಮಾನಾ ಅಪಿ ಮುಹುಃ ಶಕ್ತೀನಾಂ ಶಸ್ತ್ರಕೋಟಿಭಿಃ ।
ಉಪರ್ಯುಪರಿ ವರ್ಧಂತೇ ಸರ್ಪಾಃ ಸ್ಮ ಪ್ರವಿಸರ್ಪಿಣಃ ॥
ನಶ್ಯಂತಿ ಬಹವಃ ಸರ್ಪಾ ಜಾಯಂತೇ ಚಾಪರೇ ಪುನಃ ॥ ೪೦ ॥
ಏಕಸ್ಯ ನಾಶಸಮಯೇ ಬಹವೋಽನ್ಯೇ ಸಮುತ್ಥಿತಾಃ ।
ಮೂಲಭೂತಾ ಯತೋ ದುಷ್ಟಾ ಸರ್ಪಿಣೀ ನ ವಿನಶ್ಯತಿ ।
ಅತಸ್ತತ್ಕೃತಸರ್ಪಾಣಾಂ ನಾಶೇ ಸರ್ಪಾಂತರೋದ್ಗಮಃ ॥ ೪೧ ॥
ತತಶ್ಚ ಶಕ್ತಿಸೈನ್ಯಸ್ಯ ಶರೀರಾಣಿ ವಿಷಾನಲೈಃ ।
ದಹ್ಯಮಾನಾನಿ ದುಃಖೇನ ವಿಪ್ಲುಷ್ಟಾನ್ಯಭವನ್‌ರಣೇ ॥ ೪೨ ॥
ಕಿಂಕರ್ತವ್ಯವಿಮೂಢೇಷು ಶಕ್ತಿಚಕ್ರೇಷು ಭೋಗಿಭಿಃ ।
ಪರಾಕ್ರಮಂ ಬಹುವಿಧಂ ಚಕ್ರುಸ್ತೇ ಪಂಚ ದಾನವಾಃ ॥ ೪೩ ॥

---

೩೮-೩೯. ಆ ಸರ್ಪಗಳೆಲ್ಲವೂ ಹಾಲಾಹಲ ವಿಷವನ್ನು ಕಕ್ಕುತ್ತಿದ್ದವು. ಶಕ್ತಿಸೇನೆಗಳನ್ನು ಕಚ್ಚುತ್ತಲೂ, ವಿಷಾಗ್ನಿಯಿಂದ ಅವರನ್ನು ಸುಡುತ್ತಲೂ, ತಮ್ಮ ಶರೀರಗಳಿಂದ ಅವರನ್ನು ಬಿಗಿಯುತ್ತಲೂ, ಹೆಡೆಗಳಿಂದ ಹೊಡೆಯುತ್ತಲೂ, ಬಲಪ್ರದರ್ಶನಮಾಡಿ ಶ್ರೀಲಲಿತಾದೇವಿಯ ಆ ಸೇನೆಗಳೆಲ್ಲವನ್ನೂ ತಳಮಳಗೊಳಿಸಿದವು.

೪೦. ಶಕ್ತಿದೇವಿಯರು ಅಸಂಖ್ಯಾಕವಾದ ಶಸ್ತ್ರಗಳಿಂದ ಅವುಗಳನ್ನು ಎಷ್ಟುಬಾರಿ ತುಂಡರಿಸಿದರೂ, ಅವು ಮೇಲೆಮೇಲೆ ಹುಟ್ಟಿ ಹರಿದು ಬರುತ್ತಲೇ ಇದ್ದವು. ಸಮರ ಭೂಮಿಯಲ್ಲಿ ಎಷ್ಟೋ ಸರ್ಪಗಳು ನಾಶವಾದವು. ಹೀಗೆ ನಾಶವಾದರೂ, ಕೂಡಲೇ ಬೇರೆ ಬೇರೆ ಸರ್ಪಗಳು ಹುಟ್ಟುತ್ತಲೇ ಇದ್ದವು.

೪೧. ಒಂದು ಸರ್ಪವು ಅಳಿವ ಸಮಯದಲ್ಲಿಯೇ ಲೆಕ್ಕವಿಲ್ಲದಷ್ಟು ಬೇರೆ ಸರ್ಪಗಳು ಹುಟ್ಟಿ ಬರುತ್ತಿದ್ದವು. ಸರ್ಪಗಳಿಗೆಲ್ಲ ಮೂಲಭೂತಳಾದ ಸರ್ಪಿಣಿಯು ನಾಶವಾಗದಿದ್ದುದರಿಂದ, ಅವಳು ಸೃಜಿಸಿದ ಸರ್ಪಗಳು ನಾಶವಾಗುತ್ತಲೇ ಪುನಃ ಇತರ ಸರ್ಪಗಳು ಜನಿಸುತ್ತಲೇ ಇದ್ದವು.

೪೨-೪೩. ತರುವಾಯ ಆ ಸಮರಭೂಮಿಯಲ್ಲಿ ಶಕ್ತಿಸೇನೆಯೆಲ್ಲ

**ಕರಂಕೋ ಗರ್ದಭಶತೈರ್ಯುಕ್ತಂ ಸ್ಯಂದನಮಾಸ್ಥಿತಃ ।**
**ಉತ್ಪಾತವಾರಿದ ಇವ ಪ್ರವವರ್ಷ ಶರಾವಲೀಃ ॥ ೪೪ ॥**
**ಕಾಕವಾಸಿತನಾಮಾನ್ಯಃ ಸೇನಾನಾಥೋ ಗಜೇ ಸ್ಥಿತಃ ।**
**ಚಕ್ರೇಣ ತೀಕ್ಷ್ಣಧಾರೇಣ ಶಕ್ತಿಸೇನಾಮಮರ್ದಯತ್ ॥ ೪೫ ॥**
**ವಜ್ರದಂತಾಭಿದಶ್ಚಾನ್ಯೋ ಭಂಡದೈತ್ಯಚಮೂಪತಿಃ ।**
**ವಜ್ರಬಾಣಾಭಿಘಾತೇನ ಮಹೋಷ್ಟ್ರಸ್ಥೋ ರಣಂ ವ್ಯಧಾತ್ ॥ ೪೬ ॥**
**ಅಥ ವಜ್ರಮುಖಶ್ಚಾನ್ಯಶ್ಚಕ್ರೀವಂತಂ ಮಹತ್ತರಂ ।**
**ಆರುಹ್ಯ ಕುಂತಧಾರಾಭಿಃ ಶಕ್ತಿಚಕ್ರಮಮರ್ದಯತ್ ॥ ೪೭ ॥**
**ವಜ್ರಲೋಮಾಭಿಧಶ್ಚಾನ್ಯಶ್ಚಮೂನಾಥೋ ಮಹಾಬಲಃ ।**
**ಗೃಧ್ರಯುಗ್ಯರಥಾರೂಢಃ ಪ್ರಜಹಾರ ಶಿಲೀಮುಖೈಃ ॥ ೪೮ ॥**

---

ಈ ಸರ್ಪಗಳ ವಿಷದ ಕಿಚ್ಚಿನಿಂದ ಸುಟ್ಟು ದುಃಖಪಟ್ಟು ಕುಗ್ಗಿಹೋಯಿತು. ಶಕ್ತಿಸೇನೆಗಳೆಲ್ಲವೂ ಹೀಗೆ ಸರ್ಪಪೀಡಿತಗಳಾಗಿ ಏನು ಮಾಡುವುದಕ್ಕೂ ತೋಚದೆ ಸ್ತಬ್ಧವಾಗಿರಲು, ಕರಂಕನೇ ಮೊದಲಾದ ಆ ಪಂಚಸೇನಾಧಿಪತಿಗಳೂ ಅನೇಕ ಬಗೆಯ ಪರಾಕ್ರಮಗಳನ್ನು ಪ್ರದರ್ಶಿಸಿದರು.

೪೪. ಕರಂಕನು ನೂರು ಕತ್ತೆಗಳು ಹೂಡಿದ ರಥದಲ್ಲಿ ಕುಳಿತು ಪ್ರಳಯಕಾಲದ ಮುಗಿಲಿನೋಪಾದಿಯಲ್ಲಿ ಆ ಶಕ್ತಿಸೇನೆಗಳ ಮೇಲೆ ಅಂಬಿನ ಬಿರುಮಳೆಯನ್ನು ಸುರಿಸಿದನು.

೪೫. ಕಾಕವಾಸಿತನೆಂಬ ಮತ್ತೊಬ್ಬ ಸೇನಾನಿಯು ಗಜವನ್ನೇರಿ ಹೊರಟು, ಬಹು ಮೊನಚಾದ ಹಲ್ಲುಗಳುಳ್ಳ ಚಕ್ರಾಯುಧದಿಂದ ಆ ಶಕ್ತಿಸೇನೆಗಳನ್ನು ಸದೆಬಡಿದನು.

೪೬. ವಜ್ರದಂತನೆಂಬ ಮಗದೊಬ್ಬ ದೈತ್ಯಸೇನಾಪತಿಯು ದೊಡ್ಡದೊಂದು ಒಂಟೆಯನ್ನೇರಿ ಹೊರಟು ವಜ್ರಬಾಣಗಳ ಹೊಡತಗಳಿಂದ ಶಕ್ತಿಸೇನೆಗಳೊಡನೆ ಕಾಳಗಮಾಡಿದನು.

೪೭. ಇವನಾದ ತರುವಾಯ ಇನ್ನೊಬ್ಬನಾದ ವಜ್ರಮುಖನೆಂಬವನು ಮಹಾರಥವೊಂದನ್ನೇರಿ ಹೊರಟು, ಕುಂತಾಯುಧಗಳಿಂದ ಶಕ್ತಿದೇವಿಯರನ್ನು ಮರ್ದಿಸಿದನು.

೪೮. ಮಹಾಬಲಾಢ್ಯನಾದ ವಜ್ರಲೋಮನೆಂಬ ಮತ್ತೊಬ್ಬನು ಎರಡು ರಣಹದ್ದುಗಳು ಹೂಡಿದ ರಥವನ್ನೇರಿ ಹೊರಟು ಶಕ್ತಿಸೇನೆಗಳ ಮೇಲೆ ಬಾಣಪ್ರಯೋಗ ಮಾಡತೊಡಗಿದನು.

**ತೈಃ ಸೇನಾಪತಿರ್ದುಷ್ಟೈಃ ಪ್ರೋತ್ಸಾಹಿತಮಹಾಹವೇ ।**
**ಶತಮಕ್ಷೋಹಿಣೀನಾಂ ಚ ನಿಪಪಾತೈಕಹೇಲಯಾ ॥ ೪೯ ॥**
**ಸರ್ಪಿಣೀ ಚ ದುರಾಚಾರಾ ಬಹುಮಾಯಾಪರಿಗ್ರಹಾ ।**
**ಕ್ಷಣೇಕ್ಷಣೇ ಕೋಟಿಸಂಖ್ಯಾನ್ ವಿಸಸರ್ಜ ಫಣಾಧರಾನ್ ॥ ೫೦ ॥**
**ತಯಾ ವ್ಯಾಕುಲಿತಂ ಸೈನ್ಯಮವಲೋಕ್ಯ ರುಷಾಕುಲಾ ।**
**ನಕುಲೀ ಗರುಡಾರೂಢಾ ಸಂಪಪಾತ ರಣಾಜಿರೇ ॥ ೫೧ ॥**
**ಪ್ರತಪ್ತಕನಕಪ್ರಖ್ಯಾ ಲಲಿತಾತಾಲುಸಂಭವಾ ।**
**ಸಮಸ್ತವಾಙ್ಮಯಾಕಾರಾ ದಂತೈರ್ವಜ್ರಮಯೈರ್ಯುತಾ ।**
**ಸರ್ಪಿಣ್ಯಭಿಮುಖಂ ತತ್ರ ವಿಸಸರ್ಜ ನಿಜಂ ಬಲಂ ॥ ೫೨ ॥**
**ತಯಾಧಿಷ್ಠಿತತುಂಗಾಂಸಃ ಪಕ್ಷವಿಕ್ಷಿಪ್ತಭೂಧರಃ ।**
**ಗರುಡಃ ಪ್ರಾಚಲದ್ಯುದ್ಧೇ ಸುಮೇರುರಿವ ಜಂಗಮಃ ॥ ೫೩ ॥**

---

೪೯. ಇದೇ ಸಂದರ್ಭದಲ್ಲಿಯೇ ದುಷ್ಟರಾದ ಆ ಪಂಚಸೇನಾಧಿಪತಿಗಳಿಂದ ಪ್ರೇರಿತವಾದ ದೈತ್ಯರ ನೂರು ಅಕ್ಷೋಹಿಣೀ ಸೇನೆಗಳೂ ಕೂಡ, ಒಂದೇ ತಡವೆಯೇ ಶಕ್ತಿಸೇನೆಗಳ ಮೇಲೆ ಬಿದ್ದವು.

೫೦. ಮಹಾಮಾಯಾವಿನಿಯೂ, ದುರಾಚಾರಿಣಿಯೂ ಆದ ಆ ಸರ್ಪಿಣಿಯಾದರೋ ಕ್ಷಣಕ್ಷಣಕ್ಕೂ ಕೋಟಿಸಂಖ್ಯೆಯ ಸರ್ಪಗಳನ್ನು ಹೊರಬಿಡುತ್ತಲೇ ಇದ್ದಳು.

೫೧. ಹೀಗೆ ಆ ಸರ್ಪಿಣಿಯಿಂದ ಉಲ್ಲೋಲಕಲ್ಲೋಲವಾದ ತನ್ನ ಸೈನ್ಯವನ್ನು ನೋಡಿ, ಶ್ರೀ ನಕುಲೀಶ್ವರೀದೇವಿಯು ಬಹಳವಾಗಿ ರೋಷಗೊಂಡು ಗರುಡನನ್ನೇರಿ ರಣರಂಗಕ್ಕೆ ನುಗ್ಗಿ ಬಂದಳು.

೫೨. ಪುಟಪಾಕಶೋಧಿತವಾದ ಸುವರ್ಣಕಾಂತಿಯನ್ನೊಳಗೊಂಡು ವಿರಾಜಿಸುತ್ತಿರುವ ಆ ದೇವಿಯು ಶ್ರೀಲಲಿತಾಪರಮೇಶ್ವರಿಯ ತಾಲು ಪ್ರದೇಶದಿಂದುದಿಸಿದವಳು; ಸಮಸ್ತ ವಾಙ್ಮಯ ಸ್ವರೂಪಿಣಿಯಾದವಳು. ಆಕೆಯ ಹಲ್ಲುಗಳು ವಜ್ರಾಯುಧಕ್ಕೆ ಸಮನಾದುವು. ಆ ದೇವಿಯು ಕೂಡಲೇ ತನ್ನ ಸೇನೆಯನ್ನು ಸರ್ಪಿಣಿಯಿದ್ದೆಡೆಗಟ್ಟಿದಳು.

೫೩. ಆ ದೇವಿಯು ಏರಿ ಕುಳಿತಿದ್ದ, ಎತ್ತರವಾದ ಹೆಗಲುಳ್ಳವನೂ, ತನ್ನ ರೆಕ್ಕೆಗಳ ಬೀಸಿನಿಂದಲೇ ಬೆಟ್ಟಗಳನ್ನು ಮೇಲಕ್ಕೆಸೆಯುತ್ತಿರುವವನೂ ಆದ ಗರುಡನು ಚಲಿಸುವ ಸುಮೇರು ಪರ್ವತವೋ ಎಂಬಂತೆ ಕಂಗೊಳಿಸುತ್ತ ಹೊರಟನು.

ಸರ್ಪಿಣೀಮಾಯಯಾ ಜಾತಾನ್ಸರ್ಪಾನ್ದೃಷ್ಟ್ವಾ ಭಯಾನಕಾನ್ ।
ಕ್ರೋಧರಕ್ತೇಕ್ಷಣಂ ವ್ಯಾತ್ತಂ ನಕುಲೀ ವಿದಧೇ ಮುಖಂ ॥ ೫೪ ॥
ಅಥ ಶ್ರೀನಕುಲೀದೇವ್ಯಾ ದ್ವಾತ್ರಿಂಶದ್ದಂತಕೋಟಿತಃ ।
ದ್ವಾತ್ರಿಂಶತ್ಕೋಟಯೋ ಜಾತಾ ನಕುಲಾಃ ಕನಕಪ್ರಭಾಃ ॥ ೫೫ ॥
ಇತಸ್ತತಃ ಖಂಡಯಂತಃ ಸರ್ಪಿಣೀಸರ್ಪಮಂಡಲಂ ।
ನಿಜದಂಷ್ಟ್ರಾವಮರ್ಶೇನ ನಾಶಯಂತಶ್ಚ ತದ್ವಿಷಂ ॥ ೫೬ ॥
ವ್ಯಭ್ರಮನ್ಸಮರೇ ಘೋರೇ ಬಭ್ರವಃ ಸ್ವರ್ಣಬಭ್ರವಃ ।
ಉತ್ಕರ್ಣಾಃ ಕ್ರೋಧಸಂಪರ್ಕಾದ್ಧೃಷಿತಾಶೇಷಲೋಮಕಾಃ ॥ ೫೭ ॥
ಉತ್ಪುಚ್ಛಾ ನಕುಲಾ ವ್ಯಾತ್ತವದನಾ ವ್ಯದಶನ್ನಹೀನ್ ।
ಏಕೈಕಮಾಯಾಸರ್ಪಸ್ಯ ಬಭ್ರುರೇಕೈಕ ಉದ್ಗತಃ ॥ ೫೮ ॥
ತೀಕ್ಷ್ಣದಂತನಿಪಾತೇನ ಖಂಡಯಾಮಾಸ ವಿಗ್ರಹಂ ।
ಭೋಗಿಭೋಗಸ್ರುತೈ ರಕ್ತೈಃ ಸೃಕ್ವಣೀ ಶೋಣತಾಂ ಗತೇ ।
ವಹಂತೋ ನಕುಲಾಜಿಹ್ವಾಪಲ್ಲವೈಃ ಪುಪ್ಲುವುರ್ಮೃಧೇ ॥ ೫೯ ॥

---

೫೪. ಶ್ರೀ ನಕುಲೀಶ್ವರಿಯಾದರೋ ಸರ್ಪಿಣಿಯ ಮಾಯೆಯಿಂದ ಉದಿಸಿದ ಭಯಂಕರವಾದ ಸರ್ಪಗಳನ್ನು ಕಂಡು, ಕ್ರೋಧದಿಂದ ತನ್ನೆರಡು ಕಣ್ಣುಗಳೂ ಕೆಂಪಡರಲು, ಒಮ್ಮೆ ಬಾಯನ್ನು ಅಗಲವಾಗಿ ತೆರೆದಳು.

೫೫. ಆಗಲಾಕೆಯ ಮೂವತ್ತೆರಡು ಹಲ್ಲುಗಳಿಂದಲೂ ಮೂವತ್ತೆರಡುಕೋಟಿ ಸಂಖ್ಯೆಯ ಸ್ವರ್ಣಕಾಂತಿಯುಳ್ಳ ಮುಂಗುಸಿಗಳು ಜನಿಸಿದವು.

೫೬. ಕೂಡಲೇ, ಅವು ರಣರಂಗಕ್ಕೆ ನುಗ್ಗಿ ಹೊರಟು, ಅಲ್ಲಿದ್ದ ಸರ್ಪ ಸಮೂಹಗಳೆಲ್ಲವನ್ನೂ ತುಂಡುತುಂಡಾಗಿ ಕತ್ತರಿಸುತ್ತಲೂ, ಹಲ್ಲುಗಳನ್ನೊರಸುವುದರಿಂದಲೇ ಅವುಗಳ ವಿಷವನ್ನು ನಾಶಗೊಳಿಸುತ್ತಲೂ ಸಂಚರಿಸತೊಡಗಿದವು.

೫೭. ಸ್ವರ್ಣಕಾಂತಿಯುಳ್ಳವುಗಳಾದ ಆ ಚಿನ್ನದ ಮುಂಗುಸಿಗಳು, ಕಿವಿಗಳನ್ನು ಮೇಲೆತ್ತಿಕೊಂಡು, ರೋಮಗಳೆಲ್ಲವೂ ನೆಟ್ಟನೆ ನಿಂತಿರಲು, ಸಮರಭೂಮಿಯಲ್ಲಿ ಬಹು ರಭಸದಿಂದ ಸಂಚರಿಸಿದವು.

೫೮. ಆ ಸರ್ಪಿಣಿಯ ಒಂದೊಂದು ಮಾಯಾಸರ್ಪಕ್ಕೂ ಒಂದೊಂದು ನಕುಲವು ಹುಟ್ಟಿ ಹೊರಟಿತು. ಅವು ಬಾಲಗಳನ್ನು ಮೇಲೆತ್ತಿಕೊಂಡು ಬಾಯನ್ನು ಅಗಲವಾಗಿ ತೆರೆದು ಸರ್ಪಗಳನ್ನೆಲ್ಲ ಕಡಿದುಹಾಕಿದವು.

೫೯. ತೀಕ್ಷ್ಣವಾದ ಹಲ್ಲುಗಳಿಂದ ಸರ್ಪಗಳ ಶರೀರವನ್ನು ಕಡಿದು

**ನಕುಲೈರ್ದಶ್ಯಮಾನಾನಾಮತ್ಯಂತಚಟುಲಂ ವಪುಃ ।**
**ಮುಹುಃ ಕುಂಡಲಿತೈರ್ಭೋಗೈಃ ಪನ್ನಗಾನಾಂ ವ್ಯವೇಷ್ಟತ ॥ ೬೦ ॥**
**ನಕುಲಾವಲಿದಷ್ಟಾನಾಂ ನಷ್ಟಾಸೂನಾಂ ಫಣಾಭೃತಾಂ ।**
**ಫಣಾಶತಸಮುತ್ಕೀರ್ಣಾ ಮಣಯೋ ವ್ಯರುಚನ್ ರಣೇ ॥ ೬೧ ॥**
**ನಕುಲಾಘಾತಸಂಕೀರ್ಣಫಣಾಚಕ್ರವಿನಿರ್ಗತಾಃ ।**
**ಮಣಯಸ್ತನ್ಮಹಾಕೋಪವಹ್ನಿಜ್ವಾಲಾ ಇವಾಬಭುಃ ॥ ೬೨ ॥**
**ಏವಂ ಪ್ರಕಾರತೋ ಬಭ್ರುಮಂಡಲೈರವಖಂಡಿತೇ ।**
**ಮಾಯಾಮಯೇ ಸರ್ಪಜಾತೇ ಸರ್ಪಿಣೀ ಕೋಪಮಾದಧೇ ॥ ೬೩ ॥**
**ತಯಾ ಸಹ ಮಹದ್ಯುದ್ಧಂ ಕೃತ್ವಾ ಸಾ ನಕುಲೀಶ್ವರೀ ।**
**ಗಾರುಡಾಸ್ತ್ರಮತಿಕ್ರೂರಂ ಸಮಧತ್ತ ಶಿಲೀಮುಖೇ ॥ ೬೪ ॥**
**ತದ್ಗಾರುಡಾಸ್ತ್ರಮುದ್ದಾಮಜ್ವಾಲಾದೀಪಿತದಿಙ್ಮುಖಂ ।**
**ಪ್ರವಿಶ್ಯ ಸರ್ಪಿಣೀದೇಹಂ ಸರ್ಪಮಾಯಾಂ ವ್ಯಶೋಷಯತ್ ॥ ೬೫ ॥**

---

ಅವುಗಳ ಹೆಡೆರಕ್ತಗಳಿಂದ ತುಟಿಗಳೆಲ್ಲ ಕೆಂಪಾಗಲು, ಆ ನಕುಲಗಳೆಲ್ಲವೂ ನಾಲಗೆಗಳಿಂದ ಆ ತಮ್ಮ ತುಟಿಗಳನ್ನು ಸವರಿಕೊಳ್ಳುತ್ತ ರಣರಂಗದಲ್ಲೆಲ್ಲ ಹಾರತೊಡಗಿದವು.

೬೦. ಮುಂಗಸಿಗಳು ಕತ್ತರಿಸಿ ಕೆಡವುತ್ತಿರಲು, ಆ ಸರ್ಪಗಳ ಹಗುರವಾದ ಶರೀರಗಳು ಸುರುಳಿಸುತ್ತಿಕೊಂಡು ರಣಭೂಮಿಯಲ್ಲೆಲ್ಲ ವಿಲವಿಲನೆ ಪರಿದಾಡುತ್ತಿದ್ದವು.

೬೧. ಮುಂಗಸಿಗಳು ಕಡಿದು ಸತ್ತುಬಿದ್ದ ಆ ಸರ್ಪಗಳ ಹೆಡೆಗಳಲ್ಲಿ ಹುದುಗಿದ್ದ ರತ್ನಗಳು ಹೊರಚಿಮ್ಮಿ ರಣಭೂಮಿಯಲ್ಲೆಲ್ಲ ಬೆಳಗುತ್ತಿದ್ದವು.

೬೨. ಆ ನಕುಲಗಳ ಹೊಡೆತಗಳಿಂದ ಸರ್ಪಗಳ ಹೆಡೆಗಳು ಸೀಳಿ, ಅವುಗಳಿಂದ ಹೊರಹೊರಟ ರತ್ನಗಳು, ಅವುಗಳ ಕೋಪಜ್ವಾಲೆಗಳೋ ಎಂಬಂತೆ ಶೋಭಿಸುತ್ತಿದ್ದವು.

೬೩. ಈ ಪ್ರಕಾರ, ರಣಾಂಗಣದಲ್ಲಿ ತಾನು ನಿರ್ಮಿಸಿದ ಮಾಯಾಮಯವಾದ ಸರ್ಪಗಳೆಲ್ಲವೂ ನಕುಲಗಳಿಂದ ನಾಶವಾಗಲು ಸರ್ಪಿಣಿಯು ಕೋಪದಿಂದ ಕೆರಳಿಹೋದಳು.

೬೪. ಅದೇ ಸಮಯದಲ್ಲಿ ಶ್ರೀ ನಕುಲೀಶ್ವರೀದೇವಿಯೂ ಸಹ ಆ ಸರ್ಪಿಣಿಯೊಡನೆ ಭಯಂಕರಯುದ್ಧವನ್ನು ಮಾಡಿ, ಮಹಾಕ್ರೂರವಾದ ಗಾರುಡಾಸ್ತ್ರವನ್ನು ಬಿಲ್ಲಿನಲ್ಲಿ ಸಂಧಾನಮಾಡಿದಳು.

೬೫. ಆ ಗಾರುಡಾಸ್ತ್ರವು ತನ್ನ ಜ್ವಾಲೆಗಳಿಂದ ದಿಗಂತಗಳೆಲ್ಲವನ್ನೂ

**ಮಾಯಾಶಕ್ತಿವಿನಾಶೇನ ಸರ್ಪಿಣೀ ವಿಲಯಂ ಗತಾ ।**
**ಕ್ರೋಧಂ ಚ ತದ್ವಿನಾಶೇನ ಪ್ರಾಪ್ತಾಃ ಪಂಚ ಚಮೂವರಾಃ ॥೬೬॥**
**ಯದ್ಬಲೇನ ಸುರಾನ್‌ಸರ್ವಾನ್‌ಸೇನಾನ್ಯಸ್ತೇಽವಮೇನಿರೇ ।**
**ಸಾ ಸರ್ಪಿಣೀ ಕಥಾಶೇಷಂ ನೀತಾ ನಕುಲಿನೀರ್ಯತಃ ॥ ೬೭ ॥**
**ಅಥ ಸ್ವಬಲನಾಶೇನ ಭೃಶಂ ಕ್ರುದ್ಧಾಶ್ಚಮೂವರಾಃ ।**
**ಏಕೋದ್ಯೋಗೇನ ಶಸ್ತ್ರೌಘೈರ್ನಕುಲೀಂ ತಾಮವಾಕಿರನ್‌॥ ೬೮ ॥**
**ಏಕೈವ ಸಾ ತಾರ್ಕ್ಷ್ಯರಥಾ ಪಂಚಭಿಃ ಪೃತನೇಶ್ವರೈಃ ।**
**ಲಘುಹಸ್ತತಯಾ ಯುದ್ಧಂ ಚಕಾರ ಶರವರ್ಷಿಣೀ ॥ ೬೯ ॥**
**ಪಟ್ಟಿಸೈರ್ಮುಸಲೈಶ್ಚೈವ ಭಿಂಡಿಪಾಲೈಃ ಸಹಸ್ರಶಃ ।**
**ನಕುಲಾನ್ ಖಂಡಯಾಮಾಸುರಿತಶ್ಚೇತಶ್ಚ ದಾನವಾಃ ॥ ೭೦ ॥**
**ಜ್ವಲದಗ್ನಿಪ್ರಕಾಶಾಸ್ತೇ ನಕುಲಾ ವೈರಿಣಾಂ ಬಲಂ ।**
**ವಜ್ರಸಾರಮಯೈರ್ದಂತೈರ್ವ್ಯದಶನ್ ಮರ್ಮಸೀಮಸು ॥ ೭೧ ॥**

---

ಬೆಳಗಿಸುತ್ತ ಆ ಸರ್ಪಿಣಿಯ ಮೈಯನ್ನು ಹೊಕ್ಕು ಅವಳ ಸರ್ಪಮಾಯೆಯನ್ನು ಬತ್ತಿಸಿಬಿಟ್ಟಿತು.

೬೬. ಮಾಯಾಶಕ್ತಿಯು ನಾಶವಾದೊಡನೆಯೇ ಸರ್ಪಿಣಿಯೂ ಅಳಿದುಹೋದಳು. ಹೀಗೆ ಮಾಯಾಸರ್ಪಿಣಿಯು ನಾಶವಾದುದನ್ನು ಕಂಡು ಭಂಡಾಸುರನ ಪಂಚಸೇನಾಪತಿಗಳೂ ಕೋಪದಿಂದ ಬಹಳವಾಗಿ ಕೆರಳಿದರು.

೬೭. ಯಾವಳ ಬಲದಿಂದ ಅವರು, ಪೂರ್ವದಲ್ಲಿ ದೇವತೆಗಳೆಲ್ಲರನ್ನೂ ಅವಮಾನಗೊಳಿಸಿದ್ದರೋ ಆ ಸರ್ಪಿಣೀಮಾಯೆಯ ಕಥೆಯನ್ನು ಶ್ರೀನಕುಲೀಶ್ವರೀದೇವಿಯು ಮುಗಿಸಿಬಿಟ್ಟಳು.

೬೮. ಇದರಿಂದ, ತಮ್ಮ ಬಲವು ಕುಗ್ಗಿಹೋಗಲು ಬಹಳವಾಗಿ ಕೋಪಗೊಂಡು ಆ ಸೇನಾಪತಿಗಳೈವರೂ ಕೂಡಲೇ ಒಂದೇತಡವೆ ಆಕೆಯ ಮೇಲೆ ಶಸ್ತ್ರಗಳನ್ನು ಸುರಿಸಿದರು.

೬೯. ಸೇನಾನಾಯಕಿಯಾದ ಆ ದೇವಿಯಾದರೋ ತಾನೊಬ್ಬಳೇ ಗರುಡನನ್ನೇರಿ ಕುಳಿತು ಕರಲಾಘವವನ್ನು ತೋರಿ ಮೆರೆಯುತ್ತ ಆ ಐವರಮೇಲೆಯೂ ಬಾಣದ ಮಳೆಗರೆದಳು.

೭೦. ಆಗ ದಾನವರು ಪಟ್ಟಿಸ, ಮುಸಲ, ಭಿಂಡಿಪಾಲಗಳಿಂದ ನಕುಲಗಳೆಲ್ಲವನ್ನೂ ಅಲ್ಲಲ್ಲಿಯೇ ಕತ್ತರಿಸಲು ಮೊದಲುಮಾಡಿದರು.

೭೧. ಪ್ರಜ್ವಲಿಸುತ್ತಿರುವ ಅಗ್ನಿಜ್ವಾಲೆಗಳಿಗೆ ಸಮಾನವಾದ ಆ

**ತತೋ ಹಾಹಾಕೃತಂ ಘೋರಂ ಕುರ್ವಾಣಾ ದೈತ್ಯಕಿಂಕರಾಃ ।**
**ಉದಗ್ರದಂಶನ ಕುಲ್ಯೈರ್ನಕುಲೈರಾಕುಲೀಕೃತಾಃ ॥ ೭೨ ॥**
**ಉತ್ಪ್ಲುತ್ಯ ಗಗನಾತ್ಕೇಚಿದ್ಘೋರಸೀತ್ಕಾರಕಾರಿಣಃ ।**
**ದಶಂತಿ ಸ್ಮ ದ್ವಿಷಾಂ ಸೈನ್ಯಂ ನಕುಲಾಃ ಪ್ರಜ್ವಲತ್ಕ್ರುಧಾ ॥ ೭೩ ॥**
**ಕರ್ಣೇಷು ದಷ್ಟಾ ನಾಸಾಯಾಮನ್ಯೇ ದಷ್ಟಾಃ ಕ್ಷಯಂ ಗತಾಃ ।**
**ಅಪರೇ ವಿಲಯಂ ಪ್ರಾಪ್ತಾ ದಷ್ಟಾ ಮರ್ಮಸು ಬಭ್ರುಭಿಃ ॥ ೭೪ ॥**
**ಪತಂತಿ ಕೇಚಿನ್ನಕುಲಾ ದಾನವಾನಾಂ ಶಿರಸ್ತಟೇ ।**
**ಪೃಷ್ಠತೋ ನ್ಯದಶನ್ಕೇಚಿದಾಗತ್ಯ ಕೃತಸೀತ್ಕೃತಾಃ ॥ ೭೫ ॥**
**ವಿಕಲಾ ವಿದ್ಧವರ್ಮಾಣೋ ಭಯವಿತ್ರಸ್ತಶಸ್ತ್ರಕಾಃ ।**
**ನಕುಲೈರಭಿಭೂತಾಸ್ತೇ ನ್ಯಪತನ್ನುರದ್ರುಹಃ ॥ ೭೬ ॥**
**ಕೇಚಿತ್ಪ್ರವಿಶ್ಯ ನಕುಲಾ ವ್ಯಾತ್ತಾನ್ಯಾಸ್ಯಾನಿ ವೈರಿಣಾಂ ।**
**ಭೋಗಿಭೋಗಾನಿವಾಕೃಷ್ಯ ಪ್ರಾದಶನ್ ರಸನಾಲತಾಃ ॥ ೭೭ ॥**

---

ನಕುಲಗಳೂ ಸಹ ವಜ್ರಾಯುಧದಂತೆ ಬಹು ಮೊನಚಾದ ತಮ್ಮ ಹಲ್ಲುಗಳಿಂದ ಆ ದಾನವರ ಮರ್ಮಸ್ಥಾನಗಳನ್ನು ಕಡಿದುಹಾಕಿದವು.

೭೨. ದೈತ್ಯಭಟರೆಲ್ಲರೂ ತಮ್ಮ ಮೇಲೆರಗಿ ಕಚ್ಚುತ್ತಿರುವ ಆ ನಕುಲಗಳಿಂದ ಪಾಡುಪಟ್ಟು ತಳಮಳಕ್ಕೆ ತುತ್ತಾಗಿ ಘೋರವಾದ ಹಾಹಾಕಾರಗಳನ್ನು ಮಾಡತೊಡಗಿದರು.

೭೩. ಕೆಲವು ಮುಂಗಸಿಗಳಂತೂ ಗಗನಕ್ಕೆ ಹಾರಿ ಸೀತ್ಕಾರಧ್ವನಿಗಳನ್ನು ಮಾಡುತ್ತ ಕೋಪದಿಂದ ಪ್ರಜ್ವಲಿಸಿ ದಾನವರಮೇಲೆ ಬಿದ್ದು ಅವರನ್ನು ಕಡಿದುಹಾಕುತ್ತಿದ್ದವು.

೭೪. ಕತ್ತರಿಸಿದ ಕಿವಿಗಳೂ, ಮೂಗುಗಳೂ ಉಳ್ಳ ಕೆಲದೈತ್ಯರು ಮಡಿದುಹೋದರು. ಕೆಲವರು ಮರ್ಮಸ್ಥಾನಗಳೆಲ್ಲ ಕತ್ತರಿಸಿಹೋಗಲು ಕೂಡಲೇ ಮಡಿದುರುಳಿದರು.

೭೫. ಕೆಲವು ಮುಂಗಸಿಗಳು ಆ ದೈತ್ಯರ ತಲೆಗಳಮೇಲೆ ಹಾರಿ ಬೀಳುತ್ತಿದ್ದವು. ಕೆಲವಂತು ಸಿರ್ರೆಂದು ರೇಗಿ ಹಾರಿಬಂದು ಆ ದೈತ್ಯರ ಪೃಷ್ಠಭಾಗಗಳನ್ನೇ ಕಡಿದುಹಾಕಿದವು.

೭೬. ಹೀಗೆ ಆ ನಕುಲಗಳ ಕೋಟಲೆಯಿಂದ ತತ್ತಳಿಸಿಹೋಗಿ ಕವಚಗಳೊಡೆದು, ಭಯದಿಂದ ಜಾರಿಹೋದ ಶಸ್ತ್ರಗಳುಳ್ಳ ಆ ದಾನವರೆಲ್ಲರೂ ನೆಲಕ್ಕುರುಳಿದರು.

೭೭-೭೮. ಆ ಸಮರದಲ್ಲಿ ಕೆಲವು ಮುಂಗಸಿಗಳಂತು, ದಾನವರ

**ಅನ್ಯೇ ಕರ್ಣೇಷು ನಕುಲಾಃ ಪ್ರಾವಿಶನ್ ದೇವವೈರಿಣಾಂ।**
**ಸೂಕ್ಷ್ಮರೂಪಾ ವಿಶಂತ್ಯನ್ಯೇ ನಾಸಾರಂಧ್ರಾಣಿ ಬಭ್ರವಃ ॥ ೭೮ ॥**
**ಇತಿ ತೈರಭಿಭೂತಾನಿ ನಕುಲೈರವಲೋಕಯನ್ ।**
**ನಿಜಸೈನ್ಯಾನಿ ದೀನಾನಿ ಕರಂಕಃ ಕೋಪಮಾಸ್ಥಿತಃ ॥ ೭೯ ॥**
**ಅನ್ಯೇಽಪಿ ಚ ಚಮೂನಾಥಾ ಲಘುಹಸ್ತಾ ಮಹಾಬಲಾಃ ।**
**ಪ್ರತಿಬಭ್ರು ಶರಸ್ತೋಮಾನವರ್ಷನ್ ವಾರಿದಾ ಇವ ॥ ೮೦ ॥**
**ದೈತ್ಯಸೈನ್ಯಪತಿಪ್ರೌಢಕೋದಂಡೋತ್ಥಾಃ ಶಿಲೀಮುಖಾಃ ।**
**ಬಭ್ರೂಣಾಂ ದಂತಕೋಟೀಷು ಕಠೋರಂ ಘಟ್ಟನಂ ವ್ಯಧುಃ ॥೮೧॥**
**ಚಮೂಪತಿಶರವ್ಯೂಹೈರಾಹತೇಭ್ಯಃ ಪರಃ ಶತಂ ।**
**ಬಭ್ರೂಣಾಂ ವಜ್ರದಂತೇಭ್ಯೋ ನಿಶ್ಚಕ್ರಾಮ ಹುತಾಶನಃ ॥ ೮೨ ॥**
**ಪಂಚಾಪಿ ತೇ ಚಮೂನಾಥಾ ವಿಸೃಷ್ಟೈರೇಕಹೇಲಯಾ ।**
**ಸ್ಫುರತ್ಫಲೈಃ ಶರಕುಲೈರ್ಬಭ್ರುಸೇನಾಮಮರ್ದಯನ್ ॥ ೮೩ ॥**

---

ಅಗಲವಾಗಿ ತೆರೆದ ಬಾಯಿಗಳಲ್ಲಿ ನುಗ್ಗಿ ಹಾವುಗಳ ವೈಯನ್ನೋಪಾದಿಯಲ್ಲಿ ಅವರ ನಾಲಗೆಗಳೆಂಬ ಬಳ್ಳಿಗನ್ನೆಳೆದೆಳೆದು ಕಡಿದುಹಾಕಿದವು. ಇನ್ನು ಕೆಲವು, ಶತ್ರುಗಳ ಕಿವಿಗಳನ್ನು ಹೊಕ್ಕವು; ಮತ್ತೆ ಕೆಲವು ಸಣ್ಣಪುಟ್ಟರೂಪಗಳನ್ನು ತಾಳಿ ಆ ದಾನವರ ಮೂಗಿನಹೊಳ್ಳೆಗಳಲ್ಲಿ ನುಗ್ಗಿ ಹೊರಟವು.

೭೯. ಹೀಗೆ, ಆ ಮುಂಗಸಿಗಳ ಕಾಟವನ್ನು ತಡೆಯಲಾರದೆ ಕಂಗೆಟ್ಟು ಹೋದ ತನ್ನ ಸೇನೆಗಳೆಲ್ಲವನ್ನೂ ನೋಡಿ ಸೇನಾಧಿಪತಿಯಾದ ಕರಂಕನು ಬಹಳವಾಗಿ ಕನಲಿದನು.

೮೦. ಮಹಾಪರಾಕ್ರಮವಂತರೂ, ಮಹಾಹಸ್ತಲಾಘವವುಳ್ಳವರೂ ಆದ ಇತರ ಸೇನಾಪತಿಗಳೂ ಆ ಮುಂಗಸಿಗಳ ಮೇಲೆ ಬಾಣದ ಮಳೆಯನ್ನು ಸುರಿಸಿದರು.

೮೧. ದೈತ್ಯಸೇನಾಪತಿಗಳ ಪ್ರಚಂಡವಾದ ಕೋದಂಡದಿಂದ ಹೊರಟ ಆ ಬಾಣಗಳಾದರೋ ನಕುಲಗಳ ದಂತಕೋಟಿಗಳಲ್ಲಿ ಬಿದ್ದು ಭಯಂಕರವಾದ ಘಟ್ಟನಧ್ವನಿಯನ್ನು ಮಾಡುತ್ತಿದ್ದವು.

೮೨. ಆ ಪಂಚಸೇನಾನಾಯಕರ ಸಾವಿರಾರು ಬಾಣಗಳ ಹೊಡೆತಗಳಿಂದ ಮುಂಗಸಿಗಳ ಹಲ್ಲುಗಳ ಮೂಲಕ ಬೆಂಕಿಯ ಕಿಡಿಗಳು ಹಾರುತ್ತಿದ್ದವು.

೮೩. ಐವರು ಸೇನಾನಾಯಕರೂ, ಏಕಕಾಲದಲ್ಲಿಯೇ ಪ್ರಜ್ವಲಿ

**ಇತಸ್ತತಶ್ಚ ಮೂನಾಥಕ್ಷಿಪ್ತೈಶ್ಚ ಶರಕೋಟಿಭಿಃ ।**
**ವಿಶೀರ್ಣಗಾತ್ರಾ ನಕುಲಾ ನಕುಲೀಂ ಪರ್ಯವಾರಯನ್ ॥ ೮೪ ॥**
**ಅಥ ಸಾ ನಕುಲೀ ವಾಣೀ ವಾಙ್ಮಯಸ್ಯೈಕನಾಯಿಕಾ ।**
**ನಕುಲಾನಾಂ ಪರಾವೃತ್ತ್ಯಾ ಮಹಾಂತಂ ಕೋಪಮಾಸ್ಥಿತಾ ॥ ೮೫ ॥**
**ಅಕ್ಷೀಣನಕುಲಂ ನಾಮ ಮಹಾಸ್ತ್ರಂ ಸರ್ವತೋ ಮುಖಂ ।**
**ವಹ್ನಿಜ್ವಾಲಾಪರೀತಾಗ್ರಂ ಸಂದಧೇ ಶಾರ್ಙ್ಗಧನ್ವನಿ ॥ ೮೬ ॥**
**ತದಸ್ತ್ರತೋ ವಿನಿಷ್ಕ್ರಾಂತಾ ನಕುಲಾಃ ಕೋಟಿಸಂಖ್ಯಕಾಃ ।**
**ವಜ್ರಾಂಗಾ ವಜ್ರರೋಮಾಣೋ ವಜ್ರದಂತಾ ಮಹಾಜವಾಃ ॥ ೮೭ ॥**
**ವಜ್ರಸಾರಾಶ್ಚ ನಿಬಿಡಾ ವಜ್ರವಾಲಭಯಂಕರಾಃ ।**
**ವಜ್ರಾಕಾರನಖೈಸ್ತೂರ್ಣಂ ದಾರಯಂತೋ ಮಹೀತಲಂ ॥ ೮೮ ॥**

---

ಸುತ್ತಿರುವ ತುದಿಗಳುಳ್ಳ ಬಾಣಗಳನ್ನು ಪ್ರಯೋಗಿಸಿ ನಕುಲಗಳನ್ನೆಲ್ಲ ಮರ್ದಿಸತೊಡಗಿದರು.

೮೪. ಆ ಸೇನಾಧಿಪತಿಗಳು ಎತ್ತೆತ್ತಲೂ ಕೋಟ್ಯಂತರ ಬಾಣಗಳನ್ನು ಪ್ರಯೋಗಿಸುತ್ತಿರಲು, ಭೇದಿಸಿಹೋದ ಶರೀರಗಳುಳ್ಳವಾದ ನಕುಲಗಳೆಲ್ಲವೂ ತಮ್ಮ ಸ್ವಾಮಿನಿಯಾದ ನಕುಲೀಶ್ವರಿಯ ಬಳಿಗೈದಿದವು.

೮೫. ಆಗ ವಾಙ್ಮಯಕ್ಕೆಲ್ಲ ಪ್ರಧಾನೇಶ್ವರಿಯೂ, ವಾಣಿಯೂ ಆದ ಶ್ರೀ ನಕುಲೀಶ್ವರಿಯು ಹೀಗೆ ತನ್ನ ನಕುಲಸೇನೆಯೆಲ್ಲವೂ ಪರಾಜಿತವಾದುದನ್ನು ಕಂಡು ಮಹತ್ತರವಾದ ಕೋಪವನ್ನು ತಾಳಿದಳು.

೮೬. ಕೂಡಲೇ ಆಕೆಯು ತನ್ನ ಶಾರ್ಙ್ಗಧನುಸ್ಸಿನಲ್ಲಿ, ಸರ್ವತೋಮುಖವೂ, ಅಗ್ನಿಜ್ವಾಲೆಗಳಿಂದ ತುಂಬಿದುದೂ, ಅಕ್ಷೀಣನಕುಲವೆಂದು ಹೆಸರಾದುದೂ ಆದ ಮಹಾಸ್ತ್ರವನ್ನು ಸಂಧಾನಮಾಡಿದಳು.

೮೭. ಆ ಅಕ್ಷೀಣ ನಕುಲಾಸ್ತ್ರದಿಂದ ವಜ್ರಶರೀರ, ವಜ್ರರೋಮ, ವಜ್ರದಂತಗಳುಳ್ಳವಾಗಿ, ಮಹಾವೇಗಶಾಲಿಗಳಾದ ಕೋಟ್ಯಂತರ ನಕುಲಗಳು ಹೊರಹೊರಟವು.

೮೮. ವಜ್ರಾಯುಧದಂತೆ ಮಹಾಬಲಿಷ್ಠಗಳಾಗಿ, ವಜ್ರಾಯುಧಕ್ಕೆ ಸಮಾನವಾದ ಬಾಲಗಳುಳ್ಳವೂ, ವಜ್ರಾಯುಧದಂತಹ ಕಾಲುಗುರುಗಳುಳ್ಳವೂ ಆದ ಆ ನಕುಲಗಳು ಭೂಮಿಯನ್ನೇ ತಮ್ಮುಗುರುಗಳಿಂದ ಸೀಳುತ್ತ ಹೊರಟವು.

ವಜ್ರರತ್ನಪ್ರಕಾಶೇನ ಲೋಚನೇನೋಪಶೋಭಿತಾಃ ।
ವಜ್ರಸಂಪಾತಸದೃಶ ನಾಸಾಸೀತ್ಕಾರಕಾರಿಣಃ ॥ ೮೯ ॥
ಮರ್ದಯಂತಃ ಸುರಾರಾತಿಸೈನ್ಯಂ ದಶನಕೋಟಿಭಿಃ ।
ಪರಾಕ್ರಮಂ ಬಹುವಿಧಂ ತೇನಿರೇ ತೇ ನಿರೇನಸಃ ॥ ೯೦ ॥
ಏವಂ ನಕುಲಕೋಟೀಭಿರ್ವಜ್ರಘೋರೈರ್ಮಹಾನಖೈಃ ।
ವಿದಷ್ಟಾಃ ಪ್ರತ್ಯವಯವಂ ವಿನೇಶುರ್ದಾನವಾಧಮಾಃ ॥ ೯೧ ॥
ಏವಂ ವಜ್ರಮಯೈರ್ಬಭ್ರುಮಂಡಲೈಃ ಖಂಡಿತೇ ಬಲೇ ।
ಶತಾಕ್ಷೋಹಿಣಿಕಾಸಂಖ್ಯೇ ಸ್ವಸ್ವಮಾತ್ರಾವಶೇಷಿತಾಃ ॥ ೯೨ ॥
ಅತಿತ್ರಾಸೇನ ರೋಷೇಣ ಗೃಹೀತಾಶ್ಚ ಚಮೂವರಾಃ ।
ಸಂಗ್ರಾಮಮಧಿಕಂ ತೇನುಃ ಸಮಾಕೃಷ್ಟಶರಾಸನಾಃ ॥ ೯೩ ॥
ತೈಃ ಸಮಂ ಬಹುಧಾ ಯುದ್ಧಂ ತನ್ವಾನಾ ನಕಲೀಶ್ವರೀ ।
ಉತ್ಪ್ಲುತ್ಯ ಗರುಡಾರೂಢಾ ನಿಪಪಾತ ರಣಾಂಗಣೇ ॥ ೯೪ ॥

---

೮೯-೯೦. ವಜ್ರರತ್ನಗಳ ಪ್ರಕಾಶವುಳ್ಳ ಕಂಗಳಿಂದ ಕಂಗೊಳಿಸಿ ವಜ್ರಾಯುಧದ ಪತನಕಾಲದಲ್ಲಿಂತೋ ಅಂತು ನಾಸಿಕೆಯ ಸೀತ್ಕಾರ ಧ್ವನಿಗಳನ್ನು ಮಾಡುತ್ತಿರುವ ನಿಷ್ಕಲ್ಮಷಗಳಾದ ಆ ನಕುಲಗಳೆಲ್ಲವೂ ತಮ್ಮ ಹಲ್ಲುಗಳಿಂದ ದಾನವ ಸೇನೆಯನ್ನು ಮರ್ದಿಸುತ್ತ ಅನೇಕ ಬಗೆಯ ಪರಾಕ್ರಮಗಳನ್ನು ಪ್ರದರ್ಶಿಸಿದವು.

೯೧. ವಜ್ರಾಯುಧೋಪಮಗಳಾದ ಅಸಂಖ್ಯ ನಕುಲಗಳಿಂದ ಪ್ರತಿಯೊಂದು ಅವಯವವೂ ಕತ್ತರಿಸಿ ಬಿದ್ದು ಆ ದಾನವಾಧಮರೆಲ್ಲರೂ ನಾಶವಾಗಿಹೋದರು.

೯೨. ಹೀಗೆ, ನಕುಲಗಳಿಂದ ನೂರು ಅಕ್ಷೋಹಿಣೀ ಸೇನೆಗಳೂ ನಾಶವಾಗಲು, ಆ ದಾನವಸೇನೆಯಲ್ಲಿ ಐವರು ಸೇನಾಧಿಪತಿಗಳು ಮಾತ್ರ ಉಳಿದುಕೊಂಡರು.

೯೩. ಬಳಿಕ ಆ ಪಂಚಸೇನಾಧಿಪತಿಗಳೂ, ಒಮ್ಮೆ ಮಹಾ ಭಯ ದಿಂದಲೂ; ಇನ್ನೊಮ್ಮೆ ಮಹಾರೋಷದಿಂದಲೂ ಕೂಡಿ ಬಿಲ್ಲುಗಳನ್ನು ಹಿಡಿದು ಮಹತ್ತರವಾದ ಯುದ್ಧವನ್ನು ಮಾಡತೊಡಗಿದರು.

೯೪. ಶ್ರೀ ನಕುಲೀಶ್ವರಿಯೂ ಸಹ ಸಮರಭೂಮಿಯಲ್ಲಿ ಅವರೊಡನೆ ಬಹಳವಾಗಿ ಕಾಳಗಮಾಡುತ್ತಲಿದ್ದು ತರುವಾಯ ಗರುಡವಾಹನೆಯಾಗಿ ಗಗನಕ್ಕೆ ಹಾರಿದಳು.

**ಮಹಾಜವೇನ ತಾರ್ಕ್ಷ್ಯೇಣ ಗತ್ವಾ ಸಾ ನಕುಲೀಶ್ವರೀ ।**
**ಪಟ್ಟಿಸೇನ ಕರಂಕಸ್ಯ ಚಿಚ್ಛೇದ ಕಠಿನಂ ಶಿರಃ ॥ ೯೫ ॥**
**ಕಾಕವಾಸಿತಮುಖ್ಯಾನಾಂ ಚತುರ್ಣಾಮಪಿ ವೈರಿಣಾಂ ।**
**ಉತ್ಪತ್ಯೋತ್ಪತ್ಯ ತಾರ್ಕ್ಷ್ಯೇಣ ವ್ಯಲುನಾದಸಿನಾ ಶಿರಃ ॥ ೯೬ ॥**
**ತಾದೃಶಂ ಲಾಘವಂ ದೃಷ್ಟ್ವಾ ನಕುಲ್ಯಾ ಶ್ಯಾಮಲಾಂಬಿಕಾ ।**
**ಬಹುಮೇನೇ ಮಹಾಸತ್ತ್ವಾಂ ದುಷ್ಟಾಸುರವಿನಾಶಿನೀಂ ॥ ೯೭ ॥**
**ನಿಜಾಂಗದೇವತಾತ್ವಂ ಚ ತಸ್ಯೈ ಶ್ಯಾಮಾಂಬಿಕಾ ದದೌ ।**
**ಲೋಕೋತ್ತರೇ ಗುಣೇ ದೃಷ್ಟೇ ಕಸ್ಯ ನ ಪ್ರೀತಿಸಂಭವಃ ॥ ೯೮ ॥**
**ಹತಶಿಷ್ಟಾ ಭೀತಭೀತಾಃ ಶೂನ್ಯಕಾಯ ಪಲಾಯಿತಾಃ ।**
**ತಮುದಂತಂ ತತಃ ಶ್ರುತ್ವಾ ಭಂಡಶ್ಚಂಡೋ ರುಷಾಭವತ್ ॥ ೯೯ ॥**

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
**ಅಷ್ಟಾದಶೋಽಧ್ಯಾಯಃ**

---

೯೫-೯೬. ಹೀಗೆ, ಮಹಾವೇಗಶಾಲಿಯಾದ ಗರುಡನನ್ನೇರಿ ಹೊರಟ ಆ ದೇವಿಯು ಪಟ್ಟಿಸಾಯುಧವನ್ನು ಪ್ರಯೋಗಿಸಿ ದಾನವನಾದ ಕರಂಕನ ಮಹಾಕಠಿನವಾದ ಶಿರಸ್ಸನ್ನು ಕತ್ತರಿಸಿ ಕೆಡವಿದಳು. ಆ ದೇವಿಯು, ಗರುಡನಮೇಲೇರಿ ಹಾರಿಬರುತ್ತ ಕಾಕವಾಸಿತನೇ ಮೊದಲಾದ ಉಳಿದ ನಾಲ್ವರು ದಾನವಸೇನಾಪತಿಗಳ ಶಿರಸ್ಸುಗಳನ್ನೂ ಕತ್ತರಿಸಿ ಕೆಡವಿದಳು.

೯೭. ಆಗ ಶ್ರೀ ಶ್ಯಾಮಲಾಂಬಿಕೆಯಾದರೋ ಶ್ರೀ ನಕುಲೀಶ್ವರಿಯ ಕರಲಾಘವವನ್ನು ಕಂಡು ದುಷ್ಟದಾನವಸಂಹಾರಿಣಿಯೂ, ಮಹಾ ಪರಾಕ್ರಮಶಾಲಿನಿಯೂ ಆದ ಆಕೆಯನ್ನು ಬಹುವಾಗಿ ಸನ್ಮಾನಿಸಿದಳು.

೯೮. ಆ ದೇವಿಯು ಆಕೆಗೆ ತನ್ನ ಅಂಗದೇವತೆಯಾಗಿರುವ ಭಾಗ್ಯವನ್ನೂ ದಯೆಗೈದಳು.

೯೯. ಇದಾದ ಬಳಿಕ ಕಳೆದುಳಿದಿದ್ದ ದಾನವರೆಲ್ಲರೂ ಭಯದಿಂದ ತತ್ತಳಿಸಿ, ಬೇಗನೆ ಶೂನ್ಯನಗರಕ್ಕೆ ಓಡಿಬಂದು ತಮ್ಮ ದೊರೆಗೆ ಎಲ್ಲ ಸಂಗತಿಗಳನ್ನೂ ತಿಳಿಸಿದರು. ಅದನ್ನು ಕೇಳಿದೊಡನೆಯೇ ಭಂಡಾಸುರನು ಬಹಳವಾಗಿ ರೋಷಗೊಂಡನು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನವಿಂಶೋಽಧ್ಯಾಯಃ

**[ಬಲಾಹಕಾದಿ ಸಪ್ತಸೇನಾನಿ ವಧಃ]**

ಹತ್ವಾ ಭಂಡಮಹಾಸುರಸ್ಯ ಮಹತೀಮಕ್ಷೋಹಿಣೀನಾಂ ಶತಂ
ಸೇನಾಂ ಶ್ರೀನಕಲೀಶ್ವರೀ ಸಮರಗಾ ಶ್ಯಾಮಾಂಬಿಕಾಯಾಃ ಪ್ರಿಯಂ ।
ಸಂಪ್ರಾಪ್ತಾ ನಕುಲೈಶ್ಚ ಕೋಟಿನಿಯುತೈಃ ಸಂಸೇವತೇ ಸಂತತಂ
ತತ್ತ್ವಾಂ ಶ್ರೀಲಲಿತಾಂಬಿಕಾಂ ಭಗವತೀಂ ಶ್ರೀಸುಂದರೇಶೀಂ ಭಜೇ ॥

**ಹಯಗ್ರೀವಃ—**

**ಹತೇಷು ತೇಷು ರೋಷಾಂಧೋ ನಿಃಶ್ವಸನ್ ಶೂನ್ಯಕೇಶ್ವರಃ ।**
**ಕುಟಿಲಾಕ್ಷಮಿತಿ ಪ್ರೋಚೇ ಯುಯುತ್ಸಾವ್ಯಾಕುಲಾಶಯಃ ॥ ೧ ॥**
**ಭದ್ರ ಸೇನಾಪತೇಽಸ್ಮಾಕಮಭದ್ರಂ ಸಮುಪಾಗತಂ ।**
**ಕರಂಕಾದ್ಯಾಶ್ಚಮೂನಾಥಾಃ ಕಂದಲದ್ಭುಜವಿಕ್ರಮಾಃ ॥ ೨ ॥**
**ಸರ್ಪಿಣೀಮಾಯಯಾ ಸರ್ವಗೀರ್ವಾಣಮದಭಂಜನಾಃ ।**
**ಪಾಪೀಯಸ್ಯಾ ತಯಾ ಗೂಢಮಾಯಯಾ ವಿನಿಪಾತಿತಾಃ ॥ ೩ ॥**

---

## ಕನ್ನಡದ ಅನುವಾದ

**[ಬಲಾಹಕನೇ ಮೊದಲಾದ ಸಪ್ತಸೇನಾನಿಗಳ ವಧೆ]**

೧. ಹಯಗ್ರೀವಮುನಿಯು ಹೇಳುತ್ತಾನೆ:—ನೂರು ಅಕ್ಷೋಹಿಣೀ ಸೇನೆಗಳೂ, ಪಂಚಸೇನಾಧಿಪತಿಗಳೂ ರಣರಂಗದಲ್ಲಿ ನಾಶವಾದ ತರುವಾಯ, ಇತ್ತ ಶೂನ್ಯಪುರಾಧೀಶ್ವರನಾದ ಭಂಡಾಸುರನು ರೋಷದಿಂದ ಕುರುಡಾಗಿ ಯುದ್ಧವನ್ನು ಮುಂದುವರಿಸಬಯಸಿ, ತಳಮಳಗೊಂಡು ಸೇನಾಧಿಪತಿಯಾದ ಕುಟಿಲಾಕ್ಷನನ್ನು ಕುರಿತು ಹೀಗೆಂದನು :—

೨-೩. "ಭದ್ರ ! ಸೇನಾಧಿಪತೀ !! ನಮಗೀಗ ಅಮಂಗಳವೇ ಸಂಪ್ರಾಪ್ತವಾಗಿರುವುದು. ಮಹಾಪರಾಕ್ರಮಶಾಲಿಗಳಾದ ಕರಂಕನೇ ಮೊದಲಾದ ನಮ್ಮ ಪಂಚಸೇನಾಧಿಪತಿಗಳು, ಸಮಸ್ತದೇವತೆಗಳ ಗರ್ವವನ್ನಡಗಿಸಿದವರಾದರೂ, ಪಾಪಿಷ್ಠೆಯೂ, ನಿಗೂಢಮಾಯಾವಿನಿಯೂ ಆದ ಆ ಒಬ್ಬ ಅಬಲೆಯಿಂದ ಸರ್ಪಿಣೀಮಾಯೆಯೊಡನೆಯೇ ಹತರಾಗಿ ಹೋದರು. ಮಾಡುವುದೇನು !

**ಬಲಾಹಕಪ್ರಭೃತಯಃ ಸಪ್ತ ಯೇ ಸೈನಿಕಾಧಿಪಾಃ ।**
**ತಾನುದಗ್ರಭುಜಾಸತ್ತ್ವಾನ್ ಪ್ರಹಿಣು ಪ್ರಥನಂ ಪ್ರತಿ ॥ ೪ ॥**
**ತ್ರಿಶತಂ ಚಾಕ್ಷೋಹಿಣೀನಾಂ ಪ್ರಸ್ಥಾಪಯ ಸಹೈವ ತೈಃ ।**
**ತೇ ಮರ್ದಯಿತ್ವಾ ಲಲಿತಾಸೈನ್ಯಂ ಮಾಯಾಪರಾಯಣಾಃ ॥**
**ವಿಜಯಾಗ್ರೇಸರಾ ಭೂಯಃ ಸಂಪ್ರಾಪ್ಸ್ಯಂತಿ ಮಮಾಂತಿಕಂ ॥ ೫ ॥**
**ಕೀಕಸಾಗರ್ಭಸಂಜಾತಾಸ್ತೇ ಪ್ರಚಂಡಪರಾಕ್ರಮಾಃ ।**
**ಬಲಾಹಕಮುಖಾಃ ಸಪ್ತ ಭ್ರಾತರೋ ಜಯಿನಃ ಸದಾ ॥**
**ತೇಷಾಮವಶ್ಯಂ ವಿಜಯೋ ಭವಿಷ್ಯತಿ ರಣಾಂಗಣೇ ॥ ೬ ॥**
**ಇತಿ ಭಂಡಾಸುರೇಣೋಕ್ತಃ ಕುಟಿಲಾಕ್ಷಃ ಸಮಾಹ್ವಯತ್ ।**
**ಬಲಾಹಕಮುಖಾನ್‌ಸಪ್ತ ಸೇನಾಪಾಲಾನ್‌ಮದೋತ್ಕಟಾನ್ ॥೭॥**
**ಬಲಾಹಕಃ ಪ್ರಥಮತಸ್ತತಃ ಸೂಚೀಮುಖೋಽಪರಃ ।**
**ಅನ್ಯಃ ಫಾಲಮುಖಶ್ಚೈವ ವಿಕರ್ಣೋ ವಿಕಟಾನನಃ ॥**
**ಕರಾಲಾಕ್ಷಃ ಕರಟಕಃ ಸಪ್ತೈತೇ ವೀರ್ಯಶಾಲಿನಃ ॥ ೮ ॥**

---

೪. ಇನ್ನು, ನಮ್ಮಲ್ಲಿರುವ ಮಹತ್ತರ ಭುಜಪರಾಕ್ರಮಿಗಳಾದ ಬಲಾಹಕನೇ ಮೊದಲಾದ ಏಳು ಮಂದಿ ಸೇನಾಧಿಪತಿಗಳನ್ನು ಯುದ್ಧ ರಂಗಕ್ಕೆ ಕಳುಹು.

೫. ಆ ವೀರರೊಡನೆ ಮುನ್ನೂರು ಅಕ್ಷೋಹಿಣೀ ಸೇನೆಗಳು ಹೊರಡಲಿ. ಮಾಯಾಪರಾಯಣರಾದ ಅವರೆಲ್ಲರೂ ರಣರಂಗಕ್ಕೆ ನುಗ್ಗಿ ಹೊರಟು ಆ ಲಲಿತೆಯ ಸೈನ್ಯವೆಲ್ಲವನ್ನೂ ಮರ್ದಿಸಿ ಜಯಶಾಲಿಗಳಲ್ಲಿ ಮುಂದಾಳುಗಳೆನಿಸಿ ನನ್ನ ಬಳಿಗೆ ಬರುವರು.

೬. ಪ್ರಚಂಡಪರಾಕ್ರಮಿಗಳಾದ ಬಲಾಹಕನೇ ಮೊದಲಾದ ಆ ಸಪ್ತಸೇನಾನಿಗಳು ಪರಸ್ಪರ ಸಹೋದರರು; ಅವರೆಲ್ಲರೂ ಕೀಕಸೆಯ ಮಕ್ಕಳು. ಎಲ್ಲ ಕಾಲಗಳಲ್ಲಿಯೂ ಅವರು ವಿಜಯಗಳನ್ನು ಪಡೆದವರೇ.! ಆದುದರಿಂದ ಈಗಿನ ಯುದ್ಧದಲ್ಲಿಯೂ ಅವರು ಖಂಡಿತವಾಗಿ ವಿಜಯ ವನ್ನು ಪಡದೇ ಪಡೆಯುತ್ತಾರೆ."

೭. ಪ್ರಭುವಾದ ಭಂಡಾಸುರನು ಈ ರೀತಿ ನುಡಿದೊಡನೆ, ಸೇನಾ ಧೀಶ್ವರನಾದ ಕುಟಿಲಾಕ್ಷನು ಮದೋತ್ಕಟರಾದ ಬಲಾಹಕನೇ ಮೊದ ಲಾದ ಆ ಸಪ್ತಸೇನಾಪತಿಗಳನ್ನು ಕರೆಯಿಸಿದನು.

೮. ಮೊದಲನೆಯವನು ಬಲಾಹಕ; ಎರಡನೆಯವನು, ಸೂಚೀ

ಭಂಡಾಸುರಂ ನಮಸ್ಕೃತ್ಯ ಯುದ್ಧಕೌತೂಹಲೋಲ್ಬಣಾಃ ।
ಕೀಕಸಾಸೂನವಃ ಸರ್ವೇ ಭ್ರಾತರೋಽನ್ಯೋನ್ಯಮಾದೃತಾಃ ॥
ಅನ್ಯೋನ್ಯಸುಸಹಾಯಾಶ್ಚ ನಿರಗುರ್ನಗರಾಂತರಾತ್ ॥ ೯ ॥
ತ್ರಿಶತಾಕ್ಷೋಹಿಣೀ ಸೇನಾ ತಾನನ್ವಗಮಗಾತ್ತದಾ ।
ಉಲ್ಲಿಖಂತೀ ಕೇತುಜಾಲೈರಂಬರೇ ಘನಮಂಡಲಂ ॥ ೧೦ ॥
ಘೋರಸಂರಾವಿಣೀ ಪಾದಾಘಾತೈರ್ಮರ್ದಿತಮೇದಿನೀ ।
ಪಿಬಂತೀ ಧೂಲಿಕಾಜಾಲೈರಶೇಷಾನಪಿ ಸಾಗರಾನ್ ॥ ೧೧ ॥
ಭೇರೀನಿಃಸಾಣತಂಪೋಟ್ಟಪಣವಾನಕನಿಃಸ್ವನೈಃ ।
ನಭೋಗುಣಮಯಂ ವಿಶ್ವಮಾದಧಾನಾ ಪದೇ ಪದೇ ॥ ೧೨ ॥
ತ್ರಿಶತಾಕ್ಷೋಹಿಣೀಸೇನಾಂ ತಾಂ ಗೃಹೀತ್ವಾ ಮದೋದ್ಧತಾಃ ।
ಪ್ರಸೇಷ್ಟುಮಿವ ವಿಶ್ವಸ್ಯ ಕೈಕಸೇಯಾಃ ಪ್ರತಸ್ಥಿರೇ ॥ ೧೩ ॥

---

ಮುಖ; ಮೂರನೆಯವನು ಫಾಲಮುಖ; ನಾಲ್ಕನೆಯವನೂ ಐದನೆಯವನೂ ವಿಕರ್ಣ ವಿಕಟಾನನರು; ಕರಾಲಾಕ್ಷ ಕರಟಕರು ಆರು ಏಳನೆಯವರು—ಇವರೆಲ್ಲರೂ ಮಹಾಪರಾಕ್ರಮಶಾಲಿಗಳು.

೯. ಯುದ್ಧಮಾಡಲು ತೀವ್ರವಾದ ಕುತೂಹಲವುಳ್ಳ ಇವರೆಲ್ಲರೂ ರಾಜಸಭೆಗೈತಂದು ಭಂಡಾಸುರನನ್ನು ನಮಸ್ಕರಿಸಿದರು. ತರುವಾಯ ಅನ್ಯೋನ್ಯಪ್ರೀತಿಯುಳ್ಳವರೂ ಅನ್ಯೋನ್ಯ ಸಹಾಯಸಂಪತಿಯುಳ್ಳವರೂ ಆದ ಕೀಕಸೆಯ ಆ ಏಳು ಮಂದಿ ಪುತ್ರರೂ ಪ್ರಭುವಿನ ಅನುಜ್ಞೆಯನ್ನು ಪಡೆದು ನಗರದಿಂದ ರಣರಂಗಕ್ಕೆ ಹೊರಟರು.

೧೦. ಆಗ ದಾನವರ ಮುನ್ನೂರು ಅಕ್ಷೋಹಿಣೀ ಸೇನೆಗಳು ತಮ್ಮ ನಿಶಾನಿಗಳಿಂದ ಮೇಘಮಂಡಲವನ್ನೇ ಒರೆಯುತ್ತ ಆ ಸಪ್ತಸೇನಾಪತಿಗಳನ್ನು ಹಿಂಬಾಲಿಸಿ ಹೊರಟವು.

೧೧-೧೩. ಭಯಂಕರವಾದ ಸಿಂಹನಾದಗಳನ್ನು ಮಾಡುತ್ತಲೂ ಪಾದಾಘಾತಗಳಿಂದ ಭೂಮಿಯನ್ನು ಮರ್ದಿಸುತ್ತಲೂ, ಅದರಿಂದೆದ್ದ ಧೂಳಿನಿಂದ ಸಪ್ತಸಾಗರಗಳನ್ನೇ ಸಂಪೂರ್ಣವಾಗಿ ಪಾನಮಾಡುವುದೋ ಎಂಬಂತೆ ತೋರುತ್ತಲೂ, ಭೇರೀ, ನಿಸ್ಸಾಣ, ತಮ್ಮಟೆ, ಪಣವ, ಆನಕ ಮುಂತಾದ ವಾದ್ಯಗಳ ಧ್ವನಿಗಳಿಂದ ಅಡಿಗಡಿಗೂ ಪ್ರಪಂಚವನ್ನೇ ಧ್ವನಿಗೊಳಿಸುತ್ತಲೂ ಮುಂದುವರಿದ ಆ ಮುನ್ನೂರು ಅಕ್ಷೋಹಿಣಿಗಳ ಪ್ರಬಲವಾದ ಸೈನ್ಯವನ್ನು ಹಿಂದಿಟ್ಟುಕೊಂಡು, ಮದೋದ್ಧತರಾದ ಆ

**ರೋಷಾರುಣಮುಖಾಃ ಸೂರ್ಯಮಂಡಲೋದ್ದೀಪ್ತಕಂಕಟಾಃ**
**ಉದ್ದೀಪ್ತಶಸ್ತ್ರಾಭರಣಾಶ್ಚೇಲುರ್ದೀಪ್ತೋರ್ಧ್ವಕೇಶಿನಃ ॥ ೧೪ ॥**
**ಸಪ್ತಲೋಕಾನ್ ಪ್ರಮಥಿತುಂ ಪ್ರೇಷಿತಾಃ ಪೂರ್ವಮುತ್ಥಿತಾಃ ।**
**ಭಂಡಾಸುರೇಣ ಮಹತಾ ಜಗದ್ವಿಜಯಕಾರಿಣಾ ॥ ೧೫ ॥**
**ಸಪ್ತಲೋಕವಿಮರ್ದೇನ ತೇನ ದೃಷ್ಟಮಹಾಬಲಾಃ ।**
**ಪ್ರೇಷಿತಾ ಲಲಿತಾಸೈನ್ಯಂ ಜೇತುಕಾಮೇನ ದುರ್ಧಿಯಾ ॥ ೧೬ ॥**
**ತೇ ಪತಂತೋ ರಣತಲಮುಜ್ಜ್ವಲಚ್ಛಸ್ತ್ರಪಾಣಯಃ ।**
**ಶಕ್ತಿಸೇನಾಮಭಿಮುಖಂ ಸಕ್ರೋಧಮಭಿದುದ್ರುವುಃ ॥ ೧೭ ॥**
**ಮುಹುಃ ಕಿಲಕಿಲಾರಾವೈರ್ಘೋಷಯಂತೋ ದಿಶೋ ದಶ ।**
**ದೇವ್ಯಾಸ್ತು ಸೈನಿಕಂ ಯತ್ರ ತತ್ರ ತೇ ಜಗ್ಮುರುದ್ಧತಾಃ ॥ ೧೮ ॥**

---

ಸಪ್ತಸೇನಾಧಿಪತಿಗಳು ಪ್ರಪಂಚವನ್ನೇ ಪುಡಿಗುಟ್ಟುವರೋ ಎಂಬಂತೆ ತೋರುತ್ತ ರಣಾಭಿಮುಖವಾಗಿ ಪ್ರಯಾಣಮಾಡಿದರು.

೧೪. ಅವರೆಲ್ಲರೂ ರೋಷದಿಂದ ಕೆಂಪೇರಿದ ಮುಖಗಳುಳ್ಳವರಾಗಿದ್ದರು; ಎಲ್ಲರೂ ಸೂರ್ಯಮಂಡಲದಂತೆ ಬಹು ಪ್ರಕಾಶಮಾನವಾದ ಕವಚಗಳನ್ನು ತೊಟ್ಟು, ಫಳಫಳನೆ ಹೊಳೆಯುತ್ತಿರುವ ಶಸ್ತ್ರಗಳಿಂದಲೂ, ಆಭರಣಗಳಿಂದಲೂ ಅಲಂಕೃತರಾಗಿ ಅಗ್ನಿಜ್ವಾಲೆಗಳಿಗೆ ಸಮಾನವಾದ ಮೇಲ್ಮೊದಲುಗಳಿಂದ ಶೋಭಿಸುತ್ತಿದ್ದರು.

೧೫. ಮಹಾಪರಾಕ್ರಮಿಯಾದ ಭಂಡಾಸುರನು ಪೂರ್ವದಲ್ಲಿ ಜಗತ್ತನ್ನೇ ಜಯಿಸಿದ ಸಂದರ್ಭದಲ್ಲಿ ಉದ್ಧತರಾದ ಈ ಸಪ್ತಸೇನಾಧಿಪತಿಗಳನ್ನು ಸಪ್ತಲೋಕಗಳ ಮಥನಕ್ಕಾಗಿ ಕಳುಹಿಸಿದ್ದನು.

೧೬. ಆ ಕಾರ್ಯದಲ್ಲಿ ಇವರೆಲ್ಲರೂ ತಮ್ಮ ಬಲಪರಾಕ್ರಮಗಳನ್ನು ಪ್ರದರ್ಶಿಸಿದ್ದರು. ಇಂತಹ ವೀರರಾದ ಈ ದಾನವರನ್ನೇ ದುರ್ಬುದ್ಧಿಯಾದ ಭಂಡಾಸುರನು ಈಗ ಲಲಿತಾಪರಮೇಶ್ವರಿಯ ಸೈನ್ಯವನ್ನು ಜಯಿಸ ಬಯಸಿ ರಣರಂಗಕ್ಕೆ ಕಳುಹಿಸಿದನು.

೧೭. ಕೋಪದಿಂದ ಕೆರಳಿ, ಕತ್ತಿಗಳನ್ನೆತ್ತಿ ಬೀಸುತ್ತ ಅವರೆಲ್ಲರೂ ಶಕ್ತಿಸೇನೆಗೆದುರಾಗಿ ಅಟ್ಟಿಬಂದರು.

೧೮. ಆ ದೈತ್ಯರು ಬಾರಿಬಾರಿಗೂ ರಣಕೋಲಾಹಲಧ್ವನಿಗಳನ್ನು ಮಾಡಿ ದಶದಿಶೆಗಳನ್ನೂ ಮೊಳಗಿಸುತ್ತ ದೇವಿಯ ಸೇನೆಯಿದ್ದೆಡೆಗೆ ಉದ್ಧತರಾಗಿ ನುಗ್ಗಿ ಹೊರಟರು.

**ಸೈನ್ಯಂ ಚ ಲಲಿತಾದೇವ್ಯಾಃ ಸನ್ನದ್ಧಂ ಶಸ್ತ್ರಭೀಷಣಂ ।**
**ಅಭ್ಯಮಿತ್ರೀಣಮಭವದ್ವೃದ್ಧಭ್ರುಕುಟನಿಸ್ವನಂ ॥ ೧೯ ॥**
**ಪಾಶಿನ್ಯೋ ಮುಸಲಿನ್ಯಶ್ಚ ಚಕ್ರಿಣ್ಯಶ್ಚಾಪರಾ ಮುನೇ ।**
**ಮುದ್ಗರಿಣ್ಯಃ ಪಟ್ಟಿಸಿನ್ಯಃ ಕೋದಂಡಿನ್ಯಸ್ತಥಾ ಮುನೇ ॥ ೨೦ ॥**
**ಅನೇಕಾಃ ಶಕ್ತಯಸ್ತೀವ್ರಾ ಲಲಿತಾಸೈನ್ಯಸಂಗತಾಃ ।**
**ಪಿಬಂತ್ಯ ಇವ ದೈತ್ಯಾಬ್ಧಿಂ ಸಂನಿಪೇತುಃ ಸಹಸ್ರಶಃ ॥ ೨೧ ॥**
**ಆಯಾತಾಯಾತ ಹೇ ದುಷ್ಟಾಃ ಪಾಪಿನ್ಯೋ ವನಿತಾಧಮಾಃ ।**
**ಮಾಯಾಪರಿಗ್ರಹೈರ್ದೂರಂ ಮೋಹಯಂತ್ಯೋ ಜಡಾಶಯಾನ್ ॥**
**ನೇಷ್ಯಾಮೋ ಭವತೀರದ್ಯ ಪ್ರೇತನಾಥನಿಕೇತನಂ ।**
**ಶ್ವಸದ್ಭುಜಗಸಂಕಾಶೈರ್ಬಾಣೈರತ್ಯಂತಭೀಷಣೈಃ ॥**
**ಇತಿ ಶಕ್ತೀರ್ಭರ್ತ್ಸಯಂತೋ ದಾನವಾಶ್ಚಕ್ರುರಾಹವಂ ॥ ೨೩ ॥**
**ಶಕ್ತಯಶ್ಚಾಪಿ ಸಂಕ್ರುದ್ಧಾ ದಾನವಾನ್ ಪ್ರತಿ ಕುಂಭಜ ।**
**ರೋಷೇಣ ಮಹತಾವಿಷ್ಟಾಶ್ಚಕ್ರುರ್ಯುದ್ಧಂ ಸುದಾರುಣಂ ॥ ೨೪ ॥**

---

೧೯. ಯುದ್ಧಕ್ಕೆ ಸಿದ್ಧವಾಗಿಯೇ ಇದ್ದ ಶ್ರೀ ಲಲಿತಾದೇವಿಯ ಶಕ್ತಿಸೇನೆಯಾದರೋ ಶಸ್ತ್ರಗಳಿಂದ ಭೀಷಣವಾಗಿ ತೋರುತ್ತ ಕೋಪದಿಂದ ಕೆರಳಿ ಹುಬ್ಬುಗಂಟಿಕ್ಕಿ ರಣಕೋಲಾಹಲಧ್ವನಿಗಳನ್ನು ಮಾಡುತ್ತ ಶತ್ರುಸೇನೆಗಳನ್ನೆದುರಿಸಿತು.

೨೦-೨೧. ಎಲೈ ಅಗಸ್ತ್ಯಮುನಿಯೇ! ಆ ಸಮರದಲ್ಲಿ ಪಾಶ, ಮುಸಲ, ಚಕ್ರ, ಮುದ್ಗರ, ಪಟ್ಟಸ, ಕೋದಂಡ ಮುಂತಾದ ನಾನಾ ವಿಧವಾದ ಆಯುಧಗಳನ್ನು ಧರಿಸಿದ್ದ ಶ್ರೀ ಲಲಿತಾಸೈನ್ಯದ ಅನೇಕ ಶಕ್ತಿದೇವಿಯರು ದೈತ್ಯಸಾಗರವನ್ನೇ ಪಾನಮಾಡುವರೋ ಎಂಬಂತೆ ತೋರುತ್ತ ಬಹು ತೀವ್ರವಾಗಿ ಅವರಮೇಲೆ ನುಗ್ಗಿದರು.

೨೨-೨೩. ಆಗ ದಾನವರೂ ಸಹ, "ಎಲೇ ದುಷ್ಟೆಯರೇ; ಪಾಪಿಷ್ಠೆಯರೇ! ನೀಚಸ್ತ್ರೀಯರಾದ ನೀವೆಲ್ಲರೂ ಬನ್ನಿರಿ, ಬನ್ನಿರಿ! ನಿಮ್ಮ ಮಾಯಾಪ್ರಭಾವದಿಂದ ತಿಳಿಗೇಡಿಗಳನ್ನು ಭ್ರಾಂತಿಗೊಳಿಸಿ ಓಡಿಸಿದಂತಲ್ಲ. ಇದೋ, ಇದೀಗ ನಾವೆಲ್ಲರೂ, ಬುಸುಗುಟ್ಟುತ್ತಿರುವ ಸರ್ಪಗಳನ್ನು ಹೋಲುತ್ತ ಮಹಾಭಯಂಕರವಾಗಿರುವ ಈ ಬಾಣಗಳಿಂದಲೇ ನಿಮ್ಮೆಲ್ಲರನ್ನೂ ಪ್ರೇತನಾಥನಾದ ಯಮನ ಮನೆಗಟ್ಟುವೆವು" ಎಂದು ಕೂಗಿ ಹೇಳಿ ಅವರೆಲ್ಲರನ್ನೂ ಹೆದರಿಸುತ್ತ ಕಾಳಗಮಾಡಿದರು.

೨೪. ಕುಂಭಸಂಭವಾ! ಶಕ್ತಿದೇವಿಯರೂ ಕೂಡ ಈ ವೀರಾಲಾಪ

**ಕಾಚಿಚ್ಚಿಚ್ಛೇದ ದೈತ್ಯೇಂದ್ರಂ ಕಂಠೇ ಪಟ್ಟಿಸಪಾತನಾತ್ ।**
**ತದ್ಗಲೋಲ್ಲುಠಿತೋ ರಕ್ತಪೂರ ಊರ್ಧ್ವಮುಖೋಽಭವತ್ ॥೨೫॥**
**ತತ್ರ ಲಗ್ನಾ ಬಹುತರಾ ಗೃಧ್ರಾ ಮಂಡಲತಾಂ ಗತಾಃ ।**
**ತೇನೈವ ಪ್ರೇತನಾಥಸ್ಯ ಛತ್ರಚ್ಛವಿರುದಂಚಿತಾ ॥ ೨೬ ॥**
**ಕಾಚಿಚ್ಛಕ್ತಿಃ ಸುರಾರಾತಿಂ ಮುಕ್ತಶಕ್ತ್ಯಾಯುಧಂ ರಣೇ ।**
**ಲೂನತಚ್ಛಕ್ತಿನೈಕೇನ ಬಾಣೇನ ವ್ಯಲುನೀತ ಚ ॥ ೨೭ ॥**
**ಏಕಾ ಹಸ್ತಿನಮಾರೂಢಾ ಕಸ್ಯ ಚಿದ್ದೈತ್ಯದುರ್ಮತೇಃ ।**
**ಉರಃಸ್ಥಲೇ ಸ್ವಕರಿಣೋ ವಪ್ರಾಘಾತಮಶಿಕ್ಷಯತ್ ॥ ೨೮ ॥**
**ಕಾಚಿತ್ಪ್ರತಿಭಟಾರೂಢಂ ದಂತಿನಂ ಕುಂಭಸೀಮನಿ ।**
**ಖಡ್ಗೇನ ಸಹಸಾ ಲೂತ್ವಾ ಸ್ವಕುಚಸ್ಯ ಪ್ರಿಯಂ ವ್ಯಧಾತ್ ॥ ೨೯ ॥**

---

ವನ್ನು ಕೇಳಿ ಬಹಳವಾದ ಕೋಪದಿಂದ ಕೆರಳಿ ಆ ದಾನವರೊಡನೆ ಬಹು ಭಯಂಕರವಾದ ಯುದ್ಧವನ್ನು ಮಾಡಿದರು.

೨೫. ಈ ರೀತಿ ನಡೆದ ಭಯಂಕರಯುದ್ಧದಲ್ಲಿ ಒಬ್ಬಾನೊಬ್ಬ ಶಕ್ತಿದೇವಿಯು ಪಟ್ಟಿಸಾಯುಧದಿಂದ ದೈತ್ಯೇಂದ್ರನೊಬ್ಬನ ಕಂಠವನ್ನು ಕತ್ತರಿಸಿ ಕೆಡವಲು ಅವನ ಆ ಕಂಠಪ್ರದೇಶದಿಂದ ರಕ್ತಪ್ರವಾಹವು ಮೇಲಕ್ಕೆ ಚಿಮ್ಮಿ ಹೊರಟಿತು.

೨೬. ಕೂಡಲೇ ಆ ಪ್ರದೇಶದಲ್ಲಿ ಅನೇಕ ಬಗೆಯ ರಣಹದ್ದುಗಳು ಮಂಡಲಾಕಾರವಾಗಿ ಮುತ್ತಿ ಬರಲು ಅವು ಪ್ರೇತನಾಥನ ಕೊಡೆಯೋ ಎಂಬಂತೆ ಕಂಗೊಳಿಸಿದವು.

೨೭. ಮತ್ತೊಬ್ಬ ಶಕ್ತಿದೇವತೆಯು ತನ್ನಮೇಲೆ ಶಕ್ತ್ಯಾಯುಧ ವನ್ನು ಪ್ರಯೋಗಿಸಿದ ದಾನವನೊಬ್ಬನ ಮೇಲೆ ಅದೇ ಶಕ್ತ್ಯಾಯುಧವನ್ನೇ ಪ್ರಯೋಗಿಸಿ ಅವನನ್ನು ಘಾತಿಸಿದುದಲ್ಲದೆ ಒಂದೇ ಬಾಣದಿಂದಲೇ ಅವನನ್ನು ಕತ್ತರಿಸಿ ಕೆಡವಿದಳು.

೨೮. ಗಜಾರೂಢೆಯಾದ ಮಗದೊಬ್ಬ ದೇವಿಯು ದುರ್ಮತಿಯಾದ ದೈತ್ಯನೊಬ್ಬನ ಎದೆಗೆ ತನ್ನ ಗಜದಿಂದ ಗುದ್ದಿಸಿ, ಆ ಸಮಯದಲ್ಲಿಯೇ ಅದಕ್ಕೆ ವಪ್ರಕ್ರೀಡೆಯನ್ನು ಕಲಿಸಿದಳು.

೨೯. ಇನ್ನೊಬ್ಬಳು ಶತ್ರುಭಟನೇರಿ ಕುಳಿತಿದ್ದ ಆನೆಯ ಕುಂಭ ಸ್ಥಳವನ್ನು ಖಡ್ಗದಿಂದ ಕತ್ತರಿಸಿ ಕುಚಗಳಿಗೆ ಪ್ರಿಯವನ್ನುಂಟು ಮಾಡಿದಳು.

ಕರಮುಕ್ತೇನ ಚಕ್ರೇಣ ಕಸ್ಯಚಿದ್ದೇವವೈರಿಣಃ । [ ೩೦ ॥
ಧನುರ್ದಂಡಂ ದ್ವಿಧಾ ಕೃತ್ವಾ ಸ್ವಭ್ರುವೋಃ ಪ್ರೀತಿಮಾತನೋತ್ ॥
ಶಕ್ತಿರನ್ಯಾ ಶರೈಃ ಶಾತೈಃ ಶಾತಯಿತ್ವಾ ವಿರೋಧಿನಃ । [॥ ೩೧ ॥
ಕೃಪಾಣಯಷ್ಟಿಂ ರೋಮಾಲ್ಯಾಃ ಸ್ವಕೀಯಾಯಾ ಮುದಂ ವ್ಯಧಾತ್
ಕಾಚಿನ್ಮುದ್ಗರಪಾತೇನ ಚೂರ್ಣಯಿತ್ವಾ ವಿರೋಧಿನಃ ।
ರಥಚಕ್ರಂ ನಿತಂಬಸ್ಯ ಸ್ವಸ್ಯ ತೇನಾತನೋನ್ಮುದಂ ॥ ೩೨ ॥
ರಥಕೂಬರಮುಗ್ರೇಣ ಕಸ್ಯಚಿದ್ದಾನವಪ್ರಭೋಃ ।
ಖಡ್ಗೇನ ಭಿಂದತೀ ಸ್ವಸ್ಯ ಪ್ರಿಯಮೂರ್ವೋಸ್ತತಾನ ಹ ॥ ೩೩ ॥
ಅಭ್ಯಂತರಂ ಶಕ್ತಿಸೇನಾ ದೈತ್ಯಾನಾಂ ಪ್ರವಿವೇಶ ಚ ।
ಪ್ರವಿವೇಶ ಚ ದೈತ್ಯಾನಾಂ ಸೇನಾ ಶಕ್ತಿಬಲಾಂತರಂ ॥ ೩೪ ॥
ನೀರಕ್ಷೀರವದತ್ಯಂತಾಶ್ಲೇಷಃ ಶಕ್ತಿಸುರದ್ವಿಷಾಂ ।
ಸಂಕುಲಾಕಾರತಾಂ ಪ್ರಾಪ್ತೋ ಯುದ್ಧಕಾಲೇಽಭವತ್ತದಾ ॥ ೩೫ ॥

---

೩೦. ಮತ್ತೊಬ್ಬಾಕೆಯು ಚಕ್ರಾಯುಧವನ್ನು ಪ್ರಯೋಗಿಸಿ ದೇವ ಶತ್ರುವಾದ ದಾನವನೋರ್ವನ ಧನುಸ್ಸನ್ನು ಎರಡು ತುಂಡಾಗಿ ಕತ್ತರಿಸಿ ಕೆಡವಿ ತನ್ನ ಹುಬ್ಬುಗಳು ಅನುಪಮವಾಗಿರುವಂತೆ ಮಾಡಿಕೊಂಡಳು.

೩೧. ಇನ್ನೊಬ್ಬ ಶಕ್ತಿದೇವಿಯು ಕೂರಂಬುಗಳಿಂದ ವಿರೋಧಿ ದಾನವನೊಬ್ಬನ ಕತ್ತಿಯ ಹಿಡಿಕೋಲನ್ನು ತುಂಡುಗೈದು ತನ್ನ ರೋಮಾಳಿಗೆ ಸಂತೋಷವನ್ನುಂಟುಮಾಡಿದಳು.

೩೨. ಮಗದೊಬ್ಬಾಕೆಯು ಮುದ್ಗರಾಯುಧವನ್ನು ಪ್ರಯೋಗಿಸಿ ಶತ್ರುವಿನ ರಥಚಕ್ರವನ್ನು ಪುಡಿಗುಟ್ಟಿ ತನ್ನ ನಿತಂಬಗಳಿಗೆ ಹರ್ಷವನ್ನುಂಟು ಮಾಡಿದಳು.

೩೩. ಇನ್ನೊಬ್ಬ ಶಕ್ತಿದೇವಿಯು ಭಯಂಕರವಾದ ತನ್ನ ಖಡ್ಗದಿಂದ ದಾನವನೋರ್ವನ ರಥದ ಕಾಡೀಮರವನ್ನು ಕಡಿದುಹಾಕಿ ತನ್ನ ತೊಡೆಗಳಿಗೆ ಪ್ರೀತಿಯನ್ನುಂಟುಮಾಡಿದಳು.

೩೪. ಹೀಗೆ ಯುದ್ಧವು ಬಿರುಸಾಗಿ ನಡೆಯುತ್ತಿರಲು, ಶಕ್ತಿಸೇನೆಯು ದಾನವಸೇನೆಯ ಮಧ್ಯಕ್ಕೂ, ದಾನವಸೇನೆಯು ಶಕ್ತಿಸೇನೆಯ ಮಧ್ಯಕ್ಕೂ ನುಗ್ಗಿತು.

೩೫. ಆ ಯುದ್ಧಸಮಯದಲ್ಲಿ ಶಕ್ತಿದಾನವಸೇನೆಗಳೆರಡೂ ಹಾಲು ನೀರುಗಳೆಂತೋ ಅಂತು ಸೇರಿಹೋದವು.

**ಶಕ್ತೀನಾಂ ಖಡ್ಗಪಾತೇನ ಲೂನಶುಂಡಾರದದ್ವಯಾಃ ।**
**ದೈತ್ಯಾನಾಂ ಕರಿಣೋ ಮತ್ತಾ ಮಹಾಕ್ರೋಡಾ ಇವಾಭವನ್ ॥ ೩೬॥**
**ಇತ್ಥಂ ಪ್ರವೃತ್ತೇ ಸಮರೇ ವೀರಾಣಾಂ ಚ ಭಯಂಕರೇ ।**
**ಅಶಕ್ಯೇ ಸ್ಮರ್ತುಮಪ್ಯಂತಃ ಕಾತರತ್ವವತಾಂ ನೃಣಾಂ ॥ ೩೭ ॥**
**ಭೀಷಣಾನಾಂ ಭೀಷಣೇಚ ಶಸ್ತ್ರಾಸ್ತ್ರವ್ಯಾಪಾರ ದುರ್ಗಮೇ ।**
**ಬಲಾಹಕೋ ಮಹಾಗೃಧ್ರಂ ವಜ್ರತೀಕ್ಷ್ಣಸಕಂಚುಕಂ ।**
**ಕಾಲದಂಡೋಪಮಂ ಜಂಘಾಕಾಂಡೇ ಚಂಡಪರಾಕ್ರಮಂ ॥ ೩೮ ॥**
**ಸಂಹಾರಗುಪ್ತನಾಮಾನಂ ಪೂರ್ವಮಗ್ನೇಃ ಸಮುತ್ಥಿತಂ ।**
**ಧೂಮವದ್ಧೂಸರಾಕಾರಂ ಪಕ್ಷಕ್ಷೇಪಭಯಂಕರಂ ॥**
**ಆರುಹ್ಯ ವಿವಿಧಂ ಯುದ್ಧಂ ಕೃತವಾನ್ಯುದ್ಧದುರ್ಮದಃ ॥ ೩೯ ॥**
**ಪಕ್ಷೌ ವಿತತ್ಯ ಕ್ರೋಶಾರ್ಧಸಂಮಿತೌ ಭೀಮನಿಸ್ವನೌ ।**
**ಅಂಗಾರಕುಂಡವತ್ತುಂಡಂ ವಿದಾರ್ಯಾಭಕ್ಷಯಚ್ಚಮೂಂ ॥ ೪೦ ॥**

೩೬. ಶಕ್ತಿದೇವಿಯರ ಕತ್ತಿಗಳ ಪೆಟ್ಟುಗಳಿಂದ ದೈತ್ಯರ ಕಡೆಯ ಮದದಾನೆಗಳು, ಮುರಿದ ಸೊಂಡಿಲುಗಳೂ ದಂತಗಳೂ ಉಳ್ಳವುಗಳಾಗಿ ದೊಡ್ಡ ಹಂದಿಗಳಂತೆ ಕಾಣುತ್ತಿದ್ದವು.

೩೭-೩೯. ಹೀಗೆ ವೀರರಿಗೂ ಹೆದರಿಕೆಯನ್ನುಂಟುಮಾಡುವುದಾಗಿ, ಮಾನವರಿಗಂತೂ ಮನಸ್ಸಿನ ತಳಮಳದಿಂದಲೇ ಊಹಿಸಲೂ ಸಹ ಸಾಧ್ಯವಲ್ಲದ ಮಹಾ ಭಯಂಕರಪರಾಕ್ರಮಿಗಳಿಗೂ ಭೀಷಣವಾದ ಯುದ್ಧವು ನಡೆಯಲುಪಕ್ರಮವಾಗಲು, ಆ ಸಪ್ತಸೇನಾಧಿಪತಿಗಳಲ್ಲೊಬ್ಬನಾದ ಬಲಾಹಕನು, ಸಂಹಾರಗುಪ್ತವೆಂಬ ಹೆಸರಿನ ಭಯಂಕರವಾದ ಮಹಾಗೃಧ್ರವನ್ನೇರಿ ಹೊರಟನು. ಆ ಗೃಧ್ರದ ಕೊಕ್ಕು ವಜ್ರಾಯುಧದಂತೆ ಬಹು ತೀಕ್ಷ್ಣವಾದುದು. ಅದರ ಕಾಲುಗಳು ಯಮದಂಡಕ್ಕೆ ಸಮಾನವಾದುವು. ಅದು ಅಗ್ನಿದೇವನಿಗಿಂತಲೂ ಪೂರ್ವದಲ್ಲಿ ಜನಿಸಿದುದು; ಹೊಗೆಯಂತೆ ಬೂದುಬಣ್ಣವುಳ್ಳ ರೆಕ್ಕೆಗಳನ್ನು ಹೊಡೆಯುತ್ತ ಬಹು ಭಯಂಕರವಾಗಿದ್ದಿತು. ಯುದ್ಧದುರ್ಮದನಾದ ಬಲಾಹಕನು ಇಂತಹ ಭೀಕರ ಗೃಧ್ರವನ್ನೇರಿ ಹೊರಟು ಬಗೆಬಗೆಯ ಕಾಳಿಗಗಳನ್ನು ಮಾಡಿದನು.

೪೦. ಅದೇ ಸಮಯದಲ್ಲಿಯೇ ಆ ಗೃಧ್ರವೂ ಸಹ ಅರ್ಧಕ್ರೋಶದಷ್ಟು ಉದ್ದವಾದ ತನ್ನ ರೆಕ್ಕೆಗಳನ್ನು ಬೀಸಿ ಭಯಂಕರಧ್ವನಿಯನ್ನು ಉಂಟುಮಾಡುತ್ತ ಅಗ್ನಿಕುಂಡದಂತಿರುವ ತನ್ನ ಕೊಕ್ಕನ್ನು ತೆರೆದು ಆ ಶಕ್ತಿಸೇನೆಯವರನ್ನು ಸೀಳಿ ತಿನ್ನಲಾರಂಭಿಸಿತು.

**ಸಂಹಾರಗುಪ್ತಃ ಸಹಸಾ ಗೃಧ್ರಃ ಕ್ರೂರವಿಲೋಚನಃ ।**
**ಬಲಾಹಕಮುವಾಹೋಚ್ಚೈರಾಕೃಷ್ಟಧನುಷಂ ರಣೇ ॥ ೪೧ ॥**
**ಬಲಾಹಕೋ ಧನುರ್ಧೂರ್ನ್ವನ್ ಗೃಧ್ರಪೃಷ್ಠಕೃತಸ್ಥಿತಿಃ ।**
**ಸಪಕ್ಷ ಶೈಲಕೂಟಸ್ಥೋ ಬಲಾಹಕ ಇವಾಬಭೌ ॥ ೪೨ ॥**
**ಸೂಚೀಮುಖಶ್ಚ ದೈತ್ಯೇಂದ್ರಃ ಸೂಚೀನಿಷ್ಠುರಪಕ್ಷತಿಂ ।**
**ಕಾಕವಾಹನಮಾರುಹ್ಯ ಕಠಿನಂ ಸಮರಂ ವ್ಯಧಾತ್ ॥ ೪೩ ॥**
**ಮತ್ತಕಾಸರಶೃಂಗಾಭಂ ಚಂಚೂದಂಡಂ ಸಮುದ್ವಹನ್ ।**
**ಕಾಲದಂಡಪ್ರಮಾಣೇನ ಜಂಘಾಕಾಂಡೇನ ಭೀಷಣಃ ॥ ೪೪ ॥**
**ಪುಷ್ಕಲಾವರ್ತಕಸಮೌ ಜಂಬಾಲಸದೃಶದ್ಯುತೀ ।**
**ಕ್ರೋಶಮಾತ್ರಾಯತೌ ಪಕ್ಷಾವುಭಾವಪಿ ಸಮುದ್ವಹನ್ ॥ ೪೫ ॥**
**ಸೂಚೀಮುಖಾಧಿಷ್ಠಿತೋಽಸೌ ಕರಟಃ ಕಟುವಾಶಿತಃ ।**
**ಮಮರ್ದ ಚಂಚುಘಾತೇನ ಶಕ್ತೀನಾಂ ಮಂಡಲಂ ಮಹತ್ ॥ ೪೬ ॥**

---

೪೧. ಕಠೋರವಾದ ಕಂಗಳುಳ್ಳ ಸಂಹಾರಗುಪ್ತನೆಂಬ ಆ ಗೃಧ್ರವು ಹೀಗೆ ಪರಾಕ್ರಮವನ್ನು ತೋರಿದುದಲ್ಲದೆ, ಬಲವಾಗಿ ಸೆಳೆದು ಹಿಡಿದ ಧನುಸ್ಸನ್ನು ಧರಿಸಿರುವ ತನ್ನೊಡೆಯನಾದ ಬಲಾಹಕ ದೈತ್ಯನನ್ನು ಹೊತ್ತು ಬಹು ಎತ್ತರಕ್ಕೆ ಹಾರಿ ಆ ರಣಾಂಗಣದಲ್ಲೆಲ್ಲ ಸಂಚರಿಸತೊಡಗಿತು.

೪೨. ಆ ಗೃಧ್ರದ ಬೆನ್ನೇರಿ ಕುಳಿತು ಧನುಷ್ಟಂಕಾರಮಾಡುತ್ತಿದ್ದ ಆ ದಾನವನಾದರೋ ರೆಕ್ಕೆಗಳೊಡಗೂಡಿದ ಪರ್ವತದ ಕೋಡಿನಮೇಲೆ ಕುಳಿತಿದ್ದ ಮುಗಿಲಿನೋಪಾದಿಯಲ್ಲಿ ಕಂಗೊಳಿಸುತ್ತಿದ್ದನು.

೪೩. ಇನ್ನೊಬ್ಬ ಸೇನಾಪತಿಯಾದ ಸೂಚೀಮುಖನು ಸೂಜಿಯಂತೆ ಬಹು ತೀಕ್ಷ್ಣವಾದ ರೆಕ್ಕೆಗಳುಳ್ಳ ಕಾಕವಾಹನವನ್ನೇರಿ ಭಯಂಕರ ಯುದ್ಧವನ್ನು ಮಾಡಿದನು.

೪೪-೪೬. ಆ ಕಾಗೆಯ ಕೊಕ್ಕು ಮದಿಸಿದ ಕೋಣನ ಕೋಡಿನಂತೆ ಇದ್ದಿತು. ಅದರ ಕಾಲುಗಳು ಯಮದಂಡದಂತೆ ಬಹು ಭೀಷಣವಾಗಿ ಇದ್ದುವು. ಅದು, ಪುಷ್ಕಲ, ಆವರ್ತಗಳೆಂಬ ಪ್ರಳಯಮೇಘಗಳಿಗೆ ಸಮಾನಗಳೂ, ಪಾಚಿಯ ಬಣ್ಣವುಳ್ಳವುಗಳೂ ಆಗಿ ಒಂದು ಕ್ರೋಶದಷ್ಟು ಉದ್ದವಾಗಿರುವ ರೆಕ್ಕೆಗಳೊಡಗೂಡಿದ್ದಿತು. ಅದು ತನ್ನ ಕೊಕ್ಕಿನ ಹೊಡೆತಗಳಿಂದ ಮಹತ್ತರವಾದ ಆ ಶಕ್ತಿಸೈನ್ಯವನ್ನೇ ಮರ್ದಿಸುತ್ತಿದ್ದಿತು.

ಅಥ ಫಾಲಮುಖಃ ಫಾಲಂ ಗೃಹೀತ್ವಾ ನಿಜಮಾಯುಧಂ ।
ಕಂಕಮಾರುಹ್ಯ ಸಮರಂ ಚಕಾರ ಗಿರಿಸಂನಿಭಂ ॥ ೪೭ ॥
ವಿಕಟಾಖ್ಯಶ್ಚ ದೈತ್ಯೇಂದ್ರಶ್ಚಮೂಭರ್ತಾ ಮಹಾಬಲಃ ।
ಭೇರುಂಡಪತಗಾರೂಢಃ ಪ್ರಚಂಡಂ ಯುದ್ಧಮಾತನೋತ್ ॥ ೪೮ ॥
ವಿಕಟಾನನನಾಮಾನಂ ವಿಲಸತ್ಪಟ್ಟಿಸಾಯುಧಂ ।
ಉವಾಹ ಸಮರೇ ಚಂಡಃ ಕುಕ್ಕುಟೋಽತಿಭಯಂಕರಃ ॥ ೪೯ ॥
ಗರ್ಜನ್ ಕಂಠಸ್ಥರೋಮಾಣಿ ಹರ್ಷಯನ್ ಜ್ವಲದೀಕ್ಷಣಃ ।
ಪಶ್ಯನ್ ಪುರಃ ಶಕ್ತಿಸೈನ್ಯಂ ಚಚಾಲ ಚರಣಾಯುಧಃ ॥ ೫೦ ॥
ಕರಾಲಾಕ್ಷಶ್ಚಮೂಭರ್ತಾ ಷಷ್ಠೋಽತ್ಯಂತಗರಿಷ್ಠದೋಃ ।
ವಜ್ರನಿಷ್ಠುರಘೋಷಶ್ಚ ಪ್ರಾಚಲತ್ಪ್ರೇತವಾಹನಃ ॥ ೫೧ ॥
ತಪಃಶ್ಮಶಾನಮಂತ್ರೇಣ ತೇನ ಸಂಸಾಧಿತಃ ಪುರಾ ।
ಪ್ರೇತೋ ಭೂತಸಮಾವಿಷ್ಟಸ್ತಮುವಾಹ ರಣಾಜಿರೇ ॥ ೫೨ ॥

---

೪೭. ಮಗದೊಬ್ಬನಾದ ಫಾಲಮುಖದೈತ್ಯನು ಫಾಲಾಯುಧವನ್ನು ಧರಿಸಿ ಪರ್ವತಕ್ಕೆ ಸಮಾನವಾದ ರಣಹದ್ದನ್ನೇರಿ ಕಾಳಗಮಾಡಿದನು.

೪೮. ಇನ್ನೊಬ್ಬ ಸೇನಾಧಿಪನಾದ ವಿಕಟನೆಂಬವನು ಪ್ರಚಂಡವಾದ ಭೇರುಂಡಪಕ್ಷಿಯಮೇಲೇರಿ ಆ ಶಕ್ತಿಸೇನೆಗಳೊಡನೆ ಹೋರಾಡಿದನು.

೪೯. ಫಳಫಳನೆ ಹೊಳೆಯುತ್ತಿರುವ ಪಟ್ಟಿಸಾಯುಧವನ್ನು ಧರಿಸಿದ್ದ ವಿಕಟಾನನನನ್ನು ಬಹು ಭಯಂಕರವಾದ ಕುಕ್ಕುಟವು ಹೊತ್ತು ಆ ರಣ ಭೂಮಿಯಲ್ಲಿ ನುಗ್ಗಿ ಹೊರಟಿತು.

೫೦. ಘಟ್ಟಿಯಾಗಿ ಕೂಗಿ, ಕಂಠಪ್ರದೇಶದ ರೋಮಗಳನ್ನು ನಿಮಿರಿಸುತ್ತ, ಪ್ರಜ್ವಲಿಸುತ್ತಿರುವ ಕಣ್ಣುಗಳಿಂದ ದುರದುರನೆ ನೋಡುತ್ತ ಆ ಕುಕ್ಕುಟವು ಸಮರಭೂಮಿಯಲ್ಲಿ ಮುನ್ನುಗ್ಗಿ ಹೊರಟಿತು.

೫೧. ಆರನೆಯ ಚಮೂಪತಿಯಾದ ಕರಾಳಾಕ್ಷನು ಬಹು ಶ್ರೇಷ್ಠವಾದ ಖಡ್ಗವನ್ನು ಧರಿಸಿ, ಸಿಡಿಲಿನಂತೆ ಕಠೋರವಾದ ಗರ್ಜನೆಯನ್ನು ಮಾಡುತ್ತ ಪ್ರೇತವನ್ನೇರಿ ಹೊರಟನು.

೫೨. ಶ್ಮಶಾನಮಂತ್ರಗಳಿಂದ ತಪಸ್ಸನ್ನಾಚರಿಸಿ ಕರಾಳಾಕ್ಷನು ಆ ಪ್ರೇತವಾಹನವನ್ನು ಸಂಪಾದಿಸಿದ್ದನು. ಅದರಲ್ಲಿ ಭೂತಗಳೆಲ್ಲವೂ ಅಡಗಿಕೊಂಡಿದ್ದವು. ಅಂತಹ ಪ್ರೇತವಾಹನವನ್ನೇರಿ ಅವನು ಯುದ್ಧಭೂಮಿಗೆ ಬಂದನು.

**ಅವಾಙ್ಮುಖೋ ದೀರ್ಘಬಾಹುಃ ಪ್ರಸಾರಿತಪದದ್ವಯಃ ।**
**ಪ್ರೇತೋ ವಾಹನತಾಂ ಪ್ರಾಪ್ತಃ ಕರಾಲಾಕ್ಷಮಥಾವಹತ್ ॥ ೫೩ ॥**
**ಅನ್ಯಃ ಕರಟಕೋ ನಾಮ ದೈತ್ಯಸೇನಾಶಿಖಾಮಣಿಃ ।**
**ಮರ್ದಯಾಮಾಸ ಶಕ್ತೀನಾಂ ಸೈನ್ಯಂ ವೇತಾಲವಾಹನಃ ॥ ೫೪ ॥**
**ಯೋಜನಾಯುತಮೂರ್ತಿಃ ಸ ವೇತಾಲಃ ಕ್ರೂರಲೋಚನಃ ।**
**ಶ್ಮಶಾನಭೂಮೌ ವೇತಾಲಮಂತ್ರೇಣಾನೇನ ಸಾಧಿತಃ ॥ ೫೫ ॥**
**ಮರ್ದಯಾಮಾಸ ಪೃತನಾಂ ಶಕ್ತೀನಾಂ ತೇನ ದೇಶಿತಃ ।**
**ತಸ್ಯ ವೇತಾಲವರ್ಯಸ್ಯ ವರ್ತಮಾನೋಂಸಸೀಮನಿ ।**
**ಬಹುಧಾಽಯುಧ್ಯತ ತದಾ ಶಕ್ತಿಭಿಃ ಸಹ ದಾನವಃ ॥ ೫೬ ॥**
**ಏವಮೇತೇ ಖಲಾತ್ಮಾನಃ ಸಪ್ತ ಸಪ್ತಾರ್ಣವೋಪಮಾಃ ।**
**ಶಕ್ತೀನಾಂ ಸೈನಿಕಂ ತತ್ರ ವ್ಯಾಕುಲೀಚಕ್ರುರುದ್ಧತಾಃ ॥ ೫೭ ॥**
**ತೇ ಸಪ್ತ ಪೂರ್ವಂ ತಪಸಾ ಸವಿತಾರಮತೋಷಯನ್ ।**
**ತೇನ ದತ್ತೋ ವರಸ್ತೇಷಾಂ ತಪಸ್ತುಷ್ಟೇನ ಭಾಸ್ವತಾ ॥ ೫೮ ॥**

---

೫೩. ಹಿಮ್ಮೊಗವೂ, ಉದ್ದನೆಯ ತೋಳುಗಳೂ, ಅಗಲಿಸಿದ ಕಾಲುಗಳೂ ಉಳ್ಳ ಆ ಪ್ರೇತವು ಕರಾಳಾಕ್ಷನಿಗೆ ವಾಹನವಾಗಿ ಅವನನ್ನು ಹೊತ್ತು ಹೊರಟಿತು.

೫೪. ಮತ್ತೊಬ್ಬ ಸೇನಾಧಿಪತಿಯಾದ ಕರಟಕನೆಂಬ ದಾನವನು ಭೇತಾಳವಾಹನವನ್ನೇರಿ ಆ ಶಕ್ತಿಸೇನೆಯನ್ನು ಮರ್ದಿಸತೊಡಗಿದನು.

೫೫. ಪೂರ್ವದಲ್ಲಿ ಅವನು, ಸ್ಮಶಾನಭೂಮಿಯಲ್ಲಿ ಕುಳಿತು ಭೇತಾಳ ಮಂತ್ರವನ್ನು ಪುನಶ್ಚರಣಮಾಡಿ ಅದರ ಫಲವಾಗಿ ಅದನ್ನು ಸ್ವಾಧೀನ ಪಡಿಸಿಕೊಂಡಿದ್ದನು.

೫೬. ಇಂತಹ ಭಯಂಕರ ಭೇತಾಳದ ಹೆಗಲನ್ನೇರಿ ಹೊರಟ ಆ ದಾನವನು ಶಕ್ತಿಸೇನೆಗಳ ಮೇಲೆ ಅನೇಕ ವಿಧವಾಗಿ ಕಾಳಗಮಾಡಿದನು.

೫೭. ಹೀಗೆ ದುರಾತ್ಮರೂ, ಸಪ್ತಸಾಗರಗಳಿಗೆ ಸಮಾನರೂ ಆದ ಆ ಸಪ್ತಸೇನಾಪತಿಗಳು ರಣಭೂಮಿಗೆ ನುಗ್ಗಿಬಂದು ಶಕ್ತಿಸೇನೆಗಳನ್ನೆಲ್ಲ ಕಲಕಿಬಿಟ್ಟರು.

೫೮. ಆ ಏಳುಮಂದಿ ದಾನವರೂ ಪೂರ್ವದಲ್ಲಿ ಸೂರ್ಯದೇವನನ್ನು ತಪಸ್ಸಿನಿಂದ ಸಂತೋಷಗೊಳಿಸಿದರು. ಅದರಿಂದ ಸಂತುಷ್ಟನಾದ ಸೂರ್ಯದೇವನು ಅವರಿಗೆ ವರವನ್ನು ಅನುಗ್ರಹಿಸಿದನು.

ಕೈಕಸೇಯಾ ಮಹಾಭಾಗಾ ಭವತಾಂ ತಪಸಾಧುನಾ ।
ಪರಿತುಷ್ಟೋಽಸ್ಮಿ ಭದ್ರಂ ವೋ ಭವಂತೋ ವೃಣ್ವತಾಂ ವರಂ ॥
ಇತ್ಯುಕ್ತೇ ದಿನನಾಥೇನ ಕೈಕಸೇಯಾಸ್ತಪಸ್ವಿತಃ ॥
ಪ್ರಾರ್ಥಯಾಮಾಸುರತ್ಯರ್ಥಂ ದುರ್ದಾಂತ ವರಮೀದೃಶಂ ॥ ೫೯ ॥
ರಣೇಷು ಸಂನಿಧಾತವ್ಯಮಸ್ಮಾಕಂ ನೇತ್ರಕುಕ್ಷಿಷು ।
ಭವತಾ ಘೋರತೇಜೋಭಿರ್ದಹತಾ ಪ್ರತಿರೋಧಿನಃ ॥ ೬೦ ॥
ತ್ವಯಾ ಯದಾ ಸಂನಿಹಿತಂ ತಪಸಾಸ್ಮಾಕಮಕ್ಷಿಷು ।
ತದಾಕ್ಷಿವಿಷಯಃ ಸರ್ವೋ ನಿಶ್ಚೇಷ್ಟೋ ಭವತಾತ್ಪ್ರಭೋ ॥ ೬೧ ॥
ತ್ವತ್ಸನ್ನಿಧಿಸಮೃದ್ಧೇನ ನೇತ್ರೇಣಾಸ್ಮಾಕಮೀಕ್ಷಿತಾಃ ।
ಸ್ತಬ್ಧಶಸ್ತ್ರಾ ಭವಿಷ್ಯಂತಿ ಪ್ರತಿರೋಧಕಸೈನಿಕಾಃ ॥ ೬೨ ॥
ತತಃ ಸ್ತಬ್ಧೇಷು ಶಸ್ತ್ರೇಷು ವೀಕ್ಷಣಾದೇವ ನಃ ಪ್ರಭೋ ।
ನಿಶ್ಚೇಷ್ಟಾ ರಿಪವೋಽಸ್ಮಾಭಿರ್ಹಂತವ್ಯಾಃ ಸುಕರತ್ವತಃ ॥ ೬೩ ॥
ಇತಿ ಪೂರ್ವಂ ವರಃ ಪ್ರಾಪ್ತಃ ಕೈಕಸೇಯೈರ್ದಿವಾಕರಾತ್ ।
ವರಪ್ರದಾನಂ ಯತ್ತತ್ರ ಯುದ್ಧೇ ಸಸ್ಮೇರುರುದ್ಧತಾಃ ॥ ೬೪ ॥

---

೫೯. "ಕೇಕಸಾಪುತ್ರರಾದ ಎಲೈ ದಾನವರೇ! ನಿಮ್ಮ ತಪಸ್ಸಿಗೆ ಮೆಚ್ಚಿ ಹರ್ಷಿಸಿದೆನು. ಎಲೈ ಮಹಾಭಾಗ್ಯವಂತರೇ!! ನಿಮಗೆ ಮಂಗಳವಾಗಲಿ. ಬೇಕಾದ ವರಗಳನ್ನು ಬೇಡಿರಿ" ಎಂದು ಸೂರ್ಯದೇವನು ನುಡಿಯಲು, ತಪಸ್ವಿಗಳಾದ ಆ ದಾನವರು ಮಹತ್ತರವಾದೊಂದು ವರವನ್ನು ಈ ರೀತಿ ಕೇಳಿಕೊಂಡರು :

೬೦. "ಎಲೈ ದಿವಾಕರನೇ! ಯುದ್ಧಸಮಯಗಳಲ್ಲಿ ನೀನು, ನಮ್ಮ ಕಣ್ಣುಗಳಲ್ಲಿ ನೆಲಸಿ ನಿನ್ನ ಘೋರ ತೇಜಸ್ಸಿನಿಂದಲೇ ನಮ್ಮ ಹಗೆಗಳನ್ನು ದಹಿಸಬೇಕು.

೬೧. ಎಲೈ ಪ್ರಭುವೇ! ನೀನು ನಮ್ಮ ಕಣ್ಣುಗಳಲ್ಲಿ ನೆಲಸಿರುವಾಗ ನಮ್ಮ ದೃಷ್ಟಿಗೆ ಬೀಳುವವರೆಲ್ಲರೂ ನಿಶ್ಚೇಷ್ಟಿತರಾಗಬೇಕು.

೬೨. ನೀನು ನಮ್ಮ ಕಣ್ಣುಗಳಲ್ಲಿ ನೆಲಸಿರುವ ಆ ಸಮಯದಲ್ಲಿಯೇ ನಮ್ಮ ದೃಷ್ಟಿಗೆ ಗೋಚರವಾಗುವ ಶತ್ರುಸೇನೆಯವರ ಶಸ್ತ್ರಗಳೆಲ್ಲ ಸ್ತಂಭಿಸಿ ಹೋಗಬೇಕು.

೬೩. ಹೀಗೆ ನಮ್ಮ ದೃಷ್ಟಿಯು ಬಿದ್ದೊಡನೆಯೇ ಶಸ್ತ್ರಸ್ತಂಭನವಾಗಿ ಅತ್ತಿತ್ತ ಕದಲದಿರುವ ಆ ಹಗೆಗಳನ್ನೆಲ್ಲಾ ನಾವು ಸುಲಭವಾಗಿ ಕೊಲ್ಲುವಂತೆ ಆಗಬೇಕು."

೬೪. ಎಲೈ ಕುಂಭಸಂಭವನೇ! ಈ ರೀತಿ, ಆ ಸಪ್ತಸೇನಾಧಿಪತಿಗಳೂ

**ಅಥ ಸೂರ್ಯಸಮಾವಿಷ್ಟನೇತ್ರೈಸ್ತೈರ್ವಿನಿರೀಕ್ಷಿತಾಃ ।**
**ಶಕ್ತಯಃ ಸ್ತಬ್ಧಶಸ್ತ್ರೌಘಾ ವಿಫಲೋತ್ಸಾಹತಾಂ ಗತಾಃ ॥ ೬೫ ॥**
**ಕೀಕಸಾತನಯೈಸ್ತೈಸ್ತು ಸಪ್ತಭಿಃ ಸತ್ತ್ವಶಾಲಿಭಿಃ ।**
**ವಿಷ್ಟಂಭಿತಾಸ್ತ್ರಶಸ್ತ್ರಾಣಾಂ ಶಕ್ತೀನಾಂ ನೋದ್ಯಮೋಽಭವತ್ ॥ ೬೬ ॥**
**ಉದ್ಯಮೇ ಕ್ರಿಯಮಾಣೇಽಪಿ ಶಸ್ತ್ರಸ್ತಂಭೇಸ ಭೂಯಸಾ ।**
**ಅಭಿಭೂತಾಃ ಸನಿಶ್ವಾಸಂ ಶಕ್ತಯೋ ಜೋಷಮಾಸತ ॥ ೬೭ ॥**
**ಅಥ ತೇಽವಸರಂ ಪ್ರಾಪ್ಯ ನಾನಾಪ್ರಹರಣೋದ್ಯತಾಃ ।**
**ವ್ಯಮರ್ದಯನ್ ಶಕ್ತಿಸೈನ್ಯಂ ದೈತ್ಯಾಃ ಸ್ವಸ್ವಾಮಿದರ್ಶಿತಾಃ ॥ ೬೮ ॥**
**ಶಕ್ತಯಸ್ತಾಸ್ತತ್ರ ಸೈನ್ಯೇ ನಿರ್ವ್ಯಾಪಾರನಿಜಾಯುಧಾಃ ।**
**ಅಕ್ಷೋಭ್ಯಂತ ಶರೈಸ್ತೇಷಾಂ ವಜ್ರಕಂಕಟಭೇದಿಭಿಃ ॥ ೬೯ ॥**
**ಶಕ್ತಯೋ ದೈತ್ಯಶಸ್ತ್ರಾಲಿ ವಿದ್ಧಗಾತ್ರಸ್ರುತಾಸೃಜಃ ।**
**ಸಪಲ್ಲವಾ ರಣೇ ರೇಜುಃ ಕಂಕೇಲಿಲತಿಕಾ ಇವ ॥ ೭೦ ॥**

---

ಸೂರ್ಯದೇವನಿಂದ ವರವನ್ನು ಪಡೆದಿದ್ದರು. ಮದೋದ್ಧತರಾದ ಅವರೆಲ್ಲರೂ ರಣಭೂಮಿಯಲ್ಲಿ ಆ ವರಪ್ರದಾನವನ್ನು ಸ್ಮರಿಸಿಕೊಂಡರು.

೬೫. ಸೂರ್ಯನು ಪ್ರವೇಶಿಸಿದ ನೇತ್ರಗಳುಳ್ಳ ಆ ದಾನವರು ದೃಷ್ಟಿಸಿ ನೋಡುತ್ತಲೇ ಶಕ್ತಿದೇವತೆಗಳೆಲ್ಲರಿಗೂ ಶಸ್ತ್ರಸ್ತಂಭನವಾಗಿ ಅವರ ಉತ್ಸಾಹವೇ ಉಡುಗಿಹೋಯಿತು.

೬೬. ಕೀಕಸೆಯ ಪುತ್ರರಾದ ಆ ಸಪ್ತಸೇನಾಪತಿಗಳೂ ಹೀಗೆ ಆ ಶಕ್ತಿಸೇನೆಗಳ ಅಸ್ತ್ರಶಸ್ತ್ರಗಳನ್ನು ಸ್ತಂಭನಗೊಳಿಸಿದೊಡನೆಯೇ ಅವರು ಕಾಳೆಗದಲ್ಲಿ ಯಾವ ಪ್ರಯತ್ನವನ್ನೂ ಮಾಡಲಾರದೆಹೋದರು.

೬೭. ಪ್ರಯತ್ನಮಾಡಿದರೂ, ಶಸ್ತ್ರಸ್ತಂಭನವಾಗಿದ್ದುದರಿಂದ ಏನು ಮಾಡಲೂ ಸಾಧ್ಯವಾಗದೆ ಅವರೆಲ್ಲರೂ ಸಿಟ್ಟುಸಿರಿಟ್ಟು ಸುಮ್ಮನಾದರು.

೬೮. ಆ ಸಮಯದಲ್ಲಿಯೇ ಸಪ್ತಸೇನಾಪತಿಗಳೂ ಬಗೆಬಗೆಯ ಆಯುಧಗಳನ್ನು ಧರಿಸಿ ತಮ್ಮ ಸ್ವಾಮಿಯ ಅಪ್ಪಣೆಯನ್ನು ನೆರವೇರಿಸುವವರಾಗಿ ಶಕ್ತಿಸೇನೆಯ ಮೇಲೆ ನುಗ್ಗಿ ಅದನ್ನು ಕುಟ್ಟಿಕೆಡವಲಾರಂಭಿಸಿದರು.

೬೯. ಶಕ್ತಿದೇವತೆಗಳಾದರೋ ನಿರಾಯುಧರೂ, ನಿಶ್ಚೇಷ್ಟಿತರೂ ಆಗಿದ್ದುದರಿಂದ, ವಜ್ರಕವಚಗಳನ್ನೇ ಭೇದಿಸುತ್ತಿರುವ ಆ ದಾನವರ ಬಾಣಗಳಿಂದ ಬಹಳವಾದ ಕ್ಷೋಭೆಗೆ ತುತ್ತಾದರು.

೭೦. ದೈತ್ಯರ ಶಸ್ತ್ರಸಮೂಹಗಳಿಂದ ಭೇದಿಸಿಹೋದ ಶರೀರಗಳುಳ್ಳ

ಹಾಹಾಕಾರಂ ವಿತನ್ವಾನಾಃ ಪ್ರಪನ್ನಾ ಲಲಿತೇಶ್ವರೀಂ ।
ಚುಕ್ರುಶುಃ ಶಕ್ತಯಸ್ಸರ್ವಾಸ್ತ್ರೈಃ ಸ್ತಂಭಿತನಿಜಾಯುಧಾಃ ॥ ೭೧ ॥
ಅಥ ದೇವ್ಯಾಜ್ಞಯಾ ದಂಡನಾಥಾ ಪ್ರತ್ಯಂಗರಕ್ಷಿಣೀ ।
ತಿರಸ್ಕರಿಣಿಕಾದೇವೀ ಸಮುತ್ತಸ್ಥೌ ರಣಾಜಿರೇ ॥ ೭೨ ॥
ತಮೋಲಿಪ್ತಾಹ್ವಯಂ ನಾಮ ವಿಮಾನಂ ಸರ್ವತೋಮುಖಂ ।
ಮಹಾಮಾಯಾ ಸಮಾರುಹ್ಯ ಶಕ್ತೀನಾಮಭಯಂ ವ್ಯಧಾತ್ ॥ ೭೩ ॥
ತಮಾಲಶ್ಯಾಮಲಾಕಾರಾ ಶ್ಯಾಮಕಂಚುಕಧಾರಿಣೀ ।
ಶ್ಯಾಮಚ್ಛಾಯೇ ತಮೋಲಿಪ್ತೇ ಶ್ಯಾಮಯುಗ್ಯತುರಂಗಮೇ ॥ ೭೪ ॥
ವಸಂತೀ ಮೋಹನಾಭಿಖ್ಯಂ ಧನುರಾದಾಯ ಸಸ್ವನಂ ।
ಸಿಂಹನಾದಂ ವಿನದ್ಯೈಷೂನವರ್ಷತ್ಸರ್ಪಸನ್ನಿಭಾನ್ ॥ ೭೫ ॥
ಕೃಷ್ಣರೂಪಭುಜಂಗಾಭಾಸಯೋಮುಸಲಸಂನಿಭಾನ್ ।
ಮೋಹನಾಸ್ತ್ರವಿನಿಷ್ಕ್ರಾಂತಾನ್ ದೈತ್ಯಾ ಬಾಣಾನ್ನ ಸೇಹಿರೇ ॥ ೭೬ ॥

---

ಶಕ್ತಿದೇವಿಯರೆಲ್ಲರೂ ಚಿಗುರೊಡೆದ ಕಂಕೇಲಿಲತೆಗಳಂತೆ ಕೆಂಪಗೆ ಕಾಣುತ್ತಿದ್ದರು.

೭೧. ತಮ್ಮ ಆಯುಧಗಳೆಲ್ಲವೂ ಸ್ತಂಭಿತವಾಗಿ ದೈತ್ಯಪೀಡೆಯು ಪ್ರಬಲವಾಗಲು, ಅವರೆಲ್ಲರೂ ಹಾಹಾಕಾರ ಮಾಡುತ್ತ ಶ್ರೀಲಲಿತಾ ಪರಮೇಶ್ವರಿಯನ್ನೇ ಶರಣುಹೊಕ್ಕರು.

೭೨. ಆಗಲಾ ದೇವಿಯ ಆಜ್ಞೆಯಂತೆ ಶ್ರೀದಂಡನಾಥಾದೇವಿಯ ಅಂಗರಕ್ಷಕಿಯಾದ ತಿರಸ್ಕರಿಣೀದೇವಿಯು ರಣರಂಗಕ್ಕೆ ಹೊರಟಳು.

೭೩. ಆ ಮಹಾಮಾಯೆಯು ಎಲ್ಲೆಡೆಗಳಲ್ಲಿಯೂ ಸಂಚರಿಸುವ ಸಾಮರ್ಥ್ಯವುಳ್ಳ ತಮೋಲಿಪ್ತವೆಂಬ ವಿಮಾನವನ್ನೇರಿ ಕುಳಿತು ಶಕ್ತಿದೇವಿಯರೆಲ್ಲರಿಗೂ ಅಭಯವಿತ್ತಳು.

೭೪-೭೫. ತಮಾಲಶ್ಯಾಮಲಾಕಾರೆಯಾದ ಆ ದೇವಿಯು ಕರಿಗುಪ್ಪಸವನ್ನು ತೊಟ್ಟು ಕರಿಹಗ್ಗಗಳಿಂದ ಬಿಗಿಸಿದ ಕರಿಗುದುರೆಗಳಿಂದ ಕಂಗೊಳಿಸುತ್ತಿರುವ ತಮೋಲಿಪ್ತವೆಂಬ ಆ ವಿಮಾನದಲ್ಲಿ ಕುಳಿತು ಮೋಹನವೆಂಬ ಧನುಸ್ಸನ್ನು ಹಿಡಿದು ಟಂಕಾರಗೊಳಿಸಿ ತಾನೂ ಸಿಂಹನಾದಮಾಡಿ ಸರ್ಪಸಮಾನಗಳಾದ ಬಾಣಗಳನ್ನು ಆ ದಾನವರ ಮೇಲೆ ಮಳೆಗರೆದಳು.

೭೬. ಮೋಹನಧನುಸ್ಸಿನಿಂದ ಬಿರುಸಾಗಿ ಬಂದು ಬೀಳುತ್ತಿರುವ ಕಾಳಸರ್ಪಗಳಿಗೆ ಸಮಾನವಾದ ಆ ಬಾಣಗಳನ್ನು ಸಹಿಸಿಕೊಳ್ಳಲು ದೈತ್ಯರಿಗೆ ಸಾಧ್ಯವಾಗದೆ ಹೋಯಿತು.

ಇತಸ್ತತೋ ಮೃದ್ಯಮಾನಾ ಮಹಾಮಾಯಾಶಿಲೀಮುಖೈಃ ।
ಪ್ರಕೋಪಂ ಪರಮಂ ಪ್ರಾಪ್ತಾ ಬಲಾಹಕಮುಖಾಃ ಖಲಾಃ ॥ ೭೭ ॥
ಅಥೋ ತಿರಸ್ಕರಿಣ್ಯಂಬಾ ದಂಡನಾಥಾನಿದೇಶತಃ ।
ಅಂಧಾಭಿಧಂ ಮಹಾಶಸ್ತ್ರಂ ಮುಮೋಚ ದ್ವಿಷತಾಂ ಗಣೇ ॥ ೭೮ ॥
ಬಲಾಹಕಾದ್ಯಾಸ್ತೇ ಸಪ್ತ ದಿನನಾಥವರೋದ್ಧತಾಃ ।
ಅಂಧಾಸ್ತ್ರೇಣ ನಿಜಂ ನೇತ್ರಂ ದಧಿರೇ ಛಾದಿತಂ ಯಥಾ ॥ ೭೯ ॥
ತಿರಸ್ಕರಿಣಿಕಾದೇವ್ಯಾ ಮಹಾಮೋಹನಧನ್ವನಃ ।
ಉದ್ಗತೇನಾಂಧಬಾಣೇನ ಚಕ್ಷೂಂಷಿ ತೇಷಾಂ ಪ್ಯಧೀಯತ ॥ ೮೦ ॥
ಅಂಧೀಕೃತಾಶ್ಚ ತೇ ಸಪ್ತ ನ ತು ಪ್ರೈಕ್ಷಂತ ಕಿಂಚನ ।
ತದ್ವೀಕ್ಷಣಸ್ಯ ವಿರಹಾಚ್ಛಸ್ತ್ರಸ್ತಂಭಃ ಕ್ಷಯಂ ಗತಃ ॥ ೮೧ ॥
ಪುನಃ ಸಸಿಂಹನಾದಂ ತಾಃ ಪ್ರೋತ್ಪತ್ಯಾಯುಧಪಾಣಯಃ ।
ಚಕ್ರುಃ ಸಮರಸನ್ನಾಹಂ ದೈತ್ಯಾನಾಂ ಪ್ರಜಿಘಾಂಸಯಾ ॥ ೮೨ ॥

---

೭೭. ಆ ಮಹಾಮಾಯೆಯ ಬಾಣಗಳಿಂದ ಎತ್ತೆತ್ತಲೂ ಗಾಸಿಗೊಂಡ ಬಲಾಹಕನೇ ಮೊದಲಾದ ದುಷ್ಟದೈತ್ಯರೆಲ್ಲರೂ ಬಹಳವಾದ ಕ್ರೋಧದಿಂದ ಕೆರಳಿಹೋದರು.

೭೮. ಆಗ, ಆ ತಿರಸ್ಕರಿಣೀದೇವಿಯು ತನ್ನ ಸ್ವಾಮಿನಿಯಾದ ಶ್ರೀ ದಂಡನಾಥಾದೇವಿಯ ಆಣತಿಯಂತೆ ಅಂಧಕವೆಂಬ ಮಹಾಸ್ತ್ರವನ್ನು ಶತ್ರುಗಳಮೇಲೆ ಪ್ರಯೋಗಿಸಿದಳು.

೭೯. ಸೂರ್ಯನ ವರದಿಂದ ಗರ್ವಿಸಿದ್ದ ಬಲಾಹಕನೇ ಮೊದಲಾದ ಆ ಏಳುಮಂದಿ ದಾನವರ ಕಣ್ಣುಗಳೂ ಅಂಧಾಸ್ತ್ರಪ್ರಭಾವದಿಂದ ಮುಚ್ಚಿದಂತಾದವು.

೮೦. ತಿರಸ್ಕರಿಣೀದೇವಿಯು ತನ್ನ ಮೋಹನ ಧನುಸ್ಸಿನ ಮೂಲಕ ಪ್ರಯೋಗಿಸಿದ ಅಂಧಾಸ್ತ್ರದಿಂದ ಅವರ ಕಣ್ಣುಗಳೇ ಇಂಗಿಹೋದವು.

೮೧. ಕುರುಡರಾದ ಅವರು ಏನನ್ನೂ ನೋಡಲಾರದೆ ಹೋದರು. ಅವರ ದೃಷ್ಟಿಯು ಎಲ್ಲಿಯೂ ಬೀಳದಿದ್ದುದರಿಂದ ಶಸ್ತ್ರಸ್ತಂಭನವೂ ಕಳೆದು ಹೋಯಿತು.

೮೨. ಕೂಡಲೇ ಶಕ್ತಿದೇವಿಯರೆಲ್ಲರೂ ತಂತಮ್ಮ ಆಯುಧಗಳನ್ನೆತ್ತಿ ಸಿಂಹನಾದ ಮಾಡುತ್ತ ಆ ದಾನವರೆಲ್ಲರನ್ನೂ ಕೊಲ್ಲಲಪೇಕ್ಷಿಸಿ ಸಮರ ಸನ್ನದ್ಧರಾದರು.

ತಿರಸ್ಕರಿಣಿಕಾದೇವೀಮಗ್ರೇ ಕೃತ್ವಾ ಮಹಾಬಲಾಂ ।
ಸದುಪಾಯಪ್ರಸಂಗೇನ ಭೃಶಂ ರುಷ್ಟ್ವಾ ರಣಂ ವ್ಯಧುಃ ॥ ೮೩ ॥
ಸಾಧು ಸಾಧು ಮಹಾಭಾಗೇ ತಿರಸ್ಕರಿಣಿಕಾಂಬಿಕೇ ।
ಸ್ಥಾನೇ ಕೃತಸ್ತಿರಸ್ಕಾರೋ ದೃಶಾಮೇಷಾಂ ದುರಾತ್ಮನಾಂ ॥ ೮೪ ॥
ತ್ವಂ ಹಿ ದುರ್ಜನನೇತ್ರಾಣಾಂ ತಿರಸ್ಕಾರಮಹೌಷಧಿಃ ।
ತ್ವಯಾ ಬದ್ಧದೃಶಾನೇನ ದೈತ್ಯಚಕ್ರೇಣ ಭೂಯತೇ ॥ ೮೫ ॥
ದೇವಕಾರ್ಯಮಿದಂ ದೇವಿ ತ್ವಯಾ ಸಮ್ಯಗನುಷ್ಠಿತಂ ।
ಅಸ್ಮಾದೃಶಾಮಜಯ್ಯೇಷು ಯದೇಷು ವ್ಯಸನಂ ಕೃತಂ ॥ ೮೬ ॥
ತತ್ತ್ವಯೈವ ದುರಾಚಾರಾನೇತಾನ್ ಸಪ್ತ ಮಹಾಸುರಾನ್ ।
ನಿಹತಾಂಲ್ಲಲಿತಾ ಶ್ರುತ್ವಾ ಸಂತೋಷಂ ಪರಮಾಪ್ಸ್ಯತಿ ॥ ೮೭ ॥
ಏವಂ ತ್ವಯಾ ವಿರಚಿತೇ ದಂಡಿನೀ ಪ್ರೀತಿಮಾಪ್ಸ್ಯತಿ ।
ಮಂತ್ರಿಣ್ಯಪಿ ಮಹಾಭಾಗಾ ಯಾಸ್ಯತ್ಯೇವ ಪರಾಂ ಮುದಂ ॥ ೮೮ ॥

---

೮೩. ಅವರೆಲ್ಲರೂ ತಿರಸ್ಕರಣೀದೇವಿಯನ್ನು ಮುಂದಿಟ್ಟುಕೊಂಡು ಸಮರದಲ್ಲಿ ಆಕೆಯು ಮಾಡಿದ ಸದುಪಾಯವನ್ನು ಕಂಡು ಹರ್ಷಿಸಿ ದೈತ್ಯರಮೇಲೆ ಕೋಪಗೊಂಡು ಯುದ್ಧಮಾಡಲುಪಕ್ರಮಿಸಿದರು.

೮೪. "ಎಲೌ ಮಹಾಭಾಗೇ! ತಿರಸ್ಕರಣೀದೇವಿ!! ಸಾಧು, ಸಾಧು!!! ಒಳ್ಳೆಯ ಕಾರ್ಯವನ್ನೇ ಮಾಡಿದೆ. ದುರಾತ್ಮರಾದ ಈ ದೈತ್ಯರ ಕಣ್ಣುಗಳನ್ನು ಸರಿಯಾದ ಸಮಯದಲ್ಲಿ ನಾಶಮಾಡಿದುದು ಒಳ್ಳೆಯದೇ ಆಯಿತು.

೮೫. ಈ ದುಷ್ಟರ ಕಣ್ಣುಗಳನ್ನು ಕಳೆಯುವುದರಲ್ಲಿ ನೀನು ಮಹೌಷಧಿಯಂತಿರುವೆ. ಈ ದೈತ್ಯಸೈನ್ಯದ ನೇತ್ರಸ್ತಂಭನದಿಂದ ನಿನ್ನ ಸಾಮರ್ಥ್ಯವು ಬಹಳವಾಗಿ ಪ್ರಕಾಶಿಸುತ್ತಿರುವುದು.

೮೬. ದೇವತೆಗಳಿಗೆ ಸಂತೋಷವನ್ನುಂಟುಮಾಡುವ ಈ ಕಾರ್ಯವನ್ನು ನೀನು ಬಹಳ ಚೆನ್ನಾಗಿಯೇ ನೆರವೇರಿಸಿದೆ. ನಮ್ಮೆಲ್ಲರಿಗೂ ಜಯಿಸಲಸಾಧ್ಯರಾದ ಈ ದೈತ್ಯರನ್ನು ಈ ರೀತಿ ಬಾಧೆಗೊಳಿಸಿದುದು ಬಹಳ ಒಳ್ಳೆಯದಾಯಿತು.

೮೭. ಎಲೆ ತಾಯೇ! ದುರಾಚಾರರಾದ ಈ ಸಪ್ತಸೇನಾಪತಿಗಳನ್ನು ನೀನೇ ಸಂಹರಿಸು. ಈ ವೃತ್ತಾಂತವನ್ನು ಕೇಳಿ ಒಡತಿಯಾದ ಶ್ರೀ ಲಲಿತಾಪರಮೇಶ್ವರಿಯು ಪರಮಾನಂದಭರಿತೆಯಾಗುವಳು.

೮೮. ನೀನು ಈ ರೀತಿ ಮಾಡುವುದರಿಂದ ಶ್ರೀ ದಂಡನಾಥಾ

ತಸ್ಮಾತ್ತ್ವಮೇತಾನ್ ಸಪ್ತೈವ ನಿಗೃಹಾಣ ರಣಾಜಿರೇ ।
ಏಷಾಂ ಸೈನ್ಯಂ ತು ಸಕಲಂ ನಾಶಯಾಮ ಉದಾಯುಧಾಃ ॥ ೮೯ ॥
ಇತ್ಯುಕ್ತ್ವಾ ಪ್ರೇರಿತಾ ತಾಭಿಃ ಶಕ್ತಿಭಿರ್ಯುದ್ಧಕೌತುಕಾತ್ ।
ತಮೋಲಿಪ್ತೇನ ಯಾನೇನ ಬಲಾಹಕಬಲಂ ಯಯೌ ॥ ೯೦ ॥
ಅಸ್ತ್ರೇಣ ಚ ರುಷಾ ಚಾಂಧಂ ಬಲಾಹಕಮಹಾಸುರಂ ।
ಆಕೃಷ್ಯ ಕೇಶೇಷ್ವಸಿನಾ ಚಕರ್ತಾಂತರ್ಧಿದೇವತಾ ॥ ೯೧ ॥
ತಸ್ಯ ವಾಹನಗೃಧ್ರಸ್ಯ ಲುನಾನಾ ಪತ್ರಿಣಾ ಶಿರಃ ।
ಸೂಚೀಮುಖಸ್ಯಾಭಿಮುಖಂ ತಿರಸ್ಕರಿಣಿಕಾವ್ರಜತ್ ॥ ೯೨ ॥
ತಸ್ಯ ಪಟ್ಟಿಸಪಾತೇನ ವಿಲೂಯ ಕಠಿನಂ ಶಿರಃ
ಅನ್ಯೇಷಾಮಪಿ ಪಂಚಾನಾಂ ಪಂಚತ್ವಮಕರೋಚ್ಛರೈಃ ॥ ೯೩ ॥
ತೈಃ ಸಪ್ತದೈತ್ಯಮುಂಡೈಶ್ಚ ಗ್ರಥಿತಾನ್ಯೋನ್ಯಕೇಶಕೈಃ॥
ಹಾರದಾಮ ಗಲೇ ಕೃತ್ವಾ ನನರ್ತಾಂತರ್ಧಿದೇವತಾ ॥ ೯೪ ॥

---

ದೇವಿಯೂ ಸುಪ್ರೀತಳಾಗುತ್ತಾಳೆ. ಮಂತ್ರಿಣೀದೇವಿಯೂ ಬಹಳವಾಗಿ ಸಂತೋಷಿಸುವಳು.

೮೯. ಆದುದರಿಂದ, ಎಲೈ ದೇವಿಯೇ! ನೀನೇ ಈ ಸಪ್ತಸೇನಾಪತಿಗಳನ್ನೂ ಸಂಹರಿಸು. ಶಸ್ತ್ರಧಾರಿಣಿಯರಾದ ನಾವು ಇವರ ಸೇನೆಯೆಲ್ಲವನ್ನೂ ಧ್ವಂಸಗೊಳಿಸುವೆವು."

೯೦. ಈ ರೀತಿ ಶಕ್ತಿದೇವಿಯರೆಲ್ಲರೂ ಪ್ರಶಂಸೆಮಾಡಿ ಪ್ರೇರೇಪಿಸಲು ಆ ತಿರಸ್ಕರಿಣೀದೇವಿಯು ತಮೋಲಿಪ್ತವೆಂಬ ವಿಮಾನದಲ್ಲಿ ಕುಳಿತೇ ಯುದ್ಧಮಾಡಬಯಸಿ ಬಲಾಹಕನ ಸೇನೆಯಿದ್ದೆಡೆಗೆ ಬಂದಳು.

೯೧. ಆಗ, ಆ ದೇವಿಯು ಅಂಧಾಸ್ತ್ರದಿಂದಲೂ, ಕೋಪದಿಂದಲೂ, ಕುರುಡನಾಗಿದ್ದ ಬಲಾಹಕದೈತ್ಯನ ಬಳಿಸಾರಿ ಅವನ ತಲೆಗೂದಲನ್ನು ಹಿಡಿದೆತ್ತಿ ಕತ್ತಿಯಿಂದ ಅವನ ತಲೆಯನ್ನು ಕತ್ತರಿಸಿದಳು.

೯೨-೯೩. ಆ ದಾನವನ ವಾಹನವಾದ ಗೃಧ್ರದ ರೆಕ್ಕೆಗಳನ್ನು ಕತ್ತರಿಸಿದ ತರುವಾಯ, ಆಕೆಯು ಸೂಚೀಮುಖನ ಸಮೀಪಕ್ಕೆ ಹೋಗಿ ಪಟ್ಟಿಸಾಯುಧದಿಂದ ಕಠಿನವಾದ ಅವನ ತಲೆಯನ್ನು ಕಡಿದುಹಾಕಿದಳು. ಅಲ್ಲದೆ ಉಳಿದೈವರು ದಾನವಸೇನಾಪತಿಗಳನ್ನೂ ತೀಕ್ಷ್ಣವಾದ ತನ್ನ ಬಾಣಗಳಿಂದ ಮೃತಿಹೊಂದಿಸಿದಳು.

೯೪. ಇದಾದಮೇಲೆ ಆ ತಿರಸ್ಕರಿಣೀದೇವಿಯು ಆ ಏಳುಮಂದಿ

ಸಮಸ್ತಮಪಿ ತತ್ಸೈನ್ಯಂ ಶಕ್ತಯಃ ಕ್ರೋಧಮೂರ್ಛಿತಾಃ ।
ಹತ್ವಾ ತದ್ರಕ್ತಸಲಿಲೈರ್ಬಹ್ವೀಃ ಪ್ರಾವಾಹಯನ್ನದೀಃ ॥ ೯೫ ॥
ತತ್ರಾಶ್ಚರ್ಯಮಭೂದ್ಭೂರಿ ಮಹಾಮಾಯಾಂಬಿಕಾ ಕೃತಂ ।
ಬಲಾಹಕಾದಿಸೇನಾನೀದೃಷ್ಟಿರೋಧನವೈಭವಾತ್ ॥ ೯೬ ॥
ಹತಶಿಷ್ಟಾಃ ಕತಿಪಯೇ ಬಹುವಿತ್ರಾಸಸಂಕುಲಾಃ ।
ಶರಣಂ ಜಗ್ಮುರತ್ಯಾರ್ತಾಃ ಕ್ರಂದಂತಃ ಶೂನ್ಯಕೇಶ್ವರಂ ॥ ೯೭ ॥
ದಂಡಿನೀ ಚ ಮಹಾಮಾಯಾಂ ಪ್ರಶಂಸಂತೀ ಪುನಃ ಪುನಃ ।
ಪ್ರಸಾದಮಂಥರಂ ಚಕ್ಷುಸ್ತಸ್ಯಾಮಾಧಾಯ ಪಿಪ್ರಿಯೇ ॥ ೯೮ ॥
ಸಾಧು ಸಾಧ್ವಿತಿ ತತ್ರಸ್ಥಾಃ ಶಕ್ತಯಃ ಕಂಪಮೌಲಯಃ ।
ತಿರಸ್ಕರಿಣಿಕಾಂ ದೇವೀಮಶ್ಲಾಘಂತ ಪದೇ ಪದೇ ॥ ೯೯ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಏಕೋನವಿಂಶೋಽಧ್ಯಾಯಃ

---

ದಾನವಸೇನಾನಿಗಳ ಮುಂಡಗಳನ್ನೂ ಸೇರಿಸಿ ಮಾಲೆಮಾಡಿ ತನ್ನ ಕಂಠದಲ್ಲಿ ಧರಿಸಿಕೊಂಡು ಆ ರಣರಂಗದಲ್ಲಿ ನರ್ತಿಸತೊಡಗಿದಳು.

೯೫. ಶಕ್ತಿದೇವಿಯರಾದರೋ, ಕ್ರೋಧಪರವಶರಾಗಿ, ದಾನವಸೇನೆಗಳನ್ನೆಲ್ಲ ಸಂಹರಿಸಿ ಅಸಂಖ್ಯಾಕವಾದ ರಕ್ತಪ್ರವಾಹಗಳನ್ನು ಹರಿಸಿದರು.

೯೬. ಬಲಾಹಕನೇ ಮೊದಲಾದವರ ಸೇನೆಗಳೆಲ್ಲಕ್ಕೂ ದೃಷ್ಟಿಸ್ತಂಭನವಾಗಿದ್ದುದರಿಂದ ಮಹಾಮಾಯೆಯಾದ ಆ ತಿರಸ್ಕರಿಣೀದೇವಿಯ ಈ ಕಾರ್ಯವು ಅತ್ಯಾಶ್ಚರ್ಯಕರವಾಗಿ ಪರಿಣಮಿಸಿತು.

೯೭. ಯುದ್ಧದಲ್ಲಿ ಮೃತರಾಗದೆ ಕಳೆದುಳಿದ ಕೆಲವುಮಂದಿ ದೈತ್ಯರು ಬಹು ಹಿಂಸೆಗೊಳಗಾಗಿ ಘಟ್ಟಿಯಾಗಿ ಕಿರುಚುತ್ತಾ ಓಡಿಹೋಗಿ ಶೂನ್ಯಕನಗರಾಧಿಪತಿಯಾದ ಭಂಡಾಸುರನ ಬಳಿಗೈದಿ ಅವನನ್ನೇ ಮೊರೆಹೊಕ್ಕರು.

೯೮. ಆಗ ಶ್ರೀ ದಂಡನಾಥಾದೇವಿಯು, ಆ ಮಹಾಮಾಯೆಯನ್ನು ಅಡಿಗಡಿಗೂ ಪ್ರಶಂಸಿಸಿದಳು. ಆ ದೇವಿಯು ಪ್ರಸಾದಪೂರ್ಣವಾದ ತನ್ನ ದೃಷ್ಟಿಯನ್ನು ಆಕೆಯಮೇಲೆ ನಟ್ಟು ಬಹಳವಾಗಿ ಸಂತೋಷಿಸಿದಳು.

೯೯. ಅಲ್ಲಿದ್ದ ಶಕ್ತಿದೇವಿಯರೆಲ್ಲರೂ "ಭಲೆ, ಭಲೆ" ಎಂದು ಆ ತಿರಸ್ಕರಿಣೀದೇವಿಯನ್ನು ಮತ್ತೆಮತ್ತೆ ಕೊಂಡಾಡಿ ತಲೆದೂಗಿದರು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ವಿಂಶೋಽಧ್ಯಾಯಃ

[ವಿಷಂಗಾದಿ ದಾನವವೀರಾಣಾಂ ಪಲಾಯನಂ]

ನಿತ್ಯಾಭಿರ್ವರಶಕ್ತಿಭಿಃ ಪರಶಿವಾ ದಿವ್ಯಾಂಶಸದ್ಭೂತಿಭಿಃ
ಸೇನಾನಾಯಕಸಂಯುತೋ ನಿಶಿ ಖಲೋ ಮಾಯಾವಿಷಂಗೋ ಯುಧಿ।
ದಿವ್ಯಾಸ್ತ್ರಾಭಿಯುತೋ ಬಲೀ ತು ಸಹಸಾ ದೂರಂ ಗತೋಽಭೂಜ್ಜಿತಃ
ತಾಮೇತಾಂ ಶಿವಸುಂದರೇಶಮಹಿಷೀಂ ಕಾಮೇಶ್ವರೀಂ ತ್ವಾಂ ಭಜೇ ॥

ಶ್ರೀ ಹಯಗ್ರೀವಃ—

**ತತಃ ಶ್ರುತ್ವಾ ವಧಂ ತೇಷಾಂ ತಪೋಬಲವತಾಮಪಿ ।**
**ನಿಃಶ್ವಸನ್ ಕೃಷ್ಣಸರ್ಪೇಂದ್ರ ಇವ ಭಂಡಮಹಾಸುರಃ ॥ ೧ ॥**
**ಏಕಾಂತೇ ಮಂತ್ರಯಾಮಾಸ ಸಮಾಹೂಯ ಸಹೋದರೌ ।**
**ಭಂಡಃ ಪ್ರಚಂಡಶೌಂಡೀರ್ಯಃ ಕಾಂಕ್ಷಮಾಣೋ ರಣೇ ಜಯಂ**
**ಯುವರಾಜೋ ವಿಶುಕ್ರೋಽಥ ವಿಷಂಗೇಣ ಯವೀಯಸಾ ।**
**ಭಂಡಾಸುರಂ ನಮಸ್ಕೃತ್ಯ ಮಂತ್ರಸ್ಥಾನಮುಪಾವಿಶತ್ ॥ ೨ ॥**

---

### ಕನ್ನಡದ ಅನುವಾದ

[ವಿಷಂಗನೇ ಮೊದಲಾದ ದೈತ್ಯವೀರರು ಸಮರಭೂಮಿಯಿಂದ ಪಲಾಯನವಾದುದು]

೧. ಹಯಗ್ರೀವಮುನಿಯು ಹೇಳುತ್ತಾನೆ:—ಬಳಿಕ, ದೈತ್ಯಸಾರ್ವಭೌಮನಾದ ಭಂಡಾಸುರನು ತಪಸ್ಸುಮಾಡಿ ಅತಿಶಯವಾದ ಬಲವನ್ನು ಸಂಪಾದಿಸಿಕೊಂಡಿದ್ದ ಸಪ್ತಸೇನಾಧಿಪತಿಗಳೂ ಸಮರಾಂಗಣದಲ್ಲಿ ಹತರಾದ ಸುದ್ದಿಯನ್ನು ಕೇಳಿ ಕೃಷ್ಣಸರ್ಪದಂತೆ ನಿಟ್ಟುಸಿರ್ಗರೆದನು.

೨. ಪ್ರಚಂಡಪರಾಕ್ರಮಿಯಾದ ಆ ದಾನವನು ಸಮರದಲ್ಲಿ ವಿಜಯವನ್ನು ಪಡೆಯಬಯಸಿ ರಹಸ್ಯವಾಗಿಯೇ ತನ್ನ ತಮ್ಮಂದಿರಾದ ವಿಷಂಗ ವಿಶುಕ್ರರನ್ನು ಮಂತ್ರಾಲೋಚನೆಗಾಗಿ ಕರೆಯಿಸಿದನು.

೩. ಯುವರಾಜನಾದ ಆ ವಿಶುಕ್ರನು ಕಿರಿಯನಾದ ವಿಷಂಗನೊಡನೆ ತಂದು ಅಣ್ಣನಾದ ಭಂಡಾಸುರನನ್ನು ನಮಸ್ಕರಿಸಿ ಮಂತ್ರಾಲೋಚನಾ ಸಭೆಯನ್ನು ಪ್ರವೇಶಿಸಿ ಅಲ್ಲಿಯೇ ಕುಳಿತುಕೊಂಡನು.

ಅತ್ಯಾಪ್ತೈರ್ಮಂತ್ರಿಭಿರ್ಯುಕ್ತಃ ಕುಟಿಲಾಕ್ಷಪುರೋಗಮೈಃ ।
ಲಲಿತಾವಿಜಯೇ ಮಂತ್ರಂ ಚಕಾರ ಕ್ವಥಿತಾಶಯಃ ॥ ೪ ॥

ಭಂಡಃ—

ಅಹೋ ಬತ ಕುಲಭ್ರಂಶಃ ಸಮಾಯಾತಃ ಸುರದ್ವಿಷಾಂ ।
ಉಪೇಕ್ಷಾಮಧುನಾ ಕರ್ತುಂ ಪ್ರವೃತ್ತೋ ಭಗವಾನ್ ವಿಧಿಃ ॥ ೫ ॥
ಮದ್ಭೃತ್ಯನಾಮಮಾತ್ರೇಣ ವಿದ್ರವಂತಿ ದಿವೌಕಸಃ ।
ತಾದೃಶಾನಾಮಿಹಾಸ್ಮಾಕಮಾಗತೋಽಯಂ ವಿಪರ್ಯಯಃ ॥ ೬ ॥
ಕರೋತಿ ಬಲಿನಂ ಕ್ಲೀಬಂ ಧನಿನಂ ಧನವರ್ಜಿತಂ ।
ದೀರ್ಘಾಯುಷಮನಾಯುಷ್ಕಂ ದುರ್ದಾಂತಾ ಭವಿತವ್ಯತಾ ॥ ೭ ॥
ಕ್ವ ಸತ್ತ್ವಮಸ್ಮದ್ಬಾಹೂನಾಂ ಕ್ವೇಯಂ ದುರ್ಲಲಿತಾ ವಧೂಃ ।
ಅಕಾಂಡ ಏವ ವಿಧಿನಾ ಪಾತ್ಯತೇ ನಿಷ್ಠುರಃ ಪವಿಃ ॥ ೮ ॥

---

೪. ಮನಸ್ಸೇ ಕಲಕಿ ಕುಗ್ಗಿಹೋಗಿರುವ ಭಂಡಾಸುರನಾದರೋ ಶ್ರೀ ಲಲಿತಾದೇವಿಯನ್ನು ಜಯಿಸುವ ವಿಷಯದಲ್ಲಿ ಕುಟಿಲಾಕ್ಷನೇ ಮೊದಲಾದ ಕೇವಲ ಆಪ್ತರಾದ ಮಂತ್ರಿಗಳೊಡನೆ ಈ ರೀತಿ ಆಲೋಚನೆ ಮಾಡಿದನು :

೫. "ಅಕಟಾ ! ದೇವಶತ್ರುಗಳಾದ ನಮ್ಮ ದಾನವರೆಲ್ಲರಿಗೂ ಸಮೂಹನಾಶವೇ ಒದಗಿಬಂದಿತಲ್ಲಾ ! ಸರ್ವತಂತ್ರಸ್ವತಂತ್ರವೆನಿಸಿದ ವಿಧಿಯು ಈಗ ನಮ್ಮನ್ನು ಉಪೇಕ್ಷಿಸಲು ಮೊದಲುಮಾಡಿದೆ.

೬. ಹಿಂದೆ ಯಾರ ಹೆಸರುಗಳನ್ನು ಕೇಳಿದೊಡನೆಯೇ ದೇವತೆಗಳೆಲ್ಲರೂ ಪಲಾಯನವಾಗುತ್ತಿದ್ದರೋ ಅಂತಹ ನಮ್ಮ ಭಟರಿಗೆ ಇದೀಗ ಅಳಿಗಾಲವು ಬಂದಿದೆ.

೭. ಭವಿತವ್ಯತೆಯು ಯಾರಿಂದಲೂ ಜಯಿಸಲಸದಳವಾದುದೇ. ಮಹಾಬಲವತ್ತರವಾದ ಆ ಭವಿತವ್ಯತೆಯು ದುರ್ಬಲನನ್ನು ಸಬಲನನ್ನಾಗಿಯೂ, ಧನವಂತನನ್ನು ದರಿದ್ರನನ್ನಾಗಿಯೂ, ದೀರ್ಘಾಯುಸ್ಸುಳ್ಳವನನ್ನು ಅಲ್ಪಾಯುಷ್ಯವಂತನನ್ನಾಗಿಯೂ ಮಾಡುತ್ತದೆ.

೮. ನಮ್ಮ ಭುಜಬಲವೆಲ್ಲಿ? ದುಷ್ಟೆಯಾದ ಆ ಲಲಿತೆಯೆಲ್ಲಿ? ವಿಧಿಯು ಇದ್ದಕ್ಕಿದ್ದಂತೆಯೇ ಒಂದೇತಡವೆ ನಮ್ಮಮೇಲೆ ವಜ್ರಾಯುಧವನ್ನು ಎತ್ತಿಹಾಕುವಂತಿದೆ!

ಸರ್ಪಿಣೀಮಾಯಯೋದಗ್ರಾಸ್ತಯಾ ದುರ್ದಾಂತಶೌರ್ಯಯಾ ।
ಅಧಿಸಂಗ್ರಾಮಭೂಚಕ್ರಂ ಸೇನಾನ್ಯೋ ವಿನಿಪಾತಿತಾಃ ॥ ೯ ॥
ವರಪ್ರಸಾದಾದ್ದೇವಸ್ಯ ದಿವಸಾನಾಮಧೀಶಿತುಃ ।
ಕವಲೀಕೃತಗೀರ್ವಾಣಾಃ ಕೈಕಸೇಯಾಶ್ಚ ಪಾತಿತಾಃ ॥ ೧೦ ॥
ಏವಮುದ್ದಾಮದರ್ಪಾಂಧಾ ವನಿತಾ ಕಾಪಿ ಮಾಯಿನೀ ।
ಯದಿ ಸಂಪ್ರಹರತ್ಯಸ್ಮಾನ್ ಧಿಗ್ಬಲಂ ನೋ ಭುಜಾರ್ಜಿತಂ ॥ ೧೧ ॥
ಇಮಂ ಪ್ರಸಂಗಂ ವಕ್ತುಂ ಚ ಜಿಹ್ವಾ ಜಿಹ್ವೇತಿ ಮಾಮಕೀ ।
ವನಿತಾ ಕಿಮು ಮತ್ಸೈನ್ಯಂ ಮರ್ದಯಿಷ್ಯತಿ ದುರ್ಮದಾ ॥ ೧೨ ॥
ತದತ್ರ ಮೂಲಚ್ಛೇದಾಯ ತಸ್ಯಾ ಯತ್ನೋ ವಿಧೀಯತಾಂ ।
ಮಯಾ ಚಾರಮುಖಾಜ್ಜ್ಞಾತಾ ತಸ್ಯಾ ವೃತ್ತಿರ್ಮಹಾಬಲಾ ॥
ಸರ್ವೇಷಾಮಪಿ ಸೈನ್ಯಾನಾಂ ಪಶ್ಚಾದೇವಾವತಿಷ್ಠತೇ ।
ಅಗ್ರತಶ್ಚಲಿತಂ ಸೈನ್ಯಂ ಹಯಹಸ್ತಿರಥಾದಿಕಂ ॥ ೧೪ ॥

---

೯. ತಡೆಯಲಸಾಧ್ಯವಾದ ಪರಾಕ್ರಮವಿದ್ದರೂ, ಸರ್ಪಿಣೀ ಮಾಯೆಯ ಸಹಾಯವಿದ್ದರೂ ಆ ಸಪ್ತಸೇನಾನಿಗಳೂ ಸಮರ ಭೂಮಿಯಲ್ಲಿ ಹತರಾದರು.

೧೦. ಅಯ್ಯೋ! ಸೂರ್ಯದೇವನ ವರವನ್ನು ಪಡೆದು ದೇವತೆಗಳೆಲ್ಲ ರನ್ನೂ ಕಬಳಿಸುತ್ತಿದ್ದ ಕೇಕಸೆಯ ಆ ಮಕ್ಕಳೆಲ್ಲರೂ ಮಡಿದುಹೋದರೇ!

೧೧. ಮಾಯಾವಿನಿಯಾದ ಒಬ್ಬ ಹೆಂಗಸು ಅತ್ಯಂತ ಪರಾಕ್ರಮ ಶಾಲಿನಿಯಾಗಿ ಆ ಕೊಬ್ಬಿನಿಂದಲೇ ಕುರುಡಾಗಿ ನಮ್ಮನ್ನು ಈ ರೀತಿ ಹೊಡೆಯುತ್ತಿರುವಳೆಂದಮೇಲೆ ನಾವು ಸಂಪಾದಿಸಿರುವ ಭುಜಬಲ ಪರಾಕ್ರಮಕ್ಕಷ್ಟು ಧಿಕ್ಕಾರವಿರಲಿ!

೧೨. ಅಹಹಾ! ಈ ವಿಷಯವನ್ನು ಹೇಳುತ್ತಿರುವ ನನ್ನ ನಾಲಗೆಯೂ ನಾಲಗೆಯೇ? ಏನು ಏನು? ನಮ್ಮ ಸೈನ್ಯವನ್ನು ದುರ್ಮದೆಯಾದ ವನಿತೆಯೊಬ್ಬಳು ಮರ್ದಿಸುವಳೇ!

೧೩. ಅಯ್ಯಾ! ನೀವೆಲ್ಲರೂ, ಈ ವಿಷಯದಲ್ಲಿ ಚೆನ್ನಾಗಿ ಆಲೋಚಿಸಿ ಆ ದುಷ್ಟೆಯ ಹುಟ್ಟನ್ನೇ ಅಡಗಿಸುವ ಪ್ರಯತ್ನವನ್ನು ಮಾಡಿರಿ. ಅವಳು ಬಹು ಬಲಾಢ್ಯಳೆಂಬ ವಿಷಯವನ್ನು ನಾನು ಗೂಢಚಾರರಿಂದ ಕೇಳಿಬಲ್ಲೆನು.

೧೪. ಅವಳು ತನ್ನ ಸೈನ್ಯಗಳ ಹಿಂದೆಯೇ ಇರುತ್ತಾಳಂತೆ; ಆನೆ ಕುದುರೆ ರಥಗಳ ಸೇನೆಯೆಲ್ಲ ಮುಂದೆಯೇ ಇರುತ್ತದೆಯಂತೆ.

**ಅಸ್ಮಿನ್ನೇವ ಹ್ಯವಸರೇ ಪಾರ್ಷ್ಣಿಗ್ರಾಹೋ ವಿಧೀಯತಾಂ ।**
**ಪಾರ್ಷ್ಣಿಗ್ರಾಹವಿಮಮಂ ಕರ್ತುಂ ವಿಷಂಗಶ್ಚತುರೋ ಭವೇತ್ ॥೧೫॥**
**ತೇನ ಕ್ರೋಧಬಲೋನ್ಮತ್ತಾ ಬಹುಸಂಗ್ರಾಮದುರ್ಮದಾಃ ।**
**ದಶ ಪಂಚ ಚ ಸೇನಾನ್ಯಃ ಸಹ ಯಾಂತು ಯುಯುತ್ಸಯಾ ॥ ೧೬ ॥**
**ಪೃಷ್ಠತಃ ಪರಿವಾರಾಸ್ತು ನ ತಥಾ ಸಂತಿ ತೇ ಪುನಃ ।**
**ಅಲ್ಪೈಸ್ತು ರಕ್ಷಿತಾ ಸಾ ಸ್ಯಾತ್ತೇನೈವಾಸೌ ಸುನಿಗ್ರಹಾ ॥ ೧೭ ॥**
**ಅತಸ್ತ್ವಂ ಬಹುಸಂನಾಹಮವಿಧಾಯ ಬಲೋತ್ಕಟಃ ।**
**ವಿಷಂಗ ಗುಪ್ತರೂಪೇಣ ಪಾರ್ಷ್ಣಿಗ್ರಾಹಂ ಸಮಾಚರ ॥ ೧೮ ॥**
**ಅಲ್ಪೀಯಸೀ ತ್ವಯಾಸಾರ್ಧಂ ಸೇನಾ ಗಚ್ಛತು ವಿಕ್ರಮಿನ್ ।**
**ಸಜ್ಜಾಶ್ಚ ಸಂತು ಸೇನಾನ್ಯೋ ದಿಕ್ಪಾಲವಿಜಯೋದ್ಧತಾಃ ॥ ೧೯ ॥**
**ಅಕ್ಷೋಹಿಣ್ಯಶ್ಚ ಸೇನಾನಾಂ ದಶಪಂಚ ಚಲಂತು ತೇ ।**
**ತ್ವಂ ಗುಪ್ತವೇಷಸ್ತಾಂ ದುಷ್ಟಾಂ ಸಂನಿಪತ್ಯ ದೃಢಂ ಜಹಿ ॥ ೨೦ ॥**

---

೧೫. ಈ ಸಮಯದಲ್ಲಿಯೇ ನೀವು ಹಿನ್ನುಗ್ಗಿ ಹೋಗಿ, ಸೇನೆಗಳನ್ನು ಹಿಡಿಯಿರಿ. ಈ ಕೆಲಸವನ್ನು ಮಾಡಲು ನಮ್ಮ ವಿಷಂಗನು ಚತುರನಾಗಿರುವನು.

೧೬. ಅವನೊಡನೆ, ಅನೇಕ ಯುದ್ಧಗಳಲ್ಲಿ ದುರ್ಮದರೆನಿಸಿ ಕೋಪರೋಷಗಳಿಂದಲೂ, ಬಲಪರಾಕ್ರಮಗಳಿಂದಲೂ ಕೊಬ್ಬಿರುವ ಹದಿನೈದು ಮಂದಿ ಸೇನಾಪತಿಗಳು ಕಾಳಗಮಾಡಲು ಹೊರಡಲಿ.

೧೭. ಅವಳ ಮುಂಭಾಗದಲ್ಲಿರುವಷ್ಟು ಸೇನೆಯು ಹಿಂಭಾಗದಲ್ಲಿರುವುದಿಲ್ಲ. ಪ್ರಾಯಿಕವಾಗಿ ಅಲ್ಲಿ ಕೆಲವೇ ಮಂದಿ ಪರಿವಾರದವರು ಅವಳ ರಕ್ಷಣೆಯಲ್ಲಿ ತೊಡಗಿರುತ್ತಾರೆ. ಆದುದರಿಂದ ಅವಳನ್ನು ಬಹುಸುಲಭವಾಗಿ ನಿಗ್ರಹಿಸಬಹುದು.

೧೮. ವಿಷಂಗಾ! ಮಹಾಪರಾಕ್ರಮಿಯಾದ ನೀನು ಸೇನೆಯನ್ನು ಸಂಪೂರ್ಣವಾಗಿ ಸಿದ್ಧಪಡಿಸಿಕೊಳ್ಳದೆಯೇ ಮಾರುವೇಷದಿಂದ ಹೋಗಿ ಆ ಲಲಿತೆಯ ಸೇನೆಯ ಹಿಂಭಾಗವನ್ನು ಹಿಡಿಯುವವನಾಗು.

೧೯. ನೀನು ಮಹಾಬಲನಾದುದರಿಂದ ನಿನ್ನೊಡನೆ ಸ್ವಲ್ಪ ಸೇನೆಯು ಮಾತ್ರವೇ ಹೊರಡಲಿ. ದಿಕ್ಪಾಲಕರೆಲ್ಲರನ್ನೂ ಗೆದ್ದು ಉದ್ಧತರಾಗಿರುವ ಇತರ ಸೇನಾಪತಿಗಳೂ ಸರ್ವಸಿದ್ಧರಾಗಿರಲಿ.

೨೦. ನಿನ್ನ ಹದಿನೈದು ಅಕ್ಷೋಹಿಣೀಸೇನೆಗಳೂ ಮುಂದೆ

ಸೈವ ನಿಃಶೇಷಶಕ್ತೀನಾಂ ಮೂಲಭೂತಾ ಮಹೀಯಸೀ ।
ತಸ್ಯಾಃ ಸಮೂಲನಾಶೇನ ಶಕ್ತಿವೃಂದಂ ವಿನಶ್ಯತಿ ॥ ೨೧ ॥
ಕಂದಚ್ಛೇದೇ ಸರೋಜಿನ್ಯಾ ದಲಜಾಲಮಿವಾಂಭಸಿ ।
ಸರ್ವೇಷಾಮಪಿ ಪಶ್ಚಾದ್ಯೋ ರಥಶ್ಚಲತಿ ಭಾಸ್ವರಃ ॥ ೨೨ ॥
ದಶಯೋಜನಸಂಪನ್ನನಿಜದೇಹಸಮುಚ್ಛ್ರಯಃ ।
ಮಹಾಮುಕ್ತಾತಪತ್ರೇಣ ಸರ್ವೋರ್ಧ್ವಂ ಪರಿಶೋಭಿತಃ ॥ ೨೩ ॥
ವಹನ್ಮುಹುರ್ವಿಜ್ಯಮಾನಂ ಚಾಮರಾಣಾಂ ಚತುಷ್ಟಯಂ ।
ಉತ್ತುಂಗಕೇತುಸಂಘಾತಲಿಖಿತಾಂಬುದ ಮಂಡಲಃ ॥ ೨೪ ॥
ತಸ್ಮಿನ್‌ರಥೇ ಸಮಾಯಾತಿ ಸಾ ದುಷ್ಟಾ ಹರಿಣೇಕ್ಷಣಾ ।
ನಿಭೃತಂ ಸಂನಿಪತ್ಯ ತ್ವಂ ಚಿಹ್ನೇನಾನೇನ ಲಕ್ಷಿತಾಂ ॥
ತಾಂ ವಿಜಿತ್ಯ ದುರಾಚಾರಾಂ ಕೇಶೇಷ್ವಾಕೃಷ್ಯ ಮರ್ದಯ ॥ ೨೫ ॥

---

ಹೊರಡಲಿ. ನೀನು ಮಾತ್ರ ಮಾರುವೇಷದಿಂದ ಹೊರಟು ಆ ದುಷ್ಟೆಯನ್ನು ಕೆಡವಿ ಚೆನ್ನಾಗಿ ಹೊಡೆ.

೨೧-೨೨. ಮಹಾಪರಾಕ್ರಮಶಾಲಿನಿಯಾದ ಆ ಲಲಿತೆಯೇ ಸಮಸ್ತ ಶಕ್ತಿಸೇನೆಗಳಿಗೂ ಮೂಲಭೂತೆಯಾದವಳು. ಅವಳು ಸಂಪೂರ್ಣವಾಗಿ ನಾಶವಾದರೆ ಶಕ್ತಿಸಮೂಹವೆಲ್ಲವೂ ನಾಶವಾದಂತೆಯೇ. ನೀರಿನೊಳಗಿರುವ ಕಮಲದ ಗಡ್ಡೆಯನ್ನು ಕತ್ತರಿಸಿಹಾಕಿದರೆ ಮೇಲಿರುವ ಎಲೆಗಳೆಲ್ಲವೂ ತಾವಾಗಿಯೇ ಹಾಳಾಗುವುದಲ್ಲವೇ? ಎಲ್ಲಾ ಸೈನ್ಯಗಳ ಹಿಂಭಾಗದಲ್ಲಿ ಪ್ರಕಾಶಮಾನವಾದ ಅವಳ ರಥವು ಕಂಗೊಳಿಸುತ್ತಿರುವುದು.

೨೩. ಆ ರಥವು ಹತ್ತು ಯೋಜನಗಳಷ್ಟು ವಿಸ್ತಾರವೂ, ಎತ್ತರವೂ ಉಳ್ಳುದಾಗಿ, ಎಲ್ಲಕ್ಕೂ ಮೇಲ್ಭಾಗದಲ್ಲಿ ಮಹಾಮುಕ್ತಾತಪತ್ರದಿಂದ ಶೋಭಿಸುತ್ತಿರುವುದು.

೨೪. ಅಲ್ಲದೆ, ಅಡಿಗಡಿಗೂ ಆ ರಥವು ನಾಲ್ಕು ಚಾಮರಗಳಿಂದ ಬೀಸಲ್ಪಡುತ್ತಿರುವುದಾಗಿ, ಮುಗಿಲುಗಳನ್ನೇ ಒರೆಯುತ್ತಿರುವ ಎತ್ತರವಾದ ನಿಶಾನಿಗಳಿಂದ ಅಲಂಕೃತವಾಗಿರುವುದು.

೨೫. ಈ ವಿಧವಾದ ರಥದಲ್ಲಿ ಹರಿಣೇಕ್ಷಣೆಯಾದ ಆ ದುಷ್ಟೆಯು ಬರುತ್ತಿರುತ್ತಾಳೆ. ಇದೇ ಗುರುತಿನಿಂದಲೇ ನೀನು ಅವಳನ್ನರಿತುಕೊಂಡು ಗುಟ್ಟಾಗಿ ನುಗ್ಗಿ ಹೋಗಿ ಮುತ್ತಿಗೆಹಾಕು. ದುರಾಚಾರೆಯಾದ ಅವಳನ್ನು ಗೆದ್ದು ಅವಳ ಮುಂದಲೆಯನ್ನು ಹಿಡಿದು ಮರ್ದಿಸು.

ಪುರತಶ್ಚಲಿತೇ ಸೈನ್ಯೇ ಸತ್ತ್ವಶಾಲಿನಿ ಸಾ ವಧೂಃ ।
ಸ್ತ್ರೀಮಾತ್ರರಕ್ಷಾ ಭವತೋ ವಶಮೇಷ್ಯತಿ ಸತ್ವರಂ ॥ ೨೬ ॥
ಭವತ್ಸಹಾಯಭೂತಾನಾಂ ಸೇನೇಂದ್ರಾಣಾಮಿಹಾಭಿಧಾಃ । [೨೭॥
ಶೃಣು ಯೈರ್ಭವತೋ ಯುದ್ಧೇ ಸಾಹ್ಯಂ ಕಾರ್ಯಮತಂದ್ರಿತೈಃ ॥
ಆದ್ಯೋ ದಮನಕೋ ನಾಮ ದೀರ್ಘಜಿಹ್ವೋ ದ್ವಿತೀಯಕಃ ।
ಹುಂಬೇಕೋ ಹುಲುಮುಲ್ಲಶ್ಚ ಕಲ್ಕಸಃ ಕಲ್ಕಿವಾಹನಃ ॥ ೨೮ ॥
ಪುಲ್ಕಸಃ ಪುಂಡ್ರಕೇತುಶ್ಚ ಚಂಡಬಾಹುಶ್ಚ ಕುಕ್ಕುರಃ ।
ಜಂಬುಕಾಕ್ಷೋ ಜಂಭನಶ್ಚ ತೀಕ್ಷ್ಣಶೃಂಗಸ್ತ್ರಿಕಂಟಕಃ ।
ಚಂದ್ರಗುಪ್ತಶ್ಚ ಪಂಚೈತೇ ದಶ ಚೋಕ್ತಾಶ್ಚಮೂವರಾಃ ॥ ೨೯ ॥
ಏಕೈಕಾಕ್ಷೋಹಿಣೀಯುಕ್ತಾಃ ಪ್ರತ್ಯೇಕಂ ಭವತಾ ಸಹ ।
ಆಗಮಿಷ್ಯಂತಿ ಸೇನಾನ್ಯೋ ದಮನಾದ್ಯಾ ಮಹಾಬಲಾಃ ॥ ೩೦ ॥
ಪರಸ್ಯ ಕಟಕಂ ನೈವ ಯಥಾ ಜಾನಾತಿ ತೇ ಗತಿಂ ।
ತಥಾ ಗುಪ್ತಸಮಾಚಾರಃ ಪಾರ್ಷ್ಣಿಗ್ರಾಹಂ ಸಮಾಚರ ॥ ೩೧ ॥

---

೨೬. ಪರಾಕ್ರಮಯುಕ್ತವಾದ ಸೇನೆಯೆಲ್ಲ ಮುಂದೆ ಬರುತ್ತಿರುವ ಸಮಯದಲ್ಲಿ ಅವಳ ರಕ್ಷಣೆಗೆ ಅಲ್ಲಿ ಕೆಲಮಂದಿ ಅಬಲೆಯರು ಮಾತ್ರವೇ ಇರುತ್ತಾರೆ. ಆದುದರಿಂದ ಜಾಗ್ರತೆಯಾಗಿಯೇ ಅವಳು ನಿಮಗೆ ವಶಳಾಗುವಳು.

೨೭. ಎಲೈ ವಿಷಂಗನೇ! ನಿನಗೆ ಯುದ್ಧದಲ್ಲಿ ಸಹಾಯಮಾಡಲು ಸರ್ವಸನ್ನದ್ಧರಾಗಿರುವ ಸೇನಾನಾಯಕರ ಹೆಸರುಗಳನ್ನು ಕೇಳು.

೨೮-೨೯. ಮೊದಲನೆಯವನು ದಮನಕ. ದೀರ್ಘಜಿಹ್ವನು ಎರಡನೆಯವನು. ಇವರಾದ ಬಳಿಕ ಹುಂಬೇಕ, ಹುಲುಮುಲ್ಲ, ಕಲ್ಕಸ, ಕಲ್ಕಿವಾಹನ, ಪುಲ್ಕಸ, ಪುಂಡ್ರಕೇತು, ಚಂಡಬಾಹು, ಕುಕ್ಕುರ, ಜಂಬುಕಾಕ್ಷ, ಜಂಭನ, ತೀಕ್ಷ್ಣಶೃಂಗ, ತ್ರಿಕಂಟಕ, ಚಂದ್ರಗುಪ್ತ ಎಂಬುದಾಗಿ—; ಈ ಹದಿನೈದು ಮಂದಿಯೂ ಉತ್ತಮ ಸೇನಾಪತಿಗಳು.

೩೦. ಮಹಾಬಲಾಢ್ಯರಾದ ಈ ಹದಿನೈದು ಮಂದಿಯಲ್ಲಿ ಪ್ರತಿಯೊಬ್ಬರೂ ಒಂದೊಂದು ಅಕ್ಷೋಹಿಣೀಸೇನೆಯೊಡನೆ ನಿನ್ನನ್ನು ಹಿಂಬಾಲಿಸಿಬರುತ್ತಾರೆ.

೩೧. ನೀನು ಮಾತ್ರ ಶತ್ರುಸೇನೆಯವರು ನಿನ್ನ ನಡೆಯನ್ನು ತಿಳಿಯದಂತೆ ಗುಟ್ಟಾಗಿಹೋಗಿ ಹಿಂದಿನಿಂದ ಮುತ್ತಿಗೆಹಾಕು.

ಅಸ್ಮಿನ್‌ಕಾರ್ಯೇ ಸುಮಹತಿ ಪ್ರೌಢಿಮಾನಂ ಸಮುದ್ವಹನ್ ।
ವಿಷಂಗ ತ್ವಂ ಹಿ ಲಭಸೇ ಜಯಸಿದ್ಧಿಮನುತ್ತಮಾಂ ॥ ೩೨ ॥
ಇತಿ ಮಂತ್ರಿತಮಂತ್ರೋಽಯಂ ದುರ್ಮಂತ್ರೀ ಭಂಡದಾನವಃ ।
ವಿಷಂಗಂ ಪ್ರೇಷಯಾಮಾಸ ಸರಥಂ ಸೈನ್ಯಪಾಲಕೈಃ ॥ ೩೩ ॥
ಅಥ ಶ್ರೀಲಲಿತಾದೇವ್ಯಾಃ ಪಾರ್ಷ್ಣಿಗ್ರಾಹಕೃತೋದ್ಯಮೇ ।
ಯುವರಾಜಾನುಜೇ ದೈತ್ಯೇ ಸೂರ್ಯೋಽಸ್ತಗಿರಿಮಾಯಯೌ ॥ ೩೪ ॥
ಪ್ರಥಮೇ ಯುದ್ಧದಿವಸೇ ವ್ಯತೀತೇ ಲೋಕಭೀಷಣೇ ।
ಅಂಧಕಾರಃ ಸಮಭವತ್ತಸ್ಯ ಸಾಹ್ಯಚಿಕೀರ್ಷಯಾ ॥ ೩೫ ॥
ಮಹಿಷಸ್ಕಂಧಧೂಮ್ರಾಭಂ ವನಕ್ರೋಡವಪುರ್ದ್ಯುತಿ ।
ನೀಲಕಂಠಗಲಚ್ಛಾಯಂ ನಿಬಿಡಂ ವವೃಧೇ ತಮಃ ॥ ೩೬ ॥
ಕುಂಜೇಷು ಪಿಂಡಿತಮಿವ ಪ್ರಧಾವದಿವ ಸಂಧಿಷು ।
ಉಜ್ಜಿಹಾನಮಿವ ಕ್ಷೋಣೀವಿವರೇಭ್ಯಃ ಸಹಸ್ರಶಃ ॥ ೩೭ ॥

---

೩೨. ನೀನು ಈ ವಿಧವಾದ ಕಪಟಯುದ್ಧದಲ್ಲಿ ಪಾಂಡಿತ್ಯವನ್ನು ಪಡೆದೇ ಇರುವೆಯಾದುದರಿಂದ ಉತ್ತಮೋತ್ತಮವಾದ ವಿಜಯವನ್ನೂ ಪಡೆದೇ ಪಡೆಯುವೆ.''

೩೩. ಬಹಳ ಮಟ್ಟಿಗೆ ದುರಾಲೋಚನೆಯನ್ನೇ ಮಾಡುವ ಸ್ವಭಾವವುಳ್ಳ ಆ ಭಂಡಾಸುರನು ಈ ರೀತಿ ಮಂತ್ರಾಲೋಚನೆಮಾಡಿ ರಥದೊಡನೆಯೂ, ಸೇನಾಪತಿಗಳೊಡನೆಯೂ ತಮ್ಮನಾದ ಆ ವಿಷಂಗ ನನ್ನು ಕಾಳೆಗಕ್ಕೆ ಕಳುಹಿಸಿದನು.

೩೪. ಯುವರಾಜನಾದ ವಿಶುಕ್ರದೈತ್ಯನ ತಮ್ಮನಾದ ಆ ವಿಷಂಗನು ಶ್ರೀ ಲಲಿತಾ ಪರಮೇಶ್ವರಿಯ ಸೇನೆಯನ್ನು ಹಿಂದುಗಡೆಯಿಂದ ಮುತ್ತುವ ಪ್ರಯತ್ನದಲ್ಲಿರಲು, ಇತ್ತ ಸೂರ್ಯನು ಅಸ್ತಗಿರಿಯನ್ನು ಸೇರಿದನು.

೩೫. ಪ್ರಪಂಚವನ್ನೇ ಭಯಗೊಳಿಸುವ ಆ ಯುದ್ಧದ ಮೊದಲನೆಯ ದಿವಸ ಹಗಲು ಮುಗಿದೊಡನೆಯೇ, ಆ ವಿಷಂಗದಾನವನಿಗೆ ನೆರವಾಗ ಲೋಸುಗವೋ ಎಂಬಂತೆ ಕತ್ತಲೆಯು ಕವಿಯಿತು.

೩೬. ಕೋಣನ ಹೆಗಲಿನಂತೆ ಧೂಮ್ರವರ್ಣವಾಗಿ, ಕಾಡುಹಂದಿಯ ಕಾಂತಿಯನ್ನೊಳಗೊಂಡು, ನೀಲಕಂಠನ ಕೊರಳ ನಂಜಿನಂತೆ ಕಪ್ಪಗೆ ಕಂಗೊಳಿಸುತ್ತ ಆ ಕತ್ತಲೆಯು ದಟ್ಟವಾಗಿ ಹೆಚ್ಚಿ ಹಬ್ಬಿತು.

೩೭-೪೧. ಲತಾಗೃಹಗಳಲ್ಲಿ ಗುಂಪುಗೂಡಿದಂತೆಯೂ, ಸಂದಿಗಳಲ್ಲಿ

**ನಿರ್ಗಚ್ಛದಿವ ಶೈಲಾನಾಂ ಭೂರಿಕಂದರಮಂದಿರಾತ್ ।**
**ಕ್ವಚಿದ್ದೀಪಪ್ರಭಾಜಾಲೇ ಕೃತಕಾತರಚೇಷ್ಟಿತಂ ॥ ೩೮ ॥**
**ದತ್ತಾವಲಂಬನಮಿವ ಸ್ತ್ರೀಣಾಂ ಕರ್ಣೋತ್ಪಲತ್ವಿಷಿ ।**
**ಏಕೀಭೂತಮಿವ ಪ್ರೌಢದಿಙ್ನಾಗಮದಕಜ್ಜಲೇ ॥ ೩೯ ॥**
**ಆಬದ್ಧಮೈತ್ರೀಕಮಿವ ಸ್ಫುರಚ್ಛಾಡ್ವಲಮಂಡಲೇ ।**
**ಕೃತಪ್ರಿಯಾಶ್ಲೇಷಮಿವ ಸ್ಫುರಂತೀಷ್ವಸಿಯಷ್ಟಿಷು ॥ ೪೦ ॥**
**ಗುಪ್ತಪ್ರವಿಷ್ಟಮಿವ ಚ ಶ್ಯಾಮಾಸು ವನಪಂಕ್ತಿಷು ।**
**ಕ್ರಮೇಣ ಬಹುಲೀಭೂತಂ ಪ್ರಸಸಾರ ಮಹತ್ತಮಃ ॥ ೪೧ ॥**
**ತ್ರಿಯಾಮಾ ವಾಮನಯನಾ ನೀಲಕಂಚುಕರೋಚಿಷಾ ।**
**ತಿಮಿರೇಣಾವೃತಂ ವಿಶ್ವಂ ನ ಕಿಂಚಿತ್ಪ್ರತ್ಯಪದ್ಯತ ॥ ೪೨ ॥**
**ಅಸುರಾಣಾಂ ರಾಕ್ಷಸಾನಾಂ ರಾತ್ರಿರೇವ ಬಲಾವಹಾ ।**
**ತೇಷಾಂ ಮಾಯಾವಿಲಾಸೋಽಯಂ ತಸ್ಯಾಮೇವಹಿ ವರ್ಧತೇ ॥**

---

ಓಡುತ್ತಿರುವಂತೆಯೂ, ಭೂಮಿಯ ಬಿರುಕುಗಳಿಂದ ಸಾವಿರಾರುಗಳಾಗಿ ಮೇಲಕ್ಕೇಳುತ್ತಿರುವಂತೆಯೂ, ಬೆಟ್ಟಗಳ ಗವಿಗಳಿಂದ ಹೊರಗೆ ಬರುತ್ತಿರುವಂತೆಯೂ ಕಂಗೊಳಿಸಿ, ದೀಪದ ಬೆಳಕಿರುವ ಕೆಲವೆಡೆಗಳಲ್ಲಿ ಹೆದರಿ ಹಿಂದೋಡಿದಂತೆ ತೋರಿ, ಹೆಂಗಸರ ಕನ್ನೈದಿಲೆಗಳಂತಿರುವ ಕಿವಿಸಂದುಗಳಲ್ಲಿ ಆಸರೆಗೊಂಡಂತೆಯೂ, ದಿಗ್ಗಜಗಳ ಮದೋದಕವೆಂಬ ಕಾಡಿಗೆಯೊಡನೆ ಬೆರತಂತೆಯೂ, ಹೊಳೆಯುತ್ತಿರುವ ಎಳೆಗರಿಕೆಯ ಗುಂಪಿನೊಡನೆ ಗೆಳೆತನವನ್ನು ಮಾಡಿಕೊಂಡಂತೆಯೂ, ಫಳಫಳನೆ ಹೊಳೆಯುತ್ತಿರುವ ಕತ್ತಿಯ ಹಿಡಿಗಳನ್ನು ಪ್ರಿಯೆಯೆನ್ನೆಂತೋ ಅಂತು ಆಲಿಂಗಿಸಿಕೊಂಡಂತೆಯೂ, ಕಪ್ಪೊಗೆವ ದಟ್ಟವಾದ ಹೂದೋಟದ ಸಾಲುಗಳಲ್ಲಿ ಬಹುಗುಟ್ಟಾಗಿ ಒಳಹೊಕ್ಕಂತೆಯೂ ವಿರಾಜಿಸಿ ಆ ಹೆಗ್ಗತ್ತಲೆಯು ಎತ್ತೆತ್ತಲೂ ಹರಡಿತು.

೪೨. ರಾತ್ರಿಯೆಂಬ ಚಲುವೆಯು ನೀಲಿಯ ಬಣ್ಣದ ಕುಪ್ಪಸವನ್ನು ತೊಟ್ಟು ಅದರ ಕಾಂತಿಯಿಂದಲೇ ಬೆಳಗುತ್ತಿರುವಳೋ ಎಂಬಂತೆ ಆ ಕತ್ತಲೆಯು ಕಳಕಳಿಸುತ್ತಿದ್ದಿತು. ಜಗತ್ತೇ ಕತ್ತಲೆಯಿಂದ ತುಂಬಿ ಹೋಯಿತು. ಎಲ್ಲಿಯೂ ಏನೂ ಕಾಣಿಸದಾಯಿತು.

೪೩. ಅಸುರರಿಗೂ ರಾಕ್ಷಸರಿಗೂ ರಾತ್ರಿಯೇ ಬಲವನ್ನುಂಟು ಮಾಡತಕ್ಕುದಷ್ಟೆ. ಅವರ ಮಾಯೆಯ ಮೆರತವೂ ರಾತ್ರಿಯ ಕಾಲಗಳಲ್ಲಿಯೇ ಹೆಚ್ಚುತ್ತದೆ.

**ಅಥ ಪ್ರಚಲಿತಂ ಸೈನ್ಯಂ ವಿಷಂಗೇಣ ಮಹೌಜಸಾ ।**
**ಧೌತಖಡ್ಗಲತಾಚ್ಛಾಯಾ ವರ್ಧಿಷ್ಣುತಿಮಿರತ್ವಿಷಃ ॥ ೪೪ ॥**
**ದಮನಾದ್ಯಾಶ್ಚ ಸೇನಾನ್ಯಃ ಶ್ಯಾಮಕಂಕಟಧಾರಿಣಃ ।**
**ಶ್ಯಾಮೋಷ್ಣೀಷಧರಾಃ ಶ್ಯಾಮವರ್ಣಸರ್ವಪರಿಚ್ಛದಾಃ ॥ ೪೫ ॥**
**ಏಕತ್ವಮಿವ ಸಂಪ್ರಾಪ್ತಾಸ್ತಿಮಿರೇಣಾತಿಭೂಯಸಾ ।**
**ವಿಷಂಗಮನು ಸಂಚೇಲುಃ ಕೃತಾಗ್ರಜನಮಸ್ಕೃತಿಂ ॥ ೪೬ ॥**
**ಕೂಟೇನ ಯುದ್ಧಕೃತ್ಯೇನ ವಿಜಿಗೀಷುರ್ಮಹೇಶ್ವರೀಂ ।**
**ಮೇಘಡಂಬರಕಂ ನಾಮ ದಧೇ ವಕ್ಷಸಿ ಕಂಕಟಂ ॥ ೪೭ ॥**
**ಯಥಾ ತಸ್ಯ ನಿಶಾಯುದ್ಧಾನುರೂಪೋ ವೇಷಸಂಗ್ರಹಃ ।**
**ತಥಾ ಕೃತವತೀ ಸೇನಾ ಶ್ಯಾಮಲಂ ಕಂಚುಕಾದಿಕಂ ॥ ೪೮ ॥**
**ನ ಚ ದುಂದುಭಿನಿಸ್ವಾನೋ ನ ಚ ಮರ್ದಲಗರ್ಜಿತಂ ।**
**ಪಣವಾನಕಭೇರೀಣಾಂ ನ ಚ ಘೋಷವಿಜೃಂಭಣಂ ॥ ೪೯ ॥**

---

೪೪. ಈ ಸಮಯದಲ್ಲಿಯೇ ದಾನವಸೇನೆಯೆಲ್ಲವೂ ಮಹಾ ಪರಾಕ್ರಮಿಯಾದ ವಿಷಂಗನೊಡನೆ ಹೊರಟಿತು. ಆ ಸೇನೆಯ ಭಟರ ಕೈಯಲ್ಲಿದ್ದ ಖಡ್ಗಲತೆಗಳು ಎತ್ತಲೂ ಮುತ್ತಿದ್ದ ಕತ್ತಲೆಯಂತೆಯೇ ಕಪ್ಪಗಿದ್ದವು.

೪೫-೪೬. ಆ ಸೇನೆಯಲ್ಲಿದ್ದ ದಮನನೇ ಮೊದಲಾದ ಸೇನಾಪತಿ ಗಳಾದರೋ ಶ್ಯಾಮಲವರ್ಣದ ಕವಚಗಳನ್ನು ತೊಟ್ಟು, ಶ್ಯಾಮಲವರ್ಣ ದವುಗಳೇ ಆದ ತಲೆಪಾಗುಗಳನ್ನಿಟ್ಟು, ಶ್ಯಾಮಲವರ್ಣದ ರಣಸಾಮಗ್ರಿ ಗಳುಳ್ಳವರಾಗಿ ಬಹುದಟ್ಟವಾಗಿ ಕವಿದಿದ್ದ ಆ ಕತ್ತಲೆಯೊಡನೆ ಒಂದಾ ಗಿರುವರೋ ಎಂಬಂತೆ ತೋರುತ್ತ, ಅಣ್ಣನಾದ ಭಂಡಾಸುರನನ್ನು ನಮಸ್ಕರಿಸಿ ಹೊರಟ ವಿಷಂಗನನ್ನು ಹಿಂಬಾಲಿಸಿ ಹೊರಟರು.

೪೭. ವಿಷಂಗದಾನವನೂ ಸಹ ಕಪಟಯುದ್ಧವನ್ನು ಮಾಡಿ ಶ್ರೀ ಲಲಿತಾಪರಮೇಶ್ವರಿಯನ್ನು ಗೆಲ್ಲಬಯಸಿ, ಮೇಘಡಂಬರಕವೆಂಬ ಕವಚವನ್ನು ವಕ್ಷಸ್ಥಲದಲ್ಲಿ ತೊಟ್ಟನು.

೪೮. ಆ ದಾನವನೆಸಗುವ ರಾತ್ರಿಯುದ್ಧಕ್ಕೆ ತಕ್ಕಂತೆಯೇ ಅವನ ಸೇನೆಯೂ ಶ್ಯಾಮಲವರ್ಣದ ಕವಚವೇ ಮೊದಲಾದವುಗಳನ್ನು ಅಳವಡಿಸಿ ಕೊಂಡು ಹೊರಟಿತು.

೪೯. ಹೀಗೆ ರಣಪ್ರಯಾಣಮಾಡುವಾಗ ಆ ಸೇನೆಯಲ್ಲಿ ದುಂದುಭಿ

**ಗುಪ್ತಾಕಾರಾಃ ಪ್ರಚಲಿತಾಸ್ತಿಮಿರೇಣ ಸಮಾವೃತಾಃ ।**
**ಪರೈರದೃಶ್ಯಗತಯೋ ನಿಷ್ಕೋಶೀಕೃತರಿಷ್ಟಯಃ ॥ ೫೦ ॥**
**ಪಶ್ಚಿಮಾಭಿಮುಖಂ ಯಾಂತೀಂ ಲಲಿತಾಯಾಃ ಪತಾಕಿನೀಂ ।**
**ಆವೃತ್ಯೋತ್ತರಮಾರ್ಗೇಣ ಪೂರ್ವಭಾಗಮುಶಿಶ್ರಯುನ್ ॥ ೫೧ ॥**
**ನಿಶ್ವಾಸಮಪಿ ಸಸ್ವಾನಮಕುರ್ವಂತಃ ಪದೇ ಪದೇ ।**
**ಸಾವಧಾನಾಃ ಪ್ರಚಲಿತಾಃ ಪಾರ್ಷ್ಣಿಗ್ರಾಹಾಯ ದಾನವಾಃ ॥ ೫೨ ॥**
**ಭೂಯಃ ಪುರಸ್ಯ ದಿಗ್ಭಾಗಂ ಗತ್ವಾ ಮಂದಪದಕ್ರಮಾಃ ।**
**ಲಲಿತಾಸೈನ್ಯಮೇವ ಸ್ವಾನ್ ಸೂಚಯಂತಃ ಪ್ರಪೃಚ್ಛತಾಂ ॥ ೫೩ ॥**
**ಆವೃತ್ಯ ನಿಭೃತಂ ಪೃಷ್ಠೇ ಕವಚಚ್ಛನ್ನವಿಗ್ರಹಾಃ ।**
**ಚಕ್ರರಾಜರಥಂ ತುಂಗಂ ಮೇರುಮಂದರಸಂನಿಭಂ ॥ ೫೪ ॥**
**ಅಪಶ್ಯನ್ನತಿದೀಪ್ತಾಭಿಃ ಶಕ್ತಿಭಿಃ ಪರಿವಾರಿತಂ ।**
**ತತ್ರ ಮುಕ್ತಾತಪತ್ರಸ್ಯ ವರ್ತಮಾನಾಮಧಸ್ತಲೇ ।**
**ಸಹಸ್ರಾದಿತ್ಯ ಸಂಕಾಶಾಂ ಪಶ್ಚಿಮಾಭಿಮುಖೀಂ ಸ್ಥಿತಾಂ ॥ ೫೫ ॥**

---

ಗಳ ಧ್ವನಿಗಳಾಗಲಿ, ಮದ್ದಲೆಗಳ ಗರ್ಜನೆಯಾಗಲಿ, ಪಣವ ಆನಕ ಭೇರಿಗಳ ಮೊರೆತವಾಗಲಿ, ಏನ್ನೊಂದು ಅಟ್ಟಹಾಸವೂ ಇರಲಿಲ್ಲ.

೫೦. ದಾನವರೆಲ್ಲರೂ ಮಾರುವೇಷಗಳನ್ನು ಧರಿಸಿ ಕತ್ತಲೆಯಲ್ಲಡಗಿ ಕಾಣಿಸದೆ, ಶತ್ರುಗಳಿಗಂತೂ ತಮ್ಮ ಸುಳಿವೇ ಗೊತ್ತಾಗದಂತೆ ಒರೆಗಳಿಂದ ಕತ್ತಿಗಳನ್ನು ಹಿರಿದುಕೊಂಡು ಮುಂದುವರಿದರು.

೫೧. ಪಶ್ಚಿಮಾಭಿಮುಖವಾಗಿ ಹೋಗುತ್ತಿರುವ ಶ್ರೀ ಲಲಿತಾ ದೇವಿಯ ಸೈನ್ಯವನ್ನು ಉತ್ತರದಿಕ್ಕಿನ ಕಡೆಯಿಂದ ನುಗ್ಗಿ ಆ ಸೈನ್ಯದ ಹಿಂಭಾಗವಾದ ಪೂರ್ವದಿಕ್ಕಿನಲ್ಲಿ ಬಳಸಿದರು.

೫೨-೫೪. ಆ ದುಷ್ಟದಾನವರು ಅಡಿಯಿಡುವಾಗ ಶಬ್ದವಾಗುವುದೆಂಬ ಭಯದಿಂದ ಉಸಿರನ್ನು ಸಹ ಘಟ್ಟಿಯಾಗಿ ಬಿಡದೆ, ಬಹುನಿಧಾನವಾಗಿ ಮುಂದುವರಿಯುತ್ತಲೂ, ಪರಸ್ಪರ ಸಂಭಾಷಣೆಗಳನ್ನು ಸಹ ಸಂಜ್ಞೆಯಿಂದಲೇ ಮಾಡುತ್ತಲೂ, ತಮ್ಮ ಪಟ್ಟಣದಿಂದ ಹೊರಟು ಆ ಲಲಿತಾ ಸೈನ್ಯವನ್ನು ಹಿಂದಿನಿಂದ ಬಳಸಿ, ಕವಚಗಳಿಂದ ತಮ್ಮ ಶರೀರಗಳನ್ನು ಮುಚ್ಚಿಕೊಂಡು, ಅಸಂಖ್ಯಾಕವಾದ ಶಕ್ತಿದೇವಿಯರಿಂದ ಸುತ್ತುವರೆದು, ಮೇರು ಮಂದರಪರ್ವತಗಳಂತೆ ಉನ್ನತವಾಗಿರುವ ಶ್ರೀ ಚಕ್ರರಾಜರಥವನ್ನು ಕಂಡರು.

೫೫-೫೬. ತರುವಾಯ ಆ ರಥದಲ್ಲಿ ಮುತ್ತಿನ ಸತ್ತಿಗೆಯ ನೆರಳಿನಲ್ಲಿ

**ಕಾಮೇಶ್ವರ್ಯಾದಿನಿತ್ಯಾಭಿಃ ಸ್ವಸಮಾನಸಮೃದ್ಧಿಭಿಃ ।**
**ನರ್ಮಾಲಾಪವಿನೋದೇನ ಸೇವ್ಯಮಾನಾಂ ರಥೋತ್ತಮೇ ।**
**ತಾಂ ತಥಾಭೂತವೃತ್ತಾಂತಾಂ ತತ್ರಾದೃಶರಣೋದ್ಯತಾಂ ॥ ೫೬ ॥**
**ಪುರೋಗತಂ ಮಹತ್ಸೈನ್ಯಂ ವೀಕ್ಷಮಾಣಾಂ ಸಕೌತುಕಂ ।**
**ಮತ್ವಾಽನವಹಿತಾಮೇವ ವಿಷಂಗಃ ಸ ದುರಾಶಯಃ ॥**
**ಪೃಷ್ಠವಂಶಂ ರಥೇಂದ್ರಸ್ಯ ಘಟ್ಟಯಾಮಾಸ ಸೈನಿಕೈಃ ॥ ೫೭ ॥**
**ತತ್ರಾಣಿಮಾದಿಶಕ್ತೀನಾಂ ಪರಿವಾರವರೂಥಿನೀಂ ।**
**ವಿಪಾಟ್ಯೈಃ ಪಾಟಯಾಮಾಸುರದೃಶ್ಯೈರಂಧಕಾರಗಾಃ ॥ ೫೮ ॥**
**ತತಶ್ಚಕ್ರರಥೇಂದ್ರಸ್ಯ ನವಮೇ ಪರ್ವಣಿ ಸ್ಥಿತಾಃ ।**
**ಮಹಾಕಲಕಲಂ ಚಕ್ರುರಣಿಮಾದ್ಯಾಃ ಪರಶ್ಶತಂ ॥ ೫೯ ॥**

---

ಕಂಗೊಳಿಸುತ್ತಿರುವ, ಸಹಸ್ರ ಸೂರ್ಯರ ಕಾಂತಿಯುಳ್ಳವಳಾಗಿ, ತನ್ನ ವೇಷಭೂಷಣಸಂಪತ್ತುಗಳನ್ನೇ ಒಳಗೊಂಡು ವಿರಾಜಿಸುತ್ತಿರುವ ಕಾಮೇಶ್ವರಿಯೇ ಮೊದಲಾದ ನಿತ್ಯದೇವಿಯರಿಂದ ಸಂಸೇವಿತೆಯಾದವಳೂ ಅವರೊಡನೆ ವಿನೋದವಾಗಿ ಮಾತನಾಡುತ್ತಿರುವವಳೂ, ಪಶ್ಚಿಮಾಭಿಮುಖವಾಗಿ ಕುಳಿತು, ಮಾತಿನಿಂದ ಹೀಗೆಂದು ಹೇಳಲು ಸಾಧ್ಯವಲ್ಲದ ವೃತ್ತಾಂತವುಳ್ಳವಳಾಗಿ, ಭಯಂಕರರಣಕ್ಕೂ ಸನ್ನದ್ಧೆಯಾಗಿರುವವಳೂ ಆದ ಶ್ರೀ ಲಲಿತಾದೇವಿಯನ್ನು ಕಂಡರು.

೫೭. ಆ ಸಮಯದಲ್ಲಿಯೇ ದುಷ್ಟಬುದ್ಧಿಯಾದ ಆ ವಿಷಂಗ ದಾನವನು, ತನ್ನ ಮುಂಗಡೆಯೇ ನುಗ್ಗಿಹೋಗುತ್ತಿರುವ ಸೇನೆಗಳನ್ನು ಕಂಡು ಆನಂದಿಸುತ್ತಿದ್ದ ಆ ದೇವಿಯನ್ನು ನೋಡಿ ಆಕೆಯು ಜಾಗರೂಕಳಾಗಿಲ್ಲವೆಂದೇ ತಿಳಿದು ತನ್ನ ಸೈನಿಕರೊಡನೆ ನುಗ್ಗಿ ಹೊರಟು ಆಕೆಯ ರಥದ ಹಿಂಭಾಗವನ್ನು ಮರ್ದಿಸಿದನು.

೫೮. ಅಂಧಕಾರದಲ್ಲಿ ಗೊತ್ತಾಗದ ಗಮನವುಳ್ಳವರೂ, ತಮ್ಮ ಆಕಾರಗಳನ್ನೇ ಮರಸಿಕೊಂಡವರೂ ಆದ ಆ ದಾನವರು ಆ ಪ್ರದೇಶದಲ್ಲಿದ್ದ ಅಣಿಮಾದಿ ಪರಿವಾರ ಶಕ್ತಿಸೈನ್ಯದ ಮೇಲೆ ಅಂಬಿನಮಳೆಗಳನ್ನು ಸುರಿಸಿ ಬಹಳ ಪರಾಕ್ರಮವನ್ನು ಪ್ರದರ್ಶಿಸಿದರು.

೫೯. ಆಗ ಶ್ರೀ ಚಕ್ರರಾಜರಥದ ಒಂಬತ್ತನೆಯ ಪರ್ವದಲ್ಲಿದ್ದ ಅಣಿಮಾದೇವಿಯೇ ಮೊದಲಾದ ನೂರಾರು ಮಂದಿ ಶಕ್ತಿಸೇನೆಯವರು ಬಹುದೊಡ್ಡದಾದ ರಣಕೋಲಾಹಲಧ್ವನಿಯನ್ನು ಮಾಡಿದರು.

**ಪಟ್ಟಿಸೈರ್ದ್ರುಘಣೈಶ್ಚೈವ ಭಿಂಡಿಪಾಲೈರ್ಮುಸುಂಡಿಭಿಃ ।**
**ಕಠೋರವಜ್ರನಿರ್ಘಾತನಿಷ್ಠುರೈಃ ಶಕ್ತಿಮಂಡಲಂ ॥**
**ಮರ್ದಯಂತೋ ಮಹಾಸತ್ತ್ವಾಃ ಸಮರಂ ಬಹು ತೇನಿರೇ ॥ ೬೦ ॥**
**ಆಕಸ್ಮಿಕರಣೋತ್ಸಾಹವಿಪರ್ಯಸ್ತಾಯುಧಗ್ರಹಂ ।**
**ಅಕಾಂಡಕ್ಷುಭಿತಂ ಚಾಸೀದ್ರಥಸ್ಥಂ ಶಕ್ತಿಮಂಡಲಂ ॥ ೬೧ ॥**
**ಅದೃಶ್ಯಮಾನಶಸ್ತ್ರಾಣಾಮುದೃಶ್ಯ ನಿಜವರ್ಮಣಾಂ ।**
**ತಿಮಿರಚ್ಛನ್ನರೂಪಾಣಾಂ ದಾನವಾನಾಂ ಶಿಲೀಮುಖೈಃ ॥ ೬೨ ॥**
**ಇತಸ್ತತೋ ಬಹುಶ್ಲಿಷ್ಟಭಿನ್ನವರ್ಮಿತಮರ್ಮ ತತ್ ।**
**ಶಕ್ತೀನಾಂ ಮಂಡಲಂ ತೇನ ಕ್ರಂದನಂ ಲಲಿತಾಂ ಪ್ರತಿ ॥ ೬೩ ॥**
**ಪರ್ವಾನುಕ್ರಮತಸ್ತತ್ರ ಸಂಪ್ರಾಪ್ತಂ ಸುಮಹದ್ಭಯಂ ।**
**ಕರ್ಣಾಕರ್ಣಿಕಯಾಕರ್ಣ್ಯ ಲಲಿತಾ ಕೋಪಮಾಸ್ಥಿತಾ ॥ ೬೪ ॥**
**ಏತಸ್ಮಿನ್ನಂತರೇ ಭಂಡಶ್ಚಂಡದುರ್ಮಂತ್ರಪಂಡಿತಃ ।**
**ದಶಾಕ್ಷೋಹಿಣಿಕಾಯುಕ್ತಂ ಕುಟಿಲಾಕ್ಷಂ ಮಹೌಜಸಂ ॥**
**ಲಲಿತಾಸೈನ್ಯನಾಸೀರೇ ಯುದ್ಧಾಯ ಪ್ರಜಿಘಾಯ ಸಃ ॥ ೬೫ ॥**

---

೬೦. ಆ ದಾನವರು ಕಠೋರವಾದ ವಜ್ರಾಯುಧಕ್ಕೆ ಸಮಾನವಾದ ಪಟ್ಟಸ, ದ್ರುಘಣ, ಭಿಂಡಿಪಾಲ, ಮುಸುಂಡಿ ಮೊದಲಾದ ಆಯುಧಗಳಿಂದ ಶಕ್ತಿಸೇನೆಯನ್ನು ಮರ್ದಿಸುತ್ತ ಭಯಂಕರವಾಗಿ ಕಾಳಗಮಾಡಿದರು.

೬೧. ಇದ್ದಕ್ಕಿದಂತೆಯೇ ಒದಗಿಬಂದ ರಣೋತ್ಸಾಹದಿಂದ ತಳಕೆಳಗಾದ ಆಯುಧಗಳುಳ್ಳ ಆ ಶ್ರೀ ಚಕ್ರರಾಜರಥದ ಶಕ್ತಿದೇವಿಯರ ಸೇನೆಯೆಲ್ಲ ಒಮ್ಮೆಯೇ ಕಲಕಿಹೋಯಿತು.

೬೨–೬೩. ಅವರೆಲ್ಲರೂ ಕಣ್ಣಿಗೆ ಕಾಣಿಸದ ಶಸ್ತ್ರಗಳೂ, ಕವಚಗಳೂ ಉಳ್ಳವರಾಗಿ, ಕತ್ತಲೆಯಲ್ಲಡಗಿದ ರೂಪಗಳುಳ್ಳ ಆ ದಾನವರ ಬಾಣಗಳಿಂದ ಅತ್ತಿತ್ತ ಬಹಳವಾಗಿ ಜಾರಿ ಒಡೆದುಹೋದ ಕವಚಗಳೂ, ಮರ್ಮಸ್ಥಾನಗಳೂ ಉಳ್ಳವರಾಗಿ ಶ್ರೀ ಲಲಿತಾದೇವಿಯನ್ನು ಕುರಿತು ಗಟ್ಟಿಯಾಗಿ ಕೂಗಿಕೊಂಡರು.

೬೪. ಪರ್ವದಿಂದ ಪರ್ವಕ್ಕೆ ಕ್ರಮವಾಗಿ ಮಹಾಭಯವಡಸಿತು. ಕಿವಿಯಿಂದ ಕಿವಿಗೆ ಈ ಸುದ್ದಿಯು ಹರಡಿತು. ಶ್ರೀ ಲಲಿತಾದೇವಿಯೂ ಅದನ್ನು ಕೇಳಿ ಕೋಪಗೊಂಡಳು.

೬೫. ಇದೇ ಸಮಯದಲ್ಲಿಯೇ ದುರಾಲೋಚನೆಯನ್ನು ಮಾಡು

ಯಥಾ ಪಶ್ಚಾತ್ಕಲಕಲಂ ಶ್ರುತ್ವಾಗ್ರೇ ವರ್ತಿನೀ ಚಮೂಃ ।
ನಾಗಚ್ಛತಿ ತಥಾ ಚಕ್ರೇ ಕುಟಿಲಾಕ್ಷೋ ಮಹದ್ರಣಂ ॥
ಏವಂ ಚೋಭಯತೋ ಯುದ್ಧಂ ಪಶ್ಚಾದಗ್ರೇ ತದಾಭವತ್ ॥
ಅತ್ಯಂತತುಮುಲಂ ಚಾಸೀಚ್ಛಕ್ತೀನಾಂ ಸೈನಿಕಂ ಮಹತ್ ।
ನಕ್ತಂ ಸಸತ್ವಾ ದೈತ್ಯೇಂದ್ರಾಸ್ತಿಮಿರೇಣ ಸಮಾವೃತಾಃ ।
ಇತಸ್ತತಃ ಶಿಥಿಲತಾಂ ಕಟಕಂ ನಿನ್ಯುರುದ್ಧತಾಃ ॥ ೬೭ ॥
ವಿಷಂಗೇಣ ದುರಾಶೇನ ದಮನಾದ್ಯೈಶ್ಚ ಚಮೂವರೈಃ ।
ಚಮೂಭಿಶ್ಚ ಪ್ರಣಿಹಿತಾ ನ್ಯಪತನ್ ಶಸ್ತ್ರಕೋಟಯಃ ॥ ೬೮ ॥
ತಾಭಿರ್ದೈತ್ಯಾಸ್ತ್ರಮಾಲಾಭಿಶ್ಚಕ್ರರಾಜರಥೋ ವೃತಃ ।
ವನಾವಲೀನಿಬಿಡಿತಃ ಶೈಲರಾಜ ಇವಾಬಭೌ ॥ ೬೯ ॥

---

ವುದರಲ್ಲಿ ಉದ್ದಂಡಪಂಡಿತನಾದ ಭಂಡಾಸುರನೂ ಮಹಾಪರಾಕ್ರಮಿಯಾದಕುಟಿಲಾಕ್ಷನನ್ನು ಹತ್ತು ಅಕ್ಷೋಹಿಣೀ ಸೇನೆಗಳೊಡನೆ ಶ್ರೀ ಲಲಿತಾಸೈನ್ಯದ ಮುಂಭಾಗವನ್ನೆದುರಿಸಿ ಯುದ್ಧಮಾಡಲು ಕಳುಹಿಸಿದನು.

೬೬. ಹಿಂಭಾಗದ ಸೈನ್ಯದ ಕೋಲಾಹಲಧ್ವನಿಯನ್ನು ಕೇಳಿ ಮುಂಭಾಗದ ಸೇನೆಯು ಹಿನ್ನುಗ್ಗಿ ಹೋಗದಂತೆ ಆ ಕುಟಿಲಾಕ್ಷನು ಆ ಸೇನೆಯೊಡನೆ ದೊಡ್ಡ ಕಾಳಗವನ್ನು ಮಾಡಿದನು. ಹೀಗೆ ಶ್ರೀ ಲಲಿತಾ ಸೇನೆಯ ಹಿಂಭಾಗ ಮುಂಭಾಗಗಳೆರಡರಲ್ಲಿಯೂ ಬಹಳ ಬಿರುಸಾದ ಯುದ್ಧವು ನಡೆಯಿತು.

೬೭. ರಾತ್ರಿಯ ವೇಳೆಯಲ್ಲಿ ಉದ್ಧತರೂ, ಮಹಾಬಲಾಢ್ಯರೂ ಆದ ಆ ದೈತ್ಯೇಂದ್ರರು ಕತ್ತಲೆಯಲ್ಲಡಗಿ ಯಾರಿಗೂ ಕಾಣಿಸಿಕೊಳ್ಳದೆ ಕಾಳಗ ಮಾಡಿ ಮಹತ್ತರವಾದ ಆ ಶಕ್ತಿಸೇನೆಯ ಪಾಳೆಯವನ್ನೇ ಸಡಿಲಿಸಿ ಬಿಟ್ಟರು.

೬೮. ಅದೇ ಸಮಯದಲ್ಲಿಯೇ ದುರಾತ್ಮನಾದ ವಿಷಂಗನೂ, ದಮನನೇ ಮೊದಲಾದ ಸೇನಾಪತಿಗಳೂ, ದಾನವಸೇನೆಯ ಭಟರೂ ಪ್ರಯೋಗಿಸಿದ ಕೋಟ್ಯಂತರ ಶಸ್ತ್ರಗಳು ಶ್ರೀ ಲಲಿತಾದೇವಿಯ ರಥದ ಮೇಲೆ ಬಿದ್ದವು.

೬೯. ಹೀಗೆ ಆ ದೈತ್ಯರ ಅಸ್ತ್ರಮಾಲೆಗಳಿಂದ ಶ್ರೀಚಕ್ರರಾಜ ರಥವೆಲ್ಲವೂ ಆವರಿಸಿ ಗಿಡಮರಗಳಿಂದ ಕಿಕ್ಕಿರಿದ ಪರ್ವತಶ್ರೇಷ್ಠದಂತೆ ಕಂಗೊಳಿಸಿತು.

ಆಕ್ರಾಂತಪರ್ವಣಾಧಸ್ತಾದ್ವಿಷಂಗೇಣ ದುರಾತ್ಮನಾ ।
ಮುಕ್ತ ಏಕಃ ಶರೋ ದೇವ್ಯಾಸ್ತಾಲವೃಂತಮಚೂರ್ಣಯತ್ ॥೭೦॥
ಅಥ ತೇನಾತ್ಯಾಹಿತೇನ ಸಂಭ್ರಾಂತೇ ಶಕ್ತಿಮಂಡಲೇ ।
ಕಾಮೇಶ್ವರೀಮುಖಾ ನಿತ್ಯಾ ಮಹಾಂತಂ ಕ್ರೋಧಮಾಯಯುಃ ॥
ಈಷದ್ಭ್ರುಕುಟಿಸಂಸರ್ಗಂ ಶ್ರೀದೇವ್ಯಾ ವದನಾಂಬುಜೇ ।
ಅವಲೋಕ್ಯ ಭೃಶೋದ್ವಿಗ್ನಾ ನಿತ್ಯಾ ದಧುರತಿಕ್ರುಧಂ ॥ ೭೨ ॥
ನಿತ್ಯಾಃ ಕಾಲಸ್ವರೂಪಿಣ್ಯಃ ಪ್ರತ್ಯೇಕಂ ತಿಥಿವಿಗ್ರಹಾಃ । [ ೭೩ ॥
ಕೋಪಮುದ್ವೀಕ್ಷ್ಯ ಸಮ್ರಾಜ್ಞ್ಯಾ ಯುದ್ಧಾಯ ದಧುರುದ್ಯಮಂ॥
ಪ್ರಣಿಪತ್ಯ ಚ ತಾಂ ದೇವೀಂ ಮಹಾರಾಜ್ಞೀಂ ಮಹೋದಯಾಂ।
ಊಚುರ್ವಾಚಮಕಾಂಡೋತ್ಥ ಯುದ್ಧಕೌತುಕ ಗದ್ಗದಂ ॥ ೭೪ ॥

ನಿತ್ಯಾಃ—

ದೇವಿ ದೇವಿ ಮಹಾರಾಜ್ಞಿ ತ್ವಯಾಗ್ರೇ ಪ್ರೇಷಿತಾಂ ಚಮೂಂ ।
ದಂಡಿನೀಮಂತ್ರನಾಥಾದಿ ಮಹಾಶಕ್ತ್ಯಭಿಪಾಲಿತಾಂ ॥ ೭೫ ॥

---

೭೦. ದುರಾತ್ಮನಾದ ಆ ವಿಷಂಗನು, ತಾನು ಆಕ್ರಮಿಸಿದ ಪರ್ವದ ತಳಭಾಗದಿಂದ ಒಂದು ಬಾಣವನ್ನು ಶ್ರೀದೇವಿಯ ಮೇಲೆಸೆದನು: ಅದು ದೇವಿಯ ತಾಲವೃಂತವನ್ನು ಪುಡಿಗುಟ್ಟಿತು.

೭೧. ಹೀಗೆ ಪ್ರಮಾದವಾದುದನ್ನು ಕಂಡು ಶಕ್ತಿಮಂಡಲವೇ ತಳಮಳಿಸಿ ಹೋಗಲು, ಕಾಮೇಶ್ವರಿಯೇ ಮೊದಲಾದ ನಿತ್ಯದೇವಿಯರೆಲ್ಲರೂ ಬಹಳವಾಗಿ ಮುನಿದರು.

೭೨. ಆ ನಿತ್ಯದೇವಿಯರೆಲ್ಲರೂ ತಮ್ಮೊಡತಿಯಾದ ಶ್ರೀ ದೇವಿಯ ಮುಖಕಮಲದಲ್ಲಿ ಸ್ವಲ್ಪವಾಗಿ ಹುಬ್ಬುಗಂಟಿಕ್ಕಿರುವುದನ್ನು ಕಂಡು ಬಹಳವಾಗಿ ದುಃಖಿಸಿ ಆಗಲೇ ಮಹತ್ತರವಾದ ಕೋಪವನ್ನೂ ತಾಳಿದರು.

೭೩. ಕಲಾಸ್ವರೂಪಿಣಿಯರೂ, ತಿಥಿರೂಪಿಣಿಯರೂ ಆದ ಆ ದೇವಿಯರಲ್ಲಿ ಒಬ್ಬೊಬ್ಬರೂ ತಮ್ಮ ಸಮ್ರಾಜ್ಞಿಯ ಕೋಪವನ್ನು ಕಂಡು ಕಾಳೆಗಮಾಡಲು ಸಿದ್ಧರಾದರು.

೭೪. ಏಕಕಾಲದಲ್ಲಿಯೇ ಹುಟ್ಟಿದ ರಣೋತ್ಸಾಹದಿಂದ ಗದ್ಗದ ಸ್ವರಭರಿತೆಯರಾಗಿ ಆ ನಿತ್ಯದೇವಿಯರೆಲ್ಲರೂ ಮಹೋದಯೆಯೂ ಮಹಾರಾಜ್ಞಿಯೂ ಆದ ಆಕೆಯನ್ನು ನಮಸ್ಕರಿಸಿ ಹೀಗೆ ಹೇಳಿದರು :

೭೫-೭೬. "ದೇವಿ, ಮಹಾರಾಜ್ಞೀ! ನೀನು ಅನುಜ್ಞೆಯಿತ್ತು ಮುಂದೆ ಕಳುಹಿಸಿದ ಸೇನೆಯನ್ನು ದಂಡಿನೀಮಂತ್ರನಾಥೆಯರು

ಧರ್ಷಿತುಂ ಕಾತರಾ ದುಷ್ಟಾ ಮಾಯಾಚ್ಛದ್ಮಪರಾಯಣಾಃ ।
ಪಾರ್ಷ್ಣಿಗ್ರಹಣಯುದ್ಧೇನ ಬಾಧಂತೇ ರಥಪುಂಗವಂ ॥ ೭೬ ॥
ತಸ್ಮಾತ್ತಿಮಿರಸಂಛನ್ನಮೂರ್ತೀನಾಂ ತ್ರಿದಶದ್ವಿಷಾಂ । [ ೭೭ ॥
ಶಮಯಾಮೋ ವಯಂ ದರ್ಪಂ ಕ್ಷಣಮಾತ್ರಂ ವಿಲೋಕಯ ॥
ಯಾ ವಹ್ನಿವಾಸಿನೀ ನಿತ್ಯಾ ಯಾ ಜ್ವಾಲಾಮಾಲಿನೀ ಪರಾ ।
ತಾಭ್ಯಾಂ ಪ್ರದೀಪಿತೇ ಯುದ್ಧೇ ದ್ರಷ್ಟುಂ ಶಕ್ಯಾಃ ಸುರದ್ವಿಷಃ॥೭೮॥
ಪ್ರಶಮಯ್ಯ ಮಹಾದರ್ಪಂ ಪಾರ್ಷ್ಣಿಗ್ರಾಹಪ್ರವರ್ತಿನಾಂ ।
ಸಹಸೈವಾಗಮಿಷ್ಯಾಮೋ ರಕ್ಷಿತುಂ ಶ್ರೀಮದಂಗಕಂ ॥ ೭೯ ॥
ಆಜ್ಞಾಂ ದೇಹಿ ಮಹಾರಾಜ್ಞಿ ಮರ್ದನಾರ್ಥಂ ದುರಾತ್ಮನಾಂ ।
ಇತ್ಯುಕ್ತೇ ಸತಿ ನಿತ್ಯಾಭಿಸ್ತಥಾಸ್ತ್ವಿತಿ ಜಗಾದ ಸಾ ॥ ೮೦ ॥

---

ರಕ್ಷಿಸುತ್ತಿರುವುದನ್ನು ಕಂಡು ದುಷ್ಟರೂ, ಮಾಯೆಯಿಂದ ಮೋಸ ಯುದ್ಧ ಮಾಡುವುದರಲ್ಲಿ ಪರಾಯಣರೂ ಆದ ಆ ದಾನವರು ಶ್ರೀ ಚಕ್ರರಾಜರಥವನ್ನು ಹಿಂದಿನಿಂದ ಮುತ್ತಲು ಕಾತರರಾಗಿ ಈ ರೀತಿ ಬಹಳವಾಗಿ ಬಾಧಿಸುತ್ತಿರುವರು.

೭೭. ಆದುದರಿಂದ ಕತ್ತಲೆಮುಚ್ಚಿದ ರೂಪಗಳುಳ್ಳವರಾಗಿ ಕಾಳೆಗ ಮಾಡುತ್ತಿರುವ ಈ ದೇವಶತ್ರುಗಳ ಗರ್ವವನ್ನು ನಾವು ಅಡಗಿಸುತ್ತೇವೆ. ನೀನು ಒಂದು ಕ್ಷಣಕಾಲ ನೋಡುತ್ತಿರು.

೭೮. ದೇವೀ ! ನಿತ್ಯೆಯರಾದ ವಹ್ನಿವಾಸಿನಿಯೂ, ಜ್ವಾಲಾಮಾಲಿನಿಯೂ, ರಣರಂಗವನ್ನು ಪ್ರಜ್ವಲಗೊಳಿಸಿದರೆ ಆ ಸುರದ್ವೇಷಿಗಳೆಲ್ಲರೂ ಕಣ್ಣಿಗೆ ಬೀಳುವರು.

೭೯. ಅವರು ಕಣ್ಣಿಗೆ ಬೀಳುವುದೇ ತಡ. ಶೀಘ್ರವಾಗಿ ಬಂದು ನಮ್ಮನ್ನು ಹಿಡಿಯಲು ಉದ್ಯಮಿಸಿರುವ ಆ ದಾನವರ ದರ್ಪವೆಲ್ಲವನ್ನೂ ಅಡಗಿಸಿ ಪುನಃ ನಿಮ್ಮ ಶ್ರೀಶರೀರಸಂರಕ್ಷಣೆಗಾಗಿ ಬಹುಜಾಗ್ರತೆಯಾಗಿಯೇ ಬಂದುಬಿಡುವೆವು.

೮೦. ಮಹಾರಾಜ್ಞೀ! ದುರಾತ್ಮರಾದ ಆ ದಾನವರನ್ನು ಮರ್ದಿಸಲು ನಮಗೆ ಆಜ್ಞೆಯನ್ನು ಕೊಡು.'' ಆ ನಿತ್ಯದೇವಿಯರು ಈ ರೀತಿ ನುಡಿಯಲು, ಶ್ರೀದೇವಿಯು ಆಗಬಹುದೆಂದು ಅನುಮತಿಸಿದಳು.

**ಅಥ ಕಾಮೇಶ್ವರೀ ನಿತ್ಯಾ ಕುಂಡಲೀಕೃತಕಾರ್ಮುಕಾ ।**
**ಬಾಲಾರುಣಮಿವ ಕ್ರೋಧಾರುಣಂ ವಕ್ತ್ರಂ ವಿತನ್ವತೀ ॥ ೮೧ ॥**
**ರೇರೇ ತಿಷ್ಠತ ಪಾಪಿಷ್ಠಾ ಮಾಯಾಮದ್ಯ ಭಿನದ್ಮಿ ವಃ ।**
**ಅಂಧಕಾರಮನುಪ್ರಾಪ್ಯ ಕೂಟಯುದ್ಧಪರಾಯಣಾಃ ॥ ೮೨ ॥**
**ಇತಿ ತಾರ್ನ್ ಭರ್ತ್ಸಯಂತೀ ಸಾ ತೂಣೀರೋತ್ಪಾತಸಾಯಕಾ ।**
**ಪರ್ವಾವರೋಹಣಂ ಚಕ್ರೇ ಕ್ರೋಧೇನ ಪ್ರಸ್ಖಲದ್ಗತಿಃ ॥ ೮೩ ॥**
**ಸಜ್ಜಕಾರ್ಮುಕಹಸ್ತಾಶ್ಚ ಭಗಮಾಲಾಪುರಃಸರಾಃ ।**
**ಅನ್ಯಾಶ್ಚ ಚಲಿತಾ ನಿತ್ಯಾಃ ಕೃತಪರ್ವಾವರೋಹಣಾಃ ॥ ೮೪ ॥**
**ಜ್ವಾಲಾಮಾಲಿನಿಕಾ ನಿತ್ಯಾ ಸಾ ನಿತ್ಯಾ ವಹ್ನಿವಾಸಿನೀ ।**
**ಸಜ್ಜಾಯುಧೇ ಸ್ವತೇಜೋಭಿಃ ಸಮುದೀಪಯತಾಂ ರಣಂ ॥ ೮೫ ॥**
**ಅಥ ತೇ ದುಷ್ಟದನುಜಾಃ ಪ್ರದೀಪ್ತೇ ಯುದ್ಧಮಂಡಲೇ ।**
**ಪ್ರಕಾಶವಪುಷಸ್ತತ್ರ ಮಹಾಂತಂ ಕೋಪಮಾಯಯುಃ ॥ ೮೬ ॥**

---

೮೧-೮೩. ತರುವಾಯ ನಿತ್ಯದೇವಿಯಾದ ಕಾಮೇಶ್ವರೀದೇವಿಯು ತನ್ನ ಬಿಲ್ಲನ್ನು ಕುಂಡಲದಂತೆ ಬಗ್ಗಿಸಿ ಹಿಡಿದು ಬಾಲಾರುಣನಂತೆ ತನ್ನ ಮುಖವು ಕ್ರೋಧಾರುಣವಾಗಲು ಆ ದಾನವರೆಲ್ಲರನ್ನೂ ಕುರಿತು, "ಎಲೆಲೆಲವೋ ಪಾಪಿಷ್ಠರೇ! ನಿಲ್ಲಿರಿ, ನಿಲ್ಲಿರಿ. ನಿಮ್ಮ ಮಾಯೆಯನ್ನಿದೀಗ ಭೇದಿಸುವೆನು. ಅಂಧಕಾರದಲ್ಲಡಗಿ ಕಪಟಯುದ್ಧವನ್ನು ಮಾಡುತ್ತಿರುವಿರಾ! ನಿಲ್ಲಿರಿ" ಎಂದು ಗಜರಿ, ಅವರನ್ನು ಹೆದರಿಸುತ್ತ ಬತ್ತಳಿಕೆಯಿಂದ ಬಾಣಗಳನ್ನು ಸೆಳೆದು ಕೋಪದಿಂದ ತಡಬಡಿಸುತ್ತಿರುವ ನಡೆಯುಳ್ಳವಳಾಗಿ ತಾನಿದ್ದ ಪರ್ವದಿಂದಿಳಿದುಬಂದಳು.

೮೪. ಭಗಮಾಲಿನಿಯೇ ಮೊದಲಾದ ಇತರ ನಿತ್ಯದೇವಿಯರೆಲ್ಲರೂ ಹೆದೆಯೇರಿಸಿದ ಬಿಲ್ಲುಗಳುಳ್ಳವರಾಗಿ ತಮ್ಮ ತಮ್ಮ ಪರ್ವಸ್ಥಳಗಳಿಂದ ಇಳಿದುಬಂದರು.

೮೫. ಅದೇ ಸಮಯದಲ್ಲಿಯೇ ನಿತ್ಯೆಯರಾದ ಜ್ವಾಲಾಮಾಲಿನಿಯೂ, ವಹ್ನಿವಾಸಿನಿಯೂ ಹೆದೆಯೇರಿಸಿದ ಬಿಲ್ಲುಗಳನ್ನು ಧರಿಸಿ ಬಂದು ರಣರಂಗವೆಲ್ಲವನ್ನೂ ತಮ್ಮ ತೇಜಸ್ಸಿನಿಂದಲೇ ಪ್ರಜ್ವಲಗೊಳಿಸಿದರು.

೮೬. ಯುದ್ಧಮಂಡಲವೆಲ್ಲವೂ ಬೆಳ್ಳನೆ ಬೆಳಕಾಗಲು, ಆ ದುಷ್ಟ ದಾನವರೆಲ್ಲರೂ ಪ್ರಕಾಶವಾದ ರೂಪಗಳುಳ್ಳವರಾಗಿ ಕಾಣಿಸಿಕೊಂಡರು. ಇದರಿಂದ ಅವರು ಬಹಳವಾಗಿ ಕೋಪಗೊಂಡರು.

**ಕಾಮೇಶ್ವರ್ಯಾದಿಕಾ ನಿತ್ಯಾಸ್ತಾಃ ಪಂಚದಶ ಸಾಯುಧಾಃ ।**
**ಸಸಿಂಹನಾದಾಸ್ತಾನ್ ದೈತ್ಯಾನನ್ವಮೃದ್ನನ್ನೇಕಹೇಲಯಾ ॥ ೮೭ ॥**
**ಮಹಾನ್ ಕಲಕಲಸ್ತತ್ರ ಸಮಭೂದ್ಯುದ್ಧಸೀಮನಿ ।**
**ಮಂದರಕ್ಷೋಭಿತಾಂಭೋಧಿ ವೇಲ್ಲತ್ಕಲ್ಲೋಲಮಾಂಸಲಃ ॥ ೮೮ ॥**
**ತಾಶ್ಚ ನಿತ್ಯಾಃ ಕಲಕ್ವಾಣ ಕಂಕಣೈರ್ಯುರ್ಧಿ ಪಾಣಿಭಿಃ ।**
**ಆಕೃಷ್ಯಮಾಣಕೋದಂಡಾಸ್ತೇನಿರೇ ಯುದ್ಧಮುದ್ಧತಾಃ ॥ ೮೯ ॥**
**ಯಾಮದ್ವಿತಯಪರ್ಯಂತಮೇವಂ ಯುದ್ಧಂ ಪ್ರವರ್ತತ ।**
**ನಿತ್ಯಾನಾಂ ನಿಶಿತೈರ್ಬಾಣೈರಕ್ಷೋಹಿಣ್ಯಶ್ಚ ಸಂಹೃತಾಃ ॥ ೯೦ ॥**
**ಜಘಾನ ದಮನಂ ದುಷ್ಟಂ ಕಾಮೇಶೀ ಪ್ರಥಮಂ ಶರೈಃ ।**
**ದೀರ್ಘಜಿಹ್ವಂ ಚಮೂನಾಥಂ ಭಗಮಾಲಾ ವ್ಯದಾರಯತ್ ॥ ೯೧ ॥**

---

೮೭. ಆಗ, ಕಾಮೇಶ್ವರಿಯೇ ಮೊದಲಾದ ಆ ಹದಿನೈದು ಮಂದಿ ನಿತ್ಯದೇವಿಯರೂ ಆಯುಧಗಳನ್ನು ಧರಿಸಿ ಒಂದೇ ತಡವೆಯೇ ಸಿಂಹ ನಾದಗಳನ್ನು ಮಾಡುತ್ತ ಆ ದಾನವರೆಲ್ಲರನ್ನೂ ಅನಾಯಾಸವಾಗಿ ಮರ್ದಿಸಿದರು.

೮೮. ಆಗ ಯುದ್ಧಭೂಮಿಯಲ್ಲಿ ಮಹತ್ತರವಾದ ಕಲಕಲಧ್ವನಿ ಯೆದ್ದಿತು. ಆ ಧ್ವನಿಯು ಕ್ಷೀರಾಂಬುಧಿಯಲ್ಲಿ ಮಂದರಗಿರಿಯನ್ನಿಟ್ಟು ಕಡೆದಾಗ ಉಲ್ಲೋಲಕಲ್ಲೋಲವಾಗಿ ಅದರಿಂದುಂಟಾದ ಧ್ವನಿಯಂತೆ ಭಯಂಕರವಾಗಿದ್ದಿತು.

೮೯. ಉದ್ಧತೆಯರಾದ ಆ ನಿತ್ಯದೇವಿಯರಾದರೋ ಇಂಪಾಗಿ ದನಿಗೈಯುತ್ತಿರುವ ಬಳೆಗಳನ್ನು ತೊಟ್ಟ ತಮ್ಮ ಕೈಗಳಿಂದ ಬಿಲ್ಲುಗಳನ್ನು ಸೆಳೆದು ಬಾಣಗಳನ್ನು ಪ್ರಯೋಗಿಸುತ್ತ ಬಹು ಭಯಂಕರವಾಗಿ ಕಾಳಗ ಮಾಡಿದರು.

೯೦. ಹೀಗೆ ಆ ರಾತ್ರಿಯಲ್ಲಿ ಎರಡು ಯಾಮಗಳ ವರೆಗೂ ಯುದ್ಧವು ನಡೆದು ನಿತ್ಯದೇವಿಯರು ಪ್ರಯೋಗಿಸಿದ ಕೂರಂಬುಗಳಿಂದ ಆ ದಾನವರ ಅಕ್ಷೋಹಿಣೀ ಸೇನೆಗಳೆಲ್ಲವೂ ಸಂಹರಿಸಲಾದುವು.

೯೧. ಮೊದಲು ಶ್ರೀಕಾಮೇಶ್ವರೀದೇವಿಯು ಮೊನಚಾದ ಬಾಣ ಗಳಿಂದ ದುಷ್ಟನಾದ ದಮನನನ್ನು ಹೊಡೆದಳು. ತರುವಾಯ ಭಗಮಾಲಿನಿಯು ಬಾಣಗಳನ್ನು ಪ್ರಯೋಗಿಸಿ ಸೇನಾನಾಥನಾದ ದೀರ್ಘಜಿಹ್ವನನ್ನು ಸೀಳಿದಳು.

ನಿತ್ಯಾಕ್ಲಿನ್ನಾ ಚ ಭೇರುಂಡಾ ಹುಂಬೇಕಂ ಹುಲುಮುಲ್ಲಕಂ ।
ಕಲ್ಕಸಂ ವಹ್ನಿವಾಸಾ ಚ ನಿಜಘಾನ ಶಿತೈಃ ಶರೈಃ ॥ ೯೨ ॥
ಮಹಾವಜ್ರೇಶ್ವರೀ ಬಾಣೈರಚ್ಛಿನತ್ಕಲ್ಕಿವಾಹನಂ ।
ಪುಲ್ಕಸಂ ಶಿವದೂತೀ ಚ ಪ್ರಾಹಿಣೋದ್ಯಮಸಾದನಂ ॥ ೯೩ ॥
ಪುಂಡ್ರಕೇತುಂ ಭುಜೋದ್ದಂಡಂ ತ್ವರಿತಾ ಸಮದಾರಯತ್ ।
ಕುಲಸುಂದರಿನಿತ್ಯಾ ಚ ಚಂಡಬಾಹುಂ ಚ ಕುಕ್ಕುರಂ ॥ ೯೪ ॥
ಅಥ ನೀಲಪತಾಕಾ ಚ ವಿಜಯಾ ಚ ಜಯೋದ್ಧತೇ ।
ಜಂಬುಕಾಕ್ಷಂ ಜಂಭನಂ ಚ ವ್ಯಾತನ್ವಾತಾಂ ರಣೇ ಬಲಿಂ ॥ ೯೫ ॥
ಸರ್ವಮಂಗಲಿಕಾ ನಿತ್ಯಾ ತೀಕ್ಷ್ಣಶೃಂಗಮಖಂಡಯತ್ ।
ಜ್ವಾಲಾಮಾಲಿನಿಕಾ ನಿತ್ಯಾ ಜಘಾನೋಗ್ರಂ ತ್ರಿಕಂಟಕಂ ।
ಚಂದ್ರಗುಪ್ತಂ ಚ ದುಶ್ಶೀಲಂ ಚಿತ್ರಾನಿತ್ಯಾ ವ್ಯದಾರಯತ್ ॥ ೯೬ ॥

---

೯೨. ಆಮೇಲೆ ನಿತ್ಯಕ್ಲಿನ್ನಾದೇವಿಯು ಹುಂಬೇಕನನ್ನೂ, ಭೇರುಂಡೆಯು ಹುಲುಮುಲ್ಲನನ್ನೂ, ವಹ್ನಿವಾಸಿನಿಯು ಕಲ್ಕಸನನ್ನೂ ಹರಿತವಾದ ಬಾಣಗಳಿಂದ ಹೊಡೆದು ಕೆಡವಿದರು.

೯೩. ಕಲ್ಕಿವಾಹನದಾನವನನ್ನು ಮಹಾವಜ್ರೇಶ್ವರಿಯೂ, ಪುಲ್ಕಸನನ್ನು ಶಿವದೂತಿಯೂ ತಂತಮ್ಮ ಬಾಣಗಳಿಂದ ಕತ್ತರಿಸಿ ಕೆಡವಿ ಯಮನಾಲಯಕ್ಕೆ ಅಟ್ಟಿದರು.

೯೪. ತ್ವರಿತಾದೇವಿಯು ಉದ್ದಂಡಭುಜನಾದ ಪುಂಡ್ರಕೇತುವನ್ನು ತರಿದುಹಾಕಿದಳು. ಕುಲಸುಂದರಿಯೂ, ನಿತ್ಯಾದೇವಿಯೂ ಚಂಡಬಾಹು ಕುಕ್ಕುರರೆಂಬ ದಾನವರನ್ನು ವಧಿಸಿದರು.

೯೫. ಇದಾದ ಬಳಿಕ ಜಯೋದ್ಧತೆಯರಾದ ನೀಲಪತಾಕಾ ದೇವಿಯೂ, ವಿಜಯೆಯೂ ಜಂಬುಕಾಕ್ಷ ಮತ್ತು ಜಂಭನ ಎಂಬ ದೈತ್ಯರನ್ನು ರಣದೇವಿಗೆ ಬಲಿಯಿಕ್ಕಿದರು.

೯೬. ನಿತ್ಯೆಯಾದ ಸರ್ವಮಂಗಲೆಯು ತೀಕ್ಷ್ಣಶೃಂಗನನ್ನು ಖಂಡಿಸಿದಳು. ಜ್ವಾಲಾಮಾಲಿನಿಯು ಭಯಂಕರನಾದ ತ್ರಿಕಂಟಕ ದಾನವನನ್ನು ಸಂಹರಿಸಿದಳು. ನಿತ್ಯೆಯಾದ ಚಿತ್ರಾದೇವಿಯು ಚಂದ್ರ ಗುಪ್ತ ದುಶ್ಶೀಲರೆಂಬ ದಾನವರೀರ್ವರನ್ನೂ ಸಿಗಿದಳು.

ಸೇನಾನಾಥೇಷು ಸರ್ವೇಷು ನಿಹತೇಷು ದುರಾತ್ಮಸು ।
ವಿಷಂಗಃ ಪರಮಕ್ರುದ್ಧಶ್ಚಚಾರ ಪುರತೋ ಬಲೀ ॥ ೯೭ ॥
ಅಥ ಯಾಮಾವಶೇಷಾಯಾಂ ಯಾಮಿನ್ಯಾಂ ಘಟಿಕಾದ್ವಯಂ ।
ನಿತ್ಯಾಭಿಃ ಸಹ ಸಂಗ್ರಾಮಂ ವಿಧಾಯ ಸ ದುರಾಶಯಃ ।
ಅಶಕ್ಯತ್ವಂ ಸಮುದ್ವೀಕ್ಷ್ಯ ಚಕ್ರೇ ಪ್ರಪಲಾಯಿತುಂ ॥ ೯೮ ॥
ಕಾಮೇಶ್ವರೀಕರಾಕೃಷ್ಟಚಾಪೋತ್ಥೈರ್ನಿಶಿತೈಃ ಶರೈಃ ।
ಭಿನ್ನವರ್ಮಾ ದೃಢತರಂ ವಿಷಂಗೋ ವಿಹ್ವಲಾಶಯಃ ॥
ಹತಾವಶಿಷ್ಟೈರ್ಯೋಧೈಶ್ಚ ಸಾರ್ಧಮೇವ ಪಲಾಯಿತಃ ॥ ೯೯ ॥
ತಾಭಿರ್ನ ನಿಹತೋ ದುಷ್ಟೋ ಯಸ್ಮಾದ್ವಧ್ಯಃ ಸ ದಾನವಃ ।
ದಂಡನಾಥಾಶರೇಣೈವ ಕಾಲದಂಡಸಮತ್ವಿಷಾ ॥ ೧೦೦ ॥
ತಸ್ಮಿನ್ ಪಲಾಯಿತೇ ದುಷ್ಟೇ ವಿಷಂಗೇ ಭಂಡಸೋದರೇ ।
ಸಾ ವಿಭಾತಾ ಚ ರಜನೀ ಪ್ರಸನ್ನಾಶ್ಚಾಭವನ್ ದಿಶಃ ॥ ೧೦೧ ॥

---

೯೭. ಹೀಗೆ ದುರಾತ್ಮರಾದ ಆ ಸೇನಾನಾಯಕರೆಲ್ಲರೂ ಮಡಿದ ತರುವಾಯ ಮಹಾಪರಾಕ್ರಮಿಯಾದ ವಿಷಂಗನು ಬಹಳವಾಗಿ ಮುನಿದು ರಣರಂಗದಲ್ಲಿ ಮುನ್ನುಗ್ಗಿ ಬಂದು ಕಾಳಗಮಾಡಲು ಮೊದಲಿಟ್ಟನು.

೯೮. ಆ ದುರ್ಬುದ್ಧಿಯು, ಆ ರಾತ್ರಿಯ ಕಡೆಯ ಯಾಮದಲ್ಲಿ ಎರಡು ಘಳಿಗೆಗಳ ಕಾಲ ನಿತ್ಯದೇವಿಯರೊಡನೆ ಕಾಳಗಮಾಡಿ ಅವರನ್ನು ಗೆಲ್ಲಲು ಸಾಧ್ಯವಾಗದಿರುವುದನ್ನು ತಿಳಿದು ಪಲಾಯನವಾಗಲು ಹವಣಿಸಿದನು.

೯೯. ಕಾಮೇಶ್ವರೀದೇವಿಯ ಕೈಸೆಳತದಿಂದ ಹೊರಟುಬರುತ್ತಿರುವ ಕೂರಂಬುಗಳಿಂದ ಬಲವಾಗಿ ಒಡೆದ ಕವಚವುಳ್ಳವನಾಗಿ ಆ ದಾನವನು ಭಗ್ನಮನೋರಥನಾಗಿ ಮಡಿದುಳಿದ ದಾನವಯೋಧರೊಡನೆ ತಾನೂ ಓಡಿಹೋದನು.

೧೦೦. ಆ ದುಷ್ಟನು ದಂಡನಾಥಾದೇವಿಯ ಯಮದಂಡಕಾಂತಿಯುಳ್ಳ ಬಾಣದಿಂದಲೇ ಮಡಿಯಬೇಕಾಗಿದ್ದುದರಿಂದ ನಿತ್ಯದೇವಿಯರಾರೂ ಅವನನ್ನು ವಧಿಸಲಿಲ್ಲ.

೧೦೧. ಭಂಡಸೋದರನಾದ ದುಷ್ಟವಿಷಂಗನು ಹೀಗೆ ಪಲಾಯನವಾಗಿಹೋಗಲು ರಾತ್ರಿಯು ಕಳೆದು ಬೆಳಗಾಯಿತು. ದಿಕ್ಕುಗಳೆಲ್ಲವೂ ಪ್ರಸನ್ನಗಳಾದವು.

ಪಲಾಯಿತಂ ರಣೇ ವೀರಮನುಸರ್ತುಮನೌಚಿತೀ ।
ಇತಿ ತಾಃ ಸಮರಾನ್ನಿತ್ಯಾಸ್ತಸ್ಮಿನ್‌ಕಾಲೇ ವ್ಯರಂಸಿಷುಃ ॥ ೧೦೨ ॥
ದೈತ್ಯಶಸ್ತ್ರವ್ರಣಸ್ಯಂದಿ ಶೋಣಿತಪ್ಲುತವಿಗ್ರಹಾಃ ।
ನಿತ್ಯಾಃ ಶ್ರೀಲಲಿತಾದೇವೀಂ ಪ್ರಣಿಪೇತುರ್ಜಯೋದ್ಧತಾಃ ॥ ೧೦೩ ॥
ಇತ್ಥಂ ರಾತ್ರೌಮಹದ್ಯುದ್ಧಂ ತತ್ರ ಜಾತಂ ಭಯಂಕರಂ ।
ನಿತ್ಯಾನಾಂ ವಿಕ್ರಮೈಶ್ಚಾಪಿ ಲಲಿತಾ ಪ್ರೀತಿಮಾಸದತ್ ॥ ೧೦೪ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ವಿಂಶೋಽಧ್ಯಾಯಃ

॥ ಸಮಾಪ್ತಶ್ಚ ಪ್ರಥಮಯುದ್ಧ ದಿವಸಃ ॥

---

೧೦೨. ಆ ಸಮಯದಲ್ಲಿ ರಣರಂಗದಿಂದ ಓಡಿಹೋದ ವೀರರನ್ನು ಅಟ್ಟಿಹೋಗಬಾರದೆಂದು ಬಗೆದು ನಿತ್ಯದೇವಿಯರೆಲ್ಲರೂ ಕಾಳಗವನ್ನು ನಿಲ್ಲಿಸಿ ಸುಮ್ಮನಾದರು.

೧೦೩. ಹೀಗೆ ಆ ರಾತ್ರಿಯುದ್ಧವು ಮುಗಿದ ಬಳಿಕ ಜಯೋದ್ಧತೆಯರಾದ ನಿತ್ಯದೇವಿಯರೆಲ್ಲರೂ, ಆ ದೈತ್ಯರು ಪ್ರಯೋಗಿಸಿದ ಶಸ್ತ್ರಗಳ ಹೊಡೆತಗಳಿಂದ ಗಾಯಗೊಂಡು ಹರಿಯುತ್ತಿರುವ ರಕ್ತಪ್ರವಾಹಗಳುಳ್ಳ ಶರೀರಗಳುಳ್ಳವರಾಗಿಯೇ ಶ್ರೀ ಲಲಿತಾದೇವಿಯನ್ನು ಕಂಡು ಆಕೆಯನ್ನು ನಮಸ್ಕರಿಸಿದರು.

೧೦೪. ಹೀಗೆ, ಅಂದಿನ ರಾತ್ರಿ ಭಯಂಕರಯುದ್ಧವು ನಡೆಯಿತು. ಆ ಯುದ್ಧದಲ್ಲಿ ನಿತ್ಯದೇವಿಯರು ಮೆರೆದ ಪರಾಕ್ರಮಕ್ಕೆ ಶ್ರೀ ಲಲಿತಾದೇವಿಯು ಬಹಳವಾಗಿ ಸಂತೋಷಿಸಿದಳು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದಲ್ಲಿ
ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಮೊದಲನೆಯ ಯುದ್ಧದಿವಸವು ಮುಗಿದುದು ॥

॥ ಶ್ರೀಃ ॥

# ಅಥೈಕವಿಂಶೋಽಧ್ಯಾಯಃ

[ವಹ್ನಿಪ್ರಾಕಾರರಚನಾ, ಭಂಡಪುತ್ರವಧಶ್ಚ]

ತ್ರಿಂಶದ್ಭಂಡಸುತಾಃ ಕ್ಷಣೇನ ನಿಹತಾಶ್ಚಾಕ್ಷೋಹಿಣೀನಾಂ ಶತ
ದ್ವಂದ್ವಂ ದೇವಿ ಸುಬಾಲಿಕೇ ಪರಶಿವೇ ಯುದ್ಧೇ ತ್ವಯೈತೇ ಬಲಾತ್।
ಶಸ್ತ್ರೈರ್ವಿಶ್ವಜಯೈಕಗರ್ವ ಸಹಿತಾ ಯಸ್ಮಾತ್ತ್ವಮಂಬಾಸುತಾ
ತಾಮೇತಾಂ ಲಲಿತಾಂ ಪ್ರಣೌಮಿ ಸತತಂ ಶ್ರೀ ಸುಂದರೇಶಪ್ರಿಯಾಂ ॥

ಶ್ರೀ ಹಯಗ್ರೀವಃ—

**ದಶಾಕ್ಷೋಹಿಣಿಕಾಯುಕ್ತಃ ಕುಟಿಲಾಕ್ಷೋಽತಿವೀರ್ಯವಾನ್ ।**
**ದಂಡನಾಥಾಶರೈಸ್ತೀಕ್ಷ್ಣೈ ರಣೇ ಭಗ್ನಃ ಪಲಾಯಿತಃ ॥ ೧ ॥**
**ದಶಾಕ್ಷೋಹಿಣಿಕಾಸೈನ್ಯಂ ತಯಾ ರಾತ್ರೌ ವಿನಾಶಿತಂ ।**
**ಇಮಂ ವೃತ್ತಾಂತಮಾಕರ್ಣ್ಯ ಭಂಡಃ ಸಂಕ್ಷೋಭಮಾಯಯೌ ॥**
**ರಾತ್ರೌ ಕಪಟಸಂಗ್ರಾಮಂ ದುಷ್ಟಾನಾಂ ನಿರ್ಜರದ್ರುಹಾಂ ।**
**ಮಂತ್ರಿಣೀ ದಂಡನಾಥಾ ಚ ಶ್ರುತ್ವಾ ನಿರ್ವೇದಮಾಪತುಃ ॥ ೩ ॥**

---

## ಕನ್ನಡದ ಅನುವಾದ

[ವಹ್ನಿಪ್ರಾಕಾರರಚನೆ ಮತ್ತು ಭಂಡಪುತ್ರರ ವಧೆ]

೧. ಹಯಗ್ರೀವಮುನಿಯು ಹೇಳುತ್ತಾನೆ:—ಎಲೈ ಕುಂಭಸಂಭವನೇ! ಇತ್ತ ಹತ್ತು ಅಕ್ಷೋಹಿಣೀ ಸೇನೆಗಳೊಡಗೂಡಿ ಮಹಾಪರಾಕ್ರಮಿಯಾದ ಕುಟಿಲಾಕ್ಷನೂ ಸಹ ಶ್ರೀ ದಂಡನಾಥಾದೇವಿಯ ತೀಕ್ಷ್ಣಬಾಣಗಳಿಂದ ಭಗ್ನನಾಗಿ ರಣರಂಗದಿಂದ ಓಡಿಹೋದನು.

೨. ಆ ದೇವಿಯು ಅಂದಿನ ರಾತ್ರಿ ದಾನವರ ಹತ್ತು ಅಕ್ಷೋಹಿಣೀ ಸೇನೆಗಳನ್ನೂ ನಾಶಗೊಳಿಸಿದಳು. ಅತ್ತ ಭಂಡದಾನವನು ಈ ವೃತ್ತಾಂತವನ್ನು ಕೇಳಿ ಭಯದಿಂದ ತಳಮಳಿಸಿಹೋದನು.

೩. ಇತ್ತ ಮಂತ್ರಿಣೀದಂಡನಾಥೆಯರೀರ್ವರೂ ಅಂದಿನ ರಾತ್ರಿಯ ವೇಳೆಯಲ್ಲಿ ದೇವದ್ವೇಷಿಗಳಾದ ಆ ದುಷ್ಟದಾನವರು ನಡೆಸಿದ ಕಪಟಯುದ್ಧದ ಸುದ್ದಿಯನ್ನು ಕೇಳಿ ಬಹಳ ಚಿಂತೆಗೀಡಾದರು.

**ಅಹೋ ಬತ ಮಹತ್ಕಷ್ಟಂ ಮಹಾದೇವ್ಯಾಃ ಸಮಾಗತಂ ।**
**ಉತ್ತಾನಬುದ್ಧಿಭಿರ್ದೂರಮಸ್ಮಾಭಿಶ್ಚಲಿತಂ ಪುರಃ ॥ ೪ ॥**
**ಮಹಾಚಕ್ರರಥೇಂದ್ರಸ್ಯ ನ ಜಾತಂ ರಕ್ಷಣಂ ಬಲೈಃ ।**
**ಏತಚ್ಚಾವಸರಂ ಪ್ರಾಪ್ಯ ರಾತ್ರೌ ದುಷ್ಟೈಃ ಪರಾಕೃತಂ ॥ ೫ ॥**
**ಕೋ ವೃತ್ತಾಂತೋ ಭವೇತ್ತತ್ರ ಸ್ವಾಮಿನ್ಯಾ ಕಿಂ ರಣಃ ಕೃತಃ ।**
**ಅನ್ಯಾ ವಾ ಶಕ್ತಯಸ್ತತ್ರ ಚಕ್ರುರ್ಯುದ್ಧಂ ಮಹಾಸುರೈಃ ॥ ೬ ॥**
**ವಿಮೃಷ್ಟವ್ಯಮಿದಂ ಕಾರ್ಯಂ ಪ್ರವೃತ್ತಿಸ್ತತ್ರ ಕೀದೃಶೀ ।**
**ಮಹಾದೇವ್ಯಾಶ್ಚ ಹೃದಯೇ ಕಃ ಪ್ರಸಂಗಃ ಪ್ರವರ್ತತೇ ॥ ೭ ॥**
**ಇತಿ ಶಂಕಾಕುಲಾಸ್ತತ್ರ ದಂಡನಾಥಾ ಪುರೋಗಮಾಃ ।**
**ಮಂತ್ರಿಣೀಂ ಪುರತಃ ಕೃತ್ವಾ ಪ್ರಚೇಲುರ್ಲಲಿತಾಂ ಪ್ರತಿ ॥ ೮ ॥**
**ಶಕ್ತಿಚಕ್ರಚಮೂನಾಥಾಃ ಸರ್ವಾಸ್ತಾಃ ಪುಂಜಿತಾಃ ಕ್ವಚಿತ್ । [ ೯ ॥**
**ವ್ಯತೀತಾಯಾಂ ವಿಭಾವರ್ಯಾಂ ರಥೇಂದ್ರಂ ಪರ್ಯವಾರಯನ್ ॥**

---

೪. "ಅಕ್ಕಟಾ! ನಮ್ಮ ಮಹಾದೇವಿಗೆ ಎಂತಹ ಮಹಾಕಷ್ಟವು ಬಂದಿತು! ಮಂದಬುದ್ಧಿಗಳಾದ ನಾವು ಬಹುದೂರ ಮುಂದುವರಿದು ಹೊರಟುಹೋದೆವು.

೫. ಶ್ರೀಚಕ್ರರಾಜರಥಕ್ಕೆ ಸೈನ್ಯಸಂರಕ್ಷಣೆಯೇ ಇಲ್ಲದೆ ಹೋಯಿತು. ಈ ಅವಕಾಶವನ್ನು ಉಪಯೋಗಿಸಿಕೊಂಡು ಆ ದುರುಳ ದಾನವರು ರಾತ್ರಿಯವೇಳೆಯಲ್ಲಿ ಪರಾಕ್ರಮಿಸಿದರು.

೬. ಅಲ್ಲಿ ಯಾವ ಸುದ್ದಿಯೋ ಏನೋ! ಸ್ವಾಮಿನಿಯು ಕಾಳಗ ಮಾಡಿದಳೋ ಏನೋ! ಅಲ್ಲಿದ್ದ ಇತರ ಶಕ್ತಿದೇವಿಯರಾದರೂ ಆ ಮಹಾಸುರರೊಡನೆ ಕಾಳಗಮಾಡಿದರೋ ಏನೋ!

೭. ಯಾವುದೂ ತಿಳಿಯದಾಗಿರುವುದು. ಈ ಕಾರ್ಯವೆಂತಿರುವುದೆಂಬುದನ್ನು ತಿಳಿಯಬೇಕು. ಅಲ್ಲಿನ ಸುದ್ದಿಯೇನೆಂಬುದನ್ನು ಅರಿತುಕೊಳ್ಳಬೇಕು. ಮಹಾದೇವಿಯ ಮನಸ್ಸಿನಲ್ಲಿಯಾದರೂ ಯಾವ ಪ್ರಸಂಗವು ನಡೆಯುತ್ತಿರುವುದೋ?"

೮. ದಂಡನಾಥೆಯೇ ಮೊದಲಾದ ಆ ಶಕ್ತಿದೇವಿಯರೆಲ್ಲರೂ ಈ ರೀತಿ ಸಂಶಯಪಟ್ಟು ವ್ಯಾಕುಲಚಿತ್ತೆಯರಾಗಿ ಮಂತ್ರಿಣೀದೇವಿಯನ್ನು ಮುಂದಿಟ್ಟುಕೊಂಡು ಶ್ರೀಲಲಿತಾದೇವಿಯನ್ನು ಕಾಣಲು ಹೊರಟರು.

೯. ಶಕ್ತಿಸೇನೆಗಳಿಗೆ ಒಡೆಯರಾದ ಅವರೆಲ್ಲರೂ ಆ ರಾತ್ರಿ ಒಂದೆಡೆ

**ಅವರುಹ್ಯ ಸ್ವಸ್ವಯಾನಾನ್ಮಂತ್ರಿಣೀ ದಂಡನಾಯಿಕೇ ।**
**ಅಥಸ್ತ್ರಾತ್ಸೈನ್ಯಮಾವೇಶ್ಯ ತದಾರುರುಹತೂ ರಥಂ ॥ ೧೦ ॥**
**ಕ್ರಮೇಣ ನವಪರ್ವಾಣಿ ವ್ಯತೀತ್ಯ ತ್ವರಿತಕ್ರಮೈಃ ।**
**ತತ್ತತ್ಪರ್ವಗತೈಃ ಶಕ್ತಿಚಕ್ರೈಃ ಸಮ್ಯಙ್ನಿವೇದಿತಾಂ ॥ ೧೧ ॥**
**ಅಭಜೇತಾಂ ಮಹಾರಾಜ್ಞೀಂ ಮಂತ್ರಿಣೀ ದಂಡನಾಯಿಕೇ ।**
**ತೇ ವ್ಯಜಿಜ್ಞಪತಾಂ ದೇವ್ಯೈ ಅಷ್ಟಾಂಗಸ್ಪೃಷ್ಟಭೂತಲೇ ॥ ೧೨ ॥**
**ಮಹಾನ್ ಪ್ರಮಾದಃ ಸಮಭೂದಿತಿ ನಃ ಶ್ರುತಮಂಬಿಕೇ ।**
**ಕೂಟಯುದ್ಧಪ್ರಕಾರೇಣ ದೈತ್ಯೈರಪಕೃತಂ ಖಲೈಃ ॥ ೧೩ ॥**
**ಸ ದುರಾತ್ಮಾ ದುರಾಚಾರಃ ಪ್ರಕಾಶಸಮರಾತ್ರಸನ್ ।**
**ಕುಹನಾವ್ಯವಹಾರೇಣ ಜಯಸಿದ್ಧಿಂ ತು ಕಾಂಕ್ಷತಿ ॥ ೧೪ ॥**
**ದೈವಾನ್ನ ಸ್ವಾಮಿನೀಗಾತ್ರೇ ದುಷ್ಟಾನಾಮಮರದ್ರುಹಾಂ ।**
**ಶರಾದಿಕಪರಾಮರ್ಶೋ ನ ಜಾತಸ್ತೇನ ಜೀವಿತಂ ॥ ೧೫ ॥**
**ಏಕಾವಲಂಬನಂ ಕೃತ್ವಾ ಮಹಾರಾಜ್ಞಿ ಭವತ್ಪದಂ ।**
**ವಯಂ ಸರ್ವೇಽಪಿ ಜೀವಾಮಃ ಸಾಧಯಾಮಃ ಸಮೀಹಿತಂ ॥ ೧೬ ॥**

---

ಸೇರಿ ಈ ರೀತಿ ಆಲೋಚಿಸಿ ಬೆಳಗಾಗುತ್ತಲೇ ಬಂದು ಶ್ರೀಚಕ್ರರಾಜರಥವನ್ನು ಬಳಸಿ ನಿಂತರು.

೧೦. ಮಂತ್ರಿಣೀದೇವಿಯೂ, ದಂಡನಾಥೆಯೂ ತಮ್ಮ ತಮ್ಮ ರಥಗಳಿಂದಿಳಿದು ಸೇನೆಗಳನ್ನೆಲ್ಲ ಅಲ್ಲಿಯೇ ನಿಲ್ಲಿಸಿ ಆ ರಥವನ್ನೇರಿದರು.

೧೧-೧೨. ಮಂತ್ರಿಣೀದೇವಿಯೂ ದಂಡನಾಥೆಯೂ ಬಹುವೇಗವಾದ ನಡೆಯಿಂದ ಕ್ರಮವಾಗಿ ಒಂಬತ್ತು ಪರ್ವಗಳನ್ನೂ ಏರಿ, ಆಯಾ ಪರ್ವಗಳ ಶಕ್ತಿಚಕ್ರಗಳು ಅರಿಕೆ ಮಾಡಿದ ಬಳಿಕ ಮಹಾರಾಜ್ಞಿಯಾದ ಶ್ರೀ ಲಲಿತಾಪರಮೇಶ್ವರಿಯ ಬಳಿಗೈದಿ ಆಕೆಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಹೀಗೆ ಅರಿಕೆಮಾಡಿದರು :

೧೩. "ಅಂಬಿಕೇ! ಕಪಟಯುದ್ಧದ ಮೂಲಕ ದುಷ್ಟರಾದ ಆ ದಾನವರು ಅಪರಾಧವೆಸಗಿದುದರ ಸಲುವಾಗಿ ಇಲ್ಲಿ ಮಹಾಪ್ರಮಾದ ಉಂಟಾಯಿತೆಂದು ಕೇಳಿದೆವು.

೧೪. ದುರಾತ್ಮನೂ ದುರಾಚಾರನೂ ಆದ ಭಂಡನು ಹಗಲ ಯುದ್ಧದಲ್ಲಿ ನಮ್ಮನ್ನೆದುರಿಸಲು ಹೆದರಿ ಮೋಸಯುದ್ಧದಿಂದ ಜಯವನ್ನು ಪಡೆಯಬಯಸುತ್ತಿರುವನು.

೧೫-೧೬. ಅದೃಷ್ಟವಶದಿಂದ ದೇವದ್ವೇಷಿಗಳಾದ ಆ ದಾನವರ

**ಅಥ ಸ್ವಾಮಿನಿ ಕರ್ತವ್ಯಂ ಶ್ರೀಮದಂಗಸ್ಯ ರಕ್ಷಣಂ । [೧೭ ॥**
**ಮಾಯಾವಿನಶ್ಚ ದೈತ್ಯೇಂದ್ರಾಸ್ತತ್ರ ಮಂತ್ರೋ ವಿಧೀಯತಾಂ ॥**
**ಅಪಕಾಲೇಷು ಯೇಽನ್ಯೈತೇ ಭಂಡಾದ್ಯಾ ದಾನವಾಧಮಾಃ ।**
**ಕೂಟಯುದ್ಧಂ ನ ಕುರ್ವಂತಿ ನ ವಿಶಂತಿ ಚಮೂಮಿಮಾಂ ॥ ೧೮ ॥**
**ತಥಾ ಮಹೇಂದ್ರಶೈಲಸ್ಯ ಕಾರ್ಯಂ ದಕ್ಷಿಣದೇಶತಃ ।**
**ಶಿಬಿರಂ ಬಹುವಿಸ್ತಾರಂ ಯೋಜನಾನಾಂ ಶತಾವಧಿ ॥ ೧೯ ॥**
**ವಹ್ನಿಪ್ರಾಕಾರವಲಯಂ ರಕ್ಷಣಾರ್ಥಂ ವಿಧೀಯತಾಂ ।**
**ಅಸ್ಮತ್ಸೇನಾನಿವೇಶಸ್ಯ ದ್ವಿಷಾಂ ದರ್ಪಶಮಾಯ ಚ ॥ ೨೦ ॥**
**ಶತಯೋಜನಮಾತ್ರಂ ತು ಮಧ್ಯದೇಶಃ ಪ್ರಕಲ್ಪ್ಯತಾಂ ।**
**ವಹ್ನಿಪ್ರಾಕಾರಚಕ್ರಸ್ಯ ದ್ವಾರಂ ದಕ್ಷಿಣತೋ ಭವೇತ್ ॥ ೨೧ ॥**

---

ಅಂಬು ಮೊದಲಾದ ಯಾವುಗಳೂ ಸ್ವಾಮಿನಿಯ ಮೈಗೆ ತಾಕದಿದ್ದುದರಿಂದ ನಾವೆಲ್ಲರೂ ಜೀವದಿಂದಿರುವೆವು. ಮಹಾರಾಜ್ಞೀ! ನಾವೆಲ್ಲರೂ ನಿನ್ನಡಿಯೊಂದನ್ನೇ ಆಶ್ರಯಿಸಿಕೊಂಡು ಜೀವಿಸಿರುವೆವಲ್ಲದೆ, ಇಷ್ಟಾರ್ಥಗಳನ್ನೂ ಸಾಧಿಸುತ್ತಿರುವೆವು.

೧೭. ಓ ಸ್ವಾಮಿನಿ! ಹೀಗಿರುವುದರಿಂದ ತಾವು ತಮ್ಮ ಶರೀರವನ್ನು ಅವಶ್ಯವಾಗಿ ಸಂರಕ್ಷಣೆಮಾಡಿಕೊಳ್ಳಬೇಕು. ದೈತ್ಯೇಂದ್ರರಾದರೊ ಮಾಯಾವಿಗಳು. ಈ ವಿಷಯದಲ್ಲಿ ಆಲೋಚಿಸೋಣವಾಗಲಿ.

೧೮. ಭಂಡನೇ ಮೊದಲಾದ ಆ ದಾನವಾಧಮರು, ವೇಳೆಯಲ್ಲದ ವೇಳೆಯಲ್ಲಿ ನಮ್ಮ ಸೇನೆಯನ್ನು ಹೊಕ್ಕು ಕೂಟಯುದ್ಧವನ್ನು ಮಾಡದಿರುವಂತೆ ನಾವು ಎಚ್ಚರಗೊಳ್ಳಬೇಕಾಗಿರುವುದು.

೧೯. ಆದುದರಿಂದ ಮಹೇಂದ್ರಪರ್ವತದ ದಕ್ಷಿಣದಿಕ್ಕಿನಲ್ಲಿ ನೂರು ಯೋಜನಗಳಷ್ಟು ವಿಸ್ತಾರವಾದ ಶಿಬಿರವನ್ನು ರಚಿಸಬೇಕು.

೨೦. ಅಲ್ಲಿಯೇ ಆ ಶಿಬಿರದ ರಕ್ಷಣೆಗಾಗಿಯೂ, ಶತ್ರುಗಳಾದ ಆ ದಾನವರ ದರ್ಪವನ್ನಡಗಿಸುವುದಕ್ಕಾಗಿಯೂ ವಹ್ನಿಪ್ರಕಾರವಲಯವನ್ನೂ ನಿರ್ಮಿಸೋಣವಾಗಲಿ.

೨೧. ಆ ವಹ್ನಿಪ್ರಾಕಾರದ ನಡುವಣ ನೆಲವು ನೂರು ಯೋಜನಗಳಷ್ಟು ವಿಶಾಲವಾಗಿರಬೇಕು. ಅದರ ಬಾಗಿಲು ದಕ್ಷಿಣದಿಕ್ಕಿನಲ್ಲಿಯೇ ಇರತಕ್ಕುದು.

**ಯತೋ ದಕ್ಷಿಣದೇಶಸ್ಥಂ ಶೂನ್ಯಕಂ ದ್ವಿಷತಾಂ ಪುರಂ ।**
**ದ್ವಾರೇ ಚ ಬಹವಃ ಕಲ್ಪ್ಯಾಃ ಪರಿವಾರಾ ಉದಾಯುಧಾಃ ॥ ೨೨ ॥**
**ನಿರ್ಗಚ್ಛತಾಂ ಪ್ರವಿಶತಾಂ ಜನಾನಾಮುಪರೋಧಕಾಃ ।**
**ಅನಾಲಸ್ಯಾ ಅನಿದ್ರಾಶ್ಚ ವಿಧೇಯಾಃ ಸತತೋದ್ಯಮಾಃ ॥ ೨೩ ॥**
**ಏವಂ ಚ ಸತಿ ದುಷ್ಟಾನಾಂ ಕೂಟಯುದ್ಧಂ ಚಿಕೀರ್ಷತಾಂ ।**
**ಅವೇಲಾಸು ಚ ಸಂಧ್ಯಾಸು ಮಧ್ಯರಾತ್ರಿಷು ಚ ದ್ವಿಷಾಂ ।**
**ಅಶಕ್ಯಮೇವ ಭವತಿ ಪ್ರೌಢಮಾಕ್ರಮಣಂ ಭವೇತ್ ॥ ೨೪ ॥**
**ನೋ ಚೇದ್ದುರಾಶಯಾ ದೈತ್ಯಾ ಬಹುಮಾಯಾಪರಿಗ್ರಹಾಃ ।**
**ಪಶ್ಯತೋ ನ ಭವೇತ್ಸರ್ವಂ ವಿಲುಂಠಂತಿ ಮಹದ್ಬಲಂ ॥ ೨೫ ॥**
**ಮಂತ್ರಿಣ್ಯಾ ದಂಡನಾಥಾಯಾ ಇತಿ ಶ್ರುತ್ವಾ ವಚಸ್ತದಾ ।**
**ಶುಚಿದಂತರುಚಾ ಮುಕ್ತಾ ವರ್ಷಂತೀ ಲಲಿತಾಬ್ರವೀತ್ ॥ ೨೬ ॥**

---

೨೨. ಶತ್ರುಗಳ ಶೂನ್ಯನಗರವು ದಕ್ಷಿಣ ದಿಕ್ಕಿನಲ್ಲಿಯೇ ಇರುವುದರಿಂದ, ವಹ್ನಿಪ್ರಾಕಾರಚಕ್ರದ ಬಾಗಿಲಲ್ಲಿ ಆಯುಧಗಳನ್ನೆತ್ತಿಹಿಡಿದು ಸನ್ನದ್ಧರಾಗಿರುವ ಬಹುಮಂದಿ ಪರಿವಾರದವರನ್ನು ನಿಲ್ಲಿಸಬೇಕು.

೨೩. ಈ ಪರಿವಾರದವರು ಅಲ್ಲಿಗೆ ಬಂದು ಹೋಗುವವರೆಲ್ಲರನ್ನೂ ತಡೆಯುತ್ತ, ನಿದ್ರೆಹೋಗದೆ ಜಾಗರೂಕರೂ, ವಿಧೇಯರೂ ಆಗಿ ಯಾವಾಗಲೂ ಉದ್ಯಮಶೀಲರಾಗಿರತಕ್ಕುದು.

೨೪. ಹೀಗೆ ಮಾಡಿದರೆ, ಅವೇಳೆಗಳಾದ ಸಂಜೆ ನಡುರಾತ್ರೆಗಳಲ್ಲಿ ಕೂಟಯುದ್ಧಮಾಡಬಯಸುವ ಆ ದುಷ್ಟದಾನವರು ಒಳನುಗ್ಗಲು ಅಸಾಧ್ಯವಾಗುವುದು ಮಾತ್ರವಲ್ಲದೆ, ನಮ್ಮ ಸೇನೆಯನ್ನಾಕ್ರಮಿಸುವುದೂ ಕಷ್ಟವಾಗುವುದು.

೨೫. ಹೀಗೆ ಮಾಡದಿದ್ದರೆ, ಅನೇಕ ಮಾಯೆಗಳನ್ನು ಬಲ್ಲ ಆ ದೈತ್ಯರು ದುರಾಶೆಯಿಂದ, ನಾವು ನೋಡುತ್ತಿರುವಂತೆಯೇ ನಮ್ಮ ಸೇನೆಯನ್ನೆಲ್ಲ ಉರುಳಿಸುತ್ತಾರೆಯಲ್ಲವೇ!"

೨೬. ಎಲೈ ಕುಂಭಸಂಭವನೇ! ಮಂತ್ರಿಣೀದೇವಿಯೂ, ದಂಡನಾಥೆಯೂ ಈ ರೀತಿ ನುಡಿಯಲು ಶ್ರೀ ಲಲಿತಾಪರಮೇಶ್ವರಿಯು ಅದನ್ನು ಕೇಳಿ, ನಿರ್ಮಲವಾದ ತನ್ನ ದಂತಕಾಂತಿಯಿಂದ ಮುತ್ತುಗಳನ್ನು ಸುರಿಸುವಳೋ ಎಂಬಂತೆ ಕಂಗೊಳಿಸಿ ಈ ರೀತಿ ಅಪ್ಪಣೆಕೊಡಿಸಿದಳು:

ಭವತೀಭ್ಯಾಮಯಂ ಮಂತ್ರಶ್ಚಾರುಬುದ್ಧ್ಯಾ ವಿಚಾರಿತಃ ।
ಅಯಂ ಕುಶಲಧೀಮಾರ್ಗೋ ನೀತಿರೇಷಾ ಸನಾತನೀ ॥ ೨೭ ॥
ಸ್ವಚಕ್ರಸ್ಯ ಪುರೋ ರಕ್ಷಾಂ ವಿಧಾಯ ದೃಢಸಾಧನೈಃ ।
ಪರಚಕ್ರಾಕ್ರಮಃ ಕಾರ್ಯೋ ಜಿಗೀಷದ್ಭಿರ್ಮಹಾಜನೈಃ ॥ ೨೮ ॥
ಇತ್ಯುಕ್ತ್ವಾ ಮಂತ್ರಿಣೀದಂಡನಾಥೇ ಸಾ ಲಲಿತೇಶ್ವರೀ ।
ಜ್ವಾಲಾಮಾಲಿನಿಕಾಂ ನಿತ್ಯಾಮಾಹೂಯೈವಮುವಾಚ ಹ ॥ ೨೯ ॥
ವತ್ಸೇ ತ್ವಂ ವಹ್ನಿರೂಪಾಸಿ ಜ್ವಲಜ್ಜ್ವಾಲಾಮಯಾಕೃತಿಃ ।
ತ್ವಯಾ ವಿಧೀಯತಾಂ ರಕ್ಷಾ ಬಲಸ್ಯಾಸ್ಯ ಮಹೀಯಸಃ ॥ ೩೦ ॥
ಶತಯೋಜನವಿಸ್ತಾರಂ ಪರಿವೃತ್ಯ ಮಹೀತಲಂ ।
ತ್ರಿಂಶದ್ಯೋಜನಮುನ್ನಮ್ರಜ್ವಾಲಾಪ್ರಾಕಾರತಾಂ ವ್ರಜ ॥ ೩೧ ॥
ದ್ವಾರಂ ಯೋಜನಮಾತ್ರಂ ತು ಮುಕ್ತ್ವಾನ್ಯತ್ರ ಜ್ವಲತ್ತನುಃ ।
ವಹ್ನಿಸಾಲತ್ವಮಾಪನ್ನಾ ಸಂರಕ್ಷ ಸಕಲಂ ಬಲಂ ॥ ೩೨ ॥

---

೨೭. "ಎಲೌ ಮಂತ್ರಿಣೀ ದಂಡನಾಥೆಯರೇ! ಒಳ್ಳೆಯ ಬುದ್ಧಿಯಿಂದ ನೀವೀರ್ವರೂ ಬಹು ಚೆನ್ನಾಗಿ ಆಲೋಚನೆ ಮಾಡಿರುವಿರಿ. ಇದೇ ಬುದ್ಧಿವಂತರ ಮಾರ್ಗ. ಇದೇ ಸನಾತನವಾದ ನೀತಿ.

೨೮. ಗೆಲ್ಲಬಯಸುವ ಮಹಾಜನರು ಮೊದಲು ಬಲವಾದ ಸಾಧನೆಗಳಿಂದ ಸ್ವಚಕ್ರಸಂರಕ್ಷಣೆಗೆ ಸರಿಯಾದ ಏರ್ಪಾಡನ್ನು ಮಾಡಿ ಆ ತರುವಾಯ ಪರಚಕ್ರದ ಆಕ್ರಮಣವನ್ನು ಮಾಡಬೇಕು."

೨೯. ಶ್ರೀ ಲಲಿತಾಪರಮೇಶ್ವರಿಯು ಆ ಮಂತ್ರಿಣೀದಂಡನಾಥೆಯರೀರ್ವರಿಗೂ ಈ ರೀತಿ ಹೇಳಿದ ಬಳಿಕ ನಿತ್ಯದೇವಿಯಾದ ಜ್ವಾಲಾಮಾಲಿನಿಯನ್ನು ಕರೆದು ಅವಳನ್ನು ಕುರಿತು ಹೀಗೆ ಹೇಳಿದಳು :

೩೦. "ಎಲೆ ವತ್ಸೇ! ಜ್ವಾಲಾಮಯವಾದ ಆಕಾರವುಳ್ಳ ನೀನು ವಹ್ನಿರೂಪಿಣಿಯೇ ಆಗಿರುವೆ. ನೀನು ಮಹತ್ತರವಾದ ಈ ನಮ್ಮ ಸೇನೆಗೆ ರಕ್ಷಣೆಯನ್ನೇರ್ಪಡಿಸು.

೩೧. ನೂರು ಯೋಜನಗಳ ವಿಸ್ತಾರವಾದ ನೆಲವನ್ನು ಆವರಿಸಿ ನಿಂತು ಮೂವತ್ತು ಯೋಜನಗಳ ಎತ್ತರವಾದ ಜ್ವಾಲೆಯ ಕೋಟೆಯ ರೂಪವನ್ನು ಹೊಂದುವವಳಾಗು.

೩೨. ಬಾಗಿಲಿಗಾಗಿ ಒಂದು ಯೋಜನದಗಲದ ಪ್ರದೇಶವನ್ನು ಬಿಟ್ಟು ಮಿಕ್ಕೆಲ್ಲ ಕಡೆಯೂ ಪ್ರಜ್ವಲಿಸುವ ಶರೀರವುಳ್ಳವಳಾಗಿ ಬೆಂಕಿಯ ಕೋಟೆಯ ರೂಪವನ್ನು ತಾಳಿ ಸಮಸ್ತ ಸೇನೆಯನ್ನೂ ಸಂರಕ್ಷಿಸು."

ಜ್ವಾಲಾಮಾಲಿನಿಕಾಂ ನಿತ್ಯಾನಿತ್ಯುಕ್ತ್ವಾ ಲಲಿತೇಶ್ವರೀ ।
ಮಹೇಂದ್ರೋತ್ತರಭೂಭಾಗಂ ಚಲಿತುಂ ಚಕ್ರಮುದ್ಯಮಂ ॥ ೩೩ ॥
ಸಾ ಚ ನಿತ್ಯಾ ನಿತ್ಯಮಭಿಜ್ವಲಜ್ಜ್ವಾಲಾಮಯಾಕೃತಿಃ ।
ಚತುರ್ದಶೀತಿಥಿಮಯೀ ತಥೇತಿ ಪ್ರಣನಾಮ ತಾಂ ॥ ೩೪ ॥
ತಯೈವ ಪೂರ್ವನಿರ್ದಿಷ್ಟಂ ಮಹೇಂದ್ರೋತ್ತರಭೂತಲಂ ।
ಕುಂಡಲೀಕೃತ್ಯ ಜಜ್ವಾಲ ಸಾಲರೂಪೇಣ ಸಾ ಪುನಃ ॥ ೩೫ ॥
ನಭೋಮಂಡಲಜಂಘಾಲ ಜ್ವಾಲಾಮಾಲಾಕುಲಾಕೃತಿಃ ।
ಬಭಾಸೇ ಸಾಲರೂಪಾ ಸಾ ರತ್ನಪ್ರಾಕಾರಶೋಭಿನೀ ॥ ೩೬ ॥
ತಂ ಪ್ರಾಕಾರಮಥಾವೀಕ್ಷ್ಯ ಶಕ್ತಯಃ ಶಸ್ತ್ರಪಾಣಯಃ ।
ಸೈನಿಕಂ ದಂಡನಾಥಾಯಾ ಮಂತ್ರಿನಾಥಾಚಮೂರಪಿ ॥ ೩೭ ॥
ಅನ್ಯಾಸಾಮಪಿ ಶಕ್ತೀನಾಂ ಮಹತೀನಾಂ ಮಹದ್ಬಲಂ ।
ನಿಶಂಕಟೋದರಂ ಸಾಲಂ ಪ್ರವಿವೇಶ ಗತಕ್ಲಮಂ ॥ ೩೮ ॥

---

೩೩. ಶ್ರೀ ಲಲಿತಾದೇವಿಯು ನಿತ್ಯೆಯಾದ ಜ್ವಾಲಾಮಾಲಿನಿಗೆ ಈ ರೀತಿ ಆಜ್ಞಾಪಿಸಿ ಮಹೇಂದ್ರಪರ್ವತದ ಉತ್ತರದಿಕ್ಕಿನ ಪ್ರದೇಶವನ್ನು ಕುರಿತು ತನ್ನ ಚಕ್ರವನ್ನು ನಡೆಸಲು ಉದ್ಯುಕ್ತೆಯಾದಳು.

೩೪. ಯಾವಾಗಲೂ ಪ್ರಜ್ವಲಿಸುತ್ತಲೇ ಇರುವ ಜ್ವಾಲೆಯ ರೂಪವುಳ್ಳವಳೂ, ನಿತ್ಯೆಯೂ, ಚತುರ್ದಶೀ ತಿಥಿಯ ರೂಪವುಳ್ಳವಳೂ ಆದ ಆ ಜ್ವಾಲಾಮಾಲಿನಿಯಾದರೋ ತನ್ನೊಡತಿಯ ಅಣತಿಯನ್ನು ಕೈಕೊಂಡು "ಅಂತೆಯೇ ಆಗಲೆ"ಂದು ಹೇಳಿ ನಮಸ್ಕರಿಸಿದಳು.

೩೫. ಮೊದಲೇ ಸೂಚಿಸಿದಂತೆ ಆ ದೇವಿಯು, ಮಹೇಂದ್ರಪರ್ವತದ ಉತ್ತರದಿಕ್ಕಿನ ಪ್ರದೇಶವನ್ನು ಸುತ್ತುವರೆದು ಕೋಟೆಯ ರೂಪದಲ್ಲಿ ಪ್ರಜ್ವಲಿಸಿದಳು.

೩೬. ನಭೋಮಂಡಲದವರೆಗೂ ಚಾಚಿರುವ ಜ್ವಾಲಾಮಾಲೆಗಳ ಆಕಾರವುಳ್ಳ ಆ ದೇವಿಯು ಕೋಟೆಯ ಆಕಾರವನ್ನು ತಳೆದು ರತ್ನ ಪ್ರಾಕಾರದಂತೆ ಶೋಭಿಸಿದಳು.

೩೭-೩೮. ಈ ವಹ್ನಿಪ್ರಾಕಾರವನ್ನು ಕಂಡು, ಶಸ್ತ್ರಪಾಣಿಯರಾದ ಶಕ್ತಿದೇವಿಯರೂ, ದಂಡನಾಥೆ ಮತ್ತು ಮಂತ್ರಿನಾಥೆಯರ ಸೈನ್ಯವೂ ಇತರ ಶಕ್ತಿಗಳ ಮಹತ್ತರಸೇನೆಯೂ ಯಾವೊಂದು ಆಯಾಸವೂ ಇಲ್ಲದೆ ಇಕ್ಕಟ್ಟಾದ ಮಧ್ಯಪ್ರದೇಶವುಳ್ಳ ಆ ಕೋಟೆಯನ್ನು ಪ್ರವೇಶಿಸಿದರು.

**ಚಕ್ರರಾಜರಥೇಂದ್ರಂ ತು ಮಧ್ಯೇ ಸಂಸ್ಥಾಪ್ಯ ದಂಡಿನೀ ।**
**ವಾಮಪಕ್ಷೇ ರಥಂ ಸ್ವೀಯಂ ದಕ್ಷೇ ಚ ಶ್ಯಾಮಲಾರಥಂ**
**ಪಶ್ಚಾದ್ಭಾಗೇ ಸಂಪದೀಶೀಂ ಪುರಸ್ತಾಚ್ಚ ಹಯಾನನಾಂ ॥ ೩೯ ॥**
**ಏವಂ ಸಂವೇಶ್ಯ ಪರಿತಶ್ಚಕ್ರರಾಜರಥಸ್ಯ ಸಾ ।**
**ದ್ವಾರೇ ನಿವೇಶಯಾಮಾಸ ವಿಂಶತ್ಯಕ್ಷೋಹಿಣೀಯುತಾಂ ॥ ೪೦ ॥**
**ಜ್ವಲದ್ದಂಡಾಯುಧೋದಗ್ರಾಂ ಸ್ತಂಭಿನೀಂ ನಾಮ ದೇವತಾಂ ।**
**ಯಾ ದೇವೀ ದಂಡನಾಥಾಯಾ ವಿಘ್ನದೇವೀತಿ ವಿಶ್ರುತಾ ॥ ೪೧ ॥**
**ಏವಂ ಸುರಕ್ಷಿತಂ ಕೃತ್ವಾ ಶಿಬಿರಂ ಪೋತ್ರಿಣೀ ತತಃ ।**
**ಪೂಷಣ್ಯುದಿತಭೂಯಿಷ್ಠೇ ಪುನರ್ಯುದ್ಧಮುಪಾಶ್ರಯತ್ ॥ ೪೨ ॥**
**ತತಃ ಕಿಲಕಿಲಾರಾವಂ ಕೃತ್ವಾ ಶಕ್ತಿಮಹಾಚಮೂಃ ।**
**ಅಗ್ನಿಪ್ರಾಕಾರಕದ್ವಾರಾನ್ನಿರ್ಜಗಾಮ ಮಹಾರವಾ ॥ ೪೩ ॥**

---

೩೯. ತರುವಾಯ ಶ್ರೀದಂಡನಾಥಾದೇವಿಯು ಶ್ರೀಚಕ್ರರಾಜರಥವನ್ನು ಆ ವಹ್ನಿಪ್ರಾಕಾರದ ಮಧ್ಯದಲ್ಲಿ ನಿಲ್ಲಿಸಿದಳು. ಅದಕ್ಕೆ ಎಡಭಾಗದಲ್ಲಿ ತನ್ನ ರಥವನ್ನೂ ಬಲಭಾಗದಲ್ಲಿ ಶ್ಯಾಮಲಾದೇವಿಯ ರಥವನ್ನೂ ನಿಲ್ಲಿಸಿದ ತರುವಾಯ, ಹಿಂಭಾಗದಲ್ಲಿ ಸಂಪದೀಶ್ವರಿಯನ್ನೂ ಮುಂಭಾಗದಲ್ಲಿ ಹಯಾನನೆಯನ್ನೂ ನೆಲೆಗೊಳಿಸಿದಳು.

೪೦-೪೧. ಆ ದೇವಿಯು ಶ್ರೀಚಕ್ರರಾಜರಥದ ಸುತ್ತಲೂ ಈ ರೀತಿ ರಕ್ಷಣೆಯನ್ನೇರ್ಪಡಿಸಿ ಆ ವಹ್ನಿಪ್ರಾಕಾರದ ದ್ವಾರದೇಶದಲ್ಲಿ ಇಪ್ಪತ್ತು ಅಕ್ಷೋಹಿಣೀ ಸೇನೆಯನ್ನು ಇರಿಸಿದಳು. ಇದಾದಮೇಲೆ ದಂಡನಾಥೆಯು ವಿಘ್ನದೇವಿಯೆಂದು ಪ್ರಸಿದ್ಧೆಯೂ, ಪ್ರಜ್ವಲಿಸುತ್ತಿರುವ ದಂಡಾಯುಧದ ಆಕಾರವುಳ್ಳವಳೂ ಆದ ಸ್ತಂಭಿನಿಯೆಂಬ ಶಕ್ತಿದೇವತೆಯನ್ನೂ ದ್ವಾರ ಪ್ರದೇಶದಲ್ಲಿ ನೆಲೆಗೊಳಿಸಿದಳು.

೪೨. ದಂಡನಾಥೆಯಾದ ಆ ಪೋತ್ರಿಣಿಯು ಹೀಗೆ ಶ್ರೀಚಕ್ರರಾಜ ರಥಕ್ಕೂ, ತನ್ನ ಸೇನೆಗೂ ರಕ್ಷಣೆಯನ್ನು ವಿಧಿಸಿ ಸೂರ್ಯೋದಯವಾಗುತ್ತಲೇ ಮತ್ತೆ ಯುದ್ಧಕ್ಕೆ ತೊಡಗಿದಳು.

೪೩. ಎಲೈ ತಾಪಸನೇ! ಕೇಳು; ಆ ಬಳಿಕ ಮಹತ್ತರವಾದ ಶಕ್ತಿಸೇನೆಯೆಲ್ಲವೂ ಕಿಲಕಿಲಧ್ವನಿಗಳನ್ನು ಮಾಡುತ್ತ ಆ ಅಗ್ನಿಪ್ರಾಕಾರದ ಬಾಗಿಲಿನಿಂದ ಹೊರಟುಬಂದಿತು.

ಇತ್ಥಂ ಸುರಕ್ಷಿತಂ ಶ್ರುತ್ವಾ ಲಲಿತಾಶಿಬಿರೋದರಂ ।
ಭೂಯಃ ಸ ಜ್ವರಮಾಪನ್ನಃ ಪ್ರಚಂಡೋ ಭಂಡದಾನವಃ ॥ ೪೪ ॥
ಮಂತ್ರಯಿತ್ವಾ ಪುನಸ್ತತ್ರ ಕುಟಿಲಾಕ್ಷಪುರೋಗಮೈಃ ।
ವಿಷಂಗೇಣ ವಿಶುಕ್ರೇಣ ಸಮಮಾತ್ಮಸುತೈರಪಿ ॥ ೪೫ ॥
ಏಕೌಘಸ್ಯ ಪ್ರಸಾರೇಣ ಯುದ್ಧಂ ಕರ್ತುಂ ಮಹಾಬಲಃ ।
ಚತುರ್ಬಾಹುಮುಖಾನ್ ಪುತ್ರಾಂಶ್ಚತುರ್ಜಲಧಿಸಂನಿಭಾನ್ ॥ ೪೬ ॥
ಚತುರಾನ್‌ಯುದ್ಧಕೃತ್ಯೇಷು ಸಮಾಹೂಯ ಸ ದಾನವಃ ।
ಪ್ರೇಷಯಾಮಾಸ ಯುದ್ಧಾಯ ಭಂಡಶ್ಚಂಡಃ ಕ್ರುಧಾಜ್ವಲನ್ ॥ ೪೭ ॥
ತ್ರಿಂಶದೇವ ಹಿ ತತ್ಪುತ್ರಾ ಮಹಾಕಾಯಾ ಮಹೌಜಸಃ ।
ತೇಷಾಂ ನಾಮಾನಿ ವಕ್ಷ್ಯಾಮಿ ಸಮಾಕರ್ಣಯ ಕುಂಭಜ ॥ ೪೮ ॥
ಚತುರ್ಬಾಹುಶ್ಚಕೋರಾಕ್ಷಸ್ತೃತೀಯಸ್ತು ಚತುಃಶಿರಾಃ । [೪೯॥
ವಜ್ರಘೋಷಶ್ಚೋರ್ಧ್ವಕೇಶೋ ಮಹಾಮಾಯೋ ಮಹಾಹನುಃ ॥
ಮಖಶತ್ರುರ್ಮಖಾಸ್ಕಂದೀ ಸಿಂಹಘೋಷಃ ಸರಾಲಕಃ ।
ಅಂಧಕಶ್ಚ ತ್ರಿಣೇತ್ರಶ್ಚ ಕೂಪಕಃ ಕೂಪಲೋಚನಃ ॥ ೫೦ ॥

---

೪೪. ಇತ್ತ ಭಂಡದಾನವನಾದರೋ ಶ್ರೀ ಲಲಿತಾಪರಮೇಶ್ವರಿಯ ಶಿಬಿರವು ಹೀಗೆ ಸುರಕ್ಷಿತವಾಗಿರುವುದನ್ನು ಕೇಳಿ ಮತ್ತೂ ಹೆಚ್ಚಿನ ಭಯ ಜ್ವರದಿಂದ ಪೀಡಿತನಾದನು.

೪೫-೪೭. ಆಗ ಭಂಡಾಸುರನು ಕುಟಿಲಾಕ್ಷನೇ ಮೊದಲಾದವರೊಡನೆಯೂ, ತನ್ನ ತಮ್ಮಂದಿರಾದ ವಿಷಂಗವಿಶುಕ್ರರೊಡನೆಯೂ, ತನ್ನ ಮಕ್ಕಳೊಡನೆಯೂ, ಮತ್ತೆ ಆ ಶೂನ್ಯಪುರದಲ್ಲಿಯೇ ಮಂತ್ರಾಲೋಚನೆ ಮಾಡಿ, ಆ ಬಳಿಕ, ಒಂದುಗೂಡಿ ರಣರಂಗಕ್ಕೆ ನುಗ್ಗಿ ಹೊರಟು ಕಾಳೆಗ ಮಾಡಲೋಸುಗ, ನಾಲ್ಕು ಕಡಲುಗಳಿಗೆ ಸಮಾನರಾಗಿ, ಯುದ್ಧಕಾರ್ಯಗಳಲ್ಲಿ ಕುಶಲರಾಗಿರುವ ಚತುರ್ಬಾಹುವೇ ಮೊದಲಾದ ತನ್ನ ಮಕ್ಕಳನ್ನೇ ಕರೆದು ಯುದ್ಧಭೂಮಿಗೆ ಕಳುಹಿಸಿದನು.

೪೮. ಆ ಭಂಡಪುತ್ರರು ಮೂವತ್ತು ಮಂದಿ. ಅವರೆಲ್ಲರೂ ಮಹಾಕಾಯರೂ, ಮಹಾಪರಾಕ್ರಮವಂತರೂ ಆದವರು. ಎಲೈ ಕುಂಭಜನೇ! ಅವರ ಹೆಸರುಗಳನ್ನು ಹೇಳುವೆನು ಕೇಳು :

೪೯-೫೨. ಚತುರ್ಬಾಹು, ಚಕೋರಾಕ್ಷ, ಚತುಃಶಿರ, ವಜ್ರಘೋಷ, ಊರ್ಧ್ವಕೇಶ, ಮಹಾಮಾಯ, ಮಹಾಹನು, ಮಖಶತ್ರು,

**ಗುಹಾಕ್ಷೋ ಗಂಡಲಶ್ಚೈವ ಚಂಡವರ್ಮಾ ಯಮಾಂತಕಃ ।**
**ಲಡ್ಡನಃ ಪಂಡಸೇನಶ್ಚ ಪುರುಜಿತ್ಪೂರ್ವಮಾರಕಃ ॥ ೫೧ ॥**
**ಸ್ವರ್ಗಶತ್ರುಃ ಸ್ವರ್ಗಬಲೋ ದುರ್ಗಾಖ್ಯಃ ಸ್ವರ್ಗಕಂಟಕಃ ।**
**ಅತಿಮಾಯೋ ಬೃಹನ್ಮಾಯ ಉಪಮಾಯಶ್ಚ ವೀರ್ಯವಾನ್ ॥ ೫೨ ॥**
**ಇತ್ಯೇತೇ ದುರ್ಮದಾಃ ಪುತ್ರಾ ಭಂಡದೈತ್ಯಸ್ಯ ದುರ್ಧಿಯಃ ।**
**ಪಿತುಃ ಸದೃಶದೋರ್ವೀರ್ಯಾಃ ಪಿತುಃ ಸದೃಶವಿಗ್ರಹಾಃ ॥ ೫೩ ॥**
**ಆಗತ್ಯ ಭಂಡಚರಣಾವಭ್ಯವಂದಂತ ಭಕ್ತಿತಃ ।**
**ತಾನುದೀಕ್ಷ್ಯ ಪ್ರಸನ್ನೇನ ಲೋಚನೇನ ಸ ದಾನವಃ ।**
**ಸಗೌರವಮಿದಂ ವಾಕ್ಯಂ ಬಭಾಷೇ ಕುಲಘಾತಕಃ ॥ ೫೪ ॥**
**ಭೋ ಭೋ ಮದೀಯಾಸ್ತನಯಾ ಭವತಾಂ ಕಃ ಸಮೋ ಭುವಿ ।**
**ಭವತಾಮೇವ ಸತ್ತ್ವೇನ ಜಿತಂ ವಿಶ್ವಂ ಮಯಾ ಪುರಾ ॥ ೫೫ ॥**
**ಶಕ್ರಸ್ಯಾಗ್ನೇರ್ಯಮಸ್ಯಾಪಿ ನಿರ್ಋತೇಃ ಪಾಶಿನಸ್ತಥಾ ।**
**ಕಚೇಷು ಕರ್ಷಣಂ ಕೋಪಾತ್ಕೃತಂ ಯುಷ್ಮಾಭಿರಾಹವೇ ॥ ೫೬ ॥**

---

ಮಘಾಸ್ಕಂದಿ, ಸಿಂಹಘೋಷ, ಸರಾಲಕ, ಅಂಧಕ, ತ್ರಿಣೇತ್ರ, ಕೂಪಕ, ಕೂಪಲೋಚನ, ಗುಹಾಕ್ಷ, ಗಂಡಲ, ಚಂಡವರ್ಮ, ಯಮಾಂತಕ, ಲಡ್ಡನ, ಪಂಡಸೇನ, ಪುರುಜಿತ್, ಪೂರ್ವಮಾರಕ, ಸ್ವರ್ಗಶತ್ರು, ಸ್ವರ್ಗಬಲ, ದುರ್ಗ, ಸ್ವರ್ಗಕಂಟಕ, ಅತಿಮಾಯ, ಬೃಹನ್ಮಾಯ, ವೀರನಾದ ಉಪಮಾಯ ಎಂಬಿವೇ ಅವರ ಹೆಸರುಗಳು.

೫೩. ದುರ್ಮದರಾದ ಇವರೆಲ್ಲರೂ ದುರ್ಬುದ್ಧಿಯಾದ ಆ ಭಂಡ ದಾನವನ ಮಕ್ಕಳು; ಎಲ್ಲರೂ ತಂದೆಯಂತೆಯೇ ಭುಜಪರಾಕ್ರಮವುಳ್ಳವರು; ಎಲ್ಲರೂ ತಂದೆಗೆ ಸಮಾನವಾದ ರೂಪವುಳ್ಳವರು.

೫೪. ಇವರೆಲ್ಲರೂ ಸಭೆಗೆ ಬಂದು ತಂದೆಯಾದ ಆ ಭಂಡದಾನವ ನಡಿಗಳಿಗೆ ಭಕ್ತಿಯಿಂದೆರಗಿದರು. ಕುಲಘಾತಕನಾದ ಆ ದಾನವನಾದರೋ ಇವರೆಲ್ಲರನ್ನೂ ಪ್ರಸನ್ನದೃಷ್ಟಿಯಿಂದೀಕ್ಷಿಸಿ ಬಹುಮಾನಪುರಸ್ಸರವಾಗಿ ಅವರನ್ನು ಕುರಿತು ಹೀಗೆ ಹೇಳಿದನು:

೫೫. "ಎಲೈ ಮಕ್ಕಳಿರಾ! ಈ ಪ್ರಪಂಚದಲ್ಲಿ ನಿಮಗೆ ಸಮಾನರಾರಿರುವರು? ಪೂರ್ವದಲ್ಲಿ ನಾನು ನಿಮ್ಮ ಬಲದಿಂದ ವಿಶ್ವವನ್ನೇ ಜಯಿಸಿದೆನು.

೫೬. ಆ ಯುದ್ಧದಲ್ಲಿ ನೀವೆಲ್ಲರೂ ಬಹಳವಾಗಿ ಕೆರಳಿ, ಇಂದ್ರ,

ಅಸ್ತ್ರಾಣ್ಯಪಿ ಚ ಶಸ್ತ್ರಾಣಿ ಜಾನೀಥ ನಿಖಿಲಾನ್ಯಪಿ । [ ೫೭ ॥
ಜಾಗ್ರತ್ಸ್ವೇವ ಹಿ ಯುಷ್ಮಾಸು ಕುಲಭ್ರಂಶೋಽಯಮಾಗತಃ ॥
ಮಾಯಾವಿನೀ ದುರ್ಲಲಿತಾ ಕಾಚಿತ್ಸ್ತ್ರೀ ಯುದ್ಧದುರ್ಮದಾ ।
ಬಹ್ವೀಭಿಃ ಸ್ವಸಮಾನಾಭಿಃ ಸ್ತ್ರೀಭಿರ್ಯುಕ್ತಾ ಹಿನಸ್ತಿ ನಃ ॥ ೫೮ ॥
ತದೇನಾಂ ಸಮರೇಽವಶ್ಯಮಾತ್ಮವಶ್ಯಾಂ ವಿಧಾಸ್ಯಥ ।
ಜೀವಗ್ರಾಹಂ ಚ ಸಾ ಗ್ರಾಹ್ಯಾ ಭವದ್ಭಿರ್ಜ್ವಲದಾಯುಧೈಃ॥ ೫೯ ॥
ಅಪ್ರತೀಪಪ್ರತಾಪಾಢ್ಯಾನ್ಯುಷ್ಮಾನೇಕಾಂ ಸ್ತ್ರಿಯಂ ಪ್ರತಿ ।
ಸಂಪ್ರೇಷಣಮನೌಚಿತ್ಯಂ ತಥಾಪ್ಯೇಷ ವಿಧೇಃ ಕ್ರಮಃ ॥ ೬೦ ॥
ಇಮಮೇಕಂ ಸಹಧ್ವಂ ಚ ಶೌರ್ಯಕೀರ್ತ್ಯೋರ್ವಿಪರ್ಯಯಂ ॥
ಇತ್ಯುಕ್ತ್ವಾ ಭಂಡದೈತ್ಯೇಂದ್ರಸ್ತಾನ್ ಪ್ರಾಹೈಷೀದ್ರಣಂ ಪ್ರತಿ।[೬೨॥
ದ್ವಿಶತಂ ಚಾಕ್ಷೋಹಿಣೀನಾಂ ತತ್ಸಹಾಯಾಯ ಪ್ರಾಹಿಣೋತ್ ॥

---

ಅಗ್ನಿ, ಯಮ, ನಿರ್ಋತಿ, ಕುಬೇರ ಮೊದಲಾದ ದಿಕ್ಪಾಲಕರ ಜುಟ್ಟುಗಳನ್ನು ಹಿಡಿದು ಎಳೆದುಹಾಕಿರುವಿರಿ.

೫೭. ನೀವೆಲ್ಲರೂ ಸಮಸ್ತ ಅಸ್ತ್ರಶಸ್ತ್ರಗಳನ್ನೂ ಬಲ್ಲವರಾಗಿರುವಿರಿ. ಇಂತಹ ಅಪಾರಪರಾಕ್ರಮಿಗಳಾದ ನೀವು ಇನ್ನೂ ಎಚ್ಚರವಾಗಿರುವಾಗಲೇ ಈ ಕುಲನಾಶವು ಒದಗಿಬಂದಿದೆ.

೫೮. ಮಾಯಾವಿನಿಯೂ, ಯುದ್ಧದುರ್ಮದೆಯೂ, ದುಷ್ಟೆಯೂ ಆದ ಲಲಿತೆಯೆಂಬ ಯಾವಳೋ ಒಬ್ಬ ಹೆಂಗಸು ತನಗೆ ಸಮಾನರಾದ ಬಹುಮಂದಿ ಹೆಂಗಸರೊಡಗೂಡಿ ಬಂದು ನಮ್ಮನ್ನು ಹಿಂಸೆಗೊಳಿಸುತ್ತಿರುವಳು.

೫೯. ಆದುದರಿಂದ ಈಗ ನೀವೆಲ್ಲರೂ ಪ್ರಜ್ವಲಿಸುತ್ತಿರುವ ಆಯುಧಗಳುಳ್ಳವರಾಗಿ ರಣಾಂಗಣದಲ್ಲಿ ಅವಳನ್ನು ನಿಮ್ಮ ವಶಪಡಿಸಿಕೊಂಡು ಜೀವಸಹಿತವಾಗಿಯೇ ಹಿಡಿದು ತರಬೇಕು.

೬೦-೬೧. ಎದುರಿಲ್ಲದ ಅದಟುಳ್ಳ ನಿಮ್ಮೆಲ್ಲರನ್ನೂ ಒಬ್ಬ ಹೆಂಗಸಿಗಾಗಿ ಕಳುಹಿಸುವುದು ಉಚಿತವಲ್ಲ. ಆದರೂ ಇದು ವಿಧಿಯ ನಿಯಮವಾಗಿ ಏರ್ಪಟ್ಟಿದೆ. ನೀವು ನಿಮ್ಮ ಶೌರ್ಯ ಮತ್ತು ಕೀರ್ತಿಗಳಿಗೆ ಕುಂದಕವನ್ನುಂಟುಮಾಡುವ ಈ ಒಂದು ಕೃತ್ಯವನ್ನು ಮಾತ್ರ ಸಹಿಸಿಕೊಳ್ಳಿರಿ."

೬೨. ಭಂಡದಾನವನು ಈ ಪ್ರಕಾರ ನುಡಿದು ಅವರೆಲ್ಲರನ್ನೂ ಕಾಳೆಗಕ್ಕಟ್ಟಿದುದಲ್ಲದೆ ಅವರ ಸಹಾಯಕ್ಕಾಗಿ ಇನ್ನೂರು ಅಕ್ಷೋಹಿಣೀ ಸೇನೆಗಳನ್ನೂ ಕಳುಹಿಸಿದನು.

ದ್ವಿಶತ್ಯಕ್ಷೋಹಿಣೀಸೇನಾಮುಖಸ್ಯ ತಿಲಕಾಯಿತಾಃ । [ ೬೩ ॥
ಬದ್ಧಭ್ರುಕುಟಯಃ ಶಸ್ತ್ರಪಾಣಯೋ ನಿರ್ಯಯುರ್ಗೃಹಾತ್ ॥
ನಿರ್ಗಮೇ ಭಂಡಪುತ್ರಾಣಾಂ ಭೂಃ ಪ್ರಕಂಪಮಲಂಬತ ।
ಉತ್ಪಾತಾ ವಿವಿಧಾ ಜಾತಾ ವಿತ್ರಸ್ತಂ ಚಾಭವಜ್ಜಗತ್ ॥ ೬೪ ॥
ತಾನ್ ಕುಮಾರಾನ್ ಮಹಾಸತ್ತ್ವಾಂಲ್ಲಾಜವರ್ಷೈರವಾಕಿರನ್ ।
ವೀಥೀಷು ಯಾನೈಶ್ಚಲಿತಾನ್ ಪೌರವೃದ್ಧಪುರಂಧ್ರಯಃ ॥ ೬೫ ॥
ವಂದಿನೋ ಮಾಗಧಾಶ್ಚೈವ ಕುಮಾರಾಣಾಂ ಸ್ತುತಿಂ ವ್ಯಧುಃ ।
ಮಂಗಲಾರಾತ್ರಿಕಂ ಚಕ್ರುರ್ದ್ವಾರೇ ದ್ವಾರೇ ಪುರಾಂಗನಾಃ ॥ ೬೬ ॥
ಭಿದ್ಯಮಾನೇವ ವಸುಧಾ ಶುಷ್ಯಮಾಣಮಿವಾಂಬರಂ ।
ಆಸೀತ್ತೇಷಾಂ ವಿನಿರ್ಯಾಣೇ ಘೂರ್ಣಮಾನ ಇವಾರ್ಣವಃ ॥ ೬೭ ॥
ದ್ವಿಶತ್ಯಕ್ಷೋಹಿಣೀಸೇನಾಂ ಗೃಹೀತ್ವಾ ಭಂಡಸೂನವಃ । [೬೮ ॥
ಕ್ರೋಧೋದ್ಯದ್ಭ್ರುಕುಟೀಕ್ರೂರನಿಟಿಲಾ ನಿರ್ಯಯುಃ ಪುರಾತ್ ॥

---

೬೩. ಆ ಅಕ್ಷೋಹಿಣೀಸೇನೆಗಳ ಮುಖಕ್ಕೆ ತಿಲಕಪ್ರಾಯರಾಗಿ ಅವರೆಲ್ಲರೂ ಶಸ್ತ್ರಗಳನ್ನು ಹಿಡಿದು, ಕೆರಳಿ ಹುಬ್ಬುಗಂಟಿಕ್ಕಿ ತಮ್ಮ ಮನೆಯಿಂದ ಹೊರಟುಬಂದರು.

೬೪. ಭಂಡಾಸುರನ ಮಕ್ಕಳು ಯುದ್ಧಕ್ಕೆ ಹೊರಟ ಆ ಸಮಯದಲ್ಲಿ ಭೂಕಂಪವೂ, ನಾನಾ ವಿಧವಾದ ಉತ್ಪಾತಗಳೂ ಉಂಟಾಗಿ ಪ್ರಪಂಚವೇ ತಲ್ಲಣಿಸಿಹೋಯಿತು.

೬೫. ವಾಹನಗಳನ್ನೇರಿ ರಣರಂಗಕ್ಕೆ ಪ್ರಯಾಣ ಹೊರಟ ಮಹಾಪರಾಕ್ರಮಶಾಲಿಗಳಾದ ಆ ಕುಮಾರರನ್ನು ಕಂಡು, ಶೂನ್ಯಪುರದ ಬೀದಿ ಬೀದಿಗಳಲ್ಲಿ ವೃದ್ಧರಾದ ಮುತ್ತೈದೆಯರೆಲ್ಲರೂ ಅವರ ಮೇಲೆ ಅರಳು ಅಕ್ಷತೆಗಳನ್ನೆರಚಿ ಹರಸಿದರು.

೬೬. ವಂದಿಮಾಗಧರು ಆ ಕುಮಾರರನ್ನು ಬಾಯಾರ ಹೊಗಳಿದರು. ಪಟ್ಟಣದ ಮನೆಮನೆಯ ಬಾಗಿಲು ಬಾಗಿಲುಗಳಲ್ಲಿಯೂ ಪುರಾಂಗನೆಯರು ಅವರಿಗೆ ಶುಭಮಂಗಳದಾರತಿಗಳನ್ನೆತ್ತಿದರು.

೬೭. ಹೀಗೆ, ಆ ಕುಮಾರರು ಕಾಳೆಗಕ್ಕೆ ಹೊರಟ ಸಮಯದಲ್ಲಿ ಭೂಮಿಯೇ ಒಡೆದುಹೋದಂತಾಯಿತು. ಆಕಾಶವೇ ಬತ್ತಿದಂತೆ ತೋರಿತು. ಕಡಲೇ ಕಲಕಿ ತಿರುಗಿಹೋದಂತಾಯಿತು.

೬೮. ಭಂಡದಾನವನ ಆ ಮೂವತ್ತು ಮಂದಿ ಪುತ್ರರೂ ಇನ್ನೂರು

**ಶಕ್ತಿಸೈನ್ಯಾನಿ ಸರ್ವಾಣಿ ಭಕ್ಷಯಾಮಃ ಕ್ಷಣಾದ್ರಣೇ ।**
**ತೇಷಾಮಾಯುಧಚಕ್ರಾಣಿ ಚೂರ್ಣಯಾಮಃ ಶಿತೈಃ ಶರೈಃ ॥ ೬೯ ॥**
**ಅಗ್ನಿಪ್ರಾಕಾರವಲಯಂ ಶಮಯಾಮಶ್ಚ ರಂಹಸಾ ।**
**ತಾಂ ದುರ್ವಿದಗ್ಧಾಂ ಲಲಿತಾಂ ಬಂದೀಕುರ್ಮಶ್ಚ ಸತ್ವರಂ ॥ ೭೦ ॥**
**ಇತ್ಯನ್ಯೋನ್ಯಂ ಪ್ರಜಲ್ಪಂತೋ ವೀರಭಾಷಣಘೋಷಣೈಃ ।**
**ಆಸೇದುರಗ್ನಿಪ್ರಾಕಾರಸವಿಧಂ ಭಂಡಸೂನವಃ ॥ ೭೧ ॥**
**ಯೌವನೇನ ಮದಾಂಧೇನ ಭೂಯಸಾ ರುದ್ಧದೃಷ್ಟಯಃ ।**
**ಭ್ರುಕುಟೀಕುಟಿಲಾಶ್ಚಕ್ರುಃ ಸಿಂಹನಾದಂ ಮಹತ್ತರಂ ॥ ೭೨ ॥**
**ವಿದೀರ್ಣಮೇವ ತೇನಾಸೀದ್ಬ್ರಹ್ಮಾಂಡಂ ಚಂಡಿಮಸ್ಪೃಶಾ ।**
**ಉತ್ಪಾತವಾರಿದಭ್ರಷ್ಟ ಘೋರನಿರ್ಘಾತರಂಹಸಾ ॥ ೭೩ ॥**
**ಏತಸ್ಯಾನನುಭೂತಸ್ಯ ಮಹಾಶಬ್ದಸ್ಯ ಡಂಬರಃ ।**
**ಕ್ಷೋಭಯಾಮಾಸ ಶಕ್ತೀನಾಂ ಶ್ರವಾಂಸಿ ಚ ಮನಾಂಸಿ ಚ ॥೭೪॥**

---

ಅಕ್ಷೋಹಿಣೀಸೇನೆಗಳನ್ನು ಹಿಂದಿಟ್ಟುಕೊಂಡು ಈ ಪ್ರಕಾರ ಕೋಪದಿಂದ ಕೆರಳಿ ಹುಬ್ಬುಗಂಟಿಕ್ಕಿ ಕ್ರೂರವಾಗಿ ತೋರುತ್ತಿರುವ ಹಣೆಗಳುಳ್ಳವರಾಗಿ ಪಟ್ಟಣದಿಂದ ಹೊರಟರು.

೬೯-೭೦. "ಶಕ್ತಿಸೇನೆಗಳೆಲ್ಲವನ್ನೂ ರಣರಂಗದಲ್ಲಿ ಕ್ಷಣಮಾತ್ರದಲ್ಲಿಯೇ ನುಂಗಿಬಿಡೋಣ. ಅವರ ಆಯುಧಗಳೆಲ್ಲವನ್ನೂ ಕೂರಂಬುಗಳಿಂದ ಪುಡಿಗುಟ್ಟೋಣ. ಅಗ್ನಿಪ್ರಾಕಾರವಲಯವನ್ನು ಜಾಗ್ರತೆಯಾಗಿಯೇ ತಣ್ಣಗೆಮಾಡೋಣ. ದುರ್ವಿದಗ್ಧೆಯಾದ ಆ ಲಲಿತೆಯನ್ನು ಬಹು ಬೇಗನೆಯೇ ಬಂದಿಯನ್ನಾಗಿ ಮಾಡೋಣ."

೭೧. ಈ ಪ್ರಕಾರ ಆ ಕುಮಾರರೆಲ್ಲರೂ ಒಬ್ಬರಿಗೊಬ್ಬರು ವೀರಾಲಾಪಗಳನ್ನು ಕೊಚ್ಚುತ್ತಲೂ, ದೊಡ್ಡ ಕೂಗುಗಳನ್ನು ಕೂಗುತ್ತಲೂ ವಹ್ನಿಪ್ರಾಕಾರವಲಯವನ್ನು ಸಮೀಪಿಸಿದರು.

೭೨. ಅವರೆಲ್ಲರೂ ಯೌವನಮದದಿಂದ ಕೊಬ್ಬಿ ಕುರುಡರಾಗಿ ಹುಬ್ಬು ಕೊಂಕಿಸಿ ಭಯಂಕರವಾದ ಸಿಂಹನಾದಗಳನ್ನು ಮಾಡಿದರು.

೭೩. ಪ್ರಳಯಕಾಲದ ಮೇಘಗರ್ಜನೆಗೆ ಸಮಾನವಾಗಿ ಕರ್ಣಕಠೋರವಾದ ಅವರ ಈ ಸಿಂಹ ಧ್ವನಿಯಿಂದ ಬ್ರಹ್ಮಾಂಡಕಟಾಹವೇ ಭೇದಿಸಿ ಹೋಯಿತೋ ಎಂಬಂತೆ ತೋರಿತು.

೭೪. ಹಿಂದಾವಾಗಲೂ ಕೇಳದಿರುವ ಈ ಶಬ್ದದ ಆಡಂಬರವು

ಆಗತ್ಯ ತೇ ಕಲಕಲಂ ಚಕ್ರುಃ ಸಾರ್ಧಂ ಸ್ವಸೈನಿಕೈಃ ।
ವಿವಿಧಾಯುಧಸಂಪಾತಮೂರ್ಛದ್ವೈಮಾನಿಕಚ್ಛಟಂ ॥ ೭೫ ॥
ಚತುರ್ಬಾಹುಮುಖಾನ್ ಶ್ರುತ್ವಾ ಭಂಡದೈತ್ಯಕುಮಾರಕಾನ್ ।
ಆಗತಾನ್ಯುದ್ಧಕೃತ್ಯಾಯ ಬಾಲಾ ಕೌತೂಹಲಂ ದಧೇ ॥ ೭೬ ॥
ಕುಮಾರೀ ಲಲಿತಾದೇವ್ಯಾಸ್ತಸ್ಯಾ ನಿಕಟವಾಸಿನೀ ।
ಸಮಸ್ತಶಕ್ತಿ ಚಕ್ರಾಣಾಂ ಪೂಜ್ಯಾ ವಿಕ್ರಮಶಾಲಿನೀ ॥ ೭೭ ॥
ಲಲಿತಾಸದೃಶಾಕಾರಾ ಕುಮಾರೀ ಕೋಪಮಾದಧೇ ।
ಯಾ ಸದಾ ನವವರ್ಷೈವ ಸರ್ವವಿದ್ಯಾಮಹಾಖನಿಃ ॥ ೭೮ ॥
ಬಾಲಾರುಣತನುಶ್ರೇಣೀ ಶೋಣವರ್ಣವಪುರ್ಲತಾ ।
ಮಹಾರಾಜ್ಞೀಪಾದಪೀಠೇ ನಿತ್ಯಮಾಹಿತಸಂನಿಧಿಃ ॥ ೭೯ ॥

---

ಶಕ್ತಿದೇವತೆಗಳ ಕಿವಿಗಳನ್ನೂ ಮನಸ್ಸನ್ನೂ ಏಕಕಾಲದಲ್ಲಿಯೇ ಕ್ಷೋಭೆಗೊಳಿಸಿತು.

೭೫. ಆ ದಾನವಕುಮಾರರೆಲ್ಲರೂ ಈ ರೀತಿ ವಹ್ನಿಪ್ರಾಕಾರದ ಬಳಿಗೈದಿವಂದು ತಮ್ಮ ಸೈನಿಕರೊಡಗೂಡಿ ಕಲಕಲಧ್ವನಿಯನ್ನು ಮಾಡಿ ಬಗೆಬಗೆಯ ಆಯುಧಗಳನ್ನು ಪ್ರಯೋಗಿಸಿ ಗಗನಾಂಗಣದಲ್ಲಿ ವಿಮಾನಗಳು ತಿರುಗುತ್ತಿರುವವೋ ಎಂಬ ಭ್ರಾಂತಿಯನ್ನುಂಟುಮಾಡಿದರು.

೭೬. ಇತ್ತ ಶಕ್ತಿಸೇನೆಯಲ್ಲಿದ್ದ ಶ್ರೀ ಬಾಲಾಂಬೆಯು, ಈ ರೀತಿ ಚತುರ್ಬಾಹುವೇ ಮೊದಲಾದ ಭಂಡಪುತ್ರರು ಕಾಳೆಗಕ್ಕೆ ಬಂದಿರುವ ಸಂಗತಿಯನ್ನು ಕೇಳಿ ಅವರೊಡನೆ ಯುದ್ಧಮಾಡಲು ಕುತೂಹಲಪಟ್ಟಳು.

೭೭. ಆ ದೇವಿಯು, ಶ್ರೀ ಲಲಿತಾದೇವಿಯ ಕುಮಾರಿಯು; ಯಾವಾಗಲೂ ಆಕೆಯ ಸಮೀಪದಲ್ಲಿಯೇ ಇರುವವಳು; ಶಕ್ತಿದೇವತೆಗಳ ಗುಂಪಿಗೆಲ್ಲ ಪೂಜ್ಯಳಾದವಳು; ಮಹಾಪರಾಕ್ರಮಶಾಲಿನಿಯು.

೭೮. ಆಕೆಯು ಶ್ರೀ ಲಲಿತಾಪರಮೇಶ್ವರಿಗೆ ಸಮಾನವಾದ ರೂಪವುಳ್ಳವಳು. ಇಂತಹ ಆ ಬಾಲಾಂಬೆಯು ಕೋಪವನ್ನು ತಾಳಿದಳು. ಆಕೆಯು ಯಾವಾಗಲೂ ಒಂಬತ್ತು ವರ್ಷದ ಕನ್ಯೆಯಾಗಿಯೇ ಇದ್ದು ಸಮಸ್ತವಿದ್ಯೆಗಳಿಗೂ ಗಣಿಯಾಗಿರುವವಳು.

೭೯. ಆಕೆಯು ಬಾಲಸೂರ್ಯನಂತೆ ರಕ್ತವರ್ಣದ ದೇಹವುಳ್ಳವಳಾಗಿ ಮಹಾರಾಜ್ಞಿಯಾದ ಶ್ರೀ ಲಲಿತಾದೇವಿಯ ಪಾದಪೀಠದಲ್ಲಿಯೇ ಯಾವಾಗಲೂ ನೆಲಸಿರುವಳು.

ತಸ್ಯಾ ಬಹಿಶ್ಚರಾಃ ಪ್ರಾಣಾ ಯಾ ಚತುರ್ಥಂ ವಿಲೋಚನಂ ।
ತಾನಾಗತಾನ್ ಭಂಡಸುತಾನ್ ಯೋಧಯಿಷ್ಯಾಮಿ ಸತ್ವರಂ ॥
ಇತಿ ಸಂಚಿಂತ್ಯ ಬಾಲಾಂಬಾ ಮಹಾರಾಜ್ಞೈವ್ಯಜಿಜ್ಞಪತ್ ॥೮೦॥
ಮಾತರ್ಭಂಡಮಹಾದೈತ್ಯಸೂನವೋ ಯೋದ್ಧುಮಾಗತಾಃ ।
ತೈಃ ಸಮಂ ಯೋದ್ಧುಮಿಚ್ಛಾಮಿ ಕುಮಾರೀತ್ವಾತ್ಸಕೌತುಕಾ ॥
ಸ್ಫುರನ್ನಿವ ಚಮೇ ಬಾಹುರ್ಯುದ್ಧಕಂಡೂಯಯಾನಯಾ ॥ ೮೧ ॥
ಕ್ರೀಡಾ ಮಮೈಷಾ ಹಂತವ್ಯಾ ನ ಭವತ್ಯಾ ನಿವಾರಣೈಃ ।
ಅಹಂ ಹಿ ಬಾಲಿಕಾ ನಿತ್ಯಂ ಕ್ರೀಡನೇಷ್ವನುರಾಗಿಣೀ ॥
ಕ್ಷಣಂ ರಣಕ್ರೀಡಯಾ ಚ ಪ್ರೀತಿಂ ದಾಸ್ಯಾಮಿ ಚೇತಸಃ ॥ ೮೨ ॥
ಇತಿ ವಿಜ್ಞಾಪಿತಾ ದೇವೀ ಪ್ರತ್ಯುವಾಚ ಕುಮಾರಿಕಾಂ ।
ವತ್ಸೇ ತ್ವಮತಿಮೃದ್ವಂಗೀ ನವವರ್ಷಾ ನವಕ್ರಮಾ ॥ ೮೩ ॥
ನವೀನಾಯುಧಶಿಕ್ಷಾ ಚ ಕುಮಾರೀ ತ್ವಂ ಮಮೈಕಿಕಾ ।
ತ್ವಾಂ ವಿನಾ ಕ್ಷಣಮಾತ್ರಂ ಮೇ ನ ನಿಶ್ವಾಸಃ ಪ್ರವರ್ತತೇ ॥
ಮಮೋಚ್ಛ್ವಸಿತಮೇವಾಸಿ ನ ತ್ವಂ ಯಾಹಿ ಮಹಾಹವಂ ॥ ೮೪ ॥

---

೮೦. ಆಕೆಯು ಹೊರಗೆ ಸಂಚರಿಸುವ ಪ್ರಾಣದಂತೆಯೂ, ನಾಲ್ಕನೆಯ ಕಣ್ಣಿನಂತೆಯೂ ಇರುವ ಆ ದೇವಿಯು ಕಾಳೆಗಕ್ಕೆ ಬಂದಿರುವ ಭಂಡಪುತ್ರರೆಲ್ಲರನ್ನೂ ಜಾಗ್ರತೆಯಾಗಿ ಸಂಹರಿಸುವೆನೆಂದು ನಿರ್ಧರಿಸಿಕೊಂಡು ಮಹಾರಾಜ್ಞಿಗೆ ಆ ವಿಷಯವನ್ನು ಅರಿಕೆಮಾಡಿದಳು.

೮೧. "ತಾಯೇ! ಭಂಡನ ಮಕ್ಕಳೆಲ್ಲರೂ ಕಾಳೆಗಕ್ಕೆ ಬಂದಿರುವರು. ಅವರೊಡನೆ ಯುದ್ಧಮಾಡಲು ನನಗೆ ತುಂಬ ಆಸೆಯಾಗಿದೆ. ನಾನು ಕುಮಾರಿಯಾದುದರಿಂದ ನನಗಿಂತಹ ಕುತೂಹಲವುಂಟಾಗಿರುವುದು ಸಹಜವೇ ಅಲ್ಲವೆ! ಕಾಳೆಗದ ಗೀಳಿನಿಂದ ನನ್ನ ತೋಳುಗಳು ಅದಿರುತ್ತಿರುವುವು.

೮೨. ಅಮ್ಮಾ! ನೀನು ನನ್ನ ಈ ಕ್ರೀಡೆಯನ್ನು ತಡೆಗಟ್ಟಿ ನನಗೆ ಆಶಾಭಂಗವನ್ನುಂಟುಮಾಡಬೇಡ. ಯಾವಾಗಲೂ ಹುಡುಗಿಯೇ ಆಗಿರುವ ನನಗೆ ಕ್ರೀಡೆಯಲ್ಲಿ ಅನುರಾಗವಿರುವುದು ಸಹಜವೇ ತಾನೇ! ಆದುದರಿಂದ ಒಂದುಕ್ಷಣಕಾಲ ಈ ಯುದ್ಧಕ್ರೀಡೆಯಿಂದ ಮನಸ್ಸಿಗೆ ಪ್ರೀತಿಯನ್ನುಂಟುಮಾಡಿಕೊಳ್ಳುವೆನು."

೮೩-೮೪. ಶ್ರೀ ಬಾಲಾದೇವಿಯು ಈ ರೀತಿ ಅರಿಕೆಮಾಡಿಕೊಳ್ಳಲು,

**ದಂಡಿನೀ ಮಂತ್ರಿಣೀ ಚೈವ ಶಕ್ತಯೋಽನ್ಯಾಸ್ತು ಕೋಟಿಶಃ ।**
**ಸಂತ್ಯೇವ ಸಮರಂ ಕರ್ತುಂ ವತ್ಸೇ ಕಿಂ ತ್ವಂ ಪ್ರಯಾಸ್ಯಸಿ ॥ ೮೫ ॥**
**ಇತಿ ಶ್ರೀ ಲಲಿತಾದೇವ್ಯಾ ನಿರುದ್ಧಾಪಿ ಕುಮಾರಿಕಾ ।**
**ಕೌಮಾರಕೌತುಕಾವಿಷ್ಟಾ ಪುನರ್ಯುದ್ಧಮಯಾಚತ ॥ ೮೬ ॥**
**ಸುದೃಢಂ ನಿಶ್ಚಯಂ ದೃಷ್ಟ್ವಾ ತಸ್ಯಾಃ ಸಾ ಲಲಿತಾಂಬಿಕಾ ।**
**ಅನುಜ್ಞಾಂ ಕೃತವತ್ಯೇವ ಗಾಢಮಾಲಿಂಗ್ಯ ಬಾಹುಭಿಃ ॥ ೮೭ ॥**
**ಸ್ವಕೀಯಕವಚಾದೇಕಮಾಚ್ಛಿದ್ಯ ಕವಚಂ ದದೌ ।**
**ಸ್ವಾಯುಧೇಭ್ಯಶ್ಚಾಯುಧಾನಿ ವಿತೀರ್ಯ ವಿಸಸರ್ಜ ತಾಂ ॥ ೮೮ ॥**

---

ಶ್ರೀ ಲಲಿತಾಪರಮೇಶ್ವರಿಯು ಆಕೆಯನ್ನು ಕುರಿತು, "ಎಲೆ ವತ್ಸೆ! ನೀನು ಬಹಳ ಸುಕುಮಾರಿ; ಒಂಬತ್ತೇ ವರ್ಷದವಳು; ಈಗತಾನೇ ನಡಿಗೆಯನ್ನು ಕಲಿಯುತ್ತಿರುವೆ; ನಿನಗಿರುವ ಆಯುಧಶಿಕ್ಷೆಯೂ ಹೊಸದೇ. ಕುಮಾರಿ! ನನಗಿರುವವಳೂ ನೀನೊಬ್ಬಳೇ ಕುಮಾರಿ. ನಿನ್ನನ್ನುಳಿದು ಒಂದು ಕ್ಷಣಮಾತ್ರವೂ ನನಗೆ ಉಸಿರಾಡಲಾಗುವುದಿಲ್ಲ. ನನ್ನ ಉಸಿರೇ ನೀನಾಗಿರುವೆ. ಇಂತಿರುವ ನೀನು ಈ ಮಹಾಯುದ್ಧಕ್ಕೆ ಹೋಗದಿರು.

೮೫. ದಂಡಿನೀ ಮಂತ್ರಿಣೀದೇವಿಯರೂ, ಇತರ ಕೋಟ್ಯನುಕೋಟಿ ಸಂಖ್ಯೆಯ ಶಕ್ತಿದೇವಿಯರೂ ಯುದ್ಧಮಾಡಲು ಸಿದ್ಧರಾಗಿರುವಾಗ ನೀನೇಕೆ ಹೋಗಬೇಕು?" ಎಂದಳು.

೮೬. ಶ್ರೀ ಲಲಿತಾದೇವಿಯು ಈ ರೀತಿ ಹೇಳಿ ತಡೆದರೂ ಆ ಬಾಲಾಂಬಿಕೆಯು ಬಾಲ್ಯದ ದೆಸೆಯಿಂದುಂಟಾದ ಕುತೂಹಲದಿಂದ ಮತ್ತೆ ಯುದ್ಧಕ್ಕೆ ಹೋಗಲು ಅಪ್ಪಣೆ ಕೇಳಿದಳು.

೮೭. ಯುದ್ಧಕ್ಕೆ ಹೋಗಲೇಬೇಕೆಂಬ ಆಕೆಯ ದೃಢನಿಶ್ಚಯವನ್ನು ಕಂಡು ಲಲಿತಾಂಬಿಕೆಯೂ ಸಹ ಆಕೆಯನ್ನು ಗಾಢವಾಗಿ ಆಲಿಂಗಿಸಿ ಕೊಂಡು ರಣಪ್ರಯಾಣಕ್ಕೆ ಹೇಗೆ ಹೇಗೆಯೋ ಅನುಮತಿಯಿತ್ತಳು.

೮೮. ಶ್ರೀ ದೇವಿಯು, ಆ ಸಮಯದಲ್ಲಿ ತನ್ನ ಕವಚದಿಂದ ಮತ್ತೊಂದು ಕವಚವನ್ನು ತೆಗೆದುಕೊಟ್ಟಳು. ಅಂತೆಯೇ ತನ್ನ ಆಯುಧಗಳಿಂದಲೂ ಬೇರೆ ಆಯುಧಗಳನ್ನು ತೆಗೆದುಕೊಟ್ಟು ಆಕೆಯನ್ನು ಮನ್ನಿಸಿ ಕಳುಹಿಸಿದಳು.

ಕರ್ಣೀರಥಂ ಮಹಾರಾಜ್ಞೀ ಚಾಪದಂಡಾತ್ಸಮುತ್ಥಿತಂ ।
ಹಂಸಯುಗ್ಯಶತೈರ್ಯುಕ್ತಮಾರುರೋಹ ಕುಮಾರಿಕಾ ॥ ೮೯ ॥
ತಸ್ಯಾಂ ರಣಪ್ರವೃತ್ತಾಯಾಂ ಪೇಠುಃ ಕಿನ್ನರಯೋಷಿತಃ ।
ದೇವೀಭುಜಾಪದಾನಾನಿ ಸರ್ವಪರ್ವಸ್ಥದೇವತಾಃ ॥ ೯೦ ॥
ಬದ್ಧಾಂಜಲಿಪುಟಾ ನೇಮುಃ ಪ್ರಯುಕ್ತಾಶೀಃಪರಂಪರಾಃ ।
ಇತಸ್ತತಃ ಪ್ರಸರ್ಪಂತ್ಯೋ ವೇತ್ರಹಸ್ತಾಃ ಪದೇ ಪದೇ ॥ ೯೧ ॥
ತಾಭಿಃ ಪ್ರಣಮ್ಯಮಾನಾ ಸಾ ಚಕ್ರರಾಜರಥೋತ್ತಮಾತ್ ।
ಅವರುಹ್ಯ ತಲೇ ಸೈನ್ಯಂ ವರ್ತಮಾನಮಗಾಹತ ॥ ೯೨ ॥
ಅಥ ತಾಮಾಯತೀಂ ದೃಷ್ಟ್ವಾ ಕುಮಾರೀಂ ಕೋಪಪಾಟಲಾಂ ।
ಮಂತ್ರಿಣೀ ದಂಡನಾಥಾ ಚ ಸಭಯೇ ವಾಚಮೂಚತುಃ ॥ ೯೩ ॥
ಕಿಂ ಭರ್ತೃದಾರಿಕೇ ಯುದ್ಧೇ ವ್ಯವಸಾಯಃ ಕೃತಸ್ತ್ವಯಾ ।
ಅಕಾಂಡೇ ಕಿಂ ಮಹಾರಾಜ್ಞ್ಯಾ ಪ್ರೇಷಿತಾಸಿ ರಣಂ ಪ್ರತಿ ॥ ೯೪ ॥

---

೮೯. ತರುವಾಯ ಕುಮಾರಿಯಾದ ಶ್ರೀ ಬಾಲಾಂಬಿಕೆಯು ಮಹಾರಾಜ್ಞಿಯಾದ ಶ್ರೀ ಲಲಿತಾಪರಮೇಶ್ವರಿಯ ಚಾಪದಂಡದಿಂದ ಹುಟ್ಟಿದುದಾಗಿ, ಎರಡು ಹಂಸಗಳು ಹೂಡಿದ ಕರ್ಣೀರಥವನ್ನೇರಿದಳು.

೯೦. ಆ ಬಾಲಿಕೆಯು ಹೀಗೆ ರಣೋದ್ಯತೆಯಾಗಲು, ಕಿನ್ನರಾಂಗನೆಯರೂ, ನವಪರ್ವಗಳಲ್ಲಿಯೂ ನೆಲಸಿರುವ ಶಕ್ತಿದೇವಿಯರೂ ಶ್ರೀದೇವಿಯ ಭುಜಬಲಸಂಬಂಧವಾದ ಬಿರುದಾವಳಿಗಳೆಲ್ಲವನ್ನೂ ಹೊಗಳಿದರು.

೯೧. ಅವರೆಲ್ಲರೂ ಬೆತ್ತಗಳನ್ನು ಹಿಡಿದು ಅಡಿಗಡಿಗೂ ಅತ್ತಿತ್ತ ನಡೆಯುತ್ತ ಆ ಬಾಲಾಂಬಿಕೆಗೆ ಆಶಿಷಗಳ ಪರಂಪರೆಯನ್ನು ನುಡಿಯುತ್ತ, ಬದ್ಧಾಂಜಲಿಪುಟರಾಗಿ ನಮಸ್ಕರಿಸಿದರು.

೯೨. ಈ ರೀತಿ ಆ ದೇವಿಯು ಶಕ್ತಿದೇವಿಯರಿಂದ ನಮಸ್ಕೃತೆಯಾಗಿ ಶ್ರೀಚಕ್ರರಾಜರಥದಿಂದಿಳಿದು ಅಲ್ಲಿದ್ದ ಸೈನ್ಯವನ್ನು ಸೇರಿದಳು.

೯೩. ಆಗ ಮಂತ್ರಿಣೀದಂಡನಾಥೆಯರು, ಕೋಪದಿಂದ ರಕ್ತವರ್ಣೆಯಾಗಿ ಬರುತ್ತಿರುವ ಕುಮಾರಿಯನ್ನು ಕಂಡು, ಭಯಗೊಂಡು ಆಕೆಯನ್ನು ಕುರಿತು ಹೀಗೆ ನುಡಿದರು:

೯೪. "ಓ ಸ್ವಾಮಿನೀ! ಇದೇನಿದು? ಈ ಯುದ್ಧದಲ್ಲಿ ನೀನು ಉದ್ಯಮವನ್ನು ಕೈಕೊಂಡಿರುವಿಯೇಕೆ? ಮಹಾರಾಜ್ಞಿಯು ಇದ್ದಕ್ಕಿದ್ದಂತೆಯೇ ನಿನ್ನನ್ನು ಕಳುಹಿಸಲು ಕಾರಣವೇನು?

ತದೇತದುಚಿತಂ ನೈವ ವರ್ತಮಾನೇಽಪಿ ಸೈನಿಕೇ ।
ತ್ವಂ ಮೂರ್ತಂ ಜೀವಿತಮಸಿ ಶ್ರೀದೇವ್ಯಾ ಬಾಲಿಕೇ ಯತಃ ॥
ನಿವರ್ತಸ್ವ ರಣೋತ್ಸಾಹಾತ್ಪ್ರಣಾಮಸ್ತೇ ವಿಧೀಯತೇ ।
ಇತಿ ತಾಭ್ಯಾಂ ನಿರುದ್ಧಾಪಿ ಪ್ರಾಚಲದ್ದೃಢನಿಶ್ಚಯಾ ॥ ೯೫ ॥
ಅತ್ಯಂತವಿಸ್ಮಯಾವಿಷ್ಟೇ ಮಂತ್ರಿಣೀದಂಡನಾಯಿಕೇ । [೯೬ ॥
ಸಹೈವ ತಸ್ಯಾ ರಕ್ಷಾರ್ಥಂ ಚೇಲತುಃ ಪಾರ್ಶ್ವಯೋರ್ದ್ವಯೋಃ ॥
ಅಥಾಗ್ನ್ಯಾವರಣದ್ವಾರಾತ್ತಾಭ್ಯಾಮನುಗತಾ ಸತೀ ।
ಪ್ರಭೂತಸೇನಾಯುಕ್ತಾಭ್ಯಾಂ ನಿರ್ಜಗಾಮ ಕುಮಾರಿಕಾ ॥ ೯೭ ॥
ಶಕ್ತಿಸೇನಾಧಿನಾಥಾನಾಂ ಸರ್ವಾಸಾಮನುಗೃಹ್ಣತೀ ।
ಪ್ರಣಾಮಾಂಜಲಿಜಾಲಾನಿ ಕರ್ಣೀರಥಕೃತಾಸನಾ ॥
ಭಂಡಸ್ಯ ತನಯಾನ್ ದುಷ್ಟಾನಭ್ಯದ್ರವದರಿಂದಮಾ ॥ ೯೮ ॥
ತಸ್ಯಾಃ ಪ್ರಾತಿಸ್ವಿಕಂ ಸೈನ್ಯಂ ಕುಮಾರ್ಯಾ ನ ಹಿ ವರ್ತತೇ ।
ಸರ್ವಂ ಹಿ ಲಲಿತಾಸೈನ್ಯಂ ತತ್ಸೈನ್ಯಂ ಸಮಜಾಯತ ॥ ೯೯ ॥

---

೯೫. ನಮ್ಮ ಸೈನ್ಯವೆಲ್ಲ ಸಿದ್ಧವಾಗಿರುವಾಗ ಈ ಕಾರ್ಯವು ಅನುಚಿತವು. ದೇವಿ, ಬಾಲಾಂಬಿಕೆ! ನೀನು ಶ್ರೀದೇವಿಗೆ ಮೂರ್ತಿವೆತ್ತ ಜೀವಿತವೇ ಆಗಿರುವೆ. ಇದೋ, ನಿನಗೆ ನಮಸ್ಕಾರ ಮಾಡುವೆವು. ಈ ರಣೋತ್ಸಾಹವನ್ನು ತೊರೆದು ಹಿಂತಿರುಗು.'' ಅವರೀರ್ವರೂ ಈಪ್ರಕಾರ ನುಡಿದು ತಡೆದರೂ, ಯುದ್ಧಮಾಡಲು ದೃಢನಿಶ್ಚಯವನ್ನೇ ಮಾಡಿಕೊಂಡಿದ್ದ ಆ ಕುಮಾರಿಯು ಮುಂದುವರಿದಳು.

೯೬. ಆಗ ಮಂತ್ರಿಣೀದಂಡನಾಥೆಯರೂ ಪರಮಾಶ್ಚರ್ಯಭರಿತೆಯರಾಗಿ ಆ ಕುಮಾರಿಯ ರಕ್ಷಣೆಗಾಗಿ ಇಕ್ಕೆಲಗಳಲ್ಲಿಯೂ ಮುನ್ನಡೆದರು.

೯೭. ತರುವಾಯ ಕುಮಾರಿಯಾದ ಶ್ರೀ ಬಾಲಾಂಬಿಕೆಯು, ಅಪಾರವಾದ ಸೇನೆಯೊಡಗೂಡಿದ ಮಂತ್ರಿಣೀದಂಡನಾಥೆಯರೊಡನೆ ವಹ್ನಿಪ್ರಾಕಾರವಲಯದಿಂದ ಹೊರಟುಬಂದಳು.

೯೮. ಅರಿಂದಮೆಯಾದ ಆ ದೇವಿಯು ಕರ್ಣೀರಥದಲ್ಲಿ ಕುಳಿತು ಶಕ್ತಿಸೇನಾನಾಯಕಿಯರೆಲ್ಲರ ಪ್ರಣಾಮಾಂಜಲಿಗಳನ್ನು ಕೈಕೊಂಡು ಅವರೆಲ್ಲರನ್ನೂ ಅನುಗ್ರಹಿಸುತ್ತ ಹೊರಟು ದುಷ್ಟರಾದ ಭಂಡಪುತ್ರರನ್ನು ಕಂಡು ಒಡನೆಯೇ ಅವರನ್ನಟ್ಟಹೋದಳು.

೯೯. ಎಲೈ ಅಗಸ್ತ್ಯಮುನಿಯೇ! ಕುಮಾರೀದೇವಿಗೆ ಪ್ರತ್ಯೇಕವಾದ

**ತತಃ ಪ್ರವವೃಧೇ ಯುದ್ಧಮತ್ಯುದ್ಧತಪರಾಕ್ರಮಂ ।**
**ವವರ್ಷ ಶರಜಾಲಾನಿ ದೈತ್ಯೇಂದ್ರೇಷು ಕುಮಾರಿಕಾ ॥ ೧೦೦ ॥**
**ಭಂಡಾಸುರಕುಮಾರೈಸ್ತೈರ್ಮಹಾರಾಜ್ಞೀಕುಮಾರಿಕಾ ।**
**ಯುದ್ಧ್ಯದ್ಧಮತನೋತ್ತತ್ತು ಸ್ಪೃಹಣೀಯಂ ಸುರಾಸುರೈಃ ॥೧೦೧॥**
**ಅತ್ಯಂತವಿಸ್ಮಿತಾ ದೈತ್ಯಾಃ ಕುಮಾರೀಂ ನವವರ್ಷಿಣೀಂ ।**
**ಕರ್ಣೀರಥಸ್ಥಾಮಾಲೋಕ್ಯ ಕಿರಂತೀಂ ಶರಮಂಡಲಂ ॥ ೧೦೨ ॥**
**ಕ್ಷಣೇ ಕ್ಷಣೇ ತು ಬಾಲಾಯಾಃ ಕ್ರಿಯಮಾಣಂ ಮಹಾರಣಂ ।**
**ವ್ಯಜಿಜ್ಞಪನ್ ಮಹಾರಾಜ್ಞ್ಯೈ ಭ್ರಾಮ್ಯಂತಃ ಪರಿಚಾರಿಕಾಃ ॥೧೦೩॥**
**ಮಂತ್ರಿಣೀದಂಡನಾಥೇ ತೇ ವಿಸ್ಮಯೇನ ರಣತ್ಯಜೌ ।**
**ಪ್ರೇಕ್ಷಕತ್ವಮನುಪ್ರಾಪ್ತೇ ತೂಷ್ಣೀಮೇವ ಬಭೂವತುಃ ॥ ೧೦೪ ॥**

---

ಸೇನೆಯಾವುದೂ ಇರುವುದಿಲ್ಲ. ಶ್ರೀ ಲಲಿತಾದೇವಿಯ ಸೈನ್ಯವೇ ಆಕೆಯ ಸೇನೆಯಾಗಿ ಪರಿಣಮಿಸಿತು.

೧೦೦. ಆಬಳಿಕ ಅತ್ಯದ್ಭುತ ಪರಾಕ್ರಮಪೂರಿತವಾದ ಯುದ್ಧವು ಬೆಳೆಯಿತು. ಆ ಯುದ್ಧದಲ್ಲಿ ಕುಮಾರಿಯು ದೈತ್ಯೇಂದ್ರರಮೇಲೆ ಬಿರುಸಾಗಿ ಅಂಬಿನಮಳೆಗರೆದಳು.

೧೦೧. ಶ್ರೀ ಲಲಿತಾಪರಮೇಶ್ವರಿಯ ಪುತ್ರಿಯಾದ ಆ ಬಾಲಾಂಬಿಕೆಯು ಭಂಡದಾನವಕುಮಾರರೊಡನೆಸಗಿದ ಆ ಕಾಳೆಗವು ದೇವದಾನವರು ಅಚ್ಚರಿಗೊಳ್ಳುವಂತಹುದು.

೧೦೨. ಕರ್ಣೀರಥವನ್ನೇರಿ ಕುಳಿತು ಬಾಣತಂಡವನ್ನೇ ಸುರಿಸುತ್ತಿರುವ ಒಂಬತ್ತು ವರ್ಷದ ಆ ಬಾಲಿಕೆಯನ್ನು ಕಂಡು ದೈತ್ಯರು ಅತ್ಯಾಶ್ಚರ್ಯಭರಿತರಾದರು.

೧೦೩. ಅತ್ತ ಶ್ರೀ ಲಲಿತಾದೇವಿಯ ಪರಿಚಾರಿಕೆಯರು ರಣಭೂಮಿಯಲ್ಲಿಯೇ ಸಂಚರಿಸುತ್ತ ಕ್ಷಣಕ್ಷಣಕ್ಕೂ ಶ್ರೀಬಾಲಾದೇವಿಯೆಸಗುತ್ತಿರುವ ಮಹಾಯುದ್ಧವನ್ನು ತಮ್ಮ ಒಡತಿಗೆ ಅರಿಕೆ ಮಾಡುತ್ತಿದ್ದರು.

೧೦೪. ಮಂತ್ರಿಣೀದಂಡನಾಥೆಯರಾದರೋ ಆ ಬಾಲಾಂಬಿಕೆಯ ಕಾಳೆಗದ ರೀತಿಯನ್ನು ಕಂಡು ವಿಸ್ಮಿತರಾಗಿ ತಾವು ಯುದ್ಧಮಾಡುವುದನ್ನು ಬಿಟ್ಟು ಕೇವಲ ಪ್ರೇಕ್ಷಕರಾಗಿಯೇ ನಿಂತುನೋಡುತ್ತಿದ್ದರು.

**ಸರ್ವೇಷಾಂ ದೈತ್ಯಪುತ್ರಾಣಾಮೇಕರೂಪಾ ಕುಮಾರಿಕಾ ।**
**ಪ್ರತ್ಯೇಕಭಿನ್ನಾ ದದೃಶೇ ಬಿಂಬಮಾಲೇವ ಭಾಸ್ವತಃ ॥ ೧೦೫ ॥**
**ಸಾಯಕೈರಗ್ನಿಚೂಡಾಲೈಸ್ತೇಷಾಂ ಮರ್ಮಾಣಿ ಭಿಂದತೀ ।**
**ಆಶ್ಚರ್ಯಂ ದುಹತೀ ವ್ಯೋಮ್ನಿ ಪಶ್ಯತಾಂ ಚ ದಿವೌಕಸಾಂ॥ ೧೦೬ ॥**
**ಸಾಧುವಾದೈರ್ಬಹುವಿಧೈರ್ಮಂತ್ರಿಣೀದಂಡನಾಥಯೋಃ ।**
**ಅರ್ಚ್ಯಮಾನಾ ರಣಂ ಚಕ್ರೇ ಲಘುಹಸ್ತಾ ಕುಮಾರಿಕಾ ॥ ೧೦೭ ॥**
**ದ್ವಿತೀಯಂಯುದ್ಧದಿವಸಂ ಸಮಸ್ತಮಪಿ ಸಾ ರಣೇ ।**
**ಪ್ರಕಾಶಯಾಮಾಸ ಬಲಂ ಲಲಿತಾದುಹಿತಾ ನಿಜಂ ॥ ೧೦೮ ॥**
**ಅಸ್ತ್ರಪ್ರತ್ಯಸ್ತ್ರಮೋಕ್ಷೇಣ ತಾನ್ ಸರ್ವಾನಪಿ ಭಿಂದತೀ ।**
**ರಕ್ತೋತ್ಪಲಮಿವ ಕ್ರೋಧಸಂರಕ್ತಂ ಬಿಭ್ರತೀ ಮುಖಂ॥ ೧೦೯ ॥**
**ನಾರಾಯಣಾಸ್ತ್ರಮೋಕ್ಷೇಣ ಮಹಾರಾಜ್ಞೀಕುಮಾರಿಕಾ ।**
**ದ್ವಿಶತ್ಯಕ್ಷೋಹಿಣೀಸೈನ್ಯಂ ಭಸ್ಮಸಾದಕರೋತ್ಕ್ಷಣಾತ್ ॥ ೧೧೦ ॥**

---

೧೦೫. ಒಂದೇ ರೂಪವುಳ್ಳ ಆ ಕುಮಾರಿಯು ದೈತ್ಯಕುಮಾರರೆಲ್ಲರಿಗೂ ಬೇರೆಬೇರೆಯ ರೂಪವುಳ್ಳವಳಾಗಿ ಕಾಣುತ್ತ ಬೆಳಗುತ್ತಿರುವ ಬಿಂಬಮಾಲೆಯಂತೆ ಕಂಗೊಳಿಸಿದಳು.

೧೦೬-೧೦೭. ಆ ಕುಮಾರಿಕೆಯು ಅಗ್ನಿಶಿಖೆಗಳುಳ್ಳ ಬಾಣಗಳನ್ನು ಪ್ರಯೋಗಿಸಿ ದೈತ್ಯರ ಮರ್ಮಗಳನ್ನು ಭೇದಿಸುತ್ತ, ಗಗನಾಂಗಣದಲ್ಲಿ ನಿಂತು ನೋಡುತ್ತಿರುವ ದೇವತೆಗಳಿಗೆ ಆಶ್ಚರ್ಯವನ್ನುಂಟುಮಾಡಿ, ಮಂತ್ರಿಣೀದಂಡನಾಥೆಯರು "ಭಲೆ, ಭಲೆ!" ಎಂದು ಹೊಗಳಿ ಪೂಜಿಸುತ್ತಿರಲು ತನ್ನ ಕರಕೌಶಲವನ್ನು ಮೆರೆಯುತ್ತ ಕಾಳೆಗಮಾಡಿದಳು.

೧೦೮. ಲಲಿತಾದುಹಿತೆಯಾದ ಆ ಬಾಲಾಂಬಿಕೆಯು ಆ ಎರಡನೆಯ ಯುದ್ಧದಿವಸವೆಲ್ಲ ರಣಭೂಮಿಯಲ್ಲಿ ಅದ್ಭುತವಾದ ಪರಾಕ್ರಮವನ್ನು ಪ್ರಕಟಗೊಳಿಸಿದಳು.

೧೦೯. ಆ ದೇವಿಯು ಕೋಪಗೊಂಡು ತನ್ನ ಮುಖವನ್ನು ರಕ್ತೋತ್ಪಲದಂತೆ ಕೆಂಪಗೆಮಾಡಿಕೊಂಡು ಆ ದಾನವರ ಅಸ್ತ್ರಕ್ಕೆ ಪ್ರತ್ಯಸ್ತ್ರವನ್ನು ಪ್ರಯೋಗಿಸಿ ಅವುಗಳೆಲ್ಲವನ್ನೂ ಭೇದಿಸುತ್ತಿದ್ದಳು.

೧೧೦. ತರುವಾಯ ಆ ಮಹಾರಾಜ್ಞಿಯ ಕುಮಾರಿಕೆಯು ನಾರಾಯಣಾಸ್ತ್ರವನ್ನು ಪ್ರಯೋಗಿಸಿ ಕ್ಷಣಮಾತ್ರದಲ್ಲಿಯೇ ಆ ದೈತ್ಯರ ಇನ್ನೂರು ಅಕ್ಷೋಹಿಣೀಸೇನೆಗಳನ್ನೂ ಸುಟ್ಟು ಬೂದಿಮಾಡಿದಳು.

**ಅಕ್ಷೋಹಿಣೀನಾಂ ಕ್ಷಯತಃ ಕ್ಷಣಾತ್ಕೋಪಮುಪಾಗತಾಃ ।**
**ಆಕೃಷ್ಟಗುರುಧನ್ವಾನಸ್ತೇಽಪತನ್ನೇಕಹೇಲಯಾ ॥ ೧೧೧ ॥**
**ತತಃ ಕಲಕಲೇ ಜಾತೇ ಶಕ್ತೀನಾಂ ಚ ದಿವೌಕಸಾಂ ।**
**ಯುಗಪತ್ತ್ರಿಂಶತಂ ಬಾಣಾನಸೃಜತ್ಸಾ ಕುಮಾರಿಕಾ ॥ ೧೧೨ ॥**
**ಹಸ್ತಲಾಘವವತ್ಯಾಥ ಮುಕ್ತೈಶ್ಚಂದ್ರಾರ್ಧಸಾಯಕೈಃ ।**
**ತ್ರಿಂಶತಾ ತ್ರಿಂಶತಂ ಭಂಡಪುತ್ರಾಣಾಮಾಹತಂ ಶಿರಃ ॥ ೧೧೩ ॥**
**ಇತಿ ಭಂಡಸ್ಯ ಪುತ್ರೇಷು ಪ್ರಾಪ್ತೇಷು ಯಮಸಾದನಂ ।**
**ಅತ್ಯಂತವಿಸ್ಮಯಾವಿಷ್ಟಾ ವವರ್ಷುಃ ಪುಷ್ಪಮಭ್ರಗಾಃ ॥ ೧೧೪ ॥**
**ಸಾ ಚ ಪುತ್ರೀ ಮಹಾರಾಜ್ಞ್ಯಾ ವಿಧ್ವಸ್ತಾಸುರಸೈನಿಕಾ ।**
**ಮಂತ್ರಿಣೀದಂಡನಾಥಾಭ್ಯಾಮಾಲಿಂಗ್ಯತ ಭೃಶಂ ಮುದಾ ॥ ೧೧೫ ॥**

---

೧೧೧. ಅಕ್ಷೋಹಿಣೀ ಸೇನೆಗಳೆಲ್ಲವೂ ನಾಶವಾದ ಬಳಿಕ ಭಂಡಪುತ್ರರೆಲ್ಲರೂ ದೊಡ್ಡದೊಡ್ಡ ಧನುಸ್ಸುಗಳನ್ನು ಹಿಡಿದು ಎಲ್ಲರೂ ಒಟ್ಟಾಗಿ ಏಕಕಾಲದಲ್ಲಿಯೇ ಆ ಕುಮಾರಿಯನ್ನಟ್ಟಿ ಬಂದರು.

೧೧೨. ಎಲ್ಲೆಲ್ಲಿಯೂ ಶಕ್ತಿದೇವಿಯರ ಮತ್ತು ದೇವತೆಗಳ ಕಲಕಲ ಧ್ವನಿಯುಂಟಾಗಲು, ಶ್ರೀ ಬಾಲಾಂಬಿಕೆಯು ಕೂಡಲೇ ಆ ಮೂವತ್ತು ಮಂದಿ ದಾನವರಮೇಲೆಯೂ ಮೂವತ್ತು ಬಾಣಗಳನ್ನು ಏಕಕಾಲದಲ್ಲಿಯೇ ಪ್ರಯೋಗಿಸಿದಳು.

೧೧೩. ಬಳಿಕ, ಆಕೆಯು ಹಸ್ತಲಾಘವವನ್ನು ತೋರಿ ಮೂವತ್ತು ಅರ್ಧಚಂದ್ರಬಾಣಗಳನ್ನು ಪ್ರಯೋಗಿಸಿ ಆ ಮೂವತ್ತುಮಂದಿ ಭಂಡಪುತ್ರರ ತಲೆಗಳನ್ನೂ ತರಿದುಹಾಕಿದಳು.

೧೧೪. ಈ ಪ್ರಕಾರ ಭಂಡಕುಮಾರರೆಲ್ಲರೂ ಯಮಸದನವನ್ನು ಸೇರಿದಬಳಿಕ ಗಗನಸಂಚಾರಿಗಳೆಲ್ಲರೂ ಅತ್ಯಂತ ವಿಸ್ಮಯಾವಿಷ್ಟರಾಗಿ ಆ ದೇವಿಯಮೇಲೆ ಹೂಮಳೆಗರೆದರು.

೧೧೫. ಮಹಾರಾಜ್ಞಿಯಾದ ಶ್ರೀ ಲಲಿತಾದೇವಿಯ ಪುತ್ರಿಕೆಯಾದ ಶ್ರೀ ಬಾಲಾಂಬಿಕೆಯಾದರೋ ಅಸುರಸೇನೆಯೆಲ್ಲವನ್ನೂ ಧ್ವಂಸಮಾಡಿದ ಬಳಿಕ ಮಂತ್ರಿಣೀದಂಡನಾಥೆಯರೀರ್ವರಿಂದಲೂ ಅತ್ಯಂತ ಸಂತೋಷಪೂರ್ವಕವಾಗಿ ಅಲಿಂಗಿತೆಯಾದಳು.

ತಸ್ಯಾಃ ಪರಾಕ್ರಮೋನ್ಮೇಷೈರ್ನೃತ್ಯಂತ್ಯೋ ಜಯದಾಯಿಭಿಃ ।
ಶಕ್ತಯಸ್ತುಮುಲಂ ಚಕ್ರುಃ ಸಾಧುವಾದೈರ್ಜಗತ್ರಯಂ ॥ ೧೧೬ ॥
ಸರ್ವಾಶ್ಚ ಶಕ್ತಿಸೇನಾನ್ಯೋ ದಂಡನಾಥಾಪುರಸ್ಸರಾಃ ।
ತದಾಶ್ಚರ್ಯಂ ಮಹಾರಾಜ್ಞ್ಯೈ ನಿವೇದಯಿತುಮಾಗತಾಃ ॥೧೧೭॥
ಸಿಂಹಾಸನಸ್ಥಿತಾಂ ದೇವೀಂ ದೃಷ್ಟ್ವಾ ನೇಮುಃ ಸ್ಮಯಾನ್ವಿತಾಃ ।
ಕುಮಾರಿಕಾಕೃತಂ ಕರ್ಮ ವಿನಿವೇದ್ಯಪುನರ್ಗತಾಃ ॥ ೧೧೮ ॥
ತಾಭಿರ್ನಿವೇದ್ಯಮಾನಾನಿ ಸಾ ದೇವೀ ಲಲಿತಾಂಬಿಕಾ । [೧೧೯ ॥
ಪುತ್ರ್ಯಾ ಭುಜಾಪದಾನಾನಿ ಶ್ರುತ್ವಾ ಪ್ರೀತಿಂ ಸಮಾಯಯೌ ॥
ಅಂಕೇಪುತ್ರೀಂಸಮಾರೋಪ್ಯ ಸ್ಪೃಶಂತೀಪಾಣಿನಾವಪುಃ । [೧೨೦॥
ಮೂರ್ಧ್ನ್ಯಾಘ್ರಾಯಸಾದೇವೀಹೃಷ್ಟಾಬಾಲಾಂವ್ಯಮುಂಚತ॥

---

೧೧೬. ಶಕ್ತಿದೇವಿಯರೆಲ್ಲರೂ ಆ ಬಾಲಾಕುಮಾರಿಯ ಪರಾಕ್ರಮವನ್ನು ಸೂಚಿಸುವುದೂ ಜಯಪ್ರದವಾದುದೂ ಆದ ವಿಜಯಗೀತಗಳನ್ನು ಹಾಡಿ ನರ್ತನಮಾಡಿದರು. ಅವರು ಮೂರು ಲೋಕಗಳೂ "ಭಲೆ, ಭಲೆ!!" ಎಂಬ ಜಯಧ್ವನಿಗಳಿಂದಲೇ ತುಂಬಿಹೋಗುವಂತೆಸಗಿದರು.

೧೧೭. ಶಕ್ತಿಸೇನಾನಾಯಕಿಯರೆಲ್ಲರೂ ದಂಡನಾಥೆಯನ್ನು ಮುಂದಿಟ್ಟುಕೊಂಡು ಈ ಆಶ್ಚರ್ಯವನ್ನು ತಮ್ಮೊಡತಿಯಾದ ಶ್ರೀ ಲಲಿತಾದೇವಿಗರುಹಲು ಆಗಮಿಸಿದರು.

೧೧೮. ಸಿಂಹಾಸನಾಸೀನೆಯಾದ ಆ ದೇವಿಯನ್ನು ಸಂದರ್ಶಿಸಿ, ನಮಸ್ಕರಿಸಿ ಅವರೆಲ್ಲರೂ ಸಂತೋಷವನ್ನು ಸೂಚಿಸುವ ನಗೆಯನ್ನು ಬೀರುತ್ತ ಶ್ರೀಕುಮಾರಿಯೆಸಗಿದ ಕಾರ್ಯವನ್ನಾಕೆಗೆ ಅರಿಕೆಮಾಡಿ ಹಿಂತಿರುಗಿದರು.

೧೧೯. ಶ್ರೀ ಲಲಿತಾದೇವಿಯು, ಅವರು ಹೀಗೆ ವಿಜ್ಞಾಪಿಸಿದ ತನ್ನ ಪುತ್ರಿಯ ಭುಜಪರಾಕ್ರಮದ ಪ್ರಭಾವವನ್ನು ಕೇಳಿ ಸುಪ್ರೀತೆಯಾದಳು.

೧೨೦. ಆಕೆಯು ಬಾಲಾಕುಮಾರಿಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಕೈಯಿಂದ ಆಕೆಯ ಮೈಯನ್ನು ಸವರಿ ಮೂರ್ಧವನ್ನಾಘ್ರಾಣಿಸಿ ಕಳುಹಿಸಿಕೊಟ್ಟಳು.

**ಸಮಸ್ತಮಪಿ ತಚ್ಚಕ್ರಂ ಶಕ್ತೀನಾಂ ತತ್ಪರಾಕ್ರಮೈಃ ।**
**ಅದೃಷ್ಟಪೂರ್ವೈರ್ದೈತ್ಯೇಷು ವಿಸ್ಮಯಸ್ಯ ವಶಂ ಗತಂ ॥ ೧೨೧ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ ಸಂವಾದೇ ಶ್ರೀ ಲಲಿತೋಪಾಖ್ಯಾನೇ ಏಕವಿಂಶೋಽಧ್ಯಾಯಃ**

---

೧೨೧. ಶಕ್ತಿಸೇನೆಯೆಲ್ಲವೂ, ಶ್ರೀ ಬಾಲಾಂಬಿಕೆಯು ತಾನು ಹಿಂದಾವಾಗಲೂ ಕಾಣದಿದ್ದರೂ ದೈತ್ಯಸೇನೆಯ ವಿಷಯದಲ್ಲಿ ಮೆರೆದ ಇಂತಹ ಪರಾಕ್ರಮುವನ್ನು ಕಂಡು ಪರಮಾಶ್ಚರ್ಯಭರಿತವಾಯಿತು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾವಿಂಶೋಽಧ್ಯಾಯಃ

[ಭಂಡಾಸುರಪ್ರಲಾಪಃ—ವಿಶುಕ್ರಕೃತ ವಿಜಯ ವಿಘ್ನ ಮಹಾಯಂತ್ರನಿರ್ಮಾಣಃ—ಗಣೇಶ್ವರ ಪರಾಕ್ರಮಾನುವರ್ಣನಂ]

ಶ್ರುತ್ವಾ ಪುತ್ರವಧಂ ಸ ದಾನವಪತಿರ್ಮಾಯಾವಿಶುಕ್ರಂ ಕ್ರುಧಾ
ಪ್ರಾಹೈಷೀತ್ತ್ರಸಭಂಹಿ ತೇನ ಸಮರೇ ವಿಘ್ನಾಖ್ಯಯಂತ್ರಂ ಕೃತಂ ।
ತ್ವತ್ಸ್ಮೇರೋದ್ಭವ ಕುಂಜರಾನನಸ್ತದಖಿಲಂ ಚೂರ್ಣೀಚಕಾರಕ್ಷಣಾತ್
ತತ್ತ್ವಾಂ ನೌಮಿ ಸದಾಶಿವಪ್ರಣಯಿನೀಂ ಶ್ರೀ ಮೀನನೇತ್ರಾಭಿಧಾಂ ॥

ಹಯಗ್ರೀವಃ—

**ಅಥ ಪುತ್ರೇಷು ನಷ್ಟೇಷು ಶೋಕಾನಲಪರಿಪ್ಲುತಃ ।**
**ವಿಲಲಾಪ ಸ ದೈತ್ಯೇಂದ್ರೋ ಮತ್ವಾ ಜಾತಂ ಕುಲಕ್ಷಯಂ ॥ ೧ ॥**
**ಹಾ ಪುತ್ರಾ ಹಾ ಗುಣೋದಾರಾ ಹಾ ಮದೇಕಪರಾಯಣಾಃ ।**
**ಹಾ ಮನ್ನೇತ್ರಸುಧಾಪೂರಾ ಹಾ ಮತ್ಕುಲವಿವರ್ಧನಾಃ ॥ ೨ ॥**
**ಹಾ ಸಮಸ್ತಸುರಶ್ರೇಷ್ಠಮದಭಂಜನತತ್ಪರಾಃ ।**
**ಹಾ ಸಮಸ್ತಾಸುರಸ್ತ್ರೀಣಾಮಂತರ್ಮೋಹನಮನ್ಮಥಾಃ ॥ ೩ ॥**

---

### ಕನ್ನಡದ ಅನುವಾದ

[ಭಂಡಾಸುರನ ಪ್ರಲಾಪ—ವಿಶುಕ್ರನು ವಿಜಯವಿಘ್ನ ಮಹಾಯಂತ್ರವನ್ನು ನಿರ್ಮಾಣಮಾಡುವುದು—ಗಣೇಶ್ವರನ ಪರಾಕ್ರಮಾನುವರ್ಣನ]

೧. ಹಯಗ್ರೀವನು ಹೇಳುತ್ತಾನೆ.—ಅಯ್ಯಾ, ತಪೋಧನನೇ! ಈ ಪ್ರಕಾರ ಮೂವತ್ತು ಮಂದಿ ಮಕ್ಕಳೂ ಕಾಳಗದಲ್ಲಿ ಮಡಿದ ತರುವಾಯ ದೈತ್ಯೇಂದ್ರನಾದ ಆ ಭಂಡಾಸುರನು ಕುಲಕ್ಷಯವಾಯಿತು ಎಂದು ತಿಳಿದು ಶೋಕಾಗ್ನಿಯಿಂದ ಪರಿತಪ್ತನಾಗಿ ವಿಲಪಿಸಿದನು:

೨. "ಅಕ್ಕಟಾ ಮಕ್ಕಳಿರಾ! ಅಯ್ಯೋ; ನೀವೆಲ್ಲರೂ ಉದಾರವಾದ ಗುಣವುಳ್ಳವರು; ನನ್ನೊಬ್ಬನಲ್ಲಿಯೇ ಆಸಕ್ತಿಯುಳ್ಳವರು; ನನ್ನ ಕಂಗಳಿಗೆ ಸುಧೆಯನ್ನು ತುಂಬುವವರು; ನನ್ನ ಕುಲವನ್ನು ಬೆಳಸಿ ಬೆಳಗಿಸುವವರು. ನೀವೆಲ್ಲರೂ ದಿವಂಗತರಾದಿರಾ!

೩-೪. ಅಯ್ಯೋ! ಸುರಶ್ರೇಷ್ಠರೆಲ್ಲರ ಕೆಚ್ಚನ್ನೂ ಮುರಿಯುವುದರಲ್ಲಿಯೇ ಆಸಕ್ತರಾಗಿ, ಅಸುರಸ್ತ್ರೀಯರೆಲ್ಲರ ಮನಸ್ಸಿನಲ್ಲಿಯೂ

ದಿಶತ ಪ್ರತಿವಾಚಂ ಮೇ ಮಮಾಗ್ರೇ ವಲ್ಗತಾಧುನಾ ।
ಕಿಮುದಂತಮಿಮಂ ತಾತಮವಮುಚ್ಯ ದಿವಂ ಗತಾಃ ॥ ೪ ॥
ಯುಷ್ಮಾನ್ವಿನಾ ನ ಶೋಭಂತೇ ಮಮ ರಾಜ್ಯಾನಿ ಪುತ್ರಕಾಃ ।
ರಿಕ್ತಾನಿ ಮಮ ಗೇಹಾನಿ ರಿಕ್ತಾ ರಾಜಸಭಾಪಿ ಮೇ ॥ ೫ ॥
ಕಥಮೇವ ಹಿ ನಿಃಶೇಷಂ ಹತಾ ಯೂಯಂ ದುರಾಶಯಾ ।
ಅಪ್ರಧೃಷ್ಯಭುಜಾಸತ್ತ್ವಾನ್ ಭವತೋ ಮತ್ಕುಲಾಂಕುರಾನ್ ॥೬॥
ಕಥಮೇಕಪದೇ ದುಷ್ಟಾ ವನಿತಾ ಸಂಗರೇಽವಧೀತ್ ।
ಮಮ ನಷ್ಟಾನಿ ಸೌಖ್ಯಾನಿ ಮಮ ನಷ್ಟಾಃ ಕುಲಶ್ರಿಯಃ ॥ ೭ ॥
ಇತಃ ಪರಂ ಕದಾ ವೀಕ್ಷ್ಯೇ ಸಹಾಸಾನಿ ಮುಖಾನಿ ವಃ ।
ಭವಂತಃ ಸುಕೃತೈರ್ಲಬ್ಧಾ ಮಮ ಪೂರ್ವಜನುಃಕೃತೈಃ ॥ ೮ ॥
ನಾಶೋಽಯಂ ಭವತಾಮದ್ಯ ಜಾತೋ ನಷ್ಟಸ್ತತೋಽಸ್ಮ್ಯಹಂ ।
ಹಾ ಹತೋಽಸ್ಮಿ ವಿಪನ್ನೋಽಸ್ಮಿ ಮಂದಭಾಗ್ಯೋಽಸ್ಮಿ ಪುತ್ರಕಾಃ ॥

---

ಮೋಹವನ್ನುಂಟುಮಾಡುವ ಮನ್ಮಥರಾಗಿದ್ದ ನೀವು ನನಗೆ ಪ್ರತ್ಯುತ್ತರವನ್ನು ಕೊಡಬಾರದೆ! ನನ್ನ ಮುಂದೆ ನಿಂತು ಮುದ್ದಾಗಿ ಮಾತನಾಡಬಾರದೇ!! ಏನು ಸಮಾಚಾರವಿದು!!! ನನ್ನನ್ನು ಇಲ್ಲಿಯೇ ತೊರೆದು ನೀವು ಮಾತ್ರ ಸ್ವರ್ಗಕ್ಕೆ ತೆರಳಿದಿರಾ!

೫. ಎಲೈ ಪುತ್ರರೇ! ನಿಮ್ಮನ್ನುಳಿದು ನನ್ನ ರಾಜ್ಯೈಶ್ವರ್ಯಗಳಾವವೂ ಶೋಭಿಸುವುದಿಲ್ಲ; ನನ್ನ ರಾಜಭವನವೂ, ಈ ನನ್ನ ರಾಜಸಭೆಯೂ ಶೂನ್ಯವೇ ಆಗಿಹೋಯಿತು.

೬-೭. ಅಕ್ಕಟಾ! ದುರ್ಬುದ್ಧಿಯುವಳಾದ ಒಬ್ಬ ಹೆಂಗಸು ನಿಮ್ಮೆಲ್ಲರನ್ನೂ ನಿಶ್ಶೇಷವಾಗಿ ಸಂಹರಿಸಿದಳೇ!! ಎದುರಿಲ್ಲದ ಭುಜಪರಾಕ್ರಮವುಳ್ಳವರೂ, ನನ್ನ ಕುಲದ ಕುಡಿಗಳೂ ಆದ ನಿಮ್ಮೆಲ್ಲರನ್ನೂ ಆ ಒಬ್ಬ ದುಷ್ಟವನಿತೆಯು ಕಾಳೆಗದಲ್ಲಿ ಒಂದೇ ತಡವೆಯೇ ಕೊಂದುದೆಂತೊ? ಅಕ್ಕಟಾ! ನನ್ನ ಭೋಗಭಾಗ್ಯಗಳೆಲ್ಲವೂ ಹಾಳಾಯಿತು. ನನ್ನ ಕುಲಸಂಪದವೇ ನಾಶವಾಯಿತು.

೮. ಅಯ್ಯೋ! ಇನ್ನು ನಿಮ್ಮ ನಗುಮುಖವನ್ನು ನೋಡುವುದು ಯಾವಾಗ? ಎಲೈ ಪುತ್ರರಿರಾ!! ಪೂರ್ವಜನ್ಮದಲ್ಲಿ ನಾನೆಸಗಿದ ಪುಣ್ಯಪರಿಪಾಕದಿಂದಲೇ ನೀವೆಲ್ಲರೂ ನನಗೆ ಪುತ್ರರಾಗಿ ಜನಿಸಿದ್ದಿರಲ್ಲವೇ!

೯. ಅಕ್ಕಟಾ! ನಿಮಗಿಂತಹ ನಾಶವು ಸಂಭವಿಸಬೇಕೇ!! ಇದರಿಂದ

**ಇತಿ ಶೋಕಾತ್ಸ ಪರ್ಯಶ್ರುಃ ಪ್ರಲಪನ್ ಮುಕ್ತಕುಂತಲಃ ।**
**ಮೂರ್ಛಯಾ ಲುಪ್ತಹೃದಯೋ ನಿಪಪಾತ ನೃಪಾಸನಾತ್ ॥ ೧೦ ॥**
**ವಿಶುಕ್ರಶ್ಚ ವಿಷಂಗಶ್ಚ ಕುಟಿಲಾಕ್ಷಶ್ಚ ಸಂಸದಿ ।**
**ಭಂಡಮಾಶ್ವಾಸಯಾಮಾಸುರ್ದೇವಸ್ಯ ಕುಟಿಲೈಃ ಕ್ರಮೈಃ ॥ ೧೧ ॥**
**ವಿಶುಕ್ರಃ—**
**ದೇವ ಕಿಂ ಪ್ರಾಕೃತ ಇವ ಪ್ರಾಪ್ತಃ ಶೋಕಸ್ಯ ವಶ್ಯತಾಂ ।**
**ಲಪಸಿ ತ್ವಂ ಪ್ರತಿ ಸುತಾನ್ ಪ್ರಾಪ್ತಮೃತ್ಯೂನ್ ಮಹಾಹವೇ ॥ ೧೨ ॥**
**ಧರ್ಮಸಂಪಾದಿತಃ ಪಂಥಾ ವೀರಾಣಾಮೇಷ ಶಾಶ್ವತಃ ।**
**ಅಶೋಚ್ಯಮಾಹವೇ ಮೃತ್ಯುಂ ಪ್ರವದಂತಿ ಮನೀಷಿಣಃ ॥ ೧೩ ॥**
**ಏತದೇವ ವಿನಾಶಾಯ ಶಲ್ಯವದ್ಬಾಧತೇ ಮನಃ ।**
**ಯತ್ಸ್ತ್ರೀ ಸಮಾಗತ್ಯ ಹತಾನ್ನಿಹಂತಿ ಸುಭಟಾನ್ ರಣೇ ॥ ೧೪ ॥**

---

ನಾನೂ ನಾಶವಾದೆನು. ಅಯ್ಯೋ! ನಾನೀಗ ಹತನಾದೆನು; ಮುಳಿಗಿ ಹೋದೆನು; ಮಂದಭಾಗ್ಯನು ನಾನು !!!"

೧೦. ಎಲೈ ಅಗಸ್ತ್ಯನೇ! ಭಂಡದಾನವನು ಈ ರೀತಿ ಪುತ್ರಶೋಕದಿಂದ ಕಂಬನಿಯಿಟ್ಟು, ತಲೆಗೂದಲನ್ನು ಬಿರಿಹೊಯ್ದುಕೊಂಡು ಪ್ರಲಪಿಸುತ್ತ ಮೂರ್ಛೆಗೆ ಸಂದು ಶೂನ್ಯಹೃದಯನಾಗಿ ಸಿಂಹಾಸನದಿಂದ ನೆಲಕ್ಕೆ ಬಿದ್ದುಬಿಟ್ಟನು.

೧೧. ಆಗ ರಾಜಸಭೆಯಲ್ಲಿದ್ದ ವಿಶುಕ್ರವಿಷಂಗರೂ, ಕುಟಿಲಾಕ್ಷನೂ ತಮ್ಮೊಡೆಯನಾದ ಆ ದೈತ್ಯನನ್ನು ವಕ್ರವಾದ ಕ್ರಮಗಳಿಂದ ಈ ರೀತಿ ಸಮಾಧಾನಗೊಳಿಸಿದರು :

೧೨. ವಿಶುಕ್ರನು ಹೇಳುತ್ತಾನೆ.—"ಒಡೆಯಾ, ಇದೇನಿದು! ಕೇವಲ ಸಾಮಾನ್ಯನಂತೆ ನೀನೂ ಶೋಕಕ್ಕೊಳಗಾದೆ? ಹಿರಿದಾದ ಕಾಳೆಗದಲ್ಲಿ ಸಾವಿಗೆ ತುತ್ತಾದ ಮಕ್ಕಳಿಗಾಗಿ ಅಳುವೆಯಾ? ಬೇಡ. ಕೂಡದು.

೧೩. ವೀರರಾದವರಿಗೆ ಧರ್ಮದಿಂದ ದೊರೆತ ಈ ಮೃತ್ಯುಮಾರ್ಗವು ಶಾಶ್ವತವಾದುದು. ಬುದ್ಧಿವಂತರಾದವರು ಕಾಳೆಗದ ಸಾವಿಗಾಗಿ ದುಃಖಿಸಬಾರದೆಂದು ಹೇಳುತ್ತಾರೆ.

೧೪. ಆದರೆ ಇದೊಂದು ಮಾತ್ರ ನಮ್ಮ ಮನಸ್ಸನ್ನು ಮುಳ್ಳಿನಂತೆ ಬಾಧಿಸುತ್ತಿದೆ. ಒಬ್ಬ ಸಾಮಾನ್ಯಸ್ತ್ರೀಯು ನಮ್ಮ ವಿನಾಶಕ್ಕಾಗಿ ಕಾಳೆಗಕ್ಕೆ ಸೆಣಸಿ ಬಂದು ಇದ್ದಕ್ಕಿದ್ದಂತೆಯೇ ನಮ್ಮ ಕಡೆಯ ಒಳ್ಳೊಳ್ಳೆಯ ಭಟರನ್ನೆಲ್ಲ ಕೊಲ್ಲುತ್ತಿರುವಳಲ್ಲಾ!"

**ಇತ್ಯುಕ್ತೇ ತೇನ ದೈತ್ಯೇನ ಪುತ್ರಶೋಕಂ ವಿಮುಂಚತಾ ।**
**ಭಂಡೇನ ಚಂಡಕಾಲಾಗ್ನಿಸದೃಶಃ ಕ್ರೋಧ ಆದಧೇ ॥ ೧೫ ॥**
**ಸ ತೀವ್ರಸ್ಪರ್ಶಮುದ್ಧೂನ್ವನ್ ಖಡ್ಗಮುಗ್ರಯಮೋಪಮಂ ।**
**ವಿಸ್ಫಾರಿತಾಕ್ಷಿಯುಗಲೋ ಭೃಶಂ ಜಜ್ವಾಲ ತೇಜಸಾ ॥ ೧೬ ॥**
**ಇದಾನೀಮೇವ ತಾಂ ದುಷ್ಟಾಂ ಖಡ್ಗೇನಾನೇನ ಖಂಡಶಃ ।**
**ಶಕಲೀಕೃತ್ಯ ಸಮರೇ ಶಮಂ ಪ್ರಾಪ್ಸ್ಯಾಮಿ ಬಂಧುಭಿಃ ॥ ೧೭ ॥**
**ಇತಿ ರೋಷಾತ್ಸ್ಖಲದ್ವರ್ಣಃ ಶ್ವಸನ್ನಿವ ಭುಜಂಗಮಃ ।**
**ಖಡ್ಗಂ ವಿಧೂನ್ವನ್ನುತ್ತಸ್ಥೌ ಪ್ರಚಚಾಲಾತಿಮತ್ತವತ್ ॥ ೧೮ ॥**
**ತಂ ನಿರುಧ್ಯ ಚ ಸಂಭ್ರಾಂತಾಃ ಸರ್ವೇ ದಾನವಪುಂಗವಾಃ ।**
**ವಾಚಮೂಚುರತಿಕ್ರೋಧಾಜ್ಜ್ವಲಂತೋ ಲಲಿತಾಂ ಪ್ರತಿ ॥ ೧೯ ॥**
**ನ ತದರ್ಥೇ ತ್ವಯಾ ಕಾರ್ಯಃ ಸ್ವಾಮಿನ್ ಸಂರಂಭ ಈದೃಶಃ ।**
**ಅಸ್ಮಾಭಿಃ ಸಬಲೈರ್ಯುಕ್ತೈ ರಣೋತ್ಸಾಹೋ ವಿಧೀಯತೇ ॥೨೦॥**

---

೧೫. ವಿಶುಕ್ರದೈತ್ಯನು ಈ ಪ್ರಕಾರ ನುಡಿಯಲು, ಭಂಡಾಸುರನು ಕೂಡಲೇ ಪುತ್ರಶೋಕವನ್ನು ತೊರೆದು ಪ್ರಚಂಡವಾದ ಪ್ರಳಯಾಗ್ನಿಗೆ ಸಮಾನವಾದ ಕ್ರೋಧವನ್ನು ತಂದುಕೊಂಡನು.

೧೬. ಆ ದಾನವನು ಉಗ್ರಯಮೋಪಮವಾದ ತನ್ನ ತೀಕ್ಷ್ಣ ಖಡ್ಗವನ್ನು ಝುಳಪಿಸುತ್ತ ತನ್ನೆರಡೂ ಕಣ್ಣುಗಳನ್ನು ಅಗಲವಾಗಿ ಬಿಟ್ಟು ಬೆಳಗಿಸುತ್ತ, ತನ್ನ ತೇಜಸ್ಸಿನಿಂದಲೇ ಬಹಳವಾಗಿ ಪ್ರಜ್ವಲಿಸಿದನು.

೧೭-೧೮. "ಇದೋ ಇದೋ!! ನಾನೀಗ ಇದೇ ಖಡ್ಗದಿಂದಲೇ ಆ ದುಷ್ಟೆಯನ್ನು ರಣಾಂಗಣದಲ್ಲಿ ತುಂಡು ತುಂಡಾಗಿ ಕತ್ತರಿಸಿ ಹಾಕಿ ನನ್ನ ನಂಟರೊಡನೆ ಶಾಂತಿಯನ್ನು ಹೊಂದುತ್ತೇನೆ" ಎಂದು ಎಡರುತ್ತಿರುವ ಅಕ್ಷರಗಳಿಂದ ನುಡಿದು ಸರ್ಪದಂತೆ ನಿಟ್ಟುಸಿರ್ಗರೆಯುತ್ತ ಖಡ್ಗವನ್ನು ಮತ್ತೂ ಮತ್ತೂ ಝುಳಪಿಸುತ್ತ ಉನ್ಮತ್ತನಂತೆ ಸಿಂಹಾಸನವನ್ನು ಬಿಟ್ಟೆದ್ದು ಹೊರಟನು.

೧೯. ಆಗ ರಾಜಸಭೆಯಲ್ಲಿದ್ದ ದಾನವಪುಂಗವರೆಲ್ಲರೂ ತಳಮಳಗೊಂಡು ಅವನನ್ನು ತಡೆದು ಶ್ರೀಲಲಿತಾದೇವಿಯ ವಿಷಯದಲ್ಲಿ ಅತ್ಯಂತಕುಪಿತರಾಗಿ ಹೀಗೆ ನುಡಿದರು :—

೨೦. "ಒಡೆಯಾ! ಆ ಸ್ತ್ರೀಯ ವಿಷಯದಲ್ಲಿ ತಾವಿಂತಹ ಸಂರಂಭವನ್ನು ಕೈಕೊಳ್ಳಬಾರದು. ಸೈನ್ಯಸಮೇತರಾದ ನಾವೆಲ್ಲರೂ ರಣೋತ್ಸಾಹವನ್ನು ಕೈಕೊಳ್ಳುವೆವು.

ಭವದಾಜ್ಞಾಬಲಂ ಪ್ರಾಪ್ಯ ಸಮಸ್ತಂ ಭುವನಂ ಹಠಾತ್ ।
ವಿಮರ್ದಯಿತುಮೀಶಾಃ ಸ್ಮ ಕಿಮು ತಾಂ ಮುಗ್ಧಭಾಮಿನೀಂ॥೨೧॥
ಕಿಂ ಶೋಷಯಾಮಃ ಸಪ್ತಾಬ್ಧೀನ್ ಭಕ್ಷಯಾಮೋಽಥವಾ ಗಿರೀನ್।
ಅಧರೋತ್ತರಮೇವೈತತ್ತ್ರೈಲೋಕ್ಯಂ ಕರವಾಮ ವಾ ॥ ೨೨ ॥
ಭಿನದಾಮ ಸುರಾನ್ಸರ್ವಾನ್ಭಿನದಾಮ ಸುರಾಲಯಾನ್ ।
ಪಿನಷಾಮ ಹರಿತ್ಪಾಲಾನಾಜ್ಞಾಂ ದೇಹಿ ಮಹಾಮತೇ ॥ ೨೩ ॥
ಇತ್ಯುದೀರಿತಮಾಕರ್ಣ್ಯ ಮಹಾಹಂಕಾರಗರ್ಭಿತಂ ।
ಉವಾಚ ವಚನಂ ಭಂಡಃ ಪ್ರತಿಘಾರುಣಲೋಚನಃ ॥ ೨೪ ॥
ವಿಶುಕ್ರ ಭವತಾ ಗತ್ವಾ ಮಾಯಾಂತರ್ಹಿತವರ್ಷ್ಮಣಾ ।
ಜಯವಿಘ್ನಮಹಾಯಂತ್ರಂ ಕರ್ತವ್ಯಂ ಕಟಕೇ ದ್ವಿಷಾಂ ॥ ೨೫ ॥

---

೨೧. ದೇವ! ನಿನ್ನ ಅಪ್ಪಣೆಯೆಂಬ ಬಲವನ್ನು ಹೊಂದಿ ಒಮ್ಮೆಯೇ ಈ ಬ್ರಹ್ಮಾಂಡವನ್ನು ಮರ್ದಿಸಲು ನಾವು ಸಮರ್ಥರಾಗಿಯೇ ಇರುವೆವು. ಇಂತಿರುವಲ್ಲಿ ಕೇವಲ ಮುಗುದೆಯಾದ ಆ ಭಾಮಿನಿಯ ವಿಷಯದಲ್ಲಿ ಹೇಳತಕ್ಕುದೇನಿದೆ?

೨೨-೨೩. ಮಹಾರಾಜ! ಈಗ ನಾವು ಸಪ್ತಸಮುದ್ರಗಳನ್ನೂ ಶೋಷಿಸೋಣವೇ? ಅಥವಾ ಕುಲಪರ್ವತಗಳನ್ನೇ ನುಂಗೋಣವೇ? ಅಥವಾ ತ್ರೈಲೋಕ್ಯವನ್ನೇ ತಲೆಕೆಳಗಾಗಿ ಮಾಡೋಣವೇ? ಹಾಗೂ ಅಲ್ಲದಿದ್ದರೆ, ಸುರರೆಲ್ಲರನ್ನೂ ಸಿಗಿಯೋಣವೇ? ಅದೂ ಅಲ್ಲದಿದ್ದರೆ ದೇವತೆಗಳ ಮನೆಗಳೆಲ್ಲವನ್ನೂ ಒಡೆದುಹಾಕೋಣವೇ? ದಿಕ್ಪಾಲಕರೆಲ್ಲರನ್ನೂ ಪುಡಿಗುಟ್ಟೋಣವೇ? ಎಲೈ ಮಹಾಮತಿಯೇ! ಯಾವುದಕ್ಕೂ ನಮಗೆ ಅಪ್ಪಣೆಯನ್ನು ಕೊಡು."

೨೪. ಅಪರಿಮಿತವಾದ ಅಹಂಕಾರದಿಂದ ತುಂಬಿದ ಈ ಮಾತುಗಳನ್ನು ಕೇಳಿ ಆ ಭಂಡಾಸುರನು ಕೆಂಪಡರಿದ ಕಂಗಳುಳ್ಳವನಾಗಿ ಹೀಗೆ ನುಡಿದನು :—

೨೫. "ಎಲೈ ವಿಶುಕ್ರನೇ! ನೀನೀಗಲೇ ಮಾಯೆಯನ್ನವಲಂಬಿಸಿ ಮಾರುವೇಷದಿಂದ ಹೋಗಿ ಶತ್ರುಗಳ ಪಾಳೆಯದಲ್ಲಿ ಜಯವಿಘ್ನಮಹಾಯಂತ್ರವನ್ನು ನಿರ್ಮಾಣಮಾಡು."

ಇತಿ ತಸ್ಯ ವಚಃ ಶ್ರುತ್ವಾ ವಿಶುಕ್ರೋ ರೋಷರೂಷಿತಃ ।
ಮಾಯಾತಿರೋಹಿತವಪುರ್ಜಗಾಮ ಲಲಿತಾಬಲಂ ॥ ೨೬ ॥
ತಸ್ಮಿನ್ ಪ್ರಯಾತುಮುದ್ಯುಕ್ತೇ ಸೂರ್ಯೋಽಸ್ತಂ ಸಮುಪಾಗತಃ ।
ಪರ್ಯಸ್ತಕಿರಣಸ್ತೋಮಪಾಟಲೀಕೃತದಿಙ್ಮುಖಃ ॥ ೨೭ ॥
ಅನುರಾಗವತೀ ಸಂಧ್ಯಾ ಪ್ರಯಾಂತಂ ಭಾನುಮಾಲಿನಂ ।
ಅನುವವ್ರಾಜ ತರಸಾ ಕುಂಜೇ ರಂತುಮಿವೋತ್ಸುಕಾ ॥ ೨೮ ॥
ವೇಗಾತ್ಪ್ರಪತತೋ ಭಾನೋರ್ದೇಹಸಂಗಾತ್ಸಮುತ್ಥಿತಾಃ ।
ಚರಮಾಬ್ಧೇರಿವ ಪಯಃಕಣಾಸ್ತಾರಾ ವಿರೇಜಿರೇ ॥ ೨೯ ॥
ಅಥಾಸಸಾದ ಬಹುಲಂ ತಮಃಕಜ್ಜಲಮೇಚಕಂ ।
ಸಾಹ್ಯಂ ವಿಧಾತುಮುದ್ಯುಕ್ತಮಿವ ತಸ್ಯ ದುರಾತ್ಮನಃ ॥ ೩೦ ॥

---

೨೬. ಭಂಡಾಸುರನ ಈ ನುಡಿಯನ್ನು ಕೇಳಿ ವಿಶುಕ್ರನು ರೋಷಪೂರಿತನಾಗಿ, ಮಾಯೆಯಿಂದ ಮರೆಮಾಡಿಕೊಂಡ ಶರೀರವುಳ್ಳವನಾಗಿ ಶ್ರೀ ಲಲಿತಾಂಬಿಕೆಯ ಸೇನೆಯನ್ನು ಕುರಿತು ಹೊರಟನು.

೨೭. ಆ ದಾನವನು ಪ್ರಯಾಣಕ್ಕೆ ಸಿದ್ಧನಾಗಲು, ಅತ್ತ ಸೂರ್ಯದೇವನು ಪ್ರಸರಿಸಿದ ತನ್ನ ಕಿರಣಸಮೂಹಗಳಿಂದ ದಿಕ್ಕುಗಳ ಮುಖಗಳೆಲ್ಲವನ್ನೂ ಕೆಂಪೊಗೆಯಿಸಿ ಅಸ್ತಾಚಲವನ್ನೈದಿದನು.

೨೮. ಆ ಸಮಯದಲ್ಲಿ ಅನುರಾಗವತಿಯಾದ (ಕೆಂಪುಕಾಂತಿಯನ್ನೊಳಗೊಂಡು ಕಂಗೊಳಿಸುತ್ತಿರುವ) ಸಂಜೆಯು, ಅಸ್ತಾಚಲವನ್ನು ಕುರಿತು ಹೊರಟುಹೋಗುತ್ತಿರುವ ಆ ಭಾನುಮಾಲಿ (ಸೂರ್ಯನನ್ನು) ಯನ್ನು, ಅವನೊಡನೆ ಆ ಅಚಲದ ಲತಾಗೃಹಗಳಲ್ಲಿ ವಿಹರಿಸಲೋಸುಗವೋ ಎಂಬಂತೆ ಅನುಸರಿಸಿಹೋದಳು.

೨೯. ಆ ಹಗಲೊಡೆಯನು ಪಶ್ಚಿಮಸಮುದ್ರದಲ್ಲಿ ವೇಗವಾಗಿ ಬಿದ್ದು ಅವನ ಅಂಗಸಂಗದಿಂದೆದ್ದ ಜಲಕಣಗಳೋ ಎಂಬಂತೆ ಗಗನಾಂಗಣದಲ್ಲಿ ತಾರೆಗಳು ಸೊಗಸೊಗೆದವು.

೩೦. ಕಾಡಿಗೆಯ ಮೊತ್ತವನ್ನು ಹೋಲುವ ದಟ್ಟವಾದ ಕತ್ತಲೆಯು ಎಲ್ಲೆಲ್ಲಿಯೂ ಹರಡಿ ದುರಾತ್ಮನಾದ ಆ ವಿಶುಕ್ರನಿಗೆ ನೆರವಾಗಲೋಸುಗವೋ ಎಂಬಂತೆ ಕಾಣಬಂದಿತು.

**ಮಾಯಾರಥಂ ಸಮಾರೂಢೋ ಗಾಢಶಾರ್ವರಸಂವೃತಃ ।**
**ಅದೃಶ್ಯವಪುರಾಪೇದೇ ಲಲಿತಾಕಟಕಂ ಖಲಃ ॥ ೩೧ ॥**
**ತತ್ರ ಗತ್ವಾ ಜ್ವಲಜ್ಜ್ವಾಲಾವಹ್ನಿಪ್ರಾಕಾರಮಂಡಲಂ ।**
**ಶತಯೋಜನವಿಸ್ತಾರಮಾಲೋಕಯತ ದುರ್ಮತಿಃ ॥ ೩೨ ॥**
**ಪರಿತೋ ವಿಭ್ರಮನ್ ಸಾಲಮವಕಾಶಮನಾಪ್ನುವನ್ ।**
**ದಕ್ಷಿಣದ್ವಾರಮಾಸಾದ್ಯ ನಿದಧ್ಯೌ ಕ್ಷಣಮುದ್ಧತಃ ॥ ೩೩ ॥**
**ತತ್ರಾಪಶ್ಯನ್ ಮಹಾಸತ್ತ್ವಾಃ ಸಾವಧಾನಾ ಧೃತವ್ರತಾಃ ।**
**ಆರೂಢಯಾನಾಃ ಸನ್ನದ್ಧವರ್ಮಾಣೋ ದ್ವಾರದೇಶತಃ ॥ ೩೪ ॥**
**ಸ್ತಂಭಿನೀಪ್ರಮುಖಾಃ ಶಕ್ತೀರ್ವಿಂಶತ್ಯಕ್ಷೋಹಿಣೀಯುತಾಃ ।**
**ಸರ್ವದಾ ದ್ವಾರರಕ್ಷಾರ್ಥಂ ನಿರ್ದಿಷ್ಟಾ ದಂಡನಾಥಯಾ ॥ ೩೫ ॥**
**ವಿಲೋಕ್ಯ ವಿಸ್ಮಯಾವಿಷ್ಟಶ್ಚಿಂತಯಿತ್ವಾ ಚಿರಂ ತದಾ ।**
**ಸಾಲಸ್ಯ ಬಹಿರೇವಾಸೌ ಸ್ಥಿತ್ವಾ ಯಂತ್ರಂ ಸಮಾತನೋತ್ ॥ ೩೬ ॥**

---

೩೧. ಆಗ, ಆ ದುಷ್ಟನು ಗಾಢಾಂಧಕಾರದಿಂದ ಮರೆಯಾಗಿ ಮಾಯಾರಥವನ್ನೇರಿ, ಕಣ್ಣಿಗೆ ಕಾಣಿಸದ ಆಕಾರವುಳ್ಳವನಾಗಿ ಶ್ರೀ ಲಲಿತಾದೇವಿಯ ಕಟಕವನ್ನು ಬಳಿಸಾರಿದನು.

೩೨. ಅಲ್ಲಿಗೆ ಬಂದಬಳಿಕ ಆ ದುಷ್ಟಬುದ್ಧಿಯು ಧಗಧಗನುರಿಯುತ್ತಿರುವ ಜ್ವಾಲೆಗಳಿಂದ ಬೆಳಗುತ್ತಿರುವ ನೂರು ಯೋಜನಗಳ ವಿಸ್ತಾರವಾದ ವಹ್ನಿಪ್ರಾಕಾರಮಂಡಲವನ್ನು ಕಂಡನು.

೩೩. ಆ ಬೆಂಕಿಯ ಕೋಟೆಯ ಸುತ್ತಲೂ ಅಲೆದಲೆದು ಎಲ್ಲಿಯೂ ಅವಕಾಶದೊರೆಯದೆ, ಆ ದುರುಳನು ದಕ್ಷಿಣದ್ವಾರವನ್ನು ಸಮೀಪಿಸಿ ಒಂದು ಕ್ಷಣಕಾಲ ಹಾಗೆಯೇ ಯೋಚಿಸುತ್ತ ನಿಂತನು.

೩೪-೩೫. ಅಲ್ಲಿಯಾದರೋ, ಆ ದಾನವನು, ಮಹಾಪರಾಕ್ರಮಶಾಲಿನಿಯರಾಗಿ, ಸಾವಧಾನೆಯರಾಗಿ, ಶತ್ರುಮರ್ದನವೆಂಬ ವ್ರತವನ್ನು ಕೈಗೊಂಡು, ವಾಹನಗಳನ್ನೇರಿ ಕವಚಗಳನ್ನು ತೊಟ್ಟು, ಆ ದಕ್ಷಿಣದ್ವಾರ ಪ್ರದೇಶದಲ್ಲಿ ಅದರ ರಕ್ಷಣೆಗಾಗಿ ದಂಡನಾಥಾದೇವಿಯಿಂದ ಆಜ್ಞಪ್ತರಾಗಿರುವ ಸ್ತಂಭಿನಿಯೇ ಮೊದಲಾದ ಶಕ್ತಿದೇವಿಯರು ಇಪ್ಪತ್ತು ಅಕ್ಷೋಹಿಣೀ ಸೇನೆಗಳೊಡನೆ ಯುದ್ಧಸನ್ನದ್ಧೆಯರಾಗಿ ನಿಂತಿರುವುದನ್ನು ಕಂಡನು.

೩೬. ಹೀಗೆ, ವಿಶುಕ್ರನು ಈ ಮಹಾಸೇನೆಯನ್ನು ಕಂಡು ಅಚ್ಚರಿಗೊಂಡು ಬಹಳಹೊತ್ತು ಯೋಚಿಸಿ, ಆ ವಹ್ನಿಪ್ರಾಕಾರದ

ಗವ್ಯೂತಿಮಾತ್ರಕಾಯಾಮೇ ತತ್ಸಮಾನಪ್ರವಿಸ್ತರೇ ।
ಶಿಲಾಪಟ್ಟೇ ಸುಮಹತಿ ಪ್ರಾಲಿಖದ್ಯಂತ್ರಮುತ್ತಮಂ ॥ ೩೭ ॥
ಅಷ್ಟದಿಕ್ಷ್ವಷ್ಟಶೂಲೇನ ಸಂಹಾರಾಕ್ಷರಮೌಲಿನಾ ।
ಅಷ್ಟಭಿರ್ದೇವತೈಶ್ಚಾಪಿ ಯುಕ್ತಂ ಯಂತ್ರಂ ಸಮಾಲಿಖತ್ ॥ ೩೮ ॥
ಅಲಸಾ ಕೃಪಣಾ ದೀನಾ ನಿದ್ರಾ ತಂದ್ರಾ ಪ್ರಮೀಲಿಕಾ ।
ಕ್ಲೀಬಾ ಚ ನಿರಹಂಕಾರಾ ಇತ್ಯಷ್ಟೌ ದೇವತಾಃ ಸ್ಮೃತಾಃ ॥ ೩೯ ॥
ದೇವತಾಷ್ಟಕಮೇತಚ್ಚ ಶೂಲಾಷ್ಟಕಪುಟೋಪರಿ । [ ೪೦ ॥
ನಿಯೋಜ್ಯ ಲಿಖಿತಂ ಯಂತ್ರಂ ಮಾಯಾವೀ ಸಮಮಂತ್ರಯತ್ ॥
ಪೂಜಾಂ ವಿಧಾಯ ಯಂತ್ರಸ್ಯ ಬಲಿಭಿಶ್ಛಾಗಲಾದಿಭಿಃ ।
ತದ್ಯಂತ್ರಂ ವೈರಿಕಟಕೇ ಪ್ರಾಕ್ಷಿಪತ್ಸ ಮಹಾಸುರಃ ॥ ೪೧ ॥
ಪ್ರಾಕಾರಸ್ಯ ಬಹಿರ್ಭಾಗವರ್ತಿನಾ ತೇನ ದುರ್ಧಿಯಾ ।
ಕ್ಷಿಪ್ತಮುಲ್ಲಂಘ್ಯ ವರಣಂ ಪಪಾತ ಕಟಕಾಂತರೇ ॥ ೪೨ ॥

---

ಹೊರಗಡೆಯೇ ನಿಂತು ಜಯವಿಘ್ನಮಹಾಯಂತ್ರವನ್ನು ನಿರ್ಮಾಣಮಾಡಿದನು.

೩೭. ಆ ದಾನವನು ಒಂದು (ನೂರಂಬುಗಳ) ಗವ್ಯೂತಿಯ ಅಗಲವೂ ಅಷ್ಟೇ ವಿಸ್ತಾರವೂ ಆದ ದೊಡ್ಡದೊಂದು ಶಿಲಾಪಟ್ಟದಲ್ಲಿ ವಿಜಯವಿಘ್ನವೆಂಬ ಆ ಉತ್ತಮಯಂತ್ರವನ್ನು ಬರೆದನು.

೩೮. ಅಷ್ಟದಿಕ್ಕುಗಳಲ್ಲಿಯೂ, ತುದಿಗಳಲ್ಲಿಯೂ ಸಂಹಾರಾಕ್ಷರಗಳುಳ್ಳ ಅಷ್ಟಶೂಲಗಳಿಂದಲೂ, ಅಷ್ಟದೇವತೆಗಳಿಂದಲೂ ಕೂಡಿದುದಾಗಿರುವಂತೆ ಅವನು ಆ ಯಂತ್ರವನ್ನು ಬರೆದನು.

೩೯. ಅಲಸಾ, ಕೃಪಣಾ, ದೀನಾ, ನಿದ್ರಾ, ತಂದ್ರಾ, ಪ್ರಮೀಲಿಕಾ, ಕ್ಲೀಬಾ, ನಿರಹಂಕಾರಾ ಎಂಬಿವರೇ ಆ ಅಷ್ಟದೇವತೆಗಳು.

೪೦. ಮಾಯಾವಿಯಾದ ಆ ದಾನವನು ಆ ತರುವಾಯ, ಶೂಲಾಷ್ಟಕಪುಟಗಳ ಮೇಲೂ ಈ ಎಂಟುಮಂದಿ ದೇವತೆಗಳನ್ನು ನಿಯೋಜಿಸಿ ಬರೆದ ಆ ಯಂತ್ರವನ್ನು ಅಭಿಮಂತ್ರಿಸಿದನು.

೪೧. ಆ ಮಹಾಸುರನು ಮೇಕೆ ಮುಂತಾದವುಗಳಿಂದ ಆ ಯಂತ್ರಕ್ಕೆ ಬಲಿಪ್ರದಾನಪೂರ್ವಕವಾಗಿ ಪೂಜೆಯನ್ನು ಸಲ್ಲಿಸಿ ಅದನ್ನು ಶತ್ರುಗಳ ಪಾಳೆಯದೊಳಕ್ಕೆಸೆದನು.

೪೨. ದುರ್ಬುದ್ಧಿಯಾದ ಆ ದಾನವನೀರೀತಿ ಪ್ರಾಕಾರದ

ತದ್ಯಂತ್ರಸ್ಯ ವಿಕಾರೇಣ ಕಟಕಸ್ಥಾಸ್ತು ಶಕ್ತಯಃ ।
ವಿಮುಕ್ತಶಸ್ತ್ರಾಃ ಸಂನ್ಯಾಸಮಾಸ್ಥಿತಾ ದೀನಮಾನಸಾಃ ॥ ೪೩ ॥
ಕಿಂ ಹತೈರಸುರೈಃ ಕಾರ್ಯಂ ಶಸ್ತ್ರಶಸ್ತ್ರಿಕ್ರಮೈರಲಂ ।
ಜಯಸಿದ್ಧ್ಯಾ ಫಲಂ ಕಿಂವಾ ಪ್ರಾಣಿಹಿಂಸಾ ಚ ಪಾಪದಾ ॥ ೪೪ ॥
ಅಮರಾಣಾಂ ಕೃತೇ ಕಾರ್ಯೇ ಕಿಮಸ್ಮಾಕಂ ಭವಿಷ್ಯತಿ ।
ವೃಥಾ ಕಲಕಲಂ ಕೃತ್ವಾ ನ ಫಲಂ ಯುದ್ಧಕರ್ಮಣಾ ॥ ೪೫ ॥
ಕಾ ಸ್ವಾಮಿನೀ ಮಹಾರಾಜ್ಞೀ ಕಾ ವಾ ಸಾ ದಂಡನಾಯಿಕಾ ।
ಕಾ ವಾ ಸಾ ಮಂತ್ರಿಣೀ ಶ್ಯಾಮಾ ಭೃತ್ಯತ್ವಂ ನೋಽಥಕೀದೃಶಂ ॥
ಇಹ ಸರ್ವಾಭಿರಸ್ಮಾಭಿರ್ಭೃತ್ಯಭೂತಾಭಿರೇಕಿಕಾಂ । [೪೬ ॥
ವನಿತಾಂ ಸ್ವಾಮಿನೀಂ ಕೃತ್ವಾ ಕಿಂ ಫಲಂ ಭೋಕ್ಷ್ಯತೇ ಪರಂ ॥

---

ಹೊರಗಡೆಯೇ ನಿಂತು ಎಸೆದ ಆ ಜಯವಿಘ್ನಯಂತ್ರವು ವಹ್ನಿಪ್ರಾಕಾರವನ್ನು ದಾಟಿ, ಪಾಳೆಯದ ಮಧ್ಯದಲ್ಲಿ ಬಿದ್ದಿತು.

೪೩. ಆ ಯಂತ್ರದ ವಿಕಾರದಿಂದ ಕಟಕದಲ್ಲಿದ್ದ ಶಕ್ತಿದೇವತೆಗಳೆಲ್ಲರೂ, ಶಸ್ತ್ರಗಳನ್ನು ತೊರೆದು ಸಂನ್ಯಾಸವನ್ನು ತಾಳಿ ಮನಸ್ಸು ಕುಗ್ಗಿದವರಾದರು.

೪೪. "ಎಲಾ! ಹಾಳಾದ ಈ ಅಸುರರೊಡನೆ ನಮಗಾವ ಕಾರ್ಯವು ತಾನೇ ಇರುವುದು? ಇವರೊಡನೆ ಯುದ್ಧಕ್ಕೆ ನಿಂತು ಶಸ್ತ್ರಕ್ಕೆ ಶಸ್ತ್ರವನ್ನು ಪ್ರಯೋಗಿಸುವುದು ಸಾಕು. ಜಯಸಿದ್ಧಿಯಾಗುವುದರಿಂದ ದೊರಕುವ ಫಲವಾದರೂ ಏನು? ಪ್ರಾಣಿಹಿಂಸೆಯಾದರೋ ಬಹು ಪಾಪವನ್ನುಂಟುಮಾಡುವಂತಹುದಲ್ಲವೆ!

೪೫. ದೇವತೆಗಳ ಪ್ರಯೋಜನಕ್ಕಾಗಿ ಹೂಡಿರುವ ಈ ಕಾಳೆಗದಿಂದ ನಮಗಾಗುವ ಪ್ರಯೋಜನವಾದರೂ ಏನು? ನಿಷ್ಪ್ರಯೋಜನವಾಗಿ ಕೂಗಾಡಿ ಕಾಳೆಗಮಾಡುವುದರಿಂದೇನೂ ಫಲನವಿಲ್ಲ.

೪೬. ಸ್ವಾಮಿನಿಯಾದ ಆ ಮಹಾರಾಜ್ಞಿ ಯಾರು? ದಂಡನಾಯಕಿ ಯಾವಳು? ಮಂತ್ರಿಣಿಯಾದ ಶ್ಯಾಮೆ ಯಾರು? ನಮಗೀ ದಾಸೀತನವೆಂತಹುದು?

೪೭. ಇಲ್ಲಿ ನಾವೆಲ್ಲರೂ ದಾಸೀಭಾವವನ್ನು ಅವಲಂಬಿಸಿ ಹೆಂಗಸೊಬ್ಬಳನ್ನು ಒಡತಿಯನ್ನಾಗಿ ಪಡೆದು ಆಮೇಲೆ ತಾನೆ ಯಾವ ಫಲವನ್ನು ಭೋಗಿಸಬೇಕು?

**ಪರೇಷಾಂ ಮರ್ಮಭಿದುರೈರಾಯುಧೈರ್ನ ಪ್ರಯೋಜನಂ ।**
**ಯುದ್ಧಂ ಶಾಮ್ಯತು ಚಾಸ್ಮಾಕಮಂಗೇ ಶಸ್ತ್ರಕ್ಷತಿಪ್ರದಂ ॥ ೪೮ ॥**
**ಯುದ್ಧೇ ಚೇನ್ಮರಣಂ ಭಾವಿ ವೃಥಾ ಸ್ಯುರ್ಜೀವಿತಾನಿ ನಃ ।**
**ಯುದ್ಧಮೃತ್ಯೌ ಭವೇತ್ಸರ್ಗ ಇತಿ ತತ್ರ ಪ್ರಮೈವ ಕಾ ॥ ೪೯ ॥**
**ಉತ್ಸಾಹೇನ ಫಲಂ ನಾಸ್ತಿ ನಿದ್ರೈವೈಕಾ ಸುಖಾವಹಾ ।**
**ಆಲಸ್ಯಸದೃಶಂ ನಾಸ್ತಿ ಚಿತ್ತವಿಶ್ರಾಂತಿದಾಯಕಂ ॥ ೫೦ ॥**
**ಏತಾದೃಶೀಶ್ಚ ನೋ ಜ್ಞಾತ್ವಾ ಸಾ ರಾಜ್ಞೀ ಕಿಂ ಕರಿಷ್ಯತಿ ।**
**ತಸ್ಯಾ ರಾಜ್ಞಿತ್ವಮಪಿ ನಃ ಸಮವಾಯೇನ ಕಲ್ಪಿತಂ ॥ ೫೧ ॥**
**ಏವಂ ಚೋಪೇಕ್ಷಿತಾಸ್ಮಾಭಿಃ ಸಾಪಿ ನಷ್ಟಬಲಾ ಭವೇತ್ ।**
**ನಷ್ಟಸತ್ತ್ವಾ ಚ ಸಾ ರಾಜ್ಞೀ ಕಾಂ ನು ಶಿಕ್ಷಾಂ ಕರಿಷ್ಯತಿ ॥ ೫೨ ॥**
**ಏವಮೇವ ರಣಾರಂಭಂ ವಿಮುಚ್ಯ ವಿಧುತಾಯುಧಾಃ । [ ೫೩ ॥**
**ಶಕ್ತಯೋ ನಿದ್ರಯಾ ದೂರಂ ಘೂರ್ಣಮಾನಾ ಇವಾಭವನ್ ॥**

---

೪೮. ಇತರರ ಮರ್ಮಗಳನ್ನು ಭೇದಿಸುವ ಈ ಆಯುಧಗಳಿಂದಾವ ಪ್ರಯೋಜನವೂ ಇರುವುದಿಲ್ಲ. ನಮ್ಮ ಅವಯವಗಳಲ್ಲಿ ಶಸ್ತ್ರಗಳ ಮೂಲಕ ಗಾಯಗಳನ್ನುಂಟುಮಾಡುವ ಈ ಕಾಳಿಗವು ತಣ್ಣಗಾಗಲಿ.

೪೯. ಈ ಯುದ್ಧದಲ್ಲಿ ನಮಗೇನಾದರೂ ಮೃತಿಯುಂಟಾದರೆ ನಮ್ಮ ಆಯುಸ್ಸೂ, ನಮ್ಮ ಜೀವಿತವೂ ನಿಷ್ಪ್ರಯೋಜನವಾಗುವುದು. ಯುದ್ಧದಲ್ಲಿ ಮರಣವುಂಟಾದರೆ ಸ್ವರ್ಗವೇ ಸಿಕ್ಕುತ್ತದೆಯೆಂಬುದಕ್ಕೆ ಪ್ರಮಾಣ ವೇನು? ಅದನ್ನು ನಂಬುವುದು ತಾನೇ ಹೇಗೆ?

೫೦. ಈ ರಣೋತ್ಸಾಹದಿಂದ ಫಲವಿಲ್ಲ. ನಿದ್ದೆಯೊಂದೇ ಸುಖ ವನ್ನುಂಟುಮಾಡುವಂತಹುದು. ಮನಸ್ಸಿಗೆ ನೆಮ್ಮದಿಯನ್ನುಂಟು ಮಾಡುವ ವಿಷಯದಲ್ಲಿ ಆಲಸ್ಯಕ್ಕೆ ಸಮಾನವಾದುದು ಮತ್ತೊಂದಿಲ್ಲ.

೫೧. ನಾವೆಲ್ಲರೂ ಹೀಗೆ ಅಲಸರಾದುದನ್ನು ತಿಳಿದು ಮಹಾ ರಾಜ್ಞಿಯು ನಮ್ಮನ್ನು ಮಾಡುವುದಾದರೂ ಏನು? ನಾವೆಲ್ಲರೂ ಒಟ್ಟುಗೂಡಿಯಲ್ಲವೆ ಅವಳಿಗೆ ಮಹಾರಾಜ್ಞೀಪಟ್ಟವನ್ನು ಕಟ್ಟಿರುವುದು?

೫೨. ನಾವೆಲ್ಲರೂ ಈ ರೀತಿ ಉಪೇಕ್ಷೆಮಾಡಿದರೆ ಅವಳು ಬಲಗುಂದುವಳು. ದುರ್ಬಲೆಯಾಗುವ ಆ ಮಹಾರಾಜ್ಞಿಯು ಯಾರನ್ನು ದಂಡಿಸಿಯಾಳು?"

೫೩. ಎಲೈ ಅಗಸ್ತ್ಯಮುನಿಯೇ! ಶಕ್ತಿದೇವಿಯರೆಲ್ಲರೂ ಈ ಪ್ರಕಾರ

**ಸರ್ವತ್ರ ಮಾನ್ಯಕಾರ್ಯೇಷು ಮಹದಾಲಸ್ಯಮಾಗತಂ।**
**ಶಿಥಿಲಂ ಚಾಭವತ್ಸರ್ವಂ ಶಕ್ತೀನಾಂ ಕಟಕಂ ಮಹತ್ ॥ ೫೪ ॥**
**ಜಯವಿಘ್ನಮಹಾಯಂತ್ರಮಿತಿ ಕೃತ್ವಾ ಸ ದಾನವಃ।**
**ನಿರ್ವಿಘ್ನಂ ತತ್ಪ್ರಭಾವೇನ ಕಟಕಂ ಪ್ರಮಮಂಥಿಷುಃ ॥ ೫೫ ॥**
**ದ್ವಿತೀಯಯುದ್ಧದಿವಸಸ್ಯಾರ್ಧರಾತ್ರೇ ಗತೇ ಸತಿ।**
**ನಿವೃತ್ಯ ನಗರಂ ಭೂಯಸ್ತ್ರಿಂಶದಕ್ಷೋಹಿಣೀವೃತಃ।**
**ಆಜಗಾಮ ಪುನರ್ದೈತ್ಯೋ ವಿಶುಕ್ರಃ ಕಟಕಂ ದ್ವಿಷಾಂ ॥ ೫೬ ॥**
**ಅಶ್ರೂಯತ ತತಸ್ತಸ್ಯ ರಣನಿಸ್ಸಾಣನಿಸ್ಸ್ವನಃ।**
**ತಥಾಪಿ ತಾ ನಿರುದ್ಯೋಗಾಃ ಶಕ್ತಯಃ ಕಟಕೇಽಭವನ್ ॥ ೫೭ ॥**
**ತತೋ ಮಹಾನುಭಾವತ್ವಾದ್ವಿಕಾರೈರ್ವಿಘ್ನಯಂತ್ರಜೈಃ।**
**ಅಸ್ಪೃಷ್ಟೇ ಮಂತ್ರಿಣೀದಂಡನಾಥೇ ಚಿಂತಾಮವಾಪತುಃ ॥ ೫೮ ॥**

---

ಮಾತನಾಡಿಕೊಂಡು ಯುದ್ಧಪ್ರಯತ್ನವನ್ನೇ ತೊರೆದು, ಆಯುಧಗಳನ್ನು ಬಿಸುಟು, ನಿದ್ರಾದೇವಿಯಿಂದ ಬಹು ದೂರ ಸೆಳೆದೊಯ್ಯಲ್ಪಡುವಂತಾದರು.

೫೪. ಎಲ್ಲೆಡೆಗಳಲ್ಲಿಯೂ ಅವಶ್ಯವಾಗಿಯೂ ಮಾಡಬೇಕಾದ ಕಾರ್ಯಗಳಲ್ಲೆಲ್ಲ ಬಹಳವಾದ ಆಲಸ್ಯವುಂಟಾಯಿತು. ಶಕ್ತಿದೇವತೆಗಳ ಆ ದೊಡ್ಡವ್ಯೂಹವೇ ಸಡಿಲಿಹೋಯಿತು.

೫೫-೫೬. ಎಲೈ ಮುನಿಯೇ, ಈ ಪ್ರಕಾರ ಆ ದಾನವನು ಜಯವಿಘ್ನಮಹಾಯಂತ್ರವನ್ನು ನಿರ್ಮಾಣಮಾಡಿ, ಅದರ ಪ್ರಭಾವದಿಂದ ಶತ್ರುಸೇನೆಯನ್ನು ಏನೊಂದೂ ವಿಘ್ನವಿಲ್ಲದೆ ಮಥಿಸ ಬಯಸಿ, ಶೂನ್ಯಪುರಕ್ಕೈತಂದು, ಆ ಯುದ್ಧದ ಎರಡನೆಯ ದಿನದ ಅರ್ಧರಾತ್ರಿಯಲ್ಲಿಯೇ ಮತ್ತೆ ಮೂವತ್ತು ಅಕ್ಷೋಹಿಣೀ ಸೇನೆಗಳಿಂದ ಪರಿವೃತನಾಗಿ ಶತ್ರುಸೇನೆಯನ್ನು ಕುರಿತು ಬಂದನು.

೫೭. ಆ ದಾನವನ ರಣಕಹಳೆಯ ಧ್ವನಿಯು ಕೇಳಬಂದಿತು. ಹೀಗೆ ಶತ್ರುವಿನ ರಣಕಹಳೆಯ ಧ್ವನಿಯು ಕೇಳಿಬಂದರೂ, ಇತ್ತ ಶಕ್ತಿಸೇನೆಯಲ್ಲಿದ್ದ ಶಕ್ತಿದೇವಿಯರೆಲ್ಲರೂ ಜಯವಿಘ್ನಮಹಾಯಂತ್ರದ ಪ್ರಭಾವದಿಂದುದಿಸಿದ ವಿಕಾರಗಳಿಗೆ ತುತ್ತಾಗಿ ಯಾವ ಉದ್ಯಮವನ್ನೂ ಕೈಕೊಳ್ಳದೆ ಸುಮ್ಮನಿದ್ದರು.

೫೮. ತರುವಾಯ ಮಂತ್ರಿಣೀದಂಡನಾಥೆಯರು ತಮ್ಮ ಮಹಾಪ್ರಭಾವದಿಂದ ಈ ವಿಘ್ನಯಂತ್ರದಿಂದುಂಟಾದ ವಿಕಾರಗಳಿಗೆ ಪರವಶ

ಅಹೋ ಬತ ಮಹತ್ಕಷ್ಟಮಿದಮಾಪತಿತಂ ಭಯಂ ।
ಕಸ್ಯ ವಾದ್ಯ ವಿಕಾರೇಣ ಸೈನಿಕಾ ನಿರ್ಗತೋದ್ಯಮಾಃ ॥ ೫೯ ॥
ನಿರಸ್ತಾಯುಧಸಂಭಾರಾ ನಿದ್ರಾತಂದ್ರಾವಿಘೂರ್ಣಿತಾಃ ।
ನ ಮಾನಯಂತಿ ವಾಕ್ಯಾನಿ ನಾರ್ಚಯಂತಿ ಮಹೇಶ್ವರೀಂ ॥ ೬೦ ॥
ಔದಾಸೀನ್ಯಂ ವಿತನ್ವಂತಿ ಶಕ್ತಯೋ ನಿಸ್ಪೃಹಾ ಇಮಾಃ ।
ಇತಿ ತೇ ಮಂತ್ರಿಣೀದಂಡನಾಥೇ ಚಿಂತಾಪರಾಯಣೇ ॥
ಚಕ್ರಸ್ಯಂದನಮಾರೂಢೇ ಮಹಾರಾಜ್ಞೀಂ ಸಮೂಚತುಃ ॥ ೬೧ ॥

ಮಂತ್ರಿಣೀಃ—

ದೇವಿ ಕಸ್ಯ ವಿಕಾರೋಽಯಂ ಶಕ್ತಯೋ ವಿಗತೋದ್ಯಮಾಃ ।
ನ ಶೃಣ್ವಂತಿ ಮಹಾರಾಜ್ಞೀಂ ತವಾಜ್ಞಾಂ ವಿಶ್ವಪಾಲಿತಾಂ ॥ ೬೨ ॥

---

ರಾಗದಿದ್ದ ಕಾರಣ ತಮ್ಮ ಸೈನ್ಯದ ಶೋಚನೀಯವಾದ ಈ ಸ್ಥಿತಿಯನ್ನು ಕಂಡು ಚಿಂತೆಗೀಡಾದರು.

೫೯. "ಅಯ್ಯೋ ಕಷ್ಟ! ಇದೇನಿಂತಹ ಭಯವಡಸಿ ಬಂದಿತು? ಅದಾವ ವಿಕಾರದಿಂದಲೋ ಏನೋ ಸೈನಿಕರೆಲ್ಲರೂ ಯಾವ ಪ್ರಯತ್ನವನ್ನೂ ಮಾಡದೆ ಸುಮ್ಮನಿರುವರು.

೬೦-೬೧. ಇವರೆಲ್ಲರೂ ಆಯುಧಸಾಮಗ್ರಿಗಳೆಲ್ಲವನ್ನೂ ಬಿಸುಟು, ನಿದ್ರಾರೋಗದಿಂದಾಲುತ್ತಿರುವರು. ನಮ್ಮ ಮಾತುಗಳನ್ನೂ ಮನ್ನಿಸುತ್ತಿಲ್ಲ; ಮಹಾರಾಜ್ಞಿಯನ್ನೂ ಪುರಸ್ಕರಿಸುತ್ತಿಲ್ಲ. ಈ ಶಕ್ತಿದೇವಿಯರೆಲ್ಲರೂ ನಿಸ್ಪೃಹೆಯರಾಗಿ ಔದಾಸೀನ್ಯವನ್ನು ತೋರಿಸುತ್ತಿರುವರಲ್ಲ! ಏನು ಕಾರಣವಿರಬಹುದು?" ಎಂದು, ಅವರೀರ್ವರೂ ಚಿಂತಾಪರಾಯಣೆಯರಾಗಿ ಶ್ರೀಚಕ್ರರಾಜರಥವನ್ನೇರಿ ಮಹಾರಾಜ್ಞಿಯಾದ ಶ್ರೀ ಲಲಿತಾ ಪರಮೇಶ್ವರಿಯನ್ನು ಸಂದರ್ಶಿಸಿ ಆಕೆಯನ್ನು ಕುರಿತು ಹೀಗೆ ವಿಜ್ಞಾಪಿಸಿಕೊಂಡರು:

೬೨. ಮಂತ್ರಿಣೀದೇವಿಯು ಹೇಳುತ್ತಾಳೆ.—"ದೇವೀ! ಅದಾವ ವಿಕಾರವೋ ಏನೋ! ಶಕ್ತಿದೇವಿಯರೆಲ್ಲರೂ ರಣೋದ್ಯಮವನ್ನು ತೊರೆದುಬಿಟ್ಟಿರುವರು. ಮಹಾರಾಜ್ಞೀ! ವಿಶ್ವಪಾಲಿತವಾದ ತಮ್ಮ ಆಣತಿಯನ್ನೂ ಅವರು ಕಿವಿಗೆ ಹಾಕಿಕೊಳ್ಳುತ್ತಿಲ್ಲ.

ಅನ್ಯೋನ್ಯಂ ಚ ವಿರಕ್ತಾಂತಾಃ ಪರಾಚ್ಯಃ ಸರ್ವಕರ್ಮಸು ।
ನಿದ್ರಾತಂದ್ರೀಮುಕುಲಿತಾ ದುರ್ವಾಕ್ಯಾನಿ ವಿತನ್ವತೇ ॥ ೬೩ ॥
ಕಾ ದಂಡಿನೀ ಮಂತ್ರಿಣೀ ಕಾ ಮಹಾರಾಜ್ಞೀ ಚ ಕಾ ಪುನಃ ।
ಯುದ್ಧಂ ಚ ಕೀದೃಶಮಿತಿ ಕ್ಷೇಪಂ ಭೂರಿ ವಿತನ್ವತೇ ॥ ೬೪ ॥
ಅಸ್ಮಿನ್ನೇವಾಂತರೇ ಶತ್ರುರಾಗಚ್ಛತಿ ಮಹಾಬಲಃ ।
ಉದ್ದಂಡೈರ್ಭೇರಿನಿಸ್ವಾನೈರ್ವಿಭಿಂದನ್ನಿವ ರೋದಸೀ ।
ಅತ್ರ ಯತ್ಪ್ರಾಪ್ತರೂಪಂ ತನ್ಮಹಾರಾಜ್ಞೀ ಪ್ರಪದ್ಯತಾಂ ॥ ೬೫ ॥
ಇತ್ಯುಕ್ತ್ವಾ ಸಹ ದಂಡಿನ್ಯಾ ಮಂತ್ರಿಣೀ ಪ್ರಣತಿಂ ವ್ಯಧಾತ್ ॥೬೬॥
ತತಃ ಸಾ ಲಲಿತಾದೇವೀ ಕಾಮೇಶ್ವರಮುಖಂ ಪ್ರತಿ ।
ದತ್ತದೃಷ್ಟಿಃಸಮುಹಸನ್ನಾತಿವ್ಯಕ್ತರದಾವಲಿಃ ॥ ೬೭ ॥
ತಸ್ಯಾಃ ಸ್ಮಿತಪ್ರಭಾಪುಂಜಾತ್ಕುಂಜರಾಕೃತಿಮಾನ್ ಮುಖೇ ।
ಕಟಿಕ್ರೋಡಗಲದ್ದಾನಃ ಕಶ್ಚಿದ್ದೇವೋ ವ್ಯಜೃಂಭತ ॥ ೬೮ ॥

---

೬೩. ಒಬ್ಬರಿಗೊಬ್ಬರು ವೈರಾಗ್ಯದ ಮಾತುಗಳನ್ನಾಡಿಕೊಂಡು ಸಮಸ್ತಕಾರ್ಯಗಳಲ್ಲಿಯೂ ವಿಮುಖರಾಗಿ ನಿದ್ರಾರೋಗದಿಂದ ಕಣ್ಣು ಮುಚ್ಚಿ ಆಡಬಾರದ ದುರ್ವಾಕ್ಯಗಳನ್ನೆಲ್ಲ ಆಡುತ್ತಿರುವರು.

೬೪. 'ದಂಡಿನಿಯಾರು ? ಮಂತ್ರಿಣಿಯಾರು ? ಮಹಾರಾಜ್ಞಿಯೆಂಬುವಳಾರು ? ಇದೇನು ಯುದ್ಧ ?' ಎಂದು ಅವರೆಲ್ಲರೂ ಬಹಳವಾಗಿ ನಮ್ಮೆಲ್ಲರನ್ನೂ ಅಲ್ಲಗಳೆಯುತ್ತಿರುವರು.

೬೫. ಇದೇ ಸಮಯದಲ್ಲಿಯೇ ಮಹಾಬಲಿಷ್ಠನಾದ ಶತ್ರುವೂ ಸಹ ಉದ್ದಂಡವಾದ ಭೇರೀಧ್ವನಿಗಳಿಂದ ಭೂಮ್ಯಂತರಿಕ್ಷಗಳನ್ನೇ ಭೇದಿಸುತ್ತ ನುಗ್ಗಿಬರುತ್ತಿರುವನು. ಈ ವಿಷಯದಲ್ಲಿ ಯುಕ್ತವಾದ ಯಾವ ಕಾರ್ಯವನ್ನು ಕೈಕೊಳ್ಳಬೇಕೋ ಅದನ್ನು ತಾವೇ ಯೋಚಿಸಿ ಕೈಕೊಳ್ಳಬೇಕು.''

೬೬. ಈ ರೀತಿ ಅರಿಕೆಮಾಡಿ ಮಂತ್ರಿಣೀದೇವಿಯು ದಂಡಿನೀದೇವಿಯೊಡಗೂಡಿ ಶ್ರೀ ಮಹಾರಾಜ್ಞಿಗೆ ಮಣಿದಳು.

೬೭. ಆಗಲಾಕೆಯು ತನ್ನ ದಂತಪಂಕ್ತಿಯು ಅಷ್ಟೊಂದು ಗೋಚರವಾಗದಂತೆ ಒಮ್ಮೆ ಸ್ವಲ್ಪವಾಗಿಯೇ ನಸು ನಗೆಯನ್ನು ತೋರಿ ತನ್ನ ನಲ್ಲನಾದ ಶ್ರೀ ಕಾಮೇಶ್ವರನ ಮುಖವನ್ನು ವೃಷ್ಟಿಸಿ ನೋಡಿದಳು.

೬೮. ಆ ಸಮಯದಲ್ಲಿ, ಆ ಮಹಾದೇವಿಯ ಮಂದಹಾಸದ

ಜಪಾಪಟಲಪಾಟಲ್ಯಪಾಟಚ್ಚರವಪುರ್ದ್ಯುತಿಃ ।
ಬೀಜಾಪೂರಂ ಗದಾಮಿಕ್ಷುಚಾಪಂ ಶೂಲಂ ಸುದರ್ಶನಂ ॥ ೬೯ ॥
ಅಬ್ಜಪಾಶೋತ್ಪಲಂ ವ್ರೀಹಿಮಂಜರೀಸ್ವರದಾಂಕುರಾನ್ ।
ರತ್ನಕುಂಭಂ ಚ ದಶಭಿರ್ಹಸ್ತೈಃ ಸ್ವೀಯೈಃ ಸಮುದ್ವಹನ್ ॥ ೭೦ ॥
ತುಂದಿಲಶ್ಚಂದ್ರಚೂಡಾಲೋ ಮುದಬೃಂಹಿತನಿಸ್ವನಃ ।
ಸಿದ್ಧಲಕ್ಷ್ಮ್ಯಾ ಸಮಾಶ್ಲಿಷ್ಟಃ ಪ್ರಣನಾಮ ಮಹೇಶ್ವರೀಂ ॥ ೭೧ ॥
ತಯಾ ಕೃತಾಶೀಃ ಸ ಮಹಾಗಣನಾಥೋ ಗಜಾನನಃ । [ ೭೨ ॥
ಜಯವಿಘ್ನಮಹಾಯಂತ್ರಂ ಭೇತ್ತುಂ ವೇಗಾದ್ವಿನಿರ್ಯಯೌ ॥
ಅಂತರೇ ವಹ್ನಿಸಾಲಸ್ಯ ಭ್ರಮನ್ ದಂತಾವಲಾನನಃ ।
ನಿಭೃತಂ ಕುತ್ರಚಿಲ್ಲಗ್ನಂ ಜಯವಿಘ್ನಂ ವ್ಯಲೋಕಯತ್ ॥ ೭೩ ॥

---

ಪ್ರಭಾಪುಂಜದ ದೆಸೆಯಿಂದ ಒಬ್ಬ ದೇವಪುರುಷನುದಿಸಿದನು. ಆತನು, ಗಂಡಸ್ಥಳದಿಂದ ಸ್ರವಿಸುತ್ತಿರುವ ಮದೋದಕದಿಂದ ಶೋಭಿಸುತ್ತಿರುವ ಕುಂಜರಮುಖನು.

೬೯-೭೧. ಆ ದೇವನು ದಾಸವಾಳದಹೂವಿನ ಕಾಂತಿಯಂತೆ ಕೆಂಬಣ್ಣದ ಮೈ ಹೊಳಪಿನಿಂದ ವಿರಾಜಿಸಿ ಬೀಜಾಪೂರ(ಚೇಪೆಯಹಣ್ಣು), ಗದೆ, ಇಕ್ಷುಚಾಪ (ಕಬ್ಬಿನ ಬಿಲ್ಲು), ಶೂಲ, ಸುದರ್ಶನ (ಚಕ್ರ), ಅಬ್ಜ ಪಾಶ (ಕಮಲದ ಪಾಶ), ಉತ್ಪಲ (ಕನ್ನೈದಿಲೆ), ವ್ರೀಹಿಮಂಜರಿ (ಭತ್ತದ ತೆನೆ), ರದನಾಂಕುರ (ದಂತದ ತುದಿ), ರತ್ನಕುಂಭ ಮೊದಲಾದವುಗಳನ್ನು ತನ್ನ ಹತ್ತು ಕೈಗಳಲ್ಲಿಯೂ ಧರಿಸಿ, ಸೊಂಡಿಲಿನಿಂದ ಕಂಗೊಳಿಸಿ, ಚಂದ್ರಶೇಖರನಾಗಿ ಮುದದಿಂದೊಗೆಯಿಸುತ್ತಿರುವ ಘೀಂಕಾರ ಧ್ವನಿಯುಳ್ಳವನಾಗಿ ಸಿದ್ಧಲಕ್ಷ್ಮಿಯಿಂದ ಆಲಿಂಗಿತನಾಗಿ ಶ್ರೀ ಲಲಿತಾ ಪರಮೇಶ್ವರಿಯನ್ನು ನಮಸ್ಕರಿಸಿದನು.

೭೨. ತರುವಾಯ ಆ ದೇವಿಯ ಆಶೀರ್ವಾದಗಳನ್ನು ಕೈಕೊಂಡು ಗಜಾನನನಾದ ಆ ಮಹಾಗಣನಾಥನು, ಜಯವಿಘ್ನ ಮಹಾಯಂತ್ರವನ್ನು ಭೇದಿಸಲು ವೇಗವಾಗಿ ಹೊರಟನು.

೭೩. ಆ ಗಜಾನನನು ವಹ್ನಿಪ್ರಾಕಾರದಲ್ಲಿ ಅಲ್ಲಲ್ಲಿ ಸಂಚರಿಸುತ್ತ ಗುಟ್ಟಾಗಿ ಯಾವುದೋ ಒಂದು ಕಡೆಯಲ್ಲಿ ತಗುಲಿಕೊಂಡಿರುವ ಆ ಜಯವಿಘ್ನ ಮಹಾಯಂತ್ರವನ್ನು ಕಂಡನು.

ಸ ದೇವೋ ಘೋರನಿರ್ಘಾತನಿಃಸಹೈರ್ದಂತಪಾತನೈಃ ।
ಕ್ಷಣಾಚ್ಚೂರ್ಣೀಕರೋತಿ ಸ್ಮ ಜಯವಿಘ್ನಮಹಾಶಿಲಾಂ ॥ ೭೪ ॥
ತತ್ರ ಸ್ಥಿತಾಭಿರ್ದುಷ್ಟಾಭಿರ್ದೇವತಾಭಿಃ ಸಹೈವ ಸಃ ।
ಪರಾಗಶೇಷತಾಂ ನೀತ್ವಾ ತದ್ಯಂತ್ರಂ ವ್ಯಕ್ಷಿಪದ್ದಿವಿ ॥ ೭೫ ॥
ತತಃ ಕಿಲಕಿಲಾರಾವಂ ಕೃತ್ವಾಲಸ್ಯವಿವರ್ಜಿತಾಃ ।
ಉದ್ಯತಾಃ ಸಮರಂ ಕರ್ತುಂ ಶಕ್ತಯಃ ಶಸ್ತ್ರಪಾಣಯಃ ॥ ೭೬ ॥
ಸ ದಂತಿವದನಃ ಕಂಠಗಲಿತಾಕುಂಠನಿಸ್ವನಃ ।
ಸಸರ್ಜ ಸುಬಹೂನಾತ್ಮರೂಪಾನ್ ದಂತಾವಲಾನನಾನ್ ॥ ೭೭ ॥
ತೇ ಕಟಕ್ರೋಡವಿಗಲನ್ಮದಕಜ್ಜಲಚಂಚಲೈಃ ।
ಚಂಚರೀಕಕುಲೈರಗ್ರೇ ಗೀಯಮಾನಮಹೋದಯಾಃ ॥ ೭೮ ॥
ಸ್ಫುಟದ್ದಾಡಿಮಕಿಂಜಲ್ಕವಿಕ್ಷೇಪಕರರೋಚಿಷಃ ।
ಸಪ್ತವಾರಾಕರಾನೇಕಹೇಲಯಾ ಪಾತುಮುದ್ಧತಾಃ ॥
ಆಮೋದಪ್ರಮುಖಾ ಋದ್ಧಿಮುಖ್ಯಶಕ್ತಿನಿಷೇವಿತಾಃ ॥ ೭೯ ॥

---

೭೪. ಆ ದೇವನು ಭಯಂಕರವಾದ ಹೊಡೆತಗಳನ್ನು ಸಹಿಸುವ ತನ್ನ ದಂತಗಳ ಹೊಡೆತಗಳಿಂದ ಆ ಜಯವಿಘ್ನ ಮಹಾಯಂತ್ರವನ್ನು ಒಂದು ಕ್ಷಣಕಾಲದಲ್ಲಿಯೇ ಪುಡಿಗುಟ್ಟಿದನು.

೭೫. ಅದರಲ್ಲಿದ್ದ ದುಷ್ಟದೇವತೆಗಳೊಡನೆಯೇ ಆ ಮಹಾಯಂತ್ರವನ್ನು ಧೂಳಿಗೆಬ್ಬಿಸಿ ಅದನ್ನು ಗಗನಕ್ಕೆ ತೂರಿದನು.

೭೬. ಆ ಕೂಡಲೇ ಶಕ್ತಿದೇವತೆಗಳೆಲ್ಲರೂ ಆಲಸ್ಯವನ್ನು ತೊರೆದು ಶಸ್ತ್ರಗಳನ್ನು ಕೈಗಳಲ್ಲಿ ಧರಿಸಿ ಕಿಲಕಿಲಧ್ವನಿಗಳನ್ನು ಮಾಡುತ್ತ ಕಾಳಗ ಮಾಡಲುದ್ಯುಕ್ತರಾದರು.

೭೭. ಆ ದಂತಿವದನನಾದರೋ ತನ್ನ ಕಂಠದಿಂದ ಒಂದೇ ಸಮನೆ ಅದ್ಭುತವಾದ ಕುಗ್ಗದ ಘೀಟ್ಕಾರಧ್ವನಿಯನ್ನು ಮಾಡುತ್ತ ತನಗೆ ಅನುರೂಪರಾದ ಅನೇಕಮಂದಿ ದೇವತೆಗಳನ್ನು ಸೃಜಿಸಿದನು.

೭೮-೭೯. ಗಂಡಸ್ಥಳದಿಂದ ಜಾರುತ್ತಿರುವ ಮದೋದಕಕ್ಕೆರಗಿ ಚಂಚಲವಾಗಿ ಮುಂಬರಿದು ವಿಜಯವನ್ನು ಸಾರುತ್ತಿರುವುವೋ ಎಂಬಂತಿರುವ ಚಂಚರೀಕಗಳಿಂದ (ದುಂಬಿಗಳಿಂದ) ಕೂಡಿ, ಬಿರಿದ ದಾಳಿಂಬರೆ ಹೂವಿನೆಸಳಿಗೆ ಸಮಾನವಾದ ಕಾಂತಿಯುಳ್ಳವರಾಗಿ, ಸಪ್ತ ಸಮುದ್ರಗಳನ್ನೂ ಒಮ್ಮೆಯೇ ಪಾನಮಾಡುವುದಕ್ಕೆ ಉದ್ಯುಕ್ತರಾಗಿ ಹೊರಟರು

ಆಮೋದಶ್ಚ ಪ್ರಮೋದಶ್ಚ ಸುಮುಖೋ ದುರ್ಮುಖಸ್ತಥಾ ।
ವಿಘ್ನಶ್ಚ ವಿಘ್ನಕರ್ತಾ ಚ ಷಡೇತೇ ವಿಘ್ನನಾಯಕಾಃ ॥ ೮೦ ॥
ಯೇ ಸಪ್ತಕೋಟಿಸಂಖ್ಯಾನಾಂ ಹೇರಂಬಾಣಾಮಧೀಶ್ವರಾಃ ।
ತೇ ಪುರಶ್ಚಲಿತಾಸ್ತಸ್ಯ ಮಹಾಗಣಪತೇ ರಣೇ ॥ ೮೧ ॥
ಅಗ್ನಿಪ್ರಾಕಾರವಲಯಾದ್ವಿನಿರ್ಗತ್ಯ ಗಜಾನನಃ ।
ಕ್ರೋಧಹುಂಕಾರತುಮುಲಃ ಪ್ರತ್ಯಪದ್ಯತ ದಾನವಾನ್ ॥ ೮೨ ॥
ತ್ರಿಂಶದಕ್ಷೋಹಿಣೀಜುಷ್ಟಂ ವಿಶುಕ್ರಂ ಶಕ್ರಶಾಸನಂ ।
ಅವಾಕಿರಚ್ಛರಸ್ತೋಮೈರಿಕ್ಷುಧನ್ವಮುಖಚ್ಯುತೈಃ ॥ ೮೩ ॥
ತತಃ ಪ್ರಚಂಡಘೀಟ್ಕಾರಬಧಿರೀಕೃತವಿಷ್ಟಪಃ ।
ಪಪಾತ ದೈತ್ಯಸೈನ್ಯೇಷು ಗಜವಕ್ತ್ರಚಮೂಗಣಃ ॥ ೮೪ ॥

---

ವಂತೆ ತೋರುತ್ತಿದ್ದ ಆಮೋದನೇ ಮೊದಲಾದ ಆ ಗಣನಾಯಕರೆಲ್ಲರೂ ಋದ್ಧಿಯೇ ಮೊದಲಾದ ಶಕ್ತಿದೇವಿಯರಿಂದ ಸಂಸೇವಿತರಾಗಿ ಮುನ್ನುಗ್ಗಿದರು.

೮೦. ಎಲೈ ಅಗಸ್ತ್ಯಮುನಿಯೇ! ಆ ವಿಘ್ನನಾಯಕರು ಆರು ಮಂದಿ; ಆಮೋದ, ಪ್ರಮೋದ, ಸುಮುಖ, ದುರ್ಮುಖ, ವಿಘ್ನ, ವಿಘ್ನಕರ್ತ ಎಂಬಿವೇ ಅವರ ನಾಮಧೇಯಗಳು.

೮೧. ಏಳುಕೋಟಿ ಸಂಖ್ಯೆಯ ಹೇರಂಬರಿಗೆ (ಗಣಪತಿಗಳಿಗೆ) ಅಧೀಶ್ವರರಾದ ಈ ವಿಘ್ನನಾಯಕರೆಲ್ಲರೂ ಆ ಕಾಳಿಗದಲ್ಲಿ ಶ್ರೀ ಮಹಾಗಣಪತಿಯ ಮುಂದೆ ಹೊರಟರು.

೮೨. ಹೀಗೆ ಇವರೆಲ್ಲರಿಂದಲೂ ಪರಿವೃತನಾಗಿ ಆ ಗಜಾನನನು ಅಗ್ನಿಪ್ರಾಕಾರವಲಯದಿಂದ ಹೊರಹೊರಟು ಕ್ರೋಧದಿಂದ ಹುಂಕರಿಸುತ್ತ ಆ ದಾನವರನ್ನು ಮುತ್ತಿದನು.

೮೩. ಆ ಗಜಾನನನು, ದೇವೇಂದ್ರನನ್ನೇ ಜಯಿಸಿದವನಾಗಿಯೂ ಮೂವತ್ತು ಅಕ್ಷೋಹಿಣೀ ಸೇನೆಗಳೊಡಗೂಡಿದವನಾಗಿಯೂ ಇರುವ ಆ ವಿಶುಕ್ರದಾನವನಮೇಲೆ ತನ್ನ ಇಕ್ಷುಚಾಪದಿಂದ ಅಂಬಿನ ಸುರಿಮಳೆಯನ್ನೇ ಸುರಿಸಿದನು.

೮೪. ಇದಾದಬಳಿಕ, ಆತನ ಗಜಾನನಸೈನ್ಯಸಮೂಹವೆಲ್ಲವೂ ಘೀಟ್ಕಾರದಿಂದ ಬ್ರಹ್ಮಾಂಡವನ್ನೇ ಕಿವುಡುಗೊಳಿಸುತ್ತ ದಾನವಸೇನೆಯ ಮೇಲೆ ನುಗ್ಗಿ ಹೊರಟಿತು.

ಅಚ್ಛಿದನ್ನಿಶಿತೈರ್ಬಾಣೈರ್ಗಣನಾಥಃ ಸ ದಾನವಾನ್ ।
ಗರ್ಜಿತಾನಿ ಸುಘೋರಾಣಿ ಕೃತ್ವಾ ಹತ್ವಾ ಚ ದಾನವಾನ್ ॥ ೮೫ ॥
ಗಣನಾಥೇನ ತಸ್ಯಾಭೂದ್ವಿಶುಕ್ರಸ್ಯ ಮಹೌಜಸಃ ।
ಯುದ್ಧಮುದ್ಧತಹುಂಕಾರಭಿನ್ನಕಾರ್ಮುಕನಿಸ್ವನಂ ॥ ೮೬ ॥
ಭ್ರುಕುಟೀಕುಟಿಲಂ ವಕ್ತ್ರಂ ದಷ್ಟೋಷ್ಠಮತಿಪಾಟಲಂ ।
ವಿಶುಕ್ರೋ ಯುಧಿ ಬಿಭ್ರಾಣಃ ಸಮಯುಧ್ಯತ ತೇನಹ ॥ ೮೭ ॥
ಶಸ್ತ್ರಸಂಘಟ್ಟನನಿಸ್ವಾನೈರ್ಹುಂಕಾರೈಶ್ಚ ಸುರದ್ವಿಷಾಂ ।
ದೈತ್ಯಸಪ್ತಿಖುರಕ್ರೋಡಕುದ್ದಲೀಕುಟ್ಟನಸ್ವನೈಃ ॥ ೮೮ ॥
ಘೀಟ್ಕಾರೈಶ್ಚ ಗಜೇಂದ್ರಾಣಾಂ ಭಟಾನಾಂ ಕ್ರಂದನೈರಪಿ ।
ಹೇಷಯಾ ಚ ಹಯಶ್ರೇಣ್ಯಾ ರಥಚಕ್ರಸ್ವನೈರಪಿ ॥ ೮೯ ॥
ಧನುಷಾಂ ಗುಣನಿಸ್ವಾನೈಶ್ಚ ಕ್ರಚಾತ್ಕಾರಣೈರಪಿ ।
ಶರಶಾತ್ಕಾರಘೋಷೈಶ್ಚ ವೀರಭಾಷಾಕದಂಬಕೈಃ ॥ ೯೦ ॥
ಅಟ್ಟಹಾಸೈರ್ಭಟೇಂದ್ರಾಣಾಂ ಸಿಂಹನಾದೈಶ್ಚ ಭೂರಿಶಃ ।
ಕ್ಷುಭ್ಯದ್ದಿಗಂತರಂ ತತ್ರ ವವೃಧೇ ಯುದ್ಧಮುದ್ಧತಂ ॥ ೯೧ ॥

---

೮೫. ಗಣನಾಥನಾದರೋ ಮೊನಚಾದ ಬಾಣಗಳನ್ನು ಪ್ರಯೋಗಿಸಿಯೂ, ಭಯಂಕರ ಗರ್ಜನೆಯನ್ನು ಮಾಡಿಯೂ ಅನೇಕಮಂದಿ ದಾನವರನ್ನು ಕತ್ತರಿಸಿ ಕೆಡವಿದನು.

೮೬. ಆ ಸಮಯದಲ್ಲಿಯೇ ಮಹಾಪರಾಕ್ರಮಿಯಾದ ವಿಶುಕ್ರನಿಗೂ ಆ ಗಣನಾಥನಿಗೂ ಬಿಲ್ಲಿನ ಟಂಕಾರಧ್ವನಿಯನ್ನೂ ಭೇದಿಸಿ ಮೆರೆದ ಉದ್ಧತವಾದ ಹುಂಕಾರನಿನಾದದಿಂದ ಕೂಡಿದ ತುಮುಲ ಯುದ್ಧವು ಮೊದಲಾಯಿತು.

೮೭. ಆಗ ವಿಶುಕ್ರನು ಔಡುಕಚ್ಚಿ, ಹುಬ್ಬುಕೊಂಕಿಸಿ, ಬಹಳ ಕೆಂಪಾದ ಮುಖವುಳ್ಳವನಾಗಿ ಗಜಾನನನೊಡನೆ ಹೋರಾಡಿದನು.

೮೮-೯೧. ಶಸ್ತ್ರಸಂಘಟ್ಟನಧ್ವನಿ, ಸುರದ್ವೇಷಿಗಳಾದ ದಾನವರ ಹುಂಕಾರ, ಆ ದೈತ್ಯಸೇನೆಯ ಕುದುರೆಗಳ ಗೊರಸುಗಳ ಭಯಂಕರ ನಿಸ್ವನ, ಗಜಶ್ರೇಷ್ಠಗಳ ಘೀಟ್ಕಾರ, ಭಟರ ಆಕ್ರಂದನ, ಕುದುರೆಗಳ ಹೇಷಾರವ, ರಥಚಕ್ರಗಳ ಚೀತ್ಕಾರಶಬ್ದ, ಧನುಸ್ಸುಗಳ ಟಂಕಾರ, ಚಕ್ರಾಯುಧಗಳ ಚಾತ್ಕಾರ, ಬಾಣಗಳ ಶಾತ್ಕಾರ, ವೀರರ ವೀರಾಲಾಪ, ಭಟಶ್ರೇಷ್ಠರ ಅಟ್ಟಹಾಸ, ಅಪರಿಮಿತವಾದ ಸಿಂಹನಾದ, ಮುಂತಾದ

ತ್ರಿಂಶದಕ್ಷೋಹಿಣೀಸೇನಾಂ ವಿಶುಕ್ರಸ್ಯ ದುರಾತ್ಮನಃ ।
ಪ್ರತ್ಯೇಕಂ ಪಾತಯಾಮಾಸುರ್ಗಣನಾಥಾ ಮಹಾರಥಾಃ ॥ ೯೨ ॥
ದಂತೈರ್ಮರ್ಮ ವಿಭಿಂದಂತೋ ವೇಷ್ಟಯಂತಶ್ಚ ಶುಂಡಯಾ ।
ಪ್ರೋಥಯಂತಃ ಕರ್ಣತಾಲೈಃ ಪುಷ್ಕಲಾವರ್ತಕೋಪಮೈಃ ॥ ೯೩ ॥
ನಾಸಾಶ್ವಾಸೈಶ್ಚ ಪರುಷೈರ್ವಿಕ್ಷಿಪಂತಃ ಪತಾಕಿನೀಂ ।
ಉರೋಭಿರ್ಮರ್ದಯಂತಶ್ಚ ಶೈಲವಪ್ರಸಮಪ್ರಭೈಃ ॥ ೯೪ ॥
ಪೇಷಂತಶ್ಚ ಪದಾಘಾತೈಃ ಪೀನೈರ್ಘ್ನಂತಸ್ತಥೋದರೈಃ ।
ವಿಚ್ಛಿಂದಂತಶ್ಚ ಶೂಲೇನ ಕೃಂತಂತಶ್ಚ ಕ್ರಪಾತನೈಃ ॥ ೯೫ ॥
ಶಂಖಸ್ವಾನೇನ ಮಹತಾ ಪೀಡಯಂತೋ ವರೂಥಿನೀಂ ।
ಗಣನಾಥಮುಖೋದ್ಭೂತಾ ಗಜವಕ್ತ್ರಾಃ ಸಹಸ್ರಶಃ ।
ಧೂಲಿಶೇಷಂ ಸಮಸ್ತಂ ತತ್ಸೈನ್ಯಂ ಚಕ್ರುರ್ಮದೋದ್ಧತಾಃ ॥೯೬॥

---

ವಿವಿಧ ಧ್ವನಿಗಳಿಂದ ದಿಗಂತರಗಳೇ ಕಲಕಿಹೋಗುವಂತಾಗಿ ಆ ಕಾಳಗವು ಬಹು ಭಯಂಕರವಾಗಿ ಬೆಳೆಯಿತು.

೯೨. ಆ ಮಹಾಯುದ್ಧದಲ್ಲಿ ಮಹಾರಥಿಕರಾದ ಗಣನಾಥರೆಲ್ಲರೂ ದುರಾತ್ಮನಾದ ವಿಶುಕ್ರದಾನವನ ಮೂವತ್ತು ಅಕ್ಷೋಹಿಣೀ ಸೇನೆಗಳನ್ನೂ ಒಂದೊಂದನ್ನಾಗಿ ನೆಲಕ್ಕುರುಳಿಸಿದರು.

೯೩-೯೬. ಮಹಾಗಣೇಶ್ವರನ ಮುಖದಿಂದುತ್ಪನ್ನರಾದವರೂ ಮದೋದ್ಧತರೂ ಆದ ಆ ಗಜಾನನರೆಲ್ಲರೂ, ತಮ್ಮ ದಂತಗಳಿಂದ ದೈತ್ಯರ ಮರ್ಮಸ್ಥಳಗಳನ್ನು ಭೇದಿಸುತ್ತಲೂ, ಸೊಂಡಿಲುಗಳಿಂದ ಅವರನ್ನು ಸುತ್ತುತ್ತಲೂ, ಪುಷ್ಕಲಾವರ್ತಗಳೆಂಬ ಮುಗಿಲುಗಳಿಗೆ ಸಮಾನಗಳಾದ ತಮ್ಮ ಕರ್ಣತಾಲಗಳಿಂದವರನ್ನು ತಳ್ಳಿ ಕೆಡವುತ್ತಲೂ, ಬಹು ತೀಕ್ಷ್ಣವಾದ ನಾಸಿಕೆಯ ನಿಶ್ವಾಸಗಳಿಂದ ಅವರ ಸೇನೆಗಳನ್ನೇ ತೂರುತ್ತಲೂ, ಪರ್ವತಗಳ ಕೋಡುಗಳಂತಿರುವ ತೊಡೆಗಳಿಂದವರೆಲ್ಲರನ್ನೂ ಮರ್ದಿಸುತ್ತಲೂ, ಕಾಲ್ತುಳಿತಗಳಿಂದವರನ್ನು ನಜ್ಜುಗುಟ್ಟುತ್ತಲೂ, ದೊಡ್ಡದೊಡ್ಡ ಹೊಟ್ಟೆಗಳಿಂದವರನ್ನು ತಳ್ಳಿ ಹೊಡೆಯುತ್ತಲೂ, ಶೂಲಗಳಿಂದ ಸೀಳುತ್ತಲೂ, ಕುಂತಚಕ್ರಗಳ ಪ್ರಯೋಗದಿಂದಲೂ, ಮಹತ್ತರವಾದ ಶಂಖಧ್ವನಿಯಿಂದಲೂ ಅವರ ಸೇನೆಯನ್ನೇ ಪೀಡಿಸುತ್ತಲೂ ಕಡೆಗೆ ಸಾವಿರಾರು ರೀತಿಗಳಿಂದ ಆ ಸಮಸ್ತ ಸೇನೆಯನ್ನೂ ಧೂಳಿಗೆಬ್ಬಿಸಿದರು.

ಅಥ ಕ್ರೋಧಸಮಾವಿಷ್ಟೋ ನಿಜಸೈನ್ಯಪುರೋಗಮಂ ।
ಪ್ರೇಷಯಾಮಾಸ ದೇವಸ್ಯ ಗಜಾಸುರಮಸೌ ಪುರಃ ॥ ೯೭ ॥
ಪ್ರಚಂಡಸಿಂಹನಾದೇನ ಗಜದೈತ್ಯೇನ ದುರ್ಧಿಯಾ ।
ಸಪ್ತಾಕ್ಷೋಹಿಣಿಯುಕ್ತೇನ ಯುಯುಧೇ ಸ ಗಣೇಶ್ವರಃ ॥ ೯೮ ॥
ಹೀಯಮಾನಂ ಸಮಾಲೋಕ್ಯ ಗಜಾಸುರಭುಜಾಬಲಂ ।
ವರ್ಧಮಾನಂ ಚ ತದ್ವೀರ್ಯಂ ವಿಶುಕ್ರಃ ಪ್ರಪಲಾಯಿತಃ ॥ ೯೯ ॥
ಸ ಏಕ ಏವ ವೀರೇಂದ್ರಃ ಪ್ರಚಲನ್ಮೂಷವಾಹನಃ ।
ಸಪ್ತಾಕ್ಷೋಹಿಣಿಕಾಯುಕ್ತಂ ಗಜಾಸುರಮಮರ್ದಯತ್ ॥೧೦೦॥
ಗಜಾಸುರೇ ಚ ನಿಹತೇ ವಿಶುಕ್ರೇ ಚ ಪಲಾಯಿತೇ ।
ಲಲಿತಾಂತಿಕಮಾಪೇದೇ ಮಹಾಗಣಪತಿರ್ಮೃಧಾತ್ ॥ ೧೦೧ ॥
ಕಾಲರಾತ್ರಿಶ್ಚ ದೈತ್ಯಾನಾಂ ಸಾ ರಾತ್ರಿರ್ವಿರತಿಂ ಗತಾ ।
ಲಲಿತಾ ಚಾಪಿ ಮುದಿತಾ ಬಭೂವಾಸ್ಯ ಪರಾಕ್ರಮೈಃ ॥ ೧೦೨ ॥

---

೯೭. ಹೀಗೆ ತನ್ನ ಸೈನ್ಯವೆಲ್ಲವೂ ನಾಶವಾದ ಬಳಿಕ, ಆ ವಿಶುಕ್ರ ದಾನವನು ಬಹಳವಾಗಿ ಮುನಿದು, ತನ್ನ ಸೈನ್ಯದ ಮುಂದಾಳಾದ ಗಜಾಸುರನನ್ನು ಮಹಾಗಣಪತಿಯನ್ನೆದುರಿಸಲು ಕಳುಹಿಸಿದನು.

೯೮. ಗಣೇಶ್ವರನಾದರೋ ಏಳು ಅಕ್ಷೋಹಿಣೀ ಸೇನೆಗಳೊಡಗೂಡಿದ ದುಷ್ಟನಾದ ಆ ಗಜಾಸುರನೊಡನೆ ಪ್ರಚಂಡವಾದ ಸಿಂಹನಾದವನ್ನು ಮೆರೆದು ಯುದ್ಧಮಾಡಿದನು.

೯೯. ಇತ್ತ ವಿಶುಕ್ರನಾದರೋ ಆ ಯುದ್ಧದಲ್ಲಿ ಗಜಾಸುರನ ಭುಜಬಲವು ಕುಗ್ಗುತ್ತಿರುವುದನ್ನೂ, ಗಣೇಶ್ವರನು ಪರಾಕ್ರಮದಿಂದ ವರ್ಧಿಸುತ್ತಿರುವುದನ್ನೂ ಕಂಡು ಶೂನ್ಯಪುರಕ್ಕೆ ಓಡಿಹೋದನು.

೧೦೦. ವೀರೇಂದ್ರನಾದ ಆ ಗಣನಾಥನು ಮೂಷಕವಾಹನನಾಗಿ ಒಬ್ಬಂಟಿಗನಾಗಿಯೇ ನಿಂತು ಏಳು ಅಕ್ಷೋಹಿಣೀ ಸೇನೆಗಳೊಡಗೂಡಿದ ಆ ಗಜಾಸುರನನ್ನು ಮರ್ದಿಸಿದನು.

೧೦೧. ಹೀಗೆ ಗಜಾಸುರನೂ ಹತನಾಗಿ, ವಿಶುಕ್ರನೂ ಪಲಾಯನವಾದ ತರುವಾಯ ಆ ಮಹಾಗಣಪತಿಯು ರಣರಂಗವನ್ನು ಬಿಟ್ಟು ಶ್ರೀ ಲಲಿತಾದೇವಿಯ ಬಳಿಗೈದಿದನು.

೧೦೨. ದೈತ್ಯರೆಲ್ಲರಿಗೂ ಕಾಳರಾತ್ರಿಯಾದ ಆ ರಾತ್ರಿಯೂ ಕಳೆಯಿತು. ಶ್ರೀ ಲಲಿತಾದೇವಿಯೂ ಸಹ ಗಣೇಶ್ವರನ ಪರಾಕ್ರಮವನ್ನು ಕಂಡು ಬಹುವಾಗಿ ಮೆಚ್ಚಿದಳು.

**ವಿತತಾರ ಮಹಾರಾಜ್ಞೀ ಪ್ರೀಯಮಾಣಾ ಗಣೇಶಿತುಃ ।**
**ಸರ್ವದೈವತಪೂಜಾಯಾಃ ಪೂರ್ವಪೂಜ್ಯತ್ವಮುತ್ತಮಂ ॥ ೧೦೩ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ**
**ಸಂವಾದೇ ಶ್ರೀ ಲಲಿತೋಪಾಖ್ಯಾನೇ**
**ದ್ವಾವಿಂಶೋಽಧ್ಯಾಯಃ**

**॥ ಇತಿ ದ್ವಿತೀಯ ಯುದ್ಧದಿವಸಃ ॥**

---

೧೦೩. ಹೀಗೆ, ಆ ಮಹಾರಾಜ್ಞಿಯು ಸುಪ್ರಸನ್ನೆಯಾಗಿ ಆ ಮಹಾಗಣೇಶ್ವರನಿಗೆ ಸಮಸ್ತದೇವತೆಗಳ ಪೂಜೆಗಳಿಗೂ ಪೂರ್ವದಲ್ಲಿಯೇ ಪೂಜ್ಯತ್ವವನ್ನು ಅನುಗ್ರಹಿಸಿದಳು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

**॥ ಇಂತಿದು ಎರಡನೆಯ ಯುದ್ಧದಿವಸವು ॥**

॥ ಶ್ರೀಃ ॥

# ಅಥ ತ್ರಯೋವಿಂಶೋಽಧ್ಯಾಯಃ

[ವಿಶುಕ್ರವಿಷಂಗದಾನವಯೋರ್ವಧಃ]

ಭಂಡಸ್ಯಾಂಶಸಮುದ್ಭವೌ ಸುರರಿಪೂ ಶ್ರೀಮಂತ್ರಿಣೀ ದಂಡಿನೀ-
ದೇವೀಭ್ಯಾಂ ನಿಜಪಾದಭಕ್ತಿಲತಿಕಾ ಪುಷ್ಪಾಯಿತಾಭ್ಯಾಂ ರಣೇ ।
ಜೇತುಂ ಸಂಪ್ರತಿ ಚೋದಿತೌ ವಿನಿಹತೌ ಶ್ರೀಶಕ್ತಿಸೈನ್ಯಂ ಜವಾತ್
ತತ್ತ್ವಾಂ ನೌಮಿ ಸದಾಶಿವಪ್ರಣಯಿನೀಂ ಶ್ರೀಮೀನನೇತ್ರಾಂ ಶಿವಾಂ ॥

ಶ್ರೀ ಹಯಗ್ರೀವಃ—

**ರಣೇ ಭಗ್ನಂ ಮಹಾಸತ್ತ್ವಂ ಭಂಡದೈತ್ಯಃ ಸಹೋದರಂ ।**
**ನಿಶಮ್ಯ ಕದನಂ ಪ್ರಾಪ್ತಃ ಸಂಪ್ರಾಪ್ತೋ ಬಹುಚಿಂತಯಾ ॥ ೧ ॥**
**ಉಭಾವಪಿ ಸಮೇತೌ ತೌ ಯುಕ್ತೌ ಸರ್ವೈಶ್ಚ ಸೈನಿಕೈಃ ।**
**ಪ್ರೇಷಯಾಮಾಸ ಯುದ್ಧಾಯ ಭಂಡದೈತ್ಯಃ ಸಹೋದರೌ ॥ ೨ ॥**
**ತಾವುಭೌ ಪರಮಕ್ರುದ್ಧೌ ಭಂಡದೈತ್ಯೇನ ದೇಶಿತೌ ।**
**ವಿಷಂಗಶ್ಚ ವಿಶುಕ್ರಶ್ಚ ಮಹೋದ್ಯಮಮುಪಾಪತುಃ ॥ ೩ ॥**
**ಕನಿಷ್ಠಸಹಿತಂ ತತ್ರ ಯುವರಾಜಂ ಮಹಾಬಲಂ ।**
**ವಿಶುಕ್ರಮನುವವ್ರಾಜ ಸೇನಾ ತ್ರೈಲೋಕ್ಯಕಂಪಿನೀ ॥ ೪ ॥**

---

## ಕನ್ನಡದ ಅನುವಾದ

[ವಿಶುಕ್ರವಿಷಂಗದಾನವರ ವಧೆ]

೧. ಶ್ರೀ ಹಯಗ್ರೀವ ಮುನಿಯು ಹೇಳುತ್ತಾನೆ:—ಎಲೈ ಅಗಸ್ತ್ಯ ಮುನಿಯೇ! ತರುವಾಯ ಭಂಡಾಸುರನು, ಕಾಳಗದಲ್ಲಿ, ಮಹಾ ಪರಾಕ್ರಮಿಯಾದ ತನ್ನ ತಮ್ಮನು ಸೋತು ಹಿಂತಿರುಗಿದನೆಂಬ ಸುದ್ದಿಯನ್ನು ಕೇಳಿ ಬಹಳವಾದ ಚಿಂತೆಗೊಳಗಾದನು.

೨. ತರುವಾಯ ಆ ದೈತ್ಯನು ತನ್ನ ತಮ್ಮಂದಿರಾದ ವಿಶುಕ್ರವಿಷಂಗರೀರ್ವರನ್ನೂ ಸಮಸ್ತ ಸೇನೆಯೊಡನೆ ಕಾಳಗಕ್ಕೆ ಕಳುಹಿಸಿದನು.

೩. ಹೀಗೆ ಭಂಡಾಸುರನಿಂದ ಆಜ್ಞಾಪಿತರಾದ ಆ ವಿಷಂಗವಿಶುಕ್ರರೀರ್ವರೂ ಪರಮ ಕ್ರುದ್ಧರಾಗಿ ಆ ರಣೋದ್ಯಮವನ್ನು ಕೈಗೊಂಡರು.

೪. ಆಗ ಮೂರು ಲೋಕಗಳನ್ನೂ ನಡುಗಿಸುವಂತಹ ದಾನವಸೇನೆಯೆಲ್ಲವೂ ಕಿರಿಯನಾದ ವಿಷಂಗದಾನವನೊಡನೆ ಹೊರಟ ಮಹಾಬಲಿಷ್ಠನಾದ ಯುವರಾಜ ವಿಶುಕ್ರನನ್ನು ಹಿಂಬಾಲಿಸಿ ಹೊರಟಿತು.

**ಅಕ್ಷೋಹಿಣೀಚತುಶ್ಶತ್ಯಾ ಸೇನಾನಾಮಾವೃತಶ್ಚ ಸಃ ।**
**ಯುವರಾಜಃ ಪ್ರವವೃಧೇ ಪ್ರತಾಪೇನ ಮಹೀಯಸಾ ॥ ೫ ॥**
**ಉಲೂಕಜಿತ್ಪ್ರಭೃತಯೋ ಭಾಗಿನೇಯಾ ದಶೋದ್ಧತಾಃ ।**
**ಭಂಡಸ್ಯ ತದ್ಭಗಿನ್ಯಾಂ ತು ಧೂಮಿನ್ಯಾಂ ಜಾತಯೋನಯಃ ॥ ೬ ॥**
**ಕೃತಾಸ್ತ್ರಶಿಕ್ಷಾ ಭಂಡೇನ ಮಾತುಲೇನ ಮಹೀಯಸಾ ।**
**ವಿಕ್ರಮೇಣ ವಿವಲ್ಗಂತಃ ಸೇನಾನಾಥಾಃ ಪ್ರತಸ್ಥಿರೇ ॥ ೭ ॥**
**ಉದ್ದಂಡಚಾಪನಿರ್ಘೋಷೈರ್ಭೀಷಯಂತೋ ದಿಶೋ ದಶ ।**
**ದ್ವಯೋರ್ಮಾತುಲಯೋಃ ಪ್ರೀತಿಂ ಭಾಗಿನೇಯಾ ವಿತೇನಿರೇ ॥ ೮ ॥**
**ಆರೂಢಯಾನಾಃ ಪ್ರತ್ಯೇಕಂ ಗಾಢಾಹಂಕಾರಶಾಲಿನಃ ।**
**ಆಕೃಷ್ಟಗುರುಧನ್ವಾನೋ ವಿಶುಕ್ರಮನುವವ್ರಜುಃ ॥ ೯ ॥**

---

೫. ನಾನೂರು ಅಕ್ಷೋಹಿಣೀಸೇನೆಯು ಬಳಸಿ ಬರುತ್ತಿರಲು ಆ ಯುವರಾಜ ವಿಶುಕ್ರನು ಮಹತ್ತರವಾದ ಪರಾಕ್ರಮದಿಂದ ವರ್ಧಿಸಿದನು.

೬. ಭಂಡಾಸುರನ ತಂಗಿಯಾದ ಧೂಮಿನಿಯೆಂಬವಳ ಮಕ್ಕಳಾದ ಉಲೂಕಜಿತುವೇ ಮೊದಲಾದ ಹತ್ತು ಮಂದಿ ಸೋದರಳಿಯಂದಿರೂ ಆ ವಿಶುಕ್ರ ವಿಷಂಗರೊಡನೆ ಹೊರಟರು.

೭. ಅವರೆಲ್ಲರೂ ಮಹಾಪರಾಕ್ರಮಿಯಾದ ಭಂಡಮಾವನಿಂದ ಶಸ್ತ್ರಾಸ್ತ್ರಗಳಲ್ಲಿ ಸುಶಿಕ್ಷಿತರಾದವರು. ಎಲ್ಲರೂ ತಮ್ಮ ತಮ್ಮ ಪರಾಕ್ರಮಗಳನ್ನು ಮೆರೆದು ಸಿಂಹನಾದಗಳನ್ನು ಮಾಡುತ್ತ ಆ ದಾನವಸೇನೆಗಳಿಗೆ ನಾಯಕರಾಗಿ ಹೊರಟರು.

೮. ಸೋದರಳಿಯಂದಿರಾದ ಆ ಹತ್ತು ಮಂದಿ ದಾನವರೂ ಉದ್ದಂಡವಾದ ತಮ್ಮ ಬಿಲ್ಲುಗಳ ಟಂಕಾರಧ್ವನಿಯಿಂದ ದಶದಿಶೆಗಳನ್ನೂ ಪ್ರತಿಧ್ವನಿಗೊಳಿಸುತ್ತ ಆ ಸೋದರಮಾವಂದಿರೀರ್ವರಿಗೂ ಸಂತೋಷವನ್ನು ಉಂಟುಮಾಡಿದರು.

೯. ಮಹತ್ತರವಾದ ಅಹಂಕಾರದಿಂದ ಕೂಡಿದ ಆ ಹತ್ತು ಮಂದಿ ದಾನವರಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮ ವಾಹನಗಳನ್ನೇರಿ, ಸೆಳೆದು ಸಿದ್ಧಗೊಳಿಸಿದ ದೊಡ್ಡ ದೊಡ್ಡ ಧನುಸ್ಸುಗಳನ್ನು ಧರಿಸಿ ವಿಶುಕ್ರ ದಾನವನನ್ನು ಹಿಂಬಾಲಿಸಿ ಹೊರಟರು.

**ಯೌವರಾಜ್ಯಪ್ರಥಾಚಿಹ್ನಛತ್ರಚಾಮರಶೋಭಿತಃ ।**
**ಆರೂಢವಾರಣಃ ಪ್ರಾಪ ವಿಶುಕ್ರೋ ಯುದ್ಧಮೇದಿನೀಂ ॥ ೧೦ ॥**
**ತತಃ ಕಿಲಕಿಲಾರಾವಕಾರಿಣ್ಯಾ ಸೇನಯಾ ವೃತಃ ।**
**ವಿಶುಕ್ರಃ ಪಟು ದಧ್ಮಾನ ಸಿಂಹನಾದಂ ಭಯಂಕರಂ ॥ ೧೧ ॥**
**ತದ್ಘೋಷಾತ್ಕ್ಷುಭಿತಸ್ವಾಂತಾಃ ಶಕ್ತಯಃ ಸಂಭ್ರಮೋದ್ಯತಾಃ ।**
**ಅಗ್ನಿಪ್ರಾಕಾರವಲಯಾನ್ನಿರ್ಜಗ್ಮುರ್ಬದ್ಧಪಂಕ್ತಯಃ ॥ ೧೨ ॥**
**ತಟಿನ್ಮಯಮಿವಾಕಾಶಂ ಕುರ್ವಂತ್ಯಃ ಶಸ್ತ್ರರೋಚಿಷಾ । [೧೩ ॥**
**ರಕ್ತಾಂಬುದಾವೃತಮಿವ ವ್ಯೋಮ ಕ್ರೋಧಾರುಣೈರ್ಮುಖೈಃ ॥**
**ಅಥ ಭಂಡಕನೀಯಾಂಸಾವಾಗತೌ ಯುದ್ಧದುರ್ಮದೌ ।**
**ನಿಶಮ್ಯ ಯುಗಪದ್ಯೋದ್ಧುಂ ಮಂತ್ರಿಣೀದಂಡನಾಯಿಕೇ ॥ ೧೪ ॥**
**ಕಿರಿಚಕ್ರಂ ಗೇಯಚಕ್ರಮಾರೂಢೇ ರಥಶೇಖರೇ ।**
**ಧೃತಾತಪತ್ರವಲಯೇ ಚಾಮರಾಭ್ಯಾಂ ಚ ವೀಜಿತೇ ॥ ೧೫ ॥**

---

೧೦. ತರುವಾಯ ಯುವರಾಜನ ಠೀವಿಗೆ ತಕ್ಕಂತೆ ಛತ್ರ ಚಾಮರಗಳೇ ಮೊದಲಾದ ರಾಜ ಚಿಹ್ನೆಗಳೊಡಗೂಡಿ ಆ ವಿಶುಕ್ರನು ರಣಭೂಮಿಗೈತಂದನು.

೧೧. ಆಗ ಅವನು ಕಿಲಕಿಲಧ್ವನಿಯನ್ನು ಮಾಡುತ್ತಿರುವ ತನ್ನ ಸೇನೆಯೊಡನೆ ತಾನೂ ಮಹಾ ಭಯಂಕರವಾದ ಸಿಂಹನಾದವನ್ನು ಮಾಡಿದನು.

೧೨. ಆ ಧ್ವನಿಯನ್ನು ಕೇಳುತ್ತಲೇ ಶಕ್ತಿದೇವತೆಗಳೆಲ್ಲರೂ ಕ್ಷೋಭೆಗೊಂಡ ಹೃದಯಗಳುಳ್ಳವರಾಗಿ ಕೂಡಲೇ ಸಂಭ್ರಮಗೊಂಡು ರಣೋದ್ಯತರಾಗಿ ವಹ್ನಿಪ್ರಕಾರವಲಯದಿಂದ ಸಾಲುಸಾಲುಗಳಾಗಿ ಹೊರಟುಬಂದರು.

೧೩. ಅವರೆಲ್ಲರೂ ತಮ್ಮ ಶಸ್ತ್ರಗಳ ಕಾಂತಿಯಿಂದ ಗಗನಾಂಗಣವನ್ನು ಮಿಂಚುಗಳೊಡಗೂಡಿದಂತೆಯೂ, ಕೋಪದಿಂದ ಕೆಂಪಾದ ತಮ್ಮ ಮುಖಕಾಂತಿಗಳಿಂದ ಕೆಮ್ಮುಗಿಲುಗಳಿಂದ ತುಂಬಿದಂತೆಯೂ ಮಾಡಿದರು.

೧೪-೧೬. ಆ ಸಮಯದಲ್ಲಿಯೇ ಮಂತ್ರಿಣೀ ದಂಡನಾಥೆಯರೀರ್ವರೂ, ಭಂಡಾಸುರನ ತಮ್ಮಂದಿರಾದ ವಿಶುಕ್ರ ವಿಷಂಗರೀರ್ವರೂ ರಣರಂಗಕ್ಕೈತಂದಿರುವ ಸಂಗತಿಯನ್ನು ಕೇಳಿ, ರಣದುರ್ಮದರಾದ ಅವರೀರ್ವರೊಡನೆಯೂ ಏಕಕಾಲದಲ್ಲಿಯೇ ಯುದ್ಧಮಾಡಬಯಸಿ,

ಅಪ್ಸರೋಭಿಃ ಪ್ರನೃತ್ತಾಭಿರ್ಗೀಯಮಾನಮಹೋದಯೇ ।
ನಿರ್ಜಗ್ಮತೂ ರಣಂ ಕರ್ತುಂ ಸಹಾಭ್ಯಾಂ ಲಲಿತಾಜ್ಞಯಾ ॥ ೧೬ ॥
ಶ್ರೀಚಕ್ರರಥರಾಜಸ್ಯ ರಕ್ಷಣಾರ್ಥಂ ನಿವೇಶಿತಾಂ ।
ಶತಾಕ್ಷೋಹಿಣಿಕಾಸೇನಾಂ ವರ್ಜಯಿತ್ವಾಸ್ತ್ರಭೀಷಣಾಂ ।
ಅನ್ಯತ್ಸರ್ವಂ ಚಮೂಜಾಲಂ ನಿರ್ಜಗಾಮ ರಣೋನ್ಮುಖಂ ॥ ೧೭ ॥
ಪುರತಃ ಪ್ರಾಚಲದ್ದಂಡನಾಥಾ ರಥನಿಷೇದುಷೀ ।
ಏಕಯೈವ ಕರಾಂಗುಲ್ಯಾ ಘೂರ್ಣಯಂತೀ ಹಲಾಯುಧಂ । [೧೮ ॥
ಮುಸಲಂ ಚಾನ್ಯಹಸ್ತೇನ ಭ್ರಾಮಯಂತೀ ಮುಹುರ್ಮುಹುಃ ॥
ತರುಣೇಂದುಕಲಾಚೂಡಾ ಸ್ಫುರತ್ಪೋತ್ರಿಮುಖಾಂಬುಜಾ ।
ಇತಸ್ತತಃ ಪ್ರಚಲಿತಾಂ ಸೇನಾಂ ತ್ರೈಲೋಕ್ಯಕಂಪಿನೀಂ ॥ ೧೯ ॥
ಪಶ್ಯಂತೀ ಮದಿರಾಪಾನವಾಸಿತಾಧರಪಲ್ಲವಾ ।
ಪುರಃ ಪ್ರಹರ್ತ್ರೀ ಸಮರೇ ಸರ್ವದಾ ವಿಕ್ರಮೋದ್ಧುರಾ ॥ ೨೦ ॥

---

ಕಿರಿಚಕ್ರ ಗೇಯಚಕ್ರ ಮಹಾರಥಗಳನ್ನೇರಿ ಕುಳಿತು ಬೆಳುಗೊಡೆಗಳಿಂದಲಂಕೃತೆಯರೂ, ಚಾಮರವೀಜಿತೆಯರೂ ಆಗಿ, ಅಪ್ಸರೆಯರೆಲ್ಲರೂ ತಮ್ಮ ಪರಾಕ್ರಮಗಳನ್ನು ಹಾಡಿ ನರ್ತಿಸಿ ಹೊಗಳುತ್ತಿರಲು, ಶ್ರೀ ಲಲಿತಾ ಪರಮೇಶ್ವರಿಯ ಅಪ್ಪಣೆಯನ್ನು ಪಡೆದು ಹೊರಟುಬಂದರು.

೧೭. ಶ್ರೀಚಕ್ರರಾಜರಥದ ರಕ್ಷಣೆಗಾಗಿ ನಿಯುಕ್ತವಾಗಿದ್ದ ಶಸ್ತ್ರ ಭೀಷಣವಾದ ಶಕ್ತಿದೇವಿಯರ ನೂರು ಅಕ್ಷೋಹಿಣೀ ಸೇನೆಗಳನ್ನು ಬಿಟ್ಟು ಉಳಿದೆಲ್ಲ ಸೇನೆಯೂ ಆ ಮಂತ್ರಿಣೀದಂಡನಾಥೆಯರನ್ನು ಹಿಂಬಾಲಿಸಿ ಹೊರಟಿತು.

೧೮. ಶ್ರೀ ದಂಡನಾಥಾದೇವಿಯು ರಥಾರೂಢೆಯಾಗಿ ತನ್ನ ಕೈ ಬೆರಳೊಂದರಿಂದಲೇ ಹಲಾಯುಧವನ್ನು ತಿರುಗಿಸುತ್ತ ಸೈನ್ಯದ ಮುಂಗಡೆ ಹೊರಟಳು. ಆಕೆಯು ತನ್ನ ಇನ್ನೊಂದು ಕೈಯಿಂದ ಮುಸಲಾಯುಧ ವನ್ನಡಿಗಡಿಗೂ ತಿರುಗಿಸುತ್ತಿದ್ದಳು.

೧೯-೨೦. ಬಾಲಚಂದ್ರಕಲೆಯನ್ನೊಳಗೊಂಡ ಶಿರಸ್ಸಿನ ಕಾಂತಿಯಿಂದ ವಿರಾಜಿಸುತ್ತ, ವರಾಹಮುಖಕಮಲವುಳ್ಳವಳೂ, ಮಧುಪಾನದಿಂದ ಸುವಾಸಿತವಾದ ಅಧರಪಲ್ಲವವುಳ್ಳವಳೂ ಆದ ಆ ದಂಡನಾಥಾ ದೇವಿಯು ಅತ್ತಿತ್ತ ಚಲಿಸುತ್ತ ಮೂರು ಲೋಕಗಳನ್ನೂ ನಡುಗಿಸುವಂತಹ ತನ್ನ ಸೇನೆಯನ್ನು ಕಣ್ಣಿಟ್ಟು ನೋಡುತ್ತ, ಪರಾಕ್ರಮದಿಂದ

**ತಸ್ಯಾ ಅನುಪ್ರಚಲಿತಾ ಗೇಯಚಕ್ರರಥಸ್ಥಿತಾ ।**
**ಧನುಷೋ ಧ್ವನಿನಾ ವಿಶ್ವಂ ಪೂರಯಂತೀ ಮದೋದ್ಧತಾ ॥ ೨೧ ॥**
**ವೇಣೀಕೃತಕಚನ್ಯಸ್ತವಿಲಸಚ್ಚಂದ್ರಪಲ್ಲವಾ ।**
**ಸ್ಫುರತ್ತೃತೀಯನೇತ್ರೇಣ ಸಿಂದೂರತಿಲಕತ್ವಿಷಾ ॥ ೨೨ ॥**
**ಪಾಣಿನಾ ಪದ್ಮರಮ್ಯೇಣ ಮಣಿಕಂಕಣಚಾರುಣಾ ।**
**ತೂಣೀರಮುಖತಃ ಕೃಷ್ಟಂ ಭ್ರಾಮಯಂತೀ ಶಿಲೀಮುಖಂ ॥ ೨೩ ॥**
**ಜಯ ವರ್ಧಸ್ವ ವರ್ಧಸ್ವೇತ್ಯತಿಹರ್ಷಸಮಾಕುಲೈಃ ।**
**ನೃತ್ಯದ್ಭಿರ್ದಿವ್ಯಮುನಿಭಿರ್ವರ್ಧಿತಾಶೀರ್ವಚೋಽಮೃತೈಃ ॥ ೨೪ ॥**
**ಗೇಯಚಕ್ರರಥೇಂದ್ರಸ್ಯ ಚಕ್ರನೇಮಿವಿಘಟ್ಟನೈಃ ।**
**ದಾರಯಂತೀ ಕ್ಷಿತಿತಲಂ ದೈತ್ಯಾನಾಂ ಹೃದಯೈಃ ಸಹ ॥ ೨೫ ॥**

---

ಮುನ್ನುಗ್ಗಿ ರಣಾಂಗಣದಲ್ಲಿ ಶತ್ರುವನ್ನು ಮೊದಲೇ ಪ್ರಹರಿಸುವವಳಾಗಿ ಹೊರಟಳು.

೨೧. ತರುವಾಯ ಶ್ರೀಮಂತ್ರಿಣೀದೇವಿಯು ಗೇಯಚಕ್ರರಥವನ್ನೇರಿ ಕುಳಿತು ಮದೋದ್ಧತೆಯಾಗಿ, ತನ್ನ ಬಿಲ್ಲಿನ ಟಂಕಾರಧ್ವನಿಯಿಂದ ಬ್ರಹ್ಮಾಂಡವನ್ನೇ ತುಂಬುತ್ತ ಆ ದಂಡನಾಥಾದೇವಿಯನ್ನನುಸರಿಸಿ ಹೊರಟಳು.

೨೨-೨೩. ಜಡೆಹೆಣೆದ ಕೇಶಗುಚ್ಛದಲ್ಲಿ ಪ್ರಕಾಶಮಾನವಾದ ಚಂದ್ರಕಲೆಯುಳ್ಳವಳಾಗಿ, ಫಳಫಳನೆ ಹೊಳೆಯುತ್ತಿರುವ ಮೂರನೆಯ ಕಣ್ಣಿನಿಂದಲೂ, ಹಣೆಗಿಟ್ಟ ಸಿಂದೂರತಿಲಕದ ಕಾಂತಿಯಿಂದಲೂ ಕಂಗೊಳಿಸುತ್ತ, ಕಮಲಮನೋಹರವಾಗಿ ರತ್ನಕಂಕಣದಿಂದಲಂಕೃತವಾದ ಸುಂದರ ಕರದಿಂದ ಬತ್ತಳಿಕೆಯಲ್ಲಿದ್ದ ಬಾಣವೊಂದನ್ನು ಸೆಳೆದು ಅದನ್ನು ತಿರುಗಿಸುತ್ತ ಆ ಮಂತ್ರಿಣೀದೇವಿಯು ಬಹುವಾಗಿ ಪರಾಕ್ರಮವನ್ನು ಮೆರೆಯುತ್ತಿದ್ದಳು.

೨೪-೨೫. ಆ ಸಮಯದಲ್ಲಿಯೇ ದೇವಮುನಿಗಳೆಲ್ಲರೂ "ದೇವಿ, ಜಯ, ಜಯ ! ವರ್ಧಿಸು, ವರ್ಧಿಸು !" ಎಂದು ಸಂತೋಷ ಸಂಭ್ರಮಗಳಿಂದ ಅಮೃತೋಪಮವಾದ ಆಶೀರ್ವಚನಗಳನ್ನು ನುಡಿದು ನರ್ತಿಸುತ್ತಿರಲು, ಆ ದೇವಿಯು ಗೇಯಚಕ್ರರಥದ ಚಕ್ರನೇಮಿಘಟ್ಟನದಿಂದ ದೈತ್ಯರ ಹೃದಯಗಳೊಡನೆ ಭೂಮಂಡಲವನ್ನೇ ಸೀಳುತ್ತಲೂ,

**ಲೋಕಾತಿಶಾಯಿನಾ ವಿಶ್ವಮನೋಮೋಹನಕಾರಿಣಾ ।**
**ಗೀತಿಬಂಧೇನ ನಾರೀಭಿರ್ಬಹ್ವೀಭಿರ್ಗೀತವೈಭವಾ ॥ ೨೬ ॥**
**ಅಕ್ಷೋಹಿಣೀಸಹಸ್ರಾಣಾಮಷ್ಟಕಂ ಸಮರೋದ್ಧತಂ ।**
**ಕರ್ಷಂತೀ ಕಲ್ಪವಿಶ್ಲೇಷನಿರ್ಮರ್ಯಾದಾಬ್ಧಿಸನ್ನಿಭಂ ॥ ೨೭ ॥**
**ತಸ್ಯಾಃ ಶಕ್ತಿಚಮೂಚಕ್ರೇ ಕಾಶ್ಚಿತ್ಕನಕರೋಚಿಷಃ ।**
**ಕಾಶ್ಚಿದ್ದಾಡಿಮಸಂಕಾಶಾಃ ಕಾಶ್ಚಿಜ್ಜೀಮೂತರೋಚಿಷಃ ॥ ೨೮ ॥**
**ಅನ್ಯಾಃ ಸಿಂದೂರರುಚಯಃ ಪರಾಃ ಪಾಟಲಪಾಟಲಾಃ ।**
**ಕಾಶ್ಚಿಚ್ಚ ಚಂದ್ರಿಕಾಕಾರಾಃ ಪರಾಃ ಶ್ಯಾಮಲಕೋಮಲಾಃ ॥ ೨೯ ॥**
**ಅನ್ಯಾಸ್ತು ಹೀರಕಪ್ರಖ್ಯಾಃ ಪರಾ ಗಾರುತ್ಮತೋಪಮಾಃ ।**
**ವಿಶುದ್ಧೈಃ ಪಂಚಭಿರ್ವರ್ಣೈರ್ವಿಶ್ರಿತೈಃ ಶತಕೋಟಿಭಿಃ ॥**
**ವ್ಯಂಜಯಂತ್ಯೋ ದೇಹರುಚಿಂ ಕತಿಚಿದ್ವಿವಿಧಾಯುಧಾಃ ॥ ೩೦ ॥**

---

ಲೋಕಾತೀತವಾಗಿಯೂ, ವಿಶ್ವಮನೋಹರವಾಗಿಯೂ ಇರುವ ಗೀತ ಪ್ರಬಂಧಗಳಿಂದ ಅನೇಕಮಂದಿ ದಿವ್ಯನಾರಿಯರೆಲ್ಲರೂ ತನ್ನ ವೈಭವವನ್ನು ಹಾಡಿ ಹೊಗಳುತ್ತಿರಲು, ರಣಭಯಂಕರವೂ, ಪ್ರಳಯಕಾಲದಲ್ಲಿ ಉಲ್ಲೋಲಕಲ್ಲೋಲವಾದ ಸಾಗರಕ್ಕೆ ಸಮಾನವೂ ಆದ ಎಂಟು ಸಾವಿರ ಅಕ್ಷೋಹಿಣೀ ಸೇನೆಯನ್ನು ನಡೆಸುತ್ತ ಹೊರಟಳು.

೨೮. ಆ ದೇವಿಯ ಶಕ್ತಿಸೇನಾಸಮೂಹದಲ್ಲಿ ಕೆಲವರು ಕನಕ ಕಾಂತಿಯುಳ್ಳವರು; ಕೆಲವರು ದಾಳಿಂಬರೆಯ ಹೂವಿನ ಕಾಂತಿಯುಳ್ಳವರು; ಕೆಲವರು ಮುಗಿಲಕಾಂತಿಯನ್ನೊಳಗೊಂಡವರು.

೨೯. ಇನ್ನು ಕೆಲವರು ಸಿಂದೂರಕಾಂತಿಯುಳ್ಳವರು; ಮತ್ತೆ ಕೆಲವರು ಪಾಟಲಕುಸುಮದ ಪಾಟಲ (ಕೆಂಪು) ಕಾಂತಿಯುಳ್ಳವರು; ಕೆಲವರು ಬೆಳುದಿಂಗಳಿನಂತೆ ಹೊಳೆಯುವವರು; ಕೆಲವರು ಶ್ಯಾಮಲ ವರ್ಣದ ಕೋಮಲೆಯರು.

೩೦. ಇತರ ಕೆಲದೇವಿಯರು ಪಚ್ಚೆಯಮಣಿಗೆ ಸಮಾನ ಕಾಂತಿ ಯುಳ್ಳವರು; ಇನ್ನು ಕೆಲವರು ಗರುಡಮಣಿಯ ಕಾಂತಿಯುಳ್ಳವರು; ಉಳಿದ ಹತ್ತು ಕೋಟಿ ಶಕ್ತಿದೇವಿಯರೂ ಶುಭ್ರವಾದ ಐದು ರಂಗುಗಳು ಕಲೆತ ಕೋಟ್ಯಂತರ ವರ್ಣಗಳಿಂದ ವಿರಾಜಿಸುತ್ತಿದ್ದವರು; ಇವರೆಲ್ಲರೂ ತಮ್ಮ ದೇಹಕಾಂತಿಯಿಂದ ಬೆಳಗುತ್ತ ಬಗೆ ಬಗೆಯ ಆಯುಧಗಳುಳ್ಳವ ರಾಗಿ ಕಂಗೊಳಿಸುತ್ತಿದ್ದರು.

**ಅಸಂಖ್ಯಾಃ ಶಕ್ತಯಶ್ಚೇಲುರ್ದಂಡಿನ್ಯಾಃ ಸೈನಿಕೇ ತಥಾ ।**
**ಯಥೈವ ಸೈನ್ಯಸಂನಾಹೋ ಮಂತ್ರಿಣ್ಯಾಃ ಕುಂಭಸಂಭವ ॥ ೩೧ ॥**
**ಯಥಾ ಭೂಷಣವೇಷಾದಿ ಯಥಾ ಪ್ರಾಭವಲಕ್ಷಣಂ ।**
**ಯಥಾ ಭುಜಸ್ಯ ವಿಕ್ರಾಂತಿರ್ಯಥೈವಾಶ್ರಿತರಕ್ಷಣಂ ॥ ೩೨ ॥**
**ಯಥಾ ದೈತ್ಯೌಘಸಂಹಾರೋ ಯಥಾ ಸರ್ವೈಶ್ಚ ಪೂಜ್ಯತಾ ।**
**ಯಥಾ ಭಕ್ತಿರ್ಮಹಾರಾಜ್ಞ್ಯಾಂ ದಂಡಿನ್ಯಾಶ್ಚ ತಥಾಖಿಲಂ ॥ ೩೩ ॥**
**ವಿಶೇಷಸ್ತು ಪರಂ ತಸ್ಯಾಃ ಸಚಿವೇಶ್ಯಾಃ ಪರಂ ಕರೇ ।**
**ಮಹಾರಾಜ್ಞೀವಿತೀರ್ಣಂ ತದಾಜ್ಞಾಮುದ್ರಾಂಗುಲೀಯಕಂ ॥೩೪॥**
**ಇತ್ಥಂ ಪ್ರಚಲಿತೇ ಸೈನ್ಯೇ ಮಂತ್ರಿಣೀದಂಡನಾಥಯೋಃ ।**
**ತದ್ಭಾರಭಂಗುರಾ ಭೂಮಿರ್ಡೋಲಾಲೀಲಾಮಲಂಬತ ॥ ೩೫ ॥**
**ತತಃ ಪ್ರವವೃಥೇ ಯುದ್ಧಂ ತುಮುಲಂ ಲೋಮಹರ್ಷಣಂ ।**
**ಉದ್ಧೂತಧೂಲಿಜಂಬಾಲೀಕೃತಸಪ್ತಾರ್ಣವೀಜಲಂ ॥ ೩೬ ॥**

---

೩೧-೩೩. ಅಂತೆಯೇ ಶ್ರೀದಂಡನಾಥಾದೇವಿಯ ಸೈನ್ಯದಲ್ಲಿಯೂ ಲೆಕ್ಕವಿಲ್ಲದಷ್ಟುಮಂದಿ ಶಕ್ತಿದೇವಿಯರು ಆಕೆಯನ್ನು ಹಿಂಬಾಲಿಸಿ ಹೊರಟರು. ಅಯ್ಯಾ ಕುಂಭಸಂಭವನೇ! ಮಂತ್ರಿಣೀದೇವಿಯ ಸೈನ್ಯ ಸಿದ್ಧತೆಯೆಂತೋ ಅಂತೆಯೇ ಶ್ರೀ ದಂಡನಾಥಾದೇವಿಯ ಸೈನ್ಯವೂ ಸೊಗುಸುತ್ತಿದ್ದಿತು. ಆಕೆಯ ಸೇನೆಯಲ್ಲಿ ಭೂಷಣಗಳೂ ವೇಷಗಳೂ ಹೇಗಿದ್ದವೋ, ಯಾವ ಪ್ರಭಾವದ ಲಕ್ಷಣವಿದ್ದಿತೋ, ಯಾವ ಭುಜ ಪರಾಕ್ರಮವಿದ್ದಿತೋ, ಆಶ್ರಿತಸಂರಕ್ಷಣವೂ ದೈತ್ಯಸಮೂಹಗಳ ಸಂಹಾರವೂ ಹೇಗೆಯೋ, ಎಲ್ಲರಿಂದಲೂ ಪೂಜ್ಯತ್ವವೆಂತೋ, ಮಹಾರಾಜ್ಞಿ ಯಾದ ಶ್ರೀ ಲಲಿತಾದೇವಿಯಲ್ಲಿ ಯಾವ ವಿಧವಾದ ಭಕ್ತಿಯಿದ್ದಿತೋ ಅದೆಲ್ಲವೂ ಕೂಡ ಶ್ರೀದಂಡನಾಥೆಯ ಸೇನೆಯಲ್ಲಿಯೂ ಇದ್ದಿತು.

೩೪. ಆದರೆ ಒಂದು ವಿಶೇಷವುಂಟು. ಸಚಿವೇಶ್ವರಿಯಾದ ಆ ಮಂತ್ರಿಣೀದೇವಿಯ ಕೈಯಲ್ಲಿ ಮಹಾರಾಜ್ಞಿಯು ತಾನೇ ಸಾಕ್ಷಾತ್ತಾಗಿ ಅನುಗ್ರಹಿಸಿದ್ದ ಆಕೆಯ ಆಜ್ಞಾಮುದ್ರೆಯ ಉಂಗುರವು ಮಾತ್ರವಿದ್ದಿತು.

೩೫. ಈ ಪ್ರಕಾರ ಮಂತ್ರಿಣೀದಂಡನಾಥೆಯರೀರ್ವರ ಸೇನೆಗಳೂ ರಣರಂಗಕ್ಕೆ ಪ್ರಯಾಣ ಹೊರಡಲು, ಅವುಗಳ ಭಾರದಿಂದ ಬಗ್ಗಿ ಭೂಮಿಯು ತೊಟ್ಟಿಲು ತೂಗಿದಂತೆ ತೂಗಿತು.

೩೬. ತರುವಾಯ ಶಕ್ತಿದಾನವಸೇನೆಗಳಿಗೆ ರೋಮಾಂಚಕರವಾದ

**ಹಯಸ್ಥೈರ್ಹಯಸಾದಿನ್ಯೋ ರಥಸ್ಥಾ ರಥಸಂಸ್ಥಿತೈಃ ।**
**ಆಧೋರಣೈರ್ಹಸ್ತಿಪಕಾಃ ಪದ್ಗೈಃ ಪದ್ಗಾಶ್ಚ ಸಂಗತಾಃ ॥ ೩೭ ॥**
**ದಂಡನಾಥಾ ವಿಷಂಗೇಣ ಸಮಯುಧ್ಯತ ಸಂಗರೇ ।**
**ವಿಶುಕ್ರೇಣ ಸಮಂ ಶ್ಯಾಮಾ ವಿಕೃಷ್ಟಮಣಿಕಾರ್ಮುಕಾ ॥ ೩೮ ॥**
**ಅಶ್ವಾರೂಢಾ ಚಕಾರೋಚ್ಚೈಃ ಸಹೋಲೂಕಜಿತಾ ರಣಂ ।**
**ಸಂಪದೀಶೀ ಚ ಜಗ್ರಾಹ ಪುರುಷೇಣಂ ಯುಯುತ್ಸಯಾ ॥ ೩೯ ॥**
**ವಿಷೇಣಂ ನಕುಲೀದೇವೀ ಸಮಾಹ್ವಾಸ್ತ ಯುಯುತ್ಸಯಾ ।**
**ಕುಂತಿಷೇಣೇನ ಸಮರಂ ಮಹಾಮಾಯಾ ತದಾಽಕರೋತ್ ॥ ೪೦ ॥**
**ಕುರೂಷಕೇಣ ದೈತ್ಯೇನ ಕಾಚಿದ್ದೇವೀ ಸಮಾಗತಾ ।**
**ಮಲದೇನ ಸಮಂ ಚಕ್ರೇ ಯುದ್ಧಮುನ್ಮತ್ತಭೈರವೀ ॥ ೪೧ ॥**

---

ತುಮುಲಯುದ್ಧವು ಮೊದಲಾಯಿತು. ಆ ಸಮಯದಲ್ಲಿ ಮೇಲಕ್ಕೆದ್ದ ಧೂಳಿನಿಂದ ಸಪ್ತಸಾಗರಗಳ ಜಲವೂ ಕೆಸರಾಗಿಹೋಯಿತು.

೩೭. ಅಶ್ವಾರೋಹಕರೊಡನೆ ಅಶ್ವಾರೋಹಿಣಿಯರೂ, ರಥಾರೂಢರೊಡನೆ ರಥಾರೂಢೆಯರೂ, ಗಜಾರೂಢರೊಡನೆ ಗಜಾರೂಢೆಯರೂ, ಪದಾತಿಗಳೊಡನೆ ಪದಾತಿನಿಯರೂ ಕಾಳೆಗಕ್ಕೆ ತೊಡಗಿದರು.

೩೮. ಆ ಸಮರದಲ್ಲಿ ಶ್ರೀದಂಡನಾಥಾದೇವಿಯು ವಿಷಂಗ ದಾನವನೊಡನೆಯೂ, ಮಂತ್ರಿಣಿಯಾದ ಶ್ಯಾಮಲಾದೇವಿಯು ಸೆಳೆದ ಮಣಿಕಾರ್ಮುಕವುಳ್ಳವಳಾಗಿ ವಿಶುಕ್ರನೊಡನೆಯೂ ಯುದ್ಧಮಾಡಿದರು.

೩೯. ಉಲೂಕಜಿತುವನ್ನೆದುರಿಸಿ ನಿಂತು ಅಶ್ವಾರೂಢಾದೇವಿಯು ಕಾಳೆಗ ಮಾಡಿದಳು. ಸಂಪದೀಶ್ವರಿಯು ಪುರುಷೇಣನೊಡನೆ ಕಾಳೆಗ ಮಾಡಲಪೇಕ್ಷಿಸಿ ಅವನನ್ನು ಹಿಡಿದಳು.

೪೦. ನಕುಲೀಶ್ವರಿಯು ರಣಕುತೂಹಲದಿಂದ ವಿಷೇಣದಾನವನನ್ನು ಯುದ್ಧಕ್ಕೆ ಕರೆದಳು. ಆ ಸಮಯದಲ್ಲಿಯೇ ಮಹಾಮಾಯೆಯು ಕುಂತಿಷೇಣನೊಡನೆ ಯುದ್ಧವನ್ನೆಸಗಿದಳು.

೪೧. ಒಬ್ಬಾನೊಬ್ಬ ಶಕ್ತಿದೇವಿಯು ಕುರೂಷಕದಾನವನೊಡನೆ ಕಾಳೆಗಕ್ಕಿಳಿದಳು. ಉನ್ಮತ್ತ ಭೈರವಿಯು ಮಲದನೆಂಬ ದೈತ್ಯನೊಡನೆ ಕಾದಿದಳು.

**ಲಘುಶ್ಯಾಮಾ ಚಕಾರೋಚ್ಚೈಃ ಕರೂಶೇನ ಸಮಂ ರಣಂ ।**
**ಸ್ವಪ್ನೇಶೀ ಮಂಗಲಾಖ್ಯೇನ ದೈತ್ಯೇಂದ್ರೇಣ ರಣಂ ವ್ಯಧಾತ್॥ ೪೨ ॥**
**ವಾಗ್ವಾದಿನೀ ತು ಜಘಟೇ ದ್ರುಘಣೇನ ಸಮಂ ರಣೇ ।**
**ಕೊಲ್ಲಾಟೇನ ಚ ರುಷ್ಟೇನ ಚಂಡಕಾಲ್ಯಕರೋದ್ರಣಂ ॥ ೪೩ ॥**
**ಅಕ್ಷೋಹಿಣೀಭಿರ್ದೈತ್ಯಾನಾಂ ಶಕ್ತ್ಯಕ್ಷೋಹಿಣಿಕಾಸ್ತಥಾ । [ ೪೪ ॥**
**ಮಹಾಂತಂ ಸಮರಂ ಚಕ್ರುರನ್ಯೋನ್ಯಂ ಕ್ರೋಧಮೂರ್ಚ್ಛಿತಾಃ ॥**
**ಪ್ರವರ್ತಮಾನೇ ಸಮರೇ ವಿಶುಕ್ರೋ ದುಷ್ಟದಾನವಃ । [ ೪೫ ॥**
**ವರ್ಧಮಾನಾಂ ಶಕ್ತಿಚಮೂಂ ಹೀಯಮಾನಾಂ ನಿಜಾಂ ಚಮೂಂ॥**
**ಅವಲೋಕ್ಯ ರುಷಾವಿಷ್ಟಃ ಸಂಕೃಷ್ಟಗುರುಕಾರ್ಮುಕಃ ।**
**ಶಕ್ತಿಸೈನ್ಯೇ ಸಮಸ್ತೇಽಪಿ ತರ್ಷಾಸ್ತ್ರಂ ಪ್ರಮುಮೋಚ ಹ॥**
**ತೇನ ದಾವಾನಲಜ್ವಾಲಾದೀಪ್ತೇನ ಕ್ವಥಿತಂ ಬಲಂ ॥ ೪೬ ॥**
**ತೃತೀಯಯುದ್ಧದಿವಸೇ ಯಾಮಮಾತ್ರಂ ಗತೇ ರವೌ ।**
**ವಿಶುಕ್ರಮುಕ್ತತರ್ಷಾಸ್ತ್ರವ್ಯಾಕುಲಾಃ ಶಕ್ತಯೋಽಭವನ್ ॥ ೪೭ ॥**

---

೪೨. ಲಘುಶ್ಯಾಮಾದೇವಿಯು ಕರೂಶನೊಡನೆ ಮಹತ್ತರವಾದ ಯುದ್ಧವನ್ನು ಮಾಡಿದಳು. ಸ್ವಪ್ನೇಶ್ವರಿಯು ಮಂಗಲನೆಂಬ ದಾನವನೊಡನೆ ಯುದ್ಧವೆಸಗಿದಳು.

೪೩. ವಾಗ್ವಾದಿನೀದೇವಿಯು ದ್ರುಘಣನೊಡನೆ ಯುದ್ಧಕ್ಕೆನಿಂತಳು. ಚಂಡಕಾಳಿಯು ಮಹಾಕೋಪದಿಂದೈತಂದ ಕೊಲ್ಲಾಟನೊಡನೆ ಕಾದಿದಳು.

೪೪. ಹೀಗೆ ಶಕ್ತಿದೇವಿಯರ ಅಕ್ಷೋಹಿಣೀಸೇನೆಯೆಲ್ಲವೂ ದೈತ್ಯರ ಅಕ್ಷೋಹಿಣೀಸೇನೆಯನ್ನೆದುರಿಸಿ ಪರಸ್ಪರ ಕ್ರೋಧಮೂರ್ಚ್ಛಿತರಾಗಿ ಮಹತ್ತರ ಯುದ್ಧವನ್ನು ಮಾಡತೊಡಗಿದರು.

೪೫-೪೬. ಹೀಗೆ ಶಕ್ತಿಸೇನೆಗೂ ದಾನವಸೇನೆಗೂ ಪರಸ್ಪರವಾಗಿ ಯುದ್ಧವು ನಡೆಯುತ್ತಿರಲು ದುಷ್ಟನಾದ ವಿಶುಕ್ರದಾನವನು ಶಕ್ತಿಸೇನೆಗಳು ವಿಜೃಂಭಿಸುತ್ತಿರುವುದನ್ನೂ, ತನ್ನ ಸೇನೆಗಳು ಬಲಗುಂದುತ್ತಿರುವುದನ್ನೂ ಕಂಡು ಮಹತ್ತರವಾದ ತನ್ನ ಬಿಲ್ಲನ್ನು ಸೆಳೆದು ಶಕ್ತಿಸೇನೆಯಲ್ಲೆಲ್ಲ ತರ್ಷಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಪ್ರಜ್ವಲಿಸುತ್ತಿರುವ ಜ್ವಾಲೆಗಳು ಹುಟ್ಟಿ ಶಕ್ತಿಸೇನೆಯನ್ನೆಲ್ಲ ದಹಿಸತೊಡಗಿದವು.

೪೭. ಎಲೈ ಅಗಸ್ತ್ಯನೇ! ಲಲಿತಾಭಂಡಾಸುರ ಯುದ್ಧದ ಆ

ಕ್ಷೋಭಯನ್ನಿಂದ್ರಿಯಗ್ರಾಮಂ ತಾಲುಮೂಲಂ ವಿಶೋಷಯನ್ ।
ರೂಕ್ಷಯನ್ಕರ್ಣಕುಹರಮಂಗೇ ದೌರ್ಬಲ್ಯಮಾವಹನ್ ॥ ೪೮ ॥
ಪಾತಯನ್ ಪೃಥಿವೀಪೃಷ್ಠೇ ದೇಹಂ ವಿಸ್ರಂಸಿತಾಯುಧಂ ।
ಆವಿರ್ಬಭೂವ ಶಕ್ತೀನಾಮತಿತೀವ್ರಸ್ತೃಷಾಜ್ವರಃ ॥ ೪೯ ॥
ಯುದ್ಧೇಷ್ವನುದ್ಯಮಕೃತಾ ಸರ್ವೋತ್ಸಾಹವಿರೋಧಿನಾ ।
ತರ್ಷೇಣ ತೇನ ಕ್ವಥಿತಂ ಶಕ್ತಿಸೈನ್ಯಂ ವಿಲೋಕ್ಯ ಸಾ ॥
ಮಂತ್ರಿಣೀ ಸಹ ಪೋತ್ರಿಣ್ಯಾ ಭೃಶಂ ಚಿಂತಾಮವಾಪ ಸಾ ॥ ೫೦ ॥
ಉವಾಚ ತಾಂ ದಂಡನಾಥಾಮತ್ಯಾಹಿತವಿಶಂಕಿನೀ ।
ರಥಸ್ಥಿತಾಂ ರಥಗತಾ ತತ್ಪ್ರತೀಕಾರಕರ್ಮಣೇ ॥ ೫೧ ॥
ಸಖಿ ಪೋತ್ರಿಣಿ ದುಷ್ಟಸ್ಯ ತರ್ಷಾಸ್ತ್ರಮಿದಮಾಗತಂ ।
ಶಿಥಿಲೀಕುರುತೇ ಸೈನ್ಯಮಸ್ಮಾಕಂ ಹಾ ವಿಧೇಃ ಕ್ರಮಃ ॥ ೫೨ ॥

---

ಮೂರನೆಯ ದಿನದ ಹಗಲಿನಲ್ಲಿ ಒಂದು ಯಾಮವು ಮಾತ್ರ ಕಳೆಯಲು, ಆ ವಿಶುಕ್ರದಾನವನು ಪ್ರಯೋಗಿಸಿದ ತರ್ಷಾಸ್ತ್ರದ ಬೇಗೆಯಿಂದ ಶಕ್ತಿ ದೇವತೆಗಳೆಲ್ಲರೂ ತಳಮಳಿಸಿಹೋದರು.

೪೮-೪೯. ಆ ಮಹಾಸ್ತ್ರದ ಪ್ರಭಾವದಿಂದ ಶಕ್ತಿದೇವಿಯರ ಇಂದ್ರಿಯಗಳೆಲ್ಲವೂ ಕದಡಿ, ಕಿವಿಗಳು ಕಿವುಡಾಗಿ, ಅವಯವಗಳಲ್ಲಿ ದೌರ್ಬಲ್ಯವುಂಟಾಗಿ, ಆಯುಧಗಳೂ ಜಾರಿಹೋಗಲು ಅವರೆಲ್ಲರೂ ನೆಲಕ್ಕೆ ಬಿದ್ದುಹೋದರು. ಕೂಡಲೇ ಅವರೆಲ್ಲರಿಗೂ ಅತಿತೀವ್ರವಾದ ತೃಷಾಜ್ವರವು ಕಾಣಿಸಿಕೊಂಡಿತು.

೫೦. ಕಾಳಗದಲ್ಲಿ ಯಾವ ಪ್ರಯತ್ನವನ್ನೂ ಮಾಡಗೊಳಿಸದಿರುವುದೂ, ಉತ್ಸಾಹವೆಲ್ಲವನ್ನೂ ಹಾಳುಮಾಡುವುದೂ ಆದ ಆ ತರ್ಷಾಸ್ತ್ರದಿಂದ ಶಕ್ತಿಸೇನೆಯೆಲ್ಲವೂ ಬೆಂದು ಬೇಗುದಿಗೊಳ್ಳುತ್ತಿರುವುದನ್ನು ಕಂಡು ಮಂತ್ರಿಣೀದೇವಿಯು ಬಹಳ ಚಿಂತೆಗೊಳಗಾದಳು.

೫೧. ಅಲ್ಲದೆ, ಆ ದೇವಿಯು ಚಿಂತಾಗ್ರಸ್ತಳಾಗಿ ಸೇನೆಗೆ ಅಮಂಗಳವುಂಟಾಗುವುದೆಂದು ಶಂಕಿಸಿ, ಆ ತರ್ಷಾಸ್ತ್ರಕ್ಕೆ ಪ್ರತೀಕಾರ ಮಾಡಲೋಸುಗ, ರಥಾರೂಢೆಯಾದ ದಂಡನಾಥಾದೇವಿಯನ್ನು ಕುರಿತು, ತಾನೂ ರಥದಲ್ಲಿದ್ದುಕೊಂಡೇ ಈ ರೀತಿ ಹೇಳಿದಳು :—

೫೨. "ಸಖಿ, ಪೋತ್ರಿಣೀದೇವಿ! ದುಷ್ಟನಾದ ವಿಶುಕ್ರದಾನವನ

**ವಿಶುಷ್ಕತಾಲುಮೂಲಾನಾಂ ವಿಭ್ರಷ್ಟಾಯುಧತೇಜಸಾಂ ।**
**ಶಕ್ತೀನಾಂ ಮಂಡಲೇನಾತ್ರ ಸಮರಂ ಸಮುಪೇಕ್ಷಿತಂ ॥ ೫೩ ॥**
**ನ ಕಾಪಿ ಕುರುತೇ ಯುದ್ಧಂ ನ ಧಾರಯತಿ ಚಾಯುಧಂ ।**
**ವಿಶುಷ್ಕತಾಲುಮೂಲತ್ವಾದ್ವಕ್ತುಮಪ್ಯಾಲಿ ನ ಕ್ಷಮಾ ॥ ೫೪ ॥**
**ಈದೃಶೀಂ ನೋ ಗತಿಂ ಶ್ರುತ್ವಾ ಕಿಂ ವಕ್ಷ್ಯತಿ ಮಹೇಶ್ವರೀ ।**
**ದುಷ್ಟೈರಪಕೃತೇ ದೈತ್ಯೈರುಪಾಯಃ ಪ್ರವಿಚಿಂತ್ಯತಾಂ ॥ ೫೫ ॥**
**ಸರ್ವತ್ರ ದ್ವ್ಯಷ್ಟಸಾಹಸ್ರಾಕ್ಷೋಹಿಣ್ಯಾಮತ್ರ ಪೋತ್ರಿಣಿ ।**
**ಏಕಾಪಿ ಶಕ್ತಿರ್ನೈವಾಸ್ತಿ ಯಾ ತರ್ಷೇಣ ನ ಪೀಡಿತಾ ॥ ೫೬ ॥**
**ಅತ್ರೈವಾವಸರೇ ದೃಷ್ಟ್ವಾ ಮುಕ್ತಶಸ್ತ್ರಾಂ ಪತಾಕಿನೀಂ ।**
**ರಂಧ್ರಪ್ರಹಾರಿಣೋ ಹಂತ ಬಾಣೈರ್ನಿಘ್ನಂತಿ ದಾನವಾಃ ॥ ೫೭ ॥**

---

ಈ ತರ್ಷಾಸ್ತ್ರವು ನಮ್ಮ ಸೇನೆಯನ್ನೆಲ್ಲ ಸಡಿಲಿಸುತ್ತಿರುವುದು. ಆಹಾ! ಕಷ್ಟ!! ಇದು ವಿಧಿನಿಯೋಗವೇ ಸರಿ.

೫೩. ಬತ್ತಿಹೋದ ಗಂಟಲುಗಳುಳ್ಳವರೂ, ಜಾರಿಹೋದ ಆಯುಧಗಳುಳ್ಳವರೂ ಆದ ಈ ಶಕ್ತಿಗಳ ಸೇನಾಸಮೂಹವೆಲ್ಲ ಸಮರವನ್ನೇ ಉಪೇಕ್ಷಿಸಿಬಿಟ್ಟಿರುವುದು.

೫೪. ಸೇನೆಯಲ್ಲಿ ಒಬ್ಬಳಾದರೂ ಯುದ್ಧಮಾಡುತ್ತಿಲ್ಲ; ಯಾವಳೂ ಆಯುಧವನ್ನು ಹಿಡಿಯುತ್ತಿಲ್ಲ; ತಾಲುಮೂಲವೇ ಬತ್ತಿಹೋಗಿ ಯಾವಳಿಗೂ ಮಾತನಾಡುವುದಕ್ಕೆ ಸಾಮರ್ಥ್ಯವಿರುವುದಿಲ್ಲ.

೫೫. ಈ ಪ್ರಕಾರ ನಮಗೆ ಒದಗಿಬಂದಿರುವ ಈ ದುರ್ಗತಿಯ ವಿಷಯವನ್ನು ಕೇಳಿ ನಮ್ಮ ಲಲಿತಾಪರಮೇಶ್ವರಿಯು ಏನು ಹೇಳುವಳೋ? ದೈತ್ಯರು ಈ ರೀತಿಯಾದ ಅಪಕಾರವನ್ನೆಸಗಿದರು. ಇದನ್ನು ಪರಿಹರಿಸಿಕೊಳ್ಳಲು ಉಪಾಯವೇನೆಂಬುದನ್ನು ಆಲೋಚಿಸುವುದಾಗಲಿ.

೫೬. ಓ ಪೋತ್ರಿಣೀದೇವಿ! ನಮ್ಮಿಪ್ಪತ್ತರ ಹದಿನಾರು ಅಕ್ಷೋಹಿಣೀ ಸೇನೆಯಲ್ಲಿ ತರ್ಷಾಸ್ತ್ರದಿಂದ ಪೀಡಿತೆಯಾಗಿಲ್ಲದ ಒಬ್ಬ ಶಕ್ತಿದೇವತೆಯೂ ಕಾಣುವುದೇ ಇಲ್ಲ.

೫೭. ನಮ್ಮ ಸೈನ್ಯವೆಲ್ಲವೂ ಆಯುಧಗಳನ್ನು ತೊರೆದಿರುವುದನ್ನು ಕಂಡು ಈ ಸಮಯದಲ್ಲಿಯೇ ರಂಧ್ರಪ್ರಹಾರಿಗಳಾದ ಆ ದಾನವರು ಬಾಣಗಳನ್ನು ಪ್ರಯೋಗಿಸಿ ಶಕ್ತಿದೇವತೆಗಳೆಲ್ಲರನ್ನೂ ಹೊಡೆಯುತ್ತಿರುವರು.

**ಅತ್ರೋಪಾಯಸ್ತ್ವಯಾಕಾರ್ಯೋ ಮಯಾ ಚ ಸಮರೋದ್ಯಮೇ।**
**ತ್ವದೀಯರಥಪರ್ವಸ್ಥೋ ಯೋಽಸ್ತಿ ಶೀಧುಮಹಾರ್ಣವಃ ॥**
**ತಮಾದಿಶ ಸಮಸ್ತಾನಾಂ ಶಕ್ತೀನಾಂ ತರ್ಷಮುಕ್ತಯೇ ॥ ೫೮ ॥**
**ನಾಲ್ಪೈಃ ಪಾನೀಯಪಾನಾದ್ಯೈರೇತಾಸಾಂ ತರ್ಷಸಂಕ್ಷಯಃ ।**
**ಸ ಏವ ಮದಿರಾಸಿಂಧುಃ ಶಕ್ತ್ಯೌಘಂ ತರ್ಪಯಿಷ್ಯತಿ ॥ ೫೯ ॥**
**ತಮಾದಿಶ ಮಹಾತ್ಮಾನಂ ಸಮರೋತ್ಸಾಹಕಾರಿಣಂ ।**
**ಸರ್ವತರ್ಷಪ್ರಶಮನಂ ಮಹಾಬಲ ವಿವರ್ಧನಂ ॥ ೬೦ ॥**
**ಇತ್ಯುಕ್ತಾ ದಂಡನಾಥಾ ಸಾ ಸದುಪಾಯೇನ ಹರ್ಷಿತಾ ।**
**ಆಜುಹಾವ ಸುರಾಸಿಂಧುಮಾಜ್ಞಾ ಚಕ್ರೇಶ್ವರೀ ರಣೇ ॥ ೬೧ ॥**
**ಸ ಮದಾಲಸರಕ್ತಾಕ್ಷೋ ಹೇಮಾಬ್ಜಸ್ರಗ್ವಿಭೂಷಿತಃ ।**
**ಪ್ರಣಮ್ಯ ದಂಡನಾಥಾಂ ತಾಂ ತದಾಜ್ಞಾ ಪರಿಪಾಲಕಃ ॥**
**ಆತ್ಮಾನಂ ಬಹುಧಾ ಕೃತ್ವಾ ತರುಣಾದಿತ್ಯಪಾಟಲಂ ॥ ೬೨ ॥**

---

೫೮-೫೯. ಈ ವಿಷಯದಲ್ಲಿ ನೀನೂ ನಾನೂ ಸಮರೋದ್ಯಮಕ್ಕಾಗಿ ತಕ್ಕ ಉಪಾಯವನ್ನು ಯೋಚಿಸಲೇಬೇಕಾಗಿರುವುದು. ಎಲೆ ಗೆಳತಿ! ಈಗ ನಿನ್ನ ರಥಪರ್ವದಲ್ಲಿರುವ ಸುರಾಸಮುದ್ರದೇವತೆಗೆ ಸಮಸ್ತ ಶಕ್ತಿದೇವತೆಗಳ ಈ ಬಾಯಾರಿಕೆಯನ್ನು ಪರಿಹರಿಸಬೇಕೆಂದು ಅಪ್ಪಣೆಮಾಡು. ಇವರಿಗೆ ಪಾನೀಯವನ್ನು ಸ್ವಲ್ಪವಾಗಿ ಕೊಟ್ಟಲ್ಲಿ ಇವರ ಬಾಯಾರಿಕೆಯು ಕಳೆಯುವುದಿಲ್ಲ. ಈಗ ಸುರಾಸಮುದ್ರದೇವತೆಯೇ ಶಕ್ತಿಸಮೂಹದ ಈ ಬಾಯಾರಿಕೆಯನ್ನು ನೀಗಿ ತೃಪ್ತಿಗೊಳಿಸಲು ಸಮರ್ಥನಾಗಿರುವನು.

೬೦. ಎಲೆ ದೇವಿ! ಆದುದರಿಂದ ಮಹಾತ್ಮನಾಗಿಯೂ, ಸಮರಕ್ಕೆ ಉತ್ಸಾಹವನ್ನುಂಟುಮಾಡುವವನಾಗಿಯೂ, ಎಲ್ಲ ಬಗೆಯ ಬಾಯಾರಿಕೆಯನ್ನು ಕಳೆಯುವವನಾಗಿಯೂ ಮಹತ್ತರವಾದ ಬಲವನ್ನು ವೃದ್ಧಿಗೊಳಿಸುವವನಾಗಿಯೂ, ಇರುವ ಆ ಸುರಾಸಮುದ್ರದೇವನಿಗೆ ಈಗಲೇ ನೀನು ಅಪ್ಪಣೆ ಮಾಡಬೇಕು."

೬೧. ಎಲೈ ಮುನಿಶ್ರೇಷ್ಠನೇ! ಮಂತ್ರಿಣಿದೇವಿಯ ಈ ಮಾತನ್ನು ಕೇಳಿ, ಶ್ರೀ ದಂಡನಾಥಾದೇವಿಯು ಒಳ್ಳೆಯ ಉಪಾಯವನ್ನು ಸೂಚಿಸಿದುದಕ್ಕಾಗಿ ಸಂತೋಷಗೊಂಡು, ಕೂಡಲೇ ಸುರಾಸಮುದ್ರದೇವತೆಯನ್ನು ಕರೆದು ಅಂತೆಯೇ ಅಪ್ಪಣೆಮಾಡಿದಳು.

೬೨. ಮದದಿಂದಾಲುತ್ತಿರುವ ಕೆಂಗಣ್ಣುಗಳುಳ್ಳವನೂ, ಸುವರ್ಣ

ಕ್ವಚಿತ್ತಾಪಿಂಛವಚ್ಛ್ಯಾಮಂ ಕ್ವಚಿಚ್ಚ ಧವಲದ್ಯುತಿಂ ।
ಕೋಟಿಶೋ ಮದಿರಾಧಾರಾಂ ಕರಿಹಸ್ತಸಮಾಕೃತಿಂ ॥ ೬೩ ॥
ವವರ್ಷ ಸಿಂಧುರಾಜೋಽಯಂ ವಾಯುನಾ ಬಹುಲೀಕೃತಃ ।
ಪುಷ್ಕಲಾವರ್ತಕಾದ್ಯೈಸ್ತು ಕಲ್ಪಕ್ಷಯಬಲಾಹಕೈಃ ॥
ನಿಷಿಚ್ಯಮಾನೋ ಮದ್ಯಾಬ್ಧಿಃ ಶಕ್ತಿಸೈನ್ಯೇ ಪಪಾತ ಹ ॥ ೬೪ ॥
ಯದ್ಗಂಧಾಘ್ರಾಣಮಾತ್ರೇಣ ಮೃತ ಉತ್ತಿಷ್ಠತಿ ಸ್ಫುಟಂ ।
ದುರ್ಬಲಃ ಪ್ರಬಲಶ್ಚ ಸ್ಯಾತ್ಸ ವವರ್ಷ ಸುರಾಂಬುಧಿಃ ॥ ೬೫ ॥
ಪರಾರ್ಧಸಂಖ್ಯಾತೀತಾಸ್ತಾ ಮದ್ಯಧಾರಾಪರಂಪರಾಃ ।
ಪ್ರತೀಚ್ಛಂತ್ಯಃ ಪಿಪಾಸಾರ್ತೈರ್ಮುಖೈಃ ಶಕ್ತಯ ಉತ್ಥಿತಾಃ ॥ ೬೬ ॥

---

ಕಮಲಮಾಲೆಯಿಂದಲಂಕೃತನೂ ಆದ ಆ ಸುರಾಸಮುದ್ರನು ಶ್ರೀ ದಂಡನಾಥಾದೇವಿಗೆ ಮಣಿದು, ಆಕೆಯ ಅನುಜ್ಞೆಯನ್ನು ನಡೆಸುವವನಾಗಿ ಬಾಲಸೂರ್ಯನಂತೆ ಕೆಂಪಾದ ತನ್ನ ಮೂರ್ತಿಯನ್ನು ಅನೇಕ ಮೂರ್ತಿಗಳನ್ನಾಗಿ ಮಾಡಿಕೊಂಡನು.

೬೩. ಕೆಲವೆಡೆಗಳಲ್ಲಿ ತಮಾಲವೃಕ್ಷದಂತೆ ಶ್ಯಾಮಲವರ್ಣವುಳ್ಳವನಾಗಿಯೂ, ಕೆಲವೆಡೆಗಳಲ್ಲಿ ಶುಭ್ರವರ್ಣವುಳ್ಳವನಾಗಿಯೂ ಇರುವ ಆ ಸುರಾಸಾಗರನು ಗಾಳಿಯಿಂದ ವೃದ್ಧಿಗೊಂಡು ಶಕ್ತಿಸೇನೆಗಳಿಗೆಲ್ಲ ಆನೆಯ ಸೊಂಡಿಲಿನ ಗಾತ್ರದಲ್ಲಿ ಸುರೆಯ ಧಾರೆಗಳನ್ನು ಸುರಿಸಿದನು.

೬೪. ಪ್ರಳಯಕಾಲದ ಪುಷ್ಕಲಾವರ್ತಕಗಳೆಂಬ ಮುಗಿಲುಗಳಿಂದಲೂ ಸುರೆಯನ್ನು ಸುರಿಸುತ್ತ ಆ ಮದ್ಯಸಮುದ್ರರಾಜನು ಶಕ್ತಿಸೇನೆಯಿದ್ದೆಡೆಗಿಳಿದು ಬಂದನು.

೬೫. ಯಾವುದರ ಗಂಧವನ್ನು ಮೂಸಿದ ಮಾತ್ರದಿಂದಲೇ ಮೃತಿಹೊಂದಿದವನೂ ಉಜ್ಜೀವಿತನಾಗಿ ಎದ್ದು ನಿಲ್ಲುವನೋ, ಯಾವುದರ ಪ್ರಭಾವದಿಂದ ಬಲಹೀನನೂ ಪ್ರಬಲನಾಗುವನೋ ಆ ಸುರೆಯನ್ನು ಸುರಾಸಮುದ್ರರಾಜನು ಶಕ್ತಿಸೇನೆಗಳಮೇಲೆ ವರ್ಷಿಸಿದನು.

೬೬. ಆಗ ಬಾಯಾರಿ ಬತ್ತಿದ ಮುಖಗಳುಳ್ಳ ಬಹುಮಂದಿ ಶಕ್ತಿದೇವಿಯರು ಒಂದೇ ಸಮನಾಗಿ ಸುರಿಯುತ್ತಿದ್ದ ಮದ್ಯಧಾರೆಗಳನ್ನು ಬಯಸಿ ಮೇಲಕ್ಕೆದ್ದರು.

**ಯಥಾ ಸಾ ಮದಿರಾಸಿಂಧುವೃಷ್ಟಿರ್ದೈತ್ಯೇಷು ನೋ ಪತೇತ್ ।**
**ತಥಾ ಸೈನ್ಯಸ್ಯ ಪರಿತೋ ಮಹಾಪ್ರಾಕಾರಮಂಡಲಂ ॥ ೬೭ ॥**
**ಲಘುಹಸ್ತತಯಾ ಮುಕ್ತೈಃ ಶರಜಾಲೈಃ ಸಹಸ್ರಶಃ ।**
**ಚಕಾರ ವಿಸ್ಮಯಕರೀ ಕದಂಬವನವಾಸಿನೀ ॥**
**ಕರ್ಮಣಾ ತೇನ ಸರ್ವೇಽಪಿ ವಿಸ್ಮಿತಾ ಮರುತೋಽಭವನ್ ॥ ೬೮ ॥**
**ಅಥ ತಾಃ ಶಕ್ತಯೋ ಭೂರಿ ಪಿಬಂತಿ ಸ್ಮ ರಣಾಂತರೇ ।**
**ವಿವಿಧಾ ಮದಿರಾಧಾರಾ ರಣೋತ್ಸಾಹವಿವರ್ಧಿನೀಃ ॥ ೬೯ ॥**
**ಯಸ್ಯಾ ಯಸ್ಯಾ ಮನಃಪ್ರೀತೀ ರುಚಿಃ ಸ್ವಾದೋ ಯಥಾ ಯಥಾ ।**
**ತಸ್ಯಾಸ್ತಸ್ಯಾಃ ಸುರಾಸಿಂಧುಸ್ತಾ ವವರ್ಷ ತಥಾ ತಥಾ ॥ ೭೦ ॥**
**ತೃತೀಯಯುದ್ಧದಿವಸಪ್ರಹರದ್ವಿತಯಾವಧಿ ।**
**ಮದ್ಯಸಂತತಧಾರಾಭಿಃ ಪ್ರವವರ್ಷ ಸುರಾಂಬುಧಿಃ ॥ ೭೧ ॥**
**ಗೌಡೀಃ ಪೈಷ್ಟೀಶ್ಚ ಮಾಧ್ವೀಶ್ಚ ವಲ್ಕೀಃ ಕಾದಂಬರೀಸ್ತಥಾ ।**
**ಹೈಂತಾಲೀರ್ಲಾಂಗಲೇಯಾಶ್ಚ ತಾಲಜಾತಾಸ್ತಥಾ ಸುರಾಃ ॥ ೭೨ ॥**

---

೬೭-೬೮. ಆ ಸಮಯದಲ್ಲಿ ಕದಂಬವನವಾಸಿನೀದೇವಿಯು, ಮದಿರಾಸಿಂಧುವು ದೈತ್ಯಸೇನೆಯಲ್ಲಿ ಬೀಳದಂತೆ ಕರಲಾಘವವನ್ನು ತೋರಿ ಆ ಶಕ್ತಿಸೇನೆಯ ಸುತ್ತಲೂ ಸಾವಿರಾರು ಬಾಣಗಳನ್ನು ಪ್ರಯೋಗಿಸಿ ಅತ್ಯಾಶ್ಚರ್ಯಕರವಾದ ಒಂದು ದೊಡ್ಡ ಕೋಟೆಯನ್ನೇ ನಿರ್ಮಾಣ ಮಾಡಿದಳು. ಈ ಕಾರ್ಯವನ್ನು ಕಂಡು ದೇವತೆಗಳೆಲ್ಲರೂ ಪರಮಾಶ್ಚರ್ಯಭರಿತರಾದರು.

೬೯. ಇದಾದ ತರುವಾಯ ಆ ರಣರಂಗದಲ್ಲಿ ಶಕ್ತಿದೇವಿಯರೆಲ್ಲರೂ ರಣೋತ್ಸಾಹವನ್ನು ವೃದ್ಧಿಗೊಳಿಸುವ ಬಗೆ ಬಗೆಯ ಮದಿರಧಾರೆಗಳನ್ನು ಯಥೇಚ್ಛವಾಗಿ ಕುಡಿದರು.

೭೦. ಆಗ ಸುರಾಸಮುದ್ರರಾಜನಾದರೋ, ಯಾವ ಯಾವ ಶಕ್ತಿ ದೇವತೆಯ ಮನಸ್ಸಿಗೆ ಹಿತವಾದ ಯಾವ ಯಾವ ರುಚಿ, ಸಿಹಿಗಳುಳ್ಳ ಸುರೆಯು ಬೇಕೋ ಆ ಆ ತರಹೆಯ ಸುರೆಗಳನ್ನೇ ಅವರವರಿಗೆ ಸುರಿದನು.

೭೧. ಎಲೈ ಅಗಸ್ತ್ಯನೇ! ಯುದ್ಧದ ಮೂರನೆಯ ದಿನದ ಎರಡು ಪ್ರಹರಗಳವರೆಗೂ ಆ ಸುರಾಸಮುದ್ರನು ಈ ರೀತಿಯಾಗಿಯೇ ಆ ಶಕ್ತಿದೇವಿಯರಿಗೆ ಸಂತತವಾದ ಸುರೆಯ ಧಾರೆಗಳನ್ನು ಸುರಿದನು.

೭೨-೭೩. ಹೀಗೆ ಅವರಿಗೆರೆದ ಮದ್ಯಗಳು ಅನೇಕ ಬಗೆಯ

ಕಲ್ಪವೃಕ್ಷೋದ್ಭವಾ ದಿವ್ಯಾ ನಾನಾದ್ರವ್ಯಸಮುದ್ಭವಾಃ ।
ಸುಸ್ವಾದೂಃ ಸೌರಭಾಢ್ಯಾಶ್ಚ ಶುಭಗಂಧಾ ಮದಪ್ರದಾಃ ॥ ೭೩ ॥
ಬಕುಲಪ್ರಸವಾಮೋದಾ ಧ್ವನಂತೋ ಬುದ್ಬುದೋಜ್ಜ್ವಲಾಃ ।
ಕಟುಕಾಶ್ಚ ಕಷಾಯಾಶ್ಚ ಮಧುರಾಸ್ತಿಕ್ತಕಾಸ್ಪೃಶಃ ॥ ೭೪ ॥
ಬಹುವರ್ಣಸಮಾಶ್ಲಿಷ್ಟಾಶ್ಛೇದಿನೀಃ ಪಿಚ್ಛಿಲಾಸ್ತಥಾ ।
ಈಷದಮ್ಲಾಶ್ಚ ಕಟ್ವಮ್ಲಾ ಮಧುರಾಮ್ಲಾಸ್ತಥಾ ಪರಾಃ ॥ ೭೫ ॥
ಶಸ್ತ್ರಕ್ಷತಿರುಜಾಹಂತ್ರೀರಸ್ಥಿಸಂಧಾನದಾಯಿನೀಃ ।
ರಣಶ್ರಮಹರೀಃ ಶೀತಾಃ ಕವೋಷ್ಣಾಶ್ಚ ತಥಾ ಲಘು ॥ ೭೬ ॥
ಸಂತಾಪಹಾರಿಣೀಃ ಕಿಂಚಾನುಷ್ಣಾ ಶೀತಾ ಜಯಪ್ರದಾಃ ।
ನಾನಾವಿಧಾಃ ಸುಧಾಧಾರಾ ವವರ್ಷ ಮದಿರಾರ್ಣವಃ ॥ ೭೭ ॥

---

ವಾಗಿದ್ದುವು. ಗುಡ, ಪಿಷ್ಟ ಸಂಬಂಧವಾದವುಗಳು ; ಮಧು, ವಲ್ಕಲ, ಕದಂಬ, ಹಿಂತಾಲ, ಲಾಂಗಲ, ತಾಲ, ಕಲ್ಪವೃಕ್ಷ ಮೊದಲಾದವುಗಳಿಂದ ಭಟ್ಟಿಯಿಳಿಸಿದವುಗಳು ; ದೇವತಾಸಂಬಂಧಗಳಾದವುಗಳು ; ಬಗೆ ಬಗೆಯ ದ್ರವ್ಯಗಳಿಂದಾದವುಗಳು; ಇಂತು ಆ ಮದ್ಯವಿಶೇಷಗಳು ಅನೇಕವಾಗಿದ್ದವು. ಅವುಗಳೆಲ್ಲವೂ ಬಹು ರುಚಿಕರಗಳೂ, ಸೌರಭಭರಿತಗಳೂ, ಶುಭ ಗಂಧ ಸಹಿತಗಳೂ ಆಗಿ, ಮತ್ತನ್ನುಂಟುಮಾಡುವವುಗಳಾಗಿದ್ದವು.

೭೪. ಬಕುಲಕುಸುಮಗಂಧವನ್ನು ತಳೆದಿದ್ದ ಆ ಮದ್ಯಗಳೆಲ್ಲವೂ ನೊರೆಯಿಕ್ಕಿ ಜಲಜಲನೆ ಧ್ವನಿಗೈಯುತ್ತ, ಕಟು, ಕಷಾಯ, ಮಧುರ, ತಿಕ್ತ ರಸಗಳುಳ್ಳವುಗಳಾಗಿ ಸೊಗಸೊಗೆಯುತ್ತಿದ್ದವು.

೭೫. ಹಲ ಬಗೆಯ ಬಣ್ಣಗಳನ್ನೊಳಗೊಂಡಿದ್ದ ಅವುಗಳೆಲ್ಲವೂ ಛೇದಿನಿಗಳೂ, ಪಿಚ್ಛಲಗಳೂ ಆಗಿದ್ದುವಲ್ಲದೆ, ಸ್ವಲ್ಪ ಹುಳಿ, ಬಹಳ ಹುಳಿ, ಹುಳಿ ಬೆರೆತ ಸಿಹಿಯುಳ್ಳವುಗಳೂ ಆಗಿದ್ದವು.

೭೬. ಅವು ಶಸ್ತ್ರಗಳ ಪೆಟ್ಟುಗಳಿಂದಾದ ನೋವುಗಳನ್ನು ಕಳೆಯು ವಂಥವು; ಸಡಿಲಿಹೋದ ಎಲುಬುಗಳನ್ನು ಕೂಡಿಸುವಂಥವು; ರಣಶ್ರಮ ವನ್ನು ಪರಿಹರಿಸುವಂಥವು ; ತಣ್ಣಗೂ, ಸ್ವಲ್ಪ ಬೆಚ್ಚಗೂ, ಹಗುರ ವಾಗಿಯೂ ಇರುವಂಥವು.

೭೭. ಆ ಮದಿರಾರ್ಣವರಾಜನು ಹೀಗೆ ಸಂತಾಪವನ್ನು ಪರಿಹರಿಸು ವವುಗಳಾಗಿ ಸುಖಶೀತೋಷ್ಣವಾಗಿರುವ ಜಯಪ್ರದವಾದ ಬಗೆ ಬಗೆಯ ಮದಿರಧಾರೆಗಳನ್ನು ಆ ಶಕ್ತಿದೇವಿಯರಿಗೆರೆದನು.

**ಅವಿಚ್ಛಿನ್ನಂ ಯಾಮಮಾತ್ರಮೇಕೈಕಾ ತತ್ರ ಯೋಗಿನೀ ।**
**ಐರಾವತಕರಪ್ರಖ್ಯಾಂ ಸುಧಾಧಾರಾಂ ಮುದಾ ಪಪೌ ॥ ೭೮ ॥**
**ಉತ್ತಾನಂ ವದನಂ ಕೃತ್ವಾ ವಿಲೋಲರಸನಾಂಚಲಂ ।**
**ಶಕ್ತಯಃ ಪ್ರಪಪುಃ ಶೀಧು ಮುದಾ ಮೀಲಿತಲೋಚನಾಃ ॥ ೭೯ ॥**
**ಇತ್ಥಂ ಬಹುವಿಧೈರ್ಮದ್ಯಧಾರಾಪಾತೈಃ ಸುರಾಂಬುಧಿಃ ।**
**ಆಗಲಂ ತರ್ಪಯಿತ್ವಾ ತಾ ದಿವ್ಯರೂಪಂ ಸಮಾಸ್ಥಿತಃ ॥ ೮೦ ॥**
**ಪುನರ್ಗತ್ವಾ ದಂಡನಾಥಾಂ ಪ್ರಣಮ್ಯ ಸ ಸುರಾಂಬುಧಿಃ ।**
**ಸ್ನಿಗ್ಧಗಂಭೀರಘೋಷೇಣ ವಾಕ್ಯೇನೇದಮುವಾಚ ತಾಂ ॥ ೮೧ ॥**
**ದೇವಿ ಪಶ್ಯ ಮಹಾರಾಜ್ಞೀದಂಡಮಂಡಲನಾಯಿಕೇ ।**
**ಮಯಾ ಸಂತರ್ಪಿತಾ ಮುಕ್ತತರ್ಷಾ ಶಕ್ತಿವರೂಥಿನೀ ॥ ೮೨ ॥**
**ಕಾಶ್ಚಿನ್ನೃತ್ಯಂತಿ ಗಾಯಂತಿ ಕಲಕ್ವಣಿತಮೇಖಲಾಃ ।**
**ನೃತ್ಯಂತೀನಾಂ ಪುರಃ ಕಾಶ್ಚಿತ್ಕರತಾಲಂ ವಿತನ್ವತೇ ॥ ೮೩ ॥**

---

೭೮. ಶಕ್ತಿಮಹಾಸೇನೆಯಲ್ಲಿದ್ದ ಒಬ್ಬೊಬ್ಬ ಯೋಗಿನಿಯೂ ಒಂದು ಯಾಮದವರೆಗೆ, ಐರಾವತದ ಸೊಂಡಲಿನ ಗಾತ್ರದಂತೆ ಸುರಿಯುತ್ತಿರುವ ಆ ಮದಿರಧಾರೆಗಳನ್ನು ಸಂತೋಷವಾಗಿ ಪಾನಮಾಡಿದಳು.

೭೯. ಮುಖವನ್ನು ಮೇಲಕ್ಕೆತ್ತಿ, ನಾಲಗೆಯನ್ನು ಜೋಲುಬಿಟ್ಟು ಅಲುಗಾಡಿಸುತ್ತ ಆ ದೇವಿಯರೆಲ್ಲರೂ ಕಣ್ಣುಗಳನ್ನು ಮುಚ್ಚಿ ಬಹು ಸಂತೋಷದಿಂದ ಸುರೆಯನ್ನು ಯಥೇಚ್ಛವಾಗಿ ಸವಿದರು.

೮೦. ಅಯ್ಯಾ ಮುನಿವರನೇ! ಈ ರೀತಿ, ಸುರಾಸಮುದ್ರರಾಜನು ಅನೇಕ ಬಗೆಯ ಮದ್ಯಧಾರೆಗಳಿಂದ ಶಕ್ತಿದೇವತೆಗಳಿಗೆ ಕಂಠಪೂರ್ತಿಯಾಗಿ ತೃಪ್ತಿಯನ್ನುಂಟುಮಾಡಿದ ತರುವಾಯ ದಿವ್ಯರೂಪವನ್ನು ತಾಳಿದನು.

೮೧. ಆತನು ಈ ರೀತಿ ದಿವ್ಯರೂಪವನ್ನು ತಾಳಿ ಮತ್ತೆ ಶ್ರೀ ದಂಡನಾಥಾದೇವಿಯ ಬಳಿಗೈದಿ ಆಕೆಗೆ ಮಣಿದು, ಮಧುರಗಂಭೀರ ಧ್ವನಿಯಿಂದ ಆಕೆಯನ್ನು ಕುರಿತು ಈ ರೀತಿ ಹೇಳಿದನು :—

೮೨. "ಓ ದೇವಿ! ಶ್ರೀ ಮಹಾರಾಜ್ಞಿಯ ದಂಡಮಂಡಲನಾಯಕಿ!! ಶ್ರೀ ಪೋತ್ರಿಣೀ!!! ನಿನ್ನ ಅಪ್ಪಣೆಯಂತೆ ಶಕ್ತಿಸೇನೆಗೆಲ್ಲ ಸುರಾವಿತರಣ ದಿಂದ ತೃಪ್ತಿಯನ್ನುಂಟುಮಾಡಿರುವೆನು, ಪರಾಂಬರಿಸು.

೮೩. ಓ ದೇವೀ! ನೋಡು, ಹೀಗೆ ತೃಪ್ತಿಗೊಂಡ ಆ ಶಕ್ತಿಸೇನೆ ಯಲ್ಲಿ ಕೆಲವರು ಘಲುಘಲನೆ ದನಿಗೈಯುತ್ತಿರುವ ಒಡ್ಯಾಣಗಳುಳ್ಳವರಾಗಿ

**ಕಾಶ್ಚಿದ್ಧಸಂತಿ ವ್ಯಾವಲ್ಗದ್ವಲ್ಗುವಕ್ಷೋಜಮಂಡಲಾಃ ।**
**ಪತಂತ್ಯನ್ಯೋನ್ಯಮಂಗೇಷು ಕಾಶ್ಚಿದಾನಂದಮಂಥರಾಃ ॥ ೮೪ ॥**
**ಕಾಶ್ಚಿದ್ವಲ್ಗಂತಿ ಚ ಶ್ರೋಣೀವಿಗಲನ್ಮೇಖಲಾಂಬರಾಃ । [ ೮೫ ॥**
**ಕಾಶ್ಚಿದ್ಯುದ್ಧಾಯ ಸಂನದ್ಧಾ ಘೂರ್ಣಯಂತ್ಯೋ ನಿಜಾಯುಧಂ ॥**
**ಇತ್ಥಂ ನಿರ್ದಿಶ್ಯಮಾನಾಸ್ತಾಃ ಶಕ್ತೀರ್ಮೈರೇಯಸಿಂಧುನಾ ।**
**ಅವಲೋಕ್ಯ ಭೃಶಂ ತುಷ್ಟಾ ದಂಡಿನೀ ತಮುವಾಚ ಹ ॥ ೮೬ ॥**
**ಪರಿತುಷ್ಟಾಸ್ಮಿ ಮದ್ಯಾಬ್ಧೇ ತ್ವಯಾ ಸಾಹ್ಯಮನುಷ್ಠಿತಂ ।**
**ದೇವಕಾರ್ಯಮಿದಂ ಕಿಂಚ ತ್ವಯಾ ನಿರ್ವಿಘ್ನಿತಂ ಕೃತಂ ॥ ೮೭ ॥**
**ಅತೋ ಮಾ ತ್ವಂ ಮತ್ಪ್ರಸಾದಾದ್ವಾಜಪೇಯಾದಿಕೇ ಮಖೇ ।**
**ಸೋಮಪಾನವದತ್ಯಂತಮುಪಯೋಜ್ಯೋ ಭವಿಷ್ಯಸಿ ॥**
**ಮಂತ್ರೇಣ ಪೂತಂ ತ್ವಾಂ ಯಾಗೇ ಪಾಸ್ಯಂತ್ಯಖಿಲದೇವತಾಃ ॥ ೮೮ ॥**

---

ಹಾಡುತ್ತಲೂ, ಕುಣಿಯುತ್ತಲೂ ಇರುವರು. ಕುಣಿಯುತ್ತಲಿರುವ ಆ ಶಕ್ತಿದೇವಿಯರ ಮುಂಗಡೆ ಕೆಲದೇವಿಯರು ಕರತಾಳಗಳನ್ನು ಹಾಕುತ್ತಿರುವರು.

೮೪. ಕೆಲವರು ಸಂತೋಷಾಧಿಕ್ಯದಿಂದ ಉಬ್ಬಿದ ಮನೋಹರವಾದ ಸ್ತನಮಂಡಲಗಳುಳ್ಳವರಾಗಿ ನಗುತ್ತಿರುವರು. ಆನಂದಭರಿತೆಯರಾದ ಕೆಲಮಂದಿ ಶಕ್ತಿದೇವಿಯರು ಒಬ್ಬರಮೇಲೊಬ್ಬರು ಬೀಳುತ್ತಿರುವರು.

೮೫. ಶ್ರೋಣೀತಲಗಳಲ್ಲಿ ಜಾರಿದ ಒಡ್ಯಾಣಗಳೂ ವಸ್ತ್ರಗಳೂ ಉಳ್ಳವರಾಗಿ ಕೆಲಮಂದಿ ಶಕ್ತಿದೇವಿಯರು ಬೇಕಾದಹಾಗೆ ಮಾತನಾಡುತ್ತಿರುವರು. ಕೆಲವರು ತಮ್ಮ ಆಯುಧಗಳನ್ನು ಝಳಪಿಸುತ್ತ ಯುದ್ಧ ಸನ್ನದ್ಧೆಯರಾಗುತ್ತಿರುವರು.''

೮೬. ಸುರಾಸಮುದ್ರನು ಈ ಪ್ರಕಾರ ಅರಿಕೆಮಾಡಿ ತೋರಿದ ಶಕ್ತಿಸೇನೆಯೆಲ್ಲವನ್ನೂ ಕಂಡು ಶ್ರೀದಂಡಿನೀದೇವಿಯು ಬಹಳವಾಗಿ ಸಂತೋಷಪಟ್ಟು ಅವನನ್ನು ಕುರಿತು ಹೀಗೆಂದಳು:

೮೭. '' ಎಲೈ ಮದ್ಯಾಬ್ಧಿಯೇ! ನೀನು ನಮಗೆ ಉಪಕಾರವನ್ನೆಸಗಿ ದೇವತೆಗಳ ಸಲುವಾಗಿ ನಡೆಯುತ್ತಿರುವ ಈ ಯುದ್ಧಕಾರ್ಯಕ್ಕೆ ನಿರ್ವಿಘ್ನತೆಯನ್ನುಂಟುಮಾಡಿದೆ. ನಮಗೆ ತುಂಬ ಸಂತೋಷವಾಯಿತು.

೮೮. ಅಯ್ಯಾ! ಹೀಗೆ ಮಹೋಪಕಾರಿಯಾಗಿರುವ ನೀನು ನನ್ನ ಅನುಗ್ರಹದಿಂದ ವಾಜಪೇಯವೇ ಮೊದಲಾದ ಯಾಗಗಳ ಸೋಮಪಾನ

**ಯಾಗೇಷು ಮಂತ್ರಪೂತೇನ ಪೀತೇನ ಭವತಾ ಜನಾಃ ।**
**ಸಿದ್ಧಿಮೃದ್ಧಿಂ ಬಲಂ ಸ್ವರ್ಗಮಪವರ್ಗಂ ಚ ಬಿಭ್ರತು ॥ ೮೯ ॥**
**ಮಹೇಶ್ವರೀ ಮಹಾದೇವೋ ಬಲದೇವಶ್ಚ ಭಾರ್ಗವಃ ।**
**ದತ್ತಾತ್ರೇಯಸ್ತಥಾನ್ಯೇಽಚ ತ್ವಾಂ ಪಾಸ್ಯಂತಿ ಮಹಾಜನಾಃ ॥ ೯೦ ॥**
**ಯಾಗೇ ಸಮರ್ಚಿತಸ್ತ್ವಂ ಹಿ ಸರ್ವಾಂ ಸಿದ್ಧಿಂ ಪ್ರದಾಸ್ಯಸಿ ।**
**ಇತ್ಥಂ ವರಪ್ರದಾನೇನ ತೋಷಯಿತ್ವಾ ಸುರಾಂಬುಧಿಂ ॥**
**ಮಂತ್ರಿಣೀಂ ತ್ವರಯಾಮಾಸ ಪುನರ್ಯುದ್ಧಾಯ ದಂಡಿನೀ ॥ ೯೧ ॥**
**ಪುನಃ ಪ್ರವವೃಥೇ ಯುದ್ಧಂ ಶಕ್ತೀನಾಂ ದಾನವೈಃ ಸಹ ।**
**ಮಹಾಟ್ಟಹಾಸನಿರ್ಭಿಣ್ಣದಿಗಷ್ಟಕಧರಾಧರಂ ॥ ೯೨ ॥**
**ಪ್ರತ್ಯಗ್ರಮದಿರಾಮತ್ತಾಃ ಪಾಟಲೀಕೃತಲೋಚನಾಃ ।**
**ಶಕ್ತಯೋ ದೈತ್ಯಚಕ್ರೇಷು ನ್ಯಪತನ್ನೇಕಹೇಲಯಾ ॥ ೯೩ ॥**

---

ದಂತೆಯೇ ಅತ್ಯಂತೋಪಯೋಗಿಯಾಗುವೆ; ಸಮಸ್ತದೇವತೆಗಳೂ ಮಂತ್ರೋಚ್ಚಾರಣೆಯಿಂದ ಪವಿತ್ರನಾಗುವ ನಿನ್ನನ್ನು ಪಾನಮಾಡುತ್ತಾರೆ.

೮೯. ಸುರಾಸಮುದ್ರರಾಜನೇ! ಯಾಗಗಳಲ್ಲಿ ಮಂತ್ರಪೂತನಾದ ನಿನ್ನನ್ನು ಪಾನಮಾಡುವ ಜನರೆಲ್ಲರೂ ನಿನ್ನ ದೆಸೆಯಿಂದಲೇ ಸಿದ್ಧಿಯನ್ನೂ ಋದ್ಧಿಯನ್ನೂ, ಬಲವನ್ನೂ, ಸ್ವರ್ಗಾಪವರ್ಗಗಳನ್ನೂ ಹೊಂದಲಿ.

೯೦. ಅಯ್ಯಾ! ಮುಂದೆ ಮಹೇಶ್ವರಿಯೂ, ಮಹಾದೇವನೂ, ಬಲರಾಮ, ಭಾರ್ಗವ, ದತ್ತಾತ್ರೇಯ ಮೊದಲಾದವರೂ ಇತರ ಮಹಾಜನಗಳೂ ನಿನ್ನನ್ನು ಸೇವಿಸುತ್ತಾರೆ.

೯೧. ಯಾಗದಲ್ಲಿ ಪೂಜೆಯನ್ನು ಕೈಕೊಂಡ ನೀನು ಸರ್ವಸಿದ್ಧಿ ಪ್ರದಾಯಕನಾಗುವೆ.'' ಈರೀತಿ ಹೇಳಿ, ಸುರಾಸಮುದ್ರರಾಜನಿಗೆ ವರವನ್ನು ಕೊಟ್ಟು ಸಂತೋಷಪಡಿಸಿದ ಬಳಿಕ ಶ್ರೀ ದಂಡನಾಥಾದೇವಿಯು ಮರಳಿ ಕಾಳೆಗಮಾಡಲೋಸುಗ ಶ್ರೀ ಮಂತ್ರಿಣೀದೇವಿಯನ್ನು ತ್ವರೆಗೊಳಿಸಿದಳು.

೯೨. ತರುವಾಯ ಶಕ್ತಿದೇವತೆಗಳಿಗೂ, ದೈತ್ಯರಿಗೂ ಮತ್ತೆ ಸಿಂದೊಗೆದ ಅಟ್ಟಹಾಸಧ್ವನಿಗಳಿಂದ ಎಂಟುದಿಕ್ಕುಗಳಲ್ಲಿರುವ ಪರ್ವತಗಳೂ ಒಡೆದುಹೋಗುವುವೋ ಎಂಬಂತೆ ಮರಳಿ ಕಾಳೆಗವು ಮೊದಲಾಯಿತು.

೯೩. ಆಗ ಉತ್ತಮೋತ್ತಮವಾದ ಮದ್ಯವನ್ನು ಕುಡಿದು ಕೆಂಪಡರಿದ ಕಂಗಳುಳ್ಳ ಶಕ್ತಿದೇವತೆಗಳೆಲ್ಲರೂ ಏಕಕಾಲದಲ್ಲಿಯೇ ಒಟ್ಟಾಗಿ ಆ ದೈತ್ಯರ ಮೇಲೆ ಬಿದ್ದರು.

ದ್ವಯೇನ ದ್ವಯಮಾರೇಜೇ ಶಕ್ತೀನಾಂ ಸಮರಶ್ರಿಯಾಂ ।
ಮದರಾಗೇಣ ಚಕ್ಷೂಂಷಿ ದೈತ್ಯರಕ್ತೇನ ಶಸ್ತ್ರಿಕಾಃ ॥ ೯೪ ॥
ತಥಾ ಬಭೂವ ತುಮುಲಂ ಯುದ್ಧಂ ಶಕ್ತಿಸುರದ್ವಿಷಾಂ ।
ಯಥಾ ಮೃತ್ಯುರಪಿ ತ್ರಸ್ತಃ ಕಾಂದಿಶೀಕತ್ವಮಾಗತಃ ॥ ೯೫ ॥
ಪ್ರಸ್ಖಲತ್ಪದವಿನ್ಯಾಸಾ ಮದೇನಾರಕ್ತದೃಷ್ಟಯಃ ।
ಸ್ಖಲದಕ್ಷರಸಂದರ್ಭ ವೀರಭಾಷಾರಸೋದ್ಧತಾಃ ॥
ಕದಂಬಗೋಲಕಾಕಾರ ಹೃಷ್ಟಸರ್ವಾಂಗಯಷ್ಟಯಃ ।
ಯುವರಾಜಸ್ಯ ಸೈನ್ಯಾನಿ ಶಕ್ತಯಃ ಸಮನಾಶಯನ್ ॥ ೯೬ ॥
ಅಕ್ಷೋಹಿಣೀ ಶತಂ ತತ್ರ ದಂಡಿನೀ ಸಮದಾರಯತ್ ।
ಅಕ್ಷೋಹಿಣೀಸಾರ್ಧಶತಂ ನಾಶಯಾಮಾಸ ಮಂತ್ರಿಣೀ ॥ ೯೭ ॥
ಅಶ್ವಾರೂಢಪ್ರಭೃತಯೋ ಮದಾರುಣವಿಲೋಚನಾಃ ।
ಅಕ್ಷೋಹಿಣೀಸಾರ್ಧಶತಂ ನಿನ್ಯುರಂತಕಮಂದಿರಂ ॥ ೯೮ ॥

---

೯೪. ಸಮರಲಕ್ಷ್ಮಿಯನ್ನು ಹೊಂದಿದ ಆ ಶಕ್ತಿಸಮೂಹದಲ್ಲಿ, ಮದದಿಂದ ಕೆಂಪಾಗಿದ್ದ ಶಕ್ತಿದೇವಿಯರ ಕಣ್ಣುಗಳೂ, ದೈತ್ಯರ ರಕ್ತದಿಂದ ತೊಯ್ದ ಅವರ ಕತ್ತಿಗಳೂ ಇವೆರಡೂ ಒಂದನ್ನೊಂದು ಹೋಲಿ ವಿರಾಜಿಸು ತ್ತಿದ್ದವು.

೯೫. ಮೃತ್ಯುದೇವತೆಯೂ ಹೆದರಿ ಓಡಿಹೋಗುವಷ್ಟುಮಟ್ಟಿನ ಭಯಂಕರ ರೀತಿಯಲ್ಲಿ, ಆ ಶಕ್ತಿದೇವಿಯರಿಗೂ ದೇವದ್ವೇಷಿಗಳಾದ ದಾನವರಿಗೂ ತುಮುಲಯುದ್ಧವು ನಡೆಯಿತು.

೯೬. ಆ ಸಮಯದಲ್ಲಿ ಜಾರುತ್ತಿರುವ ನಡಿಗೆಯುಳ್ಳವರೂ, ಮದ ದಿಂದ ಕೆಂಪಡರಿದ ಕಂಗಳುಳ್ಳವರೂ, ಎಡರುತ್ತಿರುವ ಅಕ್ಷರಗಳುಳ್ಳವ ರಾಗಿ ವೀರಾಲಾಪಗಳನ್ನು ಮಾಡುತ್ತಿರುವವರೂ, ಕದಂಬ ಗೋಲಕದಂತೆ ಉಬ್ಬಿದ ಸರ್ವಾಂಗಯಷ್ಟಿಯುಳ್ಳವರೂ ಆದ ಆ ಶಕ್ತಿದೇವಿಯರು ದೈತ್ಯಯುವರಾಜನಾದ ವಿಶುಕ್ರನ ಸೇನೆಯೆಲ್ಲವನ್ನೂ ನಾಶಗೊಳಿಸಿದರು.

೯೭. ಆಗ ರಣಭೂಮಿಯಲ್ಲಿ ಶ್ರೀ ದಂಡನಾಯಕಿಯು ದೈತ್ಯರ ನೂರು ಅಕ್ಷೋಹಿಣೀ ಸೇನೆಯನ್ನು ಸಿಗಿದುಹಾಕಿದಳು. ಮಂತ್ರಿಣೀ ದೇವಿಯು ಆ ದೈತ್ಯರ ನೂರೈವತ್ತು ಅಕ್ಷೋಹಿಣೀಸೇನೆಯನ್ನು ಧ್ವಂಸ ಗೊಳಿಸಿದಳು.

೯೮. ಮದದಿಂದ ಕೆಂಪಾದ ಕಣ್ಣುಗಳುಳ್ಳ ಅಶ್ವಾರೂಢೆಯೇ

**ಅಂಕುಶೇನಾತಿತೀಕ್ಷ್ಣೇನ ತುರಗಾರೋಹಿಣೀ ರಥೇ ।**
**ಉಲೂಕಜಿತಮುನ್ಮಥ್ಯ ಪರಲೋಕಾತಿಥಿಂ ವ್ಯಧಾತ್ ॥ ೯೯ ॥**
**ಸಂಪತ್ಕರೀಪ್ರಭೃತಯಃ ಶಕ್ತಿದಂಡಾಧಿನಾಯಿಕಾಃ ।**
**ಪುರುಷೇಣಮುಖಾನನ್ಯಾನ್ನವ ಯುದ್ಧೇ ವ್ಯದಾರಯನ್ ॥ ೧೦೦ ॥**
**ಅಸ್ತಂ ಗತೇ ಸವಿತರಿ ಧ್ವಸ್ತಸರ್ವಬಲಂ ತತಃ ।**
**ವಿಶುಕ್ರಂ ಯೋಧಯಾಮಾಸ ಶ್ಯಾಮಲಾ ಕೋಪಶಾಲಿನೀ ॥ ೧೦೧ ॥**
**ಅಸ್ತ್ರಪ್ರತ್ಯಸ್ತ್ರಮೋಕ್ಷೇಣ ಭೀಷಣೇನ ದಿವೌಕಸಾಂ ।**
**ಮಹತಾ ರಣಕೃತ್ಯೇನ ಯೋಧಯಾಮಾಸ ಮಂತ್ರಿಣೀ ॥ ೧೦೨ ॥**
**ಆಯುಧಾನಿ ಸುತೀಕ್ಷ್ಣಾನಿ ವಿಶುಕ್ರಸ್ಯ ಮಹೌಜಸಃ ।**
**ಕ್ರಮಶಃ ಖಂಡಯಂತೀ ಸಾ ಕೇತನಂ ರಥಸಾರಥಿಂ ॥**
**ಧನುರ್ಗುಣಂ ಧನುರ್ದಂಡಂ ಖಂಡಯಂತೀ ಶಿಲೀಮುಖೈಃ ॥ ೧೦೩ ॥**

---

ಮೊದಲಾದವರಾದರೋ ಆ ದಾನವರ ಉಳಿದ ನೂರೈವತ್ತು ಅಕ್ಷೋಹಿಣೀ ಸೇನೆಯನ್ನು ಯಮಪುರಿಗೆ ಸೇರಿಸಿದರು.

೯೯. ಇದಾದ ಬಳಿಕ ಅಶ್ವಾರೂಢಾದೇವಿಯು ಆ ಕಾಳೆಗದಲ್ಲಿ ಭಂಡಕುಮಾರನಾದ ಉಲೂಕಜಿತುವನ್ನು ಬಹು ಮೊನಚಾದ ಅಂಕುಶದಿಂದ ತಿವಿದು ಮರ್ದಿಸಿ ಪರಲೋಕದ ಅತಿಥಿಯನ್ನಾಗಿಮಾಡಿದಳು.

೧೦೦. ಶಕ್ತಿಸೇನೆಗಳ ದಂಡಾಧಿನಾಯಕಿಯರಾದ ಸಂಪತ್ಕರಿಯೇ ಮೊದಲಾದವರು ಪುರುಷೇಣನೇ ಮೊದಲಾದ ಉಳಿದ ಒಂಬತ್ತು ಮಂದಿ ದಾನವಕುಮಾರರೆಲ್ಲರನ್ನೂ ಆ ರಣರಂಗದಲ್ಲಿ ಸೀಳಿಹಾಕಿದರು.

೧೦೧. ಎಲೈ ಕುಂಭಸಂಭವನೇ! ಸೂರ್ಯನಸ್ತಮಿಸಿದ ತರುವಾಯ ಅತ್ತ ಕೋಪಶಾಲಿನಿಯಾದ ಶ್ರೀ ಶ್ಯಾಮಲೆಯು, ಸೈನ್ಯವೆಲ್ಲವೂ ನಾಶವಾಗಿ ಒಬ್ಬಂಟಿಗನಾಗಿದ್ದ ವಿಶುಕ್ರದಾನವನೊಡನೆ ಯುದ್ಧ ಮಾಡಿದಳು.

೧೦೨. ಆ ಮಂತ್ರಿನಾಥೆಯು ಅಸ್ತ್ರಕ್ಕೆ ಪ್ರತ್ಯಸ್ತ್ರವನ್ನು ಪ್ರಯೋಗಿಸಿ ದೇವತೆಗಳಿಗೂ ಭಯವಾಗುವಂತೆ ಆ ದಾನವನೊಡನೆ ಹೋರಾಡಿದಳು.

೧೦೩. ಮಹಾಪರಾಕ್ರಮಶಾಲಿಯಾದ ವಿಶುಕ್ರದಾನವನ ಮಹಾತೀಕ್ಷ್ಣವಾದ ಆಯುಧಗಳನ್ನು ಒಂದಾದ ಮೇಲೊಂದನ್ನಾಗಿ ತುಂಡರಿಸಿದ ಬಳಿಕ ಆ ಶಾಮಲಾದೇವಿಯು ಆ ದಾನವನ ರಥದ ಧ್ವಜವನ್ನೂ, ಆಮೇಲೆ ರಥ ಸಾರಥಿಯನ್ನೂ, ಅದಾದ ತರುವಾಯ ಅವನ ಬಿಲ್ಲಿನ

**ಅಸ್ತ್ರೇಣ ಬ್ರಹ್ಮಶಿರಸಾ ಜ್ವಲತ್ಪಾವಕರೋಚಿಷಾ ।**
**ವಿಶುಕ್ರಂ ಮರ್ದಯಾಮಾಸ ಸೋಽಪತಚ್ಛಿನ್ನವಿಗ್ರಹಃ ॥ ೧೦೪ ॥**
**ವಿಷಂಗಂ ಚ ಮಹಾದೈತ್ಯಂ ದಂಡನಾಥಾ ಮದೋದ್ಧತಾ ।**
**ಯೋಧಯಾಮಾಸ ಚಂಡೇನ ಮುಸಲೇನ ವಿನಿಷ್ಪತೀ ॥ ೧೦೫ ॥**
**ಸ ಚಾಪಿ ದುಷ್ಟೋ ದನುಜಃ ಕಾಲದಂಡನಿಭಾಂ ಗದಾಂ ।**
**ಉದ್ಯಮ್ಯ ಬಾಹುನಾ ಯುದ್ಧಂ ಚಕಾರಾಶೇಷಭೀಷಣಂ ॥ ೧೦೬ ॥**
**ಅನ್ಯೋನ್ಯಮಂಗ ಮೃದ್ನಂತೌ ಗದಾಯುದ್ಧಪ್ರವರ್ತಿನೌ ।**
**ಚಂಡಾಟ್ಟಹಾಸಮುಖರೌ ಪರಿಭ್ರಮಣಕಾರಿಣೌ ॥ ೧೦೭ ॥**
**ಕುರ್ವಾಣೌ ವಿವಿಧಾಶ್ಚಾರೀ ಘೂರ್ಣಂತೌ ತೂರ್ಣವೇಷ್ಟನೈಃ ।**
**ಅನ್ಯೋನ್ಯದಂಡಾಹನನಾನ್ಮೋಹಯಂತೌ ಮುಹುರ್ಮುಹುಃ ॥**

---

ನಾರಿಯನ್ನೂ, ಆಮೇಲೆ ಧನುರ್ದಂಡವನ್ನೂ ಕೂರಂಬುಗಳಿಂದ ಕ್ರಮವಾಗಿ ಖಂಡಿಸಿದಳು.

೧೦೪. ಬಳಿಕ ಆಕೆಯು ಪ್ರಜ್ವಲಿಸುತ್ತಿರುವ ಅಗ್ನಿಗೆ ಸಮಾನವಾದ ಬ್ರಹ್ಮಶಿರಾಸ್ತ್ರವನ್ನು ಪ್ರಯೋಗಿಸಿ ಆ ವಿಶುಕ್ರದೈತ್ಯನನ್ನು ಮರ್ದಿಸಲು ಅವನು ಕತ್ತರಿಸಿದ ದೇಹವುಳ್ಳವನಾಗಿ ನೆಲಕ್ಕುರುಳಿದನು.

೧೦೫. ಮಹಾಮದೋದ್ಧತೆಯಾದ ಶ್ರೀದಂಡನಾಥೆಯು ರಣರಂಗಕ್ಕೆ ನುಗ್ಗಿ ಹೊರಟು, ಮಹಾದೈತ್ಯನಾದ ವಿಷಂಗನೊಡನೆ ಪ್ರಚಂಡವಾದ ಮುಸಲಪ್ರಹಾರಗಳಿಂದ ಕಾಳಗಮಾಡತೊಡಗಿದಳು.

೧೦೬. ಆ ದುಷ್ಟದನುಜನೂಸಹ ಯಮದಂಡೋಪಮವಾದ ತನ್ನ ಗದೆಯನ್ನೆತ್ತಿದ ತೋಳುಗಳುಳ್ಳವನಾಗಿ ಆ ದೇವಿಯೊಡನೆ ಎಲ್ಲರಿಗೂ ಭಯವನ್ನುಂಟುಮಾಡುವಂತೆ ಕಾದಿದನು.

೧೦೭-೧೦೮. ಹೀಗೆ ಆ ವಿಷಂಗದಾನವನೂ, ಶ್ರೀ ದಂಡನಾಯಕಿಯೂ ಪರಸ್ಪರ ಗದಾಯುದ್ಧಕ್ಕೆ ತೊಡಗಿ ಪರಸ್ಪರವಾಗಿ ಮರ್ದಿಸುತ್ತ ಪ್ರಚಂಡವಾದ ಅಟ್ಟಹಾಸಮಾಡಿ ತಿರುಗುತ್ತಲೂ, ಬಗೆಬಗೆಯ ನಡೆಗಳನ್ನು ತೋರಿ ಹೋರುತ್ತಲೂ, ಜಾಗ್ರತೆಯಾಗಿ ಬಳಸಿಹೋಗುವುದರಿಂದಲೂ, ಅನ್ಯೋನ್ಯ ದಂಡಾಹತಿಗಳಿಂದ ಅಡಿಗಡಿಗೂ ಒಬ್ಬರನ್ನೊಬ್ಬರು ಮೂರ್ಛೆಗೊಳಿಸುತ್ತಲೂ ಇದ್ದರು.

ಅನ್ಯೋನ್ಯಪ್ರಹೃತೌ ರಂಧ್ರನಿರೀಕ್ಷಣಮಾಣೌ ಮದೋದ್ಧತೌ ।
ಮಹಾಮುಸಲದಂಡಾಗ್ರಘಟ್ಟನಕ್ಷೋಭಿತಾಂಬರೌ ॥ ೧೦೯ ॥
ಅಥಾರ್ಧರಾತ್ರಸಮಯಪರ್ಯಂತಂ ಕೃತಸಂಗರಾ ।
ಸಂಕ್ರುದ್ಧಾ ಹಂತುಮಾರೇಭೇ ವಿಷಂಗಂ ದಂಡನಾಯಿಕಾ ॥ ೧೧೦ ॥
ಸಾ ತನ್ಮೂರ್ಧ್ನಿ ನಿಮಗ್ನೇನ ಹಲೇನಾಕೃಷ್ಯ ವೈರಿಣಂ ।
ಕಠೋರಂ ತಾಡನಂ ಚಕ್ರೇ ಮುಸಲೇನಾಥ ಪೋತ್ರಿಣೀ ॥ ೧೧೧ ॥
ತತೋ ಮುಸಲಘಾತೇನ ತ್ಯಕ್ತಪ್ರಾಣೋ ಮಹಾಸುರಃ ।
ಚೂರ್ಣಿತೇನ ಶತಾಂಗೇನ ಸಮಂ ಭೂತಲಮಾಶ್ರಯತ್ ॥ ೧೧೨ ॥
ಇತಿ ಕೃತ್ವಾ ಮಹತ್ಕರ್ಮ ಮಂತ್ರಿಣೀದಂಡನಾಯಿಕೇ ।
ತತ್ರೈವ ತಂ ನಿಶಾಶೇಷಂ ನಿನ್ಯತುಃ ಸಹ ಶಕ್ತಿಭಿಃ ॥ ೧೧೩ ॥

---

೧೦೯. ಮದೋದ್ಧತರಾದ ಅವರಿಬ್ಬರೂ ಒಬ್ಬರನ್ನೊಬ್ಬರು ಹೊಡೆಯುತ್ತಲೂ, ಹೊಡೆಯಲವಕಾಶವನ್ನು ಕಾಯುತ್ತಲೂ ಯುದ್ಧ ಮಾಡುತ್ತಿದ್ದರು. ಇತರರಿಂದೆದುರಿಸಲಸಾಧ್ಯರಾದ ಆ ದಂಡಿನೀದೈತ್ಯ ಶೇಖರರೀರ್ವರೂ ಮಹಾಮುಸಲಗಳ ದಂಡಾಗ್ರಘಟ್ಟಣದಿಂದ ಗಗನವೇ ಕ್ಷೋಭೆಗೊಳ್ಳುವಂತೆ ಮಹತ್ತರವಾದ ಕಾಳೆಗವನ್ನು ಮಾಡಿದರು.

೧೧೦. ಎಲೈ ಕುಂಭೋದ್ಭವನೇ! ಆ ದಂಡನಾಯಕಿಯು ಈ ಪ್ರಕಾರ ಅರ್ಧರಾತ್ರಿಯವರೆಗೂ ಯುದ್ಧಮಾಡುತ್ತಿದ್ದು ತರುವಾಯ ಮಹಾಕ್ರುದ್ಧೆಯಾಗಿ ಆ ವಿಷಂಗದಾನವನನ್ನು ಹೊಡೆಯಲಾರಂಭಿಸಿದಳು.

೧೧೧. ಆ ದೇವಿಯು ಆ ದಾನವನ ಮಂಡೆಗೆ ಹಲಾಯುಧವನ್ನು ನಾಟಿಸಿ ಎಳೆದುಕೊಂಡು ಕೂಡಲೇ ಮುಸಲಾಯುಧದಿಂದ ಬಲವಾದ ಪೆಟ್ಟನ್ನಿಟ್ಟಳು.

೧೧೨. ಒಡನೆಯೇ ಅವನು ಆ ಮುಸಲಾಯುಧದ ಪೆಟ್ಟಿನಿಂದ ಪ್ರಾಣವನ್ನು ಬಿಟ್ಟು, ಪುಡಿಪುಡಿಯಾದ ತನ್ನ ರಥದೊಡನೆ ತಾನೂ ನೆಲಕ್ಕುರುಳಿ ಬಿದ್ದನು.

೧೧೩. ಈ ರೀತಿ ಆ ಮಂತ್ರಿಣೀ ದಂಡನಾಥೆಯರು ಮಹತ್ತರವಾದ ಯುದ್ಧವನ್ನೆಸಗಿ, ಬೆಳಗಾಗುವವರೆಗೂ ಶಕ್ತಿದೇವತೆಗಳೊಡನೆ ಆ ಸಮರಭೂಮಿಯಲ್ಲಿಯೇ ಇದ್ದರು.

ಸಾ ರಾತ್ರಿರಪಿ ಭಂಡಸ್ಯ ವ್ಯರಂಸೀತ್ಸಮಮಾಯುಷಾ ।
ರಣಶ್ರಾಂತಂ ನಿಜಂ ಸೈನ್ಯಂ ನಿನ್ಯತುಃ ಶಿಬಿರಂ ಪ್ರತಿ ॥ ೧೧೪ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ತ್ರಯೋವಿಂಶೋಽಧ್ಯಾಯಃ

॥ ಇತಿ ತೃತೀಯ ಯುದ್ಧ ದಿವಸಃ ॥

---

೧೧೪. ಅಂದಿನ ರಾತ್ರಿಯೂ ಸಹ ಭಂಡಾಸುರನ ಆಯುಸ್ಸಿನೊಡನೆ ತಾನೂ ಕಳೆದುಹೋಯಿತು. ಆಗ, ಆ ಈರ್ವರು ದೇವಿಯರೂ ಕಾಳಗ ದಿಂದ ಬಳಲಿದ್ದ ತಮ್ಮ ಸೇನೆಯನ್ನು ಶಿಬಿರಕ್ಕೆ ಕರೆದೊಯ್ದರು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಇಂತಿದು ಮೂರನೆಯ ಯುದ್ಧದಿವಸವು ॥

॥ ಶ್ರೀಃ ॥

## ಅಥ ಚತುರ್ವಿಂಶೋಽಧ್ಯಾಯಃ

[ಶ್ರೀಲಲಿತಾಭಂಡಾಸುರಯೋರ್ಯುದ್ಧಾನುವರ್ಣನಂ— ತಯೋರಸ್ತ್ರಪ್ರತ್ಯಸ್ತ್ರವರ್ಣನಂ— ಭಂಡವಧಶ್ಚ]

ಭಂಡಂ ವಿಶ್ವಸಮಸ್ತದಾನವಪತೀನಸ್ತ್ರೈಸ್ಸಮುತ್ಪಾದಿತಾನ್
ಪ್ರತ್ಯಸ್ತ್ರೈಸ್ಸಹಸೋತ್ಥಿತೈರನುಪಮೈರ್ಹಸ್ತಾಂಗುಳೀಸಂಭವೈಃ ।
ಹತ್ವಾನಂತಪರಾಕ್ರಮಾ ರಣತಲೇ ವಿಶ್ವೈಕಮಾತಾಂಬಿಕಾ
ಯಾಹ್ಯೇವಂ ಪರಶಕ್ತಿಭಿರ್ವಿಜಯತೇ ತಾಮೇವ ನಿತ್ಯಂ ಭಜೇ ॥

**ಅಗಸ್ತ್ಯಃ—**

**ಅಶ್ವಾನನ ಮಹಾಪ್ರಾಜ್ಞ ವರ್ಣಿತಂ ಮಂತ್ರಿಣೀಬಲಂ ।**
**ವಿಷಂಗಸ್ಯ ವಧೋ ಯುದ್ಧೇ ವರ್ಣಿತೋ ದಂಡನಾಥಯಾ ॥ ೧ ॥**
**ಶ್ರೀದೇವ್ಯಾಃ ಶ್ರೋತುಮಿಚ್ಛಾಮಿ ರಣಚಕ್ರೇ ಪರಾಕ್ರಮಂ ।**
**ಸೋದರಸ್ಯಾಪದಂ ದೃಷ್ಟ್ವಾ ಭಂಡಃ ಕಿಮಕರೋಚ್ಛುಚಾ ॥ ೨ ॥**
**ಕಥಂ ತಸ್ಯ ರಣೋತ್ಸಾಹಃ ಕೈಃ ಸಮಂ ಸಮಯುಧ್ಯತ ।**
**ಸಹಾಯಾಃ ಕೇಽಭವಂಸ್ತಸ್ಯ ಹತಭ್ರಾತೃತನೂಭುವಃ ॥ ೩ ॥**

---

### ಕನ್ನಡದ ಅನುವಾದ

[ಶ್ರೀ ಲಲಿತಾಭಂಡಾಸುರರ ಯುದ್ಧಾನುವರ್ಣನ— ಅವರ ಅಸ್ತ್ರಪ್ರತ್ಯಸ್ತ್ರವರ್ಣನ— ಭಂಡಾಸುರನ ವಧೆ]

೧. ಅಗಸ್ತ್ಯಮುನಿಯು ಕೇಳುತ್ತಾನೆ:—ಎಲೈ ಮಹಾಪ್ರಾಜ್ಞನಾದ ಅಶ್ವಾನನನೇ! ಶ್ರೀ ಮಂತ್ರಿಣೀದೇವಿಯ ಪರಾಕ್ರಮವನ್ನೂ, ಶ್ರೀ ದಂಡನಾಥಾದೇವಿಯು ಕಾಳಗದಲ್ಲಿ ವಿಷಂಗದಾನವನನ್ನು ಸಂಹರಿಸಿದ ಬಗೆಯನ್ನೂ ಬಣ್ಣಿಸಿ ಹೇಳಿದೆ.

೨. ಇನ್ನು, ಶ್ರೀ ಲಲಿತಾಪರಮೇಶ್ವರಿಯು ರಣಮಂಡಲದಲ್ಲಿ ತೋರಿದ ಪರಾಕ್ರಮವನ್ನು ಕೇಳಬಯಸುವೆನು. ಭಂಡಾಸುರನು ಸೋದರರ ಸಂಹಾರದ ಸುದ್ದಿಯನ್ನು ಕೇಳಿ ಖತಿಗೊಂಡು ಏನು ಮಾಡಿದನು?

೩. ಅವನ ರಣೋತ್ಸಾಹವೆಂತಹುದು? ಅವನು ಯಾರೊಡನೆ ಯುದ್ಧಮಾಡಿದನು? ಸೋದರರೂ, ಸುತರೂ ಮಡಿದು ಅಸಹಾಯನಾದ ಆ ದಾನವೇಶ್ವರನಿಗೆ ಸಹಾಯಕರಾದವರಾರು?

ಶ್ರೀ ಹಯಗ್ರೀವಃ—

**ಇದಂ ಶೃಣು ಮಹಾಪ್ರಾಜ್ಞ ಸರ್ವಪಾಪನಿಕೃಂತನಮ್ ।**
**ಲಲಿತಾಚರಿತಂ ಪುಣ್ಯಮಣಿಮಾದಿಗುಣಪ್ರದಂ ।** ॥ ೪ ॥
**ವಿಷುವಾಯನಕಾಲೇಷು ಪುಣ್ಯೇಷು ಸಮಯೇಷು ಚ ।**
**ಸಿದ್ಧಿದಂ ಸರ್ವಪಾಪಘ್ನಂ ಕೀರ್ತಿತಂ ಪಂಚಪರ್ವಸು** ॥ ೫ ॥
**ತಥಾ ಹತೌ ರಣೋತ್ಸಾಹೌ ಶ್ರುತ್ವಾ ನಿಜಸಹೋದರೌ ।**
**ಶೋಕೇನ ಮಹತಾವಿಷ್ಟೋ ಭಂಡಃ ಪ್ರವಿಲಲಾಪ ಸಃ** ॥ ೬ ॥
**ವಿಕೀರ್ಣಕೇಶೋ ಧರಣೌ ಮೂರ್ಚ್ಛಿತಃ ಪತಿತಸ್ತದಾ ।**
**ನ ಲೇಭೇ ಕಿಂಚಿದಾಶ್ವಾಸಂ ಭ್ರಾತೃವ್ಯಸನಕರ್ಶಿತಃ** ॥ ೭ ॥
**ಪುನಃ ಪುನಶ್ಚ ಪ್ರಲಪನ್ ಕುಟಿಲಾಕ್ಷೇಣ ಭೂರಿಶಃ ।**
**ಆಶ್ವಾಸ್ಯಮಾನಃ ಶೋಕೇನ ಮುಕ್ತಃ ಕ್ರೋಧಮವಾಪ ಸಃ** ॥ ೮ ॥

---

೪. ಹಯಗ್ರೀವಮುನಿಯು ಹೇಳುತ್ತಾನೆ:—ಎಲೈ ಮಹಾಪ್ರಾಜ್ಞನಾದ ಅಗಸ್ತ್ಯಮುನಿಯೇ! ಎಲ್ಲ ಪಾಪಗಳನ್ನೂ ಕಳೆಯುವಂತಹುದೂ, ಪುಣ್ಯಕರವಾದುದೂ, ಅಣಿಮಾದ್ಯಷ್ಟಸಿದ್ಧಿಪ್ರದವೂ ಆದ ಶ್ರೀ ಲಲಿತಾದೇವಿಯ ಈ ಚರಿತ್ರೆಯನ್ನು ಆಲಿಸು.

೫. ವಿಷುವತ್ಪುಣ್ಯಕಾಲಗಳಲ್ಲಿಯೂ, ಉತ್ತರಾಯಣ ದಕ್ಷಿಣಾಯನ ಪುಣ್ಯಕಾಲಗಳಲ್ಲಿಯೂ, ಪಂಚಪರ್ವದಿನಗಳಲ್ಲಿಯೂ ಈ ಚರಿತ್ರೆಯನ್ನು ಹೇಳಿಕೊಂಡುದಾದರೆ, ಸಿದ್ಧಿದಾಯಕವೂ, ಸಕಲಪಾಪವಿನಾಶಕವೂ ಆಗುವುದೆಂದು ಹೇಳಲಾಗಿದೆ.

೬. ಆ ಪ್ರಕಾರ ರಣರಂಗದಲ್ಲಿ ರಣೋತ್ಸಾಹಿಗಳಾದ ತನ್ನ ಸಹೋದರರೀರ್ವರೂ ಹತರಾದ ವಾರ್ತೆಯನ್ನು ಕೇಳಿ ಭಂಡದಾನವೇಶ್ವರನು ಮಹತ್ತರವಾದ ದುಃಖದಿಂದ ಪೀಡಿತನಾಗಿ ಬಹಳವಾಗಿ ಪ್ರಲಾಪಿಸಿದನು.

೭. ತಮ್ಮಂದಿರು ಮಡಿದುದರಿಂದುಂಟಾದ ದುಃಖದಿಂದ ಪೀಡಿತನಾದ ಆ ದಾನವನು ಕೂದಲುಗಳನ್ನು ಕೆದರಿಕೊಂಡು ಮೂರ್ಛಿತನಾಗಿ ನೆಲಕ್ಕೆ ಬಿದ್ದು ಸ್ವಲ್ಪವೂ ಸಮಾಧಾನವನ್ನು ಪಡೆಯಲೇ ಇಲ್ಲ.

೮. ಬಾರಿಬಾರಿಗೂ ಅಳುತ್ತಿದ್ದ ಅವನನ್ನು ಸೇನಾನಾಯಕನಾದ ಕುಟಿಲಾಕ್ಷನು ಬಹಳವಾಗಿ ಸಮಾಧಾನಮಾಡಿದ ತರುವಾಯ ದುಃಖವನ್ನು ತೊರೆದು ಕ್ರೋಧವನ್ನು ತಾಳಿದನು.

ಫಾಲಂ ವಹನ್ನತಿಕ್ರೂರಂ ಭ್ರುಮುದ್ಭ್ರುಕುಟಿಭೀಷಣಂ ।
ಅಂಗಾರಪಾಟಲಂ ಚಕ್ಷುರ್ನಿಶ್ಶ್ವಸನ್ ಕೃಷ್ಣಸರ್ಪವತ್ ॥ ೯ ॥
ಕ್ಷಿಪ್ರಂ ಮುಹುರ್ಮುಹುಃ ಸ್ಪೃಷ್ಟ್ವಾ ಧುನಾನಃ ಕರವಾಲಿಕಾಂ ।
ಕ್ರೋಧಹುಂಕಾರಮಾತನ್ವನ್ ಗರ್ಜನ್ಪ್ರತ್ಯಾಪತಮೇಘವತ್ ।
ಉವಾಚ ಕುಟಿಲಾಕ್ಷಂ ದ್ರಾಕ್ಸಮಸ್ತಪೃತನಾಪತಿಂ ॥ ೧೦ ॥
ಯಯೈವ ದುಷ್ಟಯಾ ಮಾಯಾಬಲಾದ್ಯುದ್ಧೇ ವಿನಾಶಿತಾಃ ।
ಭ್ರಾತರೋ ಮಮ ಪುತ್ರಾಶ್ಚ ಸೇನಾನಾಥಾಃ ಸಹಸ್ರಶಃ ॥ ೧೧ ॥
ತಸ್ಯಾಃ ಸ್ತ್ರಿಯೋಽತಿಧೂರ್ತಾಯಾಃ ಕಂಠೋತ್ಥೈಃ ಶೋಣಿತದ್ರವೈಃ ।
ಭ್ರಾತೃಪುತ್ರಮಹಾಶೋಕವಹ್ನಿಂ ನಿರ್ವಾಪಯಾಮ್ಯಹಂ ।
ಗಚ್ಛ ರೇ ಕುಟಿಲಾಕ್ಷ ತ್ವಂ ಸಜ್ಜೀಕುರು ಪತಾಕಿನೀಂ ॥ ೧೨ ॥
ಇತ್ಯುಕ್ತ್ವಾ ಕಠಿನಂ ವರ್ಮ ವಜ್ರಪಾತಸಹಂ ಮಹತ್ ।
ದಧಾನೋ ಭುಜಮಧ್ಯೇನ ಬಧ್ನನ್ಪೃಷ್ಠೇ ಮಹೇಷುಧಿ ॥ ೧೩ ॥
ಉದ್ದಾಮಮೌರ್ವೀನಿಸ್ವಾನ ಕಠೋರಂ ಧನ್ವ ಧಾರಯನ್ ।
ಕಾಲಾಗ್ನಿರಿವ ಸಂಕ್ರುದ್ಧೋ ನಿರ್ಜಗಾಮ ನಿಜಾತ್ಪುರಾತ್ ॥ ೧೪ ॥

---

೯-೧೦. ಆಗ, ಆ ಭಂಡದೈತ್ಯನು ಕೋಪದಿಂದಲುಗುತ್ತಿರುವ ಹುಬ್ಬುಗಂಟಿನಿಂದ ಭಯಂಕರವಾದ ತನ್ನ ಹಣೆಯನ್ನು ಇನ್ನೂ ಕ್ರೂರವಾಗಿಸಿಕೊಂಡು, ಕೆಂಡದಂತೆ ಕೆಂಪಾದ ಕಂಗಳುಳ್ಳವನಾಗಿ ಮಹಾ ಕೃಷ್ಣಸರ್ಪದಂತೆ ನಿಟ್ಟುಸಿರಿಡುತ್ತ ಕ್ಷಿಪ್ರವಾಗಿಯೇ ತನ್ನ ಕರವಾಲವನ್ನು ಅಡಿಗಡಿಗೂ ಹಿಡಿದು ಝಳಿಪಿಸಿ, ಕೆರಳಿ ಹುಂಕಾರಮಾಡಿ, ಪ್ರಳಯಕಾಲದ ಮುಗಿಲನೋಪಾದಿಯಲ್ಲಿ ಗರ್ಜಿಸುತ್ತ, ದಾನವಸೇನೆಗಳಿಗೆಲ್ಲ ಅಧಿಪತಿಯಾದ ಕುಟಿಲಾಕ್ಷನನ್ನು ಕುರಿತು ಈ ರೀತಿ ನುಡಿದನು:—

೧೧-೧೨. "ಎಲವೋ ಕುಟಿಲಾಕ್ಷ! ದುಷ್ಟೆಯಾದ ಯಾವಳು ತನ್ನ ಮಾಯಾಬಲದಿಂದ ನನ್ನ ತಮ್ಮಂದಿರನ್ನೂ, ನನ್ನ ಪುತ್ರರನ್ನೂ, ಸಾವಿರಾರು ಮಂದಿ ಸೇನಾಧಿಪತಿಗಳನ್ನೂ ಕೊಂದಳೋ, ಅಂತಹ ಮಹಾಧೂರ್ತೆಯಾದ ಆ ಸ್ತ್ರೀಯ ಕಂಠಪ್ರದೇಶದಿಂದ ಹೊರಚಿಮ್ಮಿದ ರಕ್ತಜಲದಿಂದಲೇ ನಾನು, ಭ್ರಾತೃಪುತ್ರಾದಿಗಳ ಮರಣದಿಂದುಂಟಾದ ಈ ಮಹಾಶೋಕಾಗ್ನಿಯನ್ನು ಶಾಂತಗೊಳಿಸುವೆನು. ಆದುದರಿಂದ ನಡೆ, ಹೊರಡು; ಹೋಗಿ ಸೇನೆಯೆಲ್ಲವನ್ನೂ ಸಿದ್ಧಗೊಳಿಸು."

೧೩-೧೪. ಎಲೈ ಕುಂಭಸಂಭವನೇ! ಭಂಡಾಸುರನು ಈ ರೀತಿ

ತಾಲಜಂಘಾದಿಕೈಃ ಸಾರ್ಧಂ ಪುರದ್ವಾರನಿವೇಶಿತೈಃ ।
ಚತುರ್ಭಿರ್ಧೃತಶಸ್ತ್ರೌಘೈರ್ಧೃತವರ್ಮಭಿರುದ್ಧತೈಃ ॥ ೧೫ ॥
ಪಂಚತ್ರಿಂಶಚ್ಚಮೂನಾಥೈಃ ಕುಟಿಲಾಕ್ಷಪುರಸ್ಸರೈಃ ।
ಸರ್ವಸೇನಾಪತೀಂದ್ರೇಣ ಕುಟಿಲಾಕ್ಷೇಣ ಸಕ್ರುಧಾ ॥ ೧೬ ॥
ಮಿಲಿತ್ವಾ ತೇನ ಭಂಡೇನ ಚತ್ವಾರಿಂಶಚ್ಚಮೂವರಾಃ ।
ದೀಪ್ತಾಯುಧಾ ದೀಪ್ತಕೇಶಾ ನಿರ್ಜಗ್ಮುರ್ದೀಪ್ತಕಂಕಟಾಃ ॥ ೧೭ ॥
ದ್ವಿಸಹಸ್ರಾಕ್ಷೌಹಿಣೀನಾಂ ಪಂಚಾಶೀತಿಃ ಶತಾಧಿಕಾ ।
ತಮನ್ವಗಾ ಯಯಾವೇಕಹೇಲಯಾ ಮಥಿತುಂ ದ್ವಿಷಃ ॥ ೧೮ ॥
ಭಂಡಾಸುರೇ ವಿನಿರ್ಯಾತೇ ಸರ್ವಸೈನಿಕಸಂಕುಲೇ ।
ಶೂನ್ಯಕೇ ನಗರೇ ತತ್ರ ಸ್ತ್ರೀಮಾತ್ರಮವಶೇಷಿತಮ್ ॥ ೧೯ ॥

---

ನುಡಿದು, ಆ ಬಳಿಕ ವಜ್ರಾಯುಧದ ಪೆಟ್ಟುಗಳನ್ನೂ ಸಹಿಸುವಂತಹ ಕವಚವನ್ನು ವಕ್ಷಸ್ಥಳದಲ್ಲಿ ಧರಿಸಿ, ಬೆನ್ನಿಗೆ ಬತ್ತಳಿಕೆಯನ್ನು ಬಿಗಿದು ಕಟ್ಟಿ, ಮಹತ್ತರವಾದ ಶಿಂಜನಿಯ ಟಣತ್ಕಾರದಿಂದ ಕಠೋರವಾಗಿರುವ ಧನುಸ್ಸನ್ನು ಧರಿಸಿ ಪ್ರಳಯಾಗ್ನಿಯಂತೆ ಪಟ್ಟಣದಿಂದ ಹೊರಹೊರಟನು.

೧೫–೧೭. ಆ ಶೂನ್ಯಪುರದ ದ್ವಾರಪ್ರದೇಶದಲ್ಲಿ ನಿಯುಕ್ತರಾಗಿ, ಶಸ್ತ್ರಸಮೂಹಗಳನ್ನೊಳಗೊಂಡು, ಕವಚವನ್ನು ತೊಟ್ಟು ಉದ್ಧತರಾಗಿದ್ದ ತಾಲಜಂಘನೇ ಮೊದಲಾದ ನಾಲ್ವರು ದಾನವರೊಡನೆಯೂ, ಕುಟಿಲಾಕ್ಷನೇ ಮೊದಲಾದ ಮೂವತ್ತೈದು ಸೇನಾನಾಯಕರೊಡನೆಯೂ ಕೂಡಿ, ಆ ದಾನವಸಾರ್ವಭೌಮನು ಪಟ್ಟಣದಿಂದ ಹೊರಟನು. ಸಮಸ್ತ ದಾನವಸೇನೆಗಳಿಗೂ ನಾಯಕನಾದ ಕುಟಿಲಾಕ್ಷನೂ, ಬಹುವಾದ ಕೋಪದಿಂದ ಕೆರಳಿದ ಆ ಭಂಡದಾನವನೂ ಸೇರಿ ನಾಲ್ವತ್ತು ಮಂದಿಯಾದ ಆ ದಾನವಸೇನಾನಾಯಕರು ಹೊಳೆಯುತ್ತಿರುವ ಆಯುಧಗಳೂ, ಬೆಳಗುತ್ತಿರುವ ಕೇಶಗಳೂ, ಕವಚಗಳೂ ಉಳ್ಳವರಾಗಿ ನಗರದಿಂದ ರಣರಂಗಕ್ಕೆ ಹೊರಟರು.

೧೮. ಆಗ ದಾನವರ ಎರಡು ಸಾವಿರದ ನೂರೆಂಬತ್ತೈದು ಅಕ್ಷೋಹಿಣೀಸೇನೆಗಳು ಶತ್ರುಗಳನ್ನು ಮಥಿಸಲು ಒಟ್ಟುಗೂಡಿ ಆ ದಾನವನನ್ನು ಹಿಂಬಾಲಿಸಿ ಹೊರಟವು.

೧೯. ಹೀಗೆ ಭಂಡದಾನವನು ಸಮಸ್ತ ಸೇನಾಸಮೇತನಾಗಿ ಹೊರಟುಬರಲು ಶೂನ್ಯನಗರದಲ್ಲಿ ಹೆಂಗಸರು ಮಾತ್ರವೇ ಉಳಿದರು.

**ಆಭೀಲಂ ನಾಮ ದೈತ್ಯೇಂದ್ರೋ ರಥವರ್ಯಂ ಮಹಾರಥಃ ।**
**ಸಹಸ್ರಯುಗ್ಯಸಿಂಹಾಢ್ಯಮಾರುರೋಹ ರಣೋದ್ಧತಃ ॥ ೨೦ ॥**
**ತತ್ಕರೇ ಪ್ರವಿಜಜ್ವಾಲ ಕಾಲಾಗ್ನಿರಿವ ದೀಪ್ತಿಮಾನ್ ।**
**ಯಾತನಾನಾಮವಾನ್ ಖಡ್ಗಶ್ಚಂದ್ರಹಾಸಸಮಾಕೃತಿಃ ॥ ೨೧ ॥**
**ಇತಸ್ತತಶ್ಚಲಂತೀನಾಂ ಸೇನಾನಾಂ ಧೂಲಿರುದ್ಧತಾ ।**
**ವೋಢುಂ ತಸ್ಯಾ ಭರಂ ಭೂಮಿರಕ್ಷಮೇವ ದಿವಂ ಯಯೌ ॥ ೨೨ ॥**
**ಕೇಚಿದ್ಭೂಮೇರಪರ್ಯಾಪ್ತಾಃ ಪ್ರಚೇಲುರ್ವ್ಯೋಮವರ್ತ್ಮನಾ ।**
**ಕೇಷಾಂಚಿತ್ಸ್ಕಂಧಮಾರೂಢಾಃ ಕೇಚಿಚ್ಚೇಲುರ್ಮಹಾಬಲಾಃ॥೨೩॥**
**ನ ದಿಕ್ಷು ನ ಚ ಭೂಚಕ್ರೇ ನ ವ್ಯೋಮ್ನಿ ನ ಚ ತೇ ಮಮುಃ ।**
**ದುಃಖದುಃಖೇನ ತೇ ಚೇಲುರನ್ಯೋನ್ಯಾಶ್ಲೇಷಪೀಡಿತಾಃ ॥ ೨೪ ॥**
**ಅತ್ಯಂತಸೇನಾಸಂಮರ್ದಾದ್ರಥಚಕ್ರೇ ವಿಚೂರ್ಣಿತಾಃ ।**
**ಕೇಚಿತ್ಪಾದೇನ ನಾಗಾನಾಂ ಮರ್ದಿತಾ ನ್ಯಪತನ್ ಭುವಿ ॥ ೨೫ ॥**

---

೨೦. ಆಗ ಮಹಾರಥಿಕನೂ, ರಣಭಯಂಕರನೂ ಆದ ಆ ಭಂಡನು ಸಾವಿರ ಹಗ್ಗಗಳಿಂದ ಸಾವಿರ ಸಿಂಹಗಳು ಹೂಡಿದ ಅಭೀಲವೆಂದು ಹೆಸರಾದ ರಥಶ್ರೇಷ್ಠವನ್ನೇರಿ ಹೊರಟನು.

೨೧. ಆ ಸಮಯದಲ್ಲಿ ಪ್ರಳಯಾಗ್ನಿಸಮಾನವಾದುದೂ, ಚಂದ್ರಹಾಸೋಪಮವಾದುದೂ ಆದ ಯಾತನವೆಂಬ ಖಡ್ಗವು ಆ ದಾನವನ ಕೈಯಲ್ಲಿ ಪ್ರಜ್ವಲಿಸುತ್ತಿದ್ದಿತು.

೨೨. ದಾನವಸೇನೆಯು ಅತ್ತಿತ್ತ ಚಲಿಸುತ್ತಿರಲು, ಅದರಿಂದ ಧೂಳಿಯೆದ್ದು ಭೂಮಿಯು ಅದರ ಭಾರವನ್ನು ಭರಿಸಲಾರದಾಯಿತೋ ಎಂಬಂತೆ ಆ ಧೂಳಿನ ರೂಪದಲ್ಲಿಯೇ ಗಗನವನ್ನು ಸಾರಿತು.

೨೩. ಆ ದಾನವನ ಮಹಾಸೇನೆಯಲ್ಲಿ ಕೆಲಸೈನಿಕರಿಗೆ ಭೂಮಿಯಲ್ಲಿ ಸ್ಥಳವೇ ದೊರೆಯದೆ ಅವರೆಲ್ಲರೂ ಆಕಾಶಮಾರ್ಗದಲ್ಲಿ ಹೊರಟರು. ಕೆಲವರು ಇತರ ದಾನವವೀರರ ಹೆಗಲೇರಿ ಹೊರಟರು.

೨೪. ದಿಕ್ಕುಗಳಲ್ಲಿ, ಭೂಮಂಡಲದಲ್ಲಿ, ಗಗನದಲ್ಲಿ ಎಲ್ಲಿಯೂ ಹಿಡಿಸದೆ ಒಬ್ಬರನ್ನೊಬ್ಬರು ತಬ್ಬಿ ಅವರು ಕಷ್ಟದಿಂದ ಮುಂದುವರಿದರು.

೨೫. ಹೀಗೆ ನುಗ್ಗಿಬರುತ್ತಿರುವ ಆ ಸೇನೆಯಲ್ಲಿ ಕೆಲವರು ಬಹಳ ಇಕ್ಕಟ್ಟಾದುದರಿಂದ ರಥಚಕ್ರಗಳಿಗೆ ಸಿಕ್ಕಿ ಪುಡಿಪುಡಿಯಾದರು. ಕೆಲವರು ಆನೆಗಳ ಕಾಲುಗಳಿಗೆ ಸಿಕ್ಕಿ ನಜ್ಜುಗುಜ್ಜಾಗಿ ನೆಲಕ್ಕುರುಳಿದರು.

ಇತ್ಥಂ ಪ್ರಚಲತಾ ತೇನ ಸಮಂ ಸರ್ವೈಶ್ಚ ಸೈನಿಕೈಃ ।
ವಜ್ರನಿಷ್ಪೇಷಸದೃಶಃ ಸಿಂಹನಾದೋ ವ್ಯಧೀಯತ ॥ ೨೬ ॥
ತೇನಾತ್ಯಂತಕಠೋರೇಣ ಸಿಂಹನಾದೇನ ಭೂಯಸಾ ।
ಭಂಡದೈತ್ಯಮುಖೋತ್ಥೇನ ವಿದೀರ್ಣಮಭವಜ್ಜಗತ್ ॥ ೨೭ ॥
ಸಾಗರಾಃ ಶೋಷಮಾಪನ್ನಾಶ್ಚಂದ್ರಾರ್ಕೌ ಪ್ರಪಲಾಯಿತೌ । [೨೮॥
ಉಡೂನಿ ನ್ಯಪತನ್ ವ್ಯೋಮ್ನೋ ಭೂಮಿರ್ಡೋಲಾಯಿತಾಭವತ್ ॥
ದಿಙ್ನಾಗಾಶ್ಚಾಭವಂಸ್ತ್ರಸ್ತಾ ಮೂರ್ಚ್ಛಿತಾಶ್ಚ ದಿವೌಕಸಃ ।
ಶಕ್ತೀನಾಂ ಕಟಕಂ ಚಾಭೂದಕಾಂಡತ್ರಾಸವಿಹ್ವಲಂ ॥ ೨೯ ॥
ಪ್ರಾಣಾನ್ ಸಂಧಾರಯಾಮಾಸುಃ ಕಥಮಪ್ಯಶ್ವವಾರಣಾಃ ।
ಶಕ್ತಯೋ ಭಯವಿಭ್ರಷ್ಟಾನ್ಯಾಯುಧಾನಿ ಪುನರ್ದಧುಃ ॥ ೩೦ ॥
ವಹ್ನಿಪ್ರಾಕಾರವಲಯಂ ಪ್ರಶಾಂತಂ ಪುನರುತ್ಥಿತಂ ।
ದೈತ್ಯೇಂದ್ರಸಿಂಹನಾದೇನ ಚಮೂನಾಥಧನುಃಸ್ವನೈಃ ॥ ೩೧ ॥

---

೨೬. ಈ ಪ್ರಕಾರ, ಸಮಸ್ತ ಸೇನೆಗಳೊಡಗೂಡಿ ಬರುತ್ತಿರುವ ಆ ಭಂಡದಾನವನೂ ಆ ಸಮಯದಲ್ಲಿಯೇ ವಜ್ರಪಾತೋಪಮವಾದ ಭಯಂಕರ ಸಿಂಹನಾದವನ್ನು ಮಾಡಿದನು.

೨೭. ಕುಂಭಸಂಭವಾ! ಭಂಡಾಸುರನ ಮುಖದಿಂದ ಹೊರಟ ಆ ಭಯಂಕರಸಿಂಹನಾದದಿಂದ ಬ್ರಹ್ಮಾಂಡವೇ ಒಡೆದುಹೋಯಿತು.

೨೮-೨೯. ಸಾಗರಗಳೆಲ್ಲವೂ ಬತ್ತಿಹೋದವು. ಚಂದ್ರಸೂರ್ಯರು ಪಲಾಯನವಾದರು. ಗಗನದಿಂದ ತಾರೆಗಳೆಲ್ಲವೂ ನೆಲಕ್ಕುರುಳಿದವು. ಭೂಮಿಯು ತೊಟ್ಟಿಲು ತೂಗಿದಂತೆ ತೂಗಿತು. ದಿಗ್ಗಜಗಳು ಬೆದರಿದವು. ದೇವತೆಗಳೆಲ್ಲರೂ ಮೂರ್ಛೆಗೆ ಸಂದರು. ಶಕ್ತಿಸೇನೆಯ ಶಿಬಿರವು ಇದ್ದಕ್ಕಿದ್ದಂತೆ ಭಯಗೊಂಡು ತತ್ತಳಿಸಿಹೋಯಿತು.

೩೦. ಶಕ್ತಿಸೇನೆಯ ಆನೆ ಕುದುರೆಗಳೆಲ್ಲವೂ ಹೇಗೆ ಹೇಗೆಯೋ ಪ್ರಾಣಗಳನ್ನು ಬಿಗಿಹಿಡಿದುಕೊಂಡವು. ಶಕ್ತಿದೇವಿಯರೆಲ್ಲರೂ ಭಯದಿಂದ ತತ್ತಳಿಸಿದುದುರ ಸಲುವಾಗಿ ಕೆಳಕ್ಕೆ ಜಾರಿಬಿದ್ದ ತಂತಮ್ಮ ಆಯುಧಗಳನ್ನು ಮತ್ತೆ ಕೈಗೆ ತೆಗೆದುಕೊಂಡರು.

೩೧. ದೈತ್ಯೇಂದ್ರನಾದ ಭಂಡಾಸುರನ ಸಿಂಹಗರ್ಜನೆಯಿಂದಲೂ, ದೈತ್ಯಸೇನಾಧಿಪತಿಗಳ ಧನುಷ್ಟಂಕಾರಧ್ವನಿಗಳಿಂದಲೂ ಪ್ರಶಾಂತವಾಗಿದ್ದ ವಹ್ನಿಪ್ರಾಕಾರವಲಯವು ಮತ್ತೆ ಎಚ್ಚೆತ್ತು ಪ್ರಜ್ವಲಿಸತೊಡಗಿತು.

ಕ್ರಂದನ್ಯೈಶ್ಚಾಪಿ ಯೋಧಾನಾಂ ಜಗಚ್ಛಾಬ್ದಮಿವಾಭವತ್ ।
ತೇನ ನಾದೇನ ಮಹತಾ ಭಂಡದೈತ್ಯವಿನಿರ್ಗಮಂ ।
ನಿಶ್ಚಿತ್ಯ ಲಲಿತಾದೇವೀ ಸ್ವಯಂ ಯೋದ್ಧುಂ ಪ್ರಚಕ್ರಮೇ ॥ ೩೨ ॥
ಅಶಕ್ಯಮನ್ಯಶಕ್ತೀನಾಮಾಕಲಯ್ಯ ಮಹಾಹವಂ ।
ಭಂಡದೈತ್ಯೇನ ದುಷ್ಟೇನ ಸ್ವಯಮುದ್ಯೋಗಮಾಸ್ಥಿತಾ ॥ ೩೩ ॥
ಚಕ್ರರಾಜರಥಸ್ತಸ್ಯಾಃ ಪ್ರಚಚಾಲ ಮಹೋದಯಃ ।
ಚತುರ್ವೇದಮಹಾಚಕ್ರಃ ಪುರುಷಾರ್ಥಮಹಾಹಯಃ ॥ ೩೪ ॥
ಆನಂದಧ್ವಜಸಂಯುಕ್ತೋ ನವಭಿಃ ಪರ್ವಭಿರ್ಯುತಃ ।
ನವಪರ್ವಸ್ಥ ದೇವೀಭಿರಾಕೃಷ್ಟಗುರುಧನ್ವಭಿಃ ॥ ೩೫ ॥
ಪರಾರ್ಧಾಧಿಕಸಂಖ್ಯಾಕ ಪರಿವಾರಸಮೃದ್ಧಿಭಿಃ ।
ಪರ್ವಸ್ಥಾನೇಷು ಸರ್ವೇಷು ಪಾಲಿತಃ ಸರ್ವತೋದಿಶಂ ॥ ೩೬ ॥
ದಶಯೋಜನಮುನ್ನಮ್ರಶ್ಚತುರ್ಯೋಜನವಿಸ್ತೃತಃ ।
ಮಹಾರಾಜ್ಞೀಚಕ್ರರಾಜರಥೇಂದ್ರಃ ಪ್ರಚಲನ್ ಬಭೌ ॥ ೩೭ ॥

---

೩೨. ಆ ಮಹತ್ತರನಾದವನ್ನು ಕೇಳಿ, ಭಂಡಾಸುರನೇ ಸಾಕ್ಷಾತ್ತಾಗಿ ಬಂದಿರುವನೆಂದು ನಿಶ್ಚಯಿಸಿ, ಶ್ರೀ ಲಲಿತಾದೇವಿಯು ತಾನೇ ಸಾಕ್ಷಾತ್ತಾಗಿ ಅವನೊಡನೆ ಯುದ್ಧಮಾಡಬಯಸಿ ಹೊರಟಳು.

೩೩. ಆ ದೇವಿಯು, ಭಂಡದೈತ್ಯನೊಡನೆ ಮಹಾಯುದ್ಧವನ್ನು ಹೂಡಲು ಇತರ ಶಕ್ತಿದೇವಿಯರಿಗೆ ಅಸಾಧ್ಯವೆಂದು ತಿಳಿದೇ ಆ ದುಷ್ಟನೊಡನೆ ತಾನೇ ಯುದ್ಧಮಾಡಲನುವಾದಳು.

೩೪–೩೫. ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ಚಕ್ರಗಳನ್ನೊಳಗೊಂಡು ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥರೂಪಗಳಾದ ಅಶ್ವಗಳನ್ನು ಹೂಡಿ ಮಹಾವಿಜಯಸಾಧಕವಾಗಿದ್ದ ಆ ಶ್ರೀದೇವಿಯ ಚಕ್ರರಾಜರಥವು ಆನಂದವೆಂಬ ಧ್ವಜಸಮನ್ವಿತವಾಗಿ, ನವಪರ್ವಗಳನ್ನೊಳಗೊಂಡು, ಶಿಂಜಿನಿಯನ್ನು ಸೆಳೆದು ಬಿಲ್ಲುಗಳನ್ನು ಹಿಡಿದಿರುವ ನವಪರ್ವನಿವಾಸಿನಿಯರಾದ ಶಕ್ತಿದೇವಿಯರೊಡಗೂಡಿ, ಚಲಿಸತೊಡಗಿತು.

೩೬-೩೭. ಸುತ್ತಲೂ ಅಸಂಖ್ಯಾಕಪರಿವಾರದೇವತೆಗಳಿಂದ ನಿಬಿಡೀಕೃತವಾಗಿ, ಸಮಸ್ತಪರ್ವಸ್ಥಾನಗಳಲ್ಲಿಯೂ ದಶದಿಶೆಗಳ ರಕ್ಷಣೆಯುಳ್ಳುದಾಗಿ ಹತ್ತು ಯೋಜನಗಳ ಎತ್ತರವೂ, ನಾಲ್ಕು ಯೋಜನದಗಲವೂ

ತಸ್ಮಿನ್ ಪ್ರಚಲಿತೇ ಜುಷ್ಟಂ ಶ್ಯಾಮಯಾ ದಂಡನಾಥಯಾ ।
ಗೇಯಚಕ್ರಂ ಚಚಾಲಾಗ್ರೇ ಕಿರಿಚಕ್ರಂ ಚ ಪೃಷ್ಠತಃ ॥ ೩೮ ॥
ಅನ್ಯಾಸಾಮಪಿ ಶಕ್ತೀನಾಂ ವಾಹನಾನಿ ಪರಾರ್ಧಶಃ ।
ನೃಸಿಂಹೋಷ್ಟ್ರನರವ್ಯಾಲಮೃಗಪಕ್ಷಿಹಯಾತ್ಮನಾ ।
ಗಜಭೇರುಂಡಶರಭವ್ಯಾಘ್ರವಾತಮೃಗಾತ್ಮನಾ ॥ ೩೯ ॥
ಏತಾದೃಶಾಸ್ತು ತಿರ್ಯಂಚೋಽಪ್ಯನ್ಯೇ ವಾಹನತಾಂ ಗತಾಃ ।
ಊಹುರುಚ್ಚಾವಚಾಃ ಶಕ್ತೀರ್ಭಂಡಾಸುರವಧೋದ್ಯತಾಃ ॥ ೪೦ ॥
ಯೋಜನಾಮಾತ್ರವಿಸ್ತಾರಮಪಿ ತದ್ದ್ವಾರಮಂಡಲಂ ।
ವಹ್ನಿಪ್ರಾಕಾರಚಕ್ರಸ್ಯ ನ ಪರ್ಯಾಪ್ತಂ ಚಮೂತತೇಃ ॥ ೪೧ ॥
ಜ್ವಾಲಾಮಾಲಿನಿಕಾ ನಿತ್ಯಾ ದ್ವಾರಸ್ಯಾತ್ಯಂತವಿಸ್ತೃತಿಂ ।
ವಿತತಾನ ಸಮಸ್ತಾನಾಂ ಶಕ್ತೀನಾಂ ನಿರ್ಗಮೈಷಿಣೀ ॥ ೪೨ ॥
ಅಥ ಸಾ ಜಗತಾಂ ಮಾತಾ ಮಹಾರಾಜ್ಞೀ ಮಹೋದಯಾ ।
ನಿರ್ಜಗಾಮಾಗ್ನಿವರಣದ್ವಾರಾತ್ತೀವ್ರಪ್ರತಾಪಿನೀ ॥ ೪೩ ॥

---

ಉಳ್ಳ ಆ ಮಹಾರಾಜ್ಞಿಯ ಶ್ರೀಚಕ್ರರಾಜರಥವು ರಣಾಭಿಮುಖವಾಗಿ ಚಲಿಸಿ ಕಂಗೊಳಿಸಿತು.

೩೮. ಮೊದಲು ಶ್ರೀಮಂತ್ರಿಣಿಯಾದ ಶ್ಯಾಮಾಂಬಿಕೆಯ ಗೇಯಚಕ್ರರಥವೂ, ಅದರ ಹಿಂದೆಯೇ ಶ್ರೀ ದಂಡನಾಥೆಯ ಕಿರಿಚಕ್ರರಥವೂ ಶ್ರೀಚಕ್ರರಾಜರಥವನ್ನು ಹಿಂಬಾಲಿಸಿ ಹೊರಟವು.

೩೯. ಅವರ ಹಿಂದೆಯೇ ನೃಸಿಂಹ, ಉಷ್ಟ್ರ, ನರ, ವ್ಯಾಲ, ಮೃಗ, ಪಕ್ಷಿ, ಹಯ, ಗಜ, ಭೇರುಂಡ, ಶರಭ, ವ್ಯಾಘ್ರ, ವಾತಮೃಗಗಳಾದಿಯಾದ ಅಪರಿಮಿತ ಸಂಖ್ಯಾಕವಾದ ಶಕ್ತಿವಾಹನಗಳು ಹೊರಟವು.

೪೦. ಈ ಪ್ರಕಾರ ತಿರ್ಯಗ್ಜಂತುಗಳೂ ಸಹ ಭಂಡಾಸುರನ ಸಂಹಾರದಲ್ಲಿ ತೊಡಗಿ, ಉತ್ತಮೋತ್ತಮರಾದ ಆ ಶಕ್ತಿದೇವಿಯರಿಗೆ ವಾಹನಗಳಾಗಿ ಅವರನ್ನು ಹೊತ್ತು ಹೊರಟವು.

೪೧. ಒಂದು ಯೋಜನದಗಲವೇ ಇದ್ದ ಆ ವಹ್ನಿಪ್ರಾಕಾರದ ದ್ವಾರಮಂಡಲವು ಶಕ್ತಿಸೇನಾಮಂಡಲದ ಚಲನಕ್ಕೆ ಸಾಕಾಗಲಿಲ್ಲ.

೪೨. ಆಗ ನಿತ್ಯದೇವಿಯಾದ ಶ್ರೀ ಜ್ವಾಲಾಮಾಲಿನಿಯು ಸಮಸ್ತ ಶಕ್ತಿದೇವತೆಗಳಿಗೂ ಹೊರಹೊರಡಲನುವಾಗುವಂತೆ ಆ ದ್ವಾರವನ್ನು ಮತ್ತಷ್ಟು ವಿಶಾಲವಾಗಿ ವಿಸ್ತರಿಸಿದಳು.

೪೩. ಬಳಿಕ ಮಹಾಪರಾಕ್ರಮಶಾಲಿನಿಯೂ, ಮಹೋದಯೆಯೂ

**ದೇವದುಂದುಭಯೋ ನೇದುಃ ಪತಿತಾಃ ಪುಷ್ಪವೃಷ್ಟಯಃ ।**
**ಮಹಾಮುಕ್ತಾತಪತ್ರಂ ತು ದಿವಿ ದೀಪ್ತಮದೃಶ್ಯತ ॥ ೪೪ ॥**
**ನಿಮಿತ್ತಾನಿ ಪ್ರಸನ್ನಾನಿ ಸೂಚಕಾನಿ ಜಯಶ್ರಿಯಃ ।**
**ಅಭವಂಲ್ಲಲಿತಾಸೈನ್ಯ ಉತ್ಪಾತಾಸ್ತು ದ್ವಿಷಾಂ ಬಲೇ ॥ ೪೫ ॥**
**ತತಃ ಪ್ರವವೃತೇ ಯುದ್ಧಂ ಸೇನಯೋರುಭಯೋರಪಿ ।**
**ಪ್ರಸರ್ಪದ್ವಿಶಿಖಸ್ತೋಮಬದ್ಧಾಂಧತಮಸಚ್ಛಟಂ ॥ ೪೬ ॥**
**ಹನ್ಯಮಾನಗಜಸ್ತೋಮಸ್ರುತಶೋಣಿತಸಿಂಧುಭಿಃ ।**
**ಹ್ರಿಯಮಾಣಶರಚ್ಛಿನ್ನದೈತ್ಯಶ್ವೇತಾತಪತ್ರಕಂ ॥ ೪೭ ॥**
**ನ ದಿಶೋ ನ ನಭೋಭಾಗೋ ನ ಭೂಮಿರ್ನ ಚ ಕಿಂಚನ [ ೪೮ ॥**
**ದೃಷ್ಟಂ ತು ಕೇವಲಂ ಧೃಷ್ಟಂ ರಜೋಮಾತ್ರಂ ಚಮೂತ್ಥಿತಂ ॥**

---

ಆದ ಶ್ರೀ ಲಲಿತಾಪರಮೇಶ್ವರಿಯು ಆ ವಹ್ನಿಪ್ರಕಾರವಲಯದ ದ್ವಾರ ಪ್ರದೇಶದಿಂದ ಹೊರಟುಬಂದಳು.

೪೪. ಆಗ ದೇವದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿಗಳಾದವು. ಶ್ರೀ ಚಕ್ರರಾಜರಥದ ಮಹಾಮುಕ್ತಾತಪತ್ರವು ಗಗನಾಂಗಣದಲ್ಲಿ ಬೆಳಗಿತು.

೪೫. ಶ್ರೀದೇವಿಯ ಸೇನೆಯಲ್ಲಿ ವಿಜಯೈಶ್ವರ್ಯ ಸೂಚಕವಾದ ಶುಭಶಕುನಗಳೂ, ದೇವದ್ವೇಷಿಗಳಾದ ದೈತ್ಯರ ಸೇನೆಗಳಲ್ಲಿ ದುರ್ನಿಮಿತ್ತಗಳೂ ಉಂಟಾದವು.

೪೬. ಇದಾದ ಬಳಿಕ, ಅತ್ತಿತ್ತ ವೇಗವಾಗಿ ಚಲಿಸುತ್ತಿರುವ ಬಾಣಸಮೂಹಗಳಿಂದ ಗಗನವೇ ಮುಚ್ಚಿ ಕತ್ತಲು ಕವಿಯುವ ಹಾಗೆ ಆ ಶಕ್ತಿ ದಾನವಸೇನೆಗಳೆರಡಕ್ಕೂ ಮಹತ್ತರವಾದ ಕಾಳೆಗವು ಮೊದಲಾಯಿತು.

೪೭. ಆ ಯುದ್ಧದಲ್ಲಿ ಕೊಂದು ಕೆಡಹಲಾಗುತ್ತಿದ್ದ ಆನೆಗಳ ಗುಂಪುಗಳಿಂದ ಹೊರಟ ರಕ್ತನದಿಗಳಲ್ಲಿ ಆ ದೈತ್ಯರ ಬೆಳುಗೊಡೆಗಳೆಲ್ಲವೂ ಮುರಿದುರುಳಿ ಕೊಚ್ಚಿಹೋಗುತ್ತಿದ್ದವು.

೪೮. ಆಗ ದಿಕ್ಕುಗಳಾಗಲಿ, ಗಗನವಾಗಲಿ, ಭೂಮಿಯಾಗಲಿ ಯಾವುದೊಂದೂ ಕಣ್ಣಿಗೆ ಕಾಣಿಸದೆ ಎಲ್ಲೆಲ್ಲಿಯೂ ಉಭಯಸೇನೆಗಳಿಂದೆದ್ದ ಭಯಂಕರ ಧೂಳಿಯು ಮಾತ್ರ ಕಾಣಿಸುವುದಾಯಿತು.

ನೃತ್ಯತ್ಕಬಂಧನಿವಹ ವಿಧೂತತಟಪಾದಪಾ ।
ದೈತ್ಯಕೇಶಶತಸ್ರಸ್ತ ಶೈವಾಲಕಲಿಕೋಜ್ಜ್ವಲಾ ॥ ೪೯ ॥
ಶ್ವೇತಾತಪತ್ರವಲಯು ಶ್ವೇತಪಂಕಜಭಾಸುರಾ ।
ಚಕ್ರಕೃತ್ತಕರಿಗ್ರಾವು ಪಾದಕೂರ್ಮ ಪರಂಪರಾ ।
ಶಕ್ತಿಧ್ವಸ್ತಮಹಾದೈತ್ಯ ಗಜಗಂಡಶಿಲೋಚ್ಚಯಾ ॥ ೫೦ ॥
ವಿಲೂನಕಾಂಡೈಃ ಪತಿತೈಃ ಸಫೇನಾಲೀವ ಚಾಮರೈಃ ।
ತೀಕ್ಷ್ಣಾಸಿವಲ್ಲರೀಜಾಲ ನಿಬಿಡೀಕೃತತೀರಭೂಃ ॥ ೫೧ ॥
ದೈತ್ಯವೀರೇಕ್ಷಣಶ್ರೇಣಿ ಶುಕ್ತಿಸಂಪುಟಭಾಸುರಾ ।
ದೈತ್ಯವಾಹನಸಂಘಾತ ನಕ್ರಮೀನಶತಾಕುಲಾ ।
ಪ್ರಾವಹಚ್ಛೋಣಿತನದೀ ಸೇನಯೋರ್ಯುಧ್ಯಮಾನಯೋಃ ॥ ೫೨ ॥
ಇತ್ಥಂ ಪ್ರವವೃತೇ ಯುದ್ಧಂ ಮೃತ್ಯೋಶ್ಚ ತ್ರಾಸಕಾರಕಂ ।
ಚತುರ್ಥೇ ಯುದ್ಧದಿವಸೇ ಪ್ರಾತರಾರಭ್ಯ ಭೀಷಣಂ ।
ಪ್ರಹರದ್ವಯಪರ್ಯಂತಂ.ಸೇನಯೋರುಭಯೋರಪಿ ॥ ೫೩ ॥

---

೪೯. ಉಭಯ ಸೇನೆಗಳಿಗೂ ಹೀಗೆ ಯುದ್ಧವು ಮೊದಲಾಗಲು, ಮಹತ್ತರವಾದ ಶೋಣಿತನದಿಯು ಹರಿಯಿತು. ಅದು ಕುಣಿಯುತ್ತಿರುವ ಕಬಂಧಸಮೂಹಗಳಿಂದ ಕಿತ್ತೊಗೆದ ತೀರವೃಕ್ಷಗಳುಳ್ಳದಾಗಿದ್ದಿತು. ದೈತ್ಯರ ತಲೆಯಿಂದ ಜಾರಿದ ಅಸಂಖ್ಯಾಕ ಕೇಶರಾಶಿಗಳೆಂಬ ಪಾಚಿಯ ಪೊದೆಗಳಿಂದ ಆ ರಕ್ತವಾಹಿನಿಯು ಉಜ್ಜ್ವಲವಾಗಿ ಬೆಳಗುತ್ತಿದ್ದಿತು.

೫೦. ಬೆಳುಗೊಡೆಗಳ ಗುಂಪುಗಳೆಂಬ ಬೆಳುದಾವರೆಗಳಿಂದ ಬೆಳ್ಳನೆ ಬೆಳಗಿ ಚಕ್ರಾಯುಧಗಳಿಂದ ಕತ್ತರಿಸಿಹಾಕಿದ ಆನೆಹಿಂಡಿನ ಕಾಲುಗಳೆಂಬ ಕೂರ್ಮಗಳ ಸಾಲುಗಳಿಂದೊಪ್ಪಿ ಆ ಮಹಾನದಿಯು, ಶಕ್ತಿದೇವಿಯರು ಧ್ವಂಸಗೊಳಿಸಿದ ದೈತ್ಯರ ವಾಹನಗಳಾದ ಗಜಗಳ ಗಂಡಸ್ಥಳಗಳೆಂಬ ಬಂಡೆಗಳಿಂದ ಕೂಡಿ ಭಯಂಕರವಾಗಿದ್ದಿತು.

೫೧–೫೨. ಹಿಡಿಗೋಲುಗಳು ಕತ್ತರಿಸಿಬಿದ್ದ ಚಾಮರಗಳೆಂಬ ನೊರೆಯೊಡಗೂಡಿ, ತೀಕ್ಷ್ಣವಾದ ಖಡ್ಗಲತೆಗಳ ಸಮೂಹಗಳಿಂದ ತುಂಬಿದ ತೀರಪ್ರದೇಶವುಳ್ಳುದಾಗಿ, ದೈತ್ಯವೀರರ ಕಣ್ಣಸಾಲುಗಳೆಂಬ ಮುತ್ತಿನ ಚಿಪ್ಪುಗಳಿಂದ ತುಂಬಿ ದೈತ್ಯರ ವಾಹನಗಳೆಂಬ ಸಾವಿರಾರು ಮೀನುಮೊಸಳೆಗಳಿಂದ ಕಿಕ್ಕಿರಿದು ಆ ರಕ್ತಮಹಾನದಿಯು ಹೊಳೆದು ಹರಿಯುತ್ತಿದ್ದಿತು.

೫೩. ಹೀಗೆ ಆ ಶಕ್ತಿದಾನವಸೇನೆಗಳಿಗೆರಡಕ್ಕೂ ಮೃತ್ಯುದೇವತೆಗೇ

ತತ್ರ ಶ್ರೀಲಲಿತಾಯಾಶ್ಚ ಭಂಡಸ್ಯಾಪ್ಯಭವದ್ರಣಃ ।
ಅಸ್ತ್ರಪ್ರತ್ಯಸ್ತ್ರಸಂಕ್ಷೋಭತುಮುಲೀಕೃತದಿಕ್ತಟಃ ।
ಧನುರ್ಜ್ಯಾಜಾತಟಂಕಾರ ಹುಂಕಾರೈರತಿಭೀಷಣಃ ॥ ೫೪ ॥
ತೂಣೀರವದನಾತ್ಕರ್ಷನ್ ಸಂದಧಾನಶ್ಚ ಧನ್ವನಿ ।
ವಿಮುಂಚನ್ ವಿಶಿಖಾನ್ ಪಾಣಿಃ ಸರ್ವದಾಽದೃಶ್ಯತಾಹವೇ ।
ಹಸ್ತಲಾಘವವೇಗೇನ ನ ಪ್ರಾಜ್ಞಾಯತ ಕಿಂಚನ ॥ ೫೫ ॥
ಮಹಾರಾಜ್ಞೀಕರಾಂಭೋಜವ್ಯಾಪಾರಃ ಶರಮೋಕ್ಷಣೇ ।
ಸಂಧಾನೇ ತ್ವೇಕಧಾ ತಸ್ಯಾ ದಶಧಾ ಚಾಪನಿರ್ಗಮೇ ॥ ೫೬ ॥
ಶತಧಾ ಗಗನೇ ದೈತ್ಯಸೈನ್ಯಪ್ರಾಪ್ತೌ ಸಹಸ್ರಧಾ । [೫೭ ॥
ದೈತ್ಯಾಂಗಸಂಗೇ ಸಂಪ್ರಾಪ್ತಾಃ ಕೋಟಿಸಂಖ್ಯಾಃ ಶಿಲೀಮುಖಾಃ ॥
ಶರಾಂಧಕಾರಂ ಸೃಜತೀ ಭಿಂದಂತೀ ರೋದಸೀ ಶರೈಃ ।
ಮರ್ಮಾಭಿನತ್ಪ್ರಚಂಡಸ್ಯ ಮಹಾರಾಜ್ಞೀ ಮಹೇಷುಭಿಃ ॥ ೫೮ ॥

---

ಹೆದರಿಕೆಯನ್ನುಂಟುಮಾಡುವಂತಹ ಭಯಂಕರಯುದ್ಧವು ಮೊದಲಾಗಿ ಆ ನಾಲ್ಕನೆಯ ದಿನದ ಬೆಳಿಗ್ಗೆ ಎರಡು ಪ್ರಹರಗಳವರೆಗೂ ನಡೆಯಿತು.

೫೪. ಆ ಸಮಯದಲ್ಲಿ, ಶ್ರೀ ಲಲಿತಾದೇವಿಗೂ ಭಂಡಾಸುರನಿಗೂ ಅಸ್ತ್ರಪ್ರತ್ಯಸ್ತ್ರಪ್ರಯೋಗದಿಂದ ದಶದಿಶೆಗಳೆಲ್ಲವೂ ಕ್ಷೋಭೆಗೊಂಡು ಇಕ್ಕಟ್ಟಾಗುವಂತಹುದೂ, ಧನುಸ್ಸಿನ ಶಿಂಜಿನಿಯನ್ನೆಳೆಯುವಾಗಣ ಟಂಕಾರ ಹುಂಕಾರಧ್ವನಿಗಳಿಂದ ಮಹಾಭಯಂಕರವಾದುದೂ ಆದ ಮಹಾಯುದ್ಧವು ಮೊದಲಾಯಿತು.

೫೫. ಆ ಯುದ್ಧದಲ್ಲಿ ಬತ್ತಳಿಕೆಯಿಂದ ಬಾಣಗಳನ್ನು ವೇಗವಾಗಿ ಸೆಳೆದುಕೊಂಡು ಬಿಲ್ಲಿನಲ್ಲಿ ಹೂಡಿ ಸಂತತವಾಗಿ ಬಿಡುತ್ತಿದ್ದ ಆ ಲಲಿತಾಂಬಿಕೆಯ ಹಸ್ತವೊಂದೇ ಕಾಣಿಸುತ್ತಿದ್ದಿತಾಗಲಿ, ಆಕೆಯ ಹಸ್ತಲಾಘವದ ವೇಗದಿಂದ ಏನೊಂದೂ ತಿಳಿಯದೆ ಹೋಯಿತು.

೫೬–೫೭. ಆ ಮಹಾರಾಜ್ಞಿಯ ಕರಕಮಲ ವ್ಯಾಪಾರವು ಶರಮೋಕ್ಷಣ ಸಮಯದಲ್ಲಿಯೂ, ಸಂಧಾನ ಸಮಯದಲ್ಲಿಯೂ ಒಂದೇ ಆದರೂ, ಬಾಣವು ಹೊರಹೊರಟಾಗ, ಹತ್ತಾಗಿಯೂ, ಗಗನಾಂಗಣದಲ್ಲಿ ಅದೇ ಸಾವಿರವಾಗಿಯೂ, ದೈತ್ಯರ ಶರೀರಗಳನ್ನು ಹೊಗುವಾಗ ಅದೇ ಕೋಟಿ ಸಂಖ್ಯೆಯಾಗಿಯೂ ಶೋಭಿಸುತ್ತಿದ್ದಿತು.

೫೮. ಹೀಗೆ, ಮಹಾರಾಜ್ಞಿಯಾದ ಶ್ರೀ ಲಲಿತಾದೇವಿಯು, ಬಾಣ

ತತಃ ಕೋಪಾರುಣಂ ನೇತ್ರಂ ವಹನ್ ಭಂಡಃ ಸ ದಾನವಃ ।
ವವರ್ಷ ಶರಜಾಲೇನ ಮಹತಾ ಲಲಿತೇಶ್ವರೀಂ ॥ ೫೯ ॥
ಅಂಧತಾಮಿಸ್ರಕಂ ನಾಮ ಮಹಾಸ್ತ್ರಂ ಪ್ರಮುಮೋಚ ಸಃ ।
ಮಹಾತರಣಿಬಾಣೇನ ತಂ ನುನೋದ ಮಹೇಶ್ವರೀ ॥ ೬೦ ॥
ಪಾಷಂಡಾಸ್ತ್ರಂ ಮಹಾವೀರೋ ಭಂಡಃ ಪ್ರಮುಮುಚೇ ರಣೇ ।
ಗಾಯತ್ರ್ಯಸ್ತ್ರಂ ತಸ್ಯ ನುತ್ತ್ಯೈ ಸಸ್ಮಾರ ಜಗದಂಬಿಕಾ ॥ ೬೧ ॥
ಅಂಧಾಸ್ತ್ರಮಸೃಜದ್ಭಂಡಃ ಶಕ್ತಿದೃಷ್ಟಿವಿನಾಶಕಂ ।
ಚಕ್ಷುಷ್ಮತೀ ಮಹಾಸ್ತ್ರೇಣ ಶಮಯಾಮಾಸ ತತ್ಪ್ರಸೂಃ ॥ ೬೨ ॥
ಶಕ್ತಿನಾಶಾಭಿಧಂ ಭಂಡೋ ಮುಮೋಚಾಸ್ತ್ರಂ ಮಹಾರಣೇ ।
ವಿಶ್ವಾವಸೋರಥಾಸ್ತ್ರೇಣ ತಸ್ಯ ದರ್ಪಮಪಾಕರೋತ್ ॥ ೬೩ ॥

---

ಗಳಿಂದೆತ್ತೆತ್ತಲೂ ಕತ್ತಲು ಕವಿಸಿ, ಆ ಬಾಣಗಳಿಂದಲೇ ಭೂಮ್ಯಂತರಿಕ್ಷ ಗಳನ್ನೊಡೆಯುತ್ತ, ಪ್ರಚಂಡನಾದ ಆ ಭಂಡದಾನವನ ಮರ್ಮಗಳೆಲ್ಲ ವನ್ನೂ ದೊಡ್ಡ ದೊಡ್ಡ ಬಾಣಗಳಿಂದ ಭೇದಿಸುತ್ತ ಕಾಳೆಗವಾಡಿದಳು.

೫೯. ತರುವಾಯ, ಆ ಭಂಡದಾನವನು ಕೋಪದಿಂದ ಕಣ್ಣುಗಳನ್ನು ಕೆಂಪಾಗಿಸಿಕೊಂಡು ಶ್ರೀ ಲಲಿತಾಪರಮೇಶ್ವರಿಯ ಮೇಲೆ ಮಹತ್ತರವಾದ ಬಾಣತಂಡವನ್ನು ಸುರಿಸಿದನು.

೬೦. ಆ ದಾನವನು ಮೊದಲು ಅಂಧತಾಮಿಸ್ರವೆಂಬ ಮಹಾಸ್ತ್ರ ವನ್ನು ಆ ದೇವಿಯ ಮೇಲೆ ಪ್ರಯೋಗಿಸಲು ಅದನ್ನಾಕೆಯು ಮಹಾ ತರಣಿ ಬಾಣದಿಂದ ನೊಂದಿಸಿದಳು.

೬೧. ಮಹಾವೀರನಾದ ಭಂಡಾಸುರನು ಪಾಷಂಡಾಸ್ತ್ರವನ್ನು ಪ್ರಯೋಗಿಸಿದನು. ಜಗದಂಬಿಕೆಯು ಆ ಮಹಾಸ್ತ್ರವನ್ನು ನಾಶಗೊಳಿಸಲು ಗಾಯತ್ರ್ಯಸ್ತ್ರವನ್ನು ಸ್ಮರಿಸಿ ಅದನ್ನು ಖಂಡಿಸಿದಳು.

೬೨. ಬಳಿಕ ಭಂಡನು ಶಕ್ತಿದೇವತೆಗಳೆಲ್ಲರ ದೃಷ್ಟಿಯನ್ನೂ ಕಳೆಯುವ ಅಂಧಾಸ್ತ್ರವನ್ನು ಬಿಟ್ಟನು. ಜಗದಂಬಿಕೆಯು ಚಕ್ಷುಷ್ಮತ್ಯಸ್ತ್ರ ವನ್ನು ಪ್ರಯೋಗಿಸಿ ಅದನ್ನು ಶಮನಗೊಳಿಸಿದಳು.

೬೩. ತರುವಾಯ ಆ ದೈತ್ಯನು ಆ ಮಹಾಯುದ್ಧದಲ್ಲಿ ಶಕ್ತಿನಾಶಕ ವೆಂಬ ಅಸ್ತ್ರವನ್ನು ಪ್ರಯೋಗಿಸಲು, ಶ್ರೀದೇವಿಯು ವಿಶ್ವಾವಸ್ವಸ್ತ್ರವನ್ನು ಪ್ರಯೋಗಿಸಿ ಅದರ ದರ್ಪವನ್ನಡಗಿಸಿದಳು.

**ಅಂತಕಾಸ್ತ್ರಂ ಸಸರ್ಜೋಚ್ಚೈಃ ಸಂಕ್ರುದ್ಧೋ ಭಂಡದಾನವಃ ।**
**ಮಹಾಮೃತ್ಯುಂಜಯಾಸ್ತ್ರೇಣ ನಾಶಯಾಮಾಸ ತದ್ಬಲಂ ॥ ೬೪ ॥**
**ಸರ್ವಾಸ್ತ್ರಸ್ಮೃತಿನಾಶಾಖ್ಯಮಸ್ತ್ರಂ ಭಂಡೋಽವ್ಯಮುಂಚತ ।**
**ಧಾರಣಾಸ್ತ್ರೇಣ ಚಕ್ರೇಶೀ ತದ್ಭಯಂ ಸಮನಾಶಯತ್ ॥ ೬೫ ॥**
**ಭಯಾಸ್ತ್ರಮಸೃಜದ್ಭಂಡೋ ಶಕ್ತೀನಾಂ ಭಯದಾಯಕಂ ।**
**ಅಭಯಂಕರಮೈಂದ್ರಾಸ್ತ್ರಂ ಮುಮುಚೇ ಜಗದಂಬಿಕಾ ॥ ೬೬ ॥**
**ಮಹಾರೋಗಾಸ್ತ್ರಮಸೃಜಚ್ಛಕ್ತಿಸೇನಾಸು ದಾನವಃ । [ ೬೭ ॥**
**ರಾಜಯಕ್ಷ್ಮಾದಯೋ ರೋಗಾಸ್ತತೋಽಭೂವನ್ ಸಹಸ್ರಶಃ ॥**
**ತನ್ನಿವಾರಣಸಿದ್ಧ್ಯರ್ಥಂ ಲಲಿತಾಪರಮೇಶ್ವರೀ । [ ೬೮ ॥**
**ನಾಮತ್ರಯಮಹಾಮಂತ್ರಂ ಮಹಾಸ್ತ್ರಂ ಸಂಮುಮೋಚ ಹ ॥**
**ಅಚ್ಯುತಶ್ಚಾಪ್ಯನಂತಶ್ಚ ಗೋವಿಂದಸ್ತ್ವಚ್ಛರೋತ್ಥಿತಾಃ ।**
**ಹುಂಕಾರಮಾತ್ರನಿರ್ದಗ್ಧರೋಗಾಸ್ತಾಮನಮನ್ಮುದಾ ॥ ೬೯ ॥**

---

೬೪. ಇದನ್ನು ಕಂಡು ಭಂಡನು ಕೋಪದಿಂದ ಕೆರಳಿ ಮಹತ್ತರವಾದ ಅಂತಕಾಸ್ತ್ರವನ್ನೆಸೆದನು. ಜಗದಂಬಿಕೆಯು, ಮಹಾಮೃತ್ಯುಂಜಯಾಸ್ತ್ರವನ್ನೆಸೆದು ಅದರ ಬಲವನ್ನು ನಾಶಗೊಳಿಸಿದಳು.

೬೫. ಆಗ, ಭಂಡದೈತ್ಯನು ಸರ್ವಾಸ್ತ್ರಸ್ಮೃತಿನಾಶಕವೆಂಬ ಅಸ್ತ್ರವನ್ನು ಪ್ರಯೋಗಿಸಿದನು. ಶ್ರೀಚಕ್ರೇಶ್ವರಿಯಾದ ಶ್ರೀಲಲಿತಾಂಬಿಕೆಯು ಧಾರಣಾಸ್ತ್ರಮೋಕ್ಷಣದಿಂದ ಅದರ ಭಯವನ್ನು ನಿವಾರಿಸಿದಳು.

೬೬. ತರುವಾಯ, ಆ ದಾನವನು ಶಕ್ತಿದೇವಿಯರಿಗೆಲ್ಲ ಭಯದಾಯಕವಾದ ಭಯಾಸ್ತ್ರವನ್ನು ಪ್ರಯೋಗಿಸಲು, ಜಗದಂಬಿಕೆಯು ಅಭಯಂಕರವಾದ ಐಂದ್ರಾಸ್ತ್ರವನ್ನೆಸೆದಳು.

೬೭. ಬಳಿಕ ಆ ದೈತ್ಯನು ಶಕ್ತಿಸೇನೆಗಳ ಮೇಲೆ ಮಹಾರೋಗಾಸ್ತ್ರವನ್ನೆಸೆಯಲು, ಅದರಿಂದ ರಾಜಯಕ್ಷ್ಮವೇ ಮೊದಲಾದ ಸಾವಿರಾರು ರೋಗಗಳುಂಟಾದವು.

೬೮. ಶ್ರೀ ಲಲಿತಾಪರಮೇಶ್ವರಿಯು ಆ ಮಹಾರೋಗಾಸ್ತ್ರವನ್ನು ನಿವಾರಿಸಲೋಸುಗ ನಾಮತ್ರಯಮಂತ್ರವೆಂಬ ಮಹಾಸ್ತ್ರವನ್ನು ಬಿಟ್ಟಳು.

೬೯. ಆ ಮಹಾಸ್ತ್ರಪ್ರಭಾವದಿಂದ ಅಚ್ಯುತನೂ, ಅನಂತನೂ, ಗೋವಿಂದನೂ ಉತ್ಪನ್ನರಾದರು. ಅವರು ಮೂವರೂ ಒಂದಾವೃತ್ತಿ ಹುಂಕಾರಮಾಡಿ ಶಕ್ತಿಸೇನೆಗಳಲ್ಲಿ ಹರಡಿದ್ದ ಆ ಸಮಸ್ತರೋಗಗಳನ್ನೂ

ನತ್ವಾ ಚ ತಾಂ ಮಹೇಶಾನೀಂ ತದ್ಭಕ್ತವ್ಯಾಧಿಮರ್ದನಂ ॥ ೭೦ ॥
ವಿಧಾತುಂ ತ್ರಿಷು ಲೋಕೇಷು ನಿಯುಕ್ತಾಃ ಸ್ವಂ ಪದಂ ಯಯುಃ ॥
ಆಯುರ್ನಾಶನಮಸ್ತ್ರಂ ತು ಮುಕ್ತವಾನ್ ಭಂಡದಾನವಃ ।
ಕಾಲಸಂಕರ್ಷಿಣೀರೂಪಮಸ್ತ್ರಂ ರಾಜ್ಞೀ ವ್ಯಮುಂಚತ ॥ ೭೧ ॥
ಮಹಾಸುರಾಸ್ತ್ರಮುದ್ದಾಮಂ ವ್ಯಸೃಜದ್ಭಂಡದಾನವಃ ।
ತತಃ ಸಹಸ್ರಶೋ ಜಾತಾ ಮಹಾಕಾಯಾ ಮಹಾಸುರಾಃ ॥ ೭೨ ॥
ಮಧುಶ್ಚ ಕೈಟಭಶ್ಚೈವ ಮಹಿಷಾಸುರ ಏವ ಚ ।
ಧೂಮ್ರಲೋಚನದೈತ್ಯಶ್ಚ ಚಂಡಮುಂಡಾದಯೋಽಸುರಾಃ ॥ ೭೩ ॥
ಚಿಕ್ಷುರಶ್ಚಾಮರಶ್ಚೈವ ರಕ್ತಬೀಜಾಸುರಸ್ತಥಾ ।
ಶುಂಭಶ್ಚೈವ ನಿಶುಂಭಶ್ಚ ಕಾಲಕೇಯಾ ಮಹಾಸುರಾಃ ।
ಧೂಮ್ರಾಭಿಧಾನಾಶ್ಚ ಪರೇ ತಸ್ಮಾದಸ್ತ್ರಾತ್ಸಮುತ್ಥಿತಾಃ ॥ ೭೪ ॥

---

ಸುಟ್ಟು ಪರಮಾನಂದಭರಿತರಾಗಿ ಶ್ರೀ ಲಲಿತಾದೇವಿಯನ್ನು ನಮಸ್ಕರಿಸಿದರು.

೭೦. ಅಚ್ಯುತಾನಂತಗೋವಿಂದರೆಂಬ ಆ ಮೂವರೂ ಈ ರೀತಿ ಶ್ರೀದೇವಿಯನ್ನು ನಮಸ್ಕರಿಸಿದ ತರುವಾಯ ಮೂರು ಲೋಕಗಳಲ್ಲಿಯೂ ನೆಲಸಿರುವ ಆಕೆಯ ಭಕ್ತರ ರೋಗಗಳೆಲ್ಲವನ್ನೂ ಮರ್ದಿಸುವ ಕಾರ್ಯದಲ್ಲಿ ಆ ದೇವಿಯಿಂದ ನಿಯುಕ್ತರಾಗಿ ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು.

೭೧. ಇದಾದ ಬಳಿಕ, ಭಂಡದಾನವನು ಆಯುರ್ನಾಶನವೆಂಬ ಅಸ್ತ್ರವನ್ನು ಪ್ರಯೋಗಿಸಿದನು. ಆಗ ಮಹಾರಾಜ್ಞಿಯು ಕಾಲಸಂಕರ್ಷಣ್ಯಸ್ತ್ರವನ್ನು ಪ್ರಯೋಗಿಸಿ ಆ ಮಹಾಸ್ತ್ರವನ್ನು ಮರ್ದಿಸಿದಳು.

೭೨. ಆ ಬಳಿಕ ಭಂಡಾಸುರನು ಉದ್ದಾಮವಾದ ಮಹಾಸುರಾಸ್ತ್ರವನ್ನು ಪ್ರಯೋಗಿಸಲು ಅದರಿಂದ ದೊಡ್ಡ ದೊಡ್ಡ ದೇಹಗಳುಳ್ಳ ಸಾವಿರಾರು ಮಹಾಸುರರು ಹುಟ್ಟಿದರು.

೭೩-೭೪. ಆಗ, ಮಧು, ಕೈಟಭ, ಮಹಿಷಾಸುರ, ಧೂಮ್ರಲೋಚನ, ಚಂಡ, ಮುಂಡರೇ ಮೊದಲಾದ ಅಸುರರೂ, ಧೂಮ್ರಲೋಚನ, ಚಾಮರ, ರಕ್ತಬೀಜ, ಶುಂಭ, ನಿಶುಂಭ, ಕಾಲಕೇಯ, ಧೂಮ್ರರೇ ಮೊದಲಾದ ಮಹಾಸುರರೂ ಆ ಮಹಾಸುರಾಸ್ತ್ರದಿಂದ ಹುಟ್ಟಿದರು.

ತೇ ಸರ್ವೇ ದಾನವಶ್ರೇಷ್ಠಾಃ ಕಠೋರೈಃ ಶಸ್ತ್ರಮಂಡಲೈಃ ।
ಶಕ್ತಿಸೇನಾಂ ಮರ್ದಯಂತೋ ನರ್ದಂತಶ್ಚ ಭಯಂಕರಂ ॥ ೭೫ ॥
ಹಾಹೇತಿ ಕ್ರಂದಮಾನಾಶ್ಚ ಶಕ್ತಯೋ ದೈತ್ಯಮರ್ದಿತಾಃ ।
ಲಲಿತಾಂ ಶರಣಂ ಪ್ರಾಪ್ತಾಃ ಪಾಹಿ ಪಾಹೀತಿ ಸತ್ವರಂ ॥ ೭೬ ॥
ಅಥ ದೇವೀ ಭೃಶಂ ಕ್ರುದ್ಧಾ ರೋಷಾಟ್ಟಹಸಮಾತನೋತ್ ।
ತತಃ ಸಮುತ್ಥಿತಾ ಕಾಚಿದ್ದುರ್ಗಾ ನಾಮ ಯಶಸ್ವಿನೀ ।
ಸಮಸ್ತದೇವತೇಜೋಭಿರ್ನಿರ್ಮಿತಾ ವಿಶ್ವರೂಪಿಣೀ ॥ ೭೭ ॥
ಶೂಲಂ ಚ ಶೂಲಿನಾ ದತ್ತಂ ಚಕ್ರಂ ಚಕ್ರಿಸಮರ್ಪಿತಂ ।
ಶಂಖಂ ವರುಣದತ್ತಂ ಚ ಶಕ್ತಿಂ ದತ್ತಾಂ ಹವಿರ್ಭುಜಾ ॥ ೭೮ ॥
ಚಾಪಮಕ್ಷಯತೂಣೀರಂ ಮರುದ್ದತ್ತಂ ಮಹಾಧ್ವನಿ ।
ವಜ್ರಿದತ್ತಂ ಚ ಕುಲಿಶಂ ಘಂಟಾಮೈರಾವತಾರ್ಪಿತಾಂ ॥ ೭೯ ॥
ಕಾಲದತ್ತಂ ಮಹಾದಂಡಂ ಪಾಶಂ ಪಾಶಧರಾರ್ಪಿತಂ ।
ಬ್ರಹ್ಮದತ್ತಾಂ ಕುಂಡಿಕಾಂ ಚ ಚಷಕಂ ಧನದಾರ್ಪಿತಂ ॥ ೮೦ ॥

---

೭೫. ದಾನವಶ್ರೇಷ್ಠರಾದ ಇವರೆಲ್ಲರೂ ಕಠೋರವಾದ ಮಹಾಸ್ತ್ರ ಮಂಡಲಗಳಿಂದ ಶಕ್ತಿಸೈನ್ಯವನ್ನು ಮರ್ದಿಸುತ್ತಲೂ, ಭಯಂಕರವಾಗಿ ಗರ್ಜಿಸುತ್ತಲೂ ಕಾಳಗ ಮಾಡತೊಡಗಿದರು.

೭೬. ಹೀಗೆ, ಈ ದೈತ್ಯರ ಹಿಂಸೆಗೊಳಗಾದ ಶಕ್ತಿದೇವತೆಗಳೆಲ್ಲರೂ ಹಾಹಾಕಾರಮಾಡುತ್ತ ಶ್ರೀಲಲಿತಾದೇವಿಯನ್ನು ಶರಣುಹೊಕ್ಕರು.

೭೭. ಆಗ, ಆ ದೇವಿಯು ಬಹಳವಾಗಿ ಕನಲಿ, ರೋಷಾಟ್ಟಹಾಸ ಗಳನ್ನು ಮೆರೆದಳು. ಆ ಸಮಯದಲ್ಲಿಯೇ ಮಹಾಕೀರ್ತಿಶಾಲಿನಿಯಾದ ಶ್ರೀದುರ್ಗೆಯೆಂಬ ಒಬ್ಬಾನೊಬ್ಬ ದೇವಿಯುದಿಸಿದಳು. ಸಮಸ್ತ ದೇವತೆಗಳ ತೇಜಸ್ಸಿನಿಂದ ನಿರ್ಮಿತೆಯಾದ ಆ ದೇವಿಯು ವಿಶ್ವರೂಪಿಣಿಯಾಗಿದ್ದಳು.

೭೮. ಆಕೆಗೆ ಶೂಲಿಯಾದ ಶಿವನು ಶೂಲವನ್ನು ಕೊಟ್ಟನು; ಚಕ್ರಧರನಾದ ವಿಷ್ಣುವು ಚಕ್ರವನ್ನು ಸಮರ್ಪಿಸಿದನು; ವರುಣನು ಶಂಖವನ್ನೂ, ಯಜ್ಞೇಶ್ವರನು ಶಕ್ತ್ಯಾಯುಧವನ್ನೂ ಕೊಟ್ಟರು.

೭೯. ಸಪ್ತಮರುತ್ತುಗಳು ಆ ದುರ್ಗಾದೇವಿಗೆ ಬಿಲ್ಲನ್ನೂ ಅಕ್ಷಯ ವಾದ ಬತ್ತಳಿಕೆಯನ್ನೂ ಸಮರ್ಪಿಸಿದರು. ದೇವೇಂದ್ರನು ವಜ್ರಾಯುಧ ವನ್ನು ಕೊಟ್ಟನು. ಐರಾವತವು ಘಂಟೆಯನ್ನು ಸಮರ್ಪಿಸಿತು.

೮೦. ಕಾಲನು ಮಹಾದಂಡವನ್ನೂ, ಪಾಶಧರನು ಪಾಶವನ್ನೂ,

ಮೃತ್ಯುದತ್ತೌ ಖಡ್ಗಖೇಟೌ ಹಾರಂ ಜಲಧಿನಾರ್ಪಿತಂ ।
ವಿಶ್ವಕರ್ಮಪ್ರದಿಷ್ಟಾನಿ ಭೂಷಣಾನಿ ಚ ಬಿಭ್ರತೀ ॥ ೮೧ ॥
ಅಂಗೈಃ ಸಹಸ್ರಕಿರಣಶ್ರೇಣೀಭಾಸುರರಶ್ಮಿಭಿಃ ।
ಆಯುಧಾನಿ ಸಮಸ್ತಾನಿ ದೀಪಯಂತೀ ಮಹೋದಯಾ ॥ ೮೨ ॥
ಅನ್ಯದತ್ತೈರಥಾನ್ಯೈಶ್ಚ ಶೋಭಮಾನಾ ಪರಿಚ್ಛದೈಃ ।
ಸಿಂಹವಾಹನಮಾರುಹ್ಯ ಯುದ್ಧಂ ನಾರಾಯಣೀ ವ್ಯಧಾತ್ ॥೮೩॥
ತಯಾ ತೇ ಮಹಿಷಪ್ರಖ್ಯಾ ದಾನವಾ ವಿನಿಪಾತಿತಾಃ ।
ಚಂಡಿಕಾಸಪ್ತಶತ್ಯಾಂ ತು ಯಥಾ ಕರ್ಮ ಕೃತಂ ತಯಾ ॥ ೮೪ ॥
ತಥೈವ ಸಮರಂ ಚಕ್ರೇ ಮಹಿಷಾದಿಮದಾಪಹಂ ।
ತತ್ಕೃತ್ವಾ ದುಷ್ಕರಂ ಕರ್ಮ ಲಲಿತಾಂ ಪ್ರಣನಾಮ ಸಾ ॥ ೮೫ ॥

---

ಬ್ರಹ್ಮನು ಕುಂಡಿಕೆಯನ್ನೂ, ಧನದನಾದ ಕುಬೇರನು ಚಷಕವನ್ನೂ ಕೊಟ್ಟರು.

೮೧-೮೩. ತರುವಾಯ, ನಾರಾಯಣಿಯಾದ ಶ್ರೀದುರ್ಗಾದೇವಿಯು ಹೀಗೆ ಅವರಿತ್ತ ಆಯುಧಗಳನ್ನು ಮಾತ್ರವಲ್ಲದೆ, ಮೃತ್ಯುದೇವನು ಸಮರ್ಪಿಸಿದ ಒರೆಕತ್ತಿಗಳನ್ನೂ, ಸಮುದ್ರರಾಜನು ಸಮರ್ಪಿಸಿದ ಹಾರವನ್ನೂ, ವಿಶ್ವಕರ್ಮನೊಪ್ಪಿಸಿದ ಭೂಷಣಗಳನ್ನೂ ಧರಿಸಿ, ಸಹಸ್ರಕಿರಣಗಳ ಸಾಲುಗಳಂತೆ ಭಾಸುರವಾದ ತನ್ನ ತೇಜಃಕಿರಣಗಳಿಂದ ಕಂಗೊಳಿಸುತ್ತಿರುವ ಅವಯವಗಳಿಂದ ಸಮಸ್ತಾಯುಧಗಳನ್ನೂ ಧರಿಸಿ, ಅವುಗಳನ್ನು ಆ ತನ್ನ ತೇಜಸ್ಸಿನಿಂದಲೇ ಬೆಳಗಿಸುತ್ತ ಮಹೋದಯೆಯಾಗಿ, ಇತರರೊಪ್ಪಿಸಿದ ಇತರ ರಣಪರಿಕರಗಳಿಂದಲೂ ಶೋಭಿಸುತ್ತ ಸಿಂಹವಾಹನವನ್ನೇರಿ ಕುಳಿತು ಆ ದಾನವವೀರರೊಡನೆ ಕಾಳಗಮಾಡಿದಳು.

೮೪–೮೫. ಎಲೈ ಕುಂಭಸಂಜಾತನೇ! ಮಹಿಷನೇ ಮೊದಲಾದ ಆ ದಾನವರೆಲ್ಲರೂ ಆ ಮಹಾದುರ್ಗಾದೇವಿಯಿಂದ ನಾಶಹೊಂದಿದರು. ಆಕೆಯು, ಚಂಡಿಕಾಸಪ್ತಶತಿಯಲ್ಲಿ ವಿವರಿಸಿದಂತೆ ಯಾವ ಮಹತ್ಕಾರ್ಯಗಳನ್ನು ಮಾಡಿದಳೋ ಅಂತೆಯೇ ಈಗಲೂ ಆ ಮಹಿಷನೇ ಮೊದಲಾದ ಮಹಾಸುರರ ಮದವುಡಗುವಂತಹ ದುಷ್ಕರವಾದ ಮಹಾಯುದ್ಧವನ್ನೆಸಗಿ ಮುಗಿಸಿದ ಬಳಿಕ ಶ್ರೀ ಲಲಿತಾದೇವಿಯ ಬಳಿಗೈದಿ ಆಕೆಯನ್ನು ನಮಸ್ಕರಿಸಿದಳು.

**ಮೂಕಾಸ್ತ್ರಮಸೃಜದ್ದುಷ್ಟಃ ಶಕ್ತಿಸೇನಾಸು ದಾನವಃ ।**
**ಮಹಾವಾಗ್ವಾದಿನೀ ನಾಮ ಸಸರ್ಜಾಸ್ತ್ರಂ ಜಗತ್ಪ್ರಸೂಃ ॥ ೮೬ ॥**
**ವಿದ್ಯಾರೂಪಸ್ಯ ವೇದಸ್ಯ ತಸ್ಕರಾನಸುರಾಧಮಾನ್ ।**
**ಸಸರ್ಜ ತತ್ರ ಸಮರೇ ದುರ್ಮದೋ ಭಂಡದಾನವಃ ॥ ೮೭ ॥**
**ದಕ್ಷಹಸ್ತಾಂಗುಷ್ಠನಖಾನ್ಮಹಾರಾಜ್ಞ್ಯಾಃ ಸಮುತ್ಥಿತಃ ।**
**ಮಹಾಮತ್ಸ್ಯಾಕೃತಿಃ ಶ್ರೀಮಾನಾದಿನಾರಾಯಣೋ ವಿಭುಃ ॥**
**ತೇನ ತೇ ವೇದಹರ್ತಾರಃ ಸೋಮಕಾದ್ಯಾ ವಿನಾಶಿತಾಃ ॥ ೮೮ ॥**
**ಅರ್ಣವಾಸ್ತ್ರಂ ಮಹಾವೀರೋ ಭಂಡದೈತ್ಯೋಽ ರಣೇಽಸೃಜತ್ ।**
**ತತೋಽದ್ಭಾಮಪಯಃಪೂರೇ ಶಕ್ತಿಸೈನ್ಯೈರಮಜ್ಜತ ॥ ೮೯ ॥**
**ಅಥ ಶ್ರೀಲಲಿತಾದಕ್ಷಹಸ್ತತರ್ಜನಿಕಾನಖಾತ್ ।**
**ಆದಿಕೂರ್ಮಃ ಸಮುತ್ಪನ್ನೋ ಯೋಜನಾಯುತವಿಸ್ತರಃ ॥ ೯೦ ॥**
**ಧೃತಾಸ್ತೇನ ಮಹಾಭೋಗಕರ್ಪರೇಣ ಪೃಥೀಯಸಾ ।**
**ಶಕ್ತಯೋ ಹರ್ಷಮಾಪನ್ನಾಃ ಸಾಗರಾಸ್ತ್ರಭಯಂ ಜಹುಃ ॥ ೯೧ ॥**

---

೮೬. ಬಳಿಕ, ಭಂಡಾಸುರನು ಶಕ್ತಿಸೇನೆಯ ಮೇಲೆ ಮೂಕಾಸ್ತ್ರವನ್ನು ಪ್ರಯೋಗಿಸಿದನು. ಜಗದಂಬಿಕೆಯು ಮಹಾವಾಗ್ವಾದಿನ್ಯಸ್ತ್ರವನ್ನು ಪ್ರಯೋಗಿಸಿ ಅದನ್ನು ಧ್ವಂಸಗೊಳಿಸಿದಳು.

೮೭. ಇದಾದಮೇಲೆ ದುರ್ಮದನಾದ ಆ ಭಂಡದಾನವನು ಆ ಕಾಳೆಗದಲ್ಲಿ ವಿದ್ಯಾರೂಪವಾದ ವೇದವನ್ನು ಕದಿಯುವಂತಹ ಅಸುರಾಧಮರನ್ನು ಸೃಷ್ಟಿಸಿದನು.

೮೮. ಶ್ರೀಮಹಾರಾಜ್ಞಿಯ ಬಲಗೈಯ ಹೆಬ್ಬೆರಳಿನ ಉಗುರಿನಿಂದ ಮಹಾಮತ್ಸ್ಯರೂಪಧರನಾದ ಶ್ರೀಮನ್ನಾರಾಯಣವಿಭುವು ಉದಿಸಿ ವೇದ ಚೋರರಾದ ಸೋಮಕನೇ ಮೊದಲಾದ ಆ ದೈತ್ಯರನ್ನು ನಾಶಗೊಳಿಸಿದನು.

೮೯. ತರುವಾಯ, ಮಹಾವೀರನಾದ ಆ ಭಂಡದಾನವನು ಅರ್ಣವಾಸ್ತ್ರವನ್ನುಬಿಟ್ಟನು. ಅದರಿಂದುಂಟಾದ ಜಲಪ್ರವಾಹದಲ್ಲಿ ಶಕ್ತಿಸೇನೆಯೆಲ್ಲ ಮುಳುಗಿಹೋಯಿತು.

೯೦. ಆಗ ಶ್ರೀಲಲಿತಾದೇವಿಯ ಬಲಗೈಯ ತರ್ಜನೀ ಬೆರಳ ಉಗುರಿನಿಂದ ಹತ್ತು ಸಾವಿರ ಯೋಜನಗಳ ಅಗಲವೂ, ಉದ್ದವೂ ಉಳ್ಳ ಆದಿಕೂರ್ಮನು ಉದಿಸಿದನು.

೯೧. ಆ ಆದಿಕೂರ್ಮನು ಬಹು ದಪ್ಪವೂ, ಅಗಲವೂ ಆದ ತನ್ನ

ಹಿರಣ್ಯಾಕ್ಷಮಹಾಸ್ತ್ರಂ ತು ವಿಜಹೌ ಭಂಡದಾನವಃ ।
ತಸ್ಮಾತ್ಸಹಸ್ರಶೋ ಜಾತಾ ಹಿರಣ್ಯಾಕ್ಷಾ ಗದಾಯುಧಾಃ ॥ ೯೨ ॥
ತೈರ್ಹನ್ಯಮಾನೇ ಶಕ್ತೀನಾಂ ಸೈನ್ಯೇ ಸಂತ್ರಾಸವಿಹ್ವಲೇ ।
ಇತಸ್ತತಃ ಪ್ರಚಲಿತೇ ಶಿಥಿಲೇ ರಣಕರ್ಮಣಿ ॥ ೯೩ ॥
ಅಥ ಶ್ರೀಲಲಿತಾದಕ್ಷಹಸ್ತಮಧ್ಯಾಂಗುಲೀನಖಾತ್ ।
ಮಹಾವರಾಹಃ ಸಮಭೂಚ್ಛ್ವೇತಃ ಕೈಲಾಸಸನ್ನಿಭಃ ॥ ೯೪ ॥
ತೇನ ವಜ್ರಸಮಾನೇನ ಪೋತ್ರೇಣಾಭಿವಿದಾರಿತಾಃ । [ ೯೫ ॥
ಕೋಟಿಶಸ್ತೇ ಹಿರಣ್ಯಾಕ್ಷಾ ಮರ್ದ್ಯಮಾನಾಃ ಕ್ಷಯಂ ಗತಾಃ ॥
ಅಥ ಭಂಡಸ್ತ್ವತಿಕ್ರೋಧಾದ್ಭ್ರುಕುಟೀಂ ಸ ತತಾನ ಹ ।
ತಸ್ಯಾ ಭ್ರುಕುಟಿತೋ ಜಾತಾ ಹಿರಣ್ಯಾಃ ಕೋಟಿಸಂಖ್ಯಕಾಃ ॥೯೬॥

---

ಬೆನ್ನಿನಮೇಲೆ ಶಕ್ತಿದೇವಿಯರೆಲ್ಲರನ್ನೂ ಧರಿಸಲು ಅವರೆಲ್ಲರೂ ಸಂತಸಗೊಂಡು ಸಾಗರಾಸ್ತ್ರದಿಂದುಂಟಾಗಿದ್ದ ಭಯವನ್ನು ತೊರೆದರು.

೯೨. ತರುವಾಯ ಆ ದೈತ್ಯನು, ಹಿರಣ್ಯಾಕ್ಷವೆಂಬ ಮಹಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಗದಾಯುಧವನ್ನು ಧರಿಸಿದ ಸಾವಿರಾರು ಹಿರಣ್ಯಾಕ್ಷದಾನವರುದಿಸಿದರು.

೯೩. ಅವರೆಲ್ಲರೂ ಶಕ್ತಿದೇವಿಯರ ಸೈನ್ಯವನ್ನು ಮರ್ದಿಸತೊಡಗಲು, ಆ ಸೇನೆಯಲ್ಲೆಲ್ಲಾ ಭಯವಡಿಸಿ ತಳಮಳವುಂಟಾಗಿ ಶಕ್ತಿದೇವತೆಗಳೆಲ್ಲ ಅತ್ತಿತ್ತ ಚೆದುರಿ, ಯುದ್ಧಕಾರ್ಯವೇ ಸಡಿಲವಾಗಲು ಮೊದಲಾಯಿತು.

೯೪. ಆಗ, ಶ್ರೀ ಲಲಿತಾದೇವಿಯ ದಕ್ಷಿಣಕರದ ನಡುವಣ ಬೆರಳನುಗುರಿನಿಂದ ಶ್ವೇತವರ್ಣವುಳ್ಳವನೂ, ಕೈಲಾಸಪರ್ವತೋಪಮನೂ ಆದ ಮಹಾವರಾಹನುದಿಸಿದನು.

೯೫. ಆ ವರಾಹಮೂರ್ತಿಯು, ಕೋಟ್ಯನುಕೋಟಿಗಳಾದ ಆ ಹಿರಣ್ಯಾಕ್ಷರೆಲ್ಲರನ್ನೂ ವಜ್ರಸಮಾನವಾದ ತನ್ನ ಕೋರೆಹಲ್ಲುಗಳಿಂದಲೇ ಸಿಗಿದುಹಾಕಿದನು.

೯೬. ಬಳಿಕ ಭಂಡಾಸುರನು ಬಹಳವಾಗಿ ಮುನಿದು, ಹುಬ್ಬುಗಂಟಿಕ್ಕಿದನು. ಆ ಹುಬ್ಬುಗಂಟಿನಿಂದ ಕೋಟಿಸಂಖ್ಯಾಕರಾದ ಹಿರಣ್ಯಕಶಿಪುಗಳುದಿಸಿದರು.

ಜ್ವಲದಾದಿತ್ಯವದ್ದೀಪ್ತಾ ದೀಪ್ತಪ್ರಹರಣಾಶ್ಚ ತೇ ।
ಅಮರ್ದಯನ್ ಶಕ್ತಿಸೈನ್ಯಂ ಪ್ರಹ್ಲಾದಂ ಚಾಪ್ಯಪೀಡಯನ್ ॥೯೭॥
ಯಃ ಪ್ರಹ್ಲಾದೋಽಸ್ತಿ ಶಕ್ತೀನಾಂ ಪರಮಾನಂದಲಕ್ಷಣಃ ।
ಸ ಏವ ಬಾಲಕೋ ಭೂತ್ವಾ ಹಿರಣ್ಯಪರಿಪೀಡಿತಃ ॥
ತ್ರಿಪುರಾಂ ಶರಣಂ ಪ್ರಾಪ್ತಸ್ತೇನ ರಾಜ್ಞೀ ಕೃಪಾಮಗಾತ್ ॥ ೯೮ ॥
ಅಥ ಶಕ್ತ್ಯಾನಂದರೂಪಂ ಪ್ರಹ್ಲಾದಂ ಪರಿರಕ್ಷಿತುಂ ।
ದಕ್ಷಹಸ್ತಾನಾಮಿಕಾಗ್ರಂ ಧುನೋತಿ ಸ್ಮ ಜಗತ್ಪ್ರಸೂಃ ॥ ೯೯ ॥
ತಸ್ಮಾದುದ್ಧತಜಟಾಜಾಲಃ ಪ್ರಜ್ವಲಲ್ಲೋಚನತ್ರಯಃ ।
ಸಿಂಹಾಸ್ಯಃ ಪುರುಷಾಕಾರಃ ಕಂಠಸ್ಯಾಧೋ ಜನಾರ್ದನಃ ॥ ೧೦೦ ॥
ನಖಾಯುಧಃ ಕಾಲರುದ್ರರೂಪೀ ಘೋರಾಟ್ಟಹಾಸವಾನ್ ।
ಸಹಸ್ರಸಂಖ್ಯದೋರ್ದಂಡೋ ಲಲಿತಾಜ್ಞಾನುಪಾಲಕಃ ॥ ೧೦೧ ॥

---

೯೭. ಉರಿಯುತ್ತಿರುವ ಸೂರ್ಯನಂತೆ ಬೆಳಗುತ್ತಿರುವವರೂ, ಪ್ರಜ್ವಲಿಸುತ್ತಿರುವ ಆಯುಧಗಳುಳ್ಳವರೂ ಆದ ಆ ಹಿರಣ್ಯಕಶಿಪುಗಳು ಶಕ್ತಿಸೇನೆಯೆಲ್ಲವನ್ನೂ ಮರ್ದಿಸಿ, ಅಲ್ಲಿದ್ದ ಪ್ರಹ್ಲಾದನನ್ನೂ ಪೀಡಿಸಿದರು.

೯೮. ಅಯ್ಯಾ, ತಪೋಧನನೇ! ಶಕ್ತಿಸೇನೆಗಳ ಪರಮಾನಂದವೇ ಲಕ್ಷಣವಾಗುಳ್ಳ ಯಾವ ಪ್ರಹ್ಲಾದವುಂಟೋ ಅದೇ ಪ್ರಹ್ಲಾದನೆಂಬ ಬಾಲಕನಾಗಿ ಆ ಹಿರಣ್ಯಕಶಿಪುಗಳಿಂದ ಪೀಡಿತನಾದನು. ಹೀಗೆ ಆ ರಾಕ್ಷಸರ ಹಿಂಸೆಗೊಳಗಾದ ಆ ಬಾಲಕನು ಕೂಡಲೇ ಶ್ರೀಮಹಾರಾಜ್ಞಿಯನ್ನು ಶರಣುಹೊಕ್ಕನು. ಆಗ ಶ್ರೀದೇವಿಗೆ ಅವನ ಮೇಲೆ ಕನಿಕರವುಂಟಾಯಿತು.

೯೯. ಆಗ ಜಗದಂಬಿಕೆಯು ಶಕ್ತಿದೇವಿಯರ ಆನಂದರೂಪನಾದ ಆ ಪ್ರಹ್ಲಾದನನ್ನು ಕಾಪಾಡಲೋಸುಗ ಬಲಗೈಯ ಅನಾಮಿಕಾಂಗುಲಿಯನ್ನು ಒಮ್ಮೆ ಕೊಡಹಿದಳು.

೧೦೦–೧೦೨. ಕೂಡಲೇ ಕೆದರಿದ ಜಟಾಜಾಲವುಳ್ಳವನೂ, ಪ್ರಜ್ವಲಿಸುತ್ತಿರುವ ಲೋಚನತ್ರಯವುಳ್ಳವನೂ, ಸಿಂಹಮುಖನೂ, ಕಂಠದಿಂದ ಕೆಳಕ್ಕೆ ಪುರುಷಾಕಾರವುಳ್ಳವನೂ ಆದ ಜನಾರ್ದನನುದಿಸಿ, ನಖಾಯುಧನೂ, ಕಾಲರುದ್ರರೂಪನೂ, ಘೋರಾಟ್ಟಹಾಸವುಳ್ಳವನೂ, ಸಾವಿರಾರು ಭುಜದಂಡಗಳುಳ್ಳವನೂ ಆಗಿ, ಶ್ರೀ ಲಲಿತಾಪರಮೇಶ್ವರಿಯ ಆಜ್ಞೆಯನ್ನು ಪಾಲಿಸುವವನಾಗಿ, ಭಂಡಾಸುರನ ಹುಬ್ಬುಗಂಟಿನಿಂದ

ಹಿರಣ್ಯಕಶಿಪೂನ್ ಸರ್ವಾನ್ ಭಂಡಭ್ರುಕುಟಿಸಂಭವಾನ್ ।
ಕ್ಷಣಾದ್ವಿದಾರಯಾಮಾಸ ನಖೈಃ ಕುಲಿಶಕರ್ಕಶೈಃ ॥ ೧೦೨ ॥
ಬಲೀಂದ್ರಾಸ್ತ್ರಂ ಮಹಾಘೋರಂ ಸರ್ವದೈವತನಾಶನಂ ।
ಅಮುಂಚಲ್ಲಲಿತಾದೇವೀಂ ಪ್ರತಿ ಭಂಡಮಹಾಸುರಃ ॥ ೧೦೩ ॥
ತದಸ್ತ್ರದರ್ಪನಾಶಾಯ ವಾಮನಾಃ ಶತಶೋಽಭವನ್ ।
ಕ್ಷಣೇ ಕ್ಷಣೇ ವರ್ಧಮಾನಾಃ ಪಾಶಹಸ್ತಾ ಮಹಾಬಲಾಃ ॥ ೧೦೪ ॥
ಬಲೀಂದ್ರಾಸ್ತ್ರಸಮುದ್ಭೂತಾನ್ ಬಧ್ನಂತಃ ಪಾಶಮಂಡಲೈಃ ।
ದಕ್ಷಹಸ್ತಕನಿಷ್ಠಾಗ್ರಾಜ್ಜಾತಾಃ ಕಾಮೇಶಯೋಷಿತಃ ॥ [ ೧೦೫ ॥
ಮಹಾಕಾಯಾ ಮಹೋತ್ಸಾಹಾಸ್ತದಸ್ತ್ರಂ ಸಮನಾಶಯನ್ ॥
ಹೈಹಯಾಸ್ತ್ರಂ ಸಮುಸೃಜದ್ಭಂಡದೈತ್ಯೋ ರಣಾಜಿರೇ ।
ತಸ್ಮಾತ್ಸಹಸ್ರಶೋ ಜಾತಾಃ ಸಹಸ್ರಾರ್ಜುನಕೋಟಯಃ ॥ ೧೦೬ ॥
ಅಥ ಶ್ರೀತ್ರಿಪುರಾವಾಮಹಸ್ತಾಂಗುಷ್ಠನಖೋತ್ಥಿತಃ । [೧೦೭ ॥
ಪ್ರಜ್ವಲನ್ ಭಾರ್ಗವೋ ರಾಮಃ ಸಕ್ರೋಧಃ ಸಿಂಹನಾದವಾನ್ ॥
ಧಾರಯಾಽಮರ್ದಯನ್ನೇತಾನ್ ಕುಠಾರಸ್ಯ ಕಠೋರಯಾ ।
ಸಹಸ್ರಾರ್ಜುನಸಂಘಾತಾನ್ ಕ್ಷಣಾದೇವ ವ್ಯನಾಶಯತ್ ॥ ೧೦೮ ॥

---

ಹುಟ್ಟಿದ ಆ ಹಿರಣ್ಯಕಶಿಪುಗಳೆಲ್ಲರನ್ನೂ ವಜ್ರಾಯುಧೋಪಮವಾದ ತನ್ನುಗುರುಗಳಿಂದ ಕ್ಷಣಮಾತ್ರದಲ್ಲಿಯೇ ಸಿಗಿದುಹಾಕಿದನು.

೧೦೩. ಬಳಿಕ ಭಂಡಾಸುರನು ಸಮಸ್ತ ದೇವತೆಗಳನ್ನೂ ನಾಶಗೊಳಿಸುವ ಮಹಾ ಘೋರವಾದ ಬಲೀಂದ್ರಾಸ್ತ್ರವನ್ನು ಶ್ರೀ ಲಲಿತಾ ದೇವಿಯಮೇಲೆಯೇ ಎಸೆದನು.

೧೦೪-೧೦೫. ಆಗ ಶ್ರೀ ಲಲಿತಾ ಭಗವತಿಯ ಬಲಗೈಯ ಕಿರುಬೆರಳನುಗುರಿನಿಂದ ಕ್ಷಣಮಾತ್ರದಲ್ಲಿಯೇ ನೂರಾರು ಮಂದಿ ವಾಮನರು ಉದಿಸಿ, ಪಾಶಹಸ್ತರೂ, ಮಹಾ ಬಲಿಷ್ಠರೂ ಆಗಿ ಕ್ಷಣಕ್ಷಣಕ್ಕೂ ಬೆಳೆದು, ಮಹಾಕಾಯರೂ, ಮಹೋತ್ಸಾಹವಂತರೂ ಆಗಿ ಆ ದಾನವನ ಬಲೀಂದ್ರಾಸ್ತ್ರದಿಂದ ಹುಟ್ಟಿದ ಬಲೀಂದ್ರರೆಲ್ಲರನ್ನೂ ಪಾಶಗಳಿಂದ ಬಿಗಿದು ನಾಶಗೊಳಿಸಿದರು.

೧೦೬. ಆಮೇಲೆ ಭಂಡಾಸುರನು ಆ ಕಾಳಗದಲ್ಲಿ ಹೈಹಯಾಸ್ತ್ರವನ್ನು ಬಿಡಲು ಅದರಿಂದ ಕೋಟ್ಯಂತರ ಮಂದಿ ಸಹಸ್ರಾರ್ಜುನರು ಉದಿಸಿದರು.

೧೦೭-೧೦೮. ಶ್ರೀ ತ್ರಿಪುರಾಂಬಿಕೆಯ ಎಡಗೈಯ ಹೆಬ್ಬೆರಳಿನುಗುರಿ

**ಅಥ ಕ್ರುದ್ಧೋ ಭಂಡದೈತ್ಯಃ ಕ್ರೋಧಹುಂಕಾರಮಾತನೋತ್ ।**
**ತಸ್ಮಾದ್ಧುಂಕಾರತೋ ಜಾತಶ್ಚಂದ್ರಹಾಸಕೃಪಾಣವಾನ್ ।**
**ಸಹಸ್ರಾಕ್ಷೋಹಿಣೀ ರಕ್ಷಃ ಸೇನಯಾ ಪರಿವಾರಿತಃ ॥ ೧೦೯ ॥**
**ದಶದ್ವಯಭುಜಃ ಕ್ರೂರೋ ರಾವಣಾಖ್ಯೋ ದಶಾನನಃ ।**
**ಕನಿಷ್ಠಂ ಕುಂಭಕರ್ಣಂ ಚ ಮೇಘನಾದಂ ಚ ನಂದನಂ ।**
**ಗೃಹೀತ್ವಾ ಶಕ್ತಿಸೈನ್ಯಂ ತದತಿದೂರಮಮರ್ದಯತ್ ॥ ೧೧೦ ॥**
**ಅಥ ಶ್ರೀತ್ರಿಪುರಾವಾಮಹಸ್ತತರ್ಜನಿಕಾನಖಾತ್ ।**
**ಕೋದಂಡರಾಮಃ ಸಮಭೂಲ್ಲಕ್ಷ್ಮಣೇನ ಸಮನ್ವಿತಃ ॥ ೧೧೧ ॥**
**ಜಟಾಮುಕುಟವಾನ್ ವಲ್ಕೀ ಬದ್ಧತೂಣೀರಪೃಷ್ಠಭೂಃ ।**
**ನೀಲೋತ್ಪಲದಲಶ್ಯಾಮೋ ಧನುರ್ವಿಸ್ಫಾರಯನ್ಮುಹುಃ ।**
**ನಾಶಯಾಮಾಸ ದಿವ್ಯಾಸ್ತ್ರೈಃ ಕ್ಷಣಾದ್ರಾಕ್ಷಸಸೈನಿಕಂ ॥ ೧೧೨ ॥**

---

ನಿಂದ ಉದಿಸಿ ಬಂದ ಭಾರ್ಗವರಾಮನು ಕ್ರೋಧದಿಂದ ಪ್ರಜ್ವಲಿಸಿ, ಸಿಂಹಗರ್ಜನೆಗೈಯುತ್ತ ಕಠೋರವಾದ ಕುಠಾರಧಾರೆಯಿಂದ ಆ ಸಹಸ್ರಾರ್ಜುನರೆಲ್ಲರನ್ನೂ ಮರ್ದಿಸಿ ಕೆಡವಿದನು.

೧೦೯-೧೧೦. ಆಗ, ಭಂಡದಾನವನು ಮತ್ತೂ ಕನಲಿ ಅದೇ ಕೋಪದಿಂದಲೇ ಒಂದು ಸಲ ಹುಂಕರಿಸಿದನು. ಆ ಹುಂಕಾರದಿಂದ, ಚಂದ್ರಹಾಸವೆಂಬ ಖಡ್ಗವನ್ನು ಹಿಡಿದು, ಒಂದು ಸಾವಿರ ಸಂಖ್ಯೆಯ ಅಕ್ಷೋಹಿಣೀ ಸೇನೆಯೊಡಗೂಡಿ, ಇಪ್ಪತ್ತು ತೋಳುಗಳುಳ್ಳ ರಾವಣನೆಂದು ಹೆಸರಾದ ಕ್ರೂರ ದಶಾನನುದಿಸಿ, ತಮ್ಮನಾದ ಕುಂಭಕರ್ಣನನ್ನೂ, ಮಗನಾದ ಮೇಘನಾದನನ್ನೂ ಹಿಂದಿಟ್ಟುಕೊಂಡು ರಣರಂಗಕ್ಕೆ ನುಗ್ಗಿಬಂದು ಶಕ್ತಿಸೇನೆಗಳನ್ನೆಲ್ಲ ಮರ್ದಿಸತೊಡಗಿದನು.

೧೧೧. ಆಗ, ಶ್ರೀ ತ್ರಿಪುರಾಂಬಿಕೆಯ ವಾಮಹಸ್ತದ ತರ್ಜನೀ ಬೆರಳಿನ ನಖದಿಂದ ಲಕ್ಷ್ಮಣ ಸಮೇತನಾದ ಶ್ರೀಕೋದಂಡರಾಮನು ಉದಿಸಿದನು.

೧೧೨. ಜಟಾವಲ್ಕಲಧಾರಿಯಾಗಿ, ಬೆನ್ನಿಗೆ ಕಟ್ಟಿದ ಅಂಬು ತುಂಬಿದ ಬತ್ತಳಿಕೆಯುಳ್ಳವನಾಗಿ, ನಿಲೋತ್ಪಲದಲಶ್ಯಾಮನಾಗಿ ಕಂಗೊಳಿಸುತ್ತಿದ್ದ ಆ ಶ್ರೀರಾಮಮೂರ್ತಿಯು, ಅಡಿಗಡಿಗೂ ಧನುಸ್ಸನ್ನು ಟೇಂಕರಿಸುತ್ತ, ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ, ಕ್ಷಣಮಾತ್ರದಲ್ಲಿಯೇ ಆ ರಾಕ್ಷಸಸೇನೆಯೆಲ್ಲವನ್ನೂ ನಾಶಗೊಳಿಸಿದನು.

**ಮರ್ದಯಾಮಾಸ ಪೌಲಸ್ತ್ಯಂ ಕುಂಭಕರ್ಣಂಚ ಸೋದರಂ ।**
**ಲಕ್ಷ್ಮಣೋ ಮೇಘನಾದಂ ಚ ಮಹಾವೀರಮನಾಶಯತ್ ॥೧೧೩॥**
**ದ್ವಿವಿದಾಸ್ತ್ರಂ ಮಹಾಭೀಮಮಮುಸೃಜದ್ಭಂಡದಾನವಃ ।**
**ತಸ್ಮಾದನೇಕಶೋ ಜಾತಾಃ ಕಪಯಃ ಪಿಂಗಲೋಚನಾಃ ॥ ೧೧೪ ॥**
**ಕ್ರೋಧೇನಾತ್ಯಂತತಾಮ್ರಾಸ್ಯಾಃ ಪ್ರತ್ಯೇಕಂ ಹನುಮತ್ಸಮಾಃ ।**
**ವ್ಯನಾಶಯನ್ ಶಕ್ತಿಸೈನ್ಯಂ ಕ್ರೂರಕ್ರೇಂಕಾರಕಾರಿಣಃ ॥ ೧೧೫ ॥**
**ಅಥ ಶ್ರೀತ್ರಿಪುರಾವಾಮಹಸ್ತಮಧ್ಯಾಂಗುಲೀನಖಾತ್ ।**
**ಆವಿರ್ಭವದ್ಧಲಧರಃ ಕ್ರೋಧಮದ್ಯಾರುಣೇಕ್ಷಣಃ ॥ ೧೧೬ ॥**
**ನೀಲಾಂಬರಪಿನದ್ಧಾಂಗಃ ಕೈಲಾಸಾಚಲನಿರ್ಮಲಃ ।**
**ದ್ವಿವಿದಾಸ್ತ್ರಸಮುದ್ಭೂತಾನ್ಕಪೀನ್ ಸರ್ವಾನ್ವ್ಯನಾಶಯತ್ ॥೧೧೭॥**
**ರಾಜಾಸುರಂ ನಾಮ ಮಹತ್ಸಸರ್ಜಾಸ್ತ್ರಂ ಸ ದಾನವಃ ।**
**ತಸ್ಮಾದಸ್ತ್ರಾತ್ಸಮುದ್ಭೂತಾ ಬಹವೋ ನೃಪದಾನವಾಃ ॥ ೧೧೮ ॥**

---

೧೧೩. ಇಷ್ಟೆಯಲ್ಲದೆ, ಆ ಕೋದಂಡರಾಮನು ಪುಲಸ್ತ್ಯನ ಮಗನಾದ ಆ ರಾವಣನನ್ನೂ, ಅವನ ತಮ್ಮನಾದ ಕುಂಭಕರ್ಣನನ್ನೂ ಸಂಹರಿಸಿದನು. ಅದೇ ಸಮಯದಲ್ಲಿಯೇ ಶ್ರೀರಾಮಾನುಜನಾದ ಲಕ್ಷ್ಮಣನು, ಮಹಾವೀರನಾದ ಮೇಘನಾದನನ್ನು ವಧಿಸಿದನು.

೧೧೪. ಇದಾದಮೇಲೆ, ಭಂಡದಾನವನು ಮಹಾಭಯಂಕರವಾದ ದ್ವಿವಿದಾಸ್ತ್ರವನ್ನು ಪ್ರಯೋಗಿಸಿದನು. ಆ ಮಹಾಸ್ತ್ರದಿಂದ ಹಳದಿಯ ಕಣ್ಣುಗಳುಳ್ಳ ಅನೇಕ ಕಪಿಗಳು ಹುಟ್ಟಿದವು.

೧೧೫. ಆ ಕಪಿಗಳಲ್ಲಿ ಪ್ರತಿಯೊಂದೂ ಹನುಮಂತನಿಗೆ ಸಮಾನವಾದುದಾಗಿ ಕಿರ್‍ರನೆ ಕಿರಚುತ್ತ ಹೊರಟು ಶಕ್ತಿಸೇನೆಯನ್ನೆಲ್ಲ ನಾಶಗೊಳಿಸಲು ತೊಡಗಿತು.

೧೧೬. ಆಗ ಶ್ರೀ ಲಲಿತಾದೇವಿಯ ವಾಮಹಸ್ತದ ಮಧ್ಯಮಾಂಗುಲೀ ನಖದಿಂದ ಕೋಪದಿಂದಲೂ, ಮದ್ಯಪಾನದಿಂದಲೂ ಕೆಂಪಡರಿದ ಕಂಗಳುಳ್ಳವನಾದ ಹಲಧರರಾಮನು ಆವಿರ್ಭವಿಸಿದನು.

೧೧೭. ನೀಲಾಂಬರವನ್ನುಟ್ಟವನೂ, ಕೈಲಾಸ ಪರ್ವತೋಪಮನೂ ಆದ ಹಲಧರನು ಭಂಡನೆಸೆದ ದ್ವಿವಿದಾಸ್ತ್ರದಿಂದುದಿಸಿದ ಆ ಕಪಿಗಳೆಲ್ಲರನ್ನೂ ನಾಶಗೊಳಿಸಿದನು.

೧೧೮. ಬಳಿಕ, ಆ ದೈತ್ಯನು ರಾಜಾಸುರವೆಂಬ ಮಹಾಸ್ತ್ರವನ್ನು ಬಿಟ್ಟನು. ಅದರಿಂದ ಬಹುಮಂದಿ ರಾಜದಾನವರುತ್ಪನ್ನರಾದರು.

**ಶಿಶುಪಾಲೋ ದಂತವಕ್ತ್ರಃ ಸಾಲ್ವಃ ಕಾಶೀಪತಿಸ್ತಥಾ ।**
**ಪೌಂಡ್ರಕೋ ವಾಸುದೇವಶ್ಚ ತಥಾ ಹಂಸಕಡಿಂಭಕೌ ॥ ೧೧೯ ॥**
**ಶಂಬರಶ್ಚ ಪ್ರಲಂಬಶ್ಚ ತಥಾ ಬಾಣಾಸುರೋಽಪಿ ಚ ।**
**ಕಂಸಶ್ಚಾಣೂರಮಲ್ಲಶ್ಚ ಮುಷ್ಟಿಕೋತ್ಪಲಶೇಖರೌ ॥ ೧೨೦ ॥**
**ಅರಿಷ್ಟೋ ಧೇನುಕಃ ಕೇಶೀ ಕಾಲೀಯೋ ಯಮಲಾರ್ಜುನೌ ।**
**ಪೂತನಾ ಶಕಟಶ್ಚೈವ ತೃಣಾವರ್ತಾದಯೋಽಸುರಾಃ ॥**
**ಅನೇಕೈಃ ಸಹ ಸೇನಾಭಿರುತ್ಥಿತಾಃ ಶಸ್ತ್ರಪಾಣಯಃ ॥ ೧೨೧ ॥**
**ತಾನ್ವಿನಾಶಯಿತುಂ ಸರ್ವಾನ್ ವಾಸುದೇವಃ ಸನಾತನಃ ।**
**ಶ್ರೀದೇವೀವಾಮಹಸ್ತಾಬ್ಜಾನಾಮಿಕಾನಖಸಂಭವಃ ॥ ೧೨೨ ॥**
**ಚತುರ್ವ್ಯೂಹಂ ಸಮಾತೇನೇ ಚತ್ವಾರಸ್ತೇ ತತೋಽಭವನ್ ।**
**ವಾಸುದೇವೋ ದ್ವಿತೀಯಸ್ತು ಸಂಕರ್ಷಣ ಇತಿ ಸ್ಮೃತಃ ॥ ೧೨೩ ॥**
**ಪ್ರದ್ಯುಮ್ನಶ್ಚಾನಿರುದ್ಧಶ್ಚ ತೇ ಸರ್ವೇ ಪ್ರೋದ್ಯತಾಯುಧಾಃ ।**
**ತಾನಶೇಷಾನ್ ದುರಾಚಾರಾನ್ ಭೂಮೇರ್ಭಾರಪ್ರವರ್ತಕಾನ್ ॥**
**ನಾಶಯಾಮಾಸುರುರ್ವೀಶವೇಷಚ್ಛನ್ನಾನ್ಮಹಾಸುರಾನ್ ॥ ೧೨೪ ॥**

---

೧೧೯-೧೨೧. ಶಿಶುಪಾಲ, ದಂತವಕ್ತ್ರ, ಕಾಶೀಪತಿಯಾದ ಸಾಲ್ವ, ಪೌಂಡ್ರಕ, ವಾಸುದೇವ, ಹಂಸಕ, ಡಿಂಭಕ, ಶಂಬರ, ಪ್ರಲಂಬ, ಬಾಣಾಸುರ, ಕಂಸ, ಚಾಣೂರ, ಮಲ್ಲ, ಮುಷ್ಟಿಕ, ಉತ್ಪಲ, ಶೇಖರ, ಅರಿಷ್ಟ, ಧೇನುಕ, ಕೇಶಿ, ಕಾಲೇಯ, ಯಮಲ, ಅರ್ಜುನ, ಪೂತನೆ, ಶಕಟ, ತೃಣಾವರ್ತ ಇವರೇ ಮೊದಲಾದ ಮಹಾಸುರರು ಶಸ್ತ್ರಪಾಣಿಗಳೂ, ಅನೇಕ ಸೇನಾಸಹಿತರೂ ಆಗಿ ಆ ರಾಜಾಸುರ ಮಹಾಸ್ತ್ರದಿಂದ ಉತ್ಪನ್ನರಾದರು.

೧೨೨. ಇವರೆಲ್ಲರನ್ನೂ ನಾಶಗೊಳಿಸಲು ಶ್ರೀದೇವಿಯ ವಾಮಹಸ್ತಕಮಲದ ಅನಾಮಿಕಾಂಗುಲೀನಖದಿಂದ ಸನಾತನನಾದ ವಾಸುದೇವಮೂರ್ತಿಯುದಿಸಿದನು.

೧೨೩. ಆಗ ಆ ದೇವನು ಚತುರ್ವ್ಯೂಹಪುರುಷನಾದುದರಿಂದ ತಾನೇ ಮೊದಲನೆಯವನಾದ ವಾಸುದೇವನಾದನು. ಎರಡನೆಯವನು ಸಂಕರ್ಷಣನೆಂದು ಹೆಸರಾದವನು.

೧೨೪. ಮೂರು ನಾಲ್ಕನೆಯವರೇ ಪ್ರದ್ಯುಮ್ನಾನಿರುದ್ಧರು. ಇವರೆಲ್ಲರೂ ಆಯುಧಗಳನ್ನೆತ್ತಿ ಹಿಡಿದು, ನುಗ್ಗಿ ಹೊರಟು, ಭೂಮಿಗೆ

**ಅಥ ತೇಷು ಪ್ರಣಷ್ಟೇಷು ಸಂಕ್ರುದ್ಧೋ ಭಂಡದಾನವಃ ।**
**ಧರ್ಮವಿಪ್ಲಾವಕಂ ಘೋರಂ ಕಲ್ಯಸ್ತ್ರಂ ಸಮಮುಂಚತ ॥ ೧೨೫ ॥**
**ತತಃ ಕಲ್ಯಸ್ತ್ರತೋ ಜಾತಾ ಆಂಧ್ರಾಃ ಪುಂಡ್ರಾಶ್ಚ ಮೂತಿಬಾಃ ।**
**ಕಿರಾತಾಃ ಶಬರಾ ಹೂಣಾ ಯವನಾಃ ಪಾಪವೃತ್ತಯಃ ॥ ೧೨೬ ॥**
**ವೇದವಿಪ್ಲಾವಕಾ ಧರ್ಮದ್ರೋಹಿಣಃ ಪ್ರಾಣಿಹಿಂಸಕಾಃ ।**
**ವರ್ಣಾಶ್ರಮೇಷು ಸಾಂಕರ್ಯಕಾರಿಣೋ ಮಲಿನಾಂಗಕಾಃ ॥**
**ತ್ರಿಪುರಾಶಕ್ತಿಸೈನ್ಯಾನಿ ಭೂಯೋ ಭೂಯೋ ವ್ಯಮರ್ದಯನ್ ॥**
**ಅಥ ಶ್ರೀಲಲಿತಾವಾಮಹಸ್ತಪದ್ಮಸ್ಯ ಭಾಸ್ವತಃ ।**
**ಕನಿಷ್ಠಿಕಾನಖೋದ್ಭೂತಃ ಕಲ್ಕಿರ್ನಾಮ ಜನಾರ್ದನಃ ॥**
**ಅಶ್ವಾರೂಢಃ ಪ್ರದೀಪ್ತಶ್ರೀರಟ್ಟಹಾಸಂ ಚಕಾರ ಹ ॥ ೧೨೮ ॥**
**ತಸ್ಯೈವ ಧ್ವನಿನಾ ಸರ್ವೇ ವಜ್ರನಿಷ್ಪೇಷಬಂಧುನಾ ।**
**ಕಿರಾತಾ ಮೂರ್ಚ್ಛಿತಾ ನೇಶುಃ ಶಕ್ತಯಶ್ಚಾಪಿ ಹರ್ಷಿತಾಃ ॥ ೧೨೯ ॥**

---

ಭಾರಭೂತರೂ, ದುರಾಚಾರರೂ, ರಾಜವೇಷಧರರೂ ಆದ ಆ ಅಸುರರೆಲ್ಲರನ್ನೂ ನಾಶಗೊಳಿಸಿದರು.

೧೨೫. ಹೀಗೆ, ಆ ರಾಜಾಸುರರೆಲ್ಲರೂ ನಾಶವಾದ ಬಳಿಕ ಭಂಡಾಸುರನು ಮತ್ತಷ್ಟು ಅಧಿಕವಾಗಿ ಕೋಪಗೊಂಡು, ಧರ್ಮವಿಪ್ಲವವನ್ನುಂಟುಮಾಡುವ ಕಲ್ಯಸ್ತ್ರವನ್ನು ಪ್ರಯೋಗಿಸಿದನು.

೧೨೬. ಆ ಕಲ್ಯಸ್ತ್ರದಿಂದ ಆಂಧ್ರರೂ, ಪುಂಡ್ರರೂ, ಮೂತಿಬರೂ, ಕಿರಾತರೂ, ಶಬರ, ಹೂಣ, ಯವನರೇ ಮೊದಲಾದವರೂ ಹುಟ್ಟಿದರು.

೧೨೭. ಪಾಪಿಷ್ಠರೂ, ವೇದವಿಪ್ಲವವನ್ನುಂಟುಮಾಡುವವರೂ, ಧರ್ಮದ್ರೋಹಿಗಳೂ, ಪ್ರಾಣಿಹಿಂಸಕರೂ, ವರ್ಣಾಶ್ರಮಗಳಲ್ಲಿ ಸಾಂಕರ್ಯವನ್ನುಂಟುಮಾಡುವವರೂ ಮಲಿನವಾದ ದೇಹವುಳ್ಳವರೂ ಆದ ಧರ್ಮವಿಪ್ಲಾವಕರೆಲ್ಲರೂ ಶ್ರೀ ಲಲಿತಾದೇವಿಯ ಶಕ್ತಿಸೇನೆಯನ್ನಡಿಗಡಿಗೂ ಮರ್ದಿಸತೊಡಗಿದರು.

೧೨೮. ಆಗ, ಶ್ರೀಲಲಿತಾಪರಮೇಶ್ವರಿಯ ವಾಮಹಸ್ತದ ಕನಿಷ್ಠಿಕಾನಖದಿಂದ ಕಲ್ಕಿಯೆಂಬ ಜನಾರ್ದನನು ಜನಿಸಿ, ಅಶ್ವಾರೂಢನಾಗಿ, ಪ್ರಜ್ವಲಿಸುತ್ತಿರುವ ತೇಜಸ್ಸುಳ್ಳವನಾಗಿ ಭಯಂಕರವಾದ ಅಟ್ಟಹಾಸ ಧ್ವನಿಯನ್ನು ಮಾಡಿದನು.

೧೨೯. ವಜ್ರಾಯುಧಘಾತಕ್ಕೆ ಸಮಾನವಾದ ಶ್ರೀ ಕಲ್ಕಿಮೂರ್ತಿಯ

ದಶಾವತಾರನಾಥಾಸ್ತೇ ಕೃತ್ವೇತ್ಥಂ ಕರ್ಮ ದುಷ್ಕರಂ ।
ಲಲಿತಾಂಬಾಂ ನಮಸ್ಕೃತ್ಯ ಬದ್ಧಾಂಜಲಿಪುಟಾಃ ಸ್ಥಿತಾಃ ॥ ೧೩೦ ॥
ಪ್ರತಿಕಲ್ಪಂ ಧರ್ಮರಕ್ಷಾಂ ಕರ್ತುಂ ಮತ್ಸ್ಯಾದಿಜನ್ಮಭಿಃ ।
ಲಲಿತಾಂಬಾನಿಯುಕ್ತಾಸ್ತೇ ವೈಕುಂಠಾಯ ಪ್ರತಸ್ಥಿರೇ ॥ ೧೩೧ ॥
ಇತ್ಥಂ ಸಮಸ್ತೇಷ್ವಸ್ತ್ರೇಷು ನಾಶಿತೇಷು ದುರಾಶಯಃ ।
ಮಹಾಮೋಹಾಸ್ತ್ರಮಸೃಜಚ್ಛಕ್ತಯಸ್ತೇನ ಮೂರ್ಚ್ಛಿತಾಃ ॥
ಶಾಂಭವಾಸ್ತ್ರಂ ವಿಸೃಜ್ಯಾಂಬಾ ಮಹಾಮೋಹಾಸ್ತ್ರಮಕ್ಷಿಣೋತ್ ॥
ಅಸ್ತ್ರಪ್ರತ್ಯಸ್ತ್ರಧಾರಾಭಿರಿತ್ಥಂ ಜಾತೇ ಮಹಾಹವೇ ।
ಅಸ್ತಶೈಲಂ ಗಭಸ್ತೀಶೇ ಗಂತುಮಾರಭತಾರುಣಃ ॥ ೧೩೩ ॥
ಅಥ ನಾರಾಯಣಾಸ್ತ್ರೇಣ ಸಾ ದೇವೀ ಲಲಿತಾಂಬಿಕಾ ।
ಸರ್ವಾಸ್ತ್ವಕ್ಷೋಹಿಣೀಸ್ತಸ್ಯ ಭಸ್ಮಸಾದಕರೋದ್ರಣೇ ॥ ೧೩೪ ॥

---

ಅಂತಹ ಗರ್ಜನೆಯನ್ನು ಕೇಳುತ್ತಲೇ ಆ ಕಿರಾತರೆಲ್ಲರೂ ನೆಲಕ್ಕೆ ಬಿದ್ದು ಮೂರ್ಛಿತರಾದರು. ಶಕ್ತಿದೇವತೆಗಳಿಗೆಲ್ಲ ಸಂತೋಷವಾಯಿತು.

೧೩೦. ಎಲೈ ಮುನಿಶ್ರೇಷ್ಠನೇ! ಈ ಪ್ರಕಾರ ಜನಿಸಿದ ಆ ದಶಾವತಾರನಾಥರೆಲ್ಲರೂ, ಇತರರು ಮಾಡಲಸಾಧ್ಯವಾದ ಅದ್ಭುತ ಕಾರ್ಯವನ್ನೆಸಗಿದ ಬಳಿಕ ಶ್ರೀ ಲಲಿತಾದೇವಿಯ ಬಳಿಗೈದಿವಂದು ಆಕೆಗೆರಗಿ ಬದ್ಧಾಂಜಲಿಪುಟರಾಗಿ ನಿಂತರು.

೧೩೧. ಆಗ ಶ್ರೀ ಲಲಿತೆಯು, ಪ್ರತಿಕಲ್ಪದಲ್ಲಿಯೂ ಮತ್ಸ್ಯಾದಿ ದಶಾವತಾರಗಳನ್ನು ಮಾಡಿ ಧರ್ಮವನ್ನು ಪಾಲಿಸುವಂತೆ ಅವರಿಗೆ ಅಪ್ಪಣೆಮಾಡಲು, ಅವರೆಲ್ಲರೂ ವೈಕುಂಠಕ್ಕೆ ಹೊರಟುಹೋದರು.

೧೩೨. ಇತ್ತ, ದುರ್ಬುದ್ಧಿಯಾದ ಭಂಡಾಸುರನು ಈ ರೀತಿ ತನ್ನ ಅಸ್ತ್ರಗಳೆಲ್ಲವೂ ನಾಶಗೊಳ್ಳಲು ಮಹಾಮೋಹಾಸ್ತ್ರವನ್ನು ಪ್ರಯೋಗಿಸಿದನು. ಆ ಮಹಾಸ್ತ್ರಪ್ರಭಾವದಿಂದ ಶಕ್ತಿದೇವತೆಗಳೆಲ್ಲರೂ ಮೂರ್ಛೆಗೊಂಡರು. ಆಗ ಶ್ರೀದೇವಿಯು ಶಾಂಭವಾಸ್ತ್ರವನ್ನು ಪ್ರಯೋಗಿಸಿ ಆ ಮಹಾಮೋಹಾಸ್ತ್ರವನ್ನು ಕತ್ತರಿಸಿದಳು.

೧೩೩. ಎಲೈ ಮುನಿಯೇ! ಶ್ರೀಲಲಿತಾದೇವಿಗೂ ಭಂಡಾಸುರನಿಗೂ ಈ ರೀತಿ ಅಸ್ತ್ರಪ್ರತ್ಯಸ್ತ್ರಯುದ್ಧವು ನಡೆಯುತ್ತಿರುವಂತೆಯೇ ಸೂರ್ಯದೇವನು ಅರುಣಕಿರಣನಾಗಿ ಅಸ್ತಾಚಲವನ್ನು ಸೇರಲುಪಕ್ರಮಿಸಿದನು.

೧೩೪. ತರುವಾಯ, ಶ್ರೀ ಲಲಿತಾಂಬಿಕೆಯು ಆ ಕಾಳೆಗದಲ್ಲಿ

ಅಥ ಪಾಶುಪತಾಸ್ತ್ರೇಣ ದೀಪ್ತಕಾಲಾನಲತ್ವಿಷಾ । [೧೩೫॥
ಚತ್ವಾರಿಂಶಚ್ಚ ಮೂನಾಥಾನ್ ಮಹಾರಾಜ್ಞೀ ವ್ಯಮರ್ದಯತ್ ॥
ಅಥೈಕಶೇಷಂ ತಂ ದುಷ್ಟಂ ನಿಹತಾಶೇಷಬಾಂಧವಂ ।
ಕ್ರೋಧೇನ ಪ್ರಜ್ವಲಂತಂ ಚ ಜಗದ್ವಿಪ್ಲವಕಾರಿಣಂ ॥ ೧೩೬ ॥
ಮಹಾಸುರಂ ಮಹಾಸತ್ತ್ವಂ ಭಂಡಂ ಚಂಡಪರಾಕ್ರಮಂ ।
ಮಹಾಕಾಮೇಶ್ವರಾಸ್ತ್ರೇಣ ಸಹಸ್ರಾದಿತ್ಯವರ್ಚಸಾ ।
ಗತಾಸುಮಕರೋನ್ಮಾತಾ ಲಲಿತಾಪರಮೇಶ್ವರೀ ॥ ೧೩೭ ॥
ತತಸ್ತು ಪ್ರೋದ್ಗತಜ್ವಾಲೈಃ ಶೂನ್ಯಕಂ ನಾಮ ಪಟ್ಟಣಂ ।
ಸಸ್ತ್ರೀಕಂ ಚ ಸಬಾಲಂ ಚ ಸಗೋಷ್ಠಧನಧಾನ್ಯಕಂ ।
ನಿರ್ದಗ್ಧಮಾಸೀತ್ಸಹಸಾ ಸ್ಥಲಮಾತ್ರಮಶಿಷ್ಯತ ॥ ೧೩೮ ॥
ಭಂಡಸ್ಯ ಸಂಕ್ಷಯೇಣಾಸೀತ್ತ್ರೈಲೋಕ್ಯಂ ಹರ್ಷನರ್ತಿತಂ ।
ವಿಜಯಶ್ರೀಯುತಾಂ ದೇವೀಂ ದೃಷ್ಟ್ವಾ ಹರ್ಷಸಮನ್ವಿತಾಃ ।
ಶಕ್ತಯೋ ದಧ್ಮನುಸ್ತೂರ್ಣಂ ಭೇರೀಮಂಗಲಕಾಹಲೀಃ ॥ ೧೩೯ ॥

---

ನಾರಾಯಣಾಸ್ತ್ರವನ್ನು ಪ್ರಯೋಗಿಸಿ ಆ ದಾನವೇಂದ್ರನ ಅಕ್ಷೋಹಿಣೀ ಸೇನೆಯೆಲ್ಲವನ್ನೂ ಸುಟ್ಟು ಭಸ್ಮಗೊಳಿಸಿದಳು.

೧೩೫. ಇದಾದಬಳಿಕ, ಆ ದೇವಿಯು ಪ್ರಜ್ವಲಿಸುವ ಪ್ರಳಯಾಗ್ನಿಗೆ ಸಮಾನವಾದ ಪಾಶುಪತಾಸ್ತ್ರದಿಂದ ಆ ಅಸುರನ ಇಪ್ಪತ್ತುನಾಲ್ಕು ಸೇನಾಪತಿಗಳನ್ನೂ ಮರ್ದಿಸಿದಳು.

೧೩೬-೧೩೭. ತರುವಾಯ, ಸಮಸ್ತ ಬಾಂಧವರೂ ಹತರಾಗಲು, ಪ್ರಪಂಚವನ್ನೇ ತಳಮಳಗೊಳಿಸವಂತಹ ಆ ದುಷ್ಟಭಂಡನೊಬ್ಬನೇ ಉಳಿದು ಕೋಪದಿಂದ ಪ್ರಜ್ವಲಿಸುತ್ತಿರುವುದನ್ನು ಕಂಡು, ಶ್ರೀಮಾತೆಯಾದ ಶ್ರೀ ಲಲಿತಾಪರಮೇಶ್ವರಿಯು, ಮಹಾಸತ್ವನೂ ಚಂಡಪರಾಕ್ರಮಿಯೂ ಆದ ಆ ದಾನವನನ್ನು ಸಹಸ್ರ ಸೂರ್ಯರ ತೇಜಸ್ಸಿನಿಂದ ಪ್ರಜ್ವಲಿಸುತ್ತಿರುವ ಮಹಾಕಾಮೇಶ್ವರಾಸ್ತ್ರದಿಂದ ಗತಪ್ರಾಣನನ್ನಾಗಿ ಮಾಡಿದಳು.

೧೩೮. ಬಳಿಕ ಹೆಂಗಸರು ಮಕ್ಕಳುಗಳಿಂದಲೂ, ದನದ ಕೊಟ್ಟಿಗೆ ಮತ್ತು ಧಾನ್ಯದ ಕಣಜಗಳಿಂದಲೂ ತುಂಬಿದ ಆ ದಾನವನ ಶೂನ್ಯಕವೆಂಬ ಪಟ್ಟಣವೂ ಸಹ, ಎತ್ತೆತ್ತಲೂ ಹಬ್ಬಿ ಹೊರಟ ಆ ಪಾಶುಪತಾಸ್ತ್ರದ ಜ್ವಾಲೆಗಳಿಂದ ಜಾಗ್ರತೆಯಾಗಿ ಸುಟ್ಟು ಆ ಸ್ಥಳವು ಮಾತ್ರ ಉಳಿಯಿತು.

೧೩೯. ಈ ರೀತಿ ಭಂಡಾಸುರನು ನಾಶವಾದ ಬಳಿಕ ಮೂರು ಲೋಕ

**ಅವಾಕಿರನ್‌ಪುಷ್ಪವೃಷ್ಟೀರ್ದೇವಾ ಹರ್ಷಸಮನ್ವಿತಾಃ ।**
**ದೇವದುಂದುಭಯೋ ನೇದುರ್ವವುರ್ವಾಸಂತವಾಯವಃ ॥ ೧೪೦ ॥**
**ದಿಶಃ ಪ್ರಸನ್ನತಾಮಾಪುರ್ನಭಶ್ಚ ವಿಮಲಂ ತಥಾ ।**
**ಮಂಗಲಾರಾತ್ರಿಕಂ ಚಕ್ರುರ್ದೇವಗಂಧರ್ವಯೋಷಿತಃ ॥ ೧೪೧ ॥**
**ನನೃತುಶ್ಚಾಪ್ಸರಃಶ್ರೇಷ್ಠಾ ಉರ್ವಶೀಮೇನಕಾದಯಃ ।**
**ಪ್ಲವನಂ ವಿದಧುರ್ಹರ್ಷಾದ್ದೇವಗಂಧರ್ವಕಿನ್ನರಾಃ ॥ ೧೪೨ ॥**
**ಸ್ಮೃತ್ವಾಸ್ಮೃತ್ವಾ ಮಹಾರಾಜ್ಞ್ಯಾಃ ಪೌರುಷಂತು ಚರಾಚರಂ ।**
**ಅಭೂತ್ಕಂಟಕಿತಂ ಸರ್ವಂ ಕಿಮೇತದಿತಿ ಸಸ್ಮಿತಂ ॥ ೧೪೩ ॥**
**ವಿಶ್ವಾವಸುಪ್ರಭೃತಯೋ ಗಂಧರ್ವಾಃ ಸುರಗಾಯಕಾಃ ।**
**ತುಂಬುರುರ್ನಾರದಶ್ಚೈವ ಸಾಕ್ಷಾದೇವ ಸರಸ್ವತೀ ।**
**ಜಯಮಂಗಲಪದ್ಯಾನಿ ಪಠಂತಿ ಪಟುಗೀತಿಭಿಃ ॥ ೧೪೪ ॥**

---

ಗಳೂ ಸಂತೋಷದಿಂದ ನರ್ತಿಸಿದವು. ಶಕ್ತಿದೇವತೆಗಳೆಲ್ಲರೂ ವಿಜಯಶ್ರೀ ಸಹಿತೆಯಾಗಿರುವ ಶ್ರೀ ಲಲಿತಾಪರಮೇಶ್ವರಿಯನ್ನು ಕಂಡು ಸಂತೋಷ ಗೊಂಡು ಭೇರಿಯೇ ಮೊದಲಾದ ಮಂಗಲವಾದ್ಯಗಳನ್ನು ಜಾಗ್ರತೆಯಾಗಿ ನುಡಿಸಿದರು.

೧೪೦. ದೇವತೆಗಳೆಲ್ಲರೂ ಹರ್ಷಸಮನ್ವಿತರಾಗಿ ಪುಷ್ಪವೃಷ್ಟಿಯನ್ನು ವರ್ಷಿಸಿದರು. ದೇವದುಂದುಭಿಗಳು ಮೊಳಗಿದವು. ವಸಂತಸಮಯದ ಮಲಯಮಾರುತಗಳು ಬೀಸಿದವು.

೧೪೧. ದಿಕ್ಕುಗಳೆಲ್ಲವೂ ಪ್ರಸನ್ನಗಳಾದವು. ಗಗನವು ನಿರ್ಮಲ ವಾಯಿತು. ದೇವಗಂಧರ್ವನಾರಿಯರೆಲ್ಲರೂ ಶ್ರೀ ಲಲಿತಾಮಹಾರಾಜ್ಞಿಗೆ ಮಂಗಳಾರತಿಗಳನ್ನೆತ್ತಿದರು.

೧೪೨. ಊರ್ವಶೀ ಮೇನಕಿಯೇ ಮೊದಲಾದ ಅಪ್ಸರಶ್ರೇಷ್ಠೆಯರು ನರ್ತನಮಾಡಿದರು. ದೇವಗಂಧರ್ವಕಿನ್ನರರೆಲ್ಲರೂ ಸಂತೋಷಾಧಿಕ್ಯದಿಂದ ಹಾರಿ ನರ್ತನಮಾಡಿದರು.

೧೪೩. ಶ್ರೀ ಮಹಾರಾಜ್ಞಿಯ ಈ ವಿಧವಾದ ಪರಾಕ್ರಮವನ್ನು ಬಾರಿಬಾರಿಗೂ ನೆನೆದು ಚರಾಚರಾತ್ಮಕವಾದ ಜಗತ್ತೇ ಇದೇನಿದೇನೆಂದು ಆಶ್ಚರ್ಯದಿಂದ ಕಿಕ್ಕಿರಿದುಹೋಯಿತು.

೧೪೪. ದೇವನಾಯಕರಾದ ವಿಶ್ವಾವಸುವೇ ಮೊದಲಾದ ಗಂಧರ್ವರೂ, ತುಂಬುರು ನಾರದರೂ, ಸಕ್ಷಾತ್ ಸರಸ್ವತೀದೇವಿಯೂ

**ಹರ್ಷಸಂಪ್ರುಲ್ಲವದನಾಃ ಸ್ಫುರತ್ಪುಲಕಭೂಷಣಾಃ ।**
**ಮುಹುರ್ಜಯಜಯೇತ್ಯೇವ ಸ್ತುವಾನಾ ಲಲಿತೇಶ್ವರೀಂ ॥ [೧೪೫॥**
**ಹರ್ಷೇಣಾಂಧಾ ಮದೋನ್ಮತ್ತಾಃ ಪ್ರನೃತ್ಯಂತಃ ಪದೇಪದೇ ॥**
**ಸಪ್ತರ್ಷಯೋ ವಸಿಷ್ಠಾದ್ಯಾ ಋುಗ್ಯಜುಸ್ಸಾಮರೂಪಿಭಿಃ । [೧೪೬॥**
**ಅಥರ್ವರೂಪೈರ್ಮಂತ್ರೈಶ್ಚ ವರ್ಧಯಂತೋ ಜಯಶ್ರಿಯಂ ॥**
**ಹವಿಷೇವ ಮಹಾವಹ್ನಿಶಿಖಾಮತ್ಯಂತಪಾವನೀಂ ।**
**ಆಶೀರ್ವಾದೇನ ಮಹತಾ ವರ್ಧಯಾಮಾಸುರುತ್ತಮಾಃ॥ ೧೪೭ ॥**
**ತೈಃ ಸ್ತೂಯಮಾನಾ ಲಲಿತಾ ವ್ರೀಡಾನಮ್ರೀಕೃತಾನನಾ ।**
**ಭಂಡಾಸುರಂ ವಿನಿರ್ಜಿತ್ಯ ಗಂತುಮುದ್ಯೋಗಮಾದಧೇ ॥ ೧೪೮ ॥**
**ಅಥ ಸಂಪತ್ಕರೀ ದೇವೀ ಚಚಾಲಾಗ್ರೇ ಸ್ವಸೇನಯಾ ।**
**ಪಾಶಾಯುಧಸಮುತ್ಪನ್ನಾ ಹಯಾರೂಢಾ ಸ್ವಸೇನಯಾ॥ ೧೪೯ ॥**

---

ಮನೋಹರವಾದ ಹಾಡುಗಳಿಂದ ಆ ಮಹಾರಾಜ್ಞಿಯ ಜಯಮಂಗಲ ಪದ್ಯಗಳನ್ನು ಹಾಡಿದರು.

೧೪೫. ಅವರೆಲ್ಲರೂ, ಸಂತೋಷದಿಂದರಳಿದ ಮುಖಗಳುಳ್ಳವರಾಗಿ, ರೋಮಾಂಚದಿಂದಲುಗಿ ಹೊಳೆಯುತ್ತಿರುವ ಭೂಷಣಗಳುಳ್ಳವರಾಗಿ ಅಡಿಗಡಿಗೂ ಶ್ರೀ ಲಲಿತಾಪರಮೇಶ್ವರಿಯನ್ನು 'ಜಯಜಯ' ಎಂದು ಸ್ತುತಿಸಿ, ಸಂತೋಷದಿಂದ ಕುರುಡರೂ ಮದೋನ್ಮತ್ತರೂ ಆಗಿ ಪದೇ ಪದೇ ನರ್ತಿಸಿದರು.

೧೪೬-೧೪೭. ವಸಿಷ್ಠನೇ ಮೊದಲಾದ ಸಪ್ತರ್ಷಿಗಳೆಲ್ಲರೂ ಋುಗ್ಯಜುಸ್ಸಾಮರೂಪಗಳೂ, ಅಥರ್ವರೂಪಗಳೂ ಆದ ಮಂತ್ರಗಳಿಂದ ಆ ದೇವಿಯ ವಿಜಯವನ್ನು ವರ್ಧಿಸುತ್ತ ಅತ್ಯಂತ ಪವಿತ್ರವಾದ ಅಗ್ನಿಜ್ವಾಲೆಯನ್ನು ಹವಿಸ್ಸಿನಿಂದೆಂತೋ ಅಂತು ಮಹತ್ತರವಾದ ಆಶೀರ್ವಾದಗಳಿಂದ ಆ ಮಹಾರಾಜ್ಞಿಯನ್ನು ವೃದ್ಧಿಗೊಳಿಸಿದರು.

೧೪೮. ಹೀಗೆ ಶ್ರೀ ಲಲಿತಾಪರಮೇಶ್ವರಿಯು ಭಂಡಾಸುರನನ್ನು ಸಂಹರಿಸಿದ ತರುವಾಯ ದೇವತೆಗಳೆಲ್ಲರಿಂದಲೂ ಸಂಸ್ತೂಯಮಾನೆಯಾಗಿ ಲಜ್ಜೆಯಿಂದ ತಗ್ಗಿಸಿದ ಮುಖವುಳ್ಳವಳಾಗಿ ಶಿಬಿರಕ್ಕೆ ಹೊರಡಲುಜ್ಜುಗಿಸಿದಳು.

೧೪೯. ಆಗ ಸಂಪತ್ಕರೀದೇವಿಯು ತನ್ನ ಸೇನೆಯೊಡಗೂಡಿ ಮುಂದೆ ಹೊರಟಳು. ಆ ಮೇಲೆ ಶ್ರೀದೇವಿಯ ಪಾಶಾಯುಧದಿಂದುದಿಸಿದ ಅಶ್ವಾರೂಢಾದೇವಿಯು ತನ್ನ ಸೇನೆಗಳೊಡನೆ ಹೊರಟಳು.

ಲೋಲಾಭಿಃ ಕೇತುಮಾಲಾಭಿರುಲ್ಲಿಖಂತೀ ಘನಾಘನಂ ।
ವ್ಯಚಲತ್ಪುರತೋ ದೇವ್ಯಾ ಬಹುವಿಕ್ರಮಶಾಲಿನೀ ॥ ೧೫೦ ॥
ಪಾರ್ಶ್ವದ್ವಯಂ ಸಮಾಶ್ರಿತ್ಯ ಮಹಾರಾಜ್ಞ್ಯಾಃ ಪ್ರಚೇಲತುಃ ।
ಮಂತ್ರಿಣೀದಂಡನಾಥೇ ತೇ ಆರುಹ್ಯ ರಥಪುಂಗವೌ ॥ ೧೫೧ ॥

ಇತ್ಥಂ ವಿಧಾಯ ಸುರಕಾರ್ಯಮನಿಂದ್ಯರೂಪಾ
ಶ್ರೀಚಕ್ರರಾಜರಥಮಂಡಲಮಂಡನಶ್ರೀಃ ।
ಕಾಮೇಶ್ವರೀ ತ್ರಿಜಗತಾಂ ಜನನೀ ಬಭಾಸೇ
ವಿದ್ಯೋತಮಾನವಿಭವಾ ವಿಜಯಶ್ರಿಯಾಢ್ಯಾ ॥ ೧೫೨ ॥

ಸೈನ್ಯಂ ಸಮಸ್ತಮಪಿ ಸಂಗರಕರ್ಮಖಿನ್ನಂ
ಭಂಡಾಸುರಪ್ರಬಲಬಾಣಕೃಶಾನುತಪ್ತಂ ।
ಅಸ್ತಂ ಗತೇ ಸವಿತರಿ ಪ್ರಥಿತಪ್ರಭಾವಾ
ಶ್ರೀದೇವತಾ ಶಿಬಿರಮಾತ್ಮನ ಆನಿನಾಯ ॥ ೧೫೩ ॥

---

೧೫೦. ಆ ಅಶ್ವಾರೂಢಾದೇವಿಯು ಅಲುಗಾಡುತ್ತಿರುವ ನಿಶಾನಿಗಳ ಮಾಲೆಗಳಿಂದ ಗಗನವನ್ನೊರೆಯುತ್ತ, ಮಹಾಪರಾಕ್ರಮಶಾಲಿನಿಯಾದ ಶ್ರೀ ದೇವಿಯ ಮುಂಗಡೆ ಹೊರಟಳು.

೧೫೧. ತರುವಾಯ ಮಂತ್ರಿಣೀದಂಡನಾಥೆಯರೀರ್ವರೂ ತಂತಮ್ಮ ಗೇಯಚಕ್ರ ಕಿರಿಚಕ್ರ ಮಹಾರಥಗಳನ್ನೇರಿ ಕುಳಿತು ಶ್ರೀಮಹಾರಾಜ್ಞಿಯ ಇಕ್ಕೆಲಗಳಲ್ಲಿಯೂ ನಡೆದರು.

೧೫೨. ಎಲೈ ಕುಂಭಸಂಭವನೇ! ಈ ಪ್ರಕಾರ ಶ್ರೀ ಚಕ್ರರಾಜರಥ ಮಂಡಲಕ್ಕೆ ಮಂಡನಪ್ರಾಯವಾಗಿ, ಸಂಪತ್ಸ್ವರೂಪಿಣಿಯೂ, ಕಾಮೇಶ್ವರಿಯೂ, ಮಹಾ ಸುಂದರಿಯೂ ಆದ ಆ ತ್ರಿಜಗನ್ಮಾತೆಯು ದೇವಕಾರ್ಯವನ್ನು ನಿರ್ವಹಿಸಿ, ಪ್ರಕಟವಾದ ವಿಭವವುಳ್ಳವಳಾಗಿ ವಿಜಯೈಶ್ವರ್ಯಸಮೃದ್ಧೆಯಾಗಿ ಬೆಳಗಿದಳು.

೧೫೩. ಪ್ರಸಿದ್ಧವಾದ ಪ್ರಭಾವವುಳ್ಳ ಆ ದೇವಿಯು ಯುದ್ಧಮಾಡಿ ಆಯಾಸಗೊಂಡಿರುವುದೂ, ಭಂಡದೈತ್ಯನ ಪ್ರಬಲವಾದ ಬಾಣಗಳೆಂಬ ಬೆಂಕಿಯಿಂದ ಬೆಂದಿರುವುದೂ ಆದ ತನ್ನ ಶಕ್ತಿಸೇನೆಯನ್ನೆಲ್ಲ ಸೂರ್ಯನು ಅಸ್ತಮಿಸುತ್ತಿರಲು ಶಿಬಿರಕ್ಕೆ ಕರತಂದಳು.

ಯೋ ಭಂಡದಾನವವಧಂ ಲಲಿತಾಂಬಯೋಮಂ
ಕ್ಲ್ಪಪ್ತಂ ಸಕೃತ್ಪಠತಿ ತಸ್ಯ ತಪೋಧನೇಂದ್ರ ।
ನಾಶಂ ಪ್ರಯಾಂತಿ ಕದನಾನಿ ಧೃತಾಷ್ಟಸಿದ್ಧೇ-
ರ್ಭುಕ್ತಿಶ್ಚ ಮುಕ್ತಿರಪಿ ವರ್ತತ ಏವ ಹಸ್ತೇ ॥ ೧೫೪ ॥

ಇಮಂ ಪವಿತ್ರಂ ಲಲಿತಾಪರಾಕ್ರಮಂ
ಸಮಸ್ತಪಾಪಘ್ನಮಶೇಷಸಿದ್ಧಿದಂ ।
ಪಠಂತಿ ಪುಣ್ಯೇಷು ದಿನೇಷು ಯೇ ನರಾ
ಭಜಂತಿ ತೇ ಭಾಗ್ಯಸಮೃದ್ಧಿಮುತ್ತಮಾಂ ॥ ೧೫೫ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಚತುರ್ವಿಂಶೋಽಧ್ಯಾಯಃ

॥ ಯುದ್ಧ ಖಂಡಸ್ಸಮಾಪ್ತಃ ॥

---

೧೫೪. ಎಲೈ ಮುನಿಶ್ರೇಷ್ಠನೇ! ಶ್ರೀ ಲಲಿತಾಪರಮೇಶ್ವರಿಯೆಸಗಿದ ಈ ಭಂಡಸಂಹಾರವೃತ್ತಾಂತರೂಪವಾದ ಚರಿತವನ್ನು ಯಾರು ಕ್ಲ್ಪಪ್ತವಾಗಿ ಒಮ್ಮೆಯಾದರೂ ಪಠನಮಾಡುವರೋ, ಅವರಿಗೆ ಅಷ್ಟಸಿದ್ಧಿಗಳೂ ದೊರೆತು, ಸಂಭವಿಸುವ ಕದನಗಳೆಲ್ಲವೂ ನಾಶವಾಗಿ ಭುಕ್ತಿಮುಕ್ತಿಗಳೆರಡೂ ಕೈಗೂಡುವುವು.

೧೫೫. ಪವಿತ್ರವೂ, ಸಮಸ್ತ ಪಾಪಗಳನ್ನೂ ನಾಶಗೊಳಿಸುವುದೂ, ಸಮಸ್ತ ಸಿದ್ಧಿಪ್ರದವೂ, ಶ್ರೀ ಲಲಿತಾಪರಾಕ್ರಮಪೂರಿತವೂ ಆದ ಈ ಚರಿತವನ್ನು ಪುಣ್ಯದಿನಗಳಲ್ಲಿ ಯಾವ ನರರು ಪಠಿಸುತ್ತಾರೆಯೋ ಅವರು ಉತ್ತಮವಾದ ಸಂಪತ್ಸಮೃದ್ಧಿಯನ್ನು ಪಡೆಯುತ್ತಾರೆ.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಯುದ್ಧ ಖಂಡವು ಮುಗಿದುದು ॥

॥ ಶ್ರೀಃ ॥

## ಅಥ ಪಂಚವಿಂಶೋಽಧ್ಯಾಯಃ

[ಬ್ರಹ್ಮಾದಿಕೃತ ಶ್ರೀಲಲಿತಾಂಬಿಕಾಸ್ತುತಿಃ— ಕಾಮಸಂಜೀವನಂ — ಗಿರಿಜಾ ವಿವಾಹಃ— ಷಣ್ಮುಖಜನನಂ— ತಾರಕ ಸಂಹಾರಃ]

ದೈತ್ಯೇಂದ್ರೇ ನಿಹತೇಽಥ ದೇವಪತಿಭಿರ್ಬ್ರಹ್ಮಾಚ್ಯುತಾದ್ಯೈಃ ಸ್ತುತಾ
ದೇವೀ ಶ್ರೀಲಲಿತಾಂಬಿಕಾ ಸುಮಶರಂ ಸಂಜೀವಯಿತ್ವಾ ಕ್ಷಣಾತ್ ।
ತದ್ದ್ವಾರಾ ಗಿರಿಜಾವಿವಾಹಮಕರೋದೀಶಸ್ಯ ಪುತ್ರೋಽಪ್ಯಭೂ-
ದ್ಯಸ್ತಂ ತಾರಕದಾನವಂ ಸಮಹನತ್ತ್ವಾಮಂಬ ನಿತ್ಯಂ ಭಜೇ ॥

ಅಗಸ್ತ್ಯಃ—

**ಅಶ್ವಾನನ ಮಹಾಪ್ರಾಜ್ಞ ಶ್ರುತಮಾಖ್ಯಾನಮುತ್ತಮಂ ।**
**ವಿಕ್ರಮೋ ಲಲಿತಾದೇವ್ಯಾ ವಿಶಿಷ್ಯೋ ವರ್ಣಿತಸ್ತ್ವಯಾ ॥ ೧ ॥**
**ಚರಿತ್ರೈರನಘೈರ್ದೇವ್ಯಾಃ ಸಂಪ್ರೀತೋಽಸ್ಮಿ ಹಯಾನನ ।**
**ಶ್ರುತಾ ಸಾ ಮಹತೀ ಶಕ್ತಿರ್ಮಂತ್ರಿಣೀದಂಡನಾಥಯೋಃ ॥ ೨ ॥**
**ಪಶ್ಚಾತ್ಕಿಮಕರೋತ್ತತ್ರ ಯುದ್ಧಾನಂತರಮಂಬಿಕಾ ।**
**ಚತುರ್ಥದಿನಶರ್ವರ್ಯಾಂ ವಿಭಾತಾಯಾಂ ಹಯಾನನ ॥ ೩ ॥**

---

### ಕನ್ನಡದ ಅನುವಾದ

[ಬ್ರಹ್ಮಾದಿಕೃತ ಶ್ರೀಲಲಿತಾಸ್ತುತಿ— ದೇವಿಯು ಕಾಮನನ್ನು ಬದುಕಿಸಿದುದು— ಗಿರಿಜಾ ವಿವಾಹ— ಷಣ್ಮುಖ ಜನನ— ತಾರಕ ಸಂಹಾರ]

೧. ಅಗಸ್ತ್ಯನು ಕೇಳುತ್ತಾನೆ:—"ಎಲೈ ಪ್ರಾಜ್ಞನಾದ ಅಶ್ವಾನನನೇ! ಶ್ರೇಷ್ಠವಾದ ಈ ಅಖ್ಯಾನವ (ಕಥೆಯ)ನ್ನು ಕೇಳಿದುದಾಯಿತು. ಶ್ರೀಲಲಿತಾದೇವಿಯ ಪರಾಕ್ರಮವೆಲ್ಲವನ್ನೂ ನೀನು ಸಂಪೂರ್ಣವಾಗಿ ವರ್ಣಿಸಿ ಹೇಳಿದೆ.

೨. ಹಯಾನನ! ಶ್ರೀದೇವಿಯ ಪರಮಪಾವನವಾದ ಚರಿತವನ್ನು ಕೇಳಿ ನಾನು ತೃಪ್ತನಾಗಿದ್ದೇನೆ. ಶ್ರೀಮಂತ್ರಿಣೀದಂಡನಾಥೆಯರ ಮಹತ್ತರ ಸಾಮರ್ಥ್ಯವನ್ನೂ ಕೇಳಿ ತಿಳಿದುಕೊಂಡೆನು.

೩. ಶ್ರೀಜಗದಂಬಿಕೆಯು, ಆ ನಾಲ್ಕನೆಯ ಯುದ್ಧದಿವಸದಲ್ಲಿ ಭಂಡಾಸುರನನ್ನು ಸಂಹರಿಸಿದ ಬಳಿಕ ಅಂದಿನ ರಾತ್ರಿಯನ್ನು ಕಳೆದು ಮಾರನೆಯ ದಿನ ಬೆಳಿಗ್ಗೆ ಯಾವ ಕಾರ್ಯವನ್ನು ಮಾಡಿದಳೆಂಬ ವಿಷಯವನ್ನು ನನಗೆ ಅಪ್ಪಣೆಕೊಡಿಸಬೇಕು."

ಹಯಗ್ರೀವಃ—

ಶೃಣು ಕುಂಭಭವ ಪ್ರಾಜ್ಞ ಯತ್ತಯಾ ಜಗದಂಬಯಾ ।
ಪಶ್ಚಾದಾಚರಿತಂ ಕರ್ಮ ನಿಹತೇ ಭಂಡದಾನವೇ ॥ ೪ ॥
ಶಕ್ತೀನಾಮಖಿಲಂ ಸೈನ್ಯಂ ದೈತ್ಯಯುದ್ಧಶರಾರ್ದಿತಂ ।
ಮುಹುರಾಹ್ಲಾದಯಾಮಾಸ ಲೋಚನೈರಮೃತಾಪ್ಲುತೈಃ ॥ ೫ ॥
ಲಲಿತಾಪರಮೇಶಾನ್ಯಾಃ ಕಟಾಕ್ಷಾಮೃತಧಾರಯಾ ।
ಜಹುರ್ಯುದ್ಧಪರಿಶ್ರಾಂತಿಂ ಶಕ್ತಯಃ ಪ್ರೀತಮಾನಸಾಃ ॥ ೬ ॥
ಅಸ್ಮಿನ್ನವಸರೇ ದೇವಾ ಭಂಡಮರ್ದನತೋಷಿತಾಃ ।
ಸರ್ವೇಽಪಿ ಸೇವಿತುಂ ಪ್ರಾಪ್ತಾ ಬ್ರಹ್ಮವಿಷ್ಣುಪುರೋಗಮಾಃ ॥ ೭ ॥
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಶಕ್ರೋ ದಿಕ್ಪಾಸ್ತಥೈವ ಚ ।
ಆದಿತ್ಯಾ ವಸವೋ ರುದ್ರಾ ಮರುತಃ ಸಾಧ್ಯದೇವತಾಃ ॥ ೮ ॥
ಸಿದ್ಧಾಃ ಕಿಂಪುರುಷಾ ಯಕ್ಷಾ ನಿರ್ಋತ್ಯಾದ್ಯಾ ನಿಶಾಚರಾಃ ।
ಪ್ರಹ್ಲಾದಾದ್ಯಾ ಮಹಾದೈತ್ಯಾಃ ಸರ್ವೇಽಪ್ಯಂಡನಿವಾಸಿನಃ ॥
ಆಗತ್ಯ ತುಷ್ಟುವುಃ ಪ್ರೀತ್ಯಾ ಸಿಂಹಾಸನಮಹೇಶ್ವರೀಂ ॥ ೯ ॥

---

೪. ಹಯಗ್ರೀವಮುನಿಯು ಹೇಳುತ್ತಾನೆ:—ಎಲೈ ಬುದ್ಧಿಶಾಲಿಯಾದ ಕುಂಭೋದ್ಭವನೇ! ಭಂಡಾಸುರನ ಸಂಹಾರವಾದ ತರುವಾಯ ಜಗದಂಬಿಕೆಯು ಯಾವ ಕಾರ್ಯವನ್ನು ಮಾಡಿದಳೆಂಬ ವಿಷಯವನ್ನೀಗ ಕೇಳು.

೫. ಆ ಮಹಾದೇವಿಯು ದೈತ್ಯರೊಡನೆಸಗಿದ ಮಹಾಯುದ್ಧದಲ್ಲಿ ಅವರ ಬಾಣಗಳಿಂದ ನೊಂದಿದ್ದ ಶಕ್ತಿದೇವತೆಗಳ ಸಮಸ್ತ ಸೇನೆಯನ್ನೂ ತನ್ನ ಕುಡಿಗಣ್ಣೋಟವೆಂಬ ಅಮೃತಧಾರೆಗಳಿಂದ ಅಡಿಗಡಿಗೂ ಅನುಗ್ರಹಿಸಿ ಸಂತೋಷಗೊಳಿಸಿದಳು.

೬. ಸಮಸ್ತ ಶಕ್ತಿದೇವಿಯರೂ ಆ ಲಲಿತಾಪರಮೇಶ್ವರಿಯ ಕೃಪಾಕಟಾಕ್ಷವೆಂಬ ಅಮೃತಧಾರೆಯಿಂದ ಯುದ್ಧದ ಸಲುವಾಗಿ ತಮಗೆ ಉಂಟಾಗಿದ್ದ ಆಯಾಸವನ್ನು ತೊರೆದು ಸುಪ್ರಸನ್ನವಾದ ಮನಸ್ಸುಳ್ಳವರಾದರು.

೭. ಅದೇ ಸಮಯದಲ್ಲಿಯೇ ಬ್ರಹ್ಮ ವಿಷ್ಣುಗಳೇ ಮೊದಲಾದ ಸಮಸ್ತ ದೇವತೆಗಳೂ ಭಂಡಾಸುರನ ಸಂಹಾರದಿಂದ ಸಂತೋಷಗೊಂಡು ಆ ಮಹಾದೇವಿಯನ್ನು ಸೇವಿಸಲೋಸುಗ ಅಲ್ಲಿಗೈತಂದರು.

೮-೯. ಬ್ರಹ್ಮ, ವಿಷ್ಣು, ರುದ್ರ, ಇಂದ್ರ, ದಿಕ್ಪಾಲಕರು, ಆದಿತ್ಯರು,

ಬ್ರಹ್ಮಾದ್ಯಾಃ —

ನಮೋ ನಮಸ್ತೇ ಜಗದೇಕನಾಥೇ
ನಮೋ ನಮಃ ಶ್ರೀತ್ರಿಪುರಾಭಿಧಾನೇ ।
ನಮೋ ನಮೋ ಭಂಡಮಹಾಸುರಘ್ನಿ
ನಮೋಽಸ್ತು ಕಾಮೇಶ್ವರವಾಮಕೇಶಿ ॥ ೧೦ ॥
ಚಿಂತಾಮಣೇ ಚಿಂತಿತದಾನದಕ್ಷೇಽ-
ಚಿಂತ್ಯೇ ಚಿದಾಕಾರತರಂಗಮಾಲೇ ।
ಚಿತ್ರಾಂಬರೇ ಚಿತ್ರಜಗತ್ಪ್ರಸೂತೇ
ಚಿತ್ರಾಖ್ಯನಿತ್ಯಾಭಿಗತೇ ನಮಸ್ತೇ ॥ ೧೧ ॥
ಮೋಕ್ಷಪ್ರದೇ ಮುಗ್ಧಶಶಾಂಕಚೂಡೇ
ಮುಗ್ಧಸ್ಮಿತೇ ಮೋಹವಿಭೇದದಕ್ಷೇ ।
ಮುದ್ರೇಶ್ವರೀಚರ್ಚಿತರಾಜ್ಯತಂತ್ರೇ
ಮುದ್ರಾಪ್ರಿಯೇ ದೇವಿ ನಮೋ ನಮಸ್ತೇ ॥ ೧೨ ॥

---

ವಸುಗಳು, ರುದ್ರರು, ಸಪ್ತ ಮರುತ್ತುಗಳು, ಸಾಧ್ಯದೇವತೆಗಳು, ಸಿದ್ಧರು, ಕಿಂಪುರುಷರು, ಯಕ್ಷರು ಇವರೇ ಮೊದಲಾದವರೂ, ನಿರ್ಋತಿ ಮೊದಲಾದ ನಿಶಾಚರರೂ, ಪ್ರಹ್ಲಾದನೇ ಮೊದಲಾದ ಮಹಾದೈತ್ಯರೂ, ಸಮಸ್ತ ಬ್ರಹ್ಮಾಂಡನಿವಾಸಿಗಳೂ ಅಲ್ಲಿಗೈತಂದು ಪರಮಪ್ರೀತಿಯಿಂದ ಆ ಸಿಂಹಾಸನೇಶ್ವರಿಯನ್ನು ಸ್ತುತಿಸಿದರು.

೧೦. ಬ್ರಹ್ಮಾದಿಗಳು ಸ್ತುತಿಸುತ್ತಾರೆ :— ಸಮಸ್ತ ಜಗತ್ತಿಗೂ ಸ್ವಾಮಿನಿಯೇ ! ನಿನಗೆ ನಮೋನಮಃ ! ಶ್ರೀ ತ್ರಿಪುರೆಯೆಂಬ ಅಭಿಧಾನವುಳ್ಳ ನಿನಗೆ ನಮೋನಮಃ! ಭಂಡಾಸುರಸಂಹಾರಿಣಿ!! ನಿನಗೆ ನಮಸ್ಕಾರವು. ಶ್ರೀ ಕಾಮೇಶ್ವರನ ವಾಮಕೇಶ್ವರಿಯಾದ ನಿನಗೆ ನಮಸ್ಕಾರವು!

೧೧. ಭಕ್ತ ಚಿಂತಾಮಣಿಯೂ, ಭಕ್ತರು ಚಿಂತಿಸಿದುದನ್ನು ದಯೆಗೈಯುವ ಸಾಮರ್ಥ್ಯವುಳ್ಳವಳೂ, ಚಿಂತಿಸಲಸಾಧ್ಯಳೂ, ಚಿದಾಕಾರ (ಜ್ಞಾನರೂಪ)ವಾದ ತರಂಗ ಮಾಲೆಗಳುಳ್ಳವಳೂ, ಚಿತ್ರಾಂಬರೆಯೂ, ಚಿತ್ರವಾದ ಜಗತ್ತನ್ನು ಸೃಷ್ಟಿಸುವಾಕೆಯೂ, ಚಿತ್ರವೆಂಬ ಹೆಸರುಳ್ಳ ನಿತ್ಯ ಗತಿಯುಳ್ಳವಳೂ ಆದ ನಿನಗೆ ನಮಸ್ಕಾರವು.

೧೨. ಮೋಕ್ಷವನ್ನು ದಯಪಾಲಿಸುವಾಕೆಯೂ, ಮನೋಹರವಾದ ಚಂದ್ರನನ್ನು ಮುಡಿಯಲ್ಲಿ ತಾಳಿದವಳೂ, ಸುಂದರವಾದ ಮಂದಸ್ಮಿತ

ಕ್ರೂರಾಸುರಧ್ವಂಸಿನಿ ಕೋಮಲಾಂಗಿ
ಕೋಪೇಷು ಕಾಲೀತನುಮಾದಧಾನೇ ।
ಕ್ರೋಡಾನನಾಪಾಲಿತಸೈನ್ಯ ಚಕ್ರೇ
ಕ್ರೋಡೀಕೃತಾಶೇಷದಯೇ ನಮಸ್ತೇ ॥ ೧೩ ॥

ಷಡಂಗದೇವೀಪರಿವಾರಗುಪ್ತೇ
ಷಡಂಗಯುಕ್ತಶ್ರುತಿವಾಕ್ಯಮೃಗ್ಯೇ ।
ಷಟ್ಚಕ್ರಸಂಸ್ಥೇ ಚ ಷಡೂರ್ಮಿಹಂತ್ರಿ
ಷಡ್ಭಾವರೂಪೇ ಲಲಿತೇ ನಮಸ್ತೇ ॥ ೧೪ ॥

ಕಾಮೇಶ್ವರೀಮುಖ್ಯಸಮಸ್ತನಿತ್ಯಾ
ಕಾಂತಾಸನಾಂತೇ ಕಮಲಾಯತಾಕ್ಷಿ ।
ಕಾಮಪ್ರದೇ ಕಾಮಿನಿ ಕಾಮಶಂಭೋಃ
ಕಾಮ್ಯೇ ಕಲಾನಾಮಧಿಪೇ ನಮಸ್ತೇ ॥ ೧೫ ॥

---

ವುಳ್ಳವಳೂ, ಭಕ್ತರ ಭ್ರಾಂತಿಯನ್ನು ಕಳೆಯುವವಳೂ, ಮುದ್ರೇಶ್ವರಿಯಾದ ಶ್ರೀ ಮಂತ್ರಿಣೀದೇವಿಯೊಡನೆ ಶಕ್ತಿಸಾಮ್ರಾಜ್ಯದ ಸಮಸ್ತ ರಾಜ್ಯತಂತ್ರಗಳನ್ನೂ ಚರ್ಚಿಸುವವಳೂ, ಮುದ್ರಾಪ್ರಿಯಳೂ ಆದ ಓ ದೇವೀ! ನಿನಗೆ ನಮೋನಮಃ!!

೧೩. ಕ್ರೂರರಾದ ಅಸುರರನ್ನು ಧ್ವಂಸಗೊಳಿಸಿದಾಕೆಯೂ, ಕೋಮಲಾಂಗಿಯೂ, ಕೋಪಸಮಯಗಳಲ್ಲಿ ಕಾಳೀರೂಪವನ್ನು ತಾಳುವಾಕೆಯೂ, ವರಾಹಮುಖಿಯಾದ ಶ್ರೀ ದಂಡನಾಥಾದೇವಿಯಿಂದ ಪಾಲಿತವಾದ ನಿಜ ಸೈನ್ಯಸಮೂಹವುಳ್ಳಾಕೆಯೂ, ಪೂರ್ಣದಯಾವತಿಯೂ ಆದ ನಿನಗೆ ನಮಸ್ಕಾರವು.

೧೪. ಷಡಂಗದೇವೀಪರಿವಾರದ ರಕ್ಷಣೆಯುಳ್ಳವಳೂ, ಷಡಂಗಸಹಿತವಾದ ವೇದವಾಕ್ಯಗಳಿಂದ ಪ್ರತಿಪಾದ್ಯಳೂ, ಷಟ್ಚಕ್ರಗಳಲ್ಲಿ ನೆಲಸಿರುವವಳೂ, ಷಡೂರ್ಮಿಗಳನ್ನು ಕಳೆಯುವವಳೂ, ಷಡ್ಭಾವಸ್ವರೂಪಿಣಿಯೂ ಆದ ಓ ಲಲಿತಾಪರಮೇಶ್ವರಿ! ನಿನಗೆ ನಮಸ್ಕಾರವು!!

೧೫. ಕಾಮೇಶ್ವರಿಯೇ ಮೊದಲಾದ ನಿತ್ಯಕಾಂತೆಯರ ಪರಿವಾರದಿಂದಲಂಕೃತವಾದ ಸಿಂಹಾಸನವುಳ್ಳವಳೂ, ಕಮಲದಂತೆ ವಿಶಾಲವಾದ ಕಂಗಳುಳ್ಳವಳೂ, ಕಾಮಪ್ರದೆಯೂ, ಕಾಮೇಶ್ವರನ ಕಾಮಿನಿಯೂ, ಕಾಮ್ಯೆಯೂ, ಸಕಲಕಲಾಧೀಶ್ವರಿಯೂ ಆದ ನಿನಗೆ ನಮಸ್ಕಾರವು.

ದಿವ್ಯೌಘಸಿದ್ಧೌಘನತೌಘರೂಪೇ
ದಿವ್ಯೇ ದಿನಾಧೀಶಸಹಸ್ರಕಾಂತೇ ।
ದೇದೀಪ್ಯಮಾನೇ ದಯಯಾ ಸನಾಥೇ
ದೇವಾದಿದೇವಪ್ರಮದೇ ನಮಸ್ತೇ ॥ ೧೬ ॥
ಸದಾಣಿಮಾದ್ಯಷ್ಟಕಸೇವನೀಯೇ
ಸದಾಶಿವಾತ್ಮೋಜ್ಜ್ವಲಮಂಚವಾಸೇ ।
ಸೌಮ್ಯೇ ಸದೇಕಾಯನಪಾದಪೂಜ್ಯೇ
ಸವಿತ್ರಿ ಲೋಕಸ್ಯ ನಮೋ ನಮಸ್ತೇ ॥ ೧೭ ॥
ಬ್ರಾಹ್ಮೀಮುಖೈರ್ಮಾತೃಗಣೈರ್ನಿಷೇವ್ಯೇ
ಬ್ರಹ್ಮಪ್ರಿಯೇ ಬ್ರಾಹ್ಮಣಿ ಬಂಧಹಂತ್ರಿ ।
ಬ್ರಹ್ಮಾಮೃತಸ್ರೋತಸಿ ರಾಜಹಂಸಿ
ಬ್ರಹ್ಮೇಶ್ವರಿ ಶ್ರೀಲಲಿತೇ ನಮಸ್ತೇ ॥ ೧೮ ॥
ಸಂಕ್ಷೋಭಿಣೀಮುಖ್ಯಸಮಸ್ತಮುದ್ರಾ-
ಸಂಸೇವಿತೇ ಸಂಸರಣಪ್ರಹಂತ್ರಿ ।
ಸಂಸಾರಲೀಲಾಕರಿ ಸಾರಸಾಕ್ಷಿ
ಸದಾ ನಮಸ್ತೇ ಲಲಿತೇಽಧಿನಾಥೇ ॥ ೧೯ ॥

---

೧೬. ದೇವ ಮಾನವ ಸಿದ್ಧಸಮೂಹಸ್ವರೂಪಿಣಿಯೂ, ದಿವ್ಯೆಯೂ, ಸಹಸ್ರ ಸೂರ್ಯಕಾಂತಿ ಸಮನ್ವಿತೆಯೂ, ದೇದೀಪ್ಯಮಾನೆಯೂ, ದಯಾನ್ವಿತೆಯೂ, ಸಮಸ್ತ ದೇವತೆಗಳಿಗೂ ಆದಿದೇವನಾದ ಶ್ರೀ ಕಾಮೇಶ್ವರನ ಪ್ರಮದೆಯೂ ಆದ ನಿನಗೆ ನಮಸ್ಕಾರವು!

೧೭. ಅಣಿಮಾ ಮೊದಲಾದ ಎಂಟು ಮಂದಿ ಸಿದ್ಧಿದೇವಿಯರಿಂದ ಸತತವೂ ಸಂಸೇವಿತೆಯಾಗಿ ಸದಾಶಿವನ ಆತ್ಮವೆಂಬ ಮಂಚದಲ್ಲಿ ವಾಸ ಮಾಡುತ್ತ, ಸೌಮ್ಯಸ್ವರೂಪಿಣಿಯೂ, ಸದೇಕಾಯನಪಾದಪೂಜ್ಯೆಯೂ, ಜಗಜ್ಜನನಿಯೂ ಆಗಿರುವ ನಿನಗೆ ನಮೋನಮಃ!!

೧೮. ಬ್ರಾಹ್ಮಿಯೇ ಮೊದಲಾದ ಮಾತೃಗಣ ಸಂಸೇವಿತೆಯಾಗಿ, ಬ್ರಹ್ಮಪ್ರಿಯೆಯೂ, ಬ್ರಾಹ್ಮಣಿಯೂ, ಬಂಧಹಂತ್ರಿಯೂ, ಬ್ರಹ್ಮಾಮೃತ ಪ್ರವಾಹದಲ್ಲಿ ರಾಜಹಂಸಿಯೂ, ಬ್ರಹ್ಮೇಶ್ವರಿಯೂ ಆಗಿರುವ ಶ್ರೀ ಲಲಿತಾ ದೇವಿ! ನಿನಗೆ ನಮಸ್ಕಾರವು!!

೧೯. ಸಂಕ್ಷೋಭಿಣಿಯೇ ಮೊದಲಾದ ಸಮಸ್ತ ಮುದ್ರಾದೇವಿಯ

ನಿತ್ಯಾಕಲಾಷೋಡಶಕೇನ ಕಾಮಾ-
ಕರ್ಷಿಣ್ಯಧಿಶ್ರೀಪ್ರಥಮೇನ ಸೇವ್ಯೇ ।
ನಿತ್ಯೇ ನಿರಾತಂಕದಯಾಪ್ರಪಂಚೇ
ನೀಲಾಲಕಶ್ರೇಣಿ ನಮೋ ನಮಸ್ತೇ ॥ ೨೦ ॥
ಅನಂಗಪುಷ್ಪಾದಿಭಿರುನ್ಮದಾಭಿ-
ರನಂಗದೇವೀಭಿರಜಸ್ರಸೇವ್ಯೇ ।
ಅಭವ್ಯಹಂತ್ರ್ಯಕ್ಷರರಾಶಿರೂಪೇ
ಹತಾರಿವರ್ಗೇ ಲಲಿತೇ ನಮಸ್ತೇ ॥ ೨೧ ॥
ಸಂಕ್ಷೋಭಿಣೀಮುಖ್ಯಚತುರ್ದಶಾರ್ಚಿ-
ರ್ಮಾಲಾವೃತೋದಾರಮಹಾಪ್ರದೀಪಂ ।
ಆತ್ಮಾನಮಾಬಿಭ್ರತಿ ವಿಭ್ರಮಾಢ್ಯೇ
ಶುಭಾಶ್ರಯೇ ಶುದ್ಧಪದೇ ನತಿಸ್ತೇ ॥ ೨೨ ॥

---

ರಿಂದ ಸಂಸೇವಿತೆಯಾಗಿ, ಸಂಸಾರಮೋಚಿನಿಯೂ, ಸಂಸಾರಲೀಲಾಕಾರಿಣಿಯೂ, ಕಮಲನಯನೆಯೂ ಆಗಿರುವ ಓ ಲಲಿತಾಪರಮೇಶ್ವರಿಯೇ! ಯಾವಾಗಲೂ ಅಧೀನನಾಗಿಯೇ ಇರುವ ನಾಥನುಳ್ಳ ನಿನಗೆ ನಮಸ್ಕಾರವು.

೨೦. ಓ ದೇವೀ! ಕಾಮಾಕರ್ಷಿಣಿಯೇ ಮೊದಲಾದ ಹದಿನಾರು ಮಂದಿ ನಿತ್ಯೆಯರಾದ ಕಲಾದೇವಿಯರ ಸೇವೆಯನ್ನು ಕೈಕೊಂಡು, ನಿತ್ಯೆಯೂ, ನಿರಾತಂಕವಾದ ದಯಾಪ್ರಪಂಚವುಳ್ಳಾಕೆಯೂ, ನೀಲಚಿಕುರೆಯೂ ಆಗಿರುವ ನಿನಗೆ ನಮೋ ನಮಃ!

೨೧. ಉನ್ಮದೆಯರಾದ ಅನಂಗಪುಷ್ಪಾದೇವಿಯೇ ಮೊದಲಾದ ಅನಂಗದೇವಿಯರಿಂದ ಸಂತತವೂ ಸಂಸೇವಿತೆಯಾಗಿ ಅಮಂಗಳವನ್ನು ದೂರಮಾಡುವಾಕೆಯೂ, ಅಕಾರಾದಿ ಕ್ಷಕಾರಾಂತವಾದ ಅಕ್ಷರರಾಶಿರೂಪೆಯೂ, ಹಗೆಗಳ ಗರ್ವವನ್ನು ಮುರಿಯುವವಳೂ ಆದ ಶ್ರೀ ಲಲಿತೇ! ನಿನಗೆ ನಮಸ್ಕಾರವು!!

೨೨. ಸಂಕ್ಷೋಭಿಣಿಯೇ ಮೊದಲಾದ ಹದಿನಾಲ್ಕು ಜ್ವಾಲಾಮಾಲೆಗಳಿಂದ ಕೂಡಿದ ಮಹಾಪ್ರದೀಪವುಳ್ಳ ನಿನ್ನನ್ನು ನೀನೇ ಭರಿಸಿ ವಿಭ್ರಮಪೂರ್ಣೆಯಾಗಿ ಶುಭಾಶ್ರಯವುಳ್ಳವಳೂ, ಶುದ್ಧವಾದ ಪಾದಗಳುಳ್ಳವಳೂ ಆಗಿರುವ ನಿನಗೆ ನಮಸ್ಕಾರವು.

ಸಸರ್ವಸಿದ್ಧ್ಯಾದಿಕಶಕ್ತಿವೃಂದೇ
ಸರ್ವಜ್ಞವಿಜ್ಞಾತಪದಾರವಿಂದೇ ।
ಸರ್ವಾಧಿಕೇ ಸರ್ವಗತೇ ಸಮಸ್ತ-
ಸಿದ್ಧಿಪ್ರದೇ ಶ್ರೀಲಲಿತೇ ನಮಸ್ತೇ ॥ ೨೩ ॥
ಸರ್ವಜ್ಞತಾಯುಕ್ಪ್ರಥಮಾಭಿರನ್ಯ-
ದೇವೀಭಿರಪ್ಯಾಶ್ರಿತಚಕ್ರಭೂಮೇ ।
ಸರ್ವಾಮರಾಕಾಂಕ್ಷಿತಪೂರಯಿತ್ರಿ
ಸರ್ವಸ್ಯ ಲೋಕಸ್ಯ ಸವಿತ್ರಿ ಪಾಹಿ ॥ ೨೪ ॥
ವಂದ್ಯೇ ವಶಿನ್ಯಾದಿಕವಾಗ್ವಿಭೂತಿ-
ವರ್ಧಿಷ್ಣು ಚಕ್ರದ್ಯುತಿವಾಹವಾಹೇ ।
ಬಲಾಹಕಶ್ಯಾಮಕಚೇ ವಚೋಬ್ಧೇ
ವರಪ್ರದೇ ಸುಂದರಿ ಪಾಹಿ ವಿಶ್ವಂ ॥ ೨೫ ॥
ಬಾಣಾದಿಕೈರಾಯುಧಸಾರ್ವಭೌಮೈ-
ರ್ಭಂಡಾಸುರಾನೀಕವನಾಂತದಾವೈಃ ।

---

೨೩. ಸರ್ವಸಿದ್ಧಿಯೇ ಮೊದಲಾದ ಶಕ್ತಿಸಮೂಹಗಳ ಪೂಜೆಯನ್ನು ಕೈಕೊಂಡು ಸರ್ವಜ್ಞರಿಂದಲೇ ತಿಳಿಯಲಾದ ಪಾದಾರವಿಂದವುಳ್ಳವಳಾಗಿ ಎಲ್ಲಕ್ಕೂ ಮೇಲಾದವಳೂ, ಎಲ್ಲದರಲ್ಲಿಯೂ ನೆಲಸಿರುವವಳೂ, ಎಲ್ಲ ಸಿದ್ಧಿಗಳನ್ನೂ ಅನುಗ್ರಹಿಸುವವಳೂ ಆದ ಶ್ರೀ ಲಲಿತಾದೇವಿಯೇ! ನಿನಗೆ ನಮಸ್ಕಾರವು!!

೨೪. ಓ ದೇವೀ! ಸರ್ವಜ್ಞೆಯೇ ಮೊದಲಾದ ಇತರ ಆಶ್ರಿತ ಶಕ್ತಿದೇವಿಯರ ಸಮೂಹವುಳ್ಳ ಓ ತಾಯೇ!! ಸಮಸ್ತದೇವತೆಗಳ ಕಾಂಕ್ಷೆಗಳನ್ನೂ ಈಡೇರಿಸುವವಳೂ ಸರ್ವಲೋಕಜನನಿಯೂ ಆದ ಓ ಲಲಿತಾಪರಮೇಶ್ವರೀ! ಕಾಪಾಡು!!

೨೫. ದೇವೀ! ಸಕಲದೇವವಂದ್ಯೇ!! ವಾಗ್ವಿಭೂತಿಯನ್ನು ವೃದ್ಧಿಗೊಳಿಸುವ ವಶಿನಿಯೇ ಮೊದಲಾದ ಶಕ್ತಿಮಂಡಲದ ಕಾಂತಿಪ್ರವಾಹವನ್ನು ಹರಿಯಿಸುತ್ತ, ಮುಗಿಲಿನಂತೆ ಕಪ್ಪಾದ ಕೇಶರಾಶಿಯುಳ್ಳವಳಾಗಿ, ವಾಗ್ವಾರಿಧಿರೂಪಿಣಿಯೂ, ವರಪ್ರದೆಯೂ, ಸುಂದರಿಯೂ ಆಗಿರುವ ಓ ಲಲಿತಾದೇವೀ! ವಿಶ್ವವೆಲ್ಲವನ್ನೂ ನೀನೇ ಪರಿಪಾಲಿಸಬೇಕು.

೨೬. ಭಂಡಾಸುರನ ಸೇನೆಯೆಂಬ ಕಾಡಿಗೆ ದಳ್ಳುರಿಯಾಗಿ,

ಪ್ರತ್ಯಗ್ರತೇಜೋಜ್ಜ್ವಲಿತಾಂಬುರಾಶೇ
ಪ್ರಸಾಲ್ಯಮಾನೇ ಪರಿತೋ ನಮಸ್ತೇ ॥ ೨೬ ॥
ಕಾಮೇಶಿ ವಜ್ರೇಶಿ ಭಗೇಶಿರೂಪೇ
ಕಲ್ಯೇ ಕಲೇ ಕಾಲವಿಲೋಪದಕ್ಷೇ ।
ಕಥಾವಶೇಷೀಕೃತದೈತ್ಯಸೈನ್ಯೇ
ಕಾಮೇಶಕಾಂತೇ ಕಮಲೇ ನಮಸ್ತೇ ॥ ೨೭ ॥
ಬಿಂದುಸ್ಥಿತೇ ಬಿಂದುಕಲೈಕರೂಪೇ
ಬ್ರಹ್ಮಾತ್ಮಿಕೇ ಬೃಂಹಿತಚಿತ್ಪ್ರಕಾಶೇ ।
ಬೃಹತ್ಕುಚಾಭೋಗವಿಲೋಲಹಾರೇ
ಬೃಹತ್ಪ್ರಭಾವೇ ವರದೇ ನಮಸ್ತೇ ॥ ೨೮ ॥
ಕಾಮೇಶ್ವರೋತ್ಸಂಗಸದಾನಿವಾಸೇ
ಕಾಲಾತ್ಮಿಕೇ ಕಂದಲಿತಾನುಕಂಪೇ ।
ಕಲ್ಪಾವಸಾನೋತ್ಥಿತಕಾಲಿರೂಪೇ
ಕಾಮಪ್ರದೇ ಕಲ್ಪಲತೇ ನಮಸ್ತೇ ॥ ೨೯ ॥

---

ಬಾಣವೇ ಮೊದಲಾದ ಆಯುಧಸಾರ್ವಭೌಮರಿಂದ ಸೇವೆಗೊಂಡು, ಉತ್ತಮೋತ್ತಮವಾದ ನಿಜತೇಜದಿಂದಲೇ ಸಪ್ತಸಾಗರಗಳನ್ನೂ ಉಜ್ಜ್ವಲಗೊಳಿಸಿದ ನಿನಗೆ ಪುನಃ ಪುನಃ ನಮಸ್ಕಾರವು.

೨೭. ಕಾಮೇಶ್ವರಿ ವಜ್ರೇಶ್ವರಿ ಭೋಗೇಶ್ವರಿಯ ಸ್ವರೂಪಿಣಿಯಾಗಿ, ಕಲ್ಯೆಯೂ ಕಲೆಯೂ, ಕಾಲನನ್ನು ಅಳಿಸುವ ಸಾಮರ್ಥ್ಯವುಳ್ಳವಳೂ ಆಗಿ, ಸಮಸ್ತ ದೈತ್ಯರ ಸೇನೆಯನ್ನೂ ನಾಮಾವಶೇಷವಾಗಿ ನಾಶಮಾಡಿದ, ಓ ಕಾಮೇಶಕಾಂತೇ! ಕಮಲೆಯಾದ ನಿನಗೆ ನಮಸ್ಕಾರವು!!

೨೮. ಬಿಂದುಸಂಸ್ಥಿತೆಯೂ, ಬಿಂದುಕಲಾರೂಪಿಣಿಯೂ, ಬ್ರಹ್ಮಾತ್ಮಿಕೆಯೂ, ವಿಶಾಲವಾದ ಚಿಜ್ಜ್ಯೋತಿಪ್ರಕಾಶರೂಪಿಣಿಯೂ ಆಗಿ ಪೀನಸ್ತನಗಳಮೇಲೆ ಹರಡಿ ಜೋಲುತ್ತಿರುವ ಹಾರವುಳ್ಳವಳೂ, ಮಹಾಪ್ರಭಾವವುಳ್ಳವಳೂ, ವರದಾಯಕಳೂ ಆದ ನಿನಗೆ ನಮಸ್ಕಾರವು.

೨೯. ಶ್ರೀಕಾಮೇಶ್ವರನ ತೊಡೆಯಲ್ಲಿಯೇ ಯಾವಾಗಲೂ ನೆಲಸಿರುವವಳಾಗಿ ಕಲಾತ್ಮಿಕೆಯೂ, ಕಾರುಣ್ಯಪೂರ್ಣೆಯೂ, ಕಲ್ಪಾವಸಾನದಲ್ಲಿ ಕಾಳಿಕಾರೂಪಿಣಿಯೂ, ಕಾಮಪ್ರದೆಯೂ, ಭಕ್ತರಿಗೆ ಕಲ್ಪಲತೆಯೂ ಆಗಿರುವ ನಿನಗೆ ನಮಸ್ಕಾರವು.

ಸರ್ವಾರುಣೇ ಸಾಂದ್ರಸುಧಾಸುಶೀತೇ
ಸಾರಂಗಶಾವಾಕ್ಷಿ ಸರೋಜವಕ್ತ್ರೇ ।
ಸಾರಸ್ಯ ಸಾರಸ್ಯ ಸದೈಕಭೂಮೇ
ಸಮಸ್ತವಿದ್ಯೇಶ್ವರಿ ಸಂನತಿಸ್ತೇ ॥ ೩೦ ॥
ತವ ಪ್ರಭಾವೇನ ಚಿದಗ್ನಿಜಾಯಾಃ
ಶ್ರೀಶಂಭುನಾಥಪ್ರಕಟೀಕೃತಾಯಾಃ ।
ಭಂಡಾಸುರಾದ್ಯಾಃ ಸಮರೇ ಪ್ರಚಂಡಾ
ಹತಾ ಜಗತ್ಕಂಟಕತಾಂ ಪ್ರಯಾತಾಃ ॥ ೩೧ ॥
ನವ್ಯಾನಿ ಸರ್ವಾಣಿ ವಪೂಂಷಿ ದೇವಿ
ತ್ವತ್ಸಾಂದ್ರಕಾರುಣ್ಯಸುಧಾಪ್ಲುತಾನಿ ।
ತ್ವಯಾ ಸಮಸ್ತಂ ಭುವನಂ ಸಹರ್ಷಂ
ಸಂಜೀವಿತಂ ಸುಂದರಿ ಸಭ್ಯಲಭ್ಯೇ ॥ ೩೨ ॥
ಶ್ರೀಶಂಭುನಾಥಸ್ಯ ಮಹಾಶಯಸ್ಯ
ದ್ವಿತೀಯಂತೇಜಃ ಪ್ರಸರಾತ್ಮಕೋ ಯಃ ।

---

೩೦. ಓ ಪರಮೇಶ್ವರೀ! ಸರ್ವಾರುಣೆಯೂ, ಸಾಂದ್ರವಾದ ಸುಧಾಧಾರೆಯಂತೆ ಶೀತಳವಾಗಿರುವವಳೂ ಆದ ಓ ಸಾರಂಗಶಾಬ ನೇತ್ರೇ! ಸರೋಜವಕ್ತ್ರೇ! ಸಮಸ್ತಸಾರಸರ್ವಸ್ವಕ್ಕೂ ನೆಲೆಯೂ, ಸಮಸ್ತ ವಿದ್ಯೇಶ್ವರಿಯೂ ಆದ ನಿನಗೆ ನಮಸ್ಕಾರವು.

೩೧. ಚಿದಗ್ನಿಕುಂಡದಿಂದುದಿಸಿ, ಶ್ರೀ ಶಂಭುವಿನಿಂದ ಪ್ರಕಟವಾದ ಪ್ರಭಾವವುಳ್ಳ ನೀನು, ಜಗತ್ತಿಗೆ ಕಂಟಕಪ್ರಾಯರೂ, ಪ್ರಚಂಡರೂ ಆದ ಭಂಡಾಸುರನೇ ಮೊದಲಾದ ದೈತ್ಯರನ್ನು ಸಮರಾಂಗಣದಲ್ಲಿ ಸಂಹಾರ ಮಾಡಿದೆ.

೩೨. ಓ ದೇವೀ! ತ್ರಿಪುರಸುಂದರೀ!! ಸಾಧುಗಳಿಗೆ ಮಾತ್ರ ದೊರಕುವವಳೇ!!! ಹೊಸತಾದ ಸಮಸ್ತ ರೂಪಗಳೂ ನಿನ್ನ ಅಪಾರವಾದ ಕರುಣಾಮೃತಸಾಗರದಿಂದ ತುಂಬಿದವುಗಳೇ! ನಿನ್ನ ದೆಸೆಯಿಂದಲೇ ಪ್ರಪಂಚವೆಲ್ಲವೂ ಸಂತೋಷವಾಗಿರುವುದು. ಅಂತಹ ಈ ಪ್ರಪಂಚ ವೆಲ್ಲವೂ ಇದೀಗ ನಿನ್ನಿಂದಲೇ ಪುನರುಜ್ಜೀವಿತವಾಯಿತು.

೩೩. ಜಗಜ್ಜನನೀ! ಮಹಾಶಯನಾದ ಶ್ರೀ ಶಂಭುನಾಥನ ಎರಡನೆಯ ತೇಜಃಪ್ರಸಾರವೇ ಮೂರ್ತಿವೆತ್ತಿರುವ ಶ್ರೀ ಶಿವನು ಸ್ಥಾಣ್ವಾ

ಸ್ಥಾಣ್ವಾಶ್ರಮೇ ಕ್ಲೃಪ್ತತಪಾ ವಿರಕ್ತಃ
ಸತೀವಿಯೋಗೇನ ನಿರಸ್ತಭೋಗಃ ॥ ೩೩ ॥
ತೇನಾದ್ರಿವಂಶೇ ಧೃತಜನ್ಮಲಾಭಾಂ
ಕನ್ಯಾಮುಮಾಂ ಯೋಜಯಿತುಂ ಪ್ರವೃತ್ತಾಃ ।
ವಯಂ ಸ್ಮರಂ ಪ್ರೇರಿತವಂತ ಏವ
ತಸ್ಯಾಂತಿಕಂ ಘೋರತಪಃಸ್ಥಿತಸ್ಯ ॥ ೩೪ ॥
ತೇನಾಥ ವೈರಾಗ್ಯತಪೋವಿಘಾತ-
ಕ್ರುದ್ಧೇನ ಲಾಲಾಟಕೃಶಾನುದಗ್ಧಃ ।
ಭಸ್ಮಾವಶೇಷೋ ಮದನಸ್ತತೋಽಭೂ-
ತ್ತತೋ ಹಿ ಭಂಡಾಸುರ ಏಷ ಜಾತಃ ॥ ೩೫ ॥
ತತೋ ವಧಸ್ತಸ್ಯ ದುರಾಶಯಸ್ಯ
ಕೃತೋ ಭವತ್ಯಾ ರಣದುರ್ಮದಸ್ಯ ।
ಅಥಾಸ್ಮದರ್ಥೇ ಸ್ವತನುತ್ಯಜಸ್ತ್ವಂ
ಕಾಮಸ್ಯ ಸಂಜೀವನಮಾಶು ಕುರ್ಯಾಃ ॥ ೩೬ ॥

---

ಶ್ರಮದಲ್ಲಿ ಸತೀದೇವಿಯ ವಿಯೋಗದಿಂದ ಭೋಗಗಳೆಲ್ಲವನ್ನೂ ತೊರೆದು ವಿರಕ್ತನಾಗಿ ಕ್ಲೃಪ್ತವಾದ ತಪಸ್ಸನ್ನಾಚರಿಸುತ್ತಿರುವನು.

೩೪. ಈ ಕಾರಣದಿಂದಲೇ ನಾವೆಲ್ಲರೂ ಹಿಮವಂತನ ವಂಶದಲ್ಲಿ ಉಮೆಯೆಂಬ ಹೆಸರಿನಿಂದ ಜನ್ಮವೆತ್ತಿದ ಆ ಸತೀದೇವಿಯನ್ನು ಶಿವನೊಡನೆ ಸೇರಿಸಲು ಪ್ರಯತ್ನಿಸಿ, ಘೋರವಾದ ತಪಸ್ಸನ್ನೆಸಗುತ್ತಿರುವ ಆತನ ಬಳಿಗೆ ಸ್ಮರನನ್ನು ಪ್ರೇರಿಸಿ ಕಳುಹಿಸಿದೆವು.

೩೫. ಆ ಮದನನಾದರೋ, ವೈರಾಗ್ಯತಪಸ್ಸಿನ ಭಂಗದಿಂದ ಕ್ರುದ್ಧನಾದ ಆ ಶಿವನ ಹಣೆಗಣ್ಣಿನ ಬೆಂಕಿಯಿಂದ ಬೆಂದು ಬೂದಿಯಾಗಿ ಹೋದನು. ಆ ಬೆಂಬೂದಿಯಿಂದುದಿಸಿದವನೇ ಭಂಡಾಸುರನು.

೩೬. ದೇವೀ! ನೀನು ನಮ್ಮನ್ನು ಅನುಗ್ರಹಿಸಲೋಸುಗ, ರಣಮರ್ದನನೂ ದುರಾಶಯನೂ ಆದ ಆ ಭಂಡದೈತ್ಯನನ್ನು ಸಂಹಾರಮಾಡಿದೆ. ತಾಯೇ!! ನೀನು ಹಿಂದೆ ನಮಗಾಗಿಯೇ ದಕ್ಷಯಜ್ಞದಲ್ಲಿ ನಿನ್ನ ಶರೀರವನ್ನೇ ತ್ಯಾಗಮಾಡಿದೆಯಲ್ಲವೆ! ಅಂತಹ ನೀನೇ ಈಗ ಕಾಮನನ್ನೂ ಜಾಗ್ರತೆಯಾಗಿ ಬದುಕಿಸಬೇಕು.

ಇಯಂ ರತಿರ್ಭರ್ತೃವಿಯೋಗಖಿನ್ನಾ
ವೈಧವ್ಯಮತ್ಯಂತ ಮಭವ್ಯಮಾಪ್ತಾ ।
ಪುನಸ್ತ್ವದುತ್ಪಾದಿತಕಾಮಸಂಗಾ-
ದ್ಭವಿಷ್ಯತಿ ಶ್ರೀಲಲಿತೇ ಸನಾಥಾ ॥ ೩೭ ॥
ತ್ವಯಾಥ ಸೃಷ್ಟೇನ ಮನೋಭವೇನ
ಸಂಮೋಹಿತಃ ಪೂರ್ವವದಿಂದುಮೌಲಿಃ ।
ಚಿರಂ ಕೃತಾತ್ಯಂತಮಹಾಸಪರ್ಯಾಂ ।
ತಾಂ ಪಾರ್ವತೀಂ ದ್ರಾಕ್ಪರಿಣೇಷ್ಯತೀಶಃ ॥ ೩೮ ॥
ತಯೋಶ್ಚ ಸಂಗಾದ್ಭವಿತಾ ಕುಮಾರಃ
ಸಮಸ್ತಗೀರ್ವಾಣಚಮೂವಿನೇತಾ ।
ತೇನೈವ ವೀರೇಣ ರಣೇ ನಿರಸ್ಯಃ
ಸ ತಾರಕೋ ನಾಮ ಸುರಾರಿರಾಜಃ ॥ ೩೯ ॥
ಯೋ ಭಂಡದೈತ್ಯಸ್ಯ ದುರಾಶಯಸ್ಯ
ಮಿತ್ರಂ ಸ ಲೋಕತ್ರಯಧೂಮಕೇತುಃ ।

---

೩೭. ಓ ಲಲಿತಾದೇವೀ! ಇದೋ ಕಾಮಸತಿಯಾದ ಈ ರತೀದೇವಿಯು ಪತಿವಿಯೋಗದುಃಖದಿಂದ ಕಂದಿಹೋಗಿರುವಳು. ಮಂಗಳಾಂಗಿಯಾದ ಇವಳಿಗೆ ಅಮಂಗಳಕರವಾದ ವೈಧವ್ಯವು ಸಂಪ್ರಾಪ್ತವಾಗಿರುವುದು. ಈಗಲೀಕೆಯು, ಪುನಃ ನೀನು ಸೃಜಿಸುವ ಆ ಮನ್ಮಥನನ್ನು ಪತಿಯನ್ನಾಗಿ ಪಡೆದು ಸನಾಥೆಯಾಗಬೇಕು.

೩೮. ಎಲೈ ಮಹಾರಾಜ್ಞಿಯೇ! ಈ ರೀತಿ ನೀನು ಸೃಜಿಸುವ ಆ ಮನೋಭವನಿಂದಲೇ ಚಂದ್ರಶೇಖರನು ಮತ್ತೆ ಪೂರ್ವದಂತೆಯೇ ಸಂಮೋಹಿತನಾಗಿ ಬಹುಕಾಲ ತನ್ನನ್ನು ಪೂಜಿಸಿ ಸೇವಿಸಿದ ಪಾರ್ವತಿಯನ್ನು ಪರಿಣಯಮಾಡಿಕೊಳ್ಳಲಿ.

೩೯. ಆ ಪಾರ್ವತೀಪರಮೇಶ್ವರರ ಸಂಗದಿಂದ ಸಮಸ್ತ ಗೀರ್ವಾಣ ಸೇನೆಗಳನ್ನೂ ನಡೆಯಿಸುವಂತಹ ಕುಮಾರನುದಿಸುವನು. ಆ ವೀರನೇ ದೇವೇಂದ್ರನ ಶತ್ರುವಾದ ತಾರಕಾಸುರರನ್ನು ಕಾಳಗದಲ್ಲಿ ವಧಿಸುತ್ತಾನೆ.

೪೦. ಮಹಾದೇವೀ! ಆ ತಾರಕಾಸುರನು ದುರಾತ್ಮನಾದ ಭಂಡದೈತ್ಯನ ಗೆಳೆಯನು. ಅವನು ಮೂರು ಲೋಕಗಳಿಗೂ ಧೂಮಕೇತುಪ್ರಾಯನಾದವನು. ಆ ಧೂರ್ತನು ಶ್ರೀಕಂಠಪುತ್ರನಾದ ಆ ಕುಮಾರ

ಶ್ರೀಕಂಠಪುತ್ರೇಣ ರಣೇ ಹತಶ್ಚೇ-
ತ್ಪ್ರಾಣಪ್ರತಿಷ್ಠೈವ ಸದಾ ಭವೇನ್ನಃ ॥ ೪೦ ॥
ತಸ್ಮಾತ್ತ್ವಮಂಬ ತ್ರಿಪುರೇ ಜನಾನಾ-
ಮಾನಂದಕಂ ಮನ್ಮಥವೀರವರ್ಯಂ ।
ಉತ್ಪಾದ್ಯ ರತ್ಯಾ ವಿಧವಾತ್ವದುಃಖ-
ಮಪಾಕುರು ವ್ಯಾಕುಲಕುಂತಲಾಯಾಃ ॥ ೪೧ ॥
ಏಷಾ ತ್ವನಾಥಾ ಭವತೀಂ ಪ್ರಪನ್ನಾ
ಭರ್ತುಃ ಪ್ರಣಾಶೇನ ಕೃಶಾಂಗಯಷ್ಟಿಃ ।
ನಮಸ್ಕರೋತಿ ತ್ರಿಪುರಾಧಿನಾಥೇ
ತ್ವಮತ್ರ ಕಾರುಣ್ಯಕಲಾಂ ನಿಧೇಹಿ ॥ ೪೨ ॥

ಶ್ರೀ ಹಯಗ್ರೀವಃ—

ಇತ್ಥಂ ಸ್ತುತ್ವಾ ಮಹೇಶಾನೀಂ ಬ್ರಹ್ಮಾದ್ಯಾ ವಿಬುಧೋತ್ತಮಾಃ ।
ತಾಂ ರತಿಂ ದರ್ಶಯಾಮಾಸುರ್ಮಲಿನಾಂ ಶೋಕಖೇದಿನೀಂ ॥ ೪೩ ॥

---

ನಿಂದ ಹತನಾದರೆ, ನಮ್ಮೆಲ್ಲರಿಗೂ ಈಗಾಗಲೇ ಹಾರಿಹೋಗಿರುವ ಪ್ರಾಣವು ಮತ್ತೆ ನೆಲೆಯಾಗಿ ನಿಲ್ಲುವುದು.

೪೧. ಅಂಬ! ತ್ರಿಪುರಸುಂದರೀ!! ದಯಾಮಯಿಯಾದ ನೀನು, ವೀರವರನೂ, ಸಮಸ್ತ ಜನಗಳಿಗೂ ಆನಂದಸಂದಾಯಕನೂ ಆದ ಆ ಮನ್ಮಥನನ್ನು ಈ ಕಾರಣಕ್ಕಾಗಿಯೇ ಪುನರುಜ್ಜೀವನಗೊಳಿಸಿ, ಕೆದರಿದ ಮುಂಗೂದಲುಳ್ಳ ಈ ರತಿಯ ವೈಧವ್ಯದುಃಖವನ್ನು ಕಳೆದು ಉಪಕಾರ ಮಾಡು.

೪೨. ಓ ತ್ರಿಪುರೇಶ್ವರೀ! ಪತಿವಿನಾಶದಿಂದ ದೇಹವೇ ಬತ್ತಿಹೋಗಿರುವ ಈ ರತೀದೇವಿಯು ಅನಾಥೆಯಾಗಿ ನಿನ್ನನ್ನು ಶರಣುಹೊಕ್ಕು ನಮಸ್ಕರಿಸುತ್ತಿರುವಳು. ಆದುದರಿಂದಲೇ ತ್ರಿಲೋಕಜನನಿಯೇ! ನೀನೀಕೆಯಲ್ಲಿ ನಿನ್ನ ಕಾರುಣ್ಯಕಲೆಯನ್ನಿರಿಸಿ ಕಾಪಾಡು!!

೪೩. ಶ್ರೀ ಹಯಗ್ರೀವನು ಹೇಳುತ್ತಾನೆ:—ಎಲೈ ಅಗಸ್ತ್ಯ ಮಹಾಮುನಿಯೇ! ಬ್ರಹ್ಮನೇ ಮೊದಲಾದ ಆ ವಿಬುಧೋತ್ತಮರೆಲ್ಲರೂ ಶ್ರೀ ಮಹೇಶ್ವರಿಯನ್ನು ಈ ರೀತಿ ಸ್ತುತಿಸಿ, ಶೋಕದಿಂದ ಖೇದಪಡುತ್ತ ಮಲಿನೆಯಾಗಿರುವ ರತಿಯನ್ನು ಆಕೆಗೆ ತೋರಿಸಿದರು.

ಸಾ ಪರ್ಯಶ್ರುಮುಖೀ ಘೂರ್ಣಕುಂತಲಾ ಧೂಲಿಧೂಸರಾ ।
ನನಾಮ ಜಗದಂಬಾಯೈ ವೈಧವ್ಯಾತ್ತ್ಯಕ್ತಭೂಷಣಾ ॥ ೪೪ ॥
ಅಥ ತದ್ದರ್ಶನೋತ್ಪನ್ನಕಾರುಣ್ಯಾ ಪರಮೇಶ್ವರೀ ।
ಕಾಂತಂ ಕಟಾಕ್ಷಯಾಮಾಸ ಕಾಮೇಶ್ವರಮನಿಂದಿತಾ ॥ ೪೫ ॥
ತತಃ ಕಟಾಕ್ಷಾದುತ್ಪನ್ನಃ ಸ್ಮಯಮಾನಮುಖಾಂಬುಜಃ ।
ಪೂರ್ವದೇಹಾಧಿಕರುಚಿರ್ಮನ್ಮಥೋ ಮದಮೇದುರಃ ॥ ೪೬ ॥
ದ್ವಿಭುಜಃ ಸರ್ವಭೂಷಾಢ್ಯಃ ಪುಷ್ಪೇಷುಃ ಪುಂಡ್ರಕಾರ್ಮುಕಃ ।
ಆನಂದಯನ್ ಕಟಾಕ್ಷೇಣ ಪೂರ್ವಜನ್ಮಪ್ರಿಯಾಂ ರತಿಂ ॥ ೪೭ ॥
ಅಥ ಸಾ ರತಿದೇವೀ ಚ ಮಹತ್ಯಾನಂದಸಾಗರೇ ।
ಮಜ್ಜಂತೀ ನಿಜಭರ್ತಾರಮವಲೋಕ್ಯ ಮುದಂ ಗತಾ ॥ ೪೮ ॥

---

೪೪. ಕಂಬನಿಗರೆಯುತ್ತಿರುವ ಮುಖವುಳ್ಳವಳೂ, ಕೆದರಿದ ಮುಂಗೂದಲುಗಳುಳ್ಳವಳೂ, ಧೂಳಿಮುಚ್ಚಿ ಮಂಕುಕವಿದವಳೂ, ವೈಧವ್ಯದ ದೆಸೆಯಿಂದ ಆಭರಣಗಳೆಲ್ಲವನ್ನೂ ತೊರೆದಿರುವವಳೂ ಆದ ಆ ರತಿಯು ಕೂಡಲೇ ಶ್ರೀ ಜಗದಂಬಿಕೆಯನ್ನು ಭಕ್ತಿಯಿಂದ ನಮಸ್ಕರಿಸಿದಳು.

೪೫. ಇಂತಹ ಆ ರತೀದೇವಿಯನ್ನು ನೋಡುತ್ತಲೇ ಶ್ರೀ ಲಲಿತಾಪರಮೇಶ್ವರಿಗೆ ಕೃಪೆಯುಂಟಾಯಿತು. ಕೂಡಲೇ ಅನಿಂದಿತೆಯಾದ ಆ ದೇವಿಯು ತನ್ನ ಕಾಂತನಾದ ಕಾಮೇಶ್ವರನನ್ನೊಮ್ಮೆ ಕಟಾಕ್ಷಿಸಿದಳು.

೪೬-೪೭. ಆ ಕಟಾಕ್ಷದಿಂದಲೇ ಮದಾಧಿಕನಾದ ಮನ್ಮಥನು ಹಿಂದಣ ತನ್ನ ದೇಹಕಾಂತಿಗಿಂತಲೂ ಅಧಿಕಾಧಿಕವಾದ ಕಾಂತಿಯಿಂದ ಕಂಗೊಳಿಸುತ್ತ, ನಸುನಗುತ್ತಿರುವ ಮುಖಕಮಲವುಳ್ಳವನೂ, ದ್ವಿಭುಜನೂ, ಸಮಸ್ತಭೂಷಣಭೂಷಿತನೂ, ಸುಮಬಾಣೇಕ್ಷುಚಾಪಗಳುಳ್ಳವನೂ ಆಗಿ ತನ್ನ ಪೂರ್ವಜನ್ಮದ ಸತಿಯಾದ ಆ ರತಿಯನ್ನು ಕಟಾಕ್ಷದಿಂದಲೇ ಆನಂದಗೊಳಿಸುತ್ತ ಉದಿಸಿದನು.

೪೮. ಆಗ ಆ ರತೀದೇವಿಯಾದರೋ ಮಹಾನಂದಸಾಗರದಲ್ಲಿ ಮುಳುಗಿ ಪತಿಯನ್ನು ಕಂಡು ಮತ್ತೂ ಮತ್ತೂ ಸಂತೋಷಿಸಿದಳು.

ಸ ಚ ಕಂದರ್ಪವೀರೋಽಪಿ ನಮಸ್ಕೃತ್ಯ ಮಹೇಶ್ವರೀಂ ।
ವ್ಯಜ್ಞಾಪಯದಿದಂ ವಾಕ್ಯಂ ಭಕ್ತಿನಿರ್ಭರಮಾನಸಃ ॥ ೪೯ ॥
ಯುದ್ದಗ್ಧಮೀಶನೇತ್ರೇಣ ವಪುರ್ಮೇ ಲಲಿತಾಂಬಿಕೇ ।
ತತ್ತ್ವದೀಯಕಟಾಕ್ಷಸ್ಯ ಪ್ರಸಾದಾತ್ಪುನರಾಗತಂ ॥ ೫೦ ॥
ತವ ಪುತ್ರೋಽಸ್ಮಿ ದಾಸೋಽಸ್ಮಿ ಕ್ವಾಪಿ ಕೃತ್ಯೇ ನಿಯುಂಕ್ಷ್ವ ಮಾಂ ।
ಇತ್ಯುಕ್ತ್ವಾ ಪರಮೇಶಾನೀ ತಮಾಹ ಮಕರಧ್ವಜಂ ॥ ೫೧ ॥

ಶ್ರೀದೇವೀ —

ಗಚ್ಛ ವತ್ಸ ಮನೋಜನ್ಮನ್ನಭಯಂ ತವ ವಿದ್ಯತೇ ।
ಮತ್ಪ್ರಸಾದಾಜ್ಜಗತ್ಸರ್ವಂ ಮೋಹಯಾವ್ಯಾಹತಾಶುಗಃ ॥ ೫೨ ॥
ತ್ವದ್ಬಾಣಪಾತನಾಜ್ಜಾತಧೈರ್ಯವಿಪ್ಲವ ಈಶ್ವರಃ ।
ಪರ್ವತಸ್ಯ ಸುತಾಂ ಗೌರೀಂ ಪರಿಣೇಷ್ಯತಿ ಸತ್ವರಂ ॥ ೫೩ ॥
ಸಹಸ್ರಕೋಟಯಃ ಕಾಮಾ ಮತ್ಪ್ರಸಾದಾತ್ತ್ವದುದ್ಭವಾಃ ।
ಸರ್ವೇಷಾಂ ದೇಹಮಾವಿಶ್ಯ ದಾಸ್ಯಂತಿ ರತಿಮುತ್ತಮಾಂ ॥ ೫೪ ॥

---

೪೯. ವೀರನಾದ ಮದನನೂ ಸಹ ತನ್ನನ್ನು ಸೃಜಿಸಿದ ಶ್ರೀ ಲಲಿತಾಮಹೇಶ್ವರಿಯನ್ನು ಕಂಡು ಭಕ್ತಿದುಂಬಿದ ಮನಸ್ಸುಳ್ಳವನಾಗಿ ಹೀಗೆ ಅರಿಕೆಮಾಡಿದನು:

೫೦. "ಓ ಲಲಿತಾಂಬಿಕೇ! ಪರಮೇಶ್ವರನ ಫಾಲನೇತ್ರದಿಂದ ದಗ್ಧವಾಗಿಹೋಗಿದ್ದ ನನ್ನ ದೇಹವು ನಿನ್ನ ಕಟಾಕ್ಷದಿಂದ ಮತ್ತೆ ದೊರೆಯಿತು.

೫೧. ತಾಯೇ! ನಾನು ನಿನ್ನ ಮಗನು; ದಾಸನೂ ಆಗಿರುವೆನು. ನೀನು ನನ್ನನ್ನು ಯಾವ ಕಾರ್ಯದಲ್ಲಿಯಾದರೂ ನಿಯೋಜಿಸು." ಈ ರೀತಿ ಅರಿಕೆಮಾಡಿಕೊಂಡ ಮದನನ ನುಡಿಯನ್ನು ಕೇಳಿ ಶ್ರೀ ಲಲಿತಾ ಪರಮೇಶ್ವರಿಯು ಅವನನ್ನು ಕುರಿತು ಹೇಳಿದಳು:

೫೨. ವತ್ಸ, ಮನ್ಮಥ! ನಿನಗೆ ನನ್ನ ಅಭಯವುಂಟು; ಹೋಗು, ನೀನು ನನ್ನ ಅನುಗ್ರಹದಿಂದ ಎಲ್ಲಿಯೂ ತಡೆಯಿಲ್ಲದ ಬಾಣವುಳ್ಳವನಾಗಿ ಹೊರಟು ಜಾಗ್ರತೆಯಾಗಿ ಈ ಜಗತ್ತೆಲ್ಲವನ್ನೂ ಸಂಮೋಹಗೊಳಿಸು.

೫೩. ನಿನ್ನ ಬಾಣವು ಬೀಳುವುದರಿಂದಲೇ ಆ ಪರಮೇಶ್ವರನು ಧೈರ್ಯಗುಂದಿ ಜಾಗ್ರತೆಯಾಗಿಯೇ ಪರ್ವತರಾಜನ ಮಗಳಾದ ಆ ಗೌರೀದೇವಿಯನ್ನು ಮದುವೆಯಾಗುವನು.

೫೪. ನನ್ನ ಅನುಗ್ರಹದಿಂದಲೇ ಸಹಸ್ರಕೋಟಿ ಮನ್ಮಥರು

**ಮತ್ಪ್ರಸಾದೇನ ವೈರಾಗ್ಯಾತ್ಸಂಕ್ರುದ್ಧೋಽಪಿ ಸ ಈಶ್ವರಃ ।**
**ದೇಹದಾಹಂ ವಿಧಾತುಂ ತೇ ನ ಸಮರ್ಥೋ ಭವಿಷ್ಯತಿ ॥ ೫೫ ॥**
**ಪ್ರತ್ಯುತಾಽಸೌ ಕಾತರಾತ್ಮಾ ತ್ವದ್ಬಾಣಹೃತಮಾನಸಃ ।**
**ಸ್ವಭಾರ್ಯಾವಿರಹಾಶಂಕೀ ದೇಹಸ್ಯಾರ್ಧಂ ಪ್ರದಾಸ್ಯತಿ ॥ ೫೬ ॥**
**ಅದ್ಯಪ್ರಭೃತಿ ಕಂದರ್ಪ ಮತ್ಪ್ರಸಾದಾನ್ಮಹೀಯಸಃ । [ ೫೭ ॥**
**ಅದೃಶ್ಯಮೂರ್ತಿಃ ಸರ್ವೇಷಾಂ ಪ್ರಾಣಿನಾಂ ಭವ ಮೋಹಕಃ ॥**
**ತ್ವನ್ನಿಂದಾಂ ಯೇ ಕರಿಷ್ಯಂತಿ ತ್ವಯಿ ವಾ ವಿಮುಖಾಶಯಾಃ ।**
**ಅವಶ್ಯಂ ಕ್ಲೀಬತೈವ ಸ್ಯಾತ್ತೇಷಾಂ ಜನ್ಮನಿ ಜನ್ಮನಿ ॥ ೫೮ ॥**
**ಯೇ ಪಾಪಿಷ್ಠಾ ದುರಾತ್ಮಾನೋ ಮದ್ಭಕ್ತದ್ರೋಹಿಣಶ್ಚ ಯೇ ।**
**ತಾನಗಮ್ಯಾಸು ನಾರೀಷು ಪಾತಯಿತ್ವಾ ವಿನಾಶಯ ॥ ೫೯ ॥**
**ಯೇಷಾಂ ಮದೀಯಪೂಜಾಸು ಮದ್ಭಕ್ತೇಷ್ವಾದೃತಂ ಮನಃ ।**
**ತೇಷಾಂ ಕಾಮಸುಖಂ ಸರ್ವಂ ಸಂಪಾದಯ ಸಮೀಪ್ಸಿತಂ॥ ೬೦ ॥**

---

ನಿನ್ನಿಂದುದಿಸಿ ನಿನ್ನ ಮೂಲಕವೇ ಎಲ್ಲರ ಶರೀರವನ್ನೂ ಸೇರಿ ಎಲ್ಲರಿಗೂ ಉತ್ತಮ ರೀತಿಯ ರತಿಸುಖವನ್ನು ಕೊಡುವವರಾಗುತ್ತಾರೆ.

೫೫. ಪರಮಶಿವನು ಬಹಳವಾಗಿ ಕೋಪಗೊಂಡಿದ್ದರೂ ನನ್ನ ಅನುಗ್ರಹವನ್ನು ಪಡೆದಿರುವ ನಿನ್ನ ಶರೀರವನ್ನು ಸುಡಲು ಸಮರ್ಥನಾಗುವುದಿಲ್ಲ.

೫೬. ಅದಕ್ಕೆ ಬದಲಾಗಿ, ಅವನೇ ನಿನ್ನ ಬಾಣಪಾತದಿಂದ ಚಂಚಲ ಮನಸ್ಕನಾಗಿ ತನ್ನ ಹೆಂಡತಿಯ ವಿರಹವನ್ನು ಆಶಂಕಿಸಿ ಅರ್ಧಶರೀರವನ್ನೇ ಅವಳಿಗೆ ಧಾರೆಯೆರೆಯುತ್ತಾನೆ.

೫೭. ಎಲೈ ಕಂದರ್ಪನೇ! ಇಂದು ಮೊದಲಾಗಿ ನೀನು ನನ್ನ ಪೂರ್ಣಾನುಗ್ರಹದಿಂದ ಯಾರ ಕಣ್ಣಿಗೂ ಬೀಳದೆ ಅದೃಶ್ಯನಾಗಿದ್ದುಕೊಂಡೇ ಎಲ್ಲಾ ಪ್ರಾಣಿಗಳನ್ನೂ ಮೋಹಗೊಳಿಸುವವನಾಗು.

೫೮. ಯಾರು ನಿನ್ನನ್ನು ನಿಂದಿಸುತ್ತಾರೆಯೋ, ಅಥವಾ ನಿನಗೆ ವಿಮುಖರಾಗುತ್ತಾರೆಯೋ ಅವರಿಗೆ ಜನ್ಮಜನ್ಮದಲ್ಲಿಯೂ ನಪುಂಸಕತ್ವವು ತಪ್ಪುವುದೇ ಇಲ್ಲವು.

೫೯. ನನ್ನ ಭಕ್ತರಿಗೆ ದ್ರೋಹವನ್ನು ಮಾಡುವ ಪಾಪಿಷ್ಠರೆಲ್ಲರನ್ನೂ ನೀನು ಹೋಗಬಾರದ ಸ್ತ್ರೀಯರೊಡನೆ ಸೇರಿಸಿ ನಾಶಗೊಳಿಸು.

೬೦. ನನ್ನ ಪೂಜೆಗಳಲ್ಲಿಯೂ, ನನ್ನ ಭಕ್ತರಲ್ಲಿಯೂ ಯಾರು

**ಇತಿ ಶ್ರೀಲಲಿತಾದೇವ್ಯಾ ಕೃತಾಜ್ಞಾವಚನಸ್ಮರಃ ।**
**ತಥೇತಿ ಶಿರಸಾ ಬಿಭ್ರದಂಜಲಿಂ ನಿರ್ಯಯೌ ಸ್ಮರಃ ॥ ೬೧ ॥**
**ತಸ್ಯಾನಂಗಸ್ಯ ಸರ್ವೇಭ್ಯೋ ರೋಮಕೂಪೇಭ್ಯ ಉತ್ಥಿತಾಃ ।**
**ಬಹವಃ ಶೋಭನಾಕಾರಾ ಮದನಾ ವಿಶ್ವಮೋಹನಾಃ ॥ ೬೨ ॥**
**ತೈರ್ವಿಮೋಹ್ಯ ಸಮಸ್ತಂ ಚ ಜಗಚ್ಚಕ್ರಂ ಮನೋಭವಃ । [೬೩॥**
**ಪುನಃ ಸ್ಥಾಣ್ವಾಶ್ರಮಂ ಪ್ರಾಪ ಚಂದ್ರಮೌಲೇರ್ಜಿಗೀಷಯಾ ॥**
**ವಸಂತೇನ ಚ ಮಿತ್ರೇಣ ಸೇನಾನ್ಯಾ ಶೀತರೋಚಿಷಾ ।**
**ರಾಗೇಣ ಪೀಠಮರ್ದೇನ ಮಂದಾನಿಲರಥೇನ ಚ ॥ ೬೪ ॥**
**ಪುಂಸ್ಕೋಕಿಲಗಲಸ್ವಾನಕಾಹಲೀಭಿಶ್ಚ ಸಂಯುತಃ ।**
**ಶೃಂಗಾರವೀರ್ಯಸಂಪನ್ನೋ ರತ್ಯಾಲಿಂಗಿತವಿಗ್ರಹಃ ॥ ೬೫ ॥**
**ಜೈತ್ರಂ ಶರಾಸನಂ ಧೂನ್ವನ್ ಪ್ರವೀರಾಣಾಂ ಪುರೋಗಮಃ ।**
**ತಪೋನಿಷ್ಠಂ ಚಂದ್ರಮೌಲಿಂ ತಾಡಯಾಮಾಸ ಸಾಯಕೈಃ ॥ ೬೬ ॥**

---

ವಿಶ್ವಾಸವಿಡುತ್ತಾರೆಯೋ ಅವರಿಗೆಲ್ಲ ಅವರ ಬಯಕೆಯಿದ್ದಷ್ಟು ಕಾಮ ಸುಖವನ್ನು ಕೊಡುವವನಾಗು.''

೬೧. ಎಲೈ ಅಗಸ್ತ್ಯನೇ! ಶ್ರೀಲಲಿತಾಪರಮೇಶ್ವರಿಯ ಈ ಆಜ್ಞಾವಚನವನ್ನು ಕೇಳಿ ಮನ್ಮಥನು 'ಹಾಗೆಯೇ ಆಗಲೆಂ'ದು ಹೇಳಿ ಬದ್ಧಾಂಜಲಿಪುಟನಾಗಿ ಆಕೆಗೆ ಮಣಿದು ಅಲ್ಲಿಂದ ಬೀಳ್ಕೊಂಡನು.

೬೨. ಬಳಿಕ, ಆ ಅನಂಗನ ರೋಮಕೂಪಗಳಿಂದ ಮಂಗಳರೂಪವುಳ್ಳವರೂ ಪ್ರಪಂಚವನ್ನೇ ಮೋಹಗೊಳಿಸುವವರೂ ಆದ ಅನೇಕಮಂದಿ ಮದನರು ಹುಟ್ಟಿದರು.

೬೩. ಮನೋಭವನು ಅವರೆಲ್ಲರೊಡಗೂಡಿ, ಸಮಸ್ತ ಬ್ರಹ್ಮಾಂಡವನ್ನೂ ಮೋಹಗೊಳಿಸಿ ಶ್ರೀಚಂದ್ರಮೌಲಿಯನ್ನು ಜಯಿಸಲು ಸ್ಥಾಣ್ವಾಶ್ರಮಕ್ಕೆ ಬಿಜಿಮಾಡಿದನು.

೬೪-೬೬. ಗೆಳೆಯನಾದ ವಸಂತನೂ, ಸೇನಾನಿಯಾದ ಚಂದ್ರನೂ, ಪೀಠಮರ್ದನಾದ ರಾಗನೂ ಹಿಂಬಾಲಿಸಿ ಬರುತ್ತಿರಲು ಮಲಯಮಾರುತವೆಂಬ ರಥವನ್ನೇರಿ, ಗಂಡುಕೋಗಿಲೆಯ ಕಂಠದಿಂದ ಹೊರಹೊರಟ ಇನಿದನಿಯೆಂಬ ಕಹಳೆಯ ದನಿಯೊಡಗೂಡಿ, ಶೃಂಗಾರವೆಂಬ ಪರಾಕ್ರಮಸಂಪನ್ನನಾಗಿ, ನಿಜಸತಿಯಾದ ರತಿಯನ್ನಪ್ಪಿದ ಮೈಯುಳ್ಳವನಾಗಿ, ವಿಜಯಪ್ರದವಾದ ಸುಮಬಾಣವನ್ನು ಟೇಂಕರಿಸುತ್ತ ವೀರಾಗ್ರಣಿಯಾಗಿ,

**ಅಥ ಕಂದರ್ಪಬಾಣೌಘೈಸ್ತಾಡಿತಶ್ಚಂದ್ರಶೇಖರಃ ।**
**ದೂರೀಚಕಾರ ವೈರಾಗ್ಯಂ ತಪಸ್ತತ್ಯಾಜ ದುಷ್ಕರಂ ॥ ೬೭ ॥**
**ನಿಯಮಾನಖಿಲಾಂಸ್ತ್ಯಕ್ತ್ವಾ ಧ್ವಸ್ತಧೈರ್ಯಃ ಶಿವಃ ಕೃತಃ । [೬೮॥**
**ತಾಮೇವ ಪಾರ್ವತೀಂ ಧ್ಯಾತ್ವಾ ಭೂಯೋಭೂಯಃ ಸ್ಮರಾತುರಃ ॥**
**ನಿಶಶ್ವಾಸ ವಹನ್ ಶರ್ವಃ ಪಾಂಡರಂ ಗಂಡಮಂಡಲಂ ।**
**ಬಾಷ್ಪಾಯಮಾಣೋ ವಿರಹಸಂತಪ್ತೋ ಧೈರ್ಯವಿಪ್ಲವಾತ್ ।**
**ಭೂಯೋಭೂಯೋ ಗಿರಿಸುತಾಂ ಪೂರ್ವದೃಷ್ಟಾಮನುಸ್ಮರನ್ ॥**
**ಅನಂಗಬಾಣದಹನೈ ಸ್ತಪ್ಯಮಾನಸ್ಯ ಶೂಲಿನಃ ।**
**ನ ಚಂದ್ರರೇಖಾ ನೋ ಗಂಗಾ ದೇಹತಾಪಚ್ಛಿದೇಽಭವತ್ ॥ ೭೦ ॥**
**ನಂದಿಭೃಂಗಿಮಹಾಕಾಲಪ್ರಮುಖೈರ್ಗಣಮಂಡಲೈಃ ।**
**ಆಹೃತೇ ಪುಷ್ಪಶಯನೇ ವಿಲುಲೋಠ ಮುಹುರ್ಮುಹುಃ ॥ ೭೧ ॥**

---

ಆ ಮನ್ಮಥನು ಸ್ಥಾಣ್ವಾಶ್ರಮಕ್ಕೆ ಬಂದು ತಪೋನಿಷ್ಠನಾಗಿದ್ದ ಆ ಚಂದ್ರಮೌಳಿಯನ್ನು ಅಂಬುಗಳಿಂದ ಹೊಡೆದನು.

೬೭. ಹೀಗೆ ಕಂದರ್ಪನ ಆ ಬಾಣಗಳಿಂದ ತಾಡಿತನಾದ ಚಂದ್ರಶೇಖರನಾದರೋ ವೈರಾಗ್ಯವನ್ನು ದೂರಮಾಡಿದುದಲ್ಲದೆ, ಘೋರವಾದ ತನ್ನ ತಪಸ್ಸನ್ನೂ ತೊರೆದುಬಿಟ್ಟನು.

೬೮. ಆತನು ಅಡಿಗಡಿಗೂ ಪಾರ್ವತಿಯನ್ನೇ ನೆನೆದು ಮದನತಾಪಕ್ಕೊಳಗಾದನು. ತಪೋನಿಯಮಗಳೆಲ್ಲವನ್ನೂ ತ್ಯಾಗಮಾಡಿ ದೃಢಚಿತ್ತತೆಯು ಕುಂದಲು, ಆ ಪಾರ್ವತಿಯನ್ನೇ ನೆನೆದು ಹಂಬಲಿಸುತ್ತಿದ್ದನು.

೬೯. ಕೆನ್ನೆಗಳೆಲ್ಲವೂ ಬತ್ತಿ ಬೆಳ್ಳಗಾಗಿಹೋಗಲು ಅವನು ಬಹಳವಾಗಿ ನಿಟ್ಟುಸಿರಿಟ್ಟನು. ಧೈರ್ಯಗುಂದಿ ವಿರಹಸಂತಪ್ತನಾಗಿ ಹಿಂದೊಮ್ಮೆ ತಾನು ಕಂಡ ಗಿರಿಸುತೆಯನ್ನು ನೆನೆನೆನೆದು ಕಂಬನಿದುಂಬಿದನು.

೭೦. ಹೀಗೆ, ಅನಂಗಬಾಣದ ಬೇಗೆಯಿಂದ ತಪಿಸುತ್ತಿರುವ ಆ ಶೂಲಿಗೆ ಚಂದ್ರರೇಖೆಯಾಗಲೀ, ಗಂಗೆಯಾಗಲೀ ದೇಹತಾಪವನ್ನು ಪರಿಹರಿಸಲು ಸಮರ್ಥರಾಗಲಿಲ್ಲ.

೭೧. ಆ ಪರಶಿವನು ತನ್ನ ಗಣಾಧಿಪತಿಗಳಾದ ನಂದಿ, ಭೃಂಗಿ, ಮಹಾಕಾಲ ಮೊದಲಾದವರು ತಂದು ಹಾಸಿದ ಪುಷ್ಪಶಯನದಲ್ಲಿ ಪವಳಿಸಿ ಅಡಿಗಡಿಗೂ ಹೊರಳಿದನು.

ನಂದಿನೋ ಹಸ್ತಮಾಲಂಬ್ಯ ಪುಷ್ಪತಲ್ಪಾಂತರಾತ್ಪುನಃ ।
ಪುಷ್ಪತಲ್ಪಾಂತರಂ ಗತ್ವಾ ವ್ಯವೇಷ್ಟತ ಮುಹುರ್ಮುಹುಃ ॥ ೭೨ ॥
ನ ಪುಷ್ಪಶಯನೇ ನೇಂದುಖಂಡನಿರ್ಗಲಿತಾಮೃತೇ ।
ನ ಹಿಮಾನೀಪಯಸಿ ವಾ ನಿರ್ವೃತಸ್ತದ್ವಪುರ್ಜ್ವರಃ ॥ ೭೩ ॥
ಸ ತನೋರತನುಜ್ವಾಲಾಂ ಶಮಯಿಷ್ಯನ್ ಮುಹುರ್ಮುಹುಃ ।
ಶಿಲೀಭೂತಾನ್ ಹಿಮಪಯಃ ಪಟ್ಟಾನಧ್ಯವಸಚ್ಛಿವಃ ।
ಭೂಯಃ ಶೈಲಸುತಾರೂಪಂ ಚಿತ್ರಪಟ್ಟೇ ನಖೈರ್ಲಿಖನ್ ॥ ೭೪ ॥
ತದಾಲೋಕನತೋ ದೂರಮನಂಗಾರ್ತಿಮವರ್ಧಯತ್ ।
ತಾಮಾಲಿಖ್ಯ ಹ್ರಿಯಾ ನಮ್ರಾಮಾಕ್ಷಮಾಣಾಂ ಕಟಾಕ್ಷತಃ ॥ ೭೫ ॥
ತಂ ಚಿತ್ರಪಟಮಂಗೇಷು ರೋಮಹರ್ಷಿಷು ಚಾಕ್ಷಿಪತ್ ।
ಚಿತ್ರಸಂಗೇನ ಮಹತಾ ಮಹತ್ಯಾ ರತಿಸಂಪದಾ ।
ಭೂಯಸಾ ಸ್ಮರತಾಪೇನ ವಿವ್ಯಥೇ ವಿಷಮೇಕ್ಷಣಃ ॥ ೭೬ ॥

---

೭೨. ಬಳಿಕ, ಆ ಪುಷ್ಪಶಯನವನ್ನೂ ತೊರೆದು ನಂದಿಯ ಕೈಯನ್ನು ಹಿಡಿದುಕೊಂಡು ಮತ್ತೊಂದು ಪುಷ್ಪಶಯನಕ್ಕೆ ಹೋಗಿ ಅಲ್ಲಿಯೂ ಅದೇ ರೀತಿ ಅಡಿಗಡಿಗೂ ಹೊರಳಾಡಿದನು.

೭೩. ಆ ಸುಮಶಯನದಲ್ಲಿಯಾಗಲಿ, ಮುಡಿಯಲ್ಲಿದ್ದ ಚಂದ್ರ ರೇಖೆಯಿಂದೊಗೆದ ಅಮೃತದಿಂದಾಗಲಿ, ಗಂಗಾಜಲದಿಂದಾಗಲಿ ಅವನ ಮದನಜ್ವರವು ಶಮನವಾಗಲಿಲ್ಲ.

೭೪. ಸ್ಮರಜ್ವಾಲೆಗಳಿಂದ ಪರಿತಪ್ತವಾದ ತನ್ನ ದೇಹವನ್ನು ಶಮನ ಗೊಳಿಸಲೋಸುಗ ಆ ಶಿವನು ಮಂಜಿನಗಡ್ಡೆಗಳ ಪಟ್ಟುಗಳನ್ನು ಕಟ್ಟಿಕೊಂಡನು. ಚಿತ್ರಫಲಕಗಳಲ್ಲಿ ಅನೇಕಬಾರಿ ಶೈಲಸುತೆಯಾದ ಆ ಪಾರ್ವತಿಯ ರೂಪವನ್ನು ತನ್ನುಗುರುಗಳಿಂದ ಬರೆದನು.

೭೫-೭೬. ಅದರಿಂದ ಅವನ ಸ್ಮರತಾಪವು ಇನ್ನೂ ಹೆಚ್ಚಿಹೋಯಿ ತಾಗಲಿ ಕುಗ್ಗಲಿಲ್ಲ. ಆಗ ಆತನು ಆ ಚಿತ್ರಪಟವನ್ನು ರೋಮಾಂಚ ಗೊಂಡಿದ್ದ ತನ್ನ ಅವಯವಗಳಿಂದಪ್ಪಿ ಆ ಚಿತ್ರಸಂಗದಿಂದುಂಟಾದ ಮಹತ್ತರ ರತಿಯಿಂದಲೂ, ಬಹಳವಾದ ಸ್ಮರತಾಪದಿಂದಲೂ ಇನ್ನೂ ಬಹಳವಾಗಿ ವ್ಯಥೆಗೊಂಡನು.

**ತಾಮೇವ ಸರ್ವತಃ ಪಶ್ಯನ್ ತಸ್ಯಾಮೇವ ಮನೋಽದಿಶತ್ ।**
**ತಯೈವ ಸಂಲ್ಲಪನ್ ಸಾರ್ಧಮುನ್ಮಾದೇನೋಪಪನ್ನಯಾ ॥ ೭೭ ॥**
**ತನ್ಮಯೀಭೂತಹೃದಯಸ್ತಚ್ಚಿಂತಸ್ತತ್ಪರಾಯಣಃ ।**
**ತತ್ಕಥಾಸುಧಯಾ ನೀತಸಮಸ್ತರಜನೀದಿನಃ ॥ ೭೮ ॥**
**ತಚ್ಛೀಲವರ್ಣನವ್ಯಗ್ರಸ್ತದ್ರೂಪಾಲೋಕನೋತ್ಸುಕಃ ।**
**ತಚ್ಚಾರುಭೋಗಸಂಕಲ್ಪಮಾಲಾಕರಣಮಾಲಿಕಃ ।**
**ತನ್ಮಯತ್ವಮನುಪ್ರಾಪ್ತಸ್ತತಾಪಾತಿತರಾಂ ಶಿವಃ ॥ ೭೯ ॥**
**ಇಮಾಂ ಮನೋಭವರುಜಮಚಿಕಿತ್ಸ್ಯಾಂ ಸ ಧೂರ್ಜಟಿಃ ।**
**ಅವಲೋಕ್ಯ ವಿವಾಹಾಯ ಭೃಶಮುದ್ಯಮವಾನಭೂತ್ ॥ ೮೦ ॥**
**ಇತ್ಥಂ ವಿಮೋಹ್ಯ ತಂ ದೇವಂ ಕಂದರ್ಪೋ ಲಲಿತಾಜ್ಞಯಾ ।**
**ಅಥ ತಾಂ ಪರ್ವತಸುತಾಮಾಶುಗೈರಭ್ಯತಾಡಯತ್ ॥ ೮೧ ॥**

---

೭೭-೭೯. ಆ ವಿಷಮೇಕ್ಷಣನು, ಎಲ್ಲೆಡೆಗಳಲ್ಲಿಯೂ ಉಮೆಯನ್ನೇ ನೋಡುತ್ತ ಆಕೆಯಲ್ಲಿಯೇ ಮನಸ್ಸಿಟ್ಟು ತನ್ನನ್ನು ಬೆಂಬತ್ತಿದ ಉನ್ಮಾದದಿಂದ, ಚಿತ್ರಗತೆಯಾದ ಅವಳೊಡನೆಯೇ ಸಲ್ಲಪಿಸುತ್ತ ಅವಳಲ್ಲಿಯೇ ನೆಲಸಿದ ಹೃದಯವುಳ್ಳವನಾಗಿ, ಅವಳ ಚಿಂತೆಯಲ್ಲಿಯೇ ತೊಡಗಿ, ಅವಳ ಸಂಬಂಧವಾದ ಕಥಾಮೃತದಿಂದಲೇ ಹಗಲಿರುಳುಗಳೆಲ್ಲವನ್ನೂ ಕಳೆಯುತ್ತ, ಅವಳ ಶೀಲವನ್ನೇ ಬಣ್ಣಿಸಿ, ಅವಳ ಸೌಂದರ್ಯವನ್ನೇ ಕುರಿತು ಚಿಂತಿಸುತ್ತ, ಮುಂದೆ ಅವಳೊಡನೆ ತಾನು ಅನುಭವಿಸುವ ರಮಣೀಯವಾದ ಭೋಗಸಂಕಲ್ಪಪುಷ್ಪಗಳಿಂದ ಸಂಕಲ್ಪಮಾಲೆಗಳನ್ನು ಕಟ್ಟುವ ಮಾಲೆಗಾರನಾಗಿ, ಆಕೆಯಲ್ಲಿಯೇ ತನ್ಮಯತ್ವವನ್ನು ಹೊಂದಿ ಅಧಿಕಾಧಿಕವಾಗಿ ತಪಿಸಿಹೋದನು.

೮೦. ಆ ಧೂರ್ಜಟಿಯು ಈ ರೀತಿ ತನಗುಂಟಾಗಿರುವ ಮದನಪೀಡೆಯು ಚಿಕಿತ್ಸೆಮಾಡಲಸದಳವಾದುದೆಂದು ತಿಳಿದು ಕಡೆಗೆ ಪಾರ್ವತಿಯನ್ನು ಪರಿಣಯವಾಗುವ ಪ್ರಯತ್ನವನ್ನೆಸಗಿದನು.

೮೧. ಅಯ್ಯಾ, ಕುಂಭೋದ್ಭವನೇ! ಕಂದರ್ಪನು ಶ್ರೀ ಲಲಿತಾಪರಮೇಶ್ವರಿಯ ಅಪ್ಪಣೆಯಿಂದ ಶ್ರೀ ಶಿವನನ್ನು ಹೀಗೆ ಮೋಹಗೊಳಿಸಿದ ಬಳಿಕ ಅಲ್ಲಿಂದ ಪಾರ್ವತಿಯಿದ್ದೆಡೆಗೂ ಹೋಗಿ ಅವಳನ್ನೂ ಕೂರಂಬುಗಳಿಂದ ಹೊಡೆದನು.

ಪ್ರಭೂತವಿರಹಜ್ವಾಲಾಮಲಿನೈಃ ಶ್ವಸಿತಾನಿಲೈಃ ।
ಶುಷ್ಯಮಾಣಾಧರದಲಾ ಭೃಶಂ ಪಾಂಡುಕಪೋಲಭೂಃ ।
ನಾಹಾರೇ ಶಯನೇ ನೈವ ನ ಸ್ವಾಪೇ ಧೃತಿಮಿಚ್ಛತಿ ॥ ೮೨ ॥
ಸಖೀಸಹಸ್ರರಚಿತೈರ್ನಿತ್ಯಂ ಶೀತೋಪಚಾರಕೈಃ ।
ಪುನಃ ಪುನಸ್ತಪ್ಯಮಾನಾ ಪುನರೇವ ಚ ವಿಹ್ವಲಾ ।
ನ ಜಗಾಮ ರುಜಾ ಶಾಂತಿಂ ಮನ್ಮಥಾಗ್ನೇರ್ಮಹೀಯಸಃ ॥ ೮೩ ॥
ನ ನಿದ್ರಾಂ ಪಾರ್ವತೀ ಭೇಜೇ ವಿರಹೇಣೋಪತಾಪಿತಾ ।
ಸ್ವತನೋಸ್ತಾನವೇನಾಸೌ ಪಿತುಃ ಖೇದಮವರ್ಧಯತ್ ॥ ೮೪ ॥
ಅಪ್ರತೀಕಾರಪರುಷಂ ವಿರಹಂ ದುಹಿತುಃ ಶಿವೇ । [೮೫ ॥
ಅವಲೋಕ್ಯ ಸ ಶೈಲೇಂದ್ರೋ ಮಹದ್ದುಃಖಮವಾಪ್ತವಾನ್ ॥
ಭದ್ರೇ ತ್ವಂ ತಪಸಾ ದೇವಂ ತೋಷಯಿತ್ವಾ ಮಹೇಶ್ವರಂ ।
ಭರ್ತಾರಂ ತಂ ಸಮೃಚ್ಛೇತಿ ಪಿತ್ರಾ ಸಂಪ್ರೇರಿತಾ ತದಾ ॥ ೮೬ ॥

---

೮೨. ಆಗ ಪಾರ್ವತಿಯು ಅತಿಶಯವಾದ ವಿರಹಜ್ವಾಲೆಗಳ ಮಲಿನ ನಿಃಶ್ವಾಸಮಾರುತದಿಂದ ಬತ್ತಿಹೋಗುತ್ತಿರುವ ಅಧರದಳವುಳ್ಳವಳೂ, ಬಹಳ ಬೆಳ್ಳಗಾದ ಕೆನ್ನೆಗಳುಳ್ಳವಳೂ ಆಗಿ, ಆಹಾರದಲ್ಲಿಯಾಗಲಿ, ಶಯನದಲ್ಲಿಯಾಗಲಿ, ಮಲಗುವುದರಲ್ಲಿಯಾಗಲಿ, ಸ್ಥೈರ್ಯವನ್ನು ಹೊಂದಲಾರದೆಹೋದಳು.

೮೩. ಸಾವಿರಾರು ಮಂದಿ ಸಖಿಯರು ಯಾವಾಗಲೂ, ತನಗೆ ಸಲ್ಲಿಸುತ್ತಿದ್ದ ಶೈತ್ಯೋಪಚಾರಗಳಿಂದಲೂ ಸಮಾಧಾನಗೊಳ್ಳದೆ ಅಡಿಗಡಿಗೂ ತಾಪಗೊಂಡು, ಮತ್ತೆ ಮತ್ತೆ ಚಿತ್ತಚಾಂಚಲ್ಯವನ್ನು ಹೊಂದಿ ಮಹತ್ತರವಾದ ಆ ಮದನಾಗ್ನಿಬಾಧೆಗೆ ಶಾಂತಿಯನ್ನೇ ಪಡೆಯಲಿಲ್ಲ.

೮೪. ಮೇಲೆ ಮೇಲೆ ಹೆಚ್ಚಿ ಬರುತ್ತಿರುವ ವಿರಹತಾಪದಿಂದ ಆ ದೇವಿಯು ನಿದ್ರೆಯನ್ನೇ ಹೊಂದಲಿಲ್ಲ; ಅಲ್ಲದೆ, ಆಕೆಯು ತನ್ನ ದೇಹಕಾರ್ಶ್ಯದಿಂದ ತಂದೆಯಾದ ಹಿಮವಂತನ ಸಂತಾಪವನ್ನು ವೃದ್ಧಿಗೊಳಿಸಿದಳು.

೮೫. ಆ ಹಿಮವದ್ರಾಜನಾದರೋ ತನ್ನ ಮಗಳಾದ ಪಾರ್ವತಿಯು ಶಿವನಿಗಾಗಿ, ಪ್ರತೀಕಾರಮಾಡಲಸಾಧ್ಯವಾದ ವಿರಹದಿಂದ ಸಂತಪ್ತೆಯಾಗಿರುವುದನ್ನು ಕಂಡಂತೂ ಮಹತ್ತರವಾದ ದುಃಖಕ್ಕೊಳಗಾದನು.

೮೬-೮೭. ಆಗ ಆತನು—"ಎಲೆ ಮಂಗಳಾಂಗಿ! ಮಹೇಶ್ವರನನ್ನು

**ಹಿಮವಚ್ಛೈಲಶಿಖರೇ ಗೌರೀಶಿಖರನಾಮನಿ ।**
**ಚಕಾರ ಪತಿಲಾಭಾಯ ಪಾರ್ವತೀ ದುಷ್ಕರಂ ತಪಃ ॥ ೮೭ ॥**
**ಶಿಶಿರೇಷು ಜಲಾವಾಸಾ ಗ್ರೀಷ್ಮೇ ಪಂಚಾಗ್ನಿಮಧ್ಯಗಾ ।**
**ಅರ್ಕೇ ನಿವಿಷ್ಟದೃಷ್ಟಿಶ್ಚ ಸುಘೋರಂ ತಪ ಆಸ್ಥಿತಾ ॥ ೮೮ ॥**
**ತೇನೈವ ತಪಸಾ ತುಷ್ಟಃ ಸಾನ್ನಿಧ್ಯಂ ದತ್ತವಾನ್ ಶಿವಃ ।**
**ಅಂಗೀಚಕಾರ ತಾಂ ಭಾರ್ಯಾಂ ವೈವಾಹಿಕವಿಧಾನತಃ ॥ ೮೯ ॥**
**ಅಥ ಪ್ರಾಲೇಯಶೈಲೇಂದ್ರದತ್ತಾಂ ತಾಂ ನಲಿನೇಕ್ಷಣಾಂ ।**
**ಸಪ್ತರ್ಷಿದ್ವಾರತಃ ಪೂರ್ವಂ ಪ್ರಾರ್ಥಿತಾಮುದವೋಢ ಸಃ ॥ ೯೦ ॥**
**ತಯಾ ಚ ರಮಮಾಣೋಽಸೌ ಬಹುಕಾಲಂ ಮಹೇಶ್ವರಃ ।**
**ಓಷಧಿಪ್ರಸ್ಥನಗರೇ ಶ್ವಶುರಸ್ಯ ಗೃಹೇ ವಸನ್ ॥ ೯೧ ॥**
**ಪುನಃ ಕೈಲಾಸಮಾಗತ್ಯ ಸಮಸ್ತೈಃ ಪ್ರಮಥೈಃ ಸಹ ।**
**ಪಾರ್ವತೀಮಾನಿನಾಯಾದ್ರಿನಾಥಸ್ಯ ಪ್ರಿಯಮಾವಹನ್ ॥ ೯೨ ॥**

---

ನಿನ್ನ ತಪಸ್ಸಿನಿಂದಲೇ ಸಂತೋಷಗೊಳಿಸಿ ಅವನನ್ನೇ ಪತಿಯನ್ನಾಗಿ ಪಡೆ''—ಎಂದು ಅವಳಿಗೆ ಅನುಮತಿಯನ್ನು ಕೊಟ್ಟನು. ಹೀಗೆ ತಂದೆಯಿಂದ ಪ್ರೇರಿತೆಯಾಗಿ ಆ ಗೌರಿಯು ಗೌರೀಶಿಖರವೆಂದು ಹೆಸರಾದ ಹಿಮವತ್ಪರ್ವತದ ಒಂದಾನೊಂದು ಪ್ರದೇಶದಲ್ಲಿ ಕುಳಿತು, ಶಿವನನ್ನು ಪತಿಯನ್ನಾಗಿ ಪಡೆಯಲು ದುಷ್ಕರವಾದ ತಪಸ್ಸನ್ನು ಮಾಡಿದಳು.

೮೮. ಚಳಿಗಾಲದಲ್ಲಿ ನೀರಿನಲ್ಲಿಯೂ, ಬೇಸಗೆಯಲ್ಲಿ ಪಂಚಾಗ್ನಿಗಳ ನಡುವೆಯೂ ಕುಳಿತು ಸೂರ್ಯನನ್ನೇ ಎವೆಯಿಕ್ಕದೆ ನೋಡುತ್ತ ಆ ದೇವಿಯು ಘೋರವಾದ ತಪಸ್ಸನ್ನೆಸಗಿದಳು.

೮೯. ಆಕೆಯೆಸಗಿದ ಆ ಘೋರತಪಸ್ಸಿನಿಂದ ಶಿವನು ಆಕೆಗೆ ಸಾನ್ನಿಧ್ಯವನ್ನು ದಯೆಗೈದುದೂ ಅಲ್ಲದೆ, ವಿವಾಹವಿಧಾನದಿಂದ ಆಕೆಯನ್ನು ಭಾರ್ಯೆಯನ್ನಾಗಿಯೂ ಅಂಗೀಕರಿಸಿದನು.

೯೦. ತರುವಾಯ, ಆ ಪರಶಿವನು ಗೌತಮಾದಿ ಸಪ್ತರ್ಷಿಗಳ ಮೂಲಕ ಹಿಮವಂತನಲ್ಲಿ ಗೌರಿಯನ್ನು ತನಗೆ ಕೊಡಬೇಕೆಂದು ಪ್ರಾರ್ಥಿಸಿ, ಆತನು ದಾನಮಾಡಿಕೊಟ್ಟ ಆಕೆಯನ್ನು ಶಾಸ್ತ್ರೋಕ್ತವಾಗಿ ಮದುವೆಯಾದನು.

೯೧-೯೨. ತರುವಾಯ ಮಹೇಶ್ವರನು ಆ ಪಾರ್ವತಿಯೊಡನೆ, ಆ ಓಷಧಿಪ್ರಸ್ಥನಗರದಲ್ಲಿ ತನ್ನ ಮಾವನ ಮನೆಯಲ್ಲಿಯೇ ಬಹುಕಾಲ ನೆಲಸಿ

**ರಮಮಾಣಸ್ತಯಾ ಸಾರ್ಧಂ ಕೈಲಾಸೇ ಮಂದರೇ ತಥಾ ।**
**ವಿಂಧ್ಯಾದ್ರೌ ಹಿಮಶೈಲೇ ಚ ಮಲಯೇ ಪಾರಿಯಾತ್ರಕೇ ।**
**ನಾನಾವಿಧೇಷು ಸ್ಥಾನೇಷು ರತಿಂ ಪ್ರಾಪ ಮಹೇಶ್ವರಃ ॥ ೯೩ ॥**
**ಅಥ ತಸ್ಯಾಂ ಸಸರ್ಜೋಗ್ರಂ ವೀರ್ಯಂ ಸಾ ಸೋಢುಮಕ್ಷಮಾ ।**
**ಭುವ್ಯತ್ಯಜತ್ಸಾಪಿ ವಹ್ನೌ ಕೃತ್ತಿಕಾಸು ಸ ಚಾಕ್ಷಿಪತ್ ॥ ೯೪ ॥**
**ತಾಶ್ಚ ಗಂಗಾಜಲೇಽಮುಂಚನ್ ಸಾ ಚ ಸ್ವಶರಕಾನನೇ । [೯೫ ॥**
**ಅತ್ರೋದ್ಭೂತೋ ಮಹಾವೀರೋ ಮಹಾಸೇನಃ ಷಡಾನನಃ ॥**
**ಗಂಗಯಾ ಚಾಂತಿಕಂ ನೀತೋ ಧೂರ್ಜಟೇರ್ವೃದ್ಧಿಮಾಗಮತ್ ।**
**ಸ ವರ್ಧಮಾನೋ ದಿವಸೇ ದಿವಸೇ ತೀವ್ರವಿಕ್ರಮಃ ।**
**ಶಿಕ್ಷಿತೋ ನಿಜತಾತೇನ ಸರ್ವವಿದ್ಯಾ ಅವಾಪ್ತವಾನ್ ॥ ೯೬ ॥**
**ಅಥ ತಾತಕೃತಾನುಜ್ಞಃ ಸುರಸೈನ್ಯಪತಿರ್ಭವನ್ ।**
**ತಾರಕಂ ಮಾರಯಾಮಾಸ ಸಮಸ್ತೈಃ ಸಹ ದಾನವೈಃ ॥ ೯೭ ॥**

---

ರಮಿಸುತ್ತಿದ್ದು, ಅದ್ರಿನಾಥನಾದ ಆತನಿಗೆ ಸಂತೋಷವನ್ನುಂಟುಮಾಡಿ, ಆ ಬಳಿಕ ಆಕೆಯೊಡನೆಯೂ, ಸಮಸ್ತ ಪ್ರಮಥಗಣಗಳೊಡನೆಯೂ ಕೈಲಾಸಕ್ಕಾಗಮಿಸಿದನು.

೯೩. ಕೈಲಾಸದಲ್ಲಿಯೂ, ಮಂದರ, ವಿಂಧ್ಯ, ಹಿಮವಂತ, ಮಲಯ, ಪಾರಿಯಾತ್ರಕವೇ ಮೊದಲಾದ ವಿವಿಧ ಪ್ರದೇಶಗಳಲ್ಲಿಯೂ ಆ ಶಂಕರನು ಗೌರಿಯೊಡನೆ ರಮಿಸಿ ರತಿಯನ್ನು ಪಡೆದನು.

೯೪. ಬಳಿಕ ಆ ಪರಶಿವನು ಆಕೆಯಲ್ಲಿ ವೀರ್ಯವನ್ನು ಬಿಟ್ಟನು. ಆಕೆಯು ಅದನ್ನು ಭರಿಸಲಾರದೆ ಭೂಮಿಯಲ್ಲಿ ಬಿಟ್ಟಳು. ಭೂಮಿಯಾದರೋ ಅದನ್ನು ಮತ್ತೆ ಯಜ್ಞೇಶ್ವರನಲ್ಲಿ ಅರ್ಪಿಸಲು, ಆತನದನ್ನು ಷಟ್ಕೃತ್ತಿಕೆಯರಲ್ಲಿ ಸಮರ್ಪಿಸಿದನು.

೯೫. ಆ ಕೃತ್ತಿಕೆಯರು ಅದನ್ನು ಗಂಗಾಜಲದಲ್ಲಿ ಬಿಡಲು, ಗಂಗೆಯು ಅದನ್ನು ತನ್ನ ಶರವಣದಲ್ಲಿ ಬಿಟ್ಟಳು. ಅಲ್ಲಿಯೇ ಮಹಾವೀರನೂ, ಮಹಾಸೇನನೂ ಆದ ಷಡಾನನಸ್ವಾಮಿಯುದಿಸಿದನು.

೯೬. ಗಂಗೆಯು ಆ ಕುಮಾರನನ್ನು ಧೂರ್ಜಟಿಯ ಬಳಿಗೈದಿಸಲು, ಆತನಿಂದಲೇ ಅವನು ದಿನದಿನಕ್ಕೂ ವೃದ್ಧಿಹೊಂದಿದನು. ಆ ಷಣ್ಮುಖನು ಹೀಗೆ ವರ್ಧಿಸಿ ಮಹಾಪರಾಕ್ರಮಿಯಾಗಿ, ತಂದೆಯಾದ ಧೂರ್ಜಟಿಯಿಂದ ಶಿಕ್ಷಿತನಾಗಿ ಸಮಸ್ತ ವಿದ್ಯೆಗಳನ್ನೂ ಪಡೆದನು.

೯೭. ತರುವಾಯ, ಷಡಾನನನು ತನ್ನ ಜನಕನ ಅನುಜ್ಞೆಯಂತೆ

ಪುನಸ್ತಾರಕದೈತ್ಯೇಂದ್ರವಧಸಂತೋಷಶಾಲಿನಾ ।
ಶಕ್ರೇಣ ದತ್ತಾಂ ಸ ಗುಹೋ ದೇವಸೇನಾಮುಪಾಗಮತ್ ॥ ೯೮ ॥
ಸಾ ಶಕ್ರತನಯಾ ದೇವಸೇನಾನಾಮ್ನಾ ಯಶಸ್ವಿನೀ ।
ಆಸಾದ್ಯ ರಮಣಂ ಸ್ಕಂದಮಾನಂದಂ ಭೃಶಮಾದಧೌ ॥ ೯೯ ॥
ಇತ್ಥಂ ಸಂಮೋಹಿತಾಶೇಷವಿಶ್ವಚಕ್ರೋ ಮನೋಭವಃ ।
ದೇವಕಾರ್ಯಂ ಸುಸಂಪಾದ್ಯ ಜಗಾಮ ಶ್ರೀಪುರಂ ಪುನಃ ॥ ೧೦೦ ॥
ಯತ್ರ ಶ್ರೀನಗರೇ ಪುಣ್ಯೇ ಲಲಿತಾ ಪರಮೇಶ್ವರೀ ।
ವರ್ತತೇ ಜಗತಾಮೃದ್ಧ್ಯೈ ತತ್ರ ತಾಂ ಸೇವಿತುಂ ಯಯೌ ॥ ೧೦೧ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀಲಲಿತೋಪಾಖ್ಯಾನೇ
ಪಂಚವಿಂಶೋಽಧ್ಯಾಯಃ

---

ಸಮಸ್ತ ಸುರಸೇನೆಗಳಿಗೂ ನಾಯಕನಾಗಿ ಯುದ್ಧಕ್ಕೆ ಹೊರಟು, ಸಮಸ್ತ ದಾನವರೊಡಗೂಡಿದ ತಾರಕದೈತ್ಯನನ್ನು ಸಂಹರಿಸಿದನು.

೯೮. ಬಳಿಕ, ಆತನು ತಾರಕದೈತ್ಯಸಂಹಾರದಿಂದ ಸಂತೋಷಗೊಂಡ ದೇವೇಂದ್ರನು ತನಗಿತ್ತ ದೇವಸೇನೆಯನ್ನು ಮದುವೆಯಾದನು.

೯೯. ದೇವರಾಜಕುಮಾರಿಯೂ, ಮಹಾಕೀರ್ತಿಶಾಲಿನಿಯೂ ಆದ ಆ ದೇವಸೇನೆಯೂ ಸ್ಕಂದನನ್ನು ಪತಿಯನ್ನಾಗಿ ಪಡೆದು ಮಹಾನಂದಭರಿತೆಯಾದಳು.

೧೦೦. ಎಲೈ ಅಗಸ್ತ್ಯಮಹರ್ಷಿಯೇ! ಈ ಪ್ರಕಾರ ಮನೋಭವನು ಪ್ರಪಂಚವನ್ನೇ ಸಂಮೋಹಗೊಳಿಸಿ, ದೇವತೆಗಳ ಕಾರ್ಯವನ್ನೂ ಆಗಗೊಳಿಸಿದ ತರುವಾಯ ಮತ್ತೆ ಶ್ರೀಪುರಕ್ಕೆ ಬಂದು ಸೇರಿದನು.

೧೦೧. ಪುಣ್ಯಕರವಾದ ಆ ಶ್ರೀಪುರದಲ್ಲಿ, ಪ್ರಪಂಚದ ಕ್ಷೇಮಕ್ಕಾಗಿಯೇ ನೆಲೆಗೊಂಡಿದ್ದ ಶ್ರೀ ಲಲಿತಾಪರಮೇಶ್ವರಿಯನ್ನು ಸೇವಿಸಲೋಸುಗವೇ ಆತನಲ್ಲಿಗೈತಂದನು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದಲ್ಲಿ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಡ್ವಿಂಶೋಽಧ್ಯಾಯಃ

[ಶ್ರೀನಗರ ನಿರ್ಮಾಣ ವರ್ಣನಂ]

ಬ್ರಹ್ಮಾಚ್ಯುತೇಶವಿಧಿವಾಕ್ಯಸುಚೋದಿತಾಭ್ಯಾಂ
ಶ್ರೀವಿಶ್ವಕರ್ಮಮಯಸಂಜ್ಞಿತದೇವತಾಭ್ಯಾಂ ।
ಶ್ರೀದೇವಿದಿವ್ಯಪುರಸಪ್ತಕಸಾಲರೂಪ
ನಿರ್ಮಾಣಮುಕ್ತಮಿಹ ಯತ್ತವ ದೇವಿ ನೌಮಿ ॥

ಅಗಸ್ತ್ಯಃ—

ಕಿಮಿದಂ ಶ್ರೀಪುರಂ ನಾಮ ಕೇನ ರೂಪೇಣ ವರ್ತತೇ ।
ಕೇನ ವಾ ನಿರ್ಮಿತಂ ಪೂರ್ವಂ ತತ್ಸರ್ವಂ ವಿನಿವೇದಯ ॥ ೧ ॥
ಕಿಯತ್ಪ್ರಮಾಣಂ ಕಿಂ ವರ್ಣಂ ಕಥಯಸ್ವ ಮಮ ಪ್ರಭೋ ।
ತ್ವಮೇವ ಸರ್ವಸಂದೇಹಪಂಕಶೋಷಣಭಾಸ್ಕರಃ ॥ ೨ ॥

ಶ್ರೀಹಯಗ್ರೀವಃ—

ಯದಾ ಚಕ್ರರಥಂ ಪ್ರಾಪ್ಯ ಪೂರ್ವೋಕ್ತೈರ್ಲಕ್ಷಣೈರ್ಯುತಂ ।
ಮಹಾಯಾಗಾನಲೋತ್ಪನ್ನಾ ಲಲಿತಾ ಪರಮೇಶ್ವರೀ ॥ ೩ ॥
ವ್ಯಜೇಷ್ಟ ಭಂಡನಾಮಾನಮಸುರಂ ಲೋಕಕಂಟಕಂ ।
ತದಾ ದೇವಾ ಮಹೇಂದ್ರಾದ್ಯಾಃ ಸಂತೋಷಂ ಬಹು ಭೇಜಿರೇ ॥ ೪ ॥

---

## ಕನ್ನಡದ ಅನುವಾದ

[ಶ್ರೀನಗರ ನಿರ್ಮಾಣ ವರ್ಣನ]

೧-೨. ಅಗಸ್ತ್ಯಮುನಿಯು ಕೇಳುತ್ತಾನೆ:—ಎಲೈ ಪ್ರಭುವೇ! ಈ ಶ್ರೀಪುರವೆಂಬುದಾವುದು? ಯಾವ ರೂಪದಿಂದಿರುವುದು? ಇದನ್ನು ನಿರ್ಮಿಸಿದವರಾರು? ಇದರ ಪ್ರಮಾಣವೆಷ್ಟು? ಬಣ್ಣವೆಂಥದು? ಈ ಎಲ್ಲ ಸಂಗತಿಗಳನ್ನೂ ನನಗೆ ತಿಳುಹಿಸು. ಎಲೈ ಹಯಾನನನೇ! ಸಮಸ್ತ ಸಂದೇಹಗಳೆಂಬ ಕೆಸರನ್ನು ಬತ್ತಿಸುವ ಭಾಸ್ಕರನೇ ನೀನಾಗಿರುವೆ.

೩-೪ ಶ್ರೀ ಹಯಗ್ರೀವ ಮುನಿಯು ಹೇಳುತ್ತಾನೆ:—ಮುನಿಯೇ! ಕೇಳು; ದೇವತೆಗಳೆಸಗಿದ ಮಹಾಯಾಗದ ಅಗ್ನಿಕುಂಡದಿಂದುದಿಸಿದ ಶ್ರೀ ಲಲಿತಾಪರಮೇಶ್ವರಿಯು ಹಿಂದೆಯೇ ನಿರೂಪಿಸಿದ ಲಕ್ಷಣಗಳುಳ್ಳ ಶ್ರೀಚಕ್ರಮಹಾರಥವನ್ನು ಅಧಿಷ್ಠಿಸಿ ಲೋಕಕಂಟಕನಾದ

**ಅಥ ಕಾಮಶಿವಸ್ಯಾಪಿ ಲಲಿತಾಯಾಶ್ಚ ಸುಂದರಂ ।**
**ನಿತ್ಯೋಪಭೋಗಸೇವಾರ್ಥಂ ಮಂದಿರಂ ಕರ್ತುಮುತ್ಸುಕಾಃ ॥ ೫ ॥**
**ಕುಮಾರಾ ಲಲಿತಾದೇವ್ಯಾ ಬ್ರಹ್ಮವಿಷ್ಣುಮಹೇಶ್ವರಾಃ ।**
**ವರ್ಧಕಿಂ ವಿಶ್ವಕರ್ಮಾಣಂ ಸುರಾಣಾಂ ಶಿಲ್ಪಕೋವಿದಂ ॥ ೬ ॥**
**ಅಸುರಾಣಾಂ ಶಿಲ್ಪಿನಂ ಚ ಮಯಂ ಮಾಯಾವಿಚಕ್ಷಣಂ ।**
**ಆಹೂಯ ಕೃತಸತ್ಕಾರಾ ಊಚಿರೇ ಲಲಿತಾಜ್ಞಯಾ ॥ ೭ ॥**

**ಕಾರಣಪುರುಷಾಃ –**

**ಭೋ ವಿಶ್ವಕರ್ಮನ್ ಶಿಲ್ಪಜ್ಞ ಭೋ ಭೋ ಮಯ ಮಹೋದಯ ।**
**ಭವಂತೌ ಸರ್ವಶಾಸ್ತ್ರಜ್ಞೌ ಘಟನಾಮಾರ್ಗಕೋವಿದೌ ॥ ೮ ॥**
**ಸಂಕಲ್ಪಮಾತ್ರೇಣ ಮಹಾಶಿಲ್ಪಕಲ್ಪವಿಶಾರದೌ ।**
**ಯುವಾಭ್ಯಾಂ ಲಲಿತಾದೇವ್ಯಾ ನಿತ್ಯಜ್ಞಾನಮಹೋದಧೇಃ ॥ ೯ ॥**
**ಷೋಡಶಕ್ಷೇತ್ರಮಧ್ಯೇಷು ತತ್ಕ್ಷೇತ್ರಸಮಸಂಖ್ಯಯಾ ।**
**ಕರ್ತವ್ಯಾಃ ಶ್ರೀನಗರ್ಯೋ ಹಿ ನಾನಾರತ್ನೈರಲಂಕೃತಾಃ ॥ ೧೦ ॥**

---

ಭಂಡದೈತ್ಯನನ್ನು ಸಂಹರಿಸಿದ ತರುವಾಯ ಮಹೇಂದ್ರನೇ ಮೊದಲಾದ ದೇವತೆಗಳೆಲ್ಲರೂ ಅಪರಿಮಿತವಾದ ಸಂತೋಷವನ್ನು ಹೊಂದಿದರು.

೫. ಹೀಗೆ ಪರಮಸಂತುಷ್ಟರಾದ ಆ ದೇವತೆಗಳೆಲ್ಲರೂ ಶ್ರೀಲಲಿತಾದೇವಿಗೂ, ಆಕೆಯ ವಲ್ಲಭನಾದ ಕಾಮೇಶ್ವರನಿಗೂ ನಿತ್ಯಭೋಗಗಳ ಸೇವನಾರ್ಥವಾಗಿ ಸುಂದರಮಂದಿರವೊಂದನ್ನು ನಿರ್ಮಿಸಲು ಉತ್ಸಾಹಗೊಂಡರು.

೬-೭. ಲಲಿತಾಪರಮೇಶ್ವರಿಯ ಕುಮಾರರಾದ ಬ್ರಹ್ಮವಿಷ್ಣುಮಹೇಶ್ವರರು, ದೇವಶಿಲ್ಪಿಯೂ, ಶಿಲ್ಪಶಾಸ್ತ್ರಕೋವಿದನೂ ಆದ ವಿಶ್ವಕರ್ಮನನ್ನೂ, ಮಾಯಾವಿಚಕ್ಷಣನೂ, ಅಸುರ ಶಿಲ್ಪಿಯೂ ಆದ ಮಯನನ್ನೂ ಕರೆದು ಶ್ರೀ ಲಲಿತಾದೇವಿಯ ಅನುಮತಿಯನ್ನು ಪಡೆದು ಅವರನ್ನು ಸತ್ಕರಿಸಿ ಹೀಗೆ ಹೇಳಿದರು:—

೮. "ಅಯ್ಯಾ, ಶಿಲ್ಪಜ್ಞನಾದ ವಿಶ್ವಕರ್ಮನೇ! ಎಲೈ ಮಹೋದಯನಾದ ಮಯನೇ! ನೀವೀರ್ವರೂ ಸಮಸ್ತ ಶಾಸ್ತ್ರಗಳನ್ನೂ ಬಲ್ಲವರು. ಮಂದಿರ ರಚನಾ ರೀತಿಯನ್ನು ಬಹು ಚನ್ನಾಗಿ ತಿಳಿದವರು.

೯-೧೦. ನೀವು ಕೇವಲ ಸಂಕಲ್ಪದಿಂದಲೇ ಮಹಾಶಿಲ್ಪನಿರ್ಮಾಣ ಮಾಡುವುದರಲ್ಲಿ ಕುಶಲರೂ ಆಗಿರುವಿರಿ. ಇಂತಹ ನೀವು, ನಿತ್ಯಜ್ಞಾನಕ್ಕೆ

**ಯತ್ರ ಷೋಡಶಧಾ ಭಿನ್ನಾ ಲಲಿತಾ ಪರಮೇಶ್ವರೀ ।**
**ವಿಶ್ವತ್ರಾಣಾಯ ಸತತಂ ನಿವಾಸಂ ರಚಯಿಷ್ಯತಿ ॥ ೧೧ ॥**
**ಅಸ್ಮಾಕಂ ವಾ ಪ್ರಿಯಮಿದಂ ಮರುತಾಮಪಿ ಚ ಪ್ರಿಯಂ ।**
**ಸರ್ವಲೋಕಪ್ರಿಯಮಿದಂ ತಸ್ಮಾನ್ನೈವ ವಿಲಂಬ್ಯತಾಂ ॥ ೧೨ ॥**
**ಇತಿ ಕಾರಣದೇವಾನಾಂ ವಚನಂ ತನ್ನಿಶಮ್ಯ ತೌ ।**
**ವಿಶ್ವಕರ್ಮಮಯೌ ನತ್ವಾ ವ್ಯಭಾಷೇತಾಂ ತಥಾಸ್ತ್ವಿತಿ ॥ ೧೩ ॥**
**ಪುನರ್ನತ್ವಾ ಪೃಷ್ಟವಂತಾವೇತಾನ್ ಕಾರಣಪೂರುಷಾನ್ । [ ೧೪ ॥**
**ಕೇಷು ಕ್ಷೇತ್ರೇಷು ಕರ್ತವ್ಯಾಃ ಶ್ರೀನಗರ್ಯೋ ಮಹೋದಯಾಃ ॥**
**ಬ್ರಹ್ಮಾದ್ಯಾಃ ಪರಿಪೃಷ್ಟಾಸ್ತೇ ಪ್ರೋಚುಸ್ತೌ ಶಿಲ್ಪಿನೌ ಪುನಃ ।**
**ಕ್ಷೇತ್ರಾಣಾಂ ಪ್ರವಿಭಾಗಂ ತು ಕಲ್ಪಯಂತೌ ಯಥೋಚಿತಂ ॥**

---

ಮಹೋದಧಿರೂಪಿಣಿಯಾದ ಶ್ರೀಲಲಿತಾಪರಮೇಶ್ವರಿಗಾಗಿ, ಹದಿನಾರು ಪುಣ್ಯಕ್ಷೇತ್ರಗಳಲ್ಲಿ ವಿವಿಧರತ್ನಗಳಿಂದಲಂಕೃತವಾದ ಹದಿನಾರು ಶ್ರೀ ನಗರಗಳನ್ನು ನಿರ್ಮಿಸಬೇಕು.

೧೧. ಎಲೈ ವಿಶ್ವಕರ್ಮಮಯರೇ! ಆ ಹದಿನಾರು ಶ್ರೀನಗರಗಳಲ್ಲಿಯೂ, ಶ್ರೀಲಲಿತಾಮಹಾದೇವಿಯು ಹದಿನಾರು ಬೇರೆ ಬೇರೆ ರೂಪಗಳನ್ನು ತಾಳಿ ಭಕ್ತರ ರಕ್ಷಣೆಗಾಗಿ ನೆಲಸುತ್ತಾಳೆ.

೧೨. ಈ ಕಾರ್ಯವು ನಮಗೆ ಮಾತ್ರ ಪ್ರಿಯಕರವಾದುದಲ್ಲದೆ ಸಮಸ್ತದೇವತೆಗಳಿಗೂ, ಸಕಲ ಲೋಕಗಳಿಗೂ ಪ್ರಿಯಕರವಾದುದು. ಆದುದರಿಂದ ನೀವು ಈ ಕಾರ್ಯದಲ್ಲಿ ವಿಳಂಬವನ್ನು ಮಾಡಕೂಡದು.''

೧೩. ಶ್ರೀ ಲಲಿತಾಪುತ್ರರಾದ ಬ್ರಹ್ಮವಿಷ್ಣುರುದ್ರರೆಂಬ ಆ ಕಾರಣ ಪುರುಷರಿಂತು ನುಡಿಯಲು ವಿಶ್ವಕರ್ಮ ಮಯರೀರ್ವರೂ ಸಾವಧಾನವಾಗಿ ಎಲ್ಲವನ್ನೂ ಕೇಳಿ ಅವರನ್ನು ನಮಸ್ಕರಿಸಿ, 'ಅಂತೆಯೇ ಆಗಲೆಂ'ದು ಹೇಳಿದರು.

೧೪. ಅವರೀರ್ವರೂ ಆ ಕಾರಣಪುರುಷರನ್ನು ಮತ್ತೆ ನಮಸ್ಕರಿಸಿ, "ಎಲೈ ಮಹೋದಯರೇ! ನಾವು ಯಾವ ಯಾವ ಕ್ಷೇತ್ರಗಳಲ್ಲಿ ಶ್ರೀನಗರಗಳನ್ನು ರಚಿಸಬೇಕು" ಎಂದು ಕೇಳಿದರು.

೧೫. ಆಗ ಬ್ರಹ್ಮನೇ ಮೊದಲಾದ ಆ ಮುಮ್ಮೂರ್ತಿಗಳೂ ಆ ದೇವಾಸುರ ಶಿಲ್ಪಿಗಳಿಗೆ ಉಚಿತವರಿತು ಕ್ಷೇತ್ರವಿಭಾಗವನ್ನು ಮಾಡಲು ಅನುಕೂಲಿಸುವಂತೆ ಈ ರೀತಿ ನುಡಿದರು:—

ಕಾರಣಪುರುಷಾ :—

**ಪ್ರಥಮಂ ಮೇರುಪೃಷ್ಠೇ ಚ ನಿಷಧೇ ಚ ಮಹೀಧರೇ ।**
**ಹೇಮಕೂಟೇ ಹೇಮಗಿರೌ ಪಂಚಮೇ ಗಂಧಮಾದನೇ ॥ ೧೬ ॥**
**ನೀಲಮೇಷೇ ಚ ಶೃಂಗಾಖ್ಯೇ ಮಹೇಂದ್ರೇ ಚ ಮಹಾಗಿರೌ ।**
**ಕ್ಷೇತ್ರಾಣಿ ವಾ ನವೈತಾನಿ ಭೌಮಾನಿ ವಿದಿತಾನ್ಯಥ ॥ ೧೭ ॥**
**ಔದಕಾನಿ ತು ಸಪ್ತೈವ ಪ್ರೋಕ್ತಾನ್ಯಖಿಲಸಿಂಧಿಷು ।**
**ಲವಣಾಬ್ಧೀಕ್ಷುಸಾರಾಬ್ಧಿಸುರಾಬ್ಧಿಘೃತಸಾಗರಾಃ ॥ ೧೮ ॥**
**ದಧಿಸಿಂಧುಃ ಕ್ಷೀರಸಿಂಧುರ್ಜಲಸಿಂಧುಶ್ಚ ಸಪ್ತಮಃ ।**
**ಪೂರ್ವೋಕ್ತಾ ನವ ಶೈಲೇಂದ್ರಾಃ ಪಶ್ಚಾತ್ಸಪ್ತ ಚ ಸಿಂಧವಃ ॥೧೯॥**
**ಆಹತ್ಯ ಷೋಡಶ ಕ್ಷೇತ್ರಾಣ್ಯಂಬಾ ಶ್ರೀಪುರಕ್ಲೃಪ್ತಯೇ ।**
**ಏಷು ದಿವ್ಯಾನಿ ವೇಶ್ಮಾನಿ ಲಲಿತಾಯಾ ಮಹೌಜಸಃ ॥ ೨೦ ॥**
**ಸೃಜೇತಾಂ ದಿವ್ಯಘಟನಾಪಂಡಿತೌ ಶಿಲ್ಪಿನೌ ಯುವಾಂ । [ ೨೧ ॥**
**ಏಷು ಕ್ಷೇತ್ರೇಷುಕ್ಲೃಪ್ತಾನಾಂ ಶ್ರೀದೇವೀಶ್ರೀಮಹಾಪುರಾಂ ॥**

---

೧೬-೧೭. "ಅಯ್ಯಾ, ಶಿಲ್ಪಿಗಳಿರಾ! ಕೇಳಿರಿ; ಮೇರುಪರ್ವತದ ತಪ್ಪಲು, ನಿಷಧ, ಹೇಮಕೂಟ, ಹೇಮಗಿರಿ, ಗಂಧಮಾದನ, ನೀಲಮೇಷ, ಶೃಂಗಗಿರಿ, ಮಹೇಂದ್ರ ಎಂಬೀ ಒಂಬತ್ತೂ ಈ ಭೂಮಿಯಲ್ಲಿರುವ ಮಹಾಪುಣ್ಯಕ್ಷೇತ್ರಗಳೆಂಬ ವಿಷಯವು ನಿಮಗೆ ತಿಳಿದೇ ಇರುವುದು.

೧೮-೧೯. ಇನ್ನು ಪುಣ್ಯತೀರ್ಥಗಳು; ಅಖಿಲಸಾಗರಗಳಲ್ಲಿಯೂ ಸಪ್ತಸಾಗರಗಳೇ ತೀರ್ಥಗಳೆಂದು ಹೇಳಲಾಗಿದೆ. ಲವಣ, ಇಕ್ಷು, ಸುರಾ, ಘೃತ, ದಧಿ, ಕ್ಷೀರ, ಜಲ ಎಂಬಿವೇ ಆ ಸಪ್ತಸಾಗರಗಳು. ಮೊದಲು ಹೇಳಿದ ನವಶೈಲಗಳೂ ಈಗ ಹೇಳಿದ ಸಪ್ತಸಮುದ್ರಗಳೂ ಸೇರಿ ಹದಿನಾರು ಕ್ಷೇತ್ರಗಳಾದುವಷ್ಟೆ.

೨೦. ದಿವ್ಯಗಳಾದ ಈ ಹದಿನಾರು ಪುಣ್ಯಕ್ಷೇತ್ರಗಳೂ ಶ್ರೀ ಜಗದಂಬೆಯ ಶ್ರೀನಗರಗಳನ್ನು ನಿರ್ಮಿಸಲು ಯೋಗ್ಯಗಳಾಗಿರುವವು. ಆದುದರಿಂದ ನೀವು ಈ ಕ್ಷೇತ್ರಗಳಲ್ಲಿ ಮಹೌಜಸೆಯಾದ ಶ್ರೀ ಲಲಿತಾಪರಮೇಶ್ವರಿಗಾಗಿ ದಿವ್ಯವಾದ ಶ್ರೀಮಂದಿರಗಳನ್ನು ರಚಿಸಿರಿ.

೨೧. ಈ ದಿವ್ಯಮಂದಿರ ನಿರ್ಮಾಣದಲ್ಲಿ ಕುಶಲಶಿಲ್ಪಿಗಳಾದ ನೀವೀರ್ವರೂ, ಈ ಹದಿನಾರು ಕ್ಷೇತ್ರಗಳಲ್ಲಿಯೂ ಶ್ರೀಪುರಗಳನ್ನು ಲಕ್ಷಣಬದ್ಧವಾಗಿ ನಿರ್ಮಾಣಮಾಡಬೇಕು.

ನಾಮಾನಿ ನಿತ್ಯಾನಾಮ್ನೈವ ಪ್ರಥಿತಾನಿ ನ ಸಂಶಯಃ ।
ಸಾ ಹಿ ನಿತ್ಯಾಸ್ವರೂಪೇಣ ಕಾಲವ್ಯಾಪ್ತಿಕರೀ ಪರಾ ॥ ೨೨ ॥
ಸರ್ವಂ ಕಲಯತೇ ದೇವೀ ಕಲನಾಕಲಯಾ ಜಗತ್ ।
ನಿತ್ಯಾಯಾಶ್ಚ ಮಹಾರಾಜ್ಞೀ ನಿತ್ಯಾಯಾಶ್ಚ ನ ತದ್ಭಿದಾ ॥ ೨೩ ॥
ಅತಸ್ತದೀಯನಾಮ್ನಾ ತು ಸ್ವನಾಮ್ನಾಂ ಪ್ರಥನಂ ಪುರಾಂ ।
ಕಾಮೇಶ್ವರೀಪುರೀ ಚೈವ ಭಗಮಾಲಾಪುರೀತಥಾ ।
ನಿತ್ಯಕ್ಲಿನ್ನಾಪುರೀತ್ಯಾದಿ ನಾಮಾನಿ ಪ್ರಥಿತಾನ್ಯಲಂ ॥ ೨೪ ॥
ತತೋ ನಾಮಾದಿವರ್ಣಸ್ಯ ಯೋಗ್ಯೇ ಪುಣ್ಯತರೇ ದಿನೇ ।
ಮಹಾಶಿಲ್ಪಪ್ರಕಾರೇಣ ಪುರೀ ರಚಯತಾಂ ಶುಭಾಃ ॥ ೨೫ ॥
ಇತಿ ಕಾರಣಕೃತ್ಯೈಂದ್ರೈರ್ಬ್ರಹ್ಮವಿಷ್ಣುಮಹೇಶ್ವರೈಃ । [ ೨೬ ॥
ಪ್ರೋಕ್ತೌ ತೌ ಶ್ರೀಪುರೀಸ್ತೇಷು ತೇಷು ಕ್ಷೇತ್ರೇಷು ಚಕ್ರತುಃ ॥

---

೨೨. ಆ ಮಹಾದೇವಿಯ ಹೆಸರುಗಳು ಆಕೆಯ ನಿತ್ಯಾ ಎಂಬ ಹೆಸರಿನಿಂದಲೇ ಪ್ರಖ್ಯಾತವಾಗಿವೆ. ಇದರಲ್ಲಿ ಸಂಶಯವಿಲ್ಲ. ನಿತ್ಯಾ ಸ್ವರೂಪದಿಂದ ಆ ಪರಾಂಬಿಕೆಯು ಕಾಲವನ್ನು ಎತ್ತೆತ್ತಲೂ ವ್ಯಾಪಿಸು ವಂತೆ ಮಾಡುವಳು.

೨೩. ಆ ದೇವಿಯೇ ತನ್ನ ಕಲನಾಕಲೆಯಿಂದ (ನಿರ್ಮಾಣ ಚಾತುರ್ಯದಿಂದ) ಜಗತ್ತೆಲ್ಲವನ್ನೂ ರಚಿಸುವಳು. ನಿತ್ಯಾದೇವಿಗೂ, ಮಹಾರಾಜ್ಞೀನಿತ್ಯಾದೇವಿಗೂ ಯಾವ ಭೇದವೂ ಇರುವುದಿಲ್ಲ.

೨೪. ಆದುದರಿಂದ, ಆಕೆಯ ಹೆಸರಿನಿಂದಲೇ ಈ ಶ್ರೀಪುರಗಳ ಹೆಸರುಗಳೂ ಪ್ರಕಟವಾಗಲಿ. ಕಾಮೇಶ್ವರೀ, ಭಗಮಾಲಾ, ನಿತ್ಯಕ್ಲಿನ್ನಾ ಮೊದಲಾದ ದೇವೀಪುರಗಳ ಹೆಸರುಗಳು ಬಹಳ ಪ್ರಸಿದ್ಧವಾದವುಗಳು.

೨೫. ಆಮೇಲೆ, ನೀವೀರ್ವರೂ, ಯೋಗ್ಯವೂ, ಪುಣ್ಯಕರವೂ ಆದ ದಿನದಲ್ಲಿ ಶ್ರೀದೇವಿಯ ಹೆಸರಿನ ಮೊದಲಕ್ಷರವೇ ಹೆಸರಾಗಿರುವ ಶುಭಕರ ವಾದ ಶ್ರೀಪುರಗಳನ್ನು ಮಹಾಶಿಲ್ಪಶಾಸ್ತ್ರ ಪ್ರಕಾರವಾಗಿ ರಚನೆ ಮಾಡಿರಿ.''

೨೬. ಎಲೈ ಅಗಸ್ತ್ಯಮುನಿಯೇ! ಸೃಷ್ಟಿಸ್ಥಿತಿಲಯಗಳಿಗೆ ಕಾರಣ ರಾದ ಬ್ರಹ್ಮವಿಷ್ಣುಮಹೇಶ್ವರರು ಈ ರೀತಿ ಹೇಳಲು, ವಿಶ್ವಕರ್ಮಮಯ ರೆಂಬ ಆ ದೇವಾಸುರಶಿಲ್ಪಿಗಳೀರ್ವರೂ ಅಂತೆಯೇ ಆಯಾ ಕ್ಷೇತ್ರಗಳ ಲ್ಲೆಲ್ಲ ಶ್ರೀಪುರಗಳನ್ನು ನಿರ್ಮಾಣಮಾಡಿದರು.

**ಅಥ ಶ್ರೀಪುರವಿಸ್ತಾರಂ ಪುರಾಧಿಷ್ಠಾನದೇವತಾಃ ।**
**ಕಥಯಾಮ್ಯವಧಾರ್ಯೈನ ಲೋಪಾಮುದ್ರಾಪತೇ ಶೃಣು ॥ ೨೭ ॥**
**ಯೋ ಮೇರುರಖಿಲಾಧಾರಸ್ತುಂಗಃ ಸಾಹಸ್ರಯೋಜನಃ ।**
**ಚತುರ್ದಶಜಗಚ್ಚಕ್ರಸಂಪ್ರೋತನಿಜವಿಗ್ರಹಃ ॥ ೨೮ ॥**
**ತಸ್ಯ ಶೃಂಗಾಣಿ ಚತ್ವಾರಿ ಶಕ್ರನೈಋರ್ುತವಾಯುಷು ।**
**ಮಧ್ಯಸ್ಥಲೇ ಚ ಜಾತಾನಿ ಪ್ರೋಚ್ಛ್ರಾಯಸ್ತೇಷು ಕಥ್ಯತೇ ॥೨೯॥**
**ಪೂರ್ವೋಕ್ತಶೃಂಗತ್ರಿತಯಂ ಶತಯೋಜನಮುನ್ನತಂ ।**
**ಶತಯೋಜನವಿಸ್ತಾರಂ ತೇಷು ಲೋಕಾಸ್ತ್ರಯೋ ಮತಾಃ ॥ ೩೦ ॥**
**ಬ್ರಹ್ಮಲೋಕೋ ವಿಷ್ಣುಲೋಕಃ ಶಿವಲೋಕಸ್ತಥೈವ ಚ ।**
**ಏತೇಷಾಂ ಗೃಹವಿನ್ಯಾಸಾನ್ ವಕ್ಷ್ಯಾಮ್ಯವಸರಾಂತರೇ ॥ ೩೧ ॥**
**ಮಧ್ಯಸ್ಥಿತಸ್ಯ ಶೃಂಗಸ್ಯ ವಿಸ್ತಾರಂ ಚೋಚ್ಛ್ರಯಂ ಶೃಣು ।**
**ಚತುಶ್ಶತಂ ಯೋಜನಾನಾಮುಚ್ಛ್ರಿತಂ ವಿಸ್ತೃತಂ ತಥಾ ॥ ೩೨ ॥**

---

೨೭. ಎಲೈ ಲೋಪಾಮುದ್ರಾಪತಿಯೇ ! ಆ ಶ್ರೀಪುರಗಳ ವಿಸ್ತಾರವನ್ನೂ ಅವುಗಳಲ್ಲಿ ನೆಲಸಿರುವ ದೇವತೆಗಳ ವಿಷಯವನ್ನೂ ಹೇಳುವೆನು ; ಕೇಳು.

೨೮. ಎಲ್ಲಕ್ಕೂ ಆಸರೆಯೂ, ಬಹಳ ಎತ್ತರವೂ ಆದ ಮೇರು ಪರ್ವತವು ಸಾವಿರಯೋಜನಗಳುಳ್ಳದು. ಅದರ ರೂಪವು ಹದಿನಾಲ್ಕು ಲೋಕಗಳೂ ಒಂದೆಡೆಯೇ ಚೆನ್ನಾಗಿ ಒಗ್ಗೂಡಿದಂತಿರುವುದು.

೨೯. ಆ ಪರ್ವತದ ಇಂದ್ರ, ನಿಋರ್ುತಿ, ವಾಯುದಿಶೆಗಳಲ್ಲಿಯೂ ಮಧ್ಯಪ್ರದೇಶದಲ್ಲಿಯೂ ಬಹು ಎತ್ತರವಾದ ನಾಲ್ಕು ಶಿಖರಗಳಿರುತ್ತವೆ.

೩೦. ಹಿಂದೆ ಹೇಳಿದ ಇಂದ್ರ, ನಿಋರ್ುತಿ, ವಾಯುದಿಶೆಗಳ ಶಿಖರಗಳು ಮೂರರಲ್ಲಿ ಒಂದೊಂದೂ ನೂರು ಯೋಜನಗಳ ವಿಸ್ತಾರವಾಗಿಯೂ ಅಷ್ಟೇ ಎತ್ತರವಾಗಿಯೂ ಇರುವುದು. ಅವುಗಳಲ್ಲಿ ಮೂರು ಲೋಕಗಳೂ ಇರುವುವೆಂದು ತಿಳಿಯಲಾಗಿದೆ.

೩೧. ಅವುಗಳೇ ಬ್ರಹ್ಮವಿಷ್ಣು ಶಿವಲೋಕಗಳು ; ಅವುಗಳಲ್ಲಿರುವ ಗೃಹಗಳ ರಚನಾರೀತಿಯನ್ನು ಬೇರೆ ಸಂದರ್ಭದಲ್ಲಿ ನಿನಗೆ ತಿಳಿಸುತ್ತೇನೆ.

೩೨. ಈಗ, ಆ ಪರ್ವತದ ಮಧ್ಯ ಶಿಖರದ ವಿಸ್ತಾರವನ್ನೂ ಎತ್ತರವನ್ನೂ ಹೇಳುವೆನು ; ಕೇಳು. ಅದರ ವಿಸ್ತಾರವು ನಾನೂರು ಯೋಜನಗಳು ; ಎತ್ತರವೂ ಅಷ್ಟೇ ಯೋಜನಗಳು.

**ತತ್ರೈವ ಶೃಂಗೇ ಮಹತಿ ಶಿಲ್ಪಿಭ್ಯಾಂ ಶ್ರೀಪುರಂ ಕೃತಂ ।**
**ಚತುಃಶತಂ ಯೋಜನಾನಾಂ ವಿಸ್ತೃತಂ ಕುಂಭಸಂಭವ ।**
**ತತ್ಪ್ರಾಯಂ ಪ್ರವಿಭಾಗಸ್ತೇ ಪ್ರವಿವಿಚ್ಯ ಪ್ರದರ್ಶ್ಯತೇ ॥ ೩೩ ॥**
**ಪ್ರಾಕಾರಃ ಪ್ರಥಮಃ ಪ್ರೋಕ್ತಃ ಕಾಲಾಯಸವಿನಿರ್ಮಿತಃ ।**
**ಷಟ್ ಶತಾಧಿಕಸಾಹಸ್ರಯೋಜನಾಯತವೇಷ್ಟಿತಃ ॥ ೩೪ ॥**
**ಚತುರ್ದಿಕ್ಷು ದ್ವಾರಯುತಶ್ಚತುರ್ಯೋಜನಮುಚ್ಛ್ರಿತಃ ।**
**ಸಾಲಮೂಲಪರೀಣಾಹೋ ಯೋಜನಾಯತಮುಚ್ಯತೇ ॥ ೩೫ ॥**
**ಸಾಲಾಗ್ರಸ್ಯ ತು ಗವ್ಯೂತೇರರ್ಧಂ ವಾತಾಪಿತಾಪನ ।**
**ಸಾಲದ್ವಾರಸ್ಯ ಚೌನ್ನತ್ಯಮೇಕಯೋಜನಮಾಶ್ರಿತಂ ॥ ೩೬ ॥**
**ದ್ವಾರೇ ದ್ವಾರೇ ಕವಾಟೇ ದ್ವೇ ಗವ್ಯೂತ್ಯರ್ಧಪ್ರವಿಸ್ತರೇ ।**
**ಏಕಯೋಜನಮುನ್ನತ್ಯೇ ಕಾಲಾಯಸವಿನಿರ್ಮಿತೇ ॥ ೩೭ ॥**

---

೩೩. ಎಲೈ ಕುಂಭಸಂಭವನೇ! ಇಂತಹ ಆ ಮೇರುಗಿರಿಯ ನಡುವಣ ಶಿಖರದಲ್ಲಿಯೇ ವಿಶ್ವಕರ್ಮಮಯರು ನಾಲ್ಕುನೂರು ಯೋಜನಗಳ ವಿಸ್ತಾರವುಳ್ಳ ಶ್ರೀಪುರವನ್ನು ನಿರ್ಮಿಸಿದರು. ಎಲೈ ಮುನಿಯೇ! ಆ ಶ್ರೀಪುರದ ವಿಭಾಗವನ್ನು ನಾನು ತಿಳಿದಿರುವಷ್ಟು ಮಟ್ಟಿಗೆ ಮಾತ್ರ ತಿಳಿಸುವೆನು, ಕೇಳು.

೩೪. ಶ್ರೀಪುರದ ಪ್ರಥಮ ಪ್ರಾಕಾರವು ಕಾಲಾಯಸದಿಂದ (ಕಬ್ಬಿಣದಿಂದ) ನಿರ್ಮಿತವಾದುದು. ಅದರ ಸುತ್ತಳತೆಯು ಆರುಸಾವಿರ ಯೋಜನಗಳು.

೩೫. ಅದರ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ನಾಲ್ಕು ಯೋಜನಗಳ ಎತ್ತರವಿರುವ ನಾಲ್ಕು ದ್ವಾರಗಳುಂಟು. ಅದರ ಮೂಲನಿವೇಶನದ ಅಗಲವು ಒಂದು ಯೋಜನ;

೩೬. ಮೇಲ್ಭಾಗದಗಲವು ಅರ್ಧಗವ್ಯೂತಿಮಾತ್ರ. (ಒಂದು ಗವ್ಯೂತಿಗೆ ಎರಡು ಮೈಲಿ.) ಆ ಪ್ರಾಕಾರದ್ವಾರವೊಂದೊಂದರ ಎತ್ತರವೂ ಒಂದೊಂದು ಯೋಜನವಿರುವುದು.

೩೭. ಪ್ರತಿದ್ವಾರದಲ್ಲಿಯೂ ಅರ್ಧಗವ್ಯೂತಿಯಗಲದ ಎರಡೆರಡು ಬಾಗಿಲುಗಳಿರುತ್ತವೆ. ಆ ಬಾಗಿಲಗಳೊಂದೊಂದೂ ಒಂದೊಂದು ಯೋಜನ ಎತ್ತರವುಳ್ಳುದಾಗಿ ಕಬ್ಬಿಣದಿಂದ ಮಾಡಿದವುಗಳು.

**ಉಭಯೋರರ್ಗಲದ್ವಂದ್ವಮರ್ಧಕ್ರೋಶಸಮಾಯತಂ ।**
**ಏವಂ ಚತುರ್ಷು ದ್ವಾರೇಷು ಸದೃಶಂ ಪರಿಕೀರ್ತಿತಂ ॥ ೩೮ ॥**
**ಗೋಪುರಸ್ಯ ತು ಸಂಸ್ಥಾನಂ ಕಥಯೇ ಕುಂಭಸಂಭವ ।**
**ಪೂರ್ವೋಕ್ತಸ್ಯ ತು ಸಾಲಸ್ಯ ಮೂಲೇ ಯೋಜನಸಂಮಿತೇ ॥ ೩೯ ॥**
**ಪಾರ್ಶ್ವದ್ವಯೇ ಯೋಜನೇ ದ್ವೇ ದ್ವೇ ಸಮಾದಾಯ ನಿರ್ಮಿತಂ ।**
**ವಿಸ್ತಾರಮಪಿ ತಾವಂತಂ ಸಂಪ್ರಾಪ್ತಂ ದ್ವಾರಗರ್ಭಿತಂ ॥ ೪೦ ॥**
**ಪಾರ್ಶ್ವದ್ವಯದ್ವಿಯೋಜನ್ಯಾ ಮಧ್ಯೇ ಸಾಲಸ್ಯ ಯೋಜನಂ ।**
**ಮೇಲಯಿತ್ವಾ ಪಂಚಸಂಖ್ಯಾಯೋಜನಂ ವಿಸ್ತೃತಂ ಮತಂ ॥ ೪೧ ॥**
**ದ್ವಾರಪಾರ್ಶ್ವದ್ವಯೇನೈವ ಕ್ರೋಶೇ ದ್ವಾಃ ಕ್ರೋಶಯುಗ್ಮತಃ ।**
**ಮೇಲಯಿತ್ವಾ ಪಂಚಸಂಖ್ಯಾಯೋಜನಾದೂರಮಾಯತಂ ॥ ೪೨ ॥**
**ಏವಂ ಪ್ರಕಾರತಸ್ತತ್ರ ಗೋಪುರಂ ರಚಿತಂ ಮುನೇ ।**
**ತಸ್ಮಾದ್ಗೋಪುರಮೂಲಸ್ಯ ವೇಷ್ಟೋ ವಿಂಶತಿಯೋಜನಃ ॥ ೪೩ ॥**

---

೩೮. ಆ ಎರಡೆರಡು ಬಾಗಿಲುಗಳಿಗಿರುವ ಅಗಳಿಗೂಟಗಳ ಉದ್ದವು ಅರ್ಧಕ್ರೋಶವಿರುವುದು. ಹೀಗಿರುವ ಬಾಗಿಲುಗಳು ನಾಲ್ಕು ದಿಕ್ಕುಗಳಲ್ಲಿಯೂ ಒಂದೇ ಸಮನಾಗಿರುವುವು.

೩೯-೪೧. ಎಲೈ ಕುಂಭಸಂಭವನೇ! ಇನ್ನು ಆ ಶ್ರೀಪುರದ ಗೋಪುರ ರಚನೆಯನ್ನು ತಿಳಿಸುತ್ತೇನೆ; ಕೇಳು. ಹಿಂದೆ ಹೇಳಿದ ಕೋಟೆಯ ಒಂದು ಯೋಜನದಗಲ ಮೂಲಪ್ರದೇಶದ ಎರಡೂ ಪಕ್ಕಗಳಲ್ಲಿ ಎರಡು ಯೋಜನಗಳುದ್ದವೂ, ಅಷ್ಟೇ ಉನ್ನತವೂ, ದ್ವಾರಸಮನ್ವಿತವೂ ಆಗಿ, ಎರಡೂ ಪಕ್ಕಗಳಲ್ಲಿ ಎರಡೆರಡು ಯೋಜನಗಳ ವಿಸ್ತಾರವುಳ್ಳ ಆ ಪ್ರಾಕಾರದ ಮಧ್ಯಪ್ರದೇಶವನ್ನೂ ಸೇರಿಸಿಕೊಂಡು, ಐದು ಯೋಜನಗಳ ವಿಸ್ತಾರವನ್ನೊಳಗೊಂಡಿರುವಂತೆ ಆ ಗೋಪುರವು ರಚಿತವಾಗಿದೆ.

೪೨. ಅದರ ದ್ವಾರದ ಎರಡೂ ಬಾಗಿಲುಗಳ ಅಗಲ ಮತ್ತು ಎತ್ತರವು ಎರಡೆರಡು ಕ್ರೋಶಗಳಾಗಿರುವುವು. ಈ ಪ್ರಕಾರ ಅದರ ವಿಸ್ತಾರವು ಐದು ಯೋಜನ ಅಗಲವುಳ್ಳದಾಗಿರುವುದು.

೪೩. ಎಲೈ ಮುನಿಯೇ! ಈ ಪ್ರಕಾರ, ಆ ಶ್ರೀಪುರದಲ್ಲಿ ಗೋಪುರದ ರಚನೆಯಾಗಿರುವುದು. ಅದರ ಮೂಲದ ಸುತ್ತಳತೆಯು ಇಪ್ಪತ್ತು ಯೋಜನಗಳು.

ಉಪರ್ಯುಪರಿ ವೇಷ್ಟಸ್ಯ ಹ್ರಾಸ ಏವ ಪ್ರಕೀರ್ತ್ಯತೇ ।
ಗೋಪುರಸ್ಯೋನ್ನತಿಃ ಪ್ರೋಕ್ತಾ ಪಂಚವಿಂಶತಿಯೋಜನಾ ॥ ೪೪ ॥
ಯೋಜನೇ ಯೋಜನೇ ದ್ವಾರಂ ಸಕವಾಟಂ ಮನೋಹರಂ । [೪೫॥
ಭೂಮಿಕಾಶ್ಚಾಪಿ ತಾವಂತ್ಯೋ ಯಥೋರ್ಧ್ವಹ್ರಾಸಸಂಯುತಾಃ ॥
ಗೋಪುರಾಗ್ರಸ್ಯ ವಿಸ್ತಾರೋ ಯೋಜನಾಮಾತ್ರಮಾಶ್ರಿತಃ ।
ಆಯಾಮೋಽಪಿ ಚ ತಾವಾನ್ಸ್ಯೈ ತತ್ರ ತ್ರಿಮುಕುಟಂ ಸ್ಮೃತಂ ॥ ೪೬ ॥
ಮುಕುಟಸ್ಯ ತು ವಿಸ್ತಾರಃ ಕ್ರೋಶಮಾತ್ರೋ ಘಟೋದ್ಭವ। [೪೭॥
ಕ್ರೋಶದ್ವಯಸಮುನ್ನದ್ಧೋ ಹ್ರಾಸೋ ಗೋಪುರವನ್ಮನೇ ॥
ಮುಕುಟಸ್ಯಾಂತರಕ್ಷೋಣೀ ಕ್ರೋಶಾರ್ಧೇನ ಚ ಸಂಮಿತಾ ।
ಮುಕುಟಾಃ ಪಶ್ಚಿಮಪ್ರಾಚ್ಯಾ ದಕ್ಷಿಣದ್ವಾರಗೋಪುರೇ ॥ ೪೮ ॥
ದಕ್ಷೋತ್ತರಾಸ್ತು ಮುಕುಟಾಃ ಪಶ್ಚಿಮದ್ವಾರಗೋಪುರೇ ।
ದಕ್ಷಿಣದ್ವಾರವತ್ಪ್ರೋಕ್ತಾ ಉತ್ತರದ್ವಾಃ ಕಿರೀಟಿಕಾಃ ॥ ೪೯ ॥

---

೪೪. ಗೋಪುರವು ಮೇಲೆಮೇಲಕ್ಕೆ ಹೋದಂತೆಲ್ಲ ಅದರ ಸುತ್ತಳತೆಯು ಕಡಮೆಯಾಗುತ್ತ ಬಂದಿರುವುದು. ಅದರ ಎತ್ತರವು ಇಪ್ಪತ್ತೈದು ಯೋಜನಗಳು.

೪೫. ಒಂದೊಂದು ಯೋಜನದಲ್ಲಿಯೂ ಆ ಗೋಪುರವು ಬಾಗಿಲುಗಳುಳ್ಳ ಮನೋಹರವಾದ ದ್ವಾರದೇಶಗಳಿಂದ ಕಂಗೊಳಿಸುತ್ತಿರುವುದು. ಹಾಗೆಯೇ ಅದರ ಭೂಮಿಕೆಗಳೂ (ಅಂತಸ್ತುಗಳೂ) ಮೇಲೆಮೇಲಕ್ಕೆ ಹೋದಂತೆಲ್ಲ ಸುತ್ತಳತೆಯಲ್ಲಿ ಕಡಮೆಯಾಗುತ್ತ ಬಂದಿವೆ.

೪೬. ಗೋಪುರಾಗ್ರದ ಅಗಲವೂ ಒಂದೇ ಯೋಜನವಾಗಿರುವುದು. ಅದರ ಉದ್ದವೂ ಅಷ್ಟೇ. ಅಲ್ಲಿ ಮೂರು ಮುಕುಟ (ಕಿರೀಟ) ಗಳಿರುತ್ತವೆ.

೪೭. ಎಲೈ ಘಟೋದ್ಭವನೇ! ಒಂದೊಂದು ಮುಕುಟದ ವಿಸ್ತಾರವೂ ಒಂದೊಂದು ಕ್ರೋಶಮಾತ್ರ. ಅವು, ಎರಡು ಕ್ರೋಶಗಳೆತ್ತರವಿದ್ದು ಮೇಲೆಮೇಲಕ್ಕೆ ಬೆಳದಂತೆಲ್ಲ, ಗೋಪುರದಂತೆಯೇ ಸುತ್ತಳತೆಯಲ್ಲಿ ಕಡಮೆಯಾಗುತ್ತ ಬಂದಿವೆ.

೪೮. ಆ ಮುಕುಟಗಳ ಒಳಪ್ರದೇಶವು ವಿಸ್ತಾರದಲ್ಲಿ ಅರ್ಧಕ್ರೋಶವಿರುವುದು. ದಕ್ಷಿಣದ್ವಾರಗೋಪುರದಲ್ಲಿಯ ಮುಕುಟಗಳು ಪಶ್ಚಿಮಪ್ರಾಚ್ಯಗಳಾಗಿ ನೆಲೆಗೊಳಿಸಲಾಗಿವೆ.

೪೯. ಪಶ್ಚಿಮದ್ವಾರಗೋಪುರದ ಮುಕುಟಗಳು ದಕ್ಷಿಣೋತ್ತರ

**ಪಶ್ಚಿಮದ್ವಾರವತ್ಪೂರ್ವದ್ವಾರೇ ಮುಕುಟಕಲ್ಪನಂ ।**
**ಕಾಲಾಯಸಸ್ಯ ಸಾಲಸ್ಯಾಂತರೇ ಮಾರುತಯೋಜನೇ ॥ ೫೦ ॥**
**ಅಂತರೇ ಕಾಂಸ್ಯಸಾಲಃ ಸ್ಯಾತ್ಪೂರ್ವವದ್ಗೋಪುರಾನ್ವಿತಃ ।**
**ಸಾಲಮೂಲಪ್ರಮಾಣಂ ಚ ಪೂರ್ವವತ್ಪರಿಕೀರ್ತಿತಂ ॥ ೫೧ ॥**
**ಕಾಂಸ್ಯಸಾಲೋಽಪಿ ಪೂರ್ವಾದಿದಿಕ್ಷು ದ್ವಾರಸಮನ್ವಿತಃ ।**
**ದ್ವಾರೇ ದ್ವಾರೇ ಗೋಪುರಾಣಿ ಪೂರ್ವಲಕ್ಷಣಭಾಂಜಿ ಚ ॥ ೫೨ ॥**
**ಕಾಲಾಯಸಸ್ಯ ಸಾಲಸ್ಯ ಯೋಽನ್ತರ್ದೇಶಃ ಸಮಂತತಃ ।**
**ನಾನಾವೃಕ್ಷಮಹೋದ್ಯಾನಂ ತತ್ಪ್ರೋಕ್ತಂ ಕುಂಭಸಂಭವ ॥**
**ಉದ್ಭಿಜ್ಜಾಲಂ ಯಾವದಸ್ತಿ ತತ್ಸರ್ವಂ ತತ್ರ ವರ್ತತೇ ॥ ೫೩ ॥**
**ಪರಸ್ಸಹಸ್ರಾಸ್ತರವಃ ಸದಾಪುಷ್ಪಾಸ್ಸದಾಫಲಾಃ ।**
**ಸದಾಪ್ರಸವಶೋಭಾಢ್ಯಾಃ ಸದಾ ಸೌರಭ್ಯಸಂಕುಲಾಃ ॥ ೫೪ ॥**

---

ಗಳಾಗಿರುವವು. ದಕ್ಷಿಣದ್ವಾರಗೋಪುರಕಿರೀಟಗಳಂತೆಯೇ ಉತ್ತರ ದ್ವಾರಕಿರೀಟಗಳೂ ಇರುತ್ತವೆ.

೫೦. ಈ ಕಿರೀಟರಚನೆಯು ಪಶ್ಚಿಮದ್ವಾರದಲ್ಲಿಂತಿರುವುದೋ, ಪೂರ್ವದಲ್ಲಿಯೂ ಅಂತೆಯೇ ಇರುವುದು. ಕಾಲಾಯಸಮಯವಾದ ಆ ಪ್ರಾಕಾರದೊಳಗಣ ಪ್ರದೇಶದ ವಿಸ್ತಾರವು ಏಳು ಯೋಜನಗಳು.

೫೧. ಈ ಪ್ರಕಾರದೊಳಗೆ ಹಿಂದಿನಂತೆಯೇ ಗೋಪುರಗಳುಳ್ಳ ಕಾಂಸ್ಯ (ಕಂಚಿನ) ಪ್ರಾಕಾರವಿರುವುದು. ಅದರ ಮೂಲದ ಪ್ರಮಾಣವು ಹಿಂದೆ ಹೇಳಿದಷ್ಟೇ ಇರುವುದು.

೫೨. ಈ ಕಾಂಸ್ಯಪ್ರಾಕಾರಕ್ಕೂ ಪೂರ್ವಾದಿ ದಿಕ್ಕುಗಳಲ್ಲಿ ದ್ವಾರಗಳು ಇರುತ್ತವೆ. ಪ್ರತಿಯೊಂದು ದ್ವಾರದಲ್ಲಿಯೂ ಹಿಂದೆ ಹೇಳಿದ ಲಕ್ಷಣ ಗಳುಳ್ಳ ಗೋಪುರಗಳುಂಟು.

೫೩. ಎಲೈ ಕುಂಭಸಂಭವನೇ! ಕಾಲಾಯಸಪ್ರಾಕಾರದ ಸುತ್ತಲೂ ನಾನಾವೃಕ್ಷೋದ್ಯಾನ (ವಿವಿಧ ವೃಕ್ಷಗಳಿಂದ ತುಂಬಿದ ತೋಟ) ವಿರುವುದು. ಜಗತ್ತಿನಲ್ಲಿ ಎಷ್ಟು ಬಗೆಯ ಗಿಡಮರಬಳ್ಳಿಗಳೇ ಮೊದಲಾದ ಉದ್ಭಿಜ್ಜಗಳಿರುವುವೋ ಅವೆಲ್ಲವೂ ಅಲ್ಲಿಯೇ ಇರುತ್ತವೆ.

೫೪. ಯಾವಾಗಲೂ ಹೂಬಿಡುವವೂ, ಹಣ್ಣುಗಳುಳ್ಳವೂ, ಚಿಗುರಿರುವವೂ, ಸುವಾಸನೆಯುಳ್ಳವೂ ಆದ ಸಹಸ್ರಾರು ತರುಗಳು ಅಲ್ಲಿ ತುಂಬಿರುವವು.

ಚೂತಾಃ ಕಂಕೇಲಯೋ ಲೋಧ್ರಾ ಬಕುಲಾಃ ಕರ್ಣಿಕಾರಕಾಃ ।
ಶಿಂಶುಪಾಶ್ಚ ಶಿರೀಷಾಶ್ಚ ದೇವದಾರುನಮೇರವಃ ॥ ೫೫ ॥
ಪುನ್ನಾಗಾ ಭದ್ರನಾಗಾಶ್ಚ ಮುಚಿಲಿಂದಾಶ್ಚ ಕರ್ಪರಾಃ ।
ಏಲಾಲವಂಗಾಸ್ತಕ್ಕೋಲಾಸ್ತಥಾ ಕರ್ಪೂರಶಾಖಿನಃ ॥ ೫೬ ॥
ಪೀಲವಃ ಕಾಕತುಂಡಾಶ್ಚ ನಲಕಾಶ್ಚಾಸನಾಸ್ತಥಾ ।
ಕಾಂಚನಾರಾಶ್ಚ ಲಿಕುಚಾಃ ಪನಸಾ ಹಿಂಜುಲಾಸ್ತಥಾ ॥ ೫೭ ॥
ಪಾಟಲಾಶ್ಚ ಫಲಿನ್ಯಶ್ಚ ಜಘನ್ಯಾ ಜಘನೇಫಲಾಃ ।
ಗಣಿಕಾಶ್ಚ ಕುರುಂಡಾಶ್ಚ ಬಂಧುಜೀವಾಶ್ಚ ದಾಡಿಮಾಃ ॥ ೫೮ ॥
ಅಶ್ವಕರ್ಣಾ ಹಸ್ತಿಕರ್ಣಾಶ್ಚಾಂಪೇಯಾಃ ಕನಕದ್ರುಮಾಃ ।
ಯೂಥಿಕಾಸ್ತಾಲಪರ್ಣ್ಯಶ್ಚ ಲಾಂಗಲ್ಯಶ್ಚ ಸದಾಫಲಾಃ ॥ ೫೯ ॥
ತಾಲಾಸ್ತಮಾಲಾ ಹಿಂತಾಲಾಃ ಖರ್ಜೂರಾಃ ಶರಬರ್ಬರಾಃ ।
ಇಕ್ಷವಃ ಕ್ಷೀರಿಣಶ್ಚೈವ ಶ್ಲೇಷ್ಮಾತಕವಿಭೀತಕಾಃ ॥ ೬೦ ॥
ಹರೀತಕ್ಯಸ್ತ್ವವಾಕ್ಪುಷ್ಪ್ಯೋ ಘೋಂಟಾಲ್ಯಃ ಸ್ವರ್ಣಪುಷ್ಪಿಕಾಃ ।
ಭಲ್ಲಾತಕಾಶ್ಚ ಖದಿರಾಃ ಶಾಕೋಟಾಶ್ಚಂದನದ್ರುಮಾಃ ॥ ೬೧ ॥
ಕಾಲಾಗರುದ್ರುಮಾಃ ಕಾಲಸ್ಕಂಧಾಶ್ಚಿಂಚಾ ಧವಾಸ್ತಥಾ ।
ಉದುಂಬರಾಸ್ತಥಾಶ್ವತ್ಥಾಃ ಶಮೀವೃಕ್ಷಾ ಧ್ರುವದ್ರುಮಾಃ ॥ ೬೨ ॥
ರುಚಕಾಃ ಕುಟಜಾಶ್ಚೈವೇತ್ಯೇವಮಾದ್ಯಾಃ ಸಹಸ್ರಶಃ ।
ನಾನಾಋತುಸಮಾವಿಷ್ಟಾ ದೇವ್ಯಾಃ ಶೃಂಗಾರಹೇತವಃ
ನಾನಾವೃಕ್ಷಮಹೋದ್ಯಾನೇ ವರ್ತಂತೇ ವರಶಾಖಿನಃ । ॥ ೬೩ ॥

---

೫೫-೬೩. ಚೂತ, ಕಂಕೇಲ, ಲೋಧ್ರ, ಬಕುಲ, ಕರ್ಣಿಕಾರ, ಶಿಂಶುಪ, ಶಿರೀಷ, ದೇವದಾರು, ನಮೇರು, ಪುನ್ನಾಗ, ಭದ್ರನಾಗ, ಮುಚುಲಿಂದ, ಕರ್ಪರ, ಏಲಾ, ಲವಂಗ, ತಕ್ಕೋಲ, ಕರ್ಪೂರ, ಪೀಲು, ಕಾಕತುಂಡ, ನಲಕ, ಅಸನ, ಕಾಂಚನಾರ, ಲಿಕುಚ, ಪನಸ, ಹಿಂಜುಲ, ಪಾಟಲ, ಫಲಿನೀ, ಜಘನ, ಜಘನೇಫಲಾ, ಗಣಿಕಾ, ಕುರುಂಟಕ, ಬಂಧುಜೀವ, ದಾಡಿಮ, ಅಶ್ವಕರ್ಣ, ಹಸ್ತಿಕರ್ಣ, ಚಾಂಪೇಯ, ಕನಕ, ಯೂಥಿಕಾ, ತಾಲಪರ್ಣೀ, ಲಾಂಗಲೀ, ಸದಾಫಲ, ತಾಲ, ತಮಾಲ, ಹಿಂತಾಲ, ಖರ್ಜೂರ, ಶರಬರ್ಬರ, ಇಕ್ಷು, ಕ್ಷೀರಿಣೀ, ಶ್ಲೇಷ್ಮಾತಕೀ, ವಿಭೀತಕ, ಹರೀತಕೀ, ಅವಾಕ್ಪುಷ್ಪೀ, ಘೋಂಟಾಲೀ, ಸ್ವರ್ಣಪುಷ್ಪೀ, ಭಲ್ಲಾತಕ, ಖದಿರ, ಶಾಕೋಟ, ಚಂದನ, ಕಾಲಾಗರು, ಕಾಲಸ್ಕಂಧ,

ಕಾಂಸ್ಯಸಾಲಸ್ಯಾಂತರಾಲೇ ಸಪ್ತಯೋಜನದೂರತಃ ।
ಚತುರಶ್ರಸ್ತಾಮ್ರಸಾಲಃ ಸಿಂಧುಯೋಜನಮುನ್ನತಃ ।
ಅನಯೋರಂತರಕ್ಷೋಣೀ ಪ್ರೋಕ್ತಾ ಕಲ್ಪಕವಾಟಿಕಾ ॥ ೬೪-೬೫ ॥
ಕರ್ಪೂರರಮುಜ್ಜಿಭಿಶ್ಚಾರು ರತ್ನಬೀಜಸಮನ್ವಿತೈಃ ।
ಕಾಂಚನತ್ವಕ್ಸುರುಚಿರೈಃ ಫಲೈಸ್ತೈಃ ಫಲಿತದ್ರುಮಾಃ ॥ ೬೬ ॥
ಚೀನಾಂಬರಾಣಿ ದಿವ್ಯಾನಿ ಪ್ರವಾಲಾನ್ಯಪಿ ಶಾಖಿಷು ।
ಅಮೃತಂ ಸ್ಯಾನ್ಮಧುರಸಃ ಪುಷ್ಪಾಣಿ ಚ ವಿಭೂಷಣಂ ।
ಈದೃಶಾ ಬಹವಸ್ತತ್ರ ಕಲ್ಪವೃಕ್ಷಾಃ ಪ್ರಕೀರ್ತಿತಾಃ ॥ ೬೭ ॥
ಏಷಾ ಕಕ್ಷ್ಯಾ ದ್ವಿತೀಯಾ ಸ್ಯಾತ್ಕಲ್ಪವಾಟೀತಿ ನಾಮತಃ ।
ತಾಮ್ರಸಾಲಸ್ಯಾಂತರಾಲೇ ಸೀಸಸಾಲಃ ಪ್ರಕೀರ್ತಿತಃ ॥ ೬೮ ॥

---

ಚಿಂಚಾಧ್ರುವ, ರುಚಕ, ಕುಟಜ—ಇವೇ ಮೊದಲಾದ ಅನೇಕ ವೃಕ್ಷಗಳು ಎಲ್ಲ ಋತುಗಳಲ್ಲಿಯೂ ಫಲಪುಷ್ಪಶೋಭಿತಗಳಾಗಿ ಶ್ರೀದೇವಿಯ ಶೃಂಗಾರಕ್ಕನುವಾಗಿ ಕಾಂಸ್ಯಪ್ರಾಕಾರದೊಳಗಣ ಏಳು ಯೋಜನಗಳ ಪ್ರದೇಶದಲ್ಲಿ ಎತ್ತೆತ್ತಲೂ ರಾರಾಜಿಸುತ್ತಿರುವುವು.

೬೫. ಅಯ್ಯಾ ಋಷೀಶ್ವರನೇ! ಆ ಕಾಂಸ್ಯಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಏಳು ಯೋಜನಗಳ ಎತ್ತರವನ್ನೊಳಗೊಂಡಿರುವ ತಾಮ್ರಪ್ರಾಕಾರವು ಕಂಗೊಳಿಸುತ್ತಿರುವುದು. ಈ ಕಾಂಸ್ಯತಾಮ್ರ ಪ್ರಾಕಾರಗಳ ನಡುವಣ ಪ್ರದೇಶವು ಕಲ್ಪಕವಾಟಿಕೆಯೆಂದು ಹೇಳಲಾಗಿದೆ.

೬೬. ಅಲ್ಲಿ ಕರ್ಪೂರಪಂಕವನ್ನೊಸರುತ್ತಿರುವವೂ, ರತ್ನ ಬೀಜಗಳಿಂದೊಪ್ಪುತ್ತಿರುವವೂ, ಕಾಂಚನಮಯವಾದ ತೊಗಟೆಯೊಡಗೂಡಿರುವವೂ ಆಗಿ ಫಲಭರಿತಗಳಾಗಿರುವ ವೃಕ್ಷಗಳು ವಿರಾಜಿಸುತ್ತಿರುವವು.

೬೭. ಆ ವೃಕ್ಷಗಳ ಚಿಗುರುಗಳೆಲ್ಲವೂ ದಿವ್ಯವಾದ ಚೀನಾಂಬರಗಳಾಗಿರುವವು. ಅವುಗಳಲ್ಲಿರುವ ಮಧುಗಳೆಲ್ಲವೂ ಅಮೃತವೇ. ಅವುಗಳ ಪುಷ್ಪಗಳೆಲ್ಲವೂ ದಿವ್ಯಾಭರಣಗಳು. ಇಂತಹ ಅನೇಕ ವೃಕ್ಷಗಳು ಆ ಪ್ರದೇಶದಲ್ಲಿರುವವು. ಇವೆಲ್ಲವೂ ಕಲ್ಪವೃಕ್ಷಗಳೆಂದು ಹೇಳಲಾಗಿದೆ.

೬೮. ಇದು ಆ ಶ್ರೀಪುರದ ದ್ವಿತೀಯ ಕಕ್ಷ್ಯೆಯೆಂದೂ, ಕಲ್ಪವಾಟಿಕೆಯೆಂದೂ ಹೆಸರಾಗಿದೆ. ಈ ತಾಮ್ರಸಾಲದೊಳಗಿರುವ ಪ್ರಾಕಾರವೇ ಸೀಸಪ್ರಾಕಾರವೆಂದು ಹೆಸರಾಗಿರುವುದು.

ಅನಯೋರುಭಯೋರ್ಮಧ್ಯೇ ದೇಶಃ ಸ್ಯಾತ್ಸಪ್ತಯೋಜನಃ ।
ತತ್ರ ಸಂತಾನವಾಟೀ ಸ್ಯಾತ್ಕಲ್ಪವಾಟೀಸಮಾಕೃತಿಃ ॥ ೬೯ ॥
ಸೀಸಸಾಲಸ್ಯಾಂತರಾಲೇ ಸಪ್ತಯೋಜನದೂರತಃ ।
ಆರಕೂಟಮಯಃ ಸಾಲಃ ಪೂರ್ವಸಾಲಸಮಾಕೃತಿಃ ॥ ೭೦ ॥
ತಯೋರ್ಮಧ್ಯಮಹೀ ಪ್ರೋಕ್ತಾ ಹರಿಚಂದನವಾಟಿಕಾ ।
ಕಲ್ಪವಾಟೀಸಮಾಕಾರಾ ಫಲಪುಷ್ಪಸಮಾಕುಲಾ ॥ ೭೧ ॥
ಏಷು ಸರ್ವೇಷು ಸಾಲೇಷು ಪೂರ್ವವದ್ದ್ವಾರಕಲ್ಪನಂ ।
ಪೂರ್ವವದ್ಗೋಪುರಾಣಾಂ ಚ ಮುಕುಟಾನಾಂ ಚ ಕಲ್ಪನಂ ॥ ೭೨ ॥
ಗೋಪುರದ್ವಾರಕ್ಲೃಪ್ತಿಶ್ಚ ದ್ವಾರೇ ದ್ವಾರೇ ಸಮಾ ಮತಾ ।
ಆರಕೂಟಸ್ಯಾಂತರಾಲೇ ಸಪ್ತಯೋಜನದೂರತಃ ।
ಪಂಚಲೋಹಮಯಃ ಸಾಲಃ ಪೂರ್ವಸಾಲಸಮಾಕೃತಿಃ ॥ ೭೩ ॥
ತಯೋರ್ಮಧ್ಯಮಹೀ ಪ್ರೋಕ್ತಾ ಮಂದಾರದ್ರುಮವಾಟಿಕಾ ।
ಪಂಚಲೋಹಸ್ಯಾಂತರಾಲೇ ಸಪ್ತಯೋಜನದೂರತಃ । [ ೭೪ ॥
ರೌಪ್ಯಸಾಲಸ್ತು ಸಂಪ್ರೋಕ್ತಃ ಪೂರ್ವೋಕ್ತೈರ್ಲಕ್ಷಣೈರ್ವೃತಃ ॥

---

೬೯. ತಾಮ್ರಸೀಸಪ್ರಾಕಾರಗಳ ಅಂತರಭಾಗವು ಸಪ್ತಯೋಜನಗಳ ವಿಸ್ತಾರವುಳ್ಳದಾಗಿದೆ. ಅಲ್ಲಿಯೂ ಕಲ್ಪವಾಟಿಕೆಗೆ ಸಮಾನವಾಗಿರುವ ಸಂತಾನವಾಟಿಕೆಯಿರುವುದು.

೭೦. ಸೀಸಪ್ರಾಕಾರಕ್ಕೆ ಏಳು ಯೋಜನ ದೂರದಲ್ಲಿ ಅದಕ್ಕೆ ಸಮಾನವಾದ ಆಕಾರವುಳ್ಳದೇ ಆದ ಆರಕೂಟಮಯ (ಕಂಚಿನ) ಪ್ರಾಕಾರವು ಶೋಭಿಸುತ್ತಿರುವುದು.

೭೧. ಈ ಸೀಸಾರಕೂಟ ಪ್ರಾಕಾರಗಳ ನಡುವಣ ನೆಲವು ಹರಿಚಂದನ ವಾಟಿಕೆಯೆಂದು ಹೆಸರಾಗಿರುವುದು. ಇದೂ ಕಲ್ಪವಾಟಿಕೆಯಂತೆಯೇ ಫಲಪುಷ್ಪಭರಿತವಾದ ವೃಕ್ಷಗಳಿಂದಲಂಕೃತವಾಗಿರುವುದು.

೭೨. ಈ ಎಲ್ಲ ಪ್ರಾಕಾರಗಳಲ್ಲಿಯೂ ಹಿಂದೆ ವಿವರಿಸಿದಂತೆಯೇ ದ್ವಾರದೇಶಗಳೂ, ಗೋಪುರಗಳೂ, ಮುಕುಟಗಳೂ ರಚಿತವಾಗಿವೆ.

೭೩. ಪ್ರತಿ ದ್ವಾರದಲ್ಲಿಯೂ ಗೋಪುರದ್ವಾರ ರಚನೆಯು ಹಿಂದಿನಂತೆ ಒಂದೇ ಸಮನಾಗಿರುವುದು. ಆರಕೂಟ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಅದರಂತೆಯೇ ಇರುವ ಪಂಚಲೋಹಪ್ರಾಕಾರವಿರುವುದು.

೭೪. ಆರಕೂಟ ಪಂಚಲೋಹಮಯ ಪ್ರಾಕಾರಗಳ ನಡುವಣ

**ತಯೋರ್ಮಧ್ಯಮಹೀ ಪ್ರೋಕ್ತಾ ಪಾರಿಜಾತದ್ರುವಾಟಿಕಾ ।**
**ದಿವ್ಯಾಮೋದಸುಸಂಪೂರ್ಣಾ ಫಲಪುಷ್ಪಭರೋಜ್ಜ್ವಲಾ ॥ ೭೫ ॥**
**ರೂಪ್ಯಸಾಲಸ್ಯಾಂತರಾಲೇ ಸಪ್ತಯೋಜನದೂರತಃ ।**
**ಹೇಮಸಾಲಃ ಪ್ರಕಥಿತಃ ಪೂರ್ವವದ್ದ್ವಾರಶೋಭಿತಃ ॥ ೭೬ ॥**
**ತಯೋರ್ಮಧ್ಯಮಹೀ ಪ್ರೋಕ್ತಾ ಕದಂಬತರುವಾಟಿಕಾ ।**
**ತತ್ರ ದಿವ್ಯಾ ನೀಪವೃಕ್ಷಾ ಯೋಜನದ್ವಯಮುನ್ನತಾಃ ॥ ೭೭ ॥**
**ಸದೈವ ಮದಿರಾಸ್ಯಂದಮೇದುರಪ್ರಸವೋಜ್ಜ್ವಲಾಃ ।**
**ಏಭ್ಯಃ ಕಾದಂಬರೀ ನಾಮ ಯೋಗಿನೀ ಭೋಗದಾಯಿನೀ ॥**
**ವಿಶಿಷ್ಟಾ ಮದಿರೋತ್ಪನ್ನಾ ಮಂತ್ರಿಣ್ಯಾಃ ಸತತಂ ಪ್ರಿಯಾ ॥ ೭೮ ॥**
**ತೇ ನೀಪವೃಕ್ಷಾಃ ಸುಚ್ಛಾಯಾ ಬಕುಲಾಃ ಪಲ್ಲವಾಕುಲಾಃ ।**
**ಆಮೋದಲೋಲಭೃಂಗಾಲಿರ್ಝಂಕಾರೈಃ ಪೂರಿತೋದರಾಃ ॥ ೭೯ ॥**

---

ಭೂಮಿಯು ಮಂದಾರದ್ರುಮವಾಟಿಕೆಯೆಂದು ಹೇಳಿದೆ. ಈ ಪಂಚಲೋಹಮಯ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಹಿಂದೆ ಹೇಳಿದ ಪ್ರಾಕಾರಗಳ ಲಕ್ಷಣಗಳನ್ನೇ ಒಳಗೊಂಡಿರುವ ರಜತ ಪ್ರಾಕಾರ ಇರುವುದು.

೭೫. ಪಂಚಲೋಹ ರಜತ ಪ್ರಾಕಾರಗಳ ಮಧ್ಯ ಪ್ರದೇಶವು ಪಾರಿಜಾತದ್ರುಮವಾಟಿಕೆಯು. ಇದು ದಿವ್ಯ ಗಂಧ ಭರಿತವಾಗಿ ಫಲ ಪುಷ್ಪ ಭಾರದಿಂದ ಬಗ್ಗಿರುವ ಗಿಡ ಮರಗಳಿಂದ ಬೆಳಗುತ್ತಿರುವುದು.

೭೬. ರಜತಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಹೇಮ ಪ್ರಾಕಾರವಿರುತ್ತದೆ. ಹಿಂದೆ ಹೇಳಿದ ಪ್ರಾಕಾರಗಳಂತೆಯೇ ಇದೂ ದ್ವಾರಗೋಪುರಾದಿಗಳಿಂದ ಕಂಗೊಳಿಸುತ್ತಿರುವುದು.

೭೭. ಈ ರಜತ ಮತ್ತು ಹೇಮಮಯ ಪ್ರಾಕಾರಗಳ ಮಧ್ಯ ದೇಶವು ಕದಂಬತರುವಾಟಿಯು. ಇಲ್ಲಿ ಎರಡೆರಡು ಯೋಜನಗಳ ಎತ್ತರವಿರುವ ದಿವ್ಯವಾದ ನೀಪವೃಕ್ಷಗಳಿರುವವು.

೭೮. ಇವು ಯಾವಾಗಲೂ ಮದಿರೆಯನ್ನು ಸುರಿಸುತ್ತಿರುವ ಕುಸುಮಗಳಿಂದ ಉಜ್ಜ್ವಲವಾಗಿ ವಿರಾಜಿಸುತ್ತಿರುವುವು. ಇವುಗಳಿಗೆ ಭೋಗದಾಯಿನಿಯೂ, ಮದಿರೋತ್ಪನ್ನೆಯೂ, ಮಂತ್ರಿಣೀದೇವಿಯಾದ ಶ್ರೀ ಶ್ಯಾಮಲಾಂಬಿಕೆಗೆ ಅತ್ಯಂತ ಪ್ರಿಯೆಯೂ ಆದ ಕಾದಂಬರಿಯೆಂಬ ಯೋಗಿನಿಯು ಪಾಲಿನಿಯು.

೭೯. ಆ ನೀಪಬಕುಲವೃಕ್ಷಗಳಾದರೋ ಒಳ್ಳೆಯ ನೆರಳುಳ್ಳುವಾಗಿ

**ತತ್ರೈವ ಮಂತ್ರಿನಾಥಾಯಾ ಮಂದಿರಂ ಸುಮನೋಹರಂ ।**
**ಕದಂಬವನವಾಟ್ಯಾಸ್ತು ವಿದಿಕ್ಷು ಜ್ವಲನಾದಿತಃ ॥ ೮೦ ॥**
**ಚತ್ವಾರಿ ಮಂದಿರಾಣ್ಯುಚ್ಚೈಃ ಕಲ್ಪಿತಾನ್ಯಾದಿಶಿಲ್ಪಿನಾ ।**
**ಏಕೈಕಸ್ಯ ತು ಗೇಹಸ್ಯ ವಿಸ್ತಾರಃ ಪಂಚಯೋಜನಂ ॥ ೮೧ ॥**
**ಪಂಚಯೋಜನವಿಸ್ತಾರಃ ಸಪ್ತಾವರಣತಾಸ್ಥಿತಿಃ ।**
**ಏವಮನ್ಯದ್ವಿದಿಕ್ಷು ಸ್ಯಾತ್ಸರ್ವತ್ರ ಪ್ರಿಯಕದ್ರುಮಾಃ ॥ ೮೨ ॥**
**ನಿವಾಸನಗರೀ ಸೇಯಂ ಶ್ಯಾಮಾಯಾಃ ಪರಿಕೀರ್ತಿತಾ ।**
**ಸೇವಾರ್ಥನಗರೀ ತ್ವನ್ಯಾ ಮಹಾಪದ್ಮಾಟವೀಸ್ಥಲೇ ॥ ೮೩ ॥**
**ಯದ್ಯತ್ರೈವ ಗೃಹಂ ತಸ್ಯಾ ಬಹುಯೋಜನದೂರತಃ ।**
**ಶ್ರೀದೇವ್ಯಾ ನಿತ್ಯಸೇವಾತು ಮಂತ್ರಿಣ್ಯಾ ನ ಘಟಿಷ್ಯತೇ ।**
**ಅತಶ್ಚಿಂತಾಮಣಿಗೃಹೋಪಾಂತೇ ತು ಭವನಂ ಕೃತಂ ॥ ೮೪ ॥**

---

ಚಿಗುರಿನಿಂದೊಗೆದು, ಆಮೊದಲೋಲಗಳಾದ ಭೃಂಗಸಮೂಹಗಳ ಝುಂಕಾರಗಳಿಂದ ತುಂಬಿರುವುವು.

೮೦. ಎಲೈ ಮುನಿಯೇ! ಈ ಕದಂಬವನವಾಟಿಯಲ್ಲಿಯೇ ಮಂತ್ರಿಣೀದೇವಿಯಾದ ಶ್ರೀ ಶ್ಯಾಮಲಾಂಬಿಕೆಯ ದಿವ್ಯ ಮಂದಿರವು ಆಗ್ನೇಯದಿಕ್ಕಿನಲ್ಲಿ ಮೊದಲಾಗಿ ವಿರಾಜಿಸುತ್ತಿರುವುದು.

೮೧-೮೨. ಆ ದೇವಾಸುರ ಶಿಲ್ಪಿಗಳು ಈ ಕದಂಬವನವಾಟಿಯಲ್ಲಿ, ಆಗ್ನೇಯ, ನಿರ್ಋತಿ, ವಾಯುವ್ಯ, ಈಶಾನ್ಯ ದಿಕ್ಕುಗಳಲ್ಲಿ ನಾಲ್ಕರಲ್ಲಿಯೂ ಮಂದಿರಗಳನ್ನು ನಿರ್ಮಿಸಿದರು. ಈ ಮಂದಿರಗಳಲ್ಲಿ ಒಂದೊಂದು ಮಂದಿರದ ಅಗಲವೂ ಐದೈದು ಯೋಜನಗಳಾಗಿರುವುದು. ಉದ್ದವೂ ಅಷ್ಟೇ ಯೋಜನಗಳಾಗಿರುವುದು. ಸಪ್ತಾವರಣಗಳಿಂದ ವಿರಾಜಿಸುತ್ತಿರುವ ಆ ನಾಲ್ಕು ದಿವ್ಯಮಂದಿರಗಳ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ನಾಲ್ಕು ನೀಪವೃಕ್ಷಗಳಿರುವುವು.

೮೩. ಇದೇ ಶ್ರೀ ಶ್ಯಾಮಲಾಂಬಿಕೆಯ ಸೇವಾನಗರವೆಂದು ಪರಿಕೀರ್ತಿತ ವಾಗಿರುವುದು. ಮಹಾಪದ್ಮಾಟವಿಯಲ್ಲಿಯೂ ಶ್ರೀ ಶ್ಯಾಮಲಾಂಬಿಕೆಗೆ ಇನ್ನೊಂದು ಸೇವಾರ್ಥಭವನವೂ ನಿರ್ಮಿತವಾಗಿರುವುದು.

೮೪. ಶ್ರೀ ದೇವಿಯ ಮಂದಿರವು ಬಹು ದೂರವಿರುವುದರಿಂದ ಆ ದೇವಿಯ ನಿತ್ಯ ಸೇವೆಯು ಮಂತ್ರಿಣಿಯಾದ ಶ್ರೀ ಶ್ಯಾಮಲಾಂಬಿಕೆಗೆ ದೊರಕುವುದಿಲ್ಲವಾದುದರಿಂದ ಆಕೆಯಿರುವ ಪದ್ಮಾಟವಿಯಲ್ಲಿಯೇ

**ತಸ್ಯಾಃ ಶ್ರೀಮಂತ್ರಿನಾಥಾಯಾಃ ಸುರತ್ವಷ್ಟ್ರಾ ಮಯೇನ ಚ ।**
**ಶ್ರೀಪುರೇ ಮುದ್ರಿಣೀದೇವ್ಯಾ ಮಂದಿರಸ್ಯ ಗುಣಾನ್ ಬಹೂನ್ ।**
**ವರ್ಣಯಿಷ್ಯತಿ ಕೋ ನಾಮ ಯದಿ ಜಿಹ್ವಾಸಹಸ್ರವಾನ್ ॥ ೮೫ ॥**
**ಕಾದಂಬರೀಸುಧಾತಾಮ್ರನಯನಾಃ ಕಲವೀಣಯಾ ।**
**ಗಾಯಂತ್ಯಸ್ತತ್ರ ಖೇಲಂತಿ ಮಾನ್ಯಾ ಮಾತಂಗಕನ್ಯಕಾಃ ॥ ೮೬ ॥**

**ಅಗಸ್ತ್ಯಃ—**

**ಮತಂಗೋ ನಾಮ ಕಃ ಪ್ರೋಕ್ತಸ್ತಸ್ಯ ಕನ್ಯಾಃ ಕಥಂ ಚ ತಾಃ ।**
**ಸೇವಂತೇ ಮಂತ್ರಿನಾಥಾಂ ತಾಂ ಸದಾ ಮಧುಮದಾಲಸಾಃ ॥ ೮೭ ॥**

**ಶ್ರೀ ಹಯಗ್ರೀವಃ—**

**ಮತಂಗೋ ನಾಮ ತಪಸಾಮೇಕರಾಶಿಸ್ತಪೋಧನಃ ।**
**ಮಹಾಪ್ರಭಾವಸಂಪನ್ನೋ ಜಗತ್ಸರ್ಜನಲಂಪಟಃ ॥**
**ತಪಶ್ಶಕ್ತ್ಯಾ ತೀವ್ರಯಾ ಚ ಸರ್ವತ್ರಾಜ್ಞಾಪ್ರವರ್ತಕಃ ॥ ೮೮ ॥**

---

ಚಿಂತಾಮಣಿಗೃಹದ ಬಳಿಯಲ್ಲಿ ಒಂದು ಮಂದಿರವು ಆ ರೀತಿ ನಿರ್ಮಿತವಾಗಿರುವುದು.

೮೫. ಅಯ್ಯಾ, ಕುಂಭಸಂಭವನೇ! ದೇವಾಸುರ ಶಿಲ್ಪಿಗಳಾದ ವಿಶ್ವಕರ್ಮ ಮಯರೀರ್ವರೂ ಈ ರೀತಿ ಶ್ರೀಪುರದಲ್ಲಿ ಮುದ್ರಿಣಿಯಾದ ಶ್ರೀ ಮಂತ್ರಿನಾಥೆಯ ದಿವ್ಯಮಂದಿರವನ್ನು ಸಾಟಿಯಿಲ್ಲದ ಪರಿಪಾಟಿಯಲ್ಲಿ ನಿರ್ಮಿಸಿದ್ದಾರೆ. ಅದನ್ನು ವರ್ಣಿಸಲು, ಆದಿಶೇಷನಿಗಿರುವಂತೆ ಸಾವಿರ ನಾಲಗೆಗಳಿದ್ದರೂ ಯಾರಿಂದ ತಾನೇ ಸಾಧ್ಯವಾದೀತು?

೮೬. ಓ ಮುನಿಯೇ! ಕಾದಂಬರೀಸುಧೆಯ ಪಾನದಿಂದ ತಾಮ್ರನಯನೆಯರೂ, ಮಾನ್ಯೆಯರೂ, ಆದ ಮಾತಂಗಮುನಿ ಕನ್ಯಕೆಯರು ಮನೋಹರವಾದ ವೀಣಾನಾದದೊಡನೆ ಗಾನಮಾಡುತ್ತ ಆ ಪ್ರದೇಶದಲ್ಲಿ ಕ್ರೀಡಿಸುತ್ತಿರುತ್ತಾರೆ.

೮೭. ಅಗಸ್ತ್ಯಮುನಿಯು ಕೇಳುತ್ತಾನೆ:—ಓ ಹಯಾನನ! ನೀನು ಹೇಳಿದ ಆ ಮಾತಂಗನೆಂಬುವನಾರು? ಮಧುಮದದಿಂದ ಅಲಸೆಯರಾಗಿ ಮಂತ್ರಿನಾಥೆಯನ್ನು ಸೇವಿಸುತ್ತಿರುವರೆಂದು ನೀನು ನಿರೂಪಿಸಿದ ಆ ಕನ್ನೆಯರು ಅವನಿಗೆ ಕುಮಾರಿಯರೆಂಬುದೆಂತು?"

೮೮. ಶ್ರೀ ಹಯಗ್ರೀವನು ಹೇಳುತ್ತಾನೆ— ಎಲೈ ಅಗಸ್ತ್ಯನೇ! ಮತಂಗನೆಂಬವನು ತಪಸ್ಸಿನ ಏಕರಾಶಿಸ್ವರೂಪನಾದ ತಪೋಧನನು;

ತಸ್ಯ ಪುತ್ರಸ್ತು ಮಾತಂಗೋ ಮುದ್ರಿಣೀಂ ಮಂತ್ರನಾಯಿಕಾಂ ।
ಘೋರೈಸ್ತಪೋಭಿರತ್ಯರ್ಥಂ ಪೂಜಯಾಮಾಸ ಧೀರಧೀಃ ॥ ೮೯ ॥
ಮತಂಗಮುನಿಪುತ್ರೇಣ ಸುಚಿರಂ ಸಮುಪಾಸಿತಾ ।
ಮಂತ್ರಿಣೀ ಕೃತಸಾನ್ನಿಧ್ಯಾ ವೃಣೀಷ್ವ ವರಮಿತ್ಯಶಾತ್ ॥ ೯೦ ॥
ಸೋಽಪಿ ಸರ್ವಮುನಿಶ್ರೇಷ್ಠೋ ಮಾತಂಗಸ್ತಪಸಾಂ ನಿಧಿಃ । [೯೧॥
ಉವಾಚ ತಾಂ ಪುರೋ ದತ್ತಸಾನ್ನಿಧ್ಯಾಂ ಶ್ಯಾಮಲಾಂಬಿಕಾಂ ॥

ಮಾತಂಗಮುನಿಃ—

ದೇವಿ ತ್ವತ್ಸ್ಮೃತಿಮಾತ್ರೇಣ ಮಮ ಸರ್ವಾಶ್ಚ ಸಿದ್ಧಯಃ ।
ಜಾತಾ ಏವಾಣಿಮಾದ್ಯಾಸ್ತಾಃ ಸರ್ವಾ ಅನ್ಯಾ ವಿಭೂತಯಃ ॥೯೨॥
ಪ್ರಾಪಣೀಯಂ ನ ಮೇ ಕಿಂಚಿದಸ್ತ್ಯಂಬ ಭುವನತ್ರಯೇ ।
ಸರ್ವತಃ ಪ್ರಾಪ್ತಕಾಮಸ್ಯ ಭವತ್ಯಾಶ್ಚರಣಸ್ಮೃತೇಃ ॥ ೯೩ ॥

---

ಮಹಾಪ್ರಭಾವಸಂಪನ್ನನು. ಜಗತ್ತನ್ನೇ ನಿರ್ಮಿಸುವುದರಲ್ಲಿ ಆಸಕ್ತನಾದವನು; ತೀವ್ರವಾದ ತನ್ನ ತಪಃಪ್ರಭಾವದಿಂದಾತನು ಎಲ್ಲೆಡೆಗಳಲ್ಲಿಯೂ ತನ್ನ ಅಪ್ಪಣೆಯನ್ನು ನಡೆಸುವಾತನು.

೮೯. ಆ ಮುನಿಯ ಮಗನೇ ಈ ಮಾತಂಗನು. ಮಾತಂಗನು ಧೀರಮನಸ್ಕನಾಗಿ ಮಂತ್ರಿನಾಯಕಿಯಾದ ಮುದ್ರಿಣೀದೇವಿಯನ್ನು ಕುರಿತು ಘೋರವಾದ ತಪಸ್ಸನ್ನೆಸಗಿ ಆಕೆಯನ್ನು ಬಹಳವಾಗಿ ಪೂಜಿಸಿದನು.

೯೦. ಮತಂಗಮುನಿಪುತ್ರನಿಂದ ಹೀಗೆ ಬಹುಕಾಲ ಪೂಜೆಯನ್ನು ಕೈಕೊಂಡ ಆ ಶ್ಯಾಮಲಾಂಬಿಕೆಯು ಅವನಿಗೆ ಸಾನ್ನಿಧ್ಯವನ್ನು ಕರುಣಿಸಿ, ವರವನ್ನು ಬೇಡು ಎಂದು ಅಪ್ಪಣೆ ಮಾಡಿದಳು.

೯೧. ಮುನಿಗಳಲ್ಲೆಲ್ಲ ಶ್ರೇಷ್ಠನೂ, ತಪೋಧನನೂ ಆದ ಆ ಮಾತಂಗಮುನಿಯಾದರೋ ತನ್ನ ಮುಂಗಡೆ ಸಾಕ್ಷಾತ್ಕರಿಸಿದ ಆ ಮಂತ್ರಿಣ್ಯಂಬೆಯನ್ನು ಕುರಿತು ಈ ರೀತಿ ಪ್ರಾರ್ಥಿಸಿ ನುಡಿದನು:

೯೨. "ಓ ದೇವೀ! ನಿನ್ನ ಸ್ಮರಣೆಯಿಂದಲೇ ನನಗೆ ಅಣಿಮಾದಿ ಸಮಸ್ತ ಸಿದ್ಧಿಗಳೂ ಇತರ ಐಶ್ವರ್ಯಗಳೂ ಸಿದ್ಧಿಸಿವೆ.

೯೩. ಸರ್ವಲೋಕಗಳಲ್ಲಿಯೂ ಸಮಸ್ತ ಇಷ್ಟಾರ್ಥಗಳೂ ಈಡೇರಿ ನಿನ್ನ ಪಾದಗಳ ಸ್ಮರಣೆಯೂ ದೊರಕಿರುವ ನಾನು ಈ ಮೂರು ಲೋಕಗಳಲ್ಲಿಯೂ ಇನ್ನು ಪಡೆಯಬೇಕಾದುದು ಏನೊಂದೂ ಉಳಿದಿರುವುದಿಲ್ಲ.

**ತಥಾಪಿ ತವ ಸಾನ್ನಿಧ್ಯಮಿದಂ ನೋ ನಿಷ್ಫಲಂ ಭವೇತ್ ।**
**ಏಕಂ ವರಂ ಪ್ರಾರ್ಥಯೇಽಹಂ ತಂ ವರಂ ಪೂರಯಾಂಬಿಕೇ ॥ ೯೪ ॥**
**ಪೂರ್ವಂ ಹಿಮವತಾ ಸಾರ್ಧಂ ಸೌಹಾರ್ದಪರಿಹಾಸವಾನ್ ।**
**ಕ್ರೀಡಾಮಂತನವಂ ವಾಕ್ಯೈಸ್ತತ್ರ ತೇನ ಪ್ರಗಲ್ಭಿತಂ ॥ ೯೫ ॥**
**ಅಹಂ ಗೌರೀಗುರುರಿತಿ ಶ್ಲಾಘಾಮಾತ್ಮನಿ ತೇನಿವಾನ್ ।**
**ತದ್ಭಾಗ್ಯಂ ಮಮ ನೈವಾಭೂದ್ಯತಸ್ತತ್ರಾಧಿಕೋ ಗುಣಃ ॥ ೯೬ ॥**
**ಉಭಯೋರ್ಗುಣಸಾಮ್ಯೇ ತು ಮಿತ್ರಯೋರಧಿಕೇ ಗುಣೇ ।**
**ಏಕಸ್ಯ ಕಾರಣಾಜ್ಜಾತೇ ತತ್ರಾನ್ಯಸ್ಯ ಸ್ಪೃಹಾ ಭವೇತ್ ॥ ೯೭ ॥**
**ಗೌರೀಗುರುತ್ವಶ್ಲಾಘಾರ್ಥಂ ಪ್ರಾಪ್ತಕಾಮೋಽಸ್ಮ್ಯಹಂ ತಪಃ ।**
**ಕೃತವಾನ್ಮಂತ್ರಿಣೀನಾಥೇ ತತ್ತ್ವಂ ಮತ್ತನಯಾ ಭವ ॥**
**ಯತೋ ಮನ್ನಾಮವಿಖ್ಯಾತಾ ಭವಿಷ್ಯಸಿ ನ ಸಂಶಯಃ ॥ ೯೮ ॥**

---

೯೪. ಆದರೂ, ನಿನ್ನ ಸಾಕ್ಷಾತ್ಕಾರವು ನಿಷ್ಫಲವಾಗದಿರಲೆಂದು ಒಂದು ವರವನ್ನು ಮಾತ್ರ ಬೇಡುತ್ತೇನೆ. ಅಂಬಿಕೇ! ನೀನದನ್ನು ದಯಪಾಲಿಸು.

೯೫. ತಾಯೇ! ಹಿಂದೆ ನಾನು ಹಿಮವಂತನೊಡನೆ ನನಗಿರುವ ಗೆಳೆತನದ ಸಲಿಗೆಯಿಂದ ವಿನೋದವಾಡಿದೆನು. ಅದಕ್ಕಾತನು ಬಹಳವಾಗಿ ಗರ್ವದಿಂದ ಮೆರೆದನು.

೯೬. ತಾನು ಶ್ರೀ ಗೌರೀದೇವಿಯ ತಂದೆಯೆಂದು ಆತ್ಮಶ್ಲಾಘನೆಯನ್ನು ಮಾಡಿಕೊಂಡನು. ಅಮ್ಮಾ! ಆ ಭಾಗ್ಯವು ನನಗಿಲ್ಲವಾಯಿತು. ಆದುದರಿಂದ ಆ ಹಿಮಗಿರಿರಾಜನೇ ನನಗಿಂತಲೂ ಅಧಿಕಗುಣಸಂಪನ್ನನಾದನು.

೯೭. ಕೆಳೆಯರೀರ್ವರೂ ಸಮಾನ ಗುಣಸಂಪನ್ನರಾಗಿರಬೇಕು. ಯಾರೊಬ್ಬರಲ್ಲಿ ಗುಣಾಧಿಕ್ಯವಿದ್ದರೂ ಇನ್ನೊಬ್ಬನಿಗೆ ಆ ಗುಣದಲ್ಲಿ ಆಶೆಯುಂಟಾಗುವುದು ಸಹಜವಷ್ಟೆ!

೯೮. ಆ ಗೌರೀಗುರುತ್ವವನ್ನು ಪಡೆಯಲೋಸುಗವೇ, ಪ್ರಾಪ್ತಕಾಮನಾದರೂ ನಾನು ನಿನ್ನನ್ನು ಕುರಿತು ಮಹತ್ತರವಾದ ತಪಸ್ಸನ್ನು ಮಾಡಿದೆನು. ಆದುದರಿಂದಲೆ ಓ ಮಂತ್ರಿನಾಥೆಯೇ! ನೀನು ನನಗೆ ಮಗಳಾಗು. ಹಾಗಾದುದಾದರೆ ನನ್ನ ಹೆಸರಿನಿಂದಲೇ ನೀನು ಈ ಜಗತ್ತಿನಲ್ಲಿ ವಿಖ್ಯಾತಳಾಗುವೆಯೆಂಬುದರಲ್ಲಿ ಸಂಶಯವಿಲ್ಲ."

**ಇತ್ಯುಕ್ತಂ ವಚನಂ ಶ್ರುತ್ವಾ ಮಾತಂಗಸ್ಯ ಮಹಾಮುನೇಃ ।**
**ತಥಾಸ್ತ್ವಿತಿ ತಿರೋಧತ್ತ ಸ ಚ ಪ್ರೀತೋಽಭವನ್ಮುನಿಃ ॥ ೯೯ ॥**
**ಮಾತಂಗಸ್ಯ ಮಹರ್ಷೇಸ್ತು ಪತ್ನ್ಯಾಃ ಸ್ವಪ್ನೇ ಸದಾಮದಾ ।**
**ತಾಪಿಂಚ್ಛಮಂಜರೀಮೇಕಾಂ ದದೌ ಕರ್ಣಾವತಂಸತಃ ॥ ೧೦೦ ॥**
**ತತ್ಸ್ವಪ್ನಸ್ಯ ಪ್ರಭಾವೇನ ಮಾತಂಗಸ್ಯ ಸಧರ್ಮಿಣೀ ।**
**ನಾಮ್ನಾ ಸಿದ್ಧಿಮತೀ ಗರ್ಭೇ ಲಘುಶ್ಯಾಮಾಮಧಾರಯತ್ ॥೧೦೧॥**
**ತತ ಏವ ಸಮುತ್ಪನ್ನಾ ಮಾತಂಗೀ ತೇನ ಕೀರ್ತಿತಾ । [೧೦೨ ॥**
**ಲಘುಶ್ಯಾಮೇತಿ ಸಾ ಪ್ರೋಕ್ತಾ ಶ್ಯಾಮೇಯಂ ಮೂಲಕಂದಭೂಃ॥**
**ಪಿತುಃ ಸೃಷ್ಟಿಮಹಾವಿದ್ಯಾಮಧೀತ್ಯ ಕಲಶೋದ್ಭವ ।**
**ತತ್ಪ್ರಭಾವಾಲ್ಲಘುಶ್ಯಾಮಾ ಸಸರ್ಜ ಸ್ವಸಮಾ ಬಹೂಃ ॥**
**ಮಾತಂಗಕನ್ಯಕಾ ಹೃದ್ಯಾಃ ಕೋಟೀನಾಮಪಿ ಕೋಟಿಶಃ ॥ ೧೦೩ ॥**

---

೯೯. ಮಾತಂಗ ಮಹಾಮುನಿಯು ಈ ಪ್ರಕಾರವಾಗಿ ನುಡಿಯಲು, ಶ್ರೀಮಂತ್ರಿನಾಥಾದೇವಿಯು ಹಾಗೆಯೇ ಆಗಲೆಂದು ಅಪ್ಪಣೆ ಕೊಡಿಸಿ ಅಲ್ಲಿಯೇ ಅಂತರ್ಧಾನವಾದಳು. ಆಗ ಆ ಮುನಿಗೆ ಬಹಳ ತೃಪ್ತಿಯಾಯಿತು.

೧೦೦. ತರುವಾಯ ಸದಾಮದೆಯಾದ ಆ ಶ್ಯಾಮಲಾದೇವಿಯು ಮಾತಂಗಮಹರ್ಷಿಯ ಪತ್ನಿಯಾದ ಸಿದ್ಧಿಮತೀದೇವಿಗೆ ಸ್ವಪ್ನದಲ್ಲಿ ಸಾನ್ನಿಧ್ಯವನ್ನು ದಯೆಗೈದು ತನ್ನ ಕರ್ಣಭೂಷಣದಿಂದೊಂದು ತಮಾಲ ಕುಸುಮಮಂಜರಿಯನ್ನು ತೆಗೆದುಕೊಟ್ಟಳು.

೧೦೧. ಆ ಸ್ವಪ್ನಫಲದ ಪ್ರಭಾವದಿಂದ ಸಿದ್ಧಿಮತಿಯು ಲಘು ಶ್ಯಾಮಾದೇವಿಯನ್ನು ಗರ್ಭದಲ್ಲಿ ತಾಳಿದಳು.

೧೦೨. ಹೀಗೆ ಆ ದೇವಿಯು ಸಿದ್ಧಿಮತೀ ದೇವಿಯ ಗರ್ಭದಿಂದುದಿಸಿ ಮಾತಂಗಿಯೆಂದು ಕೀರ್ತಿತೆಯಾದಳು. ಆಕೆಯೇ ಲಘುಶ್ಯಾಮಾಂಬಿಕೆ. ಮಂತ್ರಿಣಿಯಾದ ಶ್ಯಾಮಲಾಂಬಿಕೆಯಾದರೋ ಮೂಲಕಂದದಿಂದಾವಿರ್ಭವಿಸಿದಳು.

೧೦೩. ಅಯ್ಯಾ ಕಲಶೋದ್ಭವನೇ! ಹೀಗೆ ಅವತರಿಸಿದ ಲಘು ಶ್ಯಾಮಾದೇವಿಯು ತನ್ನ ತಂದೆಯಾದ ಮಾತಂಗಮುನಿಯಿಂದ ಜಗತ್ಸೃಷ್ಟಿವಿದ್ಯೆಯನ್ನು ಅಧ್ಯಯನಮಾಡಿ ಅದರಪ್ರಭಾವದಿಂದ ತನ್ನಂತೆಯೇ ಇರುವ ಅನೇಕ ಕನ್ನಿಕೆಯರನ್ನು ಸೃಜಿಸಿದಳು. ಆದುದರಿಂದ

ಲಘುಶ್ಯಾಮಾ ಮಹಾಶ್ಯಾಮಾ ಮಾತಂಗೀವೃಂದಸಂಯುತಾ ।
ಅಂಗಶಕ್ತಿತ್ವಮಾಪನ್ನಾ ಸೇವತೇ ಪ್ರಿಯಕಪ್ರಿಯಾಂ ॥ ೧೦೪ ॥
ಇತಿ ಮಾತಂಗಕನ್ಯಾನಾಮುತ್ಪತ್ತಿಃ ಕುಂಭಸಂಭವ ।
ಕಥಿತಾಃ ಸಪ್ತಕಕ್ಷ್ಯಾಶ್ಚ ಸಾಲಾ ಲೋಹಾದಿನಿರ್ಮಿತಾಃ ॥ ೧೦೫ ॥

ಅಗಸ್ತ್ಯಃ—

ಲೋಹಾದಿಸಪ್ತಸಾಲಾನಾಂ ರಕ್ಷಕಾ ಯೇ ವಸಂತಿ ವೈ ।
ತನ್ನಾಮ ಕೀರ್ತಯ ಪ್ರಾಜ್ಞ ಯೇನ ವೈ ಸಂಶಯಚ್ಛಿದಾ ॥ ೧೦೬ ॥

ಹಯಗ್ರೀವಃ—

ನಾನಾವೃಕ್ಷಮಹೋದ್ಯಾನೇ ವರ್ತತೇ ಕುಂಭಸಂಭವ ।
ಮಹಾಕಾಲಃ ಸರ್ವಲೋಕಭಕ್ಷಕಃ ಶ್ಯಾಮವಿಗ್ರಹಃ ॥ ೧೦೭ ॥
ಶ್ಯಾಮಕಂಚುಕಧಾರೀ ಚ ಮದಾರುಣವಿಲೋಚನಃ ।
ಬ್ರಹ್ಮಾಂಡಚಷಕೇ ಪೂರ್ಣಂ ಪಿಬನ್ ವಿಶ್ವರಸಾಸವಂ ॥ ೧೦೮ ॥
ಮಹಾಕಾಲೀ ಘನಶ್ಯಾಮಾಮನಂಗಾದ್ರಾರ್ಮಪಾಂಗಯನ್ ।
ಸಿಂಹಾಸನೇ ಸಮಾಸೀನಾ ಕಲ್ಯಾಣೇ ಕಲನಾತ್ಮಕೇ ॥ ೧೦೯ ॥

---

ಮಹಾಸುಂದರಿಯರಾದ ಆ ಮಾತಂಗಕನ್ನಿಕೆಯರು ಕೋಟ್ಯನುಕೋಟಿ ಸಂಖ್ಯಾಕರಾದರು.

೧೦೪. ಆ ಲಘುಶ್ಯಾಮೆಯು ಮಾತಂಗಿಯರ ಸಮೂಹಸಹಿತೆಯಾಗಿ ಅಂಗಶಕ್ತಿ ಪದವಿಯನ್ನು ಪಡೆದು ನೀಪಪ್ರಿಯೆಯಾದ ಶ್ರೀಶ್ಯಾಮಲಾಂಬಿಕೆಯನ್ನು ಸೇವಿಸುತ್ತಿರುವಳು.

೧೦೫. ಅಯ್ಯಾ ಮಹರ್ಷಿಯೇ, ಇದೇ ಆ ಮಾತಂಗ ಕನ್ನಿಕೆಯರ ಉತ್ಪತ್ತಿಯು. ಲೋಹನಿರ್ಮಿತಗಳಾದ ಆ ಶ್ರೀಪುರದ ಸಪ್ತಪ್ರಾಕಾರಗಳ ಸಪ್ತಕಕ್ಷ್ಯಗಳ ವಿಷಯವೆಲ್ಲವನ್ನೂ ನಿನಗೆ ಹೇಳಿಯಾಯಿತು.

೧೦೬. ಅಗಸ್ತ್ಯನು ಕೇಳುತ್ತಾನೆ:— "ಮುನಿಯೇ! ನೀನು ಅಪ್ಪಣೆಕೊಡಿಸಿದ ಲೋಹಾದಿ ಸಪ್ತಸಾಲಗಳ ರಕ್ಷಕರಾಗಿರುವವರು ಯಾರು? ಅವರ ಹೆಸರುಗಳೇನು? ಎಲೈ ಪ್ರಾಜ್ಞನೇ! ಈ ವಿಷಯವನ್ನು ತಿಳಿಸಿ ನನ್ನ ಸಂದೇಹವನ್ನು ಕಳೆಯುವವನಾಗು" ಎಂದು ಕೇಳಿದನು.

೧೦೭-೧೧೦. ಶ್ರೀ ಹಯಗ್ರೀವಮುನಿಯು ಹೇಳುತ್ತಾನೆ:—ಎಲೈ ಕುಂಭಸಂಭವನೇ! ವಿವಿಧ ವೃಕ್ಷಸಮನ್ವಿತವಾದ ಆ ಶ್ರೀಪುರದ ಪ್ರಥಮೋದ್ಯಾನದಲ್ಲಿ ಸಮಸ್ತ ಲೋಕಗಳನ್ನೂ ಭಕ್ಷಿಸುವಾತನೂ, ಶ್ಯಾಮವಿಗ್ರಹನೂ,

**ಲಲಿತಾಧ್ಯಾನಸಂಪನ್ನೋ ಲಲಿತಾಪೂಜನೋತ್ಸುಕಃ ।**
**ವಿತನ್ವಂಲ್ಲಲಿತಾಭಕ್ತೇಷ್ವಾಯುಷೋ ದೀರ್ಘದೀರ್ಘತಾಂ ॥**
**ಕಾಲಮೃತ್ಯುಪ್ರಮುಖ್ಯೈಶ್ಚ ಕಿಂಕರೈರಭಿಸೇವಿತಃ ॥ ೧೧೦ ॥**
**ಮಹಾಕಾಲೀಮಹಾಕಾಲೌ ಲಲಿತಾಜ್ಞಾಪ್ರವರ್ತಕೌ ।**
**ವಿಶ್ವಂ ಕಲಯತಃ ಕೃತ್ಸ್ನಂ ಪ್ರಥಮೋದ್ಯಾನವಾಸಿನೌ ॥ ೧೧೧ ॥**
**ಕಾಲಚಕ್ರಂ ಮಹತ್ತತ್ರ ತಸ್ಯೈವಾಸನತಾಂ ಗತಂ ।**
**ಚತುರಾವರಣೋಪೇತಂ ಮಧ್ಯೇ ಬಿಂದುಮನೋಹರಂ ॥ ೧೧೨ ॥**
**ತ್ರಿಕೋಣಂ ಪಂಚಕೋಣಂ ಚ ಷೋಡಶಚ್ಛದಪಂಕಜಂ ।**
**ಅಷ್ಟಾರಪಂಕಜಂ ಚೈವ ಮಹಾಕಾಲಸ್ತು ಮಧ್ಯಗಃ ॥ ೧೧೩ ॥**

---

ಶ್ಯಾಮಲವರ್ಣದ ಕವಚವನ್ನು ತೊಟ್ಟಿರುವವನೂ, ಮಧುಮದದಿಂದ ಕೆಂಪಾದ ಕಣ್ಣುಗಳುಳ್ಳವನೂ, ಬ್ರಹ್ಮಾಂಡವೆಂಬ ಪಾನಪಾತ್ರೆಯಲ್ಲಿ ವಿಶ್ವರಸವೆಂಬ ಆಸವವನ್ನು ಪಾನಮಾಡುತ್ತ ಮಂಗಳಕರವೂ, ಕಲನಾತ್ಮಕವೂ ಆದ ಸಿಂಹಾಸನದಲ್ಲಿ ಸುಖಾಸೀನೆಯಾಗಿರುವ ಘನಶ್ಯಾಮೆಯಾದ ಶ್ರೀ ಮಹಾಕಾಳಿಯನ್ನು ಕಾಮಪಿಪಾಸೆಯಿಂದ ನೆಟ್ಟನೆ ನಿಟ್ಟಿಸಿ ನೋಡುತ್ತಿರುವವನೂ, ಶ್ರೀ ಲಲಿತಾಮಹಾದೇವಿಯನ್ನು ಧ್ಯಾನಿಸುತ್ತ, ಆಕೆಯ ಪೂಜೆಯಲ್ಲಿಯೇ ಆಸಕ್ತಿಯುಳ್ಳವನಾಗಿ ಆ ದೇವಿಯ ಭಕ್ತರಿಗೆ ಅಪರಿಮಿತವಾದ ದೀರ್ಘಾಯುಷ್ಯವನ್ನು ದಯೆಗೈಯುತ್ತ, ಕಾಲಮೃತ್ಯುವೇ ಮೊದಲಾದ ತನ್ನ ಸೇವಕರ ಸೇವೆಯನ್ನು ಕೈಕೊಳ್ಳುತ್ತಿರುವ ಶ್ರೀಮಹಾಕಾಲನು ನೆಲಸಿರುವನು.

೧೧೧. ಶ್ರೀ ಲಲಿತಾದೇವಿಯ ಆಜ್ಞೆಯನ್ನು ನಡೆಸುವ ಈ ಮಹಾಕಾಳೀ ಮಹಾಕಾಲರೀರ್ವರೂ ಸಮಸ್ತ ಪ್ರಪಂಚವನ್ನೂ ಸೃಷ್ಟಿಮಾಡುತ್ತ ಶ್ರೀನಗರದ ಆ ಪ್ರಥಮೋದ್ಯಾನದಲ್ಲಿ ವಾಸಮಾಡುತ್ತಿರುವರು.

೧೧೨-೧೧೩. ಆ ಮಹಾಕಾಲನಿಗೆ ಅಲ್ಲಿಯೇ ಮಹಾಕಾಲಚಕ್ರವು ಆಸನವಾಗಿ ಏರ್ಪಟ್ಟಿರುವುದು. ಅದು ಚತುರಾವರಣಗಳಿಂದ ಕೂಡಿ ಮಧ್ಯಪ್ರದೇಶದಲ್ಲಿ ಬಿಂದುವಿನಿಂದ ಮನೋಹರವಾಗಿ, ತ್ರಿಕೋಣ ಪಂಚಕೋಣ ಸಮನ್ವಿತವಾಗಿ, ಹದಿನಾಲ್ಕು ದಳಗಳುಳ್ಳುದೂ ಎಂಟು ದಳಗಳುಳ್ಳುದೂ ಆದ ಕಮಲದ್ವಯವನ್ನೊಳಗೊಂಡಿರುವುದು. ಆ ಕಾಲಚಕ್ರಮಧ್ಯದಲ್ಲಿಯೇ ಶ್ರೀ ಮಹಾಕಾಲನು ಕುಳಿತಿರುವನು.

**ತ್ರಿಕೋಣೇ ತು ಮಹಾಕಲ್ಪಾ ಮಹಾಸಂಧ್ಯಾ ಮಹಾನಿಶಾ ।**
**ಏತಾಸ್ತಿಸ್ರೋ ಮಹಾದೇವ್ಯೋ ಮಹಾಕಾಲಸ್ಯ ಶಕ್ತಯಃ ॥ ೧೧೪ ॥**
**ಪಂಚಕೋಣೇ ಕೃತಾ ತ್ರೇತಾ ದ್ವಾಪರಾ ಚ ಕಲಿಸ್ತಥಾ ।**
**ಮನ್ವಂತರಾ ಚ ವಿಜ್ಞೇಯಾ ಮಹಾಕಾಲಸ್ಯ ಶಕ್ತಯಃ ॥ ೧೧೫ ॥**
**ತತ್ರೈವ ಪಂಚಕೋಣಾಗ್ರೇ ಪ್ರತ್ಯೂಷಾ ಚ ಪಿತೃಪ್ರಸೂಃ ।**
**ಪ್ರಾಹ್ಣಾಪರಾಹ್ಣಾ ಮಧ್ಯಾಹ್ನಾ ಪಂಚ ಕಾಲಸ್ಯ ಶಕ್ತಯಃ ॥ ೧೧೬ ॥**
**ಅಥ ಷೋಡಶಪತ್ರಾಬ್ಜೇ ಸ್ಥಿತಾಃ ಶಕ್ತೀರ್ಮುನೇ ಶೃಣು ।**
**ದಿನಾ ನಿಶಾ ತಮಿಸ್ರಾ ಚ ಜ್ಯೋತ್ಸ್ನೀ ಚೈವ ತು ಪಕ್ಷಿಣೀ ॥ ೧೧೭ ॥**
**ಪ್ರದೋಷಾ ಚ ನಿಶೀಥಾ ಚ ಪ್ರಹರಾ ಪೂರ್ಣಿಮಾಪಿ ಚ ॥**
**ರಾಕಾ ಚಾನುಮತೀ ಚೈವ ತಥೈವಾಮಾವಸೀ ಪುನಃ ॥ ೧೧೮ ॥**
**ಸಿನೀವಾಲೀ ಕುಹೂರ್ಭದ್ರಾ ಉಪರಾಗಾ ಚ ಷೋಡಶೀ ।**
**ಏತಾಃ ಷೋಡಶ ಪತ್ರಸ್ಥಾಃ ಶಕ್ತಯಃ ಷೋಡಶ ಸ್ಮೃತಾಃ ॥೧೧೯॥**

---

೧೧೪. ತ್ರಿಕೋಣಚಕ್ರದಲ್ಲಿ ನೆಲಸಿರುವವರು, ಮಹಾಕಲ್ಪಾ, ಮಹಾಸಂಧ್ಯಾ, ಮಹಾನಿಶಾ ಎಂಬ ಮೂವರು ಮಹಾದೇವಿಯರು. ಇವರು ಶ್ರೀಮಹಾಕಾಲನ ಶಕ್ತಿಗಳು.

೧೧೫. ಪಂಚಕೋಣದಲ್ಲಿ ನೆಲಸಿರುವ ಕೃತಾ, ತ್ರೇತಾ, ದ್ವಾಪರಾ ಕಲಿ ಮನ್ವಂತರಾ ಎಂಬುವರೂ ಆ ಕಾಲನ ಶಕ್ತಿಗಳೇ.

೧೧೬. ಪಂಚಕೋಣದ ಮೇಲ್ಭಾಗದಲ್ಲಿಯೇ ಪ್ರತ್ಯೂಷಾ, ಪ್ರಾಹ್ಣಾ, ಅಪರಾಹ್ಣಾ, ಮಧ್ಯಾಹ್ನಾ, ಪಿತೃಪ್ರಸೂ ಎಂಬ ಐವರು ಶಕ್ತಿದೇವತೆಗಳು ವಾಸಿಸುತ್ತಿರುವರು. ಇವರು ಐವರೂ ಕಾಲನ ಶಕ್ತಿಗಳೇ.

೧೧೭-೧೧೯. ಎಲೈ ಮುನಿಯೇ, ಇನ್ನು ಷೋಡಶ ಕಮಲದಲ್ಲಿರುವ ಶಕ್ತಿದೇವತೆಗಳನ್ನು ಕೇಳು. ದಿನಾ, ನಿಶಾ, ತಮಿಸ್ರಾ, ಜ್ಯೋತ್ಸ್ನೀ, ಪಕ್ಷಿಣೀ, ಪ್ರದೋಷಾ, ನಿಶೀಥೀ, ಪ್ರಹರಾ, ಪೂರ್ಣಿಮಾ, ರಾಕಾ, ಅನುಮತೀ, ಅಮಾವಸೀ, ಸಿನೀವಾಲೀ, ಕುಹೂ, ಭದ್ರಾ, ಉಪರಾಗಾ ಎಂಬಿವರೇ ಆ ಹದಿನಾರುಮಂದಿ ಶಕ್ತಿದೇವಿಯರು. ಈ ಹದಿನಾರು ಮಂದಿ ಶಕ್ತಿದೇವಿಯರು ಆ ಷೋಡಶಕಮಲದ ಷೋಡಶದಳಗಳಲ್ಲಿಯೂ ವಾಸವಾಗಿರುವರೆಂದು ತಿಳಿಯಲಾಗಿದೆ.

**ಕಲಾ ಕಾಷ್ಠಾ ನಿಮೇಷಾ ಚ ಕ್ಷಣಾ ಚೈವ ಲವಾ ತ್ರುಟಿಃ ।**
**ಮುಹೂರ್ತಾ ಕುತಪಾ ಹೋರಾ ಶುಕ್ಲಪಕ್ಷಾ ತಥೈವ ಚ ॥ ೧೨೦ ॥**
**ಕೃಷ್ಣಪಕ್ಷಾಯನಾ ಚೈವ ವಿಷುವಾ ಚ ತ್ರಯೋದಶೀ ।**
**ಸಂವತ್ಸರಾ ಚ ಪರಿವತ್ಸರೇದಾವತ್ಸರಾಪಿ ಚ ।**
**ಏತಾಃ ಷೋಡಶಪತ್ರಾಗ್ರವಾಸಿನ್ಯಃ ಶಕ್ತಯಃ ಸ್ಮೃತಾಃ ॥ ೧೨೧ ॥**
**ಇದ್ವತ್ಸರಾ ತತಶ್ಚೇಂದುವತ್ಸರಾ ವತ್ಸರಾಪಿ ಚ ।**
**ತಿಥಿರ್ವಾರಾ ಚ ನಕ್ಷತ್ರಾ ಯೋಗಾ ಚ ಕರಣಾಪಿ ಚ ।**
**ಏತಾಶ್ಚ ಶಕ್ತಯೋ ನಾಗಪತ್ರಾಂಭೋರುಹಸಂಸ್ಥಿತಾಃ ॥ ೧೨೨ ॥**
**ಕಲಿಃ ಕಲ್ಯಾ ಚ ಕಲನಾ ಕಾಲೀ ಚೇತಿ ಚತುಷ್ಟಯಂ ।**
**ದ್ವಾರಪಾಲಕತಾಂ ಪ್ರಾಪ್ತಂ ಕಾಲಚಕ್ರಸ್ಯ ಭಾಸ್ವತಃ ।**
**ಏತಾ ಮಹಾಕಾಲದೇವ್ಯೋ ಮದಪ್ರಹಸಿತಾನನಾಃ ॥ ೧೨೩ ॥**
**ಮದಿರಾಪೂರ್ಣಚಷಕಂ ಪಿಶಿತಂ ಚಾರುಣಪ್ರಭಂ ।**
**ದಧಾನಾಃ ಶ್ಯಾಮಲಾಕಾರಾಃ ಸರ್ವಾಃ ಕಾಲಸ್ಯ ಯೋಷಿತಃ ॥**
**ಲಲಿತಾಪೂಜನಧ್ಯಾನಜಪಸ್ತೋತ್ರಪರಾಯಣಾಃ ।**
**ನಿಷೇವಂತೇ ಮಹಾಕಾಲಂ ಕಾಲಚಕ್ರಾಸನಸ್ಥಿತಂ ॥ ೧೨೪ ॥**

---

೧೨೦-೧೨೧. ಕಲಾ, ಕಾಷ್ಠಾ, ನಿಮೇಷಾ, ಕ್ಷಣಾ, ಲವಾ, ತ್ರುಟಿ, ಮುಹೂರ್ತಾ, ಕುತಪಾ, ಹೋರಾ, ಶುಕ್ಲಪಕ್ಷಾ, ಕೃಷ್ಣಪಕ್ಷಾ, ಅಯನಾ, ವಿಷುವಾ, ತ್ರಯೋದಶೀ, ಸಂವತ್ಸರಾ, ಪರಿವತ್ಸರಾ, ಏದಾವತ್ಸರಾ ಎಂಬ ಈ ಹದಿನಾರು ಮಂದಿ ಶಕ್ತಿದೇವತೆಗಳೂ ಆ ಷೋಡಶ ಕಮಲದಳಾಗ್ರಭಾಗಗಳಲ್ಲಿ ವಾಸಿಸುತ್ತಿರುವರು.

೧೨೨. ಇದ್ವತ್ಸರಾ, ಇಂದುವತ್ಸರಾ, ವತ್ಸರಾ, ತಿಥಿ, ವಾರಾ, ನಕ್ಷತ್ರಾ, ಯೋಗಾ, ಕರಣಾ ಎಂಬ ಈ ದೇವತೆಗಳು ನಾಗಪತ್ರಕಮಲ ನಿವಾಸಿನಿಯರು.

೧೨೩. ಬಹುವಾಗಿ ಬೆಳಗುತ್ತಿರುವ ಆ ಕಾಲಚಕ್ರಕ್ಕೆ ಕಲಿ, ಕಲ್ಯಾ, ಕಲನಾ, ಕಾಲೀ ಎಂಬುವರು ದ್ವಾರಪಾಲ ಶಕ್ತಿದೇವತೆಗಳು. ಮಧು ಮದದಿಂದ ಕಿಲಕಿಲನೆ ನಗುತ್ತಿರುವ ಮುಖಗಳುಳ್ಳ ಇವರು ನಾಲ್ವರೂ ಮಹಾಕಾಲನ ರಾಣಿಯರು.

೧೨೪. ಇವರೆಲ್ಲರೂ ಶ್ಯಾಮಲಾಕಾರೆಯರಾಗಿ, ಮದಿರೆಯು ತುಂಬಿದ ಪಾನಪಾತ್ರೆಯನ್ನೂ, ಕೆಂಪೊಗೆವ ಮಾಂಸವನ್ನೂ ಕೈಗಳಲ್ಲಿ

**ಅಥ ಕಲ್ಪಕವಾಟ್ಯಾಸ್ತು ರಕ್ಷಕಃ ಕುಂಭಸಂಭವ ।**
**ವಸಂತರ್ತುರ್ಮಹಾತೇಜಾ ಲಲಿತಾಪ್ರಿಯಕಾರಕಃ ॥ ೧೨೫ ॥**
**ಪುಷ್ಪಸಿಂಹಾಸನಾಸೀನಃ ಪುಷ್ಪಮಾಧ್ವೀಮದಾರುಣಃ ।**
**ಪುಷ್ಪಾಯುಧಃ ಪುಷ್ಪಭೂಷಃ ಪುಷ್ಪಚ್ಛತ್ರೇಣ ಭೂಷಿತಃ ॥ ೧೨೬ ॥**
**ಮಧುಶ್ರೀರ್ಮಾಧವಶ್ರೀಶ್ಚ ದ್ವೇ ದೇವ್ಯೌ ತಸ್ಯ ದೀವ್ಯತಃ ।**
**ಪ್ರಸೂನಮದಿರಾಮತ್ತೇ ಪ್ರಸೂನಶರಲಾಲಸೇ ॥ ೧೨೭ ॥**
**ಸಂತಾನವಾಟಿಕಾಪಾಲೋ ಗ್ರೀಷ್ಮರ್ತುಸ್ತೀವ್ರಲೋಚನಃ ।**
**ಲಲಿತಾಕಿಂಕರೋ ನಿತ್ಯಂ ತಸ್ಯಾ ಆಜ್ಞಾಪ್ರವರ್ತಕಃ ॥ ೧೨೮ ॥**
**ಶುಕ್ರಶ್ರೀಶ್ಚ ಶುಚಿಶ್ರೀಶ್ಚ ತಸ್ಯ ಭಾರ್ಯೇ ಉಭೇ ಸ್ಮೃತೇ ।**
**ಹರಿಚಂದನವಾಟೀಷು ಮುನೇ ವರ್ಷರ್ತುನಾ ಸ್ಥಿತಾ ॥ ೧೨೯ ॥**

---

ಧರಿಸಿ ಬೆಳಗುತ್ತ, ಶ್ರೀ ಲಲಿತಾದೇವಿಯ ಪೂಜೆಯಲ್ಲಿಯೂ, ಧ್ಯಾನ ಜಪ ಸ್ತೋತ್ರಗಳಲ್ಲಿಯೂ ಪರಾಯಣೆಯರಾಗಿ ಕಾಲಚಕ್ರದಲ್ಲಿ ಕುಳಿತಿರುವ ಮಹಾಕಾಲನನ್ನು ಸೇವಿಸುತ್ತಿರುವರು.

೧೨೫. ಎಲೈ ಕುಂಭೋದ್ಭವನೇ! ಇದಾದ ತರುವಾಯ, ಶ್ರೀ ಲಲಿತಾದೇವಿಗೆ ಅತ್ಯಂತ ಪ್ರಿಯವನ್ನುಂಟುಮಾಡುವವನಾದ ವಸಂತನು ಕಲ್ಪಕವಾಟಿಯಲ್ಲಿ ರಕ್ಷಕನಾಗಿ ನೆಲಸಿರುವನು.

೧೨೬. ಈ ವಸಂತನು ಪುಷ್ಪಮಕರಂದವನ್ನು ಪಾನಮಾಡಿ, ಮದದಿಂದ ಕೆಂಪೊಗೆದು, ಪುಷ್ಪಾಯುಧನೂ, ಪುಷ್ಪಭೂಷಣನೂ, ಪುಷ್ಪಚ್ಛತ್ರಾಲಂಕೃತನೂ ಆಗಿ, ಪುಷ್ಪಸಿಂಹಾಸನದಲ್ಲಿ ಸುಖಾಸೀನನಾಗಿರುವನು.

೧೨೭. ಸುಮಸುರಾಪಾನದಿಂದ ಮದಿಸಿ, ಸುಮಶರಲಾಲಸೆಯರಾಗಿರುವ ಮಧುಶ್ರೀ, ಮಾಧವಶ್ರೀ ಎಂಬೀರ್ವರು ವಸಂತಪತ್ನಿಯರೂ ಅಲ್ಲಿಯೇ ಬೆಳಗುತ್ತಿರುವರು.

೧೨೮. ತೀವ್ರಲೋಚನನಾದ ಗ್ರೀಷ್ಮರ್ತುವು ಸಂತಾನವಾಟಿಕೆಯ ರಕ್ಷಕನು. ಶ್ರೀ ಲಲಿತಾದೇವಿಯ ಕಿಂಕರನಾದ ಈ ಗ್ರೀಷ್ಮರ್ತುದೇವನು ಯಾವಾಗಲೂ ಶ್ರೀದೇವಿಯ ಅಪ್ಪಣೆಯನ್ನು ನಡೆಸುವವನು.

೧೨೯. ಶುಕ್ರಶ್ರೀ, ಶುಚಿಶ್ರೀ ಎಂಬೀರ್ವರೂ ಅವನ ಭಾರ್ಯೆಯರೆಂದು ತಿಳಿಯಲಾಗಿದೆ. ಎಲೈ ವಿಂಧ್ಯಮರ್ದನನೇ, ಹರಿಚಂದನವಾಟಿಕೆಗೆ ರಕ್ಷಕನು ವರ್ಷರ್ತುದೇವನು.

ಸ ವರ್ಷರ್ತುರ್ಮಹಾತೇಜಾ ವಿದ್ಯುತ್ಪಿಂಗಲಲೋಚನಃ ।
ವಜ್ರಾಟ್ಟಹಾಸಮುಖರೋ ಮತ್ತಜೀಮೂತವಾಹನಃ ॥ ೧೩೦ ॥
ಜೀಮೂತಕವಚಚ್ಛನ್ನೋ ಮಣಿಕಾರ್ಮುಕಧಾರಕಃ ।
ಲಲಿತಾಪೂಜನಧ್ಯಾನಜಪಸ್ತೋತ್ರಪರಾಯಣಃ ।
ವರ್ತತೇ ವಿಂಧ್ಯಮಥನ ತ್ರೈಲೋಕ್ಯಾಹ್ಲಾದಕಾರಕಃ ॥ ೧೩೧ ॥
ನಭಶ್ರೀಶ್ಚ ನಭಸ್ಯಶ್ರೀಃ ಸರಸಾ ಸಸ್ಯಮಾಲಿನೀ ।
ಅಂಬಾ ದುಲಾ ನಿತತ್ನೀ ಚಾಭ್ರಯಂತೀ ಮೇಘಯಂತಿಕಾ ॥೧೩೨॥
ವರ್ಷಯಂತೀ ಚುಪುಣಿಕಾ ವಾರಿಧಾರಾ ಚ ಶಕ್ತಯಃ । [೧೩೩ ॥
ವರ್ಷರ್ತೋರ್ದ್ವಾದಶ ಪ್ರೋಕ್ತಾ ಮದಾರುಣವಿಲೋಚನಾಃ ॥
ತಾಭಿಃ ಸಮಂ ಸ ವರ್ಷರ್ತುಃ ಶಕ್ತಿಭಿಃ ಪರಮೇಶ್ವರೀಂ ।
ಸದೈವ ಪೂಜಯನ್ನಾಸ್ತೇ ನಿಜೋತ್ಥೈಃ ಪುಷ್ಪಮಂಡಲೈಃ ॥ ೧೩೪ ॥
ಲಲಿತಾಭಕ್ತದೇಶಾಂಸ್ತು ಭೂಷಯನ್ ಸಸ್ಯಸಂಪದಾ ।
ತದ್ವೈರಿಣಾಂ ತು ವಸುಧಾಮನಾವೃಷ್ಟ್ಯಾ ನಿಪೀಡಯನ್ ॥ ೧೩೫ ॥

---

೧೩೦-೧೩೧. ಮಹಾತೇಜಸ್ವಿಯಾದ ಈ ವರ್ಷರ್ತುದೇವನು ಮಿಂಚೆಂಬ ಹಳದಿಯ ಕಂಗಳುಳ್ಳವನೂ, ವಜ್ರಾಟ್ಟಹಾಸಮುಖರನೂ ಆಗಿ, ಮದಿಸಿದ ಮುಗಿಲನ್ನೇ ವಾಹನವನ್ನಾಗಿ ಮಾಡಿಕೊಂಡು, ಮುಗಿಲಿನ ಕವಚವನ್ನು ತೊಟ್ಟು, ಮಣಿಕಾರ್ಮುಕವನ್ನು ಧರಿಸಿ, ಯಾವಾಗಲೂ ಶ್ರೀ ಲಲಿತಾದೇವಿಯ ಪೂಜೆ ಧ್ಯಾನ ಜಪ ಸ್ತೋತ್ರಗಳಲ್ಲಿ ಪರಾಯಣನಾಗಿ, ಮೂರು ಲೋಕಗಳಿಗೂ ಆಹ್ಲಾದವನ್ನುಂಟುಮಾಡುತ್ತಿರುವನು.

೧೩೨-೧೩೩. ನಭಶ್ರೀ, ನಭಸ್ಯಶ್ರೀ, ಸರಸಾ, ಸಸ್ಯಮಾಲಿನೀ, ಅಂಬಾ, ದುಲಾ, ನಿತತ್ನೀ, ಅಭ್ರಯಂತೀ, ಮೇಘಯಂತೀ, ವರ್ಷಯಂತೀ, ಚುಪುಣಿಕಾ, ವಾರಿಧಾರಾ ಎಂಬ ಈ ಹನ್ನೆರಡು ಮಂದಿ ಮದಾರುಣವಿಲೋಚನೆಯರಾದ ದೇವತೆಗಳು ಆ ವರ್ಷರ್ತುವಿನ ಶಕ್ತಿಗಳೆಂದು ಹೇಳಿದೆ.

೧೩೪. ಆ ವರ್ಷರ್ತುದೇವನು, ಇವರೆಲ್ಲರೊಡಗೂಡಿ ಶ್ರೀ ಲಲಿತಾ ಪರಮೇಶ್ವರಿಯನ್ನು ತನ್ನಿಂದೊಗೆದ ಕುಸುಮಸಮೂಹಗಳಿಂದ ಯಾವಾಗಲೂ ಪೂಜಿಸುತ್ತಿರುವನು.

೧೩೫. ಶ್ರೀ ಲಲಿತಾಭಕ್ತರಿರುವ ದೇಶಗಳೆಲ್ಲವನ್ನೂ ಈ ದೇವನು

**ವರ್ತತೇ ಸತತಂ ದೇವೀಕಿಂಕರೋ ಜಲದಾಗಮಃ ।**
**ಮಂದಾರವಾಟಿಕಾಯಾಂ ತು ಸದಾ ಶರದೃತುರ್ವಸನ್ ॥**
**ತಾಂ ಕಕ್ಷ್ಯಾಂ ರಕ್ಷತಿ ಶ್ರೀಮಾಂಲ್ಲೋಕಚಿತ್ತಪ್ರಸಾದನಃ ॥ ೧೩೬ ॥**
**ಇಷಶ್ರೀಶ್ಚ ತಥೋರ್ಜಶ್ರೀಸ್ತಸ್ಯರ್ತೋಃ ಪ್ರಾಣನಾಯಿಕೇ ।**
**ತಾಭ್ಯಾಂ ಸಹ ಋತುಃ ಶ್ರೀಮಾನ್ನಿಜೋತ್ಥೈಃ ಪುಷ್ಪಮಂಡಲೈಃ ।**
**ಅಭ್ಯರ್ಚಯತಿ ಸಮ್ರಾಜ್ಞೀಂ ಶ್ರೀಕಾಮೇಶ್ವರಯೋಷಿತಂ ॥ ೧೩೭ ॥**
**ಹೇಮಂತರ್ತುರ್ಮಹಾತೇಜಾ ಹಿಮಶೀತಲವಿಗ್ರಹಃ ।**
**ಸದಾ ಪ್ರಸನ್ನವದನೋ ಲಲಿತಾಪ್ರಿಯಕಿಂಕರಃ ॥ ೧೩೮ ॥**
**ನಿಜೋತ್ಥೈಃ ಪುಷ್ಪಸಂಭಾರೈರರ್ಚಯನ್ ಪರಮೇಶ್ವರೀಂ ।**
**ಪಾರಿಜಾತಸ್ಯ ವಾಟೀಂ ತು ರಕ್ಷತೀಲ್ವಲಮರ್ದನ ।**
**ಸಹಶ್ರೀಶ್ಚ ಸಹಸ್ಯಶ್ರೀಸ್ತಸ್ಯ ದ್ವೇ ಯೋಷಿತೌ ಶುಭೇ ॥ ೧೩೯ ॥**

---

ಸಸ್ಯಸಂಪತ್ತಿನಿಂದ ಬೆಳಗಿಸುತ್ತಿರುವನು. ಆ ದೇವಿಯ ವೈರಿಗಳಿರುವ ದೇಶಗಳನ್ನೀತನು ಅನಾವೃಷ್ಟಿಯಿಂದ ಬಹಳವಾಗಿ ಪೀಡಿಸುತ್ತಿರುವನು.

೧೩೬. ಈ ಪ್ರಕಾರ, ಸೇವೆ ಸಲ್ಲಿಸುತ್ತಿರುವ ಶ್ರೀಲಲಿತಾಕಿಂಕರನಾದ ಈ ವರ್ಷರ್ತುದೇವನು ಹರಿಚಂದನವಾಟಿಕೆಯ ರಕ್ಷಕನಾಗಿ ನೆಲಸಿರುವನು. ಮಂದಾರವೃಕ್ಷವಾಟಿಕೆಯಲ್ಲಿಯಾದರೊ ಮಹಾತೇಜಸ್ವಿಯಾಗಿ ಸಮಸ್ತ ಪ್ರಜೆಗಳ ಮನಸ್ಸನ್ನೂ ಪ್ರಸನ್ನಗೊಳಿಸುವವನಾದ ಶರದೃತುದೇವನೇ ಯಾವಾಗಲೂ ರಕ್ಷಕನಾಗಿ ನೆಲಸಿ ಅದನ್ನು ಕಾಯುತ್ತಿರುವನು.

೧೩೭. ಇಷಶ್ರೀ, ಊರ್ಜಶ್ರೀ ಎಂಬೀರ್ವರೂ ಆ ಋತುದೇವನ ಮಡದಿಯರು. ಅವರೀರ್ವರೊಡಗೂಡಿ ಶರದೃತುದೇವನು ತನ್ನಿಂದಾದ ಪುಷ್ಪಸಮೂಹಗಳಿಂದ ಶ್ರೀ ಕಾಮೇಶ್ವರಪತ್ನಿಯಾದ ಶ್ರೀ ಮಹಾರಾಜ್ಞಿಯನ್ನು ಪೂಜಿಸುತ್ತಿರುವನು.

೧೩೮-೧೩೯. ಮಹಾತೇಜನೂ, ಹಿಮದಂತೆ ಶೀತಲಶರೀರವುಳ್ಳವನೂ, ಯಾವಾಗಲೂ ಪ್ರಸನ್ನವಾದ ಮುಖವುಳ್ಳವನೂ, ಶ್ರೀ ಲಲಿತಾದೇವಿಗೆ ನೆಚ್ಚಿನ ಕಿಂಕರನೂ ಆದ ಹೇಮಂತರ್ತುದೇವನು ಪಾರಿಜಾತ ತರುವಾಟಿಯಲ್ಲಿ ನೆಲಸಿ ಅದನ್ನು ಕಾಯುತ್ತ ತನ್ನಿಂದೊಗೆದ ಪುಷ್ಪ ಸಾಮಗ್ರಿಗಳಿಂದ ಶ್ರೀ ಪರಮೇಶ್ವರಿಯನ್ನು ಪೂಜಿಸುತ್ತಿರುವನು. ಮಂಗಳಾಂಗಿಯರಾದ ಸಹಶ್ರೀ, ಸಹಸ್ಯಶ್ರೀ ಎಂಬವರು ಆತನ ಮಡದಿಯರು.

ಕದಂಬವನವಾಟ್ಯಾಸ್ತು ರಕ್ಷಕಃ ಶಿಶಿರಾಕೃತಿಃ ।
ಶಿಶಿರರ್ತುರ್ಮುನಿಶ್ರೇಷ್ಠ ವರ್ತತೇ ಕುಂಭಸಂಭವ ॥ ೧೪೦ ॥
ಸಾ ಕಕ್ಷ್ಯಾ ತೇನ ಸರ್ವತ್ರ ಶಿಶಿರೀಕೃತಭೂತಲಾ ।
ತದ್ವಾಸಿನೀ ತತಃ ಶ್ಯಾಮಾ ದೇವತಾ ಶೀತಲಾಕೃತಿಃ ॥ ೧೪೧ ॥
ತಪಶ್ರೀಶ್ಚ ತಪಸ್ಯಶ್ರೀಸ್ತಸ್ಯ ದ್ವೇ ಯೋಷಿದುತ್ತಮೇ ।
ತಾಭ್ಯಾಂ ಸಹಾರ್ಚಯತ್ಯಂಬಾಂ ಲಲಿತಾಂ ವಿಶ್ವಪಾವನೀಂ ॥ ೧೪೨ ॥

ಅಗಸ್ತ್ಯಃ—

ಗಂಧರ್ವವದನ ಶ್ರೀಮನ್ನಾನಾವೃಕ್ಷಾದಿಸಪ್ತಕೇ । [ ೧೪೩ ॥
ಪ್ರಥಮೋದ್ಯಾನಪಾಲಸ್ತು ಮಹಾಕಾಲೋ ಮಯಾ ಶ್ರುತಃ ॥
ಚತುರಾವರಣಂ ಚಕ್ರಂ ತ್ವಯಾ ತಸ್ಯ ಪ್ರಕೀರ್ತಿತಂ ।
ಷಣ್ಣಾಮೃತೂನಾಂ ಸರ್ವೇಷಾಂ ಕಲ್ಪಕಾದ್ಯಾಸು ವಾಟಿಷು ।
ಪಾಲಕತ್ವಂ ಶ್ರುತಂ ತ್ವತ್ತಶ್ಚಕ್ರದೇವ್ಯಸ್ತು ನ ಶ್ರುತಾಃ ॥ ೧೪೪ ॥

---

೧೪೦. ಮುನಿಶ್ರೇಷ್ಠನಾದ ಎಲೈ ಕುಂಭಸಂಭವನೇ! ಶಿಶಿರಾಕೃತಿಯುಳ್ಳ ಶಿಶಿರರ್ತುದೇವನು ಕದಂಬವನವಾಟಿಯ ರಕ್ಷಕನು.

೧೪೧. ಆ ಕಕ್ಷ್ಯದ ಭೂತಲವೆಲ್ಲವೂ ಶಿಶಿರರ್ತುದೇವನ ಪ್ರಭಾವದಿಂದ ಶೀತಳವಾಗಿರುವುದು. ಅಲ್ಲಿ ವಾಸವಾಗಿರುವ ಶ್ರೀ ಶ್ಯಾಮಲಾದೇವಿಯೂ ಶೀತಲಾಕೃತಿಯುಳ್ಳವಳಾಗಿರುವಳು.

೧೪೨. ಉತ್ತಮೆಯರಾದ ತಪಶ್ರೀ, ತಪಸ್ಯಶ್ರೀ, ಎಂಬವರೀರ್ವರೂ ಆ ಶಿಶಿರರ್ತುದೇವನಿಗೆ ಪತ್ನಿಯರು. ಈ ಈರ್ವರೊಡನೆಯೂ ಆ ಋತುದೇವನು ವಿಶ್ವಪಾವನೆಯಾದ ಶ್ರೀ ಲಲಿತಾಂಬಿಕೆಯನ್ನು ಯಾವಾಗಲೂ ಅರ್ಚಿಸುತ್ತಿರುವನು.

೧೪೩. ಅಗಸ್ತ್ಯಮುನಿಯು ಕೇಳುತ್ತಾನೆ.—ಎಲೈ ಮಹಾತೇಜಸ್ವಿಯಾದ ಹಯವದನನೇ, ವಿವಿಧವೃಕ್ಷವಾಟಿಕಗಳೇಳರಲ್ಲಿ ಮೊದಲನೆಯ ವೃಕ್ಷವಾಟಿಕೆಯ ಉದ್ಯಾನಪಾಲಕನು ಮಹಾಕಾಲನೆಂದು ನಿನ್ನಿಂದ ಕೇಳಿದೆನು.

೧೪೪. ಆ ಮಹಾಕಾಲನ ಚಕ್ರವು ಚತುರಾವರಣವುಳ್ಳದೆಂದು ನೀನು ಅಪ್ಪಣೆಕೊಡಿಸಿದೆ. ಕಲ್ಪವೃಕ್ಷವಾಟಿಕೆಯೇ ಮೊದಲಾದ ಉಳಿದ ಆರರಲ್ಲಿಯೂ ಷಡೃತುದೇವತೆಗಳು ಪಾಲಕರಾಗಿರುವುದನ್ನೂ ಕೇಳಿದೆನು. ಆದರೆ ಚಕ್ರದೇವಿಯರನ್ನು ಮಾತ್ರ ಕೇಳಲಿಲ್ಲ.

ಅತ ಏವ ವಸಂತಾದಿಚಕ್ರಾವರಣದೇವತಾಃ । [೧೪೫ ॥
ಕ್ರಮೇಣ ಬ್ರೂಹಿ ಭಗವನ್ಸರ್ವಜ್ಞೋಽಸಿ ಯತೋ ಮಹಾನ್ ॥

ಹಯಗ್ರೀವಃ—

ಆಕರ್ಣಯ ಮುನಿಶ್ರೇಷ್ಠ ತತ್ತಚ್ಚಕ್ರಸ್ಥದೇವತಾಃ ।
ಕಾಲಚಕ್ರಂ ಪುರಾ ಪ್ರೋಕ್ತಂ ವಾಸಂತಂ ಚಕ್ರಮುಚ್ಯತೇ ॥೧೪೬॥
ತ್ರಿಕೋಣಪಂಚಕೋಣೌ ಚ ನಾಗಚ್ಛದಸರೋರುಹಂ ।
ಷೋಡಶಾರಂ ಸರೋಜಂ ಚ ದಶಾರದ್ವಿತಯಂ ಪುನಃ ॥ ೧೪೭ ॥
ಚತುರಸ್ರಂ ಚ ವಿಜ್ಞೇಯಂ ಸಪ್ತಾವರಣಸಂಯುತಂ ।
ತನ್ಮಧ್ಯೇ ಬಿಂದುಚಕ್ರಸ್ಥೋ ವಸಂತರ್ತುರ್ಮಹಾದ್ಯುತಿಃ ॥ ೧೪೮ ॥
ತದಂಗದ್ವಯಸಂಲಗ್ನೇ ಮಧುಶ್ರೀಮಾಧವಶ್ರಿಯೌ ।
ಉಭಾಭ್ಯಾಂ ನಿಜಹಸ್ತಾಭ್ಯಾಮುಭಯೋಃ ಸ್ತನಮೇಕಕಂ ॥೧೪೯॥
ನಿಪೀಡಯನ್ನನ್ಯಹಸ್ತಯುಗಲೇನ ಸಸೌರಭಂ ।
ಸ್ವಪುಷ್ಪಮದಿರಾಪೂರ್ಣಚಷಕಂ ಪಿಶಿತಂ ಮಹತ್ ।
ಏವಮೇವ ಚ ಸರ್ವರ್ತುಧ್ಯಾನಂ ವಿಂಧ್ಯವಿಮರ್ದನ ॥ ೧೫೦ ॥

---

೧೪೫. ಭೋ ಭಗವನ್! ಆದುದರಿಂದ ಸರ್ವಜ್ಞನಾದ ನೀನು ವಸಂತಾದಿಯಾದ ಆ ಚಕ್ರಗಳ ದೇವತೆಗಳನ್ನೂ ಕ್ರಮವಾಗಿ ನನಗೆ ತಿಳಿಯಹೇಳಬೇಕು.

೧೪೬. ಶ್ರೀ ಹಯಗ್ರೀವ ಮುನಿಯು ಹೇಳುತ್ತಾನೆ.—ಎಲೈ ಮುನಿಶ್ರೇಷ್ಠನೇ! ನೀನು ಕೇಳಿದ ಆಯಾ ಚಕ್ರಗಳ ದೇವತೆಗಳನ್ನು ಹೇಳುವೆನು. ಹಿಂದೆ ನಿರೂಪಿಸಿದ ಕಾಲಚಕ್ರವೇ ವಾಸಂತಚಕ್ರವೆಂದು ಹೇಳಲಾಗುವುದು.

೧೪೭-೧೪೮. ಪಂಚಕೋಣ, ತ್ರಿಕೋಣ, ಷೋಡಶಾರ, ದಶಾರಗಳೆಂಬ ನಾಲ್ಕು ಕಮಲಗಳುಳ್ಳುದಾಗಿ ಸಪ್ತಾವರಣಗಳನ್ನೊಳಗೊಂಡ ಆ ಚಕ್ರಮಧ್ಯದ ಬಿಂದುಚಕ್ರದಲ್ಲಿ ವಸಂತನಿರುವನು.

೧೪೯-೧೫೦. ಎಲೈ ತಪೋಧನನೇ! ಆತನ ಎಡಬಲ ತೊಡೆಗಳ ಮೇಲೆ ಮಧುಶ್ರೀ, ಮಾಧವಶ್ರೀ ಎಂಬ ಆತನ ಪತ್ನಿಯರು ಕಂಗೊಳಿಸುತ್ತಿರುವರು. ವಸಂತರ್ತುದೇವನು ತನ್ನೆರಡು ಕೈಗಳಿಂದಲೂ ಆ ದೇವಿಯರ ಸ್ತನಗಳನ್ನು ಪೀಡಿಸುತ್ತಿರುವನಲ್ಲದೆ, ಉಳಿದೆರಡು ಕೈಗಳಲ್ಲಿ ಸುಗಂಧಭರಿತವಾದ ತನ್ನ ಪುಷ್ಪಗಳ ಆಸವವು ತುಂಬಿದ ಪಾನಪಾತ್ರೆ

ವರ್ಷರ್ತೋಸ್ತು ಪುನರ್ಧ್ಯಾನೇ ಶಕ್ತಿದ್ವಿತಯಮಾದಿಮಂ ।
ಅಂಕಸ್ಥಿತಂ ತು ವಿಜ್ಞೇಯಂ ಶಕ್ತಯೋಽನ್ಯಾಃ ಸಮೀಪಗಾಃ ।
ಅಥ ವಾಸಂತಚಕ್ರಸ್ಥದೇವೀಃ ಶೃಣು ವದಾಮ್ಯಹಂ ॥ ೧೫೧ ॥
ಮಧುಶುಕ್ಲಪ್ರಥಮಿಕಾ ಮಧುಶುಕ್ಲದ್ವಿತೀಯಕಾ ।
ಮಧುಶುಕ್ಲತೃತೀಯಾ ಚ ಮಧುಶುಕ್ಲಚತುರ್ಥಿಕಾ ॥ ೧೫೨ ॥
ಮಧುಶುಕ್ಲಾ ಪಂಚಮೀ ಚ ಮಧುಶುಕ್ಲಾ ಚ ಷಷ್ಠಿಕಾ ।
ಮಧುಶುಕ್ಲಾ ಸಪ್ತಮೀ ಚ ಮಧುಶುಕ್ಲಾಷ್ಟಮೀ ಪುನಃ ॥ ೧೫೩ ॥
ನವಮೀ ಮಧುಶುಕ್ಲಾ ಚ ದಶಮೀ ಮಧುಶುಕ್ಲತಃ ।
ಮಧುಶುಕ್ಲೈಕಾದಶೀ ತು ದ್ವಾದಶೀ ಮಧುಶುಕ್ಲತಃ ॥ ೧೫೪ ॥
ಮಧುಶುಕ್ಲತ್ರಯೋದಶ್ಯಾ ಮಧುಶುಕ್ಲಚತುರ್ದಶೀ ।
ಮಧುಶುಕ್ಲಾ ಪೂರ್ಣಿಮಾ ಚ ಪ್ರಥಮಾ ಮಧುಕೃಷ್ಣತಃ ॥ ೧೫೫ ॥
ಮಧುಕೃಷ್ಣದ್ವಿತೀಯಾ ಚ ಮಧುಕೃಷ್ಣತೃತೀಯಕಾ ।
ಮಧುಕೃಷ್ಣಚತುರ್ಥೀ ಚ ಮಧುಕೃಷ್ಣಾ ತು ಪಂಚಮೀ ॥ ೧೫೬ ॥
ಷಷ್ಠೀ ತು ಮಧುಕೃಷ್ಣಾ ಸ್ಯಾತ್ಸಪ್ತಮೀ ಮಧುಕೃಷ್ಣತಃ ।
ಮಧುಕೃಷ್ಣಾಷ್ಟಮೀ ಚ ಸ್ಯಾನ್ನವಮೀ ಮಧುಕೃಷ್ಣತಃ ॥ ೧೫೭ ॥
ದಶಮೀ ಮಧುಕೃಷ್ಣಾ ತು ವಿಂಧ್ಯದರ್ಪನಿಷೂದನ ।
ಮಧುಕೃಷ್ಣೈಕಾದಶೀ ತು ದ್ವಾದಶೀ ಮಧುಕೃಷ್ಣತಃ ॥ ೧೫೮ ॥
ಮಧುಕೃಷ್ಣತ್ರಯೋದಶ್ಯಾ ಮಧುಕೃಷ್ಣಚತುರ್ದಶೀ ।
ಮಧ್ವಮಾ ಚೇತಿ ವಿಜ್ಞೇಯಾಸ್ತ್ರಿಂಶದೇತಾಸ್ತು ಶಕ್ತಯಃ ॥ ೧೫೯ ॥

---

ಯನ್ನೂ, ಪಿಶಿತವನ್ನೂ ಧರಿಸಿರುವನು. ಎಲ್ಲ ಋತುಗಳ ಧ್ಯಾನವೂ ಈರೀತಿಯಾಗಿಯೇ ಇರುವುದು.

೧೫೧. ಆದರೆ ವರ್ಷರ್ತು ಧ್ಯಾನದಲ್ಲಿ ಮಾತ್ರ ಶಕ್ತಿದ್ವಯವು ತೊಡೆಗಳಲ್ಲಿಯೂ, ಇತರ ಶಕ್ತಿಗಳು ಸಮೀಪದಲ್ಲಿಯೂ ಇರುತ್ತಾರೆ. ಇನ್ನು ವಾಸಂತಚಕ್ರದಲ್ಲಿರುವ ಶಕ್ತಿದೇವಿಯರನ್ನು ಹೇಳುವೆನು.

೧೫೨-೧೫೯. ಎಲೈ ವಿಂಧ್ಯದರ್ಪವಿಷೂದನನೇ! ಶುಕ್ಲ ಕೃಷ್ಣ ಪಕ್ಷಗಳ ತಿಥಿನಾಮಧೇಯಗಳುಳ್ಳ ಆ ಶಕ್ತಿದೇವಿಯರು ಮೂವತ್ತು ಮಂದಿ. ಅವರ ಹೆಸರುಗಳನ್ನು ಕ್ರಮವಾಗಿ ಹೇಳುವೆನು ಕೇಳು:— ಮಧುಶುಕ್ಲಪ್ರಥಮಿಕಾ, ಮಧುಶುಕ್ಲದ್ವಿತೀಯಕಾ, ಮಧುಶುಕ್ಲ ತೃತೀಯಾ, ಮಧುಶುಕ್ಲಚತುರ್ಥಿಕಾ, ಮಧುಶುಕ್ಲಪಂಚಮೀ, ಮಧು

ಏವಮೇವ ಪ್ರಕಾರೇಣ ಮಾಧವಾಖ್ಯೋಪರಿ ಸ್ಥಿತಾಃ ।
ಶುಕ್ಲಪ್ರತಿಪದಾದ್ಯಾಸ್ತು ಶಕ್ತಯಸ್ತ್ರಿಂಶದನ್ಯಕಾಃ ॥ ೧೬೦ ॥
ಮಿಲಿತ್ವಾ ಷಷ್ಟಿಸಂಖ್ಯಾಸ್ತು ಖ್ಯಾತಾ ವಾಸಂತಶಕ್ತಯಃ ।
ಸ್ವೈಸ್ಸ್ವೈರ್ಮಂತ್ರೈಸ್ತತ್ರ ಚಕ್ರೇ ಪೂಜನೀಯಾ ವಿಧಾನತಃ ॥ ೧೬೧ ॥
ವಸಂತಚಕ್ರರಾಜಸ್ಯ ಸಪ್ತಾವರಣಭೂಮಯಃ ।
ಷಷ್ಟಿಃ ಸ್ಯಾದ್ದೇವತಾಷಷ್ಟಿಸ್ತಾಸು ಭೂಮಿಷು ಸಂಸ್ಥಿತಾಃ ।
ಪ್ರವಿಭಜ್ಯಾರ್ಚನೀಯಾಃ ಸ್ಯುಸ್ತತ್ತನ್ಮಂತ್ರೇಣ ಸಾಧಕೈಃ ॥ ೧೬೨ ॥
ಯಥಾ ವಾಸಂತಚಕ್ರೇಷು ತಥೈವಾನ್ಯೇಷು ಚರ್ತುಷು ।
ದೇವತಾಸ್ತು ಪರಂ ಭಿನ್ನಾಃ ಶುಕ್ರಶುಚ್ಯಾದಿಭೇದತಃ ॥ ೧೬೩ ॥

---

ಶುಕ್ಲಷಷ್ಠೀ, ಮಧುಶುಕ್ಲಸಪ್ತಮೀ, ಮಧುಶುಕ್ಲಾಷ್ಟಮೀ, ಮಧುಶುಕ್ಲನವಮೀ, ಮಧುಶುಕ್ಲದಶಮೀ, ಮಧುಶುಕ್ಲೈಕಾದಶೀ, ಮಧುಶುಕ್ಲದ್ವಾದಶೀ, ಮಧುಶುಕ್ಲತ್ರಯೋದಶೀ, ಮಧುಶುಕ್ಲಚತುರ್ದಶೀ, ಮಧುಶುಕ್ಲಪೂರ್ಣಿಮಾ, ಮಧುಕೃಷ್ಣಪ್ರಥಮಾ, ಮಧುಕೃಷ್ಣದ್ವಿತೀಯಾ, ಮಧುಕೃಷ್ಣತೃತೀಯಕಾ, ಮಧುಕೃಷ್ಣಚತುರ್ಥೀ, ಮಧುಕೃಷ್ಣಪಂಚಮೀ, ಮಧುಕೃಷ್ಣಷಷ್ಠೀ, ಮಧುಕೃಷ್ಣಸಪ್ತಮೀ, ಮಧುಕೃಷ್ಣಾಷ್ಟಮೀ, ಮಧುಕೃಷ್ಣನವಮೀ, ಮಧುಕೃಷ್ಣದಶಮೀ, ಮಧುಕೃಷ್ಣೈಕಾದಶೀ, ಮಧುಕೃಷ್ಣದ್ವಾದಶೀ, ಮಧುಕೃಷ್ಣತ್ರಯೋದಶೀ, ಮಧುಕೃಷ್ಣಚತುರ್ದಶೀ, ಮಧುಕೃಷ್ಣಾಮಾವಾಸೀ—ಈ ಮೂವತ್ತೂ ಆ ಶಕ್ತಿದೇವಿಯರ ಹೆಸರುಗಳು.

೧೬೦. ಹೀಗೆಯೇ ಆ ವಾಸಂತಚಕ್ರದ ಮೇಲ್ಭಾಗದಲ್ಲಿಯೂ ಶುಕ್ಲಕೃಷ್ಣಪ್ರತಿಪದಾದಿ ಮೂವತ್ತು ಶಕ್ತಿದೇವತೆಗಳಿರುತ್ತಾರೆ.

೧೬೧. ಒಟ್ಟುಗೂಡಿ ಆ ವಾಸಂತಶಕ್ತಿಗಳು ಅರುವತ್ತು ಸಂಖ್ಯೆಯುಳ್ಳವಾಗಿವೆ. ಅವುಗಳನ್ನು ಅವವುಗಳ ಮಂತ್ರಗಳಿಂದಲೇ ಶಾಸ್ತ್ರೋಕ್ತವಾಗಿ ಪೂಜಿಸತಕ್ಕುದು.

೧೬೨. ಇನ್ನು ಆ ವಾಸಂತಚಕ್ರರಾಜಕ್ಕೆ ಸಪ್ತಾವರಣ ಭೂಮಿಕೆಗಳುಂಟು. ಆ ಸಪ್ತಭೂಮಿಕೆಗಳಲ್ಲಿಯೂ ಆ ಅರುವತ್ತು ಮಂದಿ ದೇವತೆಗಳೇ ನೆಲಸಿರುತ್ತಾರೆ. ಸಾಧಕನಾದವನು ಅವರೆಲ್ಲರನ್ನೂ ವಿಭಾಗಮಾಡಿಕೊಂಡು ಆಯಾ ಮಂತ್ರಗಳಿಂದಲೇ ಪೂಜಿಸಬೇಕು.

೧೬೩-೧೬೪. ವಾಸಂತಚಕ್ರದಲ್ಲಿ ಹೇಗೆಯೋ ಹಾಗೆಯೇ ಇತರ

**ಶುಕ್ರಶುಕ್ಲ ಪ್ರಥಮಿಕಾ ಶುಕ್ರಶುಕ್ಲದ್ವಿತೀಯಕಾ ।**
**ಏವಮೇವ ಪ್ರಕಾರೇಣ ಶುಕ್ಲಕೃಷ್ಣಾದಿ ಕೀರ್ತಯೇತ್ ॥ ೧೬೪ ॥**
**ಏವಮೇವ ಪ್ರಕಾರೇಣ ಶುಚಿಶುಕ್ಲಾದಿಭೇದತಃ । [ ೧೬೫ ॥**
**ಶಕ್ತಯಃ ಷಷ್ಟಿಸಂಖ್ಯಾತಾ ಗ್ರೀಷ್ಮಚಕ್ರೇ ಮಹೋದಯಾಃ ॥**
**ಏವಂ ವರ್ಷರ್ತ್ವಾದಿಚಕ್ರೇ ಭೇದಾನ್ನಭ ನಭಸ್ಯಜಾನ್ ।**
**ಷಷ್ಟಿಃ ಷಷ್ಟಿಸ್ತು ಶಕ್ತೀನಾಂ ಚಕ್ರೇ ಚಕ್ರೇ ಪ್ರತಿಷ್ಠಿತಾ ॥ ೧೬೬ ॥**
**ಆರ್ತವ್ಯಃ ಶಕ್ತಯಸ್ತ್ವೇತಾ ಲಲಿತಾಭಕ್ತಸೌಖ್ಯದಾಃ ॥ ೧೬೭ ॥**
**ಲಲಿತಾಪೂಜನಧ್ಯಾನಜಪಸ್ತೋತ್ರಪರಾಯಣಾಃ ।**
**ಕಲ್ಪಾದಿವಾಟಿಕಾಚಕ್ರೇ ಸಂಚರಂತ್ಯೋ ಮದಾಲಸಾಃ ॥ ೧೬೮ ॥**

---

ಋತುಚಕ್ರಗಳಲ್ಲಿಯೂ ಶಕ್ತಿದೇವತೆಗಳಿರುವರೆಂದು ತಿಳಿಯಬೇಕು. ಆದರೆ, ಆ ಶಕ್ತಿದೇವತೆಗಳ ನಾಮಗಳನ್ನು ಹೇಳುವಾಗ ಶುಕ್ರಶುಕ್ಲ ಪ್ರಥಮಿಕಾ, ಶುಕ್ರಶುಕ್ಲದ್ವಿತೀಯಕಾ ಎಂಬುದಾಗಿ ಶುಕ್ರಶುಕ್ಲ ಪೂರ್ಣಿಮಾ ವರೆಗೂ ಹೇಳಿ ಅನಂತರ ಶುಕ್ರಕೃಷ್ಣಪ್ರಥಮಿಕಾ ಮುಂತಾಗಿ ಅಮಾವಾಸ್ಯೆಯವರಿಗೂ ಹೇಳಿಕೊಳ್ಳತಕ್ಕುದು.

೧೬೫. ಈ ಪ್ರಕಾರವಾಗಿ ಗ್ರೀಷ್ಮರ್ತುಚಕ್ರದಲ್ಲಿಯೂ ಶುಚಿಶುಕ್ಲಾದಿ ಭೇದಗಳ ಹೆಸರುಗಳುಳ್ಳ ಮಹೋದಯೆಯರಾದ ಶಕ್ತಿದೇವತೆಗಳು ಅರುವತ್ತು ಮಂದಿ ಇರುವರೆಂದು ತಿಳಿಯಲಾಗಿದೆ.

೧೬೬. ಹೀಗೆಯೇ ವರ್ಷರ್ತುವೆಂಬ ಮೊದಲ ಚಕ್ರದಲ್ಲಿಯೂ, ನಭ, ನಭಸ್ಯಭೇದವುಳ್ಳ ಶಕ್ತಿಗಳು ಅರುವತ್ತು ಮಂದಿ. ಅಂತೆಯೇ ಪ್ರತಿಯೊಂದು ಋತುಚಕ್ರದಲ್ಲಿಯೂ ಅರುವತ್ತು ಅರುವತ್ತು ಮಂದಿ ಶಕ್ತಿದೇವತೆಗಳಿರುತ್ತಾರೆ.

೧೬೭. ಈ ಋತುಶಕ್ತಿದೇವತೆಗಳೆಲ್ಲರೂ ಶ್ರೀಲಲಿತಾಪರಮೇಶ್ವರಿಯ ಭಕ್ತರಿಗೆಲ್ಲರಿಗೂ ಯಾವಾಗಲೂ ಪರಮ ಸೌಖ್ಯವನ್ನು ದೊರಕಿಸಿಕೊಡ ತಕ್ಕವರು.

೧೬೮. ಎಲ್ಲರೂ ಆ ದೇವಿಯ ಪೂಜನ ಧ್ಯಾನ ಜಪ ಸ್ತೋತ್ರಗಳಲ್ಲಿ ಪರಾಯಣರಾದವರು. ಮದಾಲಸೆಯರಾದ ಇವರೆಲ್ಲರೂ ಕಲ್ಪಕ ವಾಟಿಕೆಯೇ ಮೊದಲಾದ ಸಮಸ್ತ ವೃಕ್ಷವಾಟಿಕಾಚಕ್ರಗಳಲ್ಲಿ ಸಂಚರಿಸುತ್ತಿರುತ್ತಾರೆ.

ಸ್ವಸ್ವಪುಷ್ಪೋತ್ಥಮಧುಭಿಸ್ತರ್ಪಯಂತ್ಯೋ ಮಹೇಶ್ವರೀಂ ।
ಮಿಲಿತ್ವಾ ಚೈವ ಸಂಖ್ಯಾತಾಃ ಷಷ್ಟ್ಯುತ್ತರಶತತ್ರಯಂ ॥ ೧೬೯ ॥
ಏವಂ ಸಪ್ತಸು ಸಾಲೇಷು ಪಾಲಕಾಶ್ಚಕ್ರದೇವತಾಃ । [ ೧೭೦ ॥
ನಾಮಕೀರ್ತನಪೂರ್ವಂ ತು ಪ್ರೋಕ್ತಾಸ್ತುಭ್ಯಂ ಪ್ರಪೃಚ್ಛತೇ ॥
ಅನ್ಯೇಷಾಮಪಿ ಸಾಲಾನಾಮುಪಾದಾನಸ್ವರೂಪಕಂ ।
ವಿಸ್ತಾರಂ ತತ್ರ ಶಕ್ತೀಶ್ಚ ಕಥಯಾಮ್ಯವಧಾರಯ ॥ ೧೭೧ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಷಡ್ವಿಂಶೋಽಧ್ಯಾಯಃ

---

೧೬೯. ಇವರು ತಮ್ಮ ತಮ್ಮ ಪುಷ್ಪಗಳಿಂದುದಿಸಿದ ಮಧುಗಳಿಂದ ಶ್ರೀ ಲಲಿತಾಪರಮೇಶ್ವರಿಯನ್ನು ತೃಪ್ತಿಗೊಳಿಸುತ್ತಿರುವರು. ಎಲ್ಲರೂ ಒಟ್ಟುಗೂಡಿ ಇವರು ಮುನ್ನೂರ ಅರುವತ್ತು ಮಂದಿ.

೧೭೦. ಎಲೈ ಘಟೋದ್ಭವನೇ! ಹೀಗೆ ಸಪ್ತಸಾಲಗಳಲ್ಲಿಯೂ ಪಾಲಕರಾಗಿರುವ ಚಕ್ರದೇವತೆಗಳನ್ನು ನಾಮಕೀರ್ತನಪೂರ್ವಕವಾಗಿ ನಿನಗೆ ಹೇಳಿಯಾಯಿತು.

೧೭೧. ಇನ್ನು ಇತರ ಸಾಲಗಳ ರಚನಾಕ್ರಮವನ್ನೂ, ವಿಸ್ತಾರವನ್ನೂ, ಅವುಗಳಲ್ಲಿರುವ ಶಕ್ತಿದೇವತೆಗಳನ್ನೂ ಹೇಳುವೆನು ; ಕೇಳು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತವಿಂಶೋಽಧ್ಯಾಯಃ

[ರತ್ನಸಾಲ ಲಕ್ಷಣಾದಿ ವರ್ಣನಂ]

ಪುಷ್ಪರಾಗ ಮಣಿಜಾಲ ರಂಜಿತೈಃ
ಶುದ್ಧಮುಕ್ತ ವರಸಪ್ತಕಾನ್ವಿತೈಃ ।
ದಿವ್ಯ ದೇವಗಣ ಶಕ್ತಿರಂಜಿತೈಃ
ಪೂಜಿತಾಂಘ್ರಿಮಹಮಾಶ್ರಯೇ ಶಿವಾಂ ॥

ಶ್ರೀ ಹಯಗ್ರೀವಃ—

**ಕಥಿತಂ ಲೋಹಸಾಲಾನಾಂ ಲಕ್ಷಣಂ ಶಿಲ್ಪಿಭಿಃಕೃತಂ ।**
**ಅಥರತ್ನಮಯಾಃ ಸಾಲಾಃ ಪ್ರಕೀರ್ತ್ಯಂತೇಽವಧಾರಯ ॥ ೧ ॥**
**ಸುವರ್ಣಮಯಸಾಲಸ್ಯ ಪುಷ್ಪರಾಗ ಮಯಸ್ಯ ಚ ।**
**ಸಪ್ತಯೋಜನಮಾತ್ರಂ ಸ್ಯಾನ್ಮಧ್ಯೇಽಂತರಮುದಾಹೃತಂ ॥ ೨ ॥**
**ತತ್ರ ಸಿದ್ಧಾಃ ಸಿದ್ಧನಾರ್ಯಃ ಖೇಲಂತಿ ಮದಲಾಲಸಾಃ ।**
**ರಸೈ ರಸಾಯನೈಶ್ಚೈವ ಖಡ್ಗೈಃ ಪಾದಾಂಜನೈರಪಿ ॥ ೩ ॥**
**ಲಲಿತಾಯಾಂ ಭಕ್ತಿಯುಕ್ತಾಂಸ್ತರ್ಪಯಂತ್ಯೋ ಮಹಾಜನಾನ್ ।**
**ವಸಂತಿ ವಿವಿಧಾಂಸ್ತತ್ರ ಪಿಬಂತ್ಯೋ ಮದಿರಾರಸಾನ್ ॥ ೪ ॥**

---

### ಕನ್ನಡದ ಅನುವಾದ

[ರತ್ನಸಾಲ ಲಕ್ಷಣಾದಿವರ್ಣನ]

೧. ಹಯಗ್ರೀವ ಮುನಿಯು ಹೇಳುತ್ತಾನೆ:— ಅಯ್ಯಾ ಕುಂಭೋದ್ಭವ ಮುನಿಯೇ! ದೇವಾಸುರ ಶಿಲ್ಪಿಗಳಾದ ವಿಶ್ವಕರ್ಮ ಮಯರು ರಚಿಸಿದ ಲೋಹಪ್ರಾಕಾರಗಳ ವಿಷಯವೆಲ್ಲವನ್ನೂ ನಿನಗೆ ತಿಳಿಸಿದೆನು. ಇನ್ನು ರತ್ನಮಯ ಪ್ರಾಕಾರಗಳ ವಿಚಾರವನ್ನು ಹೇಳುವೆನು; ಗಮನಿಸಿ ಕೇಳು.

೨. ಸುವರ್ಣಮಯಪ್ರಾಕಾರಕ್ಕೂ, ಪುಷ್ಪರಾಗಮಣಿಮಯ ಪ್ರಾಕಾರಕ್ಕೂ ಏಳು ಯೋಜನಗಳ ದೂರವಿರುವುದೆಂದು ಹೇಳಿದೆ.

೩-೪. ಅಲ್ಲಿ, ಸಿದ್ಧರಾದ ಸಿದ್ಧಲಲನೆಯರು ಮಧುಮದ ಮತ್ತೆಯರಾಗಿ ರಸಗಳಿಂದಲೂ,ರಸಾಯನಗಳಿಂದಲೂ, ಖಡ್ಗಗಳಿಂದಲೂ, ಕಾಲುಗಳಿಗೆ ಸಿಂಗರಿಸಿಕೊಂಡಿರುವ ಲತ್ತಿಗೆಯ (ಅರಗಿನ) ರೇಖೆಗಳಿಂದಲೂ

ಪುಷ್ಪರಾಗಾದಿ ಸಾಲಾನಾಂ ಪೂರ್ವವದ್ದ್ವಾರ ಕ್ಲೃಪ್ತಯಃ ।
ಪುಷ್ಪರಾಗಾದಿ ಸಾಲೇಷು ಕವಾಟಾರ್ಗಲ ಗೋಪುರಮ್ ।
ಪುಷ್ಪರಾಗಾದಿಜಂ ಜ್ಞೇಯಮುದ್ಯದಾದಿತ್ಯ ಭಾಸ್ವರಂ ॥ ೫ ॥
ಹೇಮಪ್ರಾಕಾರ ಚಕ್ರಸ್ಯ ಪುಷ್ಪರಾಗ ಮಯಸ್ಯ ಚ ।
ಅಂತರೇ ಯಾ ಸ್ಥಲೀ ಸಾಪಿ ಪುಷ್ಪರಾಗಮಯೀ ಸ್ಮೃತಾ ॥ ೬ ॥
ವಕ್ಷ್ಯಮಾಣಮಹಾಸಾಲ ಕಕ್ಷ್ಯಾಸು ನಿಖಿಲಾಸ್ವಪಿ ।
ತದ್ವರ್ಣಾಃ ಪಕ್ಷಿಣಸ್ತತ್ರ ತದ್ವರ್ಣಾನಿ ಸರಾಂಸಿ ಚ ।
ತದ್ವರ್ಣಸಲಿಲಾ ನದ್ಯಸ್ತದ್ವರ್ಣಾಶ್ಚ ಮಣಿದ್ರುಮಾಃ ॥ ೭ ॥
ಸಿದ್ಧಜಾತಿಷು ಯೇ ದೇವೀಮುಪಾಸ್ಯವಿವಿಧೈಃ ಕ್ರಮೈಃ ।
ತ್ಯಕ್ತವಂತೋ ವಪುಃ ಪೂರ್ವಂ ತೇ ಸಿದ್ಧಾಸ್ತತ್ರ ಸಾಂಗನಾಃ ॥ ೮ ॥
ಲಲಿತಾಮಂತ್ರಜಪ್ತಾರೋ ಲಲಿತಾಕ್ರಮತತ್ಪರಾಃ ।
ತೇ ಸರ್ವೇ ಲಲಿತಾದೇವ್ಯಾ ನಾಮಕೀರ್ತನಕಾರಿಣಃ ॥ ೯ ॥

---

ಕ್ರೀಡಿಸುತ್ತಿರುತ್ತಾರೆ. ಅವರೆಲ್ಲರೂ ಶ್ರೀ ಲಲಿತಾದೇವಿಯಲ್ಲಿ ಭಕ್ತಿಯನ್ನಿಟ್ಟುಕೊಂಡಿರುವ ಮಹಾಜನಗಳೆಲ್ಲರಿಗೂ ತೃಪ್ತಿಯನ್ನುಂಟು ಮಾಡುತ್ತ ಬಗೆ ಬಗೆಯ ಮದ್ಯರಸಗಳನ್ನು ಪಾನಮಾಡುತ್ತ ಅಲ್ಲಿಯೇ ನೆಲಸಿರುತ್ತಾರೆ.

೫. ಪುಷ್ಪರಾಗವೇ ಮೊದಲಾದ ಈ ಎಲ್ಲಾ ರತ್ನಮಯ ಪ್ರಾಕಾರಗಳಲ್ಲಿಯೂ ಹಿಂದೆಯೇ ನಿರೂಪಿಸಿದಂತೆ ದ್ವಾರರಚನೆಯೂ, ಬಾಗಿಲುಗಳು, ಅಗಳಿಗಳು, ಗೋಪುರಗಳೂ ಇರುತ್ತವೆ. ಪುಷ್ಪರಾಗಮಣಿಮಯ ಪ್ರಾಕಾರವಾದರೋ ಆಗತಾನೆ ಉದಿಸಿದ ಸೂರ್ಯನಂತೆ ವಿರಾಜಿಸುತ್ತ ಇರುವುದು.

೬-೭. ಹೇಮಪ್ರಾಕಾರಕ್ಕೂ, ಪುಷ್ಪರಾಗ ಮಣಿಮಯ ಪ್ರಾಕಾರಕ್ಕೂ ನಡುವಣ ನೆಲವು ಪುಷ್ಪರಾಗಮಯವಾಗಿದೆಯೆಂದು ತಿಳಿಯಲಾಗಿದೆ. ಎಲೈ ಮುನಿಯೇ! ಮುಂದೆ ಹೇಳುವ ರತ್ನಮಣಿಮಯ ಪ್ರಾಕಾರಗಳ ವಾಟಿಕೆಗಳಲ್ಲಿರುವ ಹಕ್ಕಿಗಳೂ, ಸರೋವರಗಳೂ, ಆ ಸರೋವರ ಜಲಗಳೂ, ನದಿಗಳೂ, ಮಣಿದ್ರುಮಗಳೂ, ಎಲ್ಲವೂ ಆಯಾ ರತ್ನಗಳ ಕಾಂತಿಯಿಂದಲೇ ವಿರಾಜಿಸುತ್ತಿರುವುವು.

೮-೯. ಈ ಪುಷ್ಪರಾಗಮಣಿಮಯ ವಾಟಿಕೆಯಲ್ಲಿ, ಪೂರ್ವಜನ್ಮದಲ್ಲಿ ಶ್ರೀ ಲಲಿತಾದೇವಿಯನ್ನು ಬಗೆ ಬಗೆಯ ಕ್ರಮಗಳಿಂದ ಉಪಾಸನೆ

**ಪುಷ್ಪರಾಗ ಮಹಾಸಾಲಾಂತರೇ ಮಾರುತಯೋಜನೇ ।**
**ಪದ್ಮರಾಗಮಯಃ ಸಾಲಶ್ಚತುರಸ್ರಃ ಸಮಂತತಃ ।**
**ಸ್ಥಲೀ ಚ ಪದ್ಮರಾಗಾಢ್ಯಾ ಗೋಪುರಾದ್ಯಂ ಚ ತನ್ಮಯಮ್ ॥೧೦॥**
**ತತ್ರ ಚಾರಣಲೋಕಸ್ಥಾಃ ಪೂರ್ವದೇಹವಿನಾಶತಃ ।**
**ಸಿದ್ಧಿಂ ಪ್ರಾಪ್ತಾ ಮಹಾರಾಜ್ಞೀ ಚರಣಾಂಭೋಜಸೇವಕಾಃ ॥ ೧೧ ॥**
**ಚಾರಣಾನಾಂಸ್ತ್ರಿಯಶ್ಚಾಪಿ ಚಾರ್ವಂಗ್ಯೋಮದಲಾಲಸಾಃ । [೧೨॥**
**ಗಾಯಂತ್ಯೋ ಲಲಿತಾದೇವ್ಯಾ ಗೀತಿಬಂಧಂ ಮುಹುರ್ಮುಹುಃ ॥**
**ತತ್ರೈವ ಕಲ್ಪವೃಕ್ಷಾಣಾಮಧಸ್ತಾದ್ವೇದಿಕಾಸ್ಥಿತಾಃ ।**
**ಭರ್ತೃಭಿಃ ಸಹಚಾರಿಣ್ಯಃ ಪಿಬಂತಿ ಮಧುರಂ ಮಧು ॥ ೧೩ ॥**
**ಪದ್ಮರಾಗ ಮಹಾಸಾಲಾಂತರೇ ಮಾರುತಯೋಜನೇ ।**
**ಗೋಮೇಧಿಕಸ್ಯ ಸಾಲಸ್ತು ಪೂರ್ವಸಾಲ ಸಮಾಕೃತಿಃ ॥ ೧೪ ॥**

---

ಮಾಡಿ ಶರೀರಗಳನ್ನು ತೊರೆದ ಸಿದ್ಧಜಾತೀಯರೆಲ್ಲರೂ ತಂತಮ್ಮ ಅಂಗನೆಯರೊಡಗೂಡಿ, ಶ್ರೀಲಲಿತಾಮಹಾಮಂತ್ರವನ್ನು ಜಪಿಸುತ್ತ, ಆಕೆಯ ಪೂಜೆಯಲ್ಲಿಯೇ ನೆಲೆಗೊಂಡ ಮನಸ್ಸುಳ್ಳವರಾಗಿ ಆಕೆಯ ನಾಮಕೀರ್ತನವನ್ನೇ ಮಾಡುತ್ತ ವಾಸಿಸುತ್ತಿರುವರು.

೧೦. ಪುಷ್ಪರಾಗಮಣಿಮಯ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಸುತ್ತಲೂ ಚಚ್ಚೌಕವಾಗಿರುವ ಪದ್ಮರಾಗಮಣಿಮಯಪ್ರಾಕಾರವಿರುವುದು. ಈ ಪ್ರಾಕಾರದ ವಾಟಿಕೆಯಲ್ಲಿಯೂ, ಗೋಪುರವೇ ಮೊದಲಾದವುಗಳೆಲ್ಲವೂ ಪದ್ಮರಾಗಮಣಿಮಯವಾಗಿಯೇ ಇರುವುದು.

೧೧. ಚಾರಣಲೋಕದಲ್ಲಿ ದೇಹಾವಸಾನವಾದ ತರುವಾಯ ಸಿದ್ಧಿಯನ್ನು ಪಡೆದ ಶ್ರೀ ಮಹಾರಾಜ್ಞಿಯ ಪಾದಕಮಲ ಸೇವಕರಾದ ಚಾರಣರು ಅಲ್ಲಿ ವಾಸವಾಗಿರುವರು.

೧೨-೧೩. ಸುಂದರಾಂಗಿಯರೂ, ಮಧುಮದಲಾಲಸೆಯರೂ ಆದ ಚಾರಣಸ್ತ್ರಿಯರೂ ಸಹ, ಆ ಪದ್ಮರಾಗಮಣಿವಾಟಿಕೆಯಲ್ಲಿಯೇ, ಶ್ರೀಲಲಿತಾದೇವಿಯ ಮಹಿಮೆಗಳನ್ನು ಕುರಿತ ಹಾಡುಗಳನ್ನಡಿಗಡಿಗೂ ಹಾಡುತ್ತ ಅಲ್ಲಿಯ ಕಲ್ಪವೃಕ್ಷಗಳ ಕೆಳಗಣ ಜಗುಲಿಗಳಲ್ಲಿ ಕುಳಿತು ತಂತಮ್ಮ ಪತಿಗಳೊಡಗೂಡಿ ಮಧುರವಾದ ಮಧುವನ್ನು ಪಾನಮಾಡುತ್ತಿರುತ್ತಾರೆ.

೧೪. ಪದ್ಮರಾಗ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಅದರಂತೆಯೇ ಗೋಮೇಧಿಕಪ್ರಾಕಾರವು ಕಂಗೊಳಿಸುತ್ತಿರುವುದು.

**ತದಂತರೇ ಯೋಗಿನೀನಾಂ ಭೈರವಾಣಾಂಚ ಕೋಟಯಃ ।**
**ಕಾಲಸಂಕರ್ಷಣೀಮೇನಾಂ ಸೇವಂತೇ ತತ್ರ ಮೂರ್ತಯಃ ॥ ೧೫ ॥**
**ಗೋಮೇಧಿಕ ಮಹಾಸಾಲಾಂತರೇ ಮಾರುತ ಯೋಜನೇ ।**
**ಅತಿತುಂಗೋ ಹೀರಸಾಲಸ್ತಯೋರ್ಮಧ್ಯಂ ಚ ಹೀರಭೂಃ ॥ ೧೬ ॥**
**ತತ್ರ ದೇವೀಂ ಸಮಭ್ಯರ್ಚ್ಯ ಪೂರ್ವಜನ್ಮನಿ ಕುಂಭಜ ।**
**ವಸಂತ್ಯಪ್ಸರಸಾಂ ವೃಂದೈಃ ಸಾಕಂ ಗಂಧರ್ವಪುಂಗವಾಃ ।**
**ಮಹಾರಾಜ್ಞೀ ಗುಣಗಣಾನ್ ಗಾಯಂತ್ಯೋ ವಲ್ಲಕೀಸ್ವನೈಃ ॥೧೭॥**
**ಕಾಮಭೋಗೈಕರಸಿಕಾಃ ಕಾಮಸನ್ನಿಭವಿಗ್ರಹಾಃ ।**
**ಸುಕುಮಾರಪ್ರಕೃತಯಃ ಶ್ರೀದೇವೀಭಕ್ತಿಶಾಲಿನಃ ॥ ೧೮ ॥**
**ಊರ್ವಶೀ ಮೇನಕಾಚೈವ ರಂಭಾ ಚಾಲಂಬುಸಾ ತಥಾ ।**
**ಮಂಜುಘೋಷಾ ಸುಕೇಶೀ ಚ ಪೂರ್ವಚಿತ್ತಿರ್ಘೃತಾಚಿಕಾ॥ ೧೯ ॥**

---

೧೫. ಅದರ ಮಣಿವಾಟಿಕೆಯಲ್ಲಿ ಕೋಟ್ಯನುಕೋಟಿ ಯೋಗಿನಿಯರೂ, ಭೈರವ ಮೂರ್ತಿಗಳೂ, ಕಾಲ ಸಂಕರ್ಷಣಿಯಾದ ಶ್ರೀ ಲಲಿತಾದೇವಿಯನ್ನು ಸೇವಿಸುತ್ತಿರುವರು.

೧೬. ಈ ಗೋಮೇಧಿಕ ಮಹಾಮಣಿಮಯ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಬಹಳ ಎತ್ತರವಾದ ಹೀರಕ (ವಜ್ರ)ಮಣಿಮಯ ಪ್ರಾಕಾರವಿರುವುದು. ಈ ಎರಡು ಪ್ರಾಕಾರಗಳ ನಡುವಣ ನೆಲವು ಹೀರಕಮಣಿವಾಟಿಕೆಯು.

೧೭. ಅಯ್ಯಾ ಕುಂಭಜನೇ! ಅಲ್ಲಿ ಹಿಂದಿನ ಜನ್ಮದಲ್ಲಿ ಶ್ರೀದೇವಿಯ ಆರಾಧನೆಯನ್ನು ಬಹು ಚೆನ್ನಾಗಿ ಮಾಡಿ ಪುಣ್ಯವನ್ನು ಗಳಿಸಿದ ಗಂಧರ್ವ ಶ್ರೇಷ್ಠರೆಲ್ಲರೂ ನೆಲಸಿ ಅಪ್ಸರೆಯರ ಸಮೂಹಗಳೊಡಗೂಡಿ, ಶ್ರೀ ಮಹಾರಾಜ್ಞಿಯ ಗುಣಗಳನ್ನೊಳಗೊಂಡ ಹಾಡುಗಳನ್ನು ವೀಣಾನಾದದೊಡನೆ ಬೆರಸಿ ಹಾಡುತ್ತಿರುತ್ತಾರೆ.

೧೮. ಸುಮಶರನಿಗೆ ಸಮಾನವಾದ ಸೌಂದರ್ಯವುಳ್ಳವರೂ, ಸುಕುಮಾರವಾದ ಸ್ವಭಾವವುಳ್ಳವರೂ, ಶ್ರೀ ಲಲಿತಾದೇವಿಯಲ್ಲಿ ಭಕ್ತಿಯುಳ್ಳವರೂ ಆದ ಈ ಗಂಧರ್ವರೆಲ್ಲರೂ ಕಾಮಭೋಗವೊಂದರಲ್ಲಿಯೇ ರಸಿಕರಾಗಿರುತ್ತಾರೆ.

೧೯-೨೨. ಊರ್ವಶಿ, ಮೇನಕೆ, ರಂಭೆ, ಅಲಂಬುಸೆ,

ಕೃತಸ್ಥಲಾಚ ವಿಶ್ವಾಚೀ ಪುಂಜಿಕಸ್ಥಲಯಾ ಸಹ ।
ತಿಲೋತ್ತಮೇತಿ ದೇವಾನಾಂ ವೇಶ್ಯಾ ಏತಾದೃಶೋಽಪರಾಃ ॥೨೦॥
ಗಂಧರ್ವೈಃ ಸಹನವ್ಯಾನಿ ಕಲ್ಪವೃಕ್ಷಮಧೂನಿ ಚ । [ ೨೧ ॥
ಪಿಬಂತ್ಯೋ ಲಲಿತಾದೇವೀಂ ಧ್ಯಾಯಂತ್ಯಶ್ಚ ಮುಹುರ್ಮುಹುಃ ॥
ಸ್ವಸೌಭಾಗ್ಯವಿವೃದ್ಧ್ಯರ್ಥಂ ಗಣಯಂತ್ಯಶ್ಚ ತನ್ಮನುಂ ।
ಚತುರ್ದಶಸು ಚೋತ್ಪನ್ನಾಃ ಸ್ಥಾನೇಷ್ವಪ್ಸರಸೋಽಖಿಲಾಃ ॥
ತತ್ರೈವ ದೇವೀಮರ್ಚಂತ್ಯೋ ವಸಂತಿ ಮುದಿತಾಶಯಾಃ ॥ ೨೨ ॥

ಅಗಸ್ತ್ಯಃ—

ಚತುರ್ದಶಾಪಿ ಜನ್ಮಾನಿ ತಾಸಾಮಪ್ಸರಸಾಂ ವಿಭೋ ।
ಕೀರ್ತಿಯತ್ವಂ ಮಹಾಪ್ರಾಜ್ಞ ಸರ್ವವಿದ್ಯಾಕಲಾನಿಧೇ ॥ ೨೩ ॥

ಹಯಗ್ರೀವಃ—

ಬ್ರಹ್ಮಣೋ ಹೃದಯಂ ಕಾಮೋ ಮೃತ್ಯುರುರ್ವೀ ಚ ಮಾರುತಃ ।
ತಪನಸ್ಯ ಕರಾಶ್ಚಂದ್ರಕರಾ ವೇದಾಶ್ಚ ಪಾವಕಃ ॥ ೨೪ ॥

---

ಮಂಜುಘೋಷೆ, ಸುಕೇಶಿ, ಪೂರ್ವಚಿತ್ತಿ, ಘೃತಾಚಿ, ಕೃತಸ್ಥಲೆ, ವಿಶ್ವಾಚಿ, ಪುಂಜಿಕಸ್ಥಲೆ, ತಿಲೋತ್ತಮೆ ಎಂಬ ದೇವ ವೇಶ್ಯೆಯರೂ, ಇಂಥವರೇ ಆದ ಇತರ ಆ ಹದಿನಾಲ್ಕು ಸ್ಥಾನಗಳಿಂದುದಿಸಿದ ಎಲ್ಲ ಅಪ್ಸರೆಯರೂ ಆ ಹೀರಕಮಣಿಮಯಪ್ರಾಕಾರದಲ್ಲಿ ವಾಸವಾಗಿರುವ ಗಂಧರ್ವರೊಡ ಗೂಡಿ ಹೊಸ ಹೊಸತಾದ ಕಲ್ಪವೃಕ್ಷಗಳ ಮಧುಗಳನ್ನು ಪಾನಮಾಡುತ್ತ, ಅಡಿಗಡಿಗೂ ಶ್ರೀ ಲಲಿತಾದೇವಿಯನ್ನು ಧ್ಯಾನಿಸುತ್ತ, ತಮ್ಮ ಸೌಭಾಗ್ಯದ ಅಭಿವೃದ್ಧಿಗಾಗಿ ಆ ದೇವಿಯ ಮಹಾಮಂತ್ರವನ್ನು ಜಪಿಸುತ್ತ, ಅಲ್ಲಿಯೇ ಆ ದೇವಿಯನ್ನು ಪೂಜಿಸಿ ಈಡೇರಿದ ಸಮಸ್ತ ಮನೋರಥಗಳೂ ಉಳ್ಳವ ರಾಗಿ ನೆಲಸಿರುವರು.

೨೩. ಅಗಸ್ತ್ಯಮುನಿಯು ಕೇಳುತ್ತಾನೆ:—ಹದಿನಾಲ್ಕು ವಿದ್ಯೆಗಳಿಗೂ, ಅರುವತ್ತುನಾಲ್ಕು ಕಲೆಗಳಿಗೂ ನಿಧಿಯಾಗಿರುವ ಎಲೈ ಹಯಗ್ರೀವ ಮುನಿಯೇ! ಮಹಾಪ್ರಾಜ್ಞನಾದ ನೀನು ಅಪ್ಪಣೆಕೊಡಿಸಿದ ಈ ಅಪ್ಸರೆ ಯರ ಹದಿನಾಲ್ಕು ಜನ್ಮಗಳನ್ನೂ ನನಗೆ ತಿಳಿಸುವವನಾಗು.

೨೪-೨೬. ಹಯಗ್ರೀವ ಮುನಿಯು ಹೇಳುತ್ತಾನೆ:—ಅಯ್ಯಾ ತಪಸ್ವಿಯೇ! ಬ್ರಹ್ಮನ ಹೃದಯ, ಕಾಮ, ಮೃತ್ಯು, ಭೂಮಿ, ಮಾರುತ,

ಸೌದಾಮಿನೀಚ ಪೀಯೂಷಂ ದಕ್ಷಕನ್ಯೇ ಜಲಂ ತಥಾ ।
ಜನ್ಮನಃ ಕಾರಣಾನ್ಯೇತಾನ್ಯಾಮನಂತಿ ಮನೀಷಿಣಃ ॥ ೨೫ ॥
ಗೀರ್ವಾಣಪಣ್ಯನಾರೀಣಾಂ ಸ್ಫುರತ್ಸೌಭಾಗ್ಯಸಂಪದಾಂ ।
ಏತಾಃ ಸಮಸ್ತಾ ಗಂಧರ್ವೈಃ ಸಾಕಮರ್ಚಂತಿ ಚಕ್ರಿಣೀಂ ॥ ೨೬ ॥
ಕಿನ್ನರಾಃ ಸಹನಾರೀಭಿಸ್ತಥಾ ಕಿಂಪುರುಷಾ ಮುನೇ ।
ಸ್ತ್ರೀಭಿಃ ಸಹ ಮದೋನ್ಮತ್ತಾ ಹೀರಕಸ್ಥಲಮಾಶ್ರಿತಾಃ ॥ ೨೭ ॥
ಮಹಾರಾಜ್ಞೀಮಂತ್ರಜಪೈರ್ವಿಭೂತಾಶೇಷಕಲ್ಮಷಾಃ ।
ನೃತ್ಯಂತಶ್ಚೈವ ಗಾಯಂತ್ಯೋ ವರ್ತಂತೇ ಕುಂಭಸಂಭವ ॥ ೨೮ ॥
ತತ್ರೈವ ಹೀರಕಕ್ಷೋಣ್ಯಾಂ ವಜ್ರಾನಾಮ ನದೀ ಮುನೇ ।
ವಜ್ರಾಕಾರೈರ್ನಿಬಿಡಿತೈರ್ಭಾಸಮಾನತಟದ್ರುಮೈಃ ॥ ೨೯ ॥
ವಜ್ರರತ್ನೈಃ ಸಿಕತಿಲಾ ವಜ್ರದ್ರವಮಯೋದಕಾ ।
ಸದಾ ವಹತಿ ಸಾಸಿಂಧುಃ ಪರಿತಸ್ತತ್ರ ಪಾವನೀ ॥ ೩೦ ॥

---

ಸೂರ್ಯಕಿರಣಗಳು, ಚಂದ್ರಕಿರಣಗಳು, ವೇದಗಳು, ಅಗ್ನಿ, ಮಿಂಚು, ಅಮೃತ, ದಕ್ಷನ ಕುಮಾರಿಯರೀರ್ವರು, ಜಲ ಎಂಬ ಈ ಹದಿನಾಲ್ಕು ಸ್ಥಾನಗಳು, ಪ್ರಜ್ವಲಿಸುತ್ತಿರುವ ಸೌಭಾಗ್ಯಸಂಪತ್ತನ್ನೊಳಕೊಂಡಿರುವ ದೇವವೇಶ್ಯೆಯರಾದ ಈ ಅಪ್ಸರೆಯರಿಗೆ ಜನ್ಮಕಾರಣಗಳೆಂದು ಹೇಳುತ್ತಾರೆ. ಇವರೆಲ್ಲರೂ ಗಂಧರ್ವರೊಡನೆ ಶ್ರೀ ಚಕ್ರನಿವಾಸಿನಿಯಾದ ಶ್ರೀ ಲಲಿತಾದೇವಿಯನ್ನು ಪೂಜಿಸುತ್ತಿರುತ್ತಾರೆ.

೨೭-೨೮. ಎಲೈ ಕುಂಭಸಂಭವನೇ! ಆ ಹೀರಕಮಣಿವಾಟಿಕೆಯಲ್ಲಿಯೇ ಕಿನ್ನರರೂ, ಕಿಂಪುರುಷರೂ ತಂತಮ್ಮ ಸ್ತ್ರೀಯರೊಡಗೂಡಿ ಮದೋನ್ಮತ್ತರಾಗಿ, ಆ ಮಹಾರಾಜ್ಞಿಯ ಮಂತ್ರವನ್ನು ಜಪಿಸುವುದರಿಂದ ಎಲ್ಲ ಪಾಪಗಳಿಂದಲೂ ದೂರರಾಗಿ ಕುಣಿಯುತ್ತಲೂ, ಹಾಡುತ್ತಲೂ ವಾಸಮಾಡುತ್ತಿರುವರು.

೨೯-೩೦. ಆ ಹೀರಕಮಣಿವಾಟಿಕೆಯಲ್ಲಿಯೇ ವಜ್ರಾ ಎಂಬ ಹೆಸರಿನ ನದಿಯಿರುವುದು. ಆ ನದಿಯು ವಜ್ರಾಕಾರವಾಗಿ ಹೊಳೆಯುತ್ತಿರುವ ವೃಕ್ಷಗಳಿಂದ ದಟ್ಟವಾಗಿ ತುಂಬಿದ ತೀರವುಳ್ಳುದಾಗಿಯೂ, ವಜ್ರರತ್ನಮಯವಾದ ಮರಳುಗಳುಳ್ಳುದಾಗಿಯೂ, ವಜ್ರಮಯವಾದ ಜಲಸಂಪತ್ತಿಯುಳ್ಳುದಾಗಿಯೂ ಕಂಗೊಳಿಸುತ್ತ, ಎಲ್ಲಾ ಕಾಲಗಳಲ್ಲಿಯೂ ಆ ಸ್ಥಳದ ಸುತ್ತಲೂ ಹರಿಯುತ್ತಿರುವುದು.

**ಲಲಿತಾಪರಮೇಶಾನ್ಯಾ ಭಕ್ತಾ ಯೇ ಮಾನವೋತ್ತಮಾಃ ।**
**ತೇ ತಸ್ಯಾ ಉದಕಂ ಪೀತ್ವಾ ವಜ್ರರೂಪಕಲೇವರಾಃ ।**
**ದೀರ್ಘಾಯುಷಶ್ಚ ನೀರೋಗಾ ಭವಂತಿ ಕಲಶೋದ್ಭವ ॥ ೩೧ ॥**
**ಭಂಡಾಸುರೇಣ ಗಲಿತೇ ಮುಕ್ತೇ ವಜ್ರೇ ಶತಕ್ರತುಃ ।**
**ತಸ್ಯಾಸ್ತೀರೇ ತಪಸ್ತೇಪೇ ವಜ್ರೇಶೀಂ ಪ್ರತಿ ಭಕ್ತಿಮಾನ್ ॥ ೩೨ ॥**
**ತಜ್ಜಲಾದುದಿತಾ ದೇವೀ ವಜ್ರಂ ದತ್ವಾ ಬಲದ್ವಿಷೇ ।**
**ಪುನರಂತರ್ದಧೇ ಸೋಽಪಿ ಕೃತಾರ್ಥಃ ಸ್ವರ್ಗಮೇಯಿವಾನ್ ॥ ೩೩ ॥**
**ಅಥ ವಜ್ರಾಖ್ಯಸಾಲಸ್ಯಾಂತರೇ ಮಾರುತಯೋಜನೇ ।**
**ವೈಡೂರ್ಯಸಾಲ ಉತ್ತುಂಗಃ ಪೂರ್ವವದ್ಗೋಪುರಾನ್ವಿತಃ ।**
**ಸ್ಥಲೀ ಚ ತತ್ರವೈಡೂರ್ಯನಿರ್ಮಿತಾ ಭಾಸ್ವರಾಕೃತಿಃ ॥ ೩೪ ॥**
**ಪಾತಾಲವಾಸಿನೋ ಯೇ ಯೇ ಶ್ರೀದೇವ್ಯರ್ಚನಸಾಧಕಾಃ ।**
**ತೇ ಸಿದ್ಧಮೂರ್ತಯಸ್ತತ್ರ ವಸಂತಿ ಮುದಮೇದುರಾಃ ॥ ೩೫ ॥**

---

೩೧. ಎಲೈ ಕುಂಭಸಂಭವನೇ! ಶ್ರೀ ಲಲಿತಾಪರಮೇಶ್ವರಿಯ ಭಕ್ತರಾದ ಮಾನವೋತ್ತಮರೆಲ್ಲರೂ ಈ ವಜ್ರಾನದಿಯ ಜಲವನ್ನು ಕುಡಿದು ವಜ್ರಮಯವಾದ ಶರೀರವುಳ್ಳವರೂ, ದೀರ್ಘಾಯುಗಳೂ, ಆರೋಗ್ಯವಂತರೂ ಆಗುತ್ತಾರೆ.

೩೨-೩೩. ಭಂಡಾಸುರನೊಡನೆ ನಡೆದ ಕಾಳೆಗದಲ್ಲಿ ದೇವೇಂದ್ರನ ವಜ್ರಾಯುಧವು ಆ ದಾನವನ ದೆಸೆಯಿಂದ ಜಾರಿಬಿದ್ದು ಕಳೆದುಹೋಗಲು, ಆತನು ಈ ವಜ್ರಾನದೀತೀರದಲ್ಲಿಯೇ ಭಕ್ತಿಮಂತನಾಗಿ ಶ್ರೀ ವಜ್ರೇಶ್ವರಿಯನ್ನು ಕುರಿತು ತಪಸ್ಸನ್ನು ಮಾಡಿದನು. ಆಗ ದೇವಿಯು ಆ ನದೀಜಲದಿಂದಾವಿರ್ಭವಿಸಿ ಅವನಿಗೆ ವಜ್ರಾಯುಧವನ್ನು ಅನುಗ್ರಹಿಸಿಕೊಟ್ಟು ಅಂತರ್ಧಾನವಾದಳು. ದೇವೇಂದ್ರನೂ ಸಹ ಕೃತಾರ್ಥನಾಗಿ ಮತ್ತೆ ಸ್ವರ್ಗಲೋಕಕ್ಕೆ ಹೊರಟುಹೋದನು.

೩೪. ಇದಾದ ಬಳಿಕ ಆ ವಜ್ರ (ಹೀರಕ)ಮಣಿಮಯ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಹಿಂದಿನವುಗಳಂತೆಯೇ ಗೋಪುರಾದಿಗಳನ್ನೊಳಗೊಂಡು ಉನ್ನತವಾಗಿರುವ ವೈಡೂರ್ಯ ಮಣಿಮಯ ಪ್ರಾಕಾರವಿರುವುದು. ಇಲ್ಲಿನ ವಾಟಿಕೆಯೂ ವೈಡೂರ್ಯಮಣಿಗಳಿಂದ ನಿರ್ಮಿತವಾಗಿ ಪ್ರಜ್ವಲಿಸುತ್ತಿರುವುದು.

೩೫. ಪಾತಾಳಲೋಕದಲ್ಲಿ ಶ್ರೀ ದೇವಿಯನ್ನು ಪೂಜಿಸಿ ಸಾಧಕ

**ಶೇಷಕಾರ್ಕೋಟಕಮಹಾಪದ್ಮವಾಸುಕಿಶಂಖಕಾಃ ।**
**ತಕ್ಷಕಃ ಶಂಖಚೂಡಶ್ಚ ಮಹಾದಂತೋ ಮಹಾಫಣಃ ॥ ೩೬ ॥**
**ಇತ್ಯೇವಮಾದಯಸ್ತತ್ರ ನಾಗಾ ನಾಗಸ್ತ್ರಿಯೋಽಪಿ ಚ ।**
**ಬಲೀಂದ್ರಪ್ರಮುಖಾನಾಂ ಚ ದೈತ್ಯಾನಾಂ ಧರ್ಮವರ್ತಿನಾಂ ॥೩೭॥**
**ಗಣಸ್ತತ್ರ ಸದಾನಾಗೈಃ ಸಾರ್ಧಂ ವಸತಿ ಸಾಂಗನಃ ।**
**ಲಲಿತಾಮಂತ್ರಜಪ್ತಾರೋ ಲಲಿತಾಶಾಸ್ತ್ರದೀಕ್ಷಿತಾಃ ।**
**ಲಲಿತಾಪೂಜಕಾ ನಿತ್ಯಂ ವಸಂತ್ಯಸುರಭೋಗಿನಃ ॥ ೩೮ ॥**
**ತತ್ರ ವೈಡೂರ್ಯಕಕ್ಷ್ಯಾಯಾಂ ನದ್ಯಃ ಶಿಶಿರಪಾಥಸಃ ।**
**ಸರಾಂಸಿ ಮತ್ತಹಂಸಾನಿ ಸಾರಸಾಲಂಕೃತಾನಿ ಚ ॥ ೩೯ ॥**
**ಭವನಾನಿ ಚ ದಿವ್ಯಾನಿ ವೈಡೂರ್ಯಮಣಿಮಂತಿ ಚ ।**
**ತೇಷು ಕ್ರೀಡಂತಿ ತೇ ನಾಗಾ ಅಸುರಾಶ್ಚ ಸಹಾಂಗನಾಃ ॥ ೪೦ ॥**

---

ರಾಗಿರುವ ಸಿದ್ಧಮೂರ್ತಿಗಳೆಲ್ಲರೂ ಮದೋದ್ಧತರಾಗಿ ಈ ವೈಡೂರ್ಯ ಮಣಿವಾಟಿಕೆಯಲ್ಲಿ ವಾಸವಾಗಿರುವರು.

೩೬-೩೮. ಅಯ್ಯಾ ಮುನಿಯೇ! ಆ ವೈಡೂರ್ಯಮಣಿಮಯ ಪ್ರಾಕಾರವಾಟಿಕೆಯಲ್ಲಿ ಪಾತಾಳಲೋಕವಾಸಿಗಳಾದ ಶೇಷ, ಕಾರ್ಕೋಟಕ, ಮಹಾಪದ್ಮ, ವಾಸುಕಿ, ಶಂಖಕ, ತಕ್ಷಕ, ಶಂಖಚೂಡ, ಮಹಾದಂತ, ಮಹಾಫಣ ಮೊದಲಾದ ನಾಗರೂ, ನಾಗಸ್ತ್ರೀಯರೂ ನೆಲಸಿರುವರಲ್ಲದೆ ಧರ್ಮಿಷ್ಠರಾದ ಬಲೀಂದ್ರನೇ ಮೊದಲಾದ ದೈತ್ಯರ ಸಮೂಹಗಳು ತಮ್ಮ ತಮ್ಮ ನಿಜಾಂಗನೆಯರೊಡಗೂಡಿ ನೆಲಸಿರುತ್ತಾರೆ. ಇವರೆಲ್ಲರೂ ಶ್ರೀ ಲಲಿತಾಮಂತ್ರವನ್ನು ಜಪಿಸುತ್ತ, ಆಕೆಯನ್ನು ಕುರಿತ ಶಾಸ್ತ್ರದಲ್ಲಿ ದೀಕ್ಷಿತರಾಗಿ ಯಾವಾಗಲೂ ಆಕೆಯನ್ನೇ ಪೂಜಿಸುತ್ತಿರುವರು.

೩೯-೪೦. ಆ ವೈಡೂರ್ಯಮಣಿಮಯ ವಾಟಿಕೆಯಲ್ಲಿರುವ ನದಿಗಳೆಲ್ಲವೂ ಶೀತಳೋದಕಪೂರಿತಗಳೂ, ಮದಿಸಿದ ಕಲಹಂಸ ಪಕ್ಷಿಗಳಿಂದಲೂ, ಕಮಲಗಳಿಂದಲೂ ತುಂಬಿರುವವುಗಳೂ ಆಗಿರುತ್ತವೆ. ಅಲ್ಲಿರುವ ಭವನಗಳೆಲ್ಲ ದಿವ್ಯಗಳೂ, ವೈಡೂರ್ಯಮಣಿಮಯಗಳೂ ಆಗಿರುತ್ತವೆ. ನಾಗರೂ, ಅಸುರರೂ ಆ ಭವ್ಯಭವನಗಳಲ್ಲಿಯೇ ತಮ್ಮ ತಮ್ಮ ನಿಜಸತಿಯರೊಡಗೂಡಿದವರಾಗಿ ಕ್ರೀಡಿಸುತ್ತಿರುತ್ತಾರೆ.

ವೈಡೂರ್ಯಾಖ್ಯಮಹಾಸಾಲಾಂತರೇ ಮಾರುತಯೋಜನೇ ।
ಇಂದ್ರನೀಲಮಯಃ ಸಾಲಶ್ಚಕ್ರವಾಕ ಇವಾಪರಃ ।
ತನ್ಮಧ್ಯಕಕ್ಷ್ಯಾಭೂಮಿಶ್ಚ ನೀಲರತ್ನಮಯೀ ಮುನೇ ॥ ೪೧ ॥
ತತ್ರ ನದ್ಯಶ್ಚ ಮಧುರಾಃ ಸರಾಂಸಿ ಮಧುರಾಣಿ ಚ ।
ನಾನಾ ವಿಧಾನಿ ವಸ್ತೂನಿ ಭೋಗ್ಯಾನಿ ಸರಸಾನ್ಯಪಿ ॥ ೪೨ ॥
ಯೇ ಭೂಲೋಕಗತಾ ಮರ್ತ್ಯಾ ಲಲಿತಾ ಮಂತ್ರಸಾಧಕಾಃ ।
ತೇ ದೇಹಾಂತೇ ಶಕ್ರನೀಲಕಕ್ಷ್ಯಾಂ ಪ್ರಾಪ್ಯ ವಸಂತಿ ಹಿ ॥ ೪೩ ॥
ತತ್ರ ದಿವ್ಯಾನಿ ವಸ್ತೂನಿ ಭುಂಜಾನಾ ವನಿತಾಸಖಾಃ ।
ಪಿಬಂತೋ ಮಧುರಂ ಮದ್ಯಂ ನೃತ್ಯಂತೋ ಭಕ್ತಿನಿರ್ಭರಾಃ ॥೪೪॥
ಸರಸ್ತಟೇಷು ಸಿಂಧೂನಾಂ ಕೂಲೇಷು ಕಲಶೋದ್ಭವ ।
ಲತಾಗೃಹೇಷು ರಮ್ಯೇಷು ಮಂಡಪೇಷು ಮಹದ್ಧಿಷು ॥ ೪೫ ॥
ಸದಾ ಜಪಂತಃ ಶ್ರೀದೇವೀಂ ವದಂತಶ್ಚಾಪಿ ತದ್ಗುಣಾಃ ।
ನಿವಸಂತಿ ಮಹಾಭಾಗಾ ನಾರೀಭಿಃ ಪರಿವೇಷ್ಟಿತಾಃ ॥ ೪೬ ॥
ಕರ್ಮಕ್ಷಯೇ ಪುನರ್ಯಾಂತಿ ಭೂಲೋಕೇ ಮಾನುಷೀಂ ತನೂಂ।
ಪೂರ್ವವಾಸನಯಾ ಯುಕ್ತಾಃ ಪುನರರ್ಚಂತಿ ಚಕ್ರಿಣೀಂ ॥ ೪೭ ॥

---

೪೧. ಈ ವೈಡೂರ್ಯ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಚಕ್ರವಾಕಗಿರಿಗೆ ಸಮಾನವಾದ ಇಂದ್ರನೀಲಮಣಿಮಯ ಪ್ರಾಕಾರ ವಿರುವುದು. ಇದರ ನಡುವಣ ನೆಲವು ನೀಲರತ್ನ ಮಯವಾಗಿರುವುದು.

೪೨. ಅಲ್ಲಿರುವ ಎಲ್ಲ ನದಿಗಳೂ ಮನೋಹರವಾದುವೇ. ಸರೋವರಗಳೂ ಅಂತೆಯೇ ಮಧುರಗಳಾದವುಗಳು. ಅಲ್ಲಿ ಅನೇಕ ಬಗೆಯ ರಸಭರಿತವಾದ ಭೋಗ್ಯವಸ್ತುಗಳಿರುತ್ತವೆ.

೪೩. ಭೂಲೋಕದಲ್ಲಿ ಶ್ರೀ ಲಲಿತಾಮಂತ್ರಸಾಧಕರಾದ ಮಾನವರು ಯಾರಾರುಂಟೋ ಅವರೆಲ್ಲರೂ ದೇಹಾವಸಾನವಾದ ತರುವಾಯ ಈ ಇಂದ್ರನೀಲಮಣಿಮಯ ಪ್ರಾಕಾರವಾಟಿಕೆಯನ್ನು ಸೇರಿ ಇಲ್ಲಿಯೇ ವಾಸಮಾಡುವರು.

೪೪-೪೭. ಅಲ್ಲಿ, ಆ ಮಾನವೋತ್ತಮರು ಭಕ್ತಿಭರಿತರಾಗಿದ್ದುಕೊಂಡು ದೇವತಾಯೋಗ್ಯಗಳಾದ ವಸ್ತುಗಳನ್ನು ಅನುಭವಿಸುತ್ತ ಮಧುರವಾದ ಮದ್ಯವನ್ನು ಪಾನಮಾಡುತ್ತ ಕುಣಿಯುತ್ತಿರುತ್ತಾರೆ. ಎಲೈ ಕಲಶೋದ್ಭವನೇ! ಪುಣ್ಯಭಾಜನರಾದ ಈ ಮಾನವರೆಲ್ಲರೂ ಆ ಇಂದ್ರನೀಲ

**ಪುನರ್ಯಾಂತಿ ಶ್ರೀನಗರೇ ಶಕ್ರನೀಲಮಹಾಸ್ಥಲೀಂ ।**
**ತತ್ಸ್ಥಲಸ್ಯೈವ ಸಂಪರ್ಕಾದ್ರಾಗದ್ವೇಷಸಮುದ್ಭವೈಃ ।**
**ನೀಲೈರ್ಭಾವೈಃ ಸದಾಯುಕ್ತಾ ವರ್ತಂತೇ ಮನುಜಾ ಮುನೇ ॥೪೮॥**
**ಯೇ ಪುನರ್ಜ್ಞಾನಿನೋ ಮರ್ತ್ಯಾ ನಿರ್ದ್ವಂದ್ವಾ ನಿಯತೇಂದ್ರಿಯಾಃ।**
**ತೇ ಮುನೇ ಚಿನ್ಮಯಾಭೂತ್ವಾ ಪ್ರವಿಶಂತಿ ಮಹೇಶ್ವರೀಂ ॥ ೪೯ ॥**
**ಇಂದ್ರನೀಲಾಖ್ಯ ಸಾಲಸ್ಯಾಂತರೇ ಮಾರುತಯೋಜನೇ ।**
**ಮುಕ್ತಾರತ್ನಮಯಃ ಸಾಲಃ ಪೂರ್ವವದ್ಗೋಪುರಾನ್ವಿತಃ ॥ ೫೦ ॥**
**ಅತ್ಯಂತ ಭಾಸುರಸ್ಸ್ವಚ್ಛಸ್ತಯೋರ್ಮಧ್ಯಸ್ಥಲೀ ಮುನೇ ।**
**ಸರ್ವಾಪಿ ಮುಕ್ತಾಖಚಿತಾ ಶಿಶಿರಾತಿಮನೋಹರಾ ॥ ೫೧ ॥**

---

ಮಣಿವಾಟಿಕೆಯ ಸರೋವರಗಳ ಮತ್ತು ಮಹಾಸಂಪದ್ಯುಕ್ತವಾದ ನದಿಗಳ ತೀರಗಳಲ್ಲಿಯೂ, ಲತಾಗೃಹಗಳಲ್ಲಿಯೂ, ಲತಾಮಂಡಪಗಳಲ್ಲಿಯೂ ಯಾವಾಗಲೂ ಶ್ರೀದೇವಿಯ ಮಂತ್ರವನ್ನು ಜಪಿಸುತ್ತ, ಆಕೆಯ ಗುಣಗಳನ್ನು ಹೊಗಳುತ್ತ ತಂತಮ್ಮ ಸ್ತ್ರೀಯರೊಡಗೂಡಿ ವಾಸಮಾಡುತ್ತಿರುತ್ತಾರೆ. ಇವರೆಲ್ಲರೂ ತಂತಮ್ಮ ಕರ್ಮಕ್ಷಯವಾದ ತರುವಾಯ ಮತ್ತೆ ಭೂಲೋಕಕ್ಕೆ ಬಂದು ಮಾನವ ದೇಹಗಳನ್ನು ಪಡೆಯುತ್ತಾರೆಯಲ್ಲದೆ, ತಮ್ಮ ಹಿಂದಣ ಜನ್ಮಗಳ ವಾಸನೆಯಿಂದ ಪ್ರೇರಿತರಾಗಿ ಮತ್ತೆ ಆ ಜನ್ಮದಲ್ಲಿಯೂ ಶ್ರೀಚಕ್ರನಾಯಕಿಯಾದ ಶ್ರೀಲಲಿತಾ ಪರಮೇಶ್ವರಿಯನ್ನು ಪೂಜಿಸುತ್ತಾರೆ.

೪೮. ಎಲೈ ಮುನಿಯೇ ! ಈ ಪ್ರಕಾರ, ಶ್ರೀದೇವೀಪೂಜಕರಾದ ಆ ಮಾನವರು ಮತ್ತೆಯೂ ಆ ಶ್ರೀಪುರದ ಇಂದ್ರನೀಲಮಣಿವಾಟಿಕೆಗೆ ಬರುವರಲ್ಲದೆ ಆ ಸ್ಥಳದ ಸಂಪರ್ಕದಿಂದಲೇ ರಾಗದ್ವೇಷಗಳಿಂದುಂಟಾದ ನೀಲಭಾವದಿಂದ ಯಾವಾಗಲೂ ಕೂಡಿದವರಾಗಿಯೇ ಇರುತ್ತಾರೆ.

೪೯. ಕಾಮಕ್ರೋಧವೇ ಮೊದಲಾದ ದ್ವಂದ್ವಗಳಿಂದ ದೂರರಾಗಿ ಜಿತೇಂದ್ರಿಯರಾಗಿಯೂ, ಜ್ಞಾನಿಗಳಾಗಿಯೂ ಇರುವ ಮಾನವರು, ಚಿನ್ಮಯರಾಗಿ (ಜ್ಞಾನರೂಪಿಗಳಾಗಿ) ಶ್ರೀಲಲಿತಾಪರಮೇಶ್ವರಿಯಲ್ಲಿಯೇ ಸೇರಿಹೋಗುತ್ತಾರೆ.

೫೦. ಇಂದ್ರನೀಲಮಣಿಮಯಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಮುಕ್ತಾಮಣಿಮಯ ಪ್ರಾಕಾರವು ಹಿಂದಿನಂತೆಯೇ ಗೋಪುರ ಸಹಿತವಾಗಿ ಕಂಗೊಳಿಸುತ್ತಿರುವುದು.

೫೧. ಎಲೈ ಮುನಿಯೇ ! ಅವೆರಡರ ನಡುವಣ ನೆಲವಾದ ಮುಕ್ತಾ

**ತಾಮ್ರಪರ್ಣೀ ಮಹಾಪರ್ಣೀ ಸದಾಮುಕ್ತಾ ಸದೋದಕಾ ।**
**ಏವಮಾದ್ಯಾ ಮಹಾನದ್ಯೋ ವಹಂತ್ಯತ್ರ ಮಹಾಸ್ಥಲೇ ॥ ೫೨ ॥**
**ತಾಸಾಂ ತೀರೇಷು ಸರ್ವೇಽಪಿ ದೇವಲೋಕನಿವಾಸಿನಃ ।**
**ವಸಂತಿ ಪೂರ್ವಜನುಷಿ ಶ್ರೀದೇವೀಮಂತ್ರಸಾಧಕಾಃ ॥ ೫೩ ॥**
**ಪೂರ್ವಾದ್ಯಷ್ಟಸು ಭಾಗೇಷು ಲೋಕಾಃ ಶಕ್ರಾದಿಗೋಚರಾಃ ।**
**ಮುಕ್ತಾಸಾಲಸ್ಯ ಪರಿತಃ ಸಂಯುಜ್ಯ ದ್ವಾರದೇಶಕಾನ್ ॥ ೫೪ ॥**
**ಮುಕ್ತಾಸಾಲಸ್ಯ ನೀಲಸ್ಯ ದ್ವಾರಯೋರ್ಮಧ್ಯದೇಶತಃ ।**
**ಪೂರ್ವಭಾಗೇ ಶಕ್ರಲೋಕಸ್ತತ್ಕೋಣೇ ವಹ್ನಿಲೋಕಭೂಃ ॥ ೫೫ ॥**
**ಯಾಮ್ಯಭಾಗೇ ಯಮಪುರಂ ತತ್ರದಂಡಧರಃ ಪ್ರಭುಃ ।**
**ಸದಾ ಶ್ರೀ ದೇವತಾಮಂತ್ರಜಾಪೀ ತೀವ್ರಸ್ವಭಾವವಾನ್ ॥ ೫೬ ॥**
**ಆಜ್ಞಾಧರೋ ಯಮಭಟೈಶ್ಚಿತ್ರಗುಪ್ತಪುರೋಗಮೈಃ ।**
**ಸಾರ್ಧಂ ನಿಷೀಡಯತ್ಯೇವ ಶ್ರೀದೇವೀಸಮಯದ್ರುಹಃ ॥ ೫೭ ॥**

---

ಮಣಿವಾಟಿಕೆಯು ಬಹಳವಾದ ಹೊಳಪಿನಿಂದ ಕೂಡಿ, ಅತಿ ನಿರ್ಮಲವಾಗಿರುವುದಲ್ಲದೆ, ಅದೆಲ್ಲವೂ ಮುತ್ತುಗಳಿಂದ ಕೆತ್ತಿದುದಾಗಿ ಬಹು ಶೀತಳವಾಗಿಯೂ, ಮನೋಹರವಾಗಿಯೂ ಇರುವುದು.

೫೨. ಆ ಮಹಾಪ್ರದೇಶದಲ್ಲಿ ತಾಮ್ರಪರ್ಣಿ, ಮಹಾಪರ್ಣಿ, ಸದಾಮುಕ್ತಾ, ಸದೋದಕಾ, ಎಂಬಿವೇ ಮೊದಲಾದ ಮಹಾನದಿಗಳು ಯಾವಾಗಲೂ ಪ್ರವಹಿಸುತ್ತಿರುವುವು.

೫೩. ಪೂರ್ವಜನ್ಮಗಳಲ್ಲಿ ಶ್ರೀ ಲಲಿತಾದೇವೀಮಂತ್ರಸಾಧಕರಾದ ದೇವಲೋಕ ನಿವಾಸಿಗಳೆಲ್ಲರೂ ಅವುಗಳ ತೀರಗಳಲ್ಲಿಯೇ ವಾಸ ಮಾಡುತ್ತಿರುವರು.

೫೪. ದ್ವಾರಪ್ರದೇಶಗಳೊಡಗೂಡಿದ ಈ ಮುಕ್ತಾಮಣಿಮಯ ಪ್ರಾಕಾರದ ಪೂರ್ವವೇ ಮೊದಲಾದ ಎಂಟು ದಿಕ್ಕುಗಳಲ್ಲಿಯೂ ಇಂದ್ರ ಲೋಕವೇ ಮೊದಲಾದ ದಿವ್ಯಲೋಕಗಳು ಕಾಣುತ್ತಿರುವುವು.

೫೫-೫೭. ಮುಕ್ತಾಮಣಿಮಯ ಮತ್ತು ಇಂದ್ರನೀಲಮಣಿಮಯ ಪ್ರಾಕಾರಗಳ ದ್ವಾರಗಳ ನಡುವಣ ಪ್ರದೇಶದ ಪೂರ್ವಭಾಗದಲ್ಲಿ ಇಂದ್ರಲೋಕವೂ, ಅದರ ಮೂಲೆಯಲ್ಲಿ ಅಗ್ನಿಲೋಕವೂ, ಅದರ ಯಾಮ್ಯಭಾಗದಲ್ಲಿಯೇ ಯಮಪುರವೂ ಇರುವುದು. ಆ ಯಮಪುರದಲ್ಲಿ ಯಾದರೋ ಯಾವಾಗಲೂ ಶ್ರೀದೇವೀಮಂತ್ರವನ್ನು ಜಪಿಸುತ್ತಿರು

**ಗುರುಶಪ್ತಾನ್ ದುರಾಚಾರಾನ್ ಲಲಿತಾದ್ವೇಷಕಾರಿಣಃ ।**
**ಕೂಟಭಕ್ತಿಕರಾನ್‌ಮೂರ್ಖಾಂಸ್ತಬ್ಧಾನತ್ಯಂತದರ್ಪಿತಾನ್ ॥ ೫೮ ॥**
**ಮಂತ್ರಚೋರಾನ್ ಕುಮಂತ್ರಾಂಶ್ಚ ಕುವಿದ್ಯಾಧರ್ಮಮಾಶ್ರಿತಾನ್।**
**ನಾಸ್ತಿಕಾನ್ ಪಾಪಶೀಲಾಂಶ್ಚ ತಥೈವ ಪ್ರಾಣಿಹಿಂಸಕಾನ್ ॥ ೫೯ ॥**
**ಸ್ತ್ರೀದ್ವಿಷ್ಟಾನ್ ಲೋಕವಿದ್ವಿಷ್ಟಾನನ್ಯಾನಪಿ ಚ ಪಾಪಿನಃ ।**
**ಕಾಲಸೂತ್ರೇ ರೌರವೇ ಚ ಕುಂಭೀಪಾಕೇ ಚ ಕುಂಭಜ ॥ ೬೦ ॥**
**ಅಸಿಪತ್ರವನೇ ಘೋರೇ ಕೃಮಿಭಕ್ಷ್ಯೇ ಪ್ರತಾಪನೇ ।**
**ಜ್ವಾಲಾಭಕ್ಷ್ಯೇ ಸೂಚಿವೇಧೇ ತಥೈವಾಂಗಾರತಾಪನೇ ॥ ೬೧ ॥**
**ಏವಮಾದಿಷು ಕಷ್ಟೇಷು ನರಕೇಷು ಘಟೋದ್ಭವ ।**
**ಪಾತಯುತ್ಯಾಜ್ಞಯಾ ತಸ್ಯಾಃ ಶ್ರೀದೇವ್ಯಾಃ ಸುಮಹೌಜಸಃ ॥ ೬೨ ॥**

---

ವವನೂ, ಬಹಳ ಕ್ರೂರವಾದ ಸ್ವಭಾವವುಳ್ಳವನೂ ಶ್ರೀದೇವಿಯ ಅಪ್ಪಣೆಯನ್ನು ಶಿರಸಾ ತಾಳಿರುವವನೂ, ಪ್ರಭುವೂ ಆದ ದಂಡಧರನು (ಯಮನು) ತನ್ನ ಭಟರಾದ ಚಿತ್ರಗುಪ್ತನೇ ಮೊದಲಾದವರೊಡಗೂಡಿ ಶ್ರೀದೇವಿಯನ್ನು ಕುರಿತ ನಿಬಂಧನೆಗಳಿಗೆ ದ್ರೋಹವನ್ನೆಣಿಸುವವರೆಲ್ಲ ರನ್ನೂ ಪೀಡಿಸುವವನಾಗಿ ನೆಲಸಿರುತ್ತಾನೆ.

೫೮-೬೨. ಎಲೈ ಕುಂಭಸಂಭವನೇ! ಆ ಯಮಧರ್ಮನು ಗುರುಗಳಿಂದ ಶಾಪಗೊಂಡವರು, ದುರಾಚಾರರು, ಶ್ರೀಲಲಿತಾದೇವಿಯನ್ನು ದ್ವೇಷಿಸುವವರು, ಆಕೆಯಲ್ಲಿ ಕಪಟಭಕ್ತಿಯನ್ನು ಮಾಡುವವರು, ಮೂರ್ಖರು, ಮೊಂಡರು, ಬಹಳವಾಗಿ ಕೊಬ್ಬಿದವರು, ಶ್ರೀದೇವೀ ಮಂತ್ರಗಳನ್ನು ಕದಿಯುವವರು, ಕೆಟ್ಟ ಮಂತ್ರಗಳು ಕೆಟ್ಟ ವಿದ್ಯೆಗಳು ಕೆಟ್ಟ ಧರ್ಮಗಳು ಮೊದಲಾದವುಗಳನ್ನು ಆಶ್ರಯಿಸಿದವರು, ನಾಸ್ತಿಕರು, ಪಾಪಿಷ್ಠರು, ನಿಷ್ಪ್ರಯೋಜನವಾಗಿ ಪ್ರಾಣಿಹಿಂಸೆಯನ್ನು ಮಾಡುವವರು, ಸ್ತ್ರೀಯರನ್ನು ದ್ವೇಷಿಸುವವರು, ಲೋಕವನ್ನೇ ದ್ವೇಷಿಸುವವರು, ಇನ್ನೂ ಇತರ ಪಾಪಿಗಳು ಇವರೆಲ್ಲರನ್ನೂ ಮಹಾಶಕ್ತಿಯಾದ ಶ್ರೀ ಲಲಿತಾದೇವಿಯ ಆಜ್ಞೆಯಿಂದ ಕಾಲಸೂತ್ರ, ರೌರವ, ಕುಂಭೀಪಾಕ, ಅಸಿಪತ್ರವನ, ಘೋರವಾದ ಕೃಮಿಭಕ್ಷ್ಯ, ಪ್ರತಾಪನ, ಜ್ವಾಲಾಭಕ್ಷ್ಯ, ಸೂಚೀವೇಧ, ಅಂಗಾರತಾಪನ, ಮೊದಲಾದ ಕಷ್ಟತರವಾದ ನರಕಗಳಲ್ಲಿ ಕೆಡವುತ್ತಾನೆ.

**ತಸ್ಯೈವ ಪಶ್ಚಿಮೇ ಭಾಗೇ ನಿರ್ಋತಿಃ ಖಡ್ಗಧಾರಕಃ ।**
**ರಾಕ್ಷಸಂ ಲೋಕಮಾಶ್ರಿತ್ಯ ವರ್ತತೇ ಲಲಿತಾರ್ಚಕಃ ॥ ೬೩ ॥**
**ತಸ್ಯ ಚೋತ್ತರಭಾಗೇ ತು ದ್ವಾರಯೋರಂತರಸ್ಥಲೇ ।**
**ವಾರುಣಂ ಲೋಕಮಾಶ್ರಿತ್ಯ ವರುಣೋ ವರ್ತತೇ ಸದಾ ॥ ೬೪ ॥**
**ವಾರುಣ್ಯಾಸ್ವಾದನೋನ್ಮತ್ತಃ ಶುಭ್ರಾಂಗೋ ಝಷವಾಹನಃ ।**
**ಸದಾ ಶ್ರೀದೇವತಾಮಂತ್ರಜಾಪೀ ಶ್ರೀಕ್ರಮಸಾಧಕಃ ॥ ೬೫ ॥**
**ಶ್ರೀದೇವತಾದರ್ಶನಸ್ಯ ದ್ವೇಷಿಣಃ ಪಾಶಬಂಧನೈಃ ।**
**ಬಧ್ವಾನಯನ್ನಧೋಮಾರ್ಗಂ ಭಕ್ತಾನಾಂ ಬಂಧಮೋಚಕಃ ॥ ೬೬ ॥**
**ತಸ್ಯ ಚೋತ್ತರ ಕೋಣೇ ತು ವಾಯುಲೋಕೋ ಮಹಾದ್ಯುತಿಃ ।**
**ತತ್ರ ವಾಯುಶರೀರಾಶ್ಚ ಸದಾನಂದಮಹೋದಯಾಃ ॥ ೬೭ ॥**
**ಸಿದ್ಧಾ ದಿವ್ಯರ್ಷಯಶ್ಚೈವ ಪವನಾಭ್ಯಾಸಿನೋಽಪರೇ ।**
**ಗೋರಕ್ಷಪ್ರಮುಖಾಶ್ಚಾನ್ಯೇ ಯೋಗಿನೋ ಯೋಗತತ್ಪರಾಃ ॥೬೮॥**
**ಏತೈಃ ಸಹ ಮಹಾಸತ್ವಸ್ತತ್ರ ಶ್ರೀಮಾರುತೇಶ್ವರಃ ।**
**ಧ್ವಜಹಸ್ತೋ ಮೃಗವರೇ ವಾಹನೇ ಮಹತಿ ಸ್ಥಿತಃ ॥ ೬೯ ॥**
**ಲಲಿತಾಜಪನಿಧ್ಯಾನ ಕ್ರಮಪೂಜನತತ್ಪರಃ ।**
**ಸಪ್ತಧಾ ಭಿನ್ನಮೂರ್ತಿಶ್ಚ ವರ್ತತೇ ಕುಂಭಸಂಭವ ॥ ೭೦ ॥**

---

೬೩-೬೬. ಆ ಯಮಪುರಿಯ ಪಶ್ಚಿಮಭಾಗದಲ್ಲಿಯೇ ನಿರ್ಋತಿ ಲೋಕವಿರುವುದು. ಆ ರಾಕ್ಷಸಲೋಕವನ್ನಾಶ್ರಯಿಸಿರುವ ಖಡ್ಗಧರನಾದ ನಿರ್ಋತಿಯು ಶ್ರೀ ಲಲಿತಾದೇವಿಯನ್ನು ಪೂಜಿಸುತ್ತಿರುವನು. ಆ ನಿರ್ಋತಿ ಲೋಕದ ಉತ್ತರಭಾಗದಲ್ಲಿ ಎರಡೂ ಬಾಗಿಲುಗಳ ನಡುವಣ ಪ್ರದೇಶದಲ್ಲಿರುವ ವರುಣಲೋಕದಲ್ಲಿ ವರುಣದೇವನು ಯಾವಾಗಲೂ ವಾಸವಾಗಿರುವನು. ಶುಭ್ರಾಂಗನೂ, ಮೀನವಾಹನನೂ ಆದ ಈ ವರುಣನು ಯಾವಾಗಲೂ ಶ್ರೀದೇವೀಮಂತ್ರವನ್ನು ಜಪಿಸುತ್ತ, ಶ್ರೀ ಕ್ರಮವನ್ನು ಸಾಧಿಸುತ್ತಿರುವನಲ್ಲದೆ, ಶ್ರೀದೇವಿಯ ದರ್ಶನಕ್ಕೆ ದ್ವೇಷಿಗಳಾದವರನ್ನು ಪಾಶಗಳಿಂದ ಬಿಗಿದು ಅಧೋಗತಿಗೆಳೆಯುತ್ತಲೂ, ಶ್ರೀದೇವೀಭಕ್ತರ ಬಂಧಗಳನ್ನು ಬಿಡಿಸುತ್ತಲೂ ಇರುತ್ತಾನೆ.

೬೭-೭೦. ಎಲೈ ಕುಂಭಸಂಭವನೇ ! ಈ ವರುಣಲೋಕಕ್ಕೆ ಉತ್ತರ ಕೋಣದಲ್ಲಿ ಬಹಳ ಪ್ರಕಾಶಮಾನವಾದ ವಾಯುಲೋಕವಿರುವುದು. ಅಲ್ಲಿ ವಾಯುಶರೀರಿಗಳೂ, ಯಾವಾಗಲೂ ಸಂತೋಷವುಳ್ಳವರೂ,

**ಇಡಾಚ ಪಿಂಗಲಾ ಚೈವ ಸುಷುಮ್ನಾ ತಸ್ಯ ಶಕ್ತಯಃ ।**
**ತಿಸ್ರೋ ಮಾರುತನಾಥಸ್ಯ ಸದಾ ಮಧುಮದಾಲಸಾಃ ॥**
**ಆನಂದ ಪೂರಿತಾಂಗೀಭಿರನ್ಯಾಭಿಃ ಶಕ್ತಿಭಿರ್ವೃತಃ ।**
**ಸ ಮಾರುತೇಶ್ವರಃ ಶ್ರೀಮಾನ್ ಸದಾ ಜಪತಿ ಚಕ್ರಿಣೀಂ ॥ ೭೧ ॥**
**ಯೇನ ಸತ್ವೇನ ಕಲ್ಪಾಂತೇ ತ್ರೈಲೋಕ್ಯಂ ಸಚರಾಚರಂ ।**
**ಪರಾಗಮಯತಾಂ ನೀತ್ವಾ ವಿನಾಶಯಂತಿ ತಕ್ಷಣಾತ್ ॥ ೭೨ ॥**
**ತಸ್ಯ ಸತ್ವಸ್ಯ ವೃದ್ಧ್ಯರ್ಥಂ ತಾಮೇವ ಲಲಿತೇಶ್ವರೀಂ ।**
**ಪೂಜಯನ್ ಭಾವಯನ್ನಾಸ್ತೇ ಸರ್ವಾಭರಣಭೂಷಿತಾಂ ॥ ೭೩ ॥**
**ತಲ್ಲೋಕಪೂರ್ವಭಾಗಸ್ಥೇ ಯಕ್ಷಲೋಕೇ ಮಹಾದ್ಯುತಿಃ ।**
**ಯಕ್ಷೇಂದ್ರೋ ವಸತಿ ಶ್ರೀಮಾಂಸ್ತದ್ವಾರದ್ವಂದ್ವಮಧ್ಯಗಃ ॥೭೪॥**

---

ಮಹೋದಯರೂ, ದೇವರ್ಷಿಗಳೂ, ಇತರ ವಾಯು ಭಕ್ಷಣಶೀಲರೂ ಇರುತ್ತಾರೆ. ಗೋರಕ್ಷನೇ ಮೊದಲಾದ ಯೋಗಾಭ್ಯಾಸಿಗಳೂ ಇಲ್ಲಿಯೇ ಇರುವರು. ಮಹಾಪರಾಕ್ರಮಶಾಲಿಯಾದ ಶ್ರೀ ಮಾರುತೇಶ್ವರನು ಧ್ವಜಹಸ್ತನೂ, ಮಹತ್ತರ ಮೃಗವಾಹನನೂ ಆಗಿ ಈ ಎಲ್ಲ ಮಹಾತ್ಮ ರೊಡಗೂಡಿ ಏಳು ಬಗೆಯ ಆಕಾರಗಳುಳ್ಳವನಾಗಿ ಶ್ರೀ ಲಲಿತಾದೇವಿಯ ಜಪ ಧ್ಯಾನ ಕ್ರಮ ಪೂಜೆಗಳಲ್ಲಿ ಆಸಕ್ತನಾಗಿ ನೆಲಸಿರುವನು.

೭೧. ಯಾವಾಗಲೂ ಮಧುಮದಾಲಸೆಯರಾದ ಇಡಾ, ಪಿಂಗಲಾ, ಸುಷುಮ್ನಾ ಎಂಬ ಈ ಮೂವರೂ ಆ ಮಾರುತನಾಥನ ಮೂವರು ಶಕ್ತಿದೇವಿಯರು. ಆನಂದ ತುಂಬಿ ಉಬ್ಬಿದ ಮೈಯುಳ್ಳವರಾದ ಇತರ ಶಕ್ತಿದೇವಿಯರಿಂದಲೂ ಸುತ್ತುಬಳಸಲಾದ ಕಾಂತಿಮಂತನಾದ ಆ ಮಾರುತೇಶ್ವರನು ಯಾವಾಗಲೂ ಶ್ರೀ ಚಕ್ರವಾಸಿನಿಯನ್ನು ಜಪಿಸುತ್ತಿರುವನು.

೭೨-೭೩. ಈ ಮಾರುತೇಶ್ವರನು, ಕಲ್ಪಾವಸಾನ ಸಮಯದಲ್ಲಿ ಚರಾಚರಾತ್ಮಕವಾದ ಮೂರು ಲೋಕಗಳನ್ನೂ ಯಾವ ಶಕ್ತಿಯಿಂದ ಧೂಳೀಮಯವನ್ನಾಗಿ ಮಾಡಿ ನಾಶಗೊಳಿಸುವನೋ, ಆ ಶಕ್ತಿಯ ಬೆಳವಣಿಗೆಗಾಗಿಯೇ ಆ ಲೋಕದಲ್ಲಿ ನೆಲಸಿ ಶ್ರೀ ಲಲಿತಾಪರಮೇಶ್ವರಿಯನ್ನು ಪೂಜಿಸುತ್ತಲೂ, ಸರ್ವಾಭರಣಭೂಷಿತೆಯಾದ ಆಕೆಯನ್ನೇ ಭಕ್ತಿಯಿಂದ ಭಾವಿಸುತ್ತಲೂ ವಾಸವಾಗಿರುತ್ತಾನೆ.

೭೪-೭೭. ಆ ಮಾರುತಲೋಕದ ಪೂರ್ವಭಾಗದಲ್ಲಿರುವ ಯಕ್ಷ

**ನಿಧಿಭಿಶ್ಚ ನವಾಕಾರೈ ಋದ್ಧಿವೃದ್ಧ್ಯಾದಿಶಕ್ತಿಭಿಃ ।**
**ಸಹಿತೋ ಲಲಿತಾಭಕ್ತಾನ್ ಪೂರಯನ್ ಧನಸಂಪದಾ ॥ ೭೫ ॥**
**ಯಕ್ಷಿಣೀಭಿಶ್ಚ ಮನೋಜ್ಞಾಭಿರನುಕೂಲಪ್ರವೃತ್ತಿಭಿಃ ।**
**ವಿವಿಧೈರ್ಮಧುಭೇದೈಶ್ಚ ಸಂಪೂಜಯತಿ ಚಕ್ರಿಣೀಂ ॥ ೭೬ ॥**
**ಮಣಿಭದ್ರಃ ಪೂರ್ಣಭದ್ರೋ ಮಣಿಮಾನ್ಮಣಿಕಂಧರಃ ।**
**ಇತ್ಯೇವಮಾದಯೋ ಯಕ್ಷಸೇನಾನ್ಯಸ್ತತ್ರ ಸಂತಿ ವೈ ॥ ೭೭ ॥**
**ತಲ್ಲೋಕಪೂರ್ವಭಾಗೇ ತು ರುದ್ರಲೋಕೋ ಮಹೋದಯಃ ।**
**ಅನರ್ಘರತ್ನಖಚಿತಸ್ತತ್ರ ರುದ್ರೋಽಧಿದೇವತಾ ॥ ೭೮ ॥**
**ಸದೈವ ಮನ್ಯುನಾ ದೀಪ್ತಃ ಸದಾಬದ್ಧಮಹೇಷುಧಿಃ ।**
**ಅಧಿಜ್ಯಂ ಚ ಧನುರ್ಬಿಭ್ರಜ್ಜ್ವಲತ್ಪಿಂಗಲಲೋಚನಃ ॥ ೭೯ ॥**
**ಜಟಾಮುಕುಟಶೋಭಾಢ್ಯಃ ಸರ್ವಾಭರಣಭೂಷಿತಃ ।**
**ಸ್ವಸಮಾನೈರ್ಮಹಾಸತ್ವೈರ್ಲೋಕನಿರ್ದಾಹದಕ್ಷಿಣೈಃ ॥ ೮೦ ॥**
**ಅಧಿಜ್ಯಕಾರ್ಮುಕೈರ್ದಕ್ಷೈಃ ಷೋಡಶಾವರಣಸ್ಥಿತೈಃ ।**
**ಆವೃತಃ ಸತತಂ ವಕ್ತ್ರೇ ಜಪನ್ ಶ್ರೀದೇವತಾಮನುಂ ॥ ೮೧ ॥**
**ಶ್ರೀದೇವೀಧ್ಯಾನಸಂಪನ್ನಃ ಶ್ರೀದೇವೀಪೂಜನೋತ್ಸುಕಃ ।**
**ಅನೇಕಕೋಟಿ ರುದ್ರಾಣೀ ಗಣಮಂಡಿತಪಾರ್ಶ್ವಭೂಃ ॥ ೮೨ ॥**

---

ಲೋಕದಲ್ಲಿ ಯಕ್ಷೇಶ್ವರನಾದ ಕುಬೇರನು ಹಿಂದೆ ಹೇಳಿದ ಎರಡೂ ಬಾಗಿಲುಗಳ ನಡುವೆ ನೆಲಸಿ ನವನಿಧಿ ಸಹಿತನಾಗಿ ಋದ್ಧಿ ವೃದ್ಧಿ ಮೊದಲಾದ ತನ್ನ ಶಕ್ತಿದೇವಿಯರೊಡಗೂಡಿ ಶ್ರೀ ಲಲಿತಾದೇವಿಯ ಭಕ್ತರಿಗೆ ಧನ ಸಂಪದವನ್ನು ಕರುಣಿಸುತ್ತ, ತನಗೆ ಅನುಕೂಲವಾದ ನಡತೆಯುಳ್ಳ ಸುಂದರಿಯರಾದ ಯಕ್ಷಿಣಿಯರೊಡಗೂಡಿ, ಅನೇಕ ಬಗೆಯ ಮದ್ಯಗಳಿಂದ ಶ್ರೀಚಕ್ರೇಶ್ವರಿಯನ್ನು ಪೂಜಿಸುತ್ತಿರುವನು. ಮಣಿಭದ್ರ, ಪೂರ್ಣಭದ್ರ, ಮಣಿಮಂತ, ಮಣಿಕಂಧರರೇ ಮೊದಲಾದ ಯಕ್ಷಸೇನಾ ನಾಯಕರೂ ಆ ಯಕ್ಷಲೋಕದಲ್ಲಿಯೇ ವಾಸವಾಗಿರುವರು.

೭೮-೮೨. ಅಯ್ಯಾ ಕುಂಭಸಂಭವನೇ! ಆ ಕುಬೇರನ ಯಕ್ಷ ಲೋಕಕ್ಕೆ ಪೂರ್ವಭಾಗದಲ್ಲಿಯೇ ಮಹೋದಯವಾದ ರುದ್ರಲೋಕವು ಇರುವುದು. ಇದು ಅಮೂಲ್ಯವಾದ ರತ್ನಗಳಿಂದ ಖಚಿತವಾದುದು. ಈ ಲೋಕಕ್ಕೆ ರುದ್ರನೇ ಅಧಿದೇವನು. ಈ ರುದ್ರದೇವನಾದರೋ ಯಾವಾಗಲೂ ಕೋಪದಿಂದ ಪ್ರಜ್ವಲಿಸುತ್ತ, ಬಿಗಿದ ಬತ್ತಳಿಕೆಯುಳ್ಳ

ತಾಶ್ಚ ಸರ್ವಾಃ ಪ್ರದೀಪ್ತಾಂಗ್ಯೋ ನವಯೌವನಗರ್ವಿತಾಃ ।
ಲಲಿತಾಧ್ಯಾನನಿರತಾ ಸದಾಸವಮದಾಲಸಾಃ ॥ ೮೩ ॥
ತಾಭಿಶ್ಚ ಸಾಕಂ ಸ ಶ್ರೀಮಾನ್ ಮಹಾರುದ್ರಸ್ತ್ರಿಶೂಲಭೃತ್ ।
ಹಿರಣ್ಯಬಾಹುಪ್ರಮುಖೈರನ್ಯೈ ರುದ್ರೈರ್ನಿಷೇವಿತಃ ॥ ೮೪ ॥
ಲಲಿತಾದರ್ಶನಭ್ರಷ್ಟಾನುದ್ಧತಾನ್ ಗುರುಧಿಕ್ಕೃತಾನ್ ।
ಶೂಲಕೋಟ್ಯಾ ವಿನಿರ್ಭಿದ್ಯ ನೇತ್ರೋತ್ಥೈಃ ಕಟುಪಾವಕೈಃ ॥ ೮೫ ॥
ದಹಂಸ್ತೇಷಾಂ ಪಶೂನ್ ಭೃತ್ಯಾನ್ ಪ್ರಜಾಶ್ಚೈವ ವಿನಾಶಯನ್ ।
ಆಜ್ಞಾಧರೋ ಮಹಾವೀರೋ ಲಲಿತಾಜ್ಞಾಪ್ರವರ್ತಕಃ ॥
ರುದ್ರಲೋಕೇಽತಿರುಚಿರೇ ವರ್ತತೇ ಕುಂಭಸಂಭವ ॥ ೮೬ ॥

---

ವನೂ, ನಾರಿಯನ್ನು ಬಿಗಿಸಿ ಸಿದ್ಧಗೊಳಿಸಿದ ಧನುಸ್ಸನ್ನು ಧರಿಸಿರುವವನೂ, ಹಳದಿಯ ಕಂಗಳುಳ್ಳವನೂ, ಜಟಾಕಿರೀಟದಿಂದಧಿಕವಾಗಿ ಶೋಭಿಸುತ್ತಿರುವವನೂ, ಸರ್ವಾಭರಣ ಭೂಷಿತನೂ ಆಗಿ ತನ್ನಂತೆಯೇ ಮಹಾಬಲಶಾಲಿಗಳೂ, ಲೋಕವನ್ನು ಸುಡುವ ಸಾಮರ್ಥ್ಯವುಳ್ಳವರೂ, ಶಿಂಜಿನಿಯನ್ನು ಬಿಗಿಸಿಕಟ್ಟಿ ಸಿದ್ಧಗೊಳಿಸಿದ ಬಿಲ್ಲುಗಳುಳ್ಳವರೂ, ಮಹಾಪರಾಕ್ರಮಿಗಳೂ ಆಗಿ ಷೋಡಶಾವರಣಗಳಲ್ಲಿ ನೆಲಸಿರುವ ಇತರ ರುದ್ರರಿಂದ ಪರಿವೃತನಾಗಿ ಯಾವಾಗಲೂ ಬಾಯಿಯಲ್ಲಿ ಶ್ರೀದೇವೀ ಮಂತ್ರವನ್ನು ಜಪಿಸುತ್ತಿರುವನು. ಶ್ರೀದೇವಿಯ ಧ್ಯಾನವುಳ್ಳವನೂ, ಆಕೆಯ ಪೂಜೆಯಲ್ಲಿ ಉತ್ಸಾಹವುಳ್ಳವನೂ ಆದ ಈ ಮಹಾರುದ್ರನ ಅಕ್ಕಪಕ್ಕಗಳಲ್ಲಿ ಅನೇಕ ಕೋಟಿ ಸಂಖ್ಯಾಕರಾದ ರುದ್ರಾಣಿಯರಿರುವರು.

೮೩-೮೬. ಈ ರುದ್ರಾಣಿಯರೆಲ್ಲರೂ ಪ್ರಜ್ವಲಿಸುತ್ತಿರುವ ಶರೀರಗಳುಳ್ಳವರು; ಹೊಸ ಜವ್ವನದಿಂದ ಕೊಬ್ಬಿದವರು ; ಎಲ್ಲರೂ ಶ್ರೀಲಲಿತಾ ಧ್ಯಾನದಲ್ಲಿಯೇ ನಿರತರಾದವರು. ಯಾವಾಗಲೂ ಮಧುಪಾನದಿಂದುದಿಸಿದ ಮತ್ತಿನಿಂದ ಅಲಸೆಯರಾದವರು. ಎಲೈ ಕುಂಭಸಂಭವನೇ! ತ್ರಿಶೂಲಧಾರಿಯೂ ಮಹಾತೇಜಸ್ವಿಯೂ ಆದ ಮಹಾರುದ್ರನು ಈ ರುದ್ರಾಣಿಯರೆಲ್ಲರೊಡಗೂಡಿ, ಹಿರಣ್ಯಬಾಹುವೇ ಮೊದಲಾದ ಇತರ ರುದ್ರರ ಸೇವೆಯನ್ನು ಕೈಕೊಳ್ಳುತ್ತ ಶ್ರೀ ಲಲಿತಾದೇವಿಯ ದರ್ಶನದಿಂದ ಭ್ರಷ್ಟರಾದವರನ್ನೂ, ದುರಹಂಕಾರಿಗಳನ್ನೂ, ಗುರುಗಳಿಂದ ಧಿಕ್ಕಾರಗೊಂಡವರನ್ನೂ, ಶೂಲಾಯುಧದ ತುದಿಯಿಂದ ಸೀಳಿ ತನ್ನ ಕಣ್ಣುಗಳಿಂದೆದ್ದ ಉರಿಗಳಿಂದ ಸುಡುವುದು ಮಾತ್ರವಲ್ಲದೆ, ಅವರ ಪಶುಗಳನ್ನೂ, ಆಳು

**ಮಹಾರುದ್ರಸ್ಯ ತಸ್ಯರ್ಷೇ ಪರಿವಾರಾಃ ಪ್ರಮಾಥಿನಃ । [ ೮೭ ॥**
**ಯೇ ರುದ್ರಾಸ್ತಾನಸಂಖ್ಯಾತಾನ್‌ಕೋವಾವಕ್ತುಂ ಪಟುರ್ಭವೇತ್॥**
**ಯೇ ರುದ್ರಾ ಅಧಿ ಭೂಮ್ಯಾಂ ಚ ಸಹಸ್ರಾಣಾಂ ಸಹಸ್ರಶಃ ।**
**ಯೇಽಂತರಿಕ್ಷೇ ಚ ವರ್ತಂತೇ ಸಹಸ್ರಾಣಾಂ ಸಹಸ್ರಶಃ ।**
**ದಿವಿ ಯೇಪಿ ಚ ವರ್ತಂತೇ ಸಹಸ್ರಾಣಾಂ ಸಹಸ್ರಶಃ ॥ ೮೮ ॥**
**ಯೇಷಾಮನ್ನಮಿಷುಶ್ಚೈವ ಯೇಷಾಂ ವಾತಾಸ್ತಥೇಷವಃ ।**
**ಯೇಷಾಂ ಚ ವರ್ಷಮಿಷವಃ ಪ್ರದೀಪ್ತಾಃ ಪಿಂಗಲೇಕ್ಷಣಾಃ ॥೮೯॥**
**ಅರ್ಣವೇ ಚಾಂತರಿಕ್ಷೇ ಚ ವರ್ತಮಾನಾ ಮಹೌಜಸಃ ।**
**ಜಟಾವಂತೋ ಧನುಷ್ಮಂತೋ ನೀಲಗ್ರೀವಾ ವಿಲೋಹಿತಾಃ ॥೯೦॥**
**ಯೇ ಭೂತಾನಾಮಧಿಭುವೋ ವಿಶಿಖಾಸಃ ಕಪರ್ದಿನಃ ।**
**ಯೇತ್ವನ್ನೇಷು ವಿವಿಧ್ಯಂತಿ ಪಾತ್ರೇಷು ಪಿಬತೋಜನಾನ್ ॥ ೯೧ ॥**
**ಯೇ ಪಥಾಂ ರಕ್ಷಕಾ ರುದ್ರಾ ಯೇ ಚ ತೀರ್ಥನಿವಾಸಿನಃ ।**
**ಸಹಸ್ರಸಂಖ್ಯಾ ಯೇಚಾನ್ಯೇ ಸೃಕಾವಂತೋ ನಿಷಂಗಿಣಃ ॥ ೯೨ ॥**

---

ಗಳನ್ನೂ, ಮಕ್ಕಳುಗಳನ್ನೂ ನಾಶಗೊಳಿಸುತ್ತ ಶ್ರೀ ಲಲಿತಾದೇವಿಯ ಆಜ್ಞೆಯನ್ನು ಧರಿಸಿ ಅದನ್ನೇ ನಡೆಯಿಸುವವನಾಗಿ ಬಹು ಮನೋಹರವಾದ ಆ ರುದ್ರಲೋಕದಲ್ಲಿಯೇ ವಾಸವಾಗಿರುವನು.

೮೭-೮೮. ಎಲೈ ಋಷಿಯೇ! ಎಲ್ಲವನ್ನೂ ಮಥಿಸುವಂತಹ ಆ ಮಹಾರುದ್ರನ ಪರಿವಾರದವರಾಗಿರುವ ರುದ್ರರು ಲೆಕ್ಕವಿಲ್ಲದಷ್ಟುಮಂದಿ. ಅವರ ಹೆಸರುಗಳನ್ನು ಹೇಳಲು ಯಾರು ತಾನೇ ಸಮರ್ಥರಾದಾರು! ಪಾತಾಳದಲ್ಲಿಯೂ, ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ, ದೇವಲೋಕದಲ್ಲಿಯೂ ಸಹಸ್ರಾರುಗಳಾಗಿ ನೆಲಸಿರುವ ಆ ರುದ್ರ ದೇವತೆಗಳ ನಾಮಧೇಯಗಳನ್ನು ಹೇಳಲು ಯಾರುತಾನೆ ಸಮರ್ಥರಾದಾರು?

೮೯-೯೬. ಯಾವ ರುದ್ರರಿಗೆ ಅನ್ನವೇ ಬಾಣಗಳೋ, ವಾಯುವೂ ವರ್ಷವೂ ಬಾಣಗಳೆಯೋ ಆ ರುದ್ರರೆಲ್ಲರೂ ಪಿಂಗಳೇಕ್ಷಣರಾಗಿ ಪ್ರಜ್ವಲಿಸುತ್ತಿರುವರು. ಸಮುದ್ರಗಳಲ್ಲಿಯೂ, ಅಂತರಿಕ್ಷದಲ್ಲಿಯೂ ಇರುವ ಮಹಾರುದ್ರರು ಮಹೌಜಸರೂ, ಜಟಾವಂತರೂ, ಧನುರ್ಧರರೂ, ನೀಲಗ್ರೀವರೂ, ವಿಲೋಹಿತರೂ ಆಗಿ ಪ್ರಕಾಶಿಸುತ್ತಿರುವರು. ಯಾವ ರುದ್ರರು ಸಮಸ್ತಭೂತಗಳಿಗೂ ಅಧಿಪತಿಗಳಾಗಿರುವರೋ ಆರುದ್ರರು ವಿಶಿಖಿಗಳೂ ಕಪರ್ದಿಗಳೂ ಆಗಿರುವರು. ಯಾರು ಅನ್ನಗಳಲ್ಲಿ ಗೂಢವಾಗಿ ನೆಲಸಿರು

**ಲಲಿತಾಜ್ಞಾಪ್ರಣೇತಾರೋ ದಿಶೋ ರುದ್ರಾ ವಿತಸ್ಥಿರೇ ।**
**ತೇ ಸರ್ವೇ ಸುಮಹಾತ್ಮಾನಃ ಕ್ಷಣಾದ್ವಿಶ್ವತ್ರಯಿಾದಹಾಃ ॥ ೯೩ ॥**
**ಶ್ರೀದೇವೀಧ್ಯಾನನಿಷ್ಣಾತಾನ್ ಶ್ರೀದೇವೀಮಂತ್ರಜಾಪಿನಃ ।**
**ಶ್ರೀದೇವತಾಯಾಂ ಭಕ್ತಾಂಶ್ಚ ಪಾಲಯಂತಿ ಕೃಪಾಲವಃ ॥ ೯೪ ॥**
**ಷೋಡಶಾವರಣಂ ಚಕ್ರಂ ಮುಕ್ತಾಪ್ರಾಕಾರಮಂಡಲೇ ।**
**ಆಶ್ರಿತ್ಯ ರುದ್ರಾಸ್ತೇ ಸರ್ವೇ ಮಹಾರುದ್ರಂ ಮಹೋದಯಂ ॥ ೯೫ ॥**
**ಹಿರಣ್ಯಬಾಹುಪ್ರಮುಖಾ ಜ್ವಲನ್ಮನ್ಯುಮುಪಾಸತೇ ।**
**ಇತಿ ತೇ ರತ್ನ ಸಾಲಸ್ಥಾಃ ಕಕ್ಷ್ಯಾಸ್ತತ್ರ ಸ್ಥಿತಾ ಅಪಿ ।**
**ಸಂಕ್ಷೇಪತೋ ಮಯಾ ಪ್ರೋಕ್ತಾ ಮುಕ್ತಾಖ್ಯಾವರಣಾವಧಿ ॥ ೯೬ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ**
**ಸಂವಾದೇ ಶ್ರೀ ಲಲಿತೋಪಾಖ್ಯಾನೇ**
**ಸಪ್ತವಿಂಶೋಽಧ್ಯಾಯಃ**

---

ವರೋ, ಯಾರು ಅನ್ನ ವೈಷಮ್ಯವೇ ಮೊದಲಾದವುಗಳಿಂದ ವ್ಯಾಧಿಗಳನ್ನುಂಟುಮಾಡಿ ಜನಗಳನ್ನು ಪೀಡಿಸುತ್ತಾರೆಯೋ, ಯಾರು ಹಾಲು ನಿರುಗಳಲ್ಲಿ ರಹಸ್ಯವಾಗಿ ನೆಲಸಿ ಜನಗಳನ್ನು ಬಾಧಿಸುತ್ತಾರೆಯೋ, ಯಾವ ರುದ್ರರು ಮಾರ್ಗಸಂರಕ್ಷಕರೂ, ತೀರ್ಥನಿವಾಸಿಗಳೂ ಆಗಿರುವರೋ ಸಹಸ್ರಾರು ಮಂದಿಯಾದ ಆ ರುದ್ರರು ಸೃಕಾವಂತರೂ, ನಿಷಂಗಿಗಳೂ ಆಗಿ ಶ್ರೀ ಲಲಿತಾದೇವಿಯ ಆಜ್ಞಾಪ್ರವರ್ತಕರಾಗಿ ದಿಕ್ಕುವಿದಿಕ್ಕುಗಳಲ್ಲಿಯೂ ನೆಲಸಿ ಒಂದು ಕ್ಷಣ ಮಾತ್ರದಲ್ಲಿಯೇ ಈ ಜಗತ್ತೆಲ್ಲವನ್ನೂ ಸುಡಲು ಸಮರ್ಥರಾಗಿ, ಶ್ರೀದೇವಿಯ ಧ್ಯಾನದಲ್ಲಿಯೇ ನಿರತರಾಗಿ, ಆಕೆಯ ಮಂತ್ರವನ್ನೇ ಜಪಿಸುತ್ತ ಆ ದೇವಿಯ ಭಕ್ತರನ್ನು ಪಾಲಿಸುವ ಕೃಪಾವಂತರಾಗಿ ರುದ್ರಲೋಕದಲ್ಲಿರುವ ಆ ಷೋಡಶಾವರಣಚಕ್ರದಲ್ಲಿ ನೆಲಸಿ, ಮುಕ್ತಾಮಣಿಮಯ ಪ್ರಾಕಾರದಲ್ಲಿರುವ ಶ್ರೀ ಮಹಾರುದ್ರನನ್ನು ಆಶ್ರಯಿಸಿರುತ್ತಾರೆ. ಎಲೈ ಕುಂಭಸಂಭವನೇ! ಈ ರೀತಿ ರತ್ನಸಾಲದಲ್ಲಿರುವ ಕಕ್ಷ್ಯೆಗಳನ್ನೂ ಅಲ್ಲಿ ವಾಸಮಾಡುವ ದೇವತೆಗಳನ್ನೂ ಮುಕ್ತಾಮಣಿಮಯಪ್ರಾಕಾರದವರೆಗೆ ಸಂಕ್ಷೇಪವಾಗಿ ನಿನಗೆ ತಿಳಿಸಿರುತ್ತೇನೆ.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದಲ್ಲಿ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಾವಿಂಶೋಽಧ್ಯಾಯಃ

[ಶ್ರೀರುದ್ರ ಬ್ರಹ್ಮ ವಿಷ್ಣು ಶಿವಲೋಕರತ್ನಮಯ ಪ್ರಾಕಾರ ನಿರೂಪಣಂ]

ಲೋಕಃ ಪದ್ಮಭವಸ್ಯ ವಿದ್ರುಮನಿಭೋ ಮಾಣಿಕ್ಯರೂಪೋ ಹರೇಃ
ನಾನಾರತ್ನ ಸುರಂಜಿತಸ್ತು ವಿಮಲೋ ಶಂಭೋಃ ಪರಸ್ತಾತ್ಪರಃ ।
ಏತೇ ಕಾರಣಪೂರುಷಾಃ ಪರಶಿವಾಂ ಕಾಮೇಶವಾಮಾಂಕಗಾಂ
ಸೇವಂತೇ ಲಲಿತಾಂಬಿಕಾಂ ಭಗವತೀಂ ತಾಂ ವೈ ಭಜೇ ಮಾತರಂ ॥

ಅಗಸ್ತ್ಯಃ—

**ಷೋಡಶಾವರಣಂ ಚಕ್ರಂ ಕಿಂ ತದ್ರುದ್ರಾಧಿದೈವತಂ ।**
**ತತ್ರ ಸ್ಥಿತಾಶ್ಚರುದ್ರಾಃ ಕೇ ಕೇನ ನಾಮ್ನಾ ಪ್ರಕೀರ್ತಿತಾಃ ॥ ೧ ॥**
**ಕೇಷ್ವಾವರಣಬಿಂಬೇಷು ಕಿಂ ನಾಮಾನೋ ವಸಂತಿ ತೇ ।**
**ಯೌಗಿಕಂ ರೌಢಿಕಂ ನಾಮ ತೇಷಾಂ ಬ್ರೂಹಿ ಕೃಪಾನಿಧೇ ॥ ೨ ॥**

ಹಯಗ್ರೀವಃ—

**ತತ್ರ ರುದ್ರಾಲಯಃ ಪ್ರೋಕ್ತೋ ಮುಕ್ತಾಜಾಲಸಮನ್ವಿತಃ ।**
**ಪಂಚಯೋಜನ ವಿಸ್ತಾರಸ್ತತ್ಸಂಖ್ಯಾಯಾಮಶೋಭಿತಃ ॥ ೩ ॥**
**ಷೋಡಶಾವರಣೈರ್ಯುಕ್ತೋಮಧ್ಯೇ ಪೀಠಮನೋಹರಃ ।**
**ಮಧ್ಯಪೀಠೇ ಮಹಾರುದ್ರೋ ಜ್ವಲನ್ಮನ್ಯುಸ್ತ್ರಿಲೋಚನಃ ॥ ೪ ॥**

---

## ಕನ್ನಡದ ಅನುವಾದ

[ಶ್ರೀರುದ್ರ ಬ್ರಹ್ಮ ವಿಷ್ಣು ಶಿವಲೋಕರತ್ನಮಯ ಪ್ರಾಕಾರ ನಿರೂಪಣ]

೧-೨. ಅಗಸ್ತ್ಯಮುನಿಯು ಕೇಳುತ್ತಾನೆ:— ಎಲೈ ಕೃಪಾನಿಧಿಯಾದ ಹಯಗ್ರೀವ ಮುನಿಯೇ! ಮಹಾರುದ್ರನೇ ಅಧಿದೇವತೆಯಾಗಿರುವ ಷೋಡಶಾವರಣಚಕ್ರವೆಂದರೇನು? ಅಲ್ಲಿರುವ ರುದ್ರರಾರು? ಅವರೆಲ್ಲರೂ ಯಾವ ಯಾವ ಹೆಸರುಗಳಿಂದ ಕೀರ್ತಿತರಾಗಿರುವರು? ಯಾವ ಯಾವ ಆವರಣಬಿಂಬಗಳಲ್ಲಿ ಯಾವ ಯಾವ ಹೆಸರುಗಳಿಂದ ನೆಲಗೊಂಡಿರುವರು? ಯೌಗಿಕವಾಗಿಯೂ, ರೂಢಿಕವಾಗಿಯೂ ಇರುವ ಅವರ ಹೆಸರುಗಳೆಲ್ಲವನ್ನೂ ನನಗೆ ಅಪ್ಪಣೆಕೊಡಿಸಬೇಕು.

೩-೪. ಹಯಗ್ರೀವ ಮುನಿಯು ಹೇಳುತ್ತಾನೆ:—ಎಲೈ ಕುಂಭಸಂಭವನೇ! ಆ ಮುಕ್ತಾಮಣಿಮಯಪ್ರಾಕಾರದಲ್ಲಿ ಐದು ಯೋಜನಗಳ

**ಸಜ್ಜಕಾರ್ಮುಕಹಸ್ತಶ್ಚ ಸರ್ವದಾ ವರ್ತತೇ ಮುನೇ ।**
**ತ್ರಿಕೋಣೇ ಕಥಿತಾರುದ್ರಾಸ್ತ್ರಯ ಏವ ಘಟೋದ್ಭವ ।**
**ಹಿರಣ್ಯಬಾಹುಃ ಸೇನಾನೀರ್ದಿಶಾಂಪತಿರಥಾಪರಃ ॥ ೫ ॥**
**ವೃಕ್ಷಾಶ್ಚ ಹರಿಕೇಶಾಶ್ಚ ತಥಾ ಪಶುಪತಿಃ ಪರಃ ।**
**ಸಸ್ಪಿಂಜರಸ್ತ್ವಿಷೀಮಾಂಶ್ಚ ಪಥೀನಾಂಪತಿರೇವ ಚ ॥ ೬ ॥**
**ಏತೇ ಷಟ್ಕೋಣಗಾಃ ಕಿಂಚ ಬಭ್ರುಶಾಸ್ತ್ವಷ್ಟಕೋಣಗೇ ।**
**ವಿವ್ಯಾಧ್ಯನ್ನಪತಿಶ್ಚೈವ ಹರಿಕೇಶೋಪವೀತಿನೌ ॥**
**ಪುಷ್ಟಾನಾಂಪತಿರಪ್ಯನ್ಯೋ ಭವೋ ಹೇತಿಸ್ತಥೈವ ಚ ॥ ೭ ॥**
**ದಶಪತ್ರೇ ತ್ವಾವರಣೇ ಪ್ರಥಮೋ ಜಗತಾಂಪತಿಃ ।**
**ರುದ್ರಾತತಾವಿನೌ ಕ್ಷೇತ್ರಪತಿಃ ಸೂತಸ್ತಥಾಪರಃ ॥ ೮ ॥**
**ಅಹಂತ್ಯೋಽನ್ಯೋ ವನಪತೀ ರೋಹಿತಃ ಸ್ಥಪತಿಸ್ತಥಾ ।**
**ವೃಕ್ಷಾಣಾಂಪತಿರಪ್ಯನ್ಯ ಏತೇ ಸಜ್ಜಶರಾಸನಾಃ ॥ ೯ ॥**

---

ವಿಸ್ತಾರವೂ, ಅದೇ ಸಂಖ್ಯೆಯ ಯೋಜನಗಳ ಉದ್ದವೂ ಆಗಿ, ಷೋಡಶಾವರಣಗಳಿಂದ ಕೂಡಿ ಮಧ್ಯದಲ್ಲಿರುವ ಪೀಠದಿಂದ ಮನೋಹರವಾಗಿರುವ ರುದ್ರಲೋಕವು ಕಂಗೊಳಿಸುತ್ತಿರುವುದು. ಆ ಮಧ್ಯಪೀಠದಲ್ಲಿಯೇ ಪ್ರಜ್ವಲಿಸುತ್ತಿರುವ ಕೋಪವುಳ್ಳವನೂ, ತ್ರಿಲೋಚನನೂ, ಸಿದ್ಧಗೊಳಿಸಿದ ಬಿಲ್ಲುಳ್ಳವನೂ ಆದ ಮಹಾರುದ್ರನು ಯಾವಾಗಲೂ ನೆಲಸಿರುತ್ತಾನೆ. ಅಲ್ಲಿಯ ತ್ರಿಕೋಣಗಳಲ್ಲಿರುವ ರುದ್ರರು ಮೂವರೆಂದು ಹೇಳಲಾಗಿರುವುದು. ಅವರೇ ಹಿರಣ್ಯಬಾಹು, ಸೇನಾನಿ, ದಿಕ್ಪತಿ ಎಂಬವರು.

೬-೭. ವೃಕ್ಷರು, ಹರಿಕೇಶರು, ಪಶುಪತಿ, ಸಸ್ಪಿಂಜರ, ತ್ವಿಷೀಮಂತ, ಪಥಿಪತಿ ಎಂಬ ಈ ಆರು ಮಂದಿಯೂ ಷಟ್ಕೋಣಗಳಲ್ಲಿ ಕಂಗೊಳಿಸುತ್ತಿರುವರು. ಅಷ್ಟಕೋಣಗಳಲ್ಲಿಯಾದರೊ ಬಭ್ರುಶ, ವಿವ್ಯಾಧಿ, ಅನ್ನಪತಿ, ಹರಿಕೇಶ, ಉಪವೀತಿ, ಪುಷ್ಟಪತಿ, ಭವ, ಹೇತಿ ಎಂಬ ಎಂಟು ಮಂದಿ ರುದ್ರರಿರುತ್ತಾರೆ.

೮-೯. ದಶಪತ್ರಕಮಲಾವರಣದಲ್ಲಿಯಾದರೊ ಮೊದಲನೆಯವನು ಜಗತ್ಪತಿ, ಆಮೇಲೆ ರುದ್ರ, ಆತತಾವೀ, ಕ್ಷೇತ್ರಪತಿ, ಸೂತ, ಅಹಂತ್ಯ, ವನಪತಿ, ರೋಹಿತ, ಸ್ಥಪತಿ, ವೃಕ್ಷಪತಿ ಎಂಬ ಹತ್ತು ಮಂದಿ ರುದ್ರರಿರುವರು. ಇವರೆಲ್ಲರೂ ಸಿದ್ಧಗೊಳಿಸಿದ ಧನುಸ್ಸನ್ನು ಧರಿಸಿರುತ್ತಾರೆ.

ಮಂತ್ರೀ ಚ ವಾಣಿಜಶ್ಚೈವ ತಥಾ ಕಕ್ಷಪತಿಃ ಪರಃ ।
ಭುವಂತಿಸ್ತು ಚತುರ್ಥಃ ಸ್ಯಾತ್ಪಂಚಮೋ ವಾರಿವಸ್ಕೃತಃ ॥ ೧೦ ॥
ಓಷಧೀನಾಂ ಪತಿಶ್ಚೈವ ಷಷ್ಠಃ ಕಲಶಸಂಭವ ।
ಉಚ್ಚೈರ್ಘೋಷಾಕ್ರಂದಯಂತೌ ಪತ್ತೀನಾಂಚ ಪತಿಸ್ತಥಾ ॥ ೧೧ ॥
ಕೃತ್ಸ್ನವೀತಿಶ್ಚ ಧಾವಂಶ್ಚ ಸತ್ವಾನಾಂ ಪತಿರೇವಚ ।
ಏತೇ ದ್ವಾದಶ ಪತ್ರಸ್ಥಾಃ ಪಂಚಮಾವರಣ ಸ್ಥಿತಾಃ ॥ ೧೨ ॥
ಸಹಮಾನಶ್ಚ ನಿವ್ಯಾಧಿರಾವ್ಯಾಧಿ ನಿಪತಿಸ್ತಥಾ ।
ಕಕುಭಶ್ಚ ನಿಷಂಗೀ ಚ ಸ್ತೇನಾನಾಂ ಚ ಪತಿಸ್ತಥಾ ॥ ೧೩ ॥
ನಿಷಂಗೀಸ್ಯಾದಿಷುಧಿಮಾಂಸ್ತಸ್ಕರಾಣಾಂಪತಿಸ್ತಥಾ ।
ವಂಚಶ್ಚ ಪರಿವಂಚಶ್ಚ ಸ್ತಾಯೂನಾಂ ಚ ಪತಿಸ್ತಥಾ ।
ನಿಚೇರುಶ್ಚೇತಿ ವಿಜ್ಞೇಯಾಃ ಷಷ್ಠಾವರಣ ದೇವತಾಃ ॥ ೧೪ ॥
ಆದ್ಯಃ ಪರಿಚರೋಽರಣ್ಯಪತಿಃ ಕಿಂಚ ಸೃಕಾವೃಧಃ ।
ಜಿಘಾಂಸಂತೋ ಮುಷ್ಣತಾಂ ಚ ಪತಯಃ ಕುಂಭಸಂಭವ ॥ ೧೫ ॥
ಅಸಿಮಂತಶ್ಚ ಸುಪ್ರಾಜ್ಞ ತಥಾನಕ್ತಂಚರಾ ಮುನೇ ।
ಪ್ರಕೃಂತಾನಾಂ ಪತಿಶ್ಚೈವ ಉಷ್ಣೀಷೀ ಚ ಗಿರಿಂಚರಃ ॥ ೧೬ ॥
ಕುಲುಂಚಾಣಾಂಪತಿಶ್ಚೈವೇಷುಮಂತಶ್ಚ ಕುಂಭಜ ।
ಧನ್ವಾವಿನಶ್ಚಾತನ್ವಾನಾಃ ಪ್ರತಿಪೂರ್ವದಧಾನಕಾಃ ।
ಆಯಚ್ಛಂತಃ ಷೋಡಶೈತೇ ಷೋಡಶಾರನಿವಾಸಿನಃ ॥ ೧೭ ॥

---

೧೦-೧೨. ಮಂತ್ರೀ, ವಾಣಿಜ, ಕಕ್ಷಪತಿ, ಭುವಂತಿ, ವಾರಿವಸ್ಕೃತ, ಓಷಧೀಪತಿ, ಉಚ್ಚೈರ್ಘೋಷ, ಆಕ್ರಂದಯಂತ, ಪತ್ತೀಪತಿ, ಕೃತ್ಸ್ನವೀತ, ಧಾವಂತ, ಸತ್ವಪತಿ ಎಂಬ ದ್ವಾದಶರುದ್ರರೂ ದ್ವಾದಶ ಪತ್ರದ ಪಂಚಮಾವರಣದಲ್ಲಿ ನೆಲಸಿರುವರು.

೧೩-೧೪. ಸಹಮಾನ, ನಿವ್ಯಾಧಿ, ಆವ್ಯಾಧಿ, ನಿಪತಿ, ಕಕುಭ, ನಿಷಂಗಿ, ಸ್ತೇನಪತಿ, ನಿಷಂಗಿ, ಇಷುಧಿಮಂತ, ತಸ್ಕರಪತಿ, ವಂಚ, ಪರಿವಂಚ, ಸ್ತಾಯುಪತಿ, ನಿಚೇರು ಎಂಬ ರುದ್ರರು ಆರನೆಯ ಆವರಣದ ದೇವತೆಗಳು.

೧೫-೧೭. ಎಲೈ ಮಹಾಪ್ರಾಜ್ಞನಾದ ಕುಂಭೋದ್ಭವ ಮುನಿಯೇ! ಪರಿಚರ, ಅರಣ್ಯಪತಿ, ಸೃಕಾವೃಧ, ಜಿಘಾಂಸತ್ಪತಿ, ಮುಷ್ಣತ್ಪತಿ, ಅಸಿಮಂತ, ನಕ್ತಂಚರ, ಪ್ರಕೃಂತಪತಿ, ಉಷ್ಣೀಷಿ, ಗಿರಿಚರ,

**ವಿಸೃಜಂತಸ್ತಥಾಸ್ಯಂತೋ ವಿಧ್ಯಂತಶ್ಚಾಪಿ ಸಿಂಧುಪ ।**
**ಆಸೀನಾಶ್ಚ ಶಯಾನಾಶ್ಚ ಸ್ವಪಂತೋ ಜಾಗ್ರತಸ್ತಥಾ ॥ ೧೮ ॥**
**ತಿಷ್ಠಂತಶ್ಚೈವ ಧಾವಂತಃ ಸಭಾಶ್ಚೈವ ಸಭಾಧಿಪಾಃ ।**
**ಅಶ್ವಾಶ್ಚೈವಾಶ್ವಪತಯ ಆವ್ಯಾಧಿನ್ಯಸ್ತಥೈವಚ ॥ ೧೯ ॥**
**ವಿವಿಧ್ಯಂತಶ್ಚೋಗಣಾಶ್ಚ ತೃಂಹತ್ಯೋ ವಿಂಧ್ಯಮರ್ದನ ।**
**ಗೃತ್ಸಾಶ್ಚಾಷ್ಟಾದಶವಿಧಾ ದೇವತಾ ಅಷ್ಟಮಾವೃತೌ ॥ ೨೦ ॥**
**ಅಥ ಗೃತ್ಸಪತಿಶ್ಚೈವ ವ್ರಾತಾ ವ್ರಾತಪತಿಸ್ತಥಾ ।**
**ಗಣಾಶ್ಚ ಗಣಪಾಶ್ಚೈವ ವಿರೂಪಾ ವಿಶ್ವರೂಪಕಾಃ ॥ ೨೧ ॥**
**ಮಹಾಂತಃ ಕ್ಷುಲ್ಲಕಾಶ್ಚೈವ ರಥಿನಶ್ಚಾರಥಾಃ ಪರೇ ।**
**ರಥಾಶ್ಚ ರಥಪತ್ಯಾಖ್ಯಾಃ ಸೇನಾಃ ಸೇನಾನಯಸ್ತಥಾ ॥ ೨೨ ॥**
**ಕ್ಷತ್ತಾರಃ ಸಂಗ್ರಹೀತಾರಸ್ತಕ್ಷಾಣೋ ರಥಕಾರಕಾಃ ।**
**ಕುಲಾಲಶ್ಚೇತಿ ರುದ್ರಾಸ್ತೇ ನವಮಾವೃತಿದೇವತಾಃ ॥**
**ರುದ್ರಾಸ್ತ್ವೇತೇ ವಿಶ್ವರೂಪಾ ವಿಂಶತ್ಪತ್ರೇಷ್ವವಸ್ಥಿತಾಃ ॥ ೨೩ ॥**

---

ಕುಲುಂಚಪತಿ, ಇಕ್ಷುಮಂತ, ಧನ್ವಾವಿನ, ಆತನ್ವಾನ, ಪ್ರತಿದಧಾನಕ, ಆಯಚ್ಛಂತ ಎಂಬ ಈ ಹದಿನಾರು ಮಂದಿಯೂ ಷೋಡಶಾರದಲ್ಲಿ ವಾಸವಾಗಿರುವರು.

೧೮-೨೦. ವಿಸೃಜಂತರು, ಅಸ್ಯಂತರು, ವಿಧ್ಯಂತರು, ಆಸೀನರು, ಶಯಾನರು, ಸ್ವಪಂತರು, ಜಾಗ್ರತರು, ತಿಷ್ಠಂತರು, ಧಾವಂತರು, ಸಭರು, ಸಭಾಪತಿಗಳು, ಅಶ್ವರು, ಅಶ್ವಪತಿಗಳು, ಆವ್ಯಾಧಿಗಳು, ವಿವಿಧ್ಯಂತರು, ಉಗಣರು, ತೃಂಹತರು; ಗೃತ್ಸರು ಎಂಬ ಹದಿನೆಂಟು ಬಗೆಯ ರುದ್ರದೇವತೆಗಳು ಅಷ್ಟಮಾವರಣದಲ್ಲಿ ವಾಸಮಾಡುತ್ತಿರುವರು.

೨೧-೨೩. ಇವರಾದ ತರುವಾಯ ಗೃತ್ಸಪತಿ, ವ್ರಾತ, ವ್ರಾತಪತಿ, ಗಣರು, ಗಣಪತಿಗಳು, ವಿರೂಪರು, ವಿಶ್ವರೂಪರು, ಮಹಾಂತರು, ಕ್ಷುಲ್ಲಕರು, ರಥಿಕರು, ಅರಥರು, ರಥರು, ರಥಪತಿಗಳು, ಸೇನರು, ಸೇನಾನಿಗಳು, ಕ್ಷತ್ತಾರರು, ಸಂಗ್ರಹೀತರು, ತಕ್ಷಾಣರು, ರಥಕಾರಕರು, ಕುಲಾಲರು ಎಂಬ ಈ ರುದ್ರರೆಲ್ಲರೂ ಒಂಬತ್ತನೆಯ ಆವರಣದಲ್ಲಿರುವ ದೇವತೆಗಳು. ವಿಶ್ವರೂಪರಾದ ಈ ರುದ್ರರೆಲ್ಲರೂ ಇಪ್ಪತ್ತು ದಳಗಳಲ್ಲಿ ವಾಸವಾಗಿರುವರು.

ಕರ್ಮಾರಾಶ್ಚೈವ ಪುಂಜಿಷ್ಟಾ ನಿಷಾದಾಶ್ಚೇಷುಕೃದ್ಗಣಾಃ ।
ಧನ್ವಕಾರಾ ಮೃಗಯುವಃ ಶ್ವನಯಃ ಶ್ವಾನ ಏವ ಚ ॥ ೨೪ ॥
ಅಥ ಶ್ವಪತಯಶ್ಚೈವ ಭವೋ ರುದ್ರೋ ಘಟೋದ್ಭವ ।
ಶರ್ವಃ ಪಶುಪತಿರ್ನೀಲಗ್ರೀವಶ್ಚ ಶಿತಿಕಂಠಕಃ ॥ ೨೫ ॥
ಕಪರ್ದೀ ವ್ಯುಪ್ತಕೇಶಶ್ಚ ಸಹಸ್ರಾಕ್ಷಸ್ತಥಾಪರಃ ।
ಶತಧನ್ವಾ ಚ ಗಿರಿಶಃ ಶಿಪಿವಿಷ್ಟಶ್ಚ ಕುಂಭಜ ।
ಮೀಢುಷ್ಟಮ ಇತಿ ಪ್ರೋಕ್ತಾ ರುದ್ರಾ ದಶಮಸಾಲಗಾಃ ॥ ೨೬ ॥
ಅಥೈಕಾದಶ ಚಕ್ರಸ್ಥಾ ಇಷುಮದ್ಧ್ರಸ್ವವಾಮನಾಃ ।
ಬೃಹಚ್ಚ ವರ್ಷೀಯಾಂಶ್ಚೈವ ವೃದ್ಧಃ ಸಂವೃಧ್ವನಾ ಸಹ ॥ ೨೭ ॥
ಅಗ್ರ್ಯಃ ಪ್ರಥಮ ಆಶುಶ್ಚಾಜಿರೋಽನ್ಯಃ ಶೀಘ್ರ್ಯಶೀಭ್ಯಕೌ ।
ಊರ್ಮ್ಯಾವಸ್ವನ್ಯರುದ್ರೌ ಚ ಸ್ರೋತ್ರಸ್ಯೋದ್ವೀಪ್ಯ ಏವ ಚ॥೨೮॥
ಜ್ಯೇಷ್ಠಶ್ಚೈವ ಕನಿಷ್ಠಶ್ಚ ಪೂರ್ವಜಾಽಪರಜೌ ತಥಾ ।
ಮಧ್ಯಮಶ್ಚಾಪಗಲ್ಭಶ್ಚ ಜಘನ್ಯಶ್ಚ ಘಟೋದ್ಭವ ।
ಚತುರ್ವಿಂಶತಿ ಸಂಖ್ಯಾತಾ ಏತೇರುದ್ರಾ ಮಹಾಬಲಾಃ ॥ ೨೯ ॥
ಬುಧ್ನ್ಯಶ್ಚೈವತು ಸೋಭ್ಯಶ್ಚ ಪ್ರತಿಸರ್ಯಕಯಾಮ್ಯಕೌ ।
ಕ್ಷೇಮ್ಯೋರ್ವರ್ಯೌ ಚ ಖಲ್ಯಶ್ಚ ತತಃ ಶ್ಲೋಕ್ಯಾವಸಾನ್ಯಕೌ ॥೩೦॥

---

೨೪-೨೬. ಕುಂಭಸಂಭವಾ! ದಶಮಾವರಣದಲ್ಲಿ ಕರ್ಮಾರರು, ಪುಂಜಿಷ್ಟರು, ನಿಷಾದರು, ಇಷುಕೃದ್ಗಣಗಳು, ಧನ್ವಕಾರರು, ಮೃಗಯುಗಳು, ಶ್ವನರು, ಶ್ವಾನರು, ಶ್ವಪತಿ, ಭವ, ರುದ್ರ, ಶರ್ವ, ಪಶುಪತಿ, ನೀಲಗ್ರೀವ, ಶಿತಿಕಂಠ, ಕಪರ್ದೀ, ವ್ಯುಪ್ತಕೇಶ, ಸಹಸ್ರಾಕ್ಷ, ಶತಧನ್ವ, ಗಿರಿಶ, ಶಿಪಿವಿಷ್ಟ, ಮೀಢುಷ್ಟಮ ಎಂಬ ರುದ್ರರಿರುವರೆಂದು ಹೇಳಿದೆ.

೨೭-೨೯. ಇಷುಮತ್, ಹ್ರಸ್ವ, ವಾಮನ, ಬೃಹತ್, ವರ್ಷೀಯ, ವೃದ್ಧ, ಸಂವೃಧ್ವನ, ಅಗ್ರ್ಯ, ಪ್ರಥಮ, ಆಶು, ಅಜಿರ, ಶೀಘ್ರ, ಶೀಭ್ಯಕ, ಊರ್ಮ್ಯ, ಅವಸ್ವನ್ಯ, ಸ್ರೋತಸ್ಯ, ದ್ವೀಪ್ಯ, ಜ್ಯೇಷ್ಠ, ಕನಿಷ್ಠ, ಪೂರ್ವಜ, ಅಪರಜ, ಮಧ್ಯಮ, ಅಪಗಲ್ಭ, ಜಘನ್ಯ ಎಂಬ ಇಪ್ಪತ್ತು ನಾಲ್ಕು ಮಂದಿ ಮಹಾಬಲರಾದ ರುದ್ರರು ಹನ್ನೊಂದನೆಯ ಆವರಣದಲ್ಲಿ ನೆಲಸಿರುವರು.

೩೦-೩೩. ಎಲೈ ತಪೋನಿಧಿಯೇ! ಹನ್ನೆರಡನೆಯ ಆವರಣದಲ್ಲಿರುವ ರುದ್ರರು ಇಪ್ಪತ್ತಾರು ಮಂದಿ. ಇವರೇ ಮಹಾಕಾಯರೂ, ಮಹಾ

**ವನ್ಯಕಕ್ಷ್ಯಶ್ರವಾಶ್ಚೈವ ತತೋಽನ್ಯಸ್ತು ಪ್ರತಿಶ್ರವಃ ।**
**ಆಶುಷೇಣ ಸ್ತ್ವಾಶುರಥಃ ಶೂರಶ್ಚ ತಪಸಾಂ ನಿಧೇ ॥ ೩೧ ॥**
**ಅವಭಿಂದಂಶ್ಚ ವರ್ಮೀ ಚ ವರೂಥೀ ಬಿಲ್ಮಿನಾಸಹ ।**
**ಕವಚೀ ಶ್ರುತಶ್ಚ ಶ್ರುತಸೇನೋ ದುಂದುಭ್ಯ ಏವ ಚ ॥ ೩೨ ॥**
**ಆಹನನ್ಯಶ್ಚ ಧೃಷ್ಣುಶ್ಚೇತ್ಯೇತೇ ಷಟ್ತ್ರಿಂಶತಿಃ ಸ್ಮೃತಾಃ ।**
**ದ್ವಾದಶಾವರಣಸ್ಥಾಶ್ಚ ಮಹಾಕಾಯಾ ಮಹಾಬಲಾಃ ॥ ೩೩ ॥**
**ಪ್ರಮೃಶಶ್ಚೈವ ದೂತಶ್ಚ ಪ್ರಹಿತಶ್ಚ ನಿಷಂಗಿಕಃ ।**
**ಅನ್ಯಸ್ತ್ವಿಷುಧಿಮಾನನ್ಯಸ್ತೀಕ್ಷ್ಣೇಷುಶ್ಚ ತಥಾಯುಧೀ ॥ ೩೪ ॥**
**ಸ್ವಾಯುಧಶ್ಚ ಸುಧನ್ವಾ ಚ ಸ್ರುತ್ಯಃ ಪಥ್ಯಶ್ಚ ಕುಂಭಜ ।**
**ಕಾಟ್ಯೋ ನೀಪ್ಯಸ್ತಥಾ ಸೂದ್ಯಃ ಸರಸ್ಯೋ ವಿಂಧ್ಯಮರ್ದನ ॥ ೩೫ ॥**
**ತಥಾಚಾನ್ಯೋ ನಾದ್ಯನಾಮಾ ವೈಶಂತಃ ಕೂಪ್ಯ ಏವ ಚ ।**
**ಅವಟ್ಯವರ್ಷ್ಯಾ ವರ್ಷ್ಯಾಶ್ಚ ಮೇಘ್ಯೋ ವಿದ್ಯುತ್ಯ ಏವ ಚ ॥ ೩೬ ॥**
**ಈಧ್ರ್ಯಾತಪ್ಯೌ ತಥಾವಾತ್ಯೋ ರೇಷ್ಮಿಯಶ್ಚ ತಥಾಪರಃ । [ ೩೭ ॥**
**ವಾಸ್ತವ್ಯೋ ವಾಸ್ತುಪಶ್ಚೈವ ಸೋಮಶ್ಚೇತಿ ಮಹಾಬಲಾಃ ॥**
**ತ್ರಯೋದಶಾವರಣಗಾ ಬಹಿಸ್ತ್ರಿಂಶದ್ದಲೇಷ್ವಮೀ ।**
**ಸಂಸ್ಥಿತಾಃ ಸರ್ವಗಾ ರುದ್ರಾಃ ಶೃಣ್ವನ್ಯಾಮಾವೃತಿಂ ಮುನೇ ॥ ೩೮॥**

---

ಬಲರೂ ಆದ ಬುಧ್ನ್ಯ, ಸೋಭ್ಯ, ಪ್ರತಿಸರ್ಯಕ, ಯಾಮ್ಯಕ, ಕ್ಷೇಮ್ಯ, ಉರ್ವರ್ಯ, ಖಲ್ಯ, ಶೋಕ್ಯ, ಅವಸಾನ್ಯಕ, ವನ್ಯ, ಕಕ್ಷ್ಯ, ಶ್ರವ, ಪ್ರತಿಶ್ರವ, ಆಶುಷೇಣ, ಆಶುರಥ, ಶೂರ, ಅವಭಿಂದ, ವರ್ಮೀ, ವರೂಥೀ, ಬಿಲ್ಮಿನ, ಕವಚೀ, ಶ್ರುತ, ಶ್ರುತಸೇನ, ದುಂದುಭ್ಯ, ಆಹನನ್ಯ, ಧೃಷ್ಣು ಎಂಬವರು.

೩೪-೩೮. ಪ್ರಮೃಶ, ದೂತ, ಪ್ರಹಿತ, ನಿಷಂಗಿಕ, ಇಷುಧಿಮಂತ, ತೀಕ್ಷ್ಣೇಷು, ಯುಧಿ, ಸ್ವಾಯುಧ, ಸುಧನ್ವ, ಸ್ರುತ್ಯ, ಪಥ್ಯ, ಕಾಟ್ಯ, ನೀಪ್ಯ, ಸೂದ್ಯ, ಸರಸ್ಯ, ನಾದ್ಯ, ವೈಶಂತ, ಕೂಪ್ಯ, ಅವಟ್ಯವರ್ಷ್ಯರು, ವರ್ಷ್ಯರು, ಮೇಧ್ಯ, ವಿದ್ಯುತ್ಯ, ಈಧ್ರ್ಯ, ಆತಪ್ಯ, ವಾತ್ಯ, ರೇಷ್ಮಿಯ, ವಾಸ್ತವ್ಯ, ವಾಸ್ತುಪತಿ, ಸೋಮ ಎಂಬ ಮಹಾಬಲರಾದ ರುದ್ರದೇವತೆಗಳು ಹದಿಮೂರನೆಯ ಆವರಣದ ಹೊರಗಣ ಮೂವತ್ತೂ ದಳಗಳಲ್ಲಿ ವಾಸವಾಗಿರುವರು. ಎಲೈ ಮುನಿಯೇ! ಹದಿಮೂರನೆಯ ಆವರಣದಲ್ಲಿ ವಾಸವಾಗಿರುವ ಈ ರುದ್ರರೆಲ್ಲರೂ ಎಲ್ಲೆಡೆಯಲ್ಲಿಯೂ, ಸಂಚರಿಸುವರಾಗಿ ಯಾಮಾವೃತಿಯನ್ನು ಕೇಳುತ್ತಿರುತ್ತಾರೆ.

ರುದ್ರಸ್ತಾಮ್ರೋರುಣಾಃ ಶಂಗಸ್ತಥಾ ಪಶುಪತಿರ್ಮುನೇ ।
ಉಗ್ರೋ ಭೀಮಸ್ತಥೈವಾಗ್ರೇವಧ ದೂರೇವಧಾವಪಿ ॥ ೩೯ ॥
ಹಂತಾಚೈವ ಹನೀಯಾಂಶ್ಚವೃಕ್ಷಾಶ್ಚಹರಿಕೇಶಕಾಃ ।
ತಾರಶ್ಶಂಭುರ್ಮಯೋಭೂಶ್ಚ ಶಂಕರಶ್ಚ ಮಯಸ್ಕರಃ ॥ ೪೦ ॥
ಶಿವಶ್ಶಿವತರಶ್ಚೈವ ತೀರ್ಥ್ಯಃ ಕೂಲ್ಯಸ್ತಥೈವ ಚ ।
ಪಾರ್ಯೋ ವಾರ್ಯಃ ಪ್ರತರಣೋತ್ತರಣೌ ಚ ಘಟೋದ್ಭವ॥೪೧॥
ಆತಾರ್ಯಾಲಾದ್ಯನಾಮಾನೌ ಶಷ್ಪ್ಯಫೇನ್ಯೌ ತಥಾಪರೌ ।
ಏತೇ ತ್ರಿಂಶನ್ಮಹಾರುದ್ರಾ ದೀಪ್ತಕೋಪಾ ಉದಾಯುಧಾಃ ।
ಚತುರ್ದಶಾವರಣಗಾ ಮಹಾರುದ್ರಮುಪಾಸತೇ ॥ ೪೨ ॥
ಸಿಕತ್ಯಶ್ಚ ಪ್ರವಾಹಶ್ಚ ಹಿರಣ್ಯಶ್ಚ ಪ್ರಪಥ್ಯಕಃ ।
ಕಿಂಶಲಃ ಕ್ಷಯಣಶ್ಚೈವ ಕಪರ್ದೀ ಚ ಪುಲಸ್ತಿಕಃ ॥ ೪೩ ॥
ಗೋಷ್ಠ್ಯೋ ಗೃಹ್ಯಸ್ತಲ್ಪ್ಯಗೇಹ್ಯೌ ಕಾಟ್ಯಸ್ಸ್ಯಾದ್ಗಹ್ವರೇಷ್ಟಕಃ ।
ಹ್ರದಯ್ಯಶ್ಚ ನಿವೇಷ್ಪ್ಯಶ್ಚ ಪಾಂಸವ್ಯಶ್ಚ ರಜಸ್ಯಕಃ ॥ ೪೪ ॥
ಶುಷ್ಕ್ಯೋಹರಿತ್ಯೋಲೋಪ್ಯಶ್ಚೋಲಪ್ಯೋಽರ್ವ್ಯಸೂರ್ಮ್ಯಏವಚ।
ಪರ್ಣಶ್ಚ ಪರ್ಣ್ಯಶದ್ಯಶ್ಚ ತಥಾಽಪಗುರಮಾಣಕಃ ॥ ೪೫ ॥
ಅಭಿಘ್ನನ್ನಾಖ್ಖಿದಂಶ್ಚೈವ ಪ್ರಖ್ಖಿದನ್ ಕಿರಿಕಾಸ್ತಥಾ ।
ದೇವಾನಾಂ ಹೃದಯಾಶ್ಚೈವ ದ್ವಾತ್ರಿಂಶದ್ರುದ್ರ ದೇವತಾಃ ॥ ೪೬ ॥
ವರ್ತಂತೇ ಸಾಯುಧಾಃ ಪ್ರಾಜ್ಞ ನಿತ್ಯಂ ಪಂಚದಶಾವೃತೌ ।
ದ್ವಾತ್ರಿಂಶತ್ಸು ದಲೇಷ್ವೇತೇ ಜಗದ್ವಂದ್ಯಾ ಮಹಾಮುನೇ ॥ ೪೭ ॥

---

೩೯-೪೨. ರುದ್ರ, ತಾಮ್ರ, ಅರುಣ, ಶಂಗ, ಪಶುಪತಿ, ಉಗ್ರ, ಭೀಮ, ಅಗ್ರೇವಧ, ದೂರೇವಧ, ಹಂತೃ, ಹನೀಯ, ವೃಕ್ಷರು, ಹರಿಕೇಶರು, ತಾರ, ಶಂಭು, ಮಯೋಭುವ, ಶಂಕರ, ಮಯಸ್ಕರ, ಶಿವ, ಶಿವತರ, ತೀರ್ಥ್ಯ, ಕೂಲ್ಯ, ಪಾರ್ಯ, ವಾರ್ಯ, ಪ್ರತರಣ, ಉತ್ತರಣ, ಆತಾರ್ಯ, ಆಲಾದ್ಯ, ಶಷ್ಪ್ಯ, ಫೇನ್ಯ ಎಂಬ ಮೂವತ್ತು ಮಂದಿ ರುದ್ರರು ಹದಿನಾಲ್ಕನೆಯ ಆವರಣದಲ್ಲಿ ವಾಸವಾಗಿರುವರು.

೪೩-೪೭. ಸಿಕತ್ಯ, ಪ್ರವಾಹ, ಹಿರಣ್ಯ, ಪ್ರಪಥ್ಯಕ, ಕಿಂಶಲ, ಕ್ಷಯಣ, ಕಪರ್ದೀ, ಪುಲಸ್ತಿ, ಗೋಷ್ಠ್ಯ, ಗೃಹ್ಯ, ತಲ್ಪ್ಯ, ಗೇಹ್ಯ, ಕಾಟ್ಯ, ಗಹ್ವರೇಷ್ಟಕ, ಹ್ರದಯ್ಯ, ನಿವೇಷ್ಪ್ಯ, ಪಾಂಸವ್ಯ, ರಜಸ್ಯಕ, ಶುಷ್ಕ್ಯ, ಹರಿತ್ಯ, ಲೋಪ್ಯ, ಉಲಪ್ಯ, ಊರ್ವ್ಯ, ಸೂರ್ಮ್ಯ, ಪರ್ಣ್ಯ,

**ಕ್ಷೋಡಶೇತ್ವಾವರಣಕೇ ಪೂರ್ವಾದಿ ದ್ವಾರವರ್ತಿನಃ ।**
**ವಕ್ಷೀಣಕಾವಿಚಿನ್ವತ್ಕಾಕಸ್ತಥಾಽನಿರ್ಹತನಾಮಕಾಃ ।**
**ಆವಿಾವತ್ಕಾಶ್ಚ ದೀಪ್ತಾಸ್ತ್ರಾ ಮಹಾರುದ್ರಮುಪಾಸತೇ ॥ ೪೮ ॥**
**ಇತಿ ಷೋಡಶ ಸಾಲೇಷು ಸ್ಥಿತೈ ರುದ್ರೈಃ ಸಹಸ್ರಶಃ ।**
**ಸೇವಿತಸ್ತು ಮಹಾರುದ್ರೋ ಲಲಿತಾಜ್ಞಾಪ್ರವರ್ತಕಃ ॥ ೪೯ ॥**
**ವರ್ತತೇ ಜಗತಾಮೃದ್ಧ್ಯೈಮುಕ್ತಾಸಾಲೇಶಕೋಣಕೇ ।**
**ಶತರುದ್ರಿಯಸಂಖ್ಯಾತಾ ಏತೇ ರುದ್ರಾ ಮಹಾಬಲಾಃ ॥ ೫೦ ॥**
**ಲಲಿತಾಭಕ್ತಿಸಂಪನ್ನಾನ್ ಪಾಲಯಂತಿ ದಿವಾನಿಶಮ್ । [೫೧ ॥**
**ಅಭಕ್ತಾಂಲ್ಲಲಿತಾದೇವ್ಯಾಂ ಪ್ರತ್ಯೂಹೈರ್ಯೋಜಯಂತ್ಯಮೀ ॥**

---

ಪರ್ಣಶದ್ಯ, ಅಪಗುರಮಾಣಕ, ಅಭಿಘ್ನಂತ, ಆಖ್ಖಿದಂತ, ಪ್ರಖ್ಖಿದಂತ, ಕಿರಿಕ, ದೇವಹೃದಯರೆಂಬ ಈ ಮೂವತ್ತೆರಡು ಮಂದಿ ರುದ್ರದೇವತೆಗಳು ಆಯುಧಸಹಿತರಾಗಿ ಹದಿನೈದನೆಯ ಆವರಣದ ಮೂವತ್ತೆರಡು ದಳಗಳಲ್ಲಿಯೂ ವಾಸವಾಗಿರುವರು. ಎಲೈ ಮುನಿಯೇ! ಇವರೆಲ್ಲರೂ ಜಗದ್ವಂದ್ಯರಾದವರು.

೪೮. ಎಲೈ ಅಗಸ್ತ್ಯನೇ! ಹದಿನಾರನೆಯ ಆವರಣದ ಪೂರ್ವವೇ ಮೊದಲಾದ ದ್ವಾರದೇಶಗಳಲ್ಲಿ ವಕ್ಷೀಣಕರು, ವಿಚಿನ್ವತ್ಕರು, ಅನಿರ್ಹತರು, ಆವಿಾವತ್ಕರು ಎಂಬ ರುದ್ರರು ಪ್ರಜ್ವಲಿಸುತ್ತಿರುವ ಅಸ್ತ್ರಗಳನ್ನು ಹಿಡಿದು ಬೆಳಗುತ್ತ ಮಧ್ಯಪೀಠದಲ್ಲಿರುವ ಮಹಾರುದ್ರನನ್ನು ಸೇವಿಸುತ್ತಿರುವರು.

೪೯-೫೧. ಎಲೈ ಕುಂಭಸಂಭವನೇ! ಈ ಪ್ರಕಾರ ಹದಿನಾರು ಪ್ರಾಕಾರಗಳಲ್ಲಿಯೂ ನೆಲಸಿರುವ ಸಾವಿರಾರುಮಂದಿ ರುದ್ರರಿಂದ ಸೇವಿತನಾಗಿ ಆ ಮಹಾರುದ್ರನು ಶ್ರೀ ಲಲಿತಾದೇವಿಯ ಆಜ್ಞೆಯನ್ನು ನಡೆಸುತ್ತ ಲೋಕದ ಕ್ಷೇಮಕ್ಕಾಗಿಯೇ ಆ ಮುಕ್ತಾಮಣಿಮಯಪ್ರಾಕಾರದ ಈಶಾನ್ಯ ಕೋಣದಲ್ಲಿ ವಾಸವಾಗಿರುವನು. ಶತರುದ್ರಿಯ ಸಂಖ್ಯಾತರೂ, ಮಹಾಬಲರೂ ಆದ ಈ ರುದ್ರದೇವತೆಗಳಾದರೋ ವಿವಿಧಾವರಣಗಳಲ್ಲಿ ವಾಸಮಾಡುತ್ತ ಜಗತ್ತಿನಲ್ಲಿರುವ ಶ್ರೀ ಲಲಿತಾದೇವಿಯ ಭಕ್ತರೆಲ್ಲರನ್ನೂ ಹಗಲಿರುಳೂ ಕಾಪಾಡುತ್ತಲೂ, ಆಕೆಯಲ್ಲಿ ಭಕ್ತಿಯಿಲ್ಲದವರನ್ನು ಅನೇಕ ಕಷ್ಟಗಳಿಗೊಳಪಡಿಸುತ್ತಲೂ ನೆಲಸಿರುತ್ತಾರೆ.

**ಇತ್ಥಂ ಶಕ್ರಾದಿ ದಿಕ್ಪಾಲಾ ಮುಕ್ತಾಸಾಲಂ ಸಮಾಶ್ರಿತಾಃ ।**
**ಲಲಿತಾಪರಮೇಶಾನ್ಯಾಃ ಸೇವಾಮೇವ ವಿತನ್ವತೇ ॥ ೫೨ ॥**
**ಅಥ ಮುಕ್ತಾಖ್ಯಸಾಲಸ್ಯಾಂತರೇ ಮಾರುತಯೋಜನೇ ।**
**ಸಾಲೋ ಮರಕತಾಭಿಖ್ಯಶ್ಚತುರ್ಯೋಜನಮುಚ್ಛ್ರಿತಃ ॥ ೫೩ ॥**
**ಯತ್ರ ಶ್ರೀದಂಡನಾಥಾಯಾ ದಹನಾದಿವಿದಿಗ್ಗತಾಃ । [ ೫೪ ॥**
**ಚತ್ವಾರೋ ನಿಲಯಾಃ ಪ್ರೋಕ್ತಾ ಮಂತ್ರಿಣೀಗೃಹವಿಸ್ತೃತಾಃ ॥**
**ಕಿರಿಚಕ್ರರಥೇಂದ್ರಸ್ಯ ಯಾಃ ಪರ್ವಾಣಿ ಸಮಾಶ್ರಿತಾಃ ।**
**ಭಂಡಾಸುರ ಮಹಾಯುದ್ಧೇ ತಾ ದೇವ್ಯಸ್ತತ್ರ ಜಾಗ್ರತಿ ॥ ೫೫ ॥**
**ಸರ್ವಾ ಸ್ಥಲೀ ಮರಕತಶ್ರೇಣಿಭಿಃ ಖಚಿತಾ ಶುಭಾ ।**
**ಹೇಮತಾಲವನಾಢ್ಯಾಚ ಸರ್ವವಸ್ತುಸಮಾಕುಲಾ ॥ ೫೬ ॥**
**ತತ್ರ ದೇವ್ಯಃ ಸಮಸ್ತಾಶ್ಚ ದಂಡನಾಥಾಸಮಶ್ರಿಯಃ ।**
**ಹೇಲೋದ್ಘೂರ್ಣಹಲಾ ಘೂರ್ಣಮುಸಲಾಃ ಸಂಚರಂತ್ಯಪಿ ॥ ೫೭ ॥**

---

೫೨. ಹೀಗೆ ಇಂದ್ರನೇ ಮೊದಲಾದ ದಿಕ್ಪಾಲಕರೆಲ್ಲರೂ ಮುಕ್ತಾಮಣಿಮಯ ಪ್ರಾಕಾರವನ್ನಾಶ್ರಯಿಸಿ, ಶ್ರೀ ಲಲಿತಾಪರಮೇಶ್ವರಿಯ ಸೇವೆಯನ್ನೇ ಮಾಡುತ್ತಿರುತ್ತಾರೆ.

೫೩-೫೫. ಇನ್ನು, ಈ ಮುಕ್ತಾಮಣಿಯ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ನಾಲ್ಕು ಯೋಜನಗಳು ಎತ್ತರವಾಗಿರುವ ಮರಕತಮಣಿಪ್ರಾಕಾರವು ಕಂಗೊಳಿಸುತ್ತಿರುವುದು. ಅಲ್ಲಿಯ ಆಗ್ನ್ಯಾದಿ ಚತುರ್ದಿಶೆಗಳಲ್ಲಿಯೂ ಶ್ರೀ ದಂಡನಾಥಾದೇವಿಯ ದಿವ್ಯ ಮಂದಿರಗಳು ಶ್ರೀ ಶ್ಯಾಮಾಂಬಿಕೆಯ ಭವನದಂತೆಯೇ ವಿಶಾಲಗಳಾಗಿ ಕಂಗೊಳಿಸುತ್ತಿವೆ. ಅವುಗಳಲ್ಲಿ ಶ್ರೀ ದಂಡಿನೀದೇವಿಯ ಕಿರಿಚಕ್ರಮಹಾರಥದ ಸಮಸ್ತಪರ್ವಗಳಲ್ಲಿಯೂ, ಭಂಡಾಸುರ ಯುದ್ಧಕಾಲದಲ್ಲಿ ಯಾವ ಯಾವ ಶಕ್ತಿದೇವಿಯರಿದ್ದರೋ ಅವರೆಲ್ಲರೂ ಯಾವಾಗಲೂ ಜಾಗೃತರಾಗಿ ವಾಸಿಸುತ್ತಿರುವರು.

೫೬-೫೭. ಅಲ್ಲಿರುವ ಪ್ರದೇಶವೆಲ್ಲವೂ ಮರಕತಮಣಿಗಳ ಸಾಲುಗಳಿಂದ ಕೆತ್ತಿದುದಾಗಿ ಬಹು ಮಂಗಳಕರವಾಗಿ ಕಂಗೊಳಿಸುತ್ತಿರುವುದು. ಸುಂದರವಾದ ಆ ಪ್ರದೇಶವೆಲ್ಲವೂ ಚಿನ್ನದ ತಾಳೆದೋಟಗಳಿಂದ ತುಂಬಿ ಸಮಸ್ತ ವಸ್ತುಗಳಿಂದ ಕಿಕ್ಕಿರಿದುದಾಗಿರುವುದು. ಅಲ್ಲಿರುವ ಶಕ್ತಿದೇವಿಯರೆಲ್ಲರೂ ಶ್ರೀದಂಡನಾಥಾದೇವಿಗೆ ಸಮಾನವಾದ ತೇಜಸ್ಸುಳ್ಳವರಾಗಿ

**ಸಂಖ್ಯಾತೀತಾಸ್ತಾಲವೃಕ್ಷಾ ನವಸ್ವರ್ಣವಿಚಿತ್ರಿತಾಃ ।**
**ಯೋಜನಾಯಾತಕಾಂಡಶ್ಚ ದಲೈರ್ಯುರ್ಕ್ತಾ ವಿಶಂಕಟೈಃ ॥ ೫೮ ॥**
**ಹೇಮತ್ವಚೋಽತಿಸುಸ್ನಿಗ್ಧಾಃ ಸುಚ್ಛಾಯಾಃ ಫಲಭಂಗುರಾಃ ।**
**ಆಮೂಲಾಗ್ರಂ ಲಂಬಮಾನಸ್ತಾಲಾಹಾಲಾಘಟಾಕುಲಾಃ ।**
**ವರ್ತಂತೇ ದಂಡನಾಥಾಯಾಃ ಪ್ರೀತ್ಯರ್ಥಂ ಶಿಲ್ಪಿಭಿಃ ಕೃತಾಃ ॥೬೦॥**
**ತತ್ರ ಸಾಲಸುರಾಪೂರಂ ಪೀತ್ವಾ ಪೀತ್ವಾ ಮುದಾಕುಲಾಃ ।**
**ಜೃಂಭಿನ್ಯಾದ್ಯಾಶ್ಚಕ್ರದೇವ್ಯೋ ಹೇತುಕಾದ್ಯಾಶ್ಚಭೈರವಾಃ ।**
**ಸಪ್ತನಿಗ್ರಹ ದೇವ್ಯಶ್ಚ ನೃತ್ಯಂತಿ ಮದನಿಹ್ವಲಾಃ ॥ ೬೧ ॥**
**ಚತುರ್ದಿಕ್ಷ್ವಪಿ ದಂಡಿನ್ಯಾ ಯತ್ರ ಯತ್ರ ಮಹದ್ಗೃಹಂ ।**
**ತತ್ರ ಪೂರ್ವಾದಿ ದಿಗ್ಭಾಗೇ ದೇವೀಸದೃಶವರ್ಚಸಃ ॥ ೬೨ ॥**
**ಉನ್ಮತ್ತಭೈರವೀ ಚೈವ ಸ್ವಪ್ನೇಶೀ ಚ ತಿರಸ್ಕೃತಿಃ ।**
**ತಥಾ ಕಿರಿಪದಾದೇವೀ ಸೇವಂತೇ ದಂಡನಾಯಿಕಾಂ ॥ ೬೩ ॥**

---

ವಿಲಾಸಕ್ಕಾಗಿಯೇ ಹಲಾಯುಧಗಳನ್ನೂ ಮುಸಲಾಯುಧಗಳನ್ನೂ ತಿರುಗಿಸುತ್ತ ಸಂಚರಿಸುತ್ತಿರುತ್ತಾರೆ.

೫೮-೬೦. ಎಲೈ ಕುಂಭೋದ್ಭವನೇ! ಆ ಪ್ರದೇಶದಲ್ಲಿಯೇ ಶ್ರೀ ದಂಡನಾಥಾದೇವಿಯ ಪ್ರೀತ್ಯರ್ಥವಾಗಿ ದೇವಾಸುರಶಿಲ್ಪಿಗಳು ನಿರ್ಮಿಸಿರುವ ನೂತನವಾದ ಸ್ವರ್ಣದಿಂದಲಂಕೃತವಾದ ತಾಳೆಯಮರಗಳು ಲೆಕ್ಕವಿಲ್ಲದಷ್ಟಿರುವುವು. ಅವುಗಳ ಸುತ್ತಳತೆಯೇ ಒಂದೊಂದು ಯೋಜನವಿರುತ್ತದೆ. ಸೊಂಪಾದ ಚಿಗುರೊಡಗೂಡಿ, ಬಂಗಾರದ ತೊಗಟೆಯಿಂದ ಕಂಗೊಳಿಸಿ ಒಳ್ಳೆಯ ತಣ್ಣೆರಳಿನಿಂದ ರಂಜಿಸಿ, ಹಣ್ಣಿನ ಗೊಂಚಲುಗಳಿಂದ ನಸು ಬಾಗಿ, ತುದಿಯಿಂದ ಬುಡದವರೆಗೂ ಜೋಲುತ್ತಿರುವ ಮದ್ಯಘಟಗಳಿಂದ ಕಿಕ್ಕಿರಿಯುತ್ತಿರುವ ಆ ತಾಲವೃಕ್ಷಗಳು ಬಹು ಮನೋಹರವಾಗಿರುವುವು.

೬೧. ಇಂತು ಸೊಗೆಸೊಗೆವ ಆ ಮರಕತಮಣಿಪ್ರಾಕಾರದಲ್ಲಿ ಜೃಂಭಿನಿಯೇ ಮೊದಲಾದ ಕಿರಿಚಕ್ರಪರ್ವದ ಶಕ್ತಿದೇವಿಯರೂ, ಹೇತುಕನೇ ಮೊದಲಾದ ಭೈರವರೂ, ಏಳುಮಂದಿ ನಿಗ್ರಹದೇವಿಯರೂ ಆ ತಾಳೆಯ ಸುರೆಯನ್ನು ಕುಡಿದು ಕುಡಿದು ಮದವಿಹ್ವಲರಾಗಿ ನರ್ತಿಸುತ್ತಿರುತ್ತಾರೆ.

೬೨-೬೩. ಶ್ರೀ ದಂಡನಾಥಾದೇವಿಯ ಮಹಾಮಂದಿರದ ನಾಲ್ಕು

**ಏಷಾ ಕಕ್ಷ್ಯಾ ಮರಕತಪ್ರಕೃತಿಃ ಸರ್ವತೋದಿಶಮ್ ।**
**ನಿವಾಸೋ ದಂಡನಾಥಾಯಾಃ ಕೇವಲಂ ಚಾಭಿಮಾನಿಕಾಃ ॥ ೬೪ ॥**
**ತಸ್ಯಾಸ್ತು ಸೇವಾವಾಸೋಽನ್ಯೋ ಮಹಾಪದ್ಮಾಟವೀಸ್ಥಲೇ ।**
**ತತ್ಕಕ್ಷ್ಯಾತಿದವೀಯಸ್ತ್ವಾತ್ಸೇವಾರ್ಥಂ ತತ್ರ ತದ್ಗೃಹಂ ॥ ೬೫ ॥**
**ಅಥೋ ಮರಕತಾಕಾರಸಾಲಾಂತಃ ಸಪ್ತಯೋಜನೇ ।**
**ಪ್ರಾಕಾರೋ ವಿದ್ರುಮಾಕಾರಃ ಪ್ರಾತರರ್ಯಮಪಾಟಲಃ ।**
**ತತ್ರ ಸ್ಥಲೀ ಚ ಸಕಲಾ ವಿದ್ರುಮೇಣೈವ ನಿರ್ಮಿತಾ ॥ ೬೬ ॥**
**ತತ್ರ ವಿದ್ರುಮಸಂಕಾಶೋ ಬ್ರಹ್ಮಾ ನಲಿನವಿಷ್ಟರಃ ।**
**ಬ್ರಹ್ಮಲೋಕಾತ್ಸಮಾಗತ್ಯ ಸಾರ್ಧಂ ಸರ್ವಮುನೀಶ್ವರೈಃ ॥ ೬೭ ॥**
**ಸದಾ ಶ್ರೀಲಲಿತಾದೇವ್ಯಾಃ ಸೇವನಾರ್ಥಮತಂದ್ರಿತಃ ।**
**ಮರೀಚ್ಯಾದ್ಯೈಃ ಪ್ರಜಾಸೃಗ್ಭಿರ್ವರ್ತತೇ ಸಾಕಮಬ್ಧಿಪ ॥ ೬೮ ॥**

---

ದಿಕ್ಕುಗಳಲ್ಲಿಯೂ ಆಕೆಗೆ ಸಮಾನವಾದ ತೇಜಸ್ಸುಳ್ಳವರಾದ ಉನ್ಮತ್ತ ಭೈರವಿ, ಸ್ವಪ್ನೇಶ್ವರಿ, ತಿರಸ್ಕರಣಿಕಾದೇವಿ, ಕಿರಿಪದಾದೇವಿ ಎಂಬವರು ನೆಲಸಿ ತಮ್ಮ ಸ್ವಾಮಿನಿಯನ್ನು ಸೇವಿಸುತ್ತಿರುವರು.

೬೪-೬೫. ಈ ಪ್ರಕಾರ, ಎಲ್ಲ ದಿಕ್ಕುಗಳಲ್ಲಿಯೂ ಮರಕತ ಸ್ವಭಾವ ವನ್ನೊಳಕೊಂಡಿರುವ ಈ ಪ್ರದೇಶವು ಶ್ರೀ ದಂಡನಾಥಾದೇವಿಗೆ ಕೇವಲ ಅಭಿಮಾನಾಸ್ಪದವಾದುದಾಗಿರುವುದು. ಆಕೆಯ ಸೇವಾಭವನವು ಮಹಾ ಪದ್ಮಾಟವಿಯಲ್ಲಿರುತ್ತದೆ. ಆ ಮಹಾಪದ್ಮಾಟವಿಯು ಬಹು ವಿಶಾಲ ಗಿರುವುದುದರಿಂದ ಆಕೆಗಾಗಿಯೇ ಅಲ್ಲಿ ಸೇವಾರ್ಥಭವನವು ನಿರ್ಮಾಣ ವಾಗಿರುವುದು.

೬೬. ಈ ಮರಕತ ಮಣಿಯ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಬೆಳಗಿನ ಅರುಣದೇವನಂತೆ ಕೆಂಪಗೆ ಹೊಳೆಯುವ ವಿದ್ರುಮ ಪ್ರಾಕಾರ ವಿರುವುದು. ಅಲ್ಲಿಯ ಪ್ರದೇಶವೆಲ್ಲವೂ ಹವಳಗಳಿಂದಲೇ ನಿರ್ಮಿತವಾಗಿರುವುದು.

೬೭-೬೮. ಎಲೈ ಅಬ್ಧಿಪನಾದ ಅಗಸ್ತ್ಯಮುನಿಯೇ ! ಆ ವಿದ್ರುಮ ಮಣಿವಾಟಿಯಲ್ಲಿ ಬ್ರಹ್ಮದೇವನು ಹವಳದ ಕಾಂತಿಯನ್ನೊಳಗೊಂಡು ಕಮಲಾಸನನಾಗಿ ಕಂಗೊಳಿಸುತ್ತಿರುವನು. ಆತನು ಯಾವೊಂದು ವಿಘ್ನವೂ ಇಲ್ಲದೆ ಶ್ರೀ ಲಲಿತಾದೇವಿಯನ್ನು ಸೇವಿಸಲೋಸುಗವೇ ಸಮಸ್ತ ಬ್ರಹ್ಮರ್ಷಿಗಳೊಡನೆಯೂ, ಮರೀಚಿಯೇ ಮೊದಲಾದ ಇತರ ಬ್ರಹ್ಮರೊಡನೆಯೂ ತನ್ನ ಲೋಕದಿಂದಲ್ಲಿಗೈದಿವಂದು ನೆಲಸಿರುತ್ತಾನೆ.

**ಚತುರ್ದಶಾಪಿ ವಿದ್ಯಾಸ್ತ್ರ ಉಪವಿದ್ಯಾಃ ಸಹಸ್ರಶಃ ।**
**ಚತುಷ್ಷಷ್ಟಿಕಲಾಶ್ಚೈವ ಶರೀರಿಣ್ಯೋ ಮಹತ್ತರಾಃ ॥ ೬೯ ॥**
**ಪ್ರಾಕಾರೇ ವಿದ್ರುಮಾಕಾರೇ ಬ್ರಹ್ಮಲೋಕಂ ಸಮಾಶ್ರಿತಾಃ ।**
**ವರ್ತತೇ ಜಗತಾಮೃದ್ಧ್ಯೈ ಲಲಿತಾದೇವತಾಜ್ಞಯಾ ॥ ೭೦ ॥**
**ಅಥ ವಿದ್ರುಮಸಾಲಸ್ಯಾಂತರೇ ಮಾರುತಯೋಜನೇ ।**
**ಮಾಣಿಕ್ಯಮಂಡಪಂ ನಾಮ ಕಕ್ಷ್ಯಾಂತರ ಮುದೀರಿತಂ ॥ ೭೧ ॥**
**ನಾನಾರತ್ನಕೃತಃ ಸಾಲಃ ಪೂರ್ವವದ್ಗೋಪುರಾನ್ವಿತಃ ।**
**ಮಾಣಿಕ್ಯಮಂಡಪಸ್ಥಾನೇ ಪರಿತಃ ಸರ್ವತೋದಿಶಂ ॥ ೭೨ ॥**
**ವರ್ತತೇ ವಿಷ್ಣುಲೋಕಸ್ತು ಲಲಿತಾಪೂಜನೋತ್ಸುಕಃ ।**
**ತತ್ರ ವೈಷ್ಣವಲೋಕೇ ತು ವಿಷ್ಣುಃ ಸಾಕ್ಷಾತ್ಸನಾತನಃ ॥ ೭೩ ॥**
**ಚತುರ್ಧಾ ದಶಧಾಚೈವ ತಥಾ ದ್ವಾದಶಧಾ ಪುನಃ ।**
**ವಿಭಿನ್ನಮೂರ್ತಿಃ ಸತತಂ ವರ್ತತೇ ಮಾಧವಃ ಸದಾ ॥ ೭೪ ॥**
**ಭಂಡಾಸುರಮಹಾಯುದ್ಧೇ ಯೇ ಶ್ರೀದೇವೀನಖೋತ್ಥಿತಾಃ ।**
**ದಶಾವತಾರನಾಥಾಸ್ತು ತೇಽಪಿ ಮಾಣಿಕ್ಯಮಂಟಪೇ ॥ ೭೫ ॥**

---

೬೯-೭೦. ಮಹತ್ತರಗಳಾದ ವೇದಾದಿ ಚತುರ್ದಶ ವಿದ್ಯೆಗಳೂ, ಸಾವಿರಾರು ಉಪವಿದ್ಯೆಗಳೂ, ಅರುವತ್ತೆಂಟು ಕಲೆಗಳೂ ಶ್ರೀ ಲಲಿತಾ ಪರಮೇಶ್ವರಿಯ ಆಣತಿಯಂತೆ ಶರೀರಧಾರಿಣಿಯರಾಗಿ ಆ ವಿದ್ರುಮ ಪ್ರಾಕಾರದ ಬ್ರಹ್ಮಲೋಕದಲ್ಲಿ ನೆಲಸಿರುತ್ತವೆ.

೭೧-೭೫. ಇದಾದ ಬಳಿಕ ಅದೇ ವಿದ್ರುಮ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಮಾಣಿಕ್ಯಮಂಡಪವೆಂಬ ಇನ್ನೊಂದು ಪ್ರಾಕಾರವಿರುವುದೆಂದು ಹೇಳಿದೆ. ಈ ಮಾಣಿಕ್ಯಮಂಡಪದ ಸುತ್ತಣ ಪ್ರಾಕಾರವು ಹಿಂದಿನ ಪ್ರಾಕಾರಗಳಂತೆಯೇ ಗೋಪುರ ಸಹಿತವಾಗಿ ಎಲ್ಲ ದಿಕ್ಕುಗಳಲ್ಲಿಯೂ ವಿವಿಧ ಮಣಿಗಳಿಂದ ನಿರ್ಮಿತವಾಗಿದೆ. ಇಲ್ಲಿಯೇ ವಿಷ್ಣುಲೋಕವು ಕಂಗೊಳಿಸುತ್ತಿರುವುದು. ಈ ವಿಷ್ಣುಲೋಕದಲ್ಲಿ ಯಾದರೋ ಶ್ರೀಲಲಿತಾದೇವಿಯ ಪೂಜೆಯಲ್ಲಿ ಆಸಕ್ತನೂ, ಸನಾತನನೂ ಆದ ಶ್ರೀಮಹಾವಿಷ್ಣುವು ತನ್ನ ಮೂರ್ತಿಗಳನ್ನು ನಾಲ್ಕು, ಹತ್ತು, ಹನ್ನೆರಡು ಬಗೆಗಳನ್ನಾಗಿಸಿಕೊಂಡು ಯಾವಾಗಲೂ ವಾಸವಾಗಿರುವನು. ಇಷ್ಟೆಯಲ್ಲದೆ ಭಂಡಾಸುರಯುದ್ಧಸಮಯದಲ್ಲಿ ಶ್ರೀ ಲಲಿತಾದೇವಿಯ ಕರಾಂಗುಳಿನಖೋತ್ಪನ್ನರಾದ ದಶಾವತಾರ ನಾಥರೂ ಸಹ ಅದೇ ಮಾಣಿಕ್ಯಮಂಡಪದಲ್ಲಿಯೇ ನೆಲಸಿರುತ್ತಾರೆ.

ಪೂರ್ವಕಕ್ಷ್ಯಾಂತರೇಭ್ಯಸ್ತು ತತ್ಕಕ್ಷ್ಯಾಯಾಂ ವಿಶಿಷ್ಟತಾ ।
ಉಪರ್ಯಾಚ್ಛಾದನಾಮಾತ್ರಂ ಮಾಣಿಕ್ಯದೃಷದಾಂ ಗಣೈಃ ॥ ೭೬ ॥
ತತ್ರ ಕಕ್ಷ್ಯಾಂತರೇ ದೇವಃ ಶಂಖಚಕ್ರಗದಾಧರಃ ।
ಭಿನ್ನೋ ದ್ವಾದಶಮೂರ್ತ್ಯಾ ಚ ಪೂರ್ವಾದ್ಯಾಶಾಸು ರಕ್ಷತಿ ॥೭೭॥
ಜಾಂಬೂನದ ಪ್ರಭಶ್ಚಕ್ರೀ ಪೂರ್ವಸ್ಯಾಂ ದಿಶಿ ಕೇಶವಃ ।
ಪಶ್ಚಾನ್ನಾರಾಯಣಃ ಶಂಖೀ ನೀಲಜೀಮೂತಸಂನಿಭಃ ॥ ೭೮ ॥
ಇಂದೀವರದಲಶ್ಯಾಮಸ್ತ್ವಥೋರ್ಧ್ವಂ ಮಾಧವೋಽವತಿ ॥ ೭೯ ॥
ಗೋವಿಂದೋ ದಕ್ಷಿಣೇ ಪಾರ್ಶ್ವೇ ಧನ್ವೀ ಚಂದ್ರಪ್ರಭೋ ಮಹಾನ್।
ಉತ್ತರೇ ಹಲಭೃದ್ವಿಷ್ಣುಃ ಪದ್ಮಕಿಂಜಲ್ಕಸಂನಿಭಃ ।
ಆಗ್ನೇಯ್ಯಾಮರವಿಂದಾಕ್ಷೋ ಮುಸಲೀ ಮಧುಸೂದನಃ ॥ ೮೦ ॥
ತ್ರಿವಿಕ್ರಮಃ ಖಡ್ಗಪಾಣಿರ್ನೈರ್ಋತ್ಯಾಂ ಜ್ವಲನಪ್ರಭಃ । [ ೮೧ ॥
ವಾಯವ್ಯಾಂ ವಾಮನೋ ವಜ್ರೀ ತರುಣಾದಿತ್ಯದೀಪ್ತಿಮಾನ್ ॥
ಈಶಾನ್ಯಾಂ ಪುಂಡರೀಕಾಕ್ಷಃ ಶ್ರೀಧರಃ ಪಟ್ಟಸಾಯುಧಃ ।
ವಿದ್ಯುತ್ಪ್ರಭೋ ಹೃಷೀಕೇಶೋ ಹ್ಯವಾಚ್ಯಾಂ ದಿಶಿಮುದ್ಗರೀ ॥ ೮೨ ॥
ಪದ್ಮನಾಭಃ ಶಾರ್ಙ್ಗಪಾಣಿಃ ಸಹಸ್ರಾರ್ಕಸಮಪ್ರಭಃ ।
ಮಾಣಿಕ್ಯಮಂಟಪಸ್ಥಾನಮನುಲೋಮೇನ ವೇಷ್ಟತೇ ॥ ೮೩ ॥
ಸರ್ವಾಯುಧಃ ಸರ್ವಶಕ್ತಿಃ ಸರ್ವಜ್ಞಃ ಸರ್ವತೋಮುಖಃ ।
ಇಂದ್ರಗೋಪಕಸಂಕಾಶಃ ಪಾಶಹಸ್ತೋಽಪರಾಜಿತಃ ॥ ೮೪ ॥

---

೭೬-೭೭. ಎಲೈ ಮುನಿಯೇ! ಹಿಂದಿನ ಪ್ರಾಕಾರಗಳಿಗಿಂತಲೂ ಈ ಮಾಣಿಕ್ಯಮಂಡಪ ಪ್ರಾಕಾರದಲ್ಲಿರುವ ಒಂದು ವಿಶೇಷವೇನೆಂದರೆ ಇದರ ಮೇಲ್ ಚಾವಣಿಯು ಮಾತ್ರ ಮಾಣಿಕ್ಯಮಣಿಸಮೂಹದಿಂದ ರಚಿತವಾಗಿರುವುದು. ಇಲ್ಲಿಯೇ ಶಂಖ ಚಕ್ರಧರನಾದ ಶ್ರೀ ಮಹಾ ವಿಷ್ಣುವು ಹನ್ನೆರಡು ಬಗೆಯಾಗಿ ಮೂರ್ತೀಭವಿಸಿ ಪೂರ್ವಾದಿ ದಿಕ್ಕುಗಳಲ್ಲಿ ರಕ್ಷಕನಾಗಿ ನೆಲಸಿರುವನು.

೭೮-೮೬. ಸ್ವರ್ಣಪ್ರಭೆಯುಳ್ಳವನೂ, ಚಕ್ರಾಯುಧಧಾರಿಯೂ ಆದ ಕೇಶವನು ಪೂರ್ವದಿಕ್ಕಿನಲ್ಲಿಯೂ, ಶಂಖಧರನೂ, ನೀಲ ಜೀಮೂತ (ಮೇಘ) ಸನ್ನಿಭನೂ ಆದ ನಾರಾಯಣನು ಪಶ್ಚಿಮದಿಕ್ಕಿನಲ್ಲಿಯೂ ವಾಸವಾಗಿರುವರು. ಇಂದೀವರ (ಕನ್ನೈದಿಲೆಯಂತೆ) ಶ್ಯಾಮನಾದ ಮಾಧವನು ಊರ್ಧ್ವದಿಶೆಯನ್ನು ರಕ್ಷಿಸುತ್ತಿರುವನು. ಧನುರ್ಧಾರಿಯೂ,

**ದಾಮೋದರಸ್ತು ಸರ್ವಾತ್ಮಾ ಲಲಿತಾ ಭಕ್ತಿನಿರ್ಭರಃ ।**
**ಮಾಣಿಕ್ಯಮಂಡಪಸ್ಥಾನಂ ಪ್ರತಿಲೋಮೇನ ವೇಷ್ಟತೇ ॥ ೮೫ ॥**
**ಇತಿ ದ್ವಾದಶಭಿರ್ದೇವೈರ್ಭಗವಾನಂಬುಜೇಕ್ಷಣಃ ।**
**ಮಾಣಿಕ್ಯಮಂಡಪಗತೇ ವಿಷ್ಣುಲೋಕೇ ವಿರಾಜತೇ ॥ ೮೬ ॥**
**ಅಥ ನಾನಾರತ್ನಸಾಲಾಂತರೇ ಮಾರುತಯೋಜನೇ ।**
**ಸಹಸ್ರಸ್ತಂಭಕಂ ನಾಮ ಮಂಟಪಂ ಸುಮನೋಹರಂ ॥ ೮೭ ॥**
**ನಾನಾರತ್ನೈಸ್ತು ಖಚಿತಂ ನಾನಾಕಲ್ಪೈರಲಂಕೃತಂ ।**
**ನಾನಾರತ್ನಕೃತಃ ಸಾಲಸ್ತುಂಗಸ್ತತ್ರಾಭಿವರ್ತತೇ ॥ ೮೮ ॥**

---

ಚಂದ್ರಪ್ರಭನೂ, ಮಹಾತ್ಮನೂ ಆದ ಗೋವಿಂದನು ದಕ್ಷಿಣ ಪಾರ್ಶ್ವದಲ್ಲಿಯೂ, ಕಮಲ ಕೇಸರಕಾಂತಿಯುಳ್ಳವನೂ, ಹಲಧರನೂ ಆದ ವಿಷ್ಣುವು ಉತ್ತರ ದಿಕ್ಕಿನಲ್ಲಿಯೂ ಇರುತ್ತಾರೆ. ಆಜ್ಞೇಯದಲ್ಲಿ ಅರವಿಂದಾಕ್ಷನೂ, ಮುಸಲಾಯುಧಧರನೂ ಆದ ಮಧುಸೂದನನೂ, ನೈರ್ಋತ್ಯದಲ್ಲಿ ಅಗ್ನಿಪ್ರಭನೂ, ಖಡ್ಗಪಾಣಿಯೂ ಆದ ತ್ರಿವಿಕ್ರಮನೂ, ವಾಯವ್ಯದಲ್ಲಿ ವಜ್ರಧರನೂ, ತರುಣಾದಿತ್ಯಕಾಂತಿಯುತನೂ ಆದ ವಾಮನನೂ, ಈಶಾನ್ಯದಲ್ಲಿ ಪುಂಡರೀಕಾಕ್ಷನೂ, ಪಟ್ಟಿಸಾಯುಧ ಧರನೂ ಆದ ಶ್ರೀಧರನೂ, ಅವಾಗ್ದಿಶೆ (ದಕ್ಷಿಣದಿಕ್ಕು) ಯಲ್ಲಿ ವಿದ್ಯುತ್ (ಮಿಂಚಿನ) ಪ್ರಭೆಯುಳ್ಳವನೂ, ಮುದ್ಗರಾಯುಧಧರನೂ ಆದ ಹೃಷೀಕೇಶನೂ ವಾಸವಾಗಿರುವರು. ಎಲೈ ಮುನಿವರನೇ! ಹೀಗೆ, ಪದ್ಮನಾಭನು ಶಾರ್ಙ್ಗಧರನೂ, ಸಹಸ್ರಸೂರ್ಯಸಮಪ್ರಭನೂ ಆಗಿ ಆ ಮಾಣಿಕ್ಯ ಮಂಡಪಸ್ಥಾನದಲ್ಲಿ ಅನುಲೋಮಕ್ರಮದಿಂದ ಬಳಸಿ ನೆಲಸಿದವನಾಗಿ ರಕ್ಷಿಸುತ್ತಿರುವನು. ಇಂದ್ರಗೋಪಕಕಾಂತಿಯುಳ್ಳವನೂ, ಪಾಶಹಸ್ತನೂ, ಅಪರಾಜಿತನೂ, ಸರ್ವಾತ್ಮಕನೂ ಆದ ದಾಮೋದರನಾದರೋ ಸಮಸ್ತ ಆಯುಧಗಳನ್ನೂ ಧರಿಸಿ ಸರ್ವಶಕ್ತಿ ಸಂಪನ್ನನೂ, ಸರ್ವಜ್ಞನೂ, ಸರ್ವತೋಮುಖನೂ ಆಗಿ ಮಾಣಿಕ್ಯಮಂಡಪವನ್ನು ವಿಲೋಮ ಕ್ರಮದಿಂದ ಬಳಸಿನಿಂತು ಕಾಯುತ್ತಿರುವನು. ಹೀಗೆ ಹನ್ನೆರಡು ರೀತಿ ಗಳಿಂದಲೂ ಭಗವಂತನಾದ ಆ ಕಮಲಾಕ್ಷನು ಮಾಣಿಕ್ಯಮಂಡಪ ಪ್ರಾಕಾರದಲ್ಲಿರುವ ವಿಷ್ಣುಲೋಕದಲ್ಲಿ ವಿರಾಜಿಸುತ್ತಿರುವನು.

೮೭-೮೮. ಇದಾದ ಬಳಿಕ ಈ ಮಾಣಿಕ್ಯ ಮಂಡಪ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಸಹಸ್ರ ಸ್ತಂಭವೆಂಬ ಮನೋಹರ

**ಏಕಾ ಪಂಕ್ತಿಃ ಸಹಸ್ರೇಣ ಸ್ತಂಭಃ ಸ್ತಿರ್ಯಕ್ಪ್ರವರ್ತತೇ । [೮೯ ॥**
**ತಾದೃಶ್ಯಃ ಪಂಕ್ತಯೋ ಬಹ್ವ್ಯಃ ಸ್ತಂಭಾನಾಂತು ಚತುರ್ದಿಶಾಂ ॥**
**ಉಪರ್ಯಾಚ್ಛಾದನಂ ಚಾಪಿ ಪೂರ್ವವದ್ರತ್ನದಾರುಭಿಃ ।**
**ಶಿವಲೋಕಸ್ತತ್ರಮಹಾನ್ ಜಾಗರ್ತಿ ಸ್ಫುರಿತಾಕೃತಿಃ ॥ ೯೦ ॥**
**ಶೈವಾಗಮಾ ಮೂರ್ತಿಮಂತಸ್ತತ್ರಾಷ್ಟಾವಿಂಶತಿಃ ಸ್ಮೃತಾಃ ।**
**ನಂದಿ ಭೃಂಗಿ ಮಹಾಕಾಲ ಪ್ರಮುಖಾಸ್ತತ್ರಚೋತ್ತಮಾಃ ॥ ೯೧ ॥**
**ಷಟ್ತ್ರಿಂಶತ್ತತ್ರ ದೇವಾಶ್ಚ ಗಜವಕ್ತ್ರಾಃ ಸಹಸ್ರಶಃ ।**
**ಶಿವಲೋಕೋತ್ತಮೇ ತಸ್ಮಿನ್ ಸಹಸ್ರಸ್ತಂಭಮಂಟಪೇ ॥ ೯೨ ॥**
**ಈಶಾನಃ ಸರ್ವವಿದ್ಯಾನಾಂ ರಾಜತೇ ಚಂದ್ರಶೇಖರಃ ।**
**ಲಲಿತಾಜ್ಞಾಪಾಲಕಶ್ಚ ಲಲಿತಾಜ್ಞಾಪ್ರವರ್ತಕಃ ॥ ೯೩ ॥**

---

ಮಂಟಪವಿರುವುದು. ಈ ಮಂಟಪವು ವಿವಿಧರತ್ನಖಚಿತವಾಗಿ, ಅನೇಕ ಕಲ್ಪಗಳಿಂದಲಂಕೃತವಾಗಿ ಕಂಗೊಳಿಸುತ್ತಿರುವುದು. ಇಲ್ಲಿಯೇ ಅನೇಕ ಮಣಿಮಯ ಪ್ರಾಕಾರವೂ ಅತ್ಯುನ್ನತವಾಗಿ ವಿರಾಜಿಸುತ್ತಿರುವುದು.

೮೯-೯೦. ಒಂದೊಂದು ಸಾಲಿಗೂ ಸಾವಿರ ಸ್ತಂಭಗಳಿರುತ್ತವೆ. ಇಂಥ ಸ್ತಂಭಗಳ ಸಾಲುಗಳು ನಾಲ್ಕು ದಿಕ್ಕುಗಳಲ್ಲಿಯೂ ಅನೇಕ ವಾಗಿರುವುವು. ಈ ಮಂಡಪದ ಮೇಲ್ ಚಾವಣಿಯು ರತ್ನದಾರು ಗಳಿಂದ ನಿರ್ಮಿತವಾಗಿರುವುದು. ಮಹತ್ತರವಾದ ಶಿವಲೋಕವು ಅಲ್ಲಿಯೇ ವಿರಾಜಿಸುತ್ತಿರುವುದು.

೯೧-೯೭. ಎಲೈ ಕುಂಭಸಂಭವನೇ! ಇಪ್ಪತ್ತೆಂಟು ಶೈವಾಗಮ ಗಳೂ ಮೂರ್ತೀಭವಿಸಿ ಅಲ್ಲಿಯೇ ನೆಲಸಿರುವುವು. ನಂದಿ, ಭೃಂಗಿ, ಮಹಾಕಾಳರೇ ಮೊದಲಾದ ಮೂವತ್ತಾರು ಮಂದಿ ದೇವತೆಗಳೂ ಅಲ್ಲಿರುತ್ತಾರೆ. ಅಲ್ಲದೆ ಸಾವಿರಾರು ಗಜಾನನರೂ ಅಲ್ಲಿ ನೆಲಸಿರುವರು. ಇದೂ ಅಲ್ಲದೆ ಆ ಸಹಸ್ರಸ್ತಂಭಮಂಟಪದಲ್ಲಿ ವಿರಾಜಿಸುತ್ತಿರುವ ಉತ್ತಮ ಶಿವಲೋಕದಲ್ಲಿ ಸಮಸ್ತ ವಿದ್ಯೆಗಳಿಗೂ ಈಶ್ವರನಾದ ಚಂದ್ರ ಶೇಖರನು ವಾಸವಾಗಿರುವನು. ಈತನು ಶ್ರೀ ಲಲಿತಾಪರಮೇಶ್ವರಿಯ ಆಜ್ಞಾಪಾಲಕನಾಗಿ ಆಕೆಯ ಆಜ್ಞೆಯನ್ನೇ ನಡೆಸುತ್ತ, ಆಕೆಯ ಮಂತ್ರ ವನ್ನೇ ಜಪಿಸುತ್ತ ಯಾವಾಗಲೂ ಆನಂದತುಂದಿಲಿತಸ್ವಾಂತನಾಗಿ, ತನ್ನ ಭಕ್ತರಿಗೆ ಶ್ರೀ ಲಲಿತಾಮಂತ್ರಸಿದ್ಧಿಯಾಗಲೋಸುಗ ಮಂಗಳಮಯ ವಾದ ತನ್ನ ದೃಷ್ಟಿಯನ್ನು ಅನುಗ್ರಹಿಸುತ್ತ ಅವರ ಒಳಗಣ ಹೊರಗಣ

ಲಲಿತಾಮಂತ್ರಜಾಪೀ ಚ ನಿತ್ಯಮಾನಂದ ಮಾನಸಃ ।
ಶೈವ್ಯಾ ದೃಷ್ಟ್ಯಾ ಸ್ವಭಕ್ತಾನಾಂ ಲಲಿತಾಮಂತ್ರಸಿದ್ಧಯೇ ॥ ೯೪ ॥
ಅಂತರ್ಬಹಿಸ್ತಮಃಪುಂಜನಿರ್ಭೇದನಪಟೀಯಸೀಮ್ ।
ಮಹಾಪ್ರಕಾಶರೂಪಾಂ ತಾಂ ಮೇಧಾಶಕ್ತಿಂ ಪ್ರಕಾಶಯನ್ ॥೯೫॥
ಸರ್ವಜ್ಞಃ ಸರ್ವಕರ್ತಾ ಚ ಸಹಸ್ರಸ್ತಂಭಮಂಟಪೇ ।
ವರ್ತಮಾನೋ ಮಹಾದೇವಃ ಶ್ರೀದೇವೀಮೇವ ಸೇವತೇ ॥ ೯೬ ॥
ಇತ್ಥಂ ಕಾರಣ ಕೃತ್ಯೇಂದ್ರಾಃ ಶ್ರೀದೇವೀ ಭಕ್ತಿನಿರ್ಭರಾಃ ।
ತತ್ತತ್ಸಾಲಾನ್ಸಮಾಶ್ರಿತ್ಯ ವರ್ತಂತೇ ಕುಂಭಸಂಭವ ॥ ೯೭ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಅಷ್ಟಾವಿಂಶೋಽಧ್ಯಾಯಃ

---

ಅಜ್ಞಾನತಿಮಿರವನ್ನು ಕಳೆಯುವುದರಲ್ಲಿ ಸಮರ್ಥವಾದುದೂ, ಮಹಾಪ್ರಕಾಶರೂಪವಾದುದೂ ಆದ ತನ್ನ ಮೇಧಾಶಕ್ತಿಯನ್ನು ಬೆಳಗಿಸುತ್ತ ಅಲ್ಲಿಯೇ ಕಂಗೊಳಿಸುತ್ತಿರುವನು. ಇಂತಹ ಸರ್ವಜ್ಞನೂ, ಸರ್ವಕರ್ತನೂ ಆದ ಆ ಮಹಾದೇವನು ಆ ಸಹಸ್ರಸ್ತಂಭ ಮಂಟಪದಲ್ಲಿರುವ ಶಿವಲೋಕದಲ್ಲಿ ನೆಲಸಿ ಶ್ರೀ ಲಲಿತಾಪರಮೇಶ್ವರಿಯನ್ನೇ ಸೇವಿಸುತ್ತಿರುವನು. ಎಲೈ ಕುಂಭಸಂಭವನೇ! ಈ ಪ್ರಕಾರ ಕಾರಣಪುರುಷರಾದ ಬ್ರಹ್ಮ ವಿಷ್ಣು ಮಹೇಶ್ವರಾದಿಗಳೆಲ್ಲರೂ ಆಯಾ ಪ್ರಾಕಾರಗಳಲ್ಲಿ ವಾಸಿಸುತ್ತ ಶ್ರೀಲಲಿತಾದೇವಿಯಲ್ಲಿ ಭಕ್ತಿನಿರ್ಭರರಾಗಿರುವರು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಏಕೋನತ್ರಿಂಶೋಽಧ್ಯಾಯಃ

[ಶ್ರೀ ಮಹಾಪದ್ಮಾಟವೀ ವರ್ಣನಂ]

ದಿವ್ಯಾಃ ಕಾಮಫಲಪ್ರದಾಃ ಶುಭಮಹಾಪದ್ಮಾಟವೀ ಭೂಸ್ಥಿತಾ
ದೇವ್ಯೋ ದೀಪಿತ ಸುಂದರಾಂಗ ಕಿರಣಾಸ್ಸಮ್ಯಕ್ಪ್ರಮೋದಾಕರಾಃ ।
ನಿತ್ಯಂ ಪಾದುಕಪೂಜಕಾಶ್ಚ ತವ ಹೇ ಮಾತರ್ಮನೋಽಜ್ಞಾಮೃತೇ
ತ್ವಾಮೇತಾಂ ಲಲಿತಾಂಬಿಕಾಂ ಸುನಯನಾಂ ಶ್ರೀಕಾಮನಾಥಾಂ ಭಜೇ ॥

ಶ್ರೀ ಹಯಗ್ರೀವಃ—

**ಅಥ ವಾಪೀತ್ರಯಾದೀನಾಂ ಕಕ್ಷ್ಯಾಭೇದಾನ್ ಪ್ರಚಕ್ಷ್ಮಹೇ । [೧॥**
**ಯೇಷಾಂ ಶ್ರವಣಮಾತ್ರೇಣ ಜಾಯತೇ ಶ್ರೀರ್ಮಹೋದಯಾ ॥**
**ಸಹಸ್ರಸ್ತಂಭಸಾಲಸ್ಯಾಂತರೇ ಮಾರುತಯೋಜನೇ ।**
**ಮನೋ ನಾಮ ಮಹಾಸಾಲಃ ಸರ್ವರತ್ನವಿಚಿತ್ರಿತಃ ।**
**ಪೂರ್ವವದ್ಗೋಪುರದ್ವಾರ ಕವಾಟಾರ್ಗಲ ಸಂಯುತಃ ॥ ೨ ॥**
**ತನ್ಮಧ್ಯಕಕ್ಷ್ಯಾಭಾಗಸ್ತು ಸರ್ವೋಽಪ್ಯಮೃತವಾಪಿಕಾ ।**
**ಯತ್ಪೀತ್ವಾ ಯೋಗಿನಃ ಸಿದ್ಧಾ ವಜ್ರಕಾಯಾ ಮಹಾಬಲಾಃ ॥ ೩ ॥**
**ಭವಂತಿ ಪುರುಷಾಃ ಪ್ರಾಜ್ಞ ತದೇವ ಹಿ ರಸಾಯನಂ ।**
**ತಸ್ಯಾಮಮೃತವಾಪ್ಯಾಂ ತು ವರ್ತತೇ ತೋಯತಾಂ ಗತಂ ॥ ೪ ॥**

---

## ಕನ್ನಡದ ಅನುವಾದ

[ಶ್ರೀ ಮಹಾಪದ್ಮಾಟವೀ ವರ್ಣನ]

೧. ಹಯಗ್ರೀವಮುನಿಯು ಹೇಳುತ್ತಾನೆ:—ಅಯ್ಯಾ ಅಗಸ್ತ್ಯಮುನಿಯೇ! ಇನ್ನು ಮುಂದೆ, ಕೇಳಿದ ಮಾತ್ರದಿಂದಲೇ ಸಮಸ್ತ ಸಂಪದಗಳೂ ಲಭಿಸುವಂತಹ ವಾಪೀತ್ರಯವಿಚಾರವನ್ನೂ, ಅಲ್ಲಿಯ ಪ್ರಾಕಾರಗಳ ಭೇದಗಳನ್ನೂ ತಿಳಿಸುತ್ತೇನೆ; ಕೇಳು.

೨. ಸಹಸ್ರಸ್ತಂಭಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಸಮಸ್ತ ರತ್ನರಂಜಿತವೂ, ಹಿಂದಿನ ಪ್ರಾಕಾರಗಳಂತೆಯೇ ಗೋಪುರ, ದ್ವಾರ, ಕವಾಟ, ಅರ್ಗಲಗಳಿಂದ ಶೋಭಿತವೂ ಆದ ಮನಃ ಪ್ರಾಕಾರವಿರುವುದು.

೩-೪. ಎಲೈ ಪ್ರಾಜ್ಞನೇ! ಆ ಮನಃ ಪ್ರಾಕಾರದ ಮಧ್ಯಕಕ್ಷ್ಯೆ

**ತದ್ಗಂಧಾಘ್ರಾಣಮಾತ್ರೇಣ ಸಿದ್ಧಿಕಾಂತಾಪತಿರ್ಭವೇತ್ ।**
**ಅಸ್ಪೃಶನ್ನಪಿ ವಿಂಧ್ಯಾರೇ ಪುರುಷಃ ಕ್ಷೀಣಕಲ್ಮಷಃ ॥ ೫ ॥**
**ಉಭಯೋಃ ಸಾಲಯೋರ್ಮಧ್ಯೇ ಸುಧಾವಾಪೀತಟದ್ವಯಂ ।**
**ಅರ್ಧಕ್ರೋಶ ಸಮಾಯಾಮಮನ್ಯತ್ಸರ್ವಂ ಚ ವಾಪಿಕಾ ॥ ೬ ॥**
**ಚತುರ್ಯೋಜನದೂರಂ ತು ತಲಂ ತಸ್ಯಾ ಜಲಾಂತರೇ ।**
**ಸೋಪಾನಾವಲಯಸ್ತಸ್ಯಾಂ ನಾನಾರತ್ನವಿಚಿತ್ರಿತಾಃ ॥ ೭ ॥**
**ಸ್ವರ್ಣವರ್ಣಾ ರತ್ನವರ್ಣಾಸ್ತಸ್ಯಾ ಹಂಸಾಶ್ಚ ಸಾರಸಾಃ ।**
**ಆಸ್ಫಾಲಯಂತೇ ತಟದ್ವಂದ್ವಂ ತರಂಗೈರತಿಚಂಚಲೈಃ ॥ ೮ ॥**
**ಪಕ್ಷಿಣಸ್ತಜ್ಜಲಂ ಪೀತ್ವಾ ರಸಾಯನಮಯಂ ನವಂ ।**
**ಅಜರಾಮರತಾಂ ಪ್ರಾಪ್ತಾಸ್ತತ್ರ ವಿಂಧ್ಯನಿಷೂದನ ॥ ೯ ॥**
**ಸದಾ ಕೂಜಿತಲಕ್ಷ್ಯೇಣ ತತ್ರ ಕಾರಂಡವದ್ವಿಜಾಃ ।**
**ಜಪಂತಿ ಲಲಿತಾದೇವ್ಯಾ ಮಂತ್ರಮೇವ ಮಹತ್ತರಂ ।**
**ಪರಿತೋ ವಾಪಿಕಾಚಕ್ರಪರಿವೇಷೇಣ ಭೂಯಸಾ ॥ ೧೦ ॥**

---

ಪ್ರದೇಶವೆಲ್ಲವೂ ಅಮೃತವಾಪಿಯೆನಿಸುತ್ತದೆ. ಅದರ ಜಲವನ್ನು ಪಾನಮಾಡಿದ ಪುರುಷರು ವಜ್ರಕಾಯರೂ, ಮಹಾಬಲರೂ ಆದ ಯೋಗಿಗಳೂ, ಸಿದ್ಧರೂ ಆಗುತ್ತಾರೆ. ಅದೇ ರಸಾಯನವೆನಿಸುತ್ತದೆ. ಇಂತಹ ರಸಾಯನವು ಆ ಅಮೃತವಾಪಿಯಲ್ಲಿ ಜಲರೂಪವನ್ನು ಹೊಂದಿರುತ್ತದೆ.

೫. ಓ ವಿಂಧ್ಯಮರ್ದನಾ! ಆ ಅಮೃತವಾಪಿಯ ಗಂಧವನ್ನು ಆಘ್ರಾಣಿಸಿದ ಮಾತ್ರದಿಂದಲೇ ಮಾನವನು ಸಿದ್ಧಿ ಕನ್ಯೆಯ ಪತಿಯಾಗುತ್ತಾನೆ; ಸ್ಪರ್ಶಿಸಿದ ಮಾನವನು ಪಾಪರಹಿತನಾಗುತ್ತಾನೆ.

೬-೧೦. ಎರಡೂ ಪ್ರಾಕಾರಗಳ ಪಾರ್ಶ್ವಗಳೇ ಆ ಅಮೃತ ವಾಪಿಯ ತೀರಗಳು. ಅದರ ಉದ್ದವು ಕ್ರೋಶಾರ್ಧವು. ಉಳಿದುದೆಲ್ಲ ಅಮೃತವಾಪಿಯೇ! ಅದರ ತಲಪ್ರದೇಶವು ನಾಲ್ಕು ಯೋಜನಗಳ ದೂರವಿರುತ್ತದೆ. ಸೋಪಾನಗಳ ಸಾಲುಗಳೆಲ್ಲವೂ ಬಗೆ ಬಗೆಯ ರತ್ನಗಳಿಂದಲಂಕೃತವಾಗಿರುವುವು. ಅದರಲ್ಲಿ ನೆಲಸಿರುವ ಹಂಸಸಾರಸ ಪಕ್ಷಿಗಳೆಲ್ಲವೂ ಚಿನ್ನರನ್ನಗಳ ಬಣ್ಣಗಳುಳ್ಳವುಗಳಾಗಿರುವುವು. ಆ ಪಕ್ಷಿಗಳೆಲ್ಲವೂ ಬಹು ಚಂಚಲವಾದ ಆ ವಾಪೀಜಲದ ತರಂಗಗಳೊಡನೆಯೇ ಅದರ ಎರಡೂ ತೀರಗಳನ್ನು ಸೋಕಿ ಸಂಚರಿಸುತ್ತಿರುತ್ತವೆ. ಎಲೈ

ನ ತತ್ರ ಗಂತುಂ ಭಾಗೋಽಸ್ತಿ ನೌಕಾವಹನಮಂತರಾ ।
ಆಜ್ಞಯಾ ಕೇವಲಂ ತತ್ರ ಮಂತ್ರಿಣೀದಂಡನಾಥಯೋಃ ॥ ೧೧ ॥
ತಾರಾನಾಮ ಮಹಾಶಕ್ತಿರ್ವರ್ತತೇ ತರಣೀಶ್ವರೀ ।
ಬಾಹ್ಯಾಸ್ತತ್ರೋತ್ಪಲಶ್ಯಾಮಾಸ್ತಾರಾಯಾಃ ಪರಿಚಾರಿಕಾಃ ॥೧೨॥
ರಕ್ತನೌಕಾಸಹಸ್ರೇಣ ಖೇಲಂತಿ ಸರಸೀಜಲೇ ।
ಅಪರಂ ಪಾರಮಾಯಾಂತಿ ಪುನರ್ಯಾಂತಿ ಪರಂ ತಟಂ । [ ೧೩ ॥
ವೀಣಾವೇಣುಮೃದಂಗಾದಿ ವಾದಯಂತ್ಯೋ ಮುಹುರ್ಮುಹುಃ॥
ಕೋಟಿಶಸ್ತತ್ರ ತಾರಾಯಾ ನಾವಿಕ್ಯೋ ನವಯೌವನಾಃ ।
ಮುಹುರ್ಗಾಯಂತಿ ನೃತ್ಯಂತಿ ವಾಹಯಂತಿ ಮುಹುಸ್ತರೀಃ ॥ ೧೪ ॥
ಅರಿತ್ರಪಾಣಯಃ ಕಾಶ್ಚಿತ್ಕಾಶ್ಚಿಚ್ಛೃಂಗಾಂಬುಪಾಣಯಃ ।
ಪಿಬಂತ್ಯಸ್ತತ್ಸುಧಾತೋಯಂ ಸಂಚರಂತ್ಯಸ್ತರೀಶತೈಃ ॥ ೧೫ ॥

---

ಅಗಸ್ತ್ಯ ಮುನಿಯೇ! ಹಂಸಕಾರಂಡವಾದಿ ಪಕ್ಷಿಗಳೆಲ್ಲವೂ ಈ ಅಮೃತವಾಪಿಯ ರಸಾಯನಮಯವಾದ ಜಲವನ್ನು ಪಾನಮಾಡಿ ಅಜರತ್ವವನ್ನೂ, ಅಮರತ್ವವನ್ನೂ ಪಡೆದು ಅಲ್ಲಿಯೇ ನೆಲಸಿ ಸುತ್ತಲೂ ಸುತ್ತುತ್ತ ಇನಿದನಿಯಿಂದ ವ್ಯಕ್ತವಾಗಿ ಶ್ರೀ ಲಲಿತಾಮಹಾಮಂತ್ರವನ್ನೇ ಜಪಿಸುತ್ತಿರುತ್ತವೆ.

೧೧. ಶ್ರೀ ಮಂತ್ರಿಣೀದಂಡನಾಥೆಯರ ಅಪ್ಪಣೆಯನ್ನು ಪಡೆದು ನೌಕೆಯ ಮೂಲಕ ಅಲ್ಲಿ ಹೋಗಬೇಕೇ ಹೊರತು ಮತ್ತೆ ಬೇರೆ ಮಾರ್ಗವೇ ಇರುವುದಿಲ್ಲ.

೧೨–೧೫. ಎಲೈ ಕುಂಭಸಂಭವನೇ! ಅಲ್ಲಿರುವ ನಾವೆಗಳಿಗೆಲ್ಲ ಒಡತಿಯಾಗಿ, ತಾರಾ ಎಂಬ ಮಹಾಶಕ್ತಿದೇವತೆಯು ವಾಸವಾಗಿರುವಳು. ಕನ್ನೈದಿಲೆಯ ಕಾಂತಿಯಿಂದ ಕಂಗೊಳಿಸುತ್ತ, ನಾವೆಗಳನ್ನು ನಡೆಸುವವರಾದ, ಆ ತಾರಾದೇವಿಯ ಪರಿಚಾರಿಕೆಯರೂ ಅಲ್ಲಿಯೇ ಇರುತ್ತಾರೆ. ಇವರೆಲ್ಲರೂ ರಕ್ತವರ್ಣದ ಸಾವಿರಾರು ನೌಕೆಗಳಲ್ಲಿ ಕುಳಿತು ಆ ಸರೋವರದಲ್ಲಿ ಈ ದಡದಿಂದಾದಡಕ್ಕೂ, ಆ ದಂಡದಿಂದೀದಡಕ್ಕೂ ಮತ್ತೆ ಮತ್ತೆ ಸಂಚರಿಸುತ್ತಿರುತ್ತಾರೆ. ತಾರಾದೇವಿಯ ಈ ಪರಿಚಾರಿಕೆಯರೆಲ್ಲರೂ ನವಯೌವನವತಿಯರು. ಅನೇಕ ಕೋಟಿ ಸಂಖ್ಯಾಕರಾದ ಈ ಪರಿಚಾರಿಕೆಯರೆಲ್ಲರೂ ವೀಣೆ, ಕೊಳಲು, ಮೃದಂಗ, ಮೊದಲಾದ ವಾದ್ಯಗಳನ್ನು ಬಾರಿ ಬಾರಿಗೂ ನುಡಿಸುತ್ತ, ಬಾರಿ ಬಾರಿಗೂ ಹಾಡುತ್ತಲೂ, ಕುಣಿಯುತ್ತಲೂ

ತಾಸಾಂ ನೌಕಾವಾಹಿಕೀನಾಂ ಶಕ್ತೀನಾಂ ಶ್ಯಾಮಲತ್ವಿಷಾಂ ।
ಪ್ರಧಾನಭೂತಾ ತಾರಾಂಬಾ ಜಲಾಪಚ್ಛವಮನಕ್ಷಮಾ ॥ ೧೬ ॥
ಆಜ್ಞಾಂ ವಿನಾ ತಯೋಸ್ತಾರಾ ಮಂತ್ರಿಣೀದಂಡನಾಥಯೋಃ ।
ತ್ರಿಣೇತ್ರಸ್ಯಾಪಿ ನೋ ದತ್ತೇ ನಾಪಿಕಾಂಭಸಿ ಸಂತರನ್ ॥ ೧೭ ॥
ಗಾಯಂತೀನಾಂ ಚಲಂತೀನಾಂ ನೌಕಾಭಿರ್ಮಣಿಚಾರುಭಿಃ ।
ಮಹಾರಾಜ್ಞೀಮಹೌದಾರ್ಯಂ ಪಠಂತೀನಾಂ ಪದೇ ಪದೇ ॥೧೮॥
ಪಿಬಂತೀನಾಂ ಮಧು ಸ್ಫೀತಂ ಮಾಣಿಕ್ಯಚಷಕೋದರೈಃ ।
ಪ್ರತಿನೌಕಂ ಮಣಿಗೃಹೇ ಭವಂತೀನಾಂ ಮನೋಹರೇ ।
ತಾರಾತರಣಿಶಕ್ತೀನಾಂ ಸಮವಾಯೋಽತಿ ಸುಂದರಃ ॥ ೧೯ ॥
ಕಾಶ್ಚಿನ್ನೌಕಾಃ ಸುವರ್ಣಾಢ್ಯಾಃ ಕಾಶ್ಚಿದ್ರತ್ನಕೃತಾ ಮುನೇ ।
ಮಕರಾಕಾರಮಾಪನ್ನಾಃ ಕಾಶ್ಚಿನ್ನೌಕಾ ಮೃಗಾನನಾಃ ॥ ೨೦ ॥

---

ಆ ಸರೋವರದಲ್ಲಿ ನಾವೆಗಳನ್ನು ನಡೆಸುತ್ತಿರುತ್ತಾರೆ. ಇವರಲ್ಲಿ ಕೆಲವರು ಹುಟ್ಟುಗೋಲುಗಳನ್ನು ಧರಿಸಿಯೂ, ಕೆಲವರು ಕೊಂಬುಗಳನ್ನು ಧರಿಸಿಯೂ, ಆ ಸರೋವರದ ಅಮೃತ ಜಲವನ್ನು ಪಾನಮಾಡುತ್ತ ನೂರಾರು ನಾವೆಗಳಲ್ಲಿ ಸಂಚರಿಸುತ್ತಿರುತ್ತಾರೆ.

೧೬–೧೯. ಶ್ಯಾಮಲಕಾಂತಿಯುಳ್ಳವರೂ, ನೌಕಾವಾಹಕಿಯರೂ ಆದ ಈ ಶಕ್ತಿದೇವಿಯರೆಲ್ಲರಿಗೂ, ಆ ಸರೋವರದ ಜಲವೆಲ್ಲವನ್ನೂ ಶೋಷಿಸುವ ಶಕ್ತಿಯುಳ್ಳ ತಾರಾದೇವಿಯೇ ಒಡತಿಯಾಗಿರುವಳು. ಈಕೆಯು ಶ್ರೀಮಂತ್ರಿಣೀದಂಡನಾಥೆಯರ ಅಪ್ಪಣೆಯಿಲ್ಲದಿದ್ದರೆ ಸಾಕ್ಷಾತ್ತ್ರಿಣೇತ್ರನಿಗೂ ಆ ಸರೋವರವನ್ನು ದಾಟಲು ನೌಕೆಯನ್ನು ಕೊಡುವುದಿಲ್ಲವು. ಅಯ್ಯಾ ಅಗಸ್ತ್ಯನೇ! ಹಾಡುತ್ತಲೂ, ರಮಣೀಯ ಗಳಾದ ನೌಕೆಗಳಲ್ಲಿ ಸಂಚರಿಸುತ್ತಲೂ, ಮಹಾರಾಜ್ಞಿಯಾದ ಶ್ರೀ ಲಲಿತಾದೇವಿಯ ಮಹೌದಾರ್ಯವನ್ನು ಹೊಗಳುತ್ತಲೂ, ಮಾಣಿಕ್ಯ ಪಾನಪಾತ್ರೆಗಳಲ್ಲಿರುವ ಮಧುರ ಮಧುವನ್ನು ಪಾನಮಾಡುತ್ತಲೂ, ಮಣಿಗೃಹವಾಗಿ ಬೆಳಗುತ್ತಿರುವ ಮನೋಹರವಾದ ಪ್ರತಿಯೊಂದು ನೌಕೆಯಲ್ಲಿಯೂ ನೆಲಸಿರುವ ಈ ತಾರಾದೇವಿಯ ತರಣಿಶಕ್ತಿದೇವಿಯರ ಗುಂಪು, ನೋಡಲು ಬಹು ಸುಂದರವಾಗಿರುತ್ತದೆ.

೨೦–೨೩. ಈ ನಾವೆಗಳಲ್ಲಿ ಕೆಲವು ಸುವರ್ಣಮಯಗಳಾದವುಗಳು; ಕೆಲವು ರತ್ನನಿರ್ಮಿತವಾದವುಗಳು; ಮೊಸಳೆಗಳ ಆಕಾರವುಳ್ಳವುಗಳು

ಕಾಶ್ಚಿತ್ಸಿಂಹಾನನಾ ನಾವಃ ಕಾಶ್ಚಿದ್ದಂತಾವಲಾನನಾಃ ।
ಇತ್ಥಂ ವಿಚಿತ್ರರೂಪಾಭಿರ್ನೌಕಾಭಿಃ ಪರಿವೇಷ್ಟಿತಾ ॥ ೨೧ ॥
ತಾರಾಂಬಾ ಮಹತೀಂ ನೌಕಾಮಧಿರೂಢಾ ವಿರಾಜತೇ ।
ಆತ್ಮಾನುರೂಪರೂಪೇಣ ಲಲಿತಾಮಂತ್ರಜಾಪಿನಾ ॥ ೨೨ ॥
ಸಾರ್ಧಂ ಪ್ರಿಯತಮೇನೈವ ರತ್ನಸಾನುಮುಪೇಯುಷೀ ।
ಅನುಲೋಮ ವಿಲೋಮೇನ ಸಂಚಾರಂ ವಾಪಿಕಾಜಲೇ ।
ತನ್ವಾನಾ ಸತತಂ ತಾರಾ ಕಕ್ಷ್ಯಾಮೇನಾಂ ಹಿ ರಕ್ಷತಿ ॥ ೨೩ ॥
ಮನಸ್ಸಾಲಸ್ಯಾಂತರಾಲೇ ಸಪ್ತಯೋಜನದೂರತಃ ।
ಬುದ್ಧಿಸಾಲ ಇತಿ ಖ್ಯಾತಶ್ಚತುರ್ಯೋಜನಮುಚ್ಛ್ರಿತಃ ॥ ೨೪ ॥
ತನ್ಮಧ್ಯಕಕ್ಷ್ಯಾಭಾಗಸ್ತು ಸರ್ವಾಪ್ಯಾನಂದವಾಪಿಕಾ ।
ತತ್ರ ದಿವ್ಯಂ ಮಹಾಪದ್ಮಂ ಬಕುಲಾಮೋದಮೇದುರಂ ॥ ೨೫ ॥
ಪ್ರತಪ್ತ ಕನಕಚ್ಛಾಯಂ ತಜ್ಜಲತ್ವೇನ ವರ್ತತೇ ।
ಆನಂದವಾಪಿಕಾಗಾಧಃ ಪೂರ್ವವತ್ಪರಿಕೀರ್ತಿತಃ ।
ಸೋಪಾನಾದಿ ಕ್ರಮಶ್ಚೈವ ಪಕ್ಷಿಣಸ್ತತ್ರ ಪೂರ್ವವತ್ ॥ ೨೬ ॥

ಕೆಲವು; ಮೃಗಮುಖಗಳುಳ್ಳವುಗಳು ಕೆಲವು; ಕೆಲವು ಸಿಂಹಮುಖಗಳುಳ್ಳವುಗಳು; ಇನ್ನು ಕೆಲವು ಆನೆಯ ಮುಖಗಳುಳ್ಳವುಗಳು. ಹೀಗೆ ವಿಚಿತ್ರವಾದ ರೂಪಗಳನ್ನೊಳಗೊಂಡಿರುವ ಅನೇಕ ನೌಕೆಗಳಿಂದ ಪರಿವೇಷ್ಟಿತೆಯಾಗಿ ಆ ತಾರಾದೇವಿಯು ಮಹತ್ತರವಾದ ತನ್ನ ನೌಕೆಯಲ್ಲಿ ವಿರಾಜಿಸುತ್ತಿರುವಳು. ಆ ದೇವಿಯು ತನಗೆ ಅನುರೂಪವಾದ ರೂಪವುಳ್ಳವನಾಗಿ, ಯಾವಾಗಲೂ ಶ್ರೀ ಲಲಿತಾಮಹಾಮಂತ್ರವನ್ನು ಜಪಿಸುತ್ತಲಿರುವ ಪ್ರಿಯತಮನೊಡನೆ ಸಮಸ್ತ ರತ್ನಪ್ರಾಕಾರಗಳಿಗೂ ಹೋಗಿಬರುತ್ತ ಆ ಅಮೃತವಾಪಿಯಲ್ಲಿ ಅನುಲೋಮ ವಿಲೋಮ ರೀತಿಗಳಿಂದ ಸಂಚರಿಸುತ್ತ ಆ ಪ್ರಾಕಾರವೆಲ್ಲವನ್ನೂ ಸದಾಕಾಲದಲ್ಲಿಯೂ ಕಾಯುತ್ತಿರುತ್ತಾಳೆ.

೨೪–೨೬. ಈ ಮನಸ್ಸಾಲಕ್ಕೆ ಏಳು ಯೋಜನಗಳ ದೂರದಲ್ಲಿ ನಾಲ್ಕು ಯೋಜನಗಳ ಎತ್ತರವಿರುವ ಬುದ್ಧಿಸಾಲವೆಂಬ ಪ್ರಾಕಾರವಿರುವುದು. ಈ ಎರಡು ಪ್ರಾಕಾರಗಳ ನಡುವಣ ಪ್ರದೇಶವಾದರೋ ಆನಂದವಾಪಿಯೆನಿಸುವುದು. ಬಕುಲ ಪುಷ್ಪಗಂಧಭರಿತವೂ ದಿವ್ಯವೂ ಆದ ಮಹಾಪದ್ಮವು ಈ ಸರೋವರದಲ್ಲಿಯೇ ಇರುತ್ತದೆ. ಈ

**ತತ್ರತ್ಯಂ ಸಲಿಲಂ ಮದ್ಯಂ ಪಾಯಂ ಪಾಯಂ ತಟಸ್ಥಿತಾಃ ।**
**ವಿಹರಂತಿ ಮದೋನ್ಮತ್ತಾಃ ಶಕ್ತಯೋ ಮದಪಾಟಲಾಃ ॥ ೨೭ ॥**
**ಸಾಕ್ಷಾಚ್ಚ ವಾರುಣೀದೇವೀ ತತ್ರ ನೌಕಾಭಿನಾಯಿಕಾ । [ ೨೮ ॥**
**ಯಾಂ ಸುಧಾಮಾಲಿನೀಮಾಹುರ್ಯಾಮಾಹುರಮೃತೇಶ್ವರೀಂ॥**
**ಸಾ ತತ್ರ ಮಣಿನೌಕಾಸ್ಥಾ ಶಕ್ತಿಸೇನಾ ಸಮಾವೃತಾ ।**
**ಈಷದಾಲೋಕಮಾತ್ರೇಣ ತ್ರೈಲೋಕ್ಯಮದದಾಯಿನೀ ॥ ೨೯ ॥**
**ತರುಣಾದಿತ್ಯಸಂಕಾಶಾ ಮದರಕ್ತಕಪೋಲಭೂಃ ।**
**ಪಾರಿಜಾತಪ್ರಸೂನಸ್ರಕ್ಪರಿವೀತಕಚೋಚ್ಚಯಾ ॥ ೩೦ ॥**
**ವಹಂತೀ ಮದಿರಾಪೂರ್ಣಂ ಚಷಕಂ ಲೋಲದುತ್ಪಲಂ ।**
**ಪಕ್ವಂ ಪಿಶಿತಖಂಡಂ ಚ ಮಣಿಮಾತ್ರೇ ತಥಾನ್ಯಕೇ ॥ ೩೧ ॥**

---

ಕಮಲವು ಸರೋವರಜಲದಂತೆಯೇ ಪುಟಪಾಕ ಶೋಧಿತವಾದ ಸುವರ್ಣದ ಕಾಂತಿಯಿಂದ ವಿರಾಜಿಸುತ್ತಿರುವುದು. ಈ ಆನಂದವಾಪಿಯ ಆಳವೂ, ಇದರ ಸೋಪಾನವೇ ಮೊದಲಾದವುಗಳ ರಚನೆಯೂ, ಇಲ್ಲಿ ವಾಸಮಾಡುವ ಪಕ್ಷಿಗಳೂ ಹಿಂದೆ ನಿರೂಪಿಸಿದ ಅಮೃತವಾಪಿಯಲ್ಲಿ ಹೇಗೋ ಹಾಗೆಯೇ ಕಂಗೊಳಿಸುತ್ತಿರುವುವೆಂದು ಹೇಳಿದೆ.

೨೭-೩೩. ಅಯ್ಯಾ ಮುನಿಯೇ! ಈ ಬುದ್ಧಿಪ್ರಾಕಾರದ ಆನಂದ ವಾಪಿಯಲ್ಲಿ ಮದ್ಯವೇ ನೀರಿನ ರೂಪವನ್ನು ತಾಳಿರುತ್ತದೆ. ಇದರ ತೀರದಲ್ಲಿರುವ ಶಕ್ತಿದೇವತೆಗಳೆಲ್ಲರೂ ಈ ಮದ್ಯವನ್ನು ಕುಡಿದು ಕುಡಿದು ಮತ್ತಿನಿಂದ ಉನ್ಮತ್ತೆಯರೂ, ರಕ್ತವರ್ಣೆಯರೂ ಆಗಿ ವಿಹರಿಸುತ್ತಿರುತ್ತಾರೆ. ಯಾವಾಕೆಯನ್ನು ಸುಧಾಮಾಲಿನಿಯೆಂದೂ, ಅಮೃತೇಶ್ವರಿಯೆಂದೂ ಹೇಳುತ್ತಾರೆಯೋ ಆ ವಾರುಣೀದೇವಿಯೇ ಸಾಕ್ಷಾತ್ತಾಗಿ ಆ ಸರೋವರದಲ್ಲಿರುವ ನೌಕೆಗಳಿಗೆಲ್ಲ ಒಡತಿಯಾಗಿರುವಳು. ಅಲ್ಲಿ ಆ ದೇವಿಯು ಮಣಿಮಯವಾದ ನೌಕೆಯಲ್ಲಿ ಕುಳಿತು, ಶಕ್ತಿಸೇನಾ ಸಮಾವೃತೆಯಾಗಿ, ಒಂದು ಸಲ ಕುಡಿಗಣ್ಣೋಟವನ್ನು ಬೀರುವುದರಿಂದಲೇ ಮೂರು ಲೋಕಗಳನ್ನೂ ಉನ್ಮಾದಗೊಳಿಸುತ್ತ, ಬಾಲಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವಳೂ, ಮದದಿಂದ ಕೆಂಪೊಗೆದ ಕೆನ್ನೆಗಳುಳ್ಳವಳೂ, ಪಾರಿಜಾತ ಪುಷ್ಪಗಳನ್ನು ತಳೆದಿರುವ ಮುಡಿಯುಳ್ಳವಳೂ ಆಗಿ ಮದ್ಯಪೂರ್ಣವಾದ ಕುಂಭವನ್ನೊಂದು ಕೈಯಲ್ಲಿಯೂ, ಜೋಲುತ್ತಿರುವ ಕನ್ನೈದಿಲೆಯನ್ನು ಇನ್ನೊಂದು ಕೈಯಲ್ಲಿಯೂ, ಪಕ್ವ ಮಾಂಸಖಂಡ

**ನಾಯಕೇನಾನುಕೂಲೇನ ಸಾಕಂ ಶ್ರೀಮಂತ್ರಜಾಪಿನಾ ।**
**ವಾರುಣೀ ತರಣಿಶ್ರೇಣೀ ನಾಯಿಕಾ ತತ್ರರಾಜತೇ ॥ ೩೨ ॥**
**ಸಾಪ್ಯಾಜ್ಞಯೈವ ಸರ್ವೇಷಾಂ ಮಂತ್ರಿಣೀದಂಡನಾಥಯೋಃ ।**
**ದದಾತಿ ವಾಪೀ ತರಣಂ ತ್ರಿಣೇತ್ರಸ್ಯಾಪಿ ನಾನ್ಯಥಾ ॥ ೩೩ ॥**
**ಅಥ ಬುದ್ಧಿ ಮಹಾಸಾಲಾನ್ಯಂತರೇ ಮಾರುತಯೋಜನೇ ।**
**ಅಹಂಕಾರ ಮಹಾಸಾಲಃ ಪೂರ್ವವದ್ಗೋಪುರಾನ್ವಿತಃ ॥ ೩೪ ॥**
**ತಯೋಸ್ತು ಸಾಲಯೋರ್ಮಧ್ಯಕಕ್ಷ್ಯಾಭೂರಖಿಲಾಮುನೇ ।**
**ವಿಮರ್ಶವಾಪಿಕಾನಾಮ ಸೌಷುಮ್ನಾಮೃತರೂಪಿಣೀ ॥ ೩೫ ॥**
**ಯನ್ಮಹಾಯೋಗಿನಾಮಂತರ್ಮನೋಮಾರುತಪೂರಿತೇ ।**
**ಸುಷುಮ್ನಾ ದಂಡವಿವರೇ ಜಾಗರ್ತಿ ಪರಮಾಮೃತಂ ॥ ೩೬ ॥**
**ತದೇವ ತಸ್ಯಾಸ್ಸಲಿಲಂ ವಾಪಿಕಾಯಾಸ್ತಪೋಧನ ।**
**ಪೂರ್ವವತ್ತಟ ಸೋಪಾನಾ ಪಕ್ಷಿನೌಕಾಭಿಧಾಸ್ಮೃತಾ ॥ ೩೭ ॥**

---

ವನ್ನೂ, ಮಣಿಮಾಲೆಯನ್ನೂ ಉಳಿದೆರಡು ಕೈಗಳಲ್ಲಿಯೂ ಧರಿಸಿ, ತನಗೆ ಅನುಕೂಲನಾಗಿ ಯಾವಾಗಲೂ ಶ್ರೀ ಲಲಿತಾಮಹಾಮಂತ್ರವನ್ನೇ ಜಪಿಸುತ್ತಿರುವ ನಾಯಕನೊಡಗೂಡಿ ಅಲ್ಲಿರುವ ನೌಕಾಮಂಡಲಕ್ಕೆಲ್ಲ ನಾಯಿಕೆಯಾಗಿ ವಿರಾಜಿಸುತ್ತಿರುವಳು. ಈಕೆಯೂ ಸಹ ಮಂತ್ರಿಣೀ ದಂಡನಾಯಿಕೆಯರ ಆಜ್ಞೆಯಿದ್ದರೆ ಮಾತ್ರವೇ ತ್ರಿಣೇತ್ರನಿಗಾದರೂ ಆ ಸರೋವರವನ್ನು ದಾಟಲು ನೌಕೆಯನ್ನು ಕೊಡುವಳಾಗಲಿ ಮತ್ತೆ ಬೇರೆಯಲ್ಲವು.

೩೪-೩೭. ಇದಾದ ತರುವಾಯ ಈ ಬುದ್ಧಿ ಮಹಾಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಅದರಂತೆಯೇ ದ್ವಾರಗೋಪುರಗಳನ್ನೊಳ ಗೊಂಡಿರುವ ಅಹಂಕಾರ ಮಹಾಪ್ರಾಕಾರವು ಕಂಗೊಳಿಸುತ್ತಿರುವುದು. ಆ ಎರಡು ಪ್ರಾಕಾರಗಳ ನಡುವಣ ಪ್ರದೇಶವೇ ಸೌಷುಮ್ನಾಮೃತರೂಪ ವಾದ ವಿಮರ್ಶವಾಪಿಯು. ಮಾರುತಪೂರಿತವಾದ ಯೋಗಿಗಳ ಸುಷುಮ್ನಾ ನಾಡಿಯಲ್ಲಿ ಯಾವ ಪರಮಾಮೃತವು ನೆಲಸಿರುವುದೋ ಅದೇ ಈ ವಿಮರ್ಶವಾಪಿಯಲ್ಲಿ ಜಲರೂಪವಾಗಿರುವುದು. ಈ ಸರೋವರ ದಲ್ಲಿರುವ ಸೋಪಾನಗಳೂ, ಪಕ್ಷಿಗಳೂ, ನೌಕೆಗಳೂ ಎಲ್ಲವೂ ಹಿಂದೆ ನಿರೂಪಿಸಿದ ಸರೋವರಗಳಲ್ಲಿರುವವುಗಳಂತೆಯೇ ಕಂಗೊಳಿಸುತ್ತಿರುವುವು.

**ತತ್ರ ನೌಕೇಶ್ವರೀ ದೇವೀ ಕುರುಕುಲ್ಲೇತಿ ವಿಶ್ರುತಾ ।**
**ತಮಾಲಶ್ಯಾಮಲಾಕಾರಾ ಶ್ಯಾಮಕಂಚುಕಧಾರಿಣೀ ॥ ೩೮ ॥**
**ನೌಕೇಶ್ವರೀಭಿರನ್ಯಾಭಿಃ ಸ್ವಸಮಾನಾಭಿರಾವೃತಾ ।**
**ರಕ್ತಾರಿತ್ರಕರಾ ನಿತ್ಯಮುಲ್ಲಸನ್ಮದಮಾಂಸಲಾ ॥ ೩೯ ॥**
**ಪ್ರಿಯಂಕರೇಣ ಸಂಯುಕ್ತಾ ಪ್ರಿಯೇಣ ಶ್ರೀಕ್ರಮೋತ್ಸುಕಾ ।**
**ಪರಿತೋ ಭ್ರಾಮ್ಯತಿ ಮುನೇ ಮಣಿನೌಕಾಧಿರೋಹಿಣೀ ।**
**ವಾಪಿಕಾಪಯಸೋ ಗಾಧಃ ಪೂರ್ವವತ್ಪರಿಕೀರ್ತಿತಃ ॥ ೪೦ ॥**
**ಅಥಾಹಂಕಾರ ಸಾಲಸ್ಯಾಂತರೇ ಮಾರುತಯೋಜನೇ ।**
**ಸೂರ್ಯಬಿಂಬಮಯಃ ಸಾಲಶ್ಚತುರ್ಯೋಜನ ಮುಚ್ಛ್ರಿತಃ ॥ ೪೧ ॥**
**ಸೂರ್ಯಸ್ಯ ಯಾದೃಶಂ ತೇಜಸ್ತಾದೃಕ್ತತ್ರ ಪ್ರಭೋದಯಃ ।**
**ತನ್ಮಧ್ಯಕಕ್ಷ್ಯಾವಸುಧಾ ಖಚಿತಾ ಕುರುವಿಂದಕೈಃ ।**
**ತತ್ರ ಬಾಲಾತಪೋದ್ಗಾರಃ ಸರ್ವದಾ ವರ್ತತೇ ಮುನೇ ॥ ೪೨ ॥**

---

೩೮–೪೦. ಅಲ್ಲಿ ಕುರುಕುಲ್ಲೆಯೆಂದು ಹೆಸರಾದ ಶಕ್ತಿದೇವಿಯು ನೌಕೇಶ್ವರಿಯಾಗಿರುವಳು. ತಮಾಲಶ್ಯಾಮಲೆಯೂ, ಶ್ಯಾಮಲವರ್ಣದ ರವಿಕೆಯನ್ನು ತೊಟ್ಟಿರುವವಳೂ, ತನಗೆ ಸಮಾನರಾಗಿರುವ ಇತರ ನೌಕೇಶ್ವರಿಯರಿಂದ ಸುತ್ತುವರೆದವಳೂ ಆದ ಆ ಕುರುಕುಲ್ಲಾದೇವಿಯು ಕೆಂಬಣ್ಣದ ಹುಟ್ಟುಗೋಲನ್ನು ಕೈಯಲ್ಲಿ ತಾಳಿ, ಯಾವಾಗಲೂ ಹೊಸ ಹೊಸದಾಗಿ ಉಕ್ಕಿಬರುತ್ತಿರುವ ಮದದಿಂದ ತುಂಬಿ, ತನಗೆ ಪ್ರಿಯಂಕರನಾದ ಪ್ರಿಯನೊಡಗೂಡಿ ಶ್ರೀ ದೇವಿಯ ಪೂಜೆಯಲ್ಲಿಯೇ ಆಸಕ್ತೆಯಾಗಿ ಆ ವಿಮರ್ಶ ಸರೋವರದ ಸುತ್ತಲೂ ಮಣಿನೌಕೆಯಲ್ಲಿ ಕುಳಿತು ಸಂಚರಿಸುತ್ತಿರುತ್ತಾಳೆ. ಅಯ್ಯಾ ತಪೋಧನನೇ! ಈ ವಿಮರ್ಶ ವಾಪಿಯ ಆಳವೂ ಹಿಂದಿನ ಸರೋವರಗಳಂತೆಯೇ ಇರುತ್ತದೆ.

೪೧–೪೨. ಎಲೈ ಮುನಿಯೇ! ಈ ಅಹಂಕಾರ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ನಾಲ್ಕು ಯೋಜನಗಳ ಎತ್ತರವಿರುವ ಸೂರ್ಯ ಬಿಂಬಮಯ ಪ್ರಾಕಾರವಿರುವುದು. ಸೂರ್ಯನಿಗೆ ಯಾವ ತೇಜಸ್ಸಿರುವುದೋ ಆ ತೇಜಸ್ಸೇ ಇಲ್ಲಿಯೂ ಉದಿಸಿರುತ್ತದೆ. ಇದರ ನಡುವಣ ಭೂಮಿಯು ಕುರುವಿಂದಮಣಿಗಳಿಂದ ಖಚಿತವಾಗಿ ಯಾವಾಗಲೂ ಎಳೆ ಬಿಸಿಲನ್ನು ಸೂಸುತ್ತಲೇ ಇರುತ್ತದೆ. ಆದುದರಿಂದಲೇ ಈ ಪ್ರದೇಶಕ್ಕೆ ಬಾಲಾತಪೋದ್ಗಾರವೆಂದು ಹೆಸರಾಗಿರುವುದು.

ತಸ್ಯ ಸ್ಪರ್ಶನಮಾತ್ರೇಣ ಸುರಸಿದ್ಧ ನರಾಸುರಾಃ ।
ಸೂರ್ಯವಚ್ಚ ಪ್ರಕಾಶಾಂತೇ ತೇಜೋರೂಪತ್ವಮಾಗತಾಃ ॥ ೪೩ ॥
ತತ್ರ ಬಾಲಾತಪೋದ್ಗಾರೇ ಲಲಿತಾ ಪರಮೇಶ್ವರೀಂ ।
ಪ್ರತಿ ತೀವ್ರಂ ತಪಸ್ತಪ್ತ್ವಾ ಸೂರ್ಯೋಽಲಭತ ತಾಂ ದ್ಯುತಿಂ॥ ೪೪॥
ಗ್ರಹರಾಶಿಗಣಾಃ ಸರ್ವೇ ನಕ್ಷತ್ರಾಣ್ಯಪಿ ತಾರಕಾಃ ।
ತತ್ರೈವ ಹಿ ತಪಸ್ತಪ್ತ್ವಾ ಲೋಕಭಾಸ್ವರತಾಂ ಗತಾಃ ॥ ೪೫ ॥
ಮಾರ್ತಾಂಡಭೈರವಸ್ತತ್ರ ಭಿನ್ನೋ ದ್ವಾದಶಧಾಮುನೇ ।
ಶಕ್ತಿಭಿಸ್ತೈಜಸೀಭಿಶ್ಚ ಕೋಟಿಸಂಖ್ಯಾಭಿರನ್ವಿತಃ ॥ ೪೬ ॥
ಮಹಾಪ್ರಕಾಶ ರೂಪಶ್ಚ ಮದಾರುಣವಿಲೋಚನಃ ।
ಕಂಕೇಲಿ ತರುಷಂಡೇಷು ನಿತ್ಯಂ ಕ್ರೀಡಾರಸೋತ್ಸುಕಃ ॥ ೪೭ ॥
ವರ್ತತೇ ವಿಂಧ್ಯದರ್ಪಾರೇಽಪಾರೇಯಸ್ತಮಸಿಸ್ಥಿತಃ ।
ಮಹಾಪ್ರಕಾಶನಾಮ್ನಾಸ್ತಿ ತಸ್ಯ ಶಕ್ತಿರ್ಮಹೀಯಸೀ ॥ ೪೮ ॥

---

೪೩-೪೫. ಈ ಪ್ರದೇಶವನ್ನು ಸ್ಪರ್ಶಿಸಿದ ಮಾತ್ರದಿಂದಲೇ, ಸುರ ಸಿದ್ಧ ನರಾಸುರರೆಲ್ಲರೂ ತೇಜೋರೂಪವನ್ನು ತಾಳಿ ಸೂರ್ಯನಂತೆಯೇ ಪ್ರಕಾಶಿಸುತ್ತಾರೆ. ಸೂರ್ಯನೂ ಕೂಡ ಈ ಬಾಲಾತಪೋದ್ಗಾರದಲ್ಲಿ ಶ್ರೀ ಲಲಿತಾದೇವಿಯನ್ನು ಕುರಿತು ತೀವ್ರವಾದ ತಪಸ್ಸನ್ನಾಚರಿಸಿ ಅಂತಹ ತೇಜಸ್ಸನ್ನು ಪಡೆದನು. ಗ್ರಹರಾಶಿ ಸಮೂಹಗಳೂ, ನಕ್ಷತ್ರಗಳೂ, ಇತರ ತಾರೆಗಳೂ ಈ ಪ್ರದೇಶದಲ್ಲಿಯೇ ಶ್ರೀದೇವಿಯನ್ನು ಕುರಿತು ತಪವಂಗೈದು ಲೋಕವನ್ನು ಬೆಳಗುವವುಗಳಾದುವು.

೪೬-೪೮. ಈ ಬಾಲಾತಪೋದ್ಗಾರವಾಟಿಕೆಯಲ್ಲಿ ಶ್ರೀ ಮಾರ್ತಾಂಡ ಭೈರವನು ಮಹಾಪ್ರಕಾಶರೂಪನೂ, ಮದದಿಂದ ಕೆಂಪೊಗೆಯುತ್ತಿರುವ ಕಂಗಳುಳ್ಳವನೂ ಆಗಿ ಹನ್ನೆರಡು ಪ್ರಾಕಾರವಾಗಿ ಮೂರ್ತೀಭವಿಸಿ ಕೋಟ್ಯನುಕೋಟಿ ತೇಜಶ್ಶಕ್ತಿದೇವಿಯರೊಡಗೂಡಿ ಕಂಕೇಲಿವೃಕ್ಷಗಳ ತೋಪುಗಳಲ್ಲಿ ಯಾವಾಗಲೂ ಕ್ರೀಡಿಸುವುದರಲ್ಲಿಯೇ ನಿರತನಾಗಿ ನೆಲಸಿರುವನು. ಎಲೈ ವಿಂಧ್ಯದರ್ಪಮರ್ದನನೇ! ಅಪಾರವಾದ ಕತ್ತಲಲ್ಲಿರುವ ಈ ಮಾರ್ತಾಂಡಭೈರವ ಸ್ವಾಮಿಗೆ ಮಹಾತ್ಮಳಾದ ಮಹಾಪ್ರಕಾಶಿನಿಯೆಂಬ ಶಕ್ತಿದೇವಿಯು ಮಡದಿಯಾಗಿರುವಳು.

ಚಕ್ಷುಷ್ಮತ್ಯಪರಾಶಕ್ತಿಶ್ಛಾಯಾದೇವ್ಯಪರಾ ಸ್ಮೃತಾ ।
ಇತ್ಥಂ ತಿಸೃಭಿರೇತಾಭಿಃ ಶಕ್ತಿಭಿಃ ಪರಿವಾರಿತಃ ॥ ೪೯ ॥
ಲಲಿತಾಯಾ ಮಹೇಶಾನ್ಯಾಃ ಸದಾ ವಿದ್ಯಾಂ ಹೃದಾ ಜಪನ್ ।
ತದ್ಭಕ್ತಾನಾಮಿಂದ್ರಿಯಾಣಿ ಭಾಸ್ವರಾಣಿ ಪ್ರಕಾಶಯನ್ ॥ ೫೦ ॥
ಬಹಿರಂತಸ್ತಮೋಜಾಲಂ ಸಮೂಲಮುಪಮರ್ದಯನ್ ।
ತತ್ರ ಬಾಲಾ ತಪೋದ್ಯಾರೇ ಭಾತಿ ಮಾರ್ತಾಂಡಭೈರವಃ ॥ ೫೧ ॥
ಸೂರ್ಯಬಿಂಬಮಹಾಸಾಲಾಂತರೇ ಮಾರುತಯೋಜನೇ ।
ಚಂದ್ರಬಿಂಬ ಮಹಾಸಾಲಶ್ಚತುರ್ಯೋಜನಮುಚ್ಛ್ರಿತಃ ॥ ೫೨ ॥
ಪೂರ್ವವದ್ಗೋಪುರದ್ವಾರಕವಾಟಾರ್ಗಲ ಸಂಯುತಃ ।
ತನ್ಮಧ್ಯಭೂಃ ಸಮಸ್ತಾಪಿ ಚಂದ್ರಿಕೋದ್ಯಾರ ಉಚ್ಯತೇ ॥ ೫೩ ॥
ತತ್ರೈವ ಚಂದ್ರಿಕೋದ್ಯಾರೇ ತಪಸ್ತಪ್ತ್ವಾ ಸುದಾರುಣಂ ।
ಅತ್ರಿನೇತ್ರ ಸಮುತ್ಪನ್ನಶ್ಚಂದ್ರಮಾಃ ಕಾಂತಿಮಾಯಯೌ ॥ ೫೪ ॥
ತತ್ರ ಶ್ರೀಸೋಮನಾಥಾಖ್ಯೋ ವರ್ತತೇ ನಿರ್ಮಲಾಕೃತಿಃ ।
ದೇವಸ್ತ್ರೈಲೋಕ್ಯ ತಿಮಿರಧ್ವಂಸೀ ಸಂಸಾರವರ್ತಕಃ ॥ ೫೫ ॥

---

೪೯-೫೧. ಈತನಿಗೆ ಚಕ್ಷುಷ್ಮತಿ, ಛಾಯಾದೇವಿಯರೆಂಬ ಇನ್ನೂ ಈರ್ವರು ಶಕ್ತಿದೇವಿಯರಿರುವರು. ಈತನು ಈ ಮೂವರು ಶಕ್ತಿದೇವಿಯರೊಡಗೂಡಿ ಮಹೇಶ್ವರಿಯಾದ ಶ್ರೀ ಲಲಿತಾದೇವಿಯ ಮಹಾವಿದ್ಯೆಯನ್ನು ಮನಸ್ಸಿನಲ್ಲಿಯೇ ಯಾವಾಗಲೂ ಜಪಿಸುತ್ತ ಆಕೆಯ ಭಕ್ತರ ಸಮಸ್ತ ಜ್ಞಾನೇಂದ್ರಿಯಗಳನ್ನೂ ಸ್ಫುಟವಾಗಿ ಬೆಳಗಿಸಿ, ಅವರ ಒಳಗಣ ಹೊರಗಣ ಕತ್ತಲೆಲ್ಲವನ್ನೂ ಬುಡಸಹಿತ ನಾಶಗೊಳಿಸುತ್ತ ಆ ಬಾಲಾ ತಪೋದ್ಯಾರಿ ವಾಟಿಕೆಯಲ್ಲಿ ವಾಸವಾಗಿರುವನು.

೫೨-೫೩. ಈ ಸೂರ್ಯಬಿಂಬ ಮಹಾಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ನಾಲ್ಕು ಯೋಜನಗಳ ಎತ್ತರವನ್ನೊಳಕೊಂಡು ಹಿಂದಿನ ಪ್ರಾಕಾರಗಳಂತೆಯೇ ಗೋಪುರ, ದ್ವಾರ, ಕವಾಟ, ಅರ್ಗಲಗಳಿಂದ ಕೂಡಿರುವ ಚಂದ್ರಬಿಂಬ ಮಹಾಪ್ರಾಕಾರವಿರುವುದು. ಈ ಎರಡು ಪ್ರಾಕಾರಗಳ ನಡುವಣನೆಲವೆಲ್ಲವೂ ಚಂದ್ರಿಕೋದ್ಯಾರ ವಾಟಿಕೆಯೆಂದು ಹೇಳುತ್ತಾರೆ.

೫೪-೫೯. ಈ ಚಂದ್ರಿಕೋದ್ಯಾರ ವಾಟಿಕೆಯಲ್ಲಿಯೇ ಅತ್ರಿಮುನಿಯ ನೇತ್ರದಿಂದುದ್ಭವಿಸಿದ ಚಂದ್ರನು ಶ್ರೀ ಲಲಿತಾಪರಮೇಶ್ವರಿಯನ್ನು

ಪಿಬಂಶ್ಚಷಕ ಸಂಪೂರ್ಣಂ ನಿರ್ಮಲಂ ಚಂದ್ರಿಕಾಮೃತಂ ।
ಸಪ್ತವಿಂಶತಿನಕ್ಷತ್ರಶಕ್ತಿಭಿಃ ಪರಿವಾರಿತಃ ॥ ೫೬ ॥
ಸದಾ ಪೂರ್ಣನಿಜಾಕಾರೋ ನಿಷ್ಕಲಂಕನಿಜಾಕೃತಿಃ ।
ತತ್ರೈವ ಚಂದ್ರಿಕೋದ್ಗಾರೇ ವರ್ತತೇ ಭಗವಾನ್ ಶಶೀ ॥ ೫೭ ॥
ಲಲಿತಾಯಾ ಜಪೈರ್ಧ್ಯಾನೈಃ ಸ್ತೋತ್ರೈಃ ಪೂಜಾಶತೈರಪಿ ।
ಅಶ್ವಿನ್ಯಾದಿಯುತಸ್ತತ್ರ ಕಾಲಂ ಕ್ಷಿಪತಿ ಚಂದ್ರಮಾಃ ॥ ೫೮ ॥
ಅನ್ಯಾಶ್ಚ ಶಕ್ತಯಸ್ತಾರಾನಾಮಧೇಯಾಃ ಸಹಸ್ರಶಃ ।
ಸಂತಿ ತಸ್ಯೈವ ನಿಕಟೇ ಸಾ ಕಕ್ಷ್ಯಾ ತತ್ಪ್ರಪೂರಿತಾ ॥ ೫೯ ॥
ಅಥ ಚಂದ್ರಾಖ್ಯ ಸಾಲಸ್ಯಾಂತರೇ ಮಾರುತಯೋಜನೇ । [ ೬೦ ॥
ಶೃಂಗಾರನಾಮಾ ಸಾಲೋಽಸ್ತಿ ಚತುರ್ಯೋಜನಮುಚ್ಛ್ರಿತಃ ॥
ಶೃಂಗಾರರಾಗರೂಪೈಸ್ತು ಕೌಸ್ತುಭೈರೇವ ನಿರ್ಮಿತಃ ।
ಮಹಾಶೃಂಗಾರ ಪರಿಖಾ ತನ್ಮಧ್ಯವಸುಧಾಖಿಲಾ ॥ ೬೧ ॥

---

ಕುರಿತು, ದಾರುಣವಾದ ತಪಸ್ಸನ್ನು ಮಾಡಿ ಕಾಂತಿಯನ್ನು ಪಡೆದನು. ಮೂರು ಲೋಕಗಳ ಕತ್ತಲೆಯನ್ನು ಧ್ವಂಸಗೊಳಿಸುವವನೂ, ಮೂರು ಲೋಕಗಳ ಸಂಸಾರವನ್ನು ನಡೆಸುವವನೂ ಆದ ಆ ಸೋಮನು ಅಲ್ಲಿಯೇ ವಾಸವಾಗಿರುವನು. ಯಾವಾಗಲೂ ಸಂಪೂರ್ಣವಾದ ಆಕಾರವುಳ್ಳವನೂ ಕಳಂಕವಿಲ್ಲದಿರುವವನೂ ಆದ ಈ ಸೋಮನಾಥನು ಇಪ್ಪತ್ತೇಳು ಸಂಖ್ಯೆಯ ನಕ್ಷತ್ರಶಕ್ತಿದೇವಿಯರೊಡಗೂಡಿ, ಪಾನಪಾತ್ರೆಯಲ್ಲಿ ತುಂಬಿರುವ ಬೆಳದಿಂಗಳೆಂಬ ಅಮೃತವನ್ನು ಪಾನಮಾಡುತ್ತಿರುತ್ತಾನೆ. ಪೂಜ್ಯನಾದ ಚಂದ್ರನೂ ಸಹ ಈ ವಾಟಿಕೆಯಲ್ಲಿಯೇ ಅಶ್ವಿನಿಯೇ ಮೊದಲಾದ ನಕ್ಷತ್ರದೇವಿಯರೊಡಗೂಡಿ ಶ್ರೀ ಲಲಿತಾದೇವಿಯ ಜಪ-ಧ್ಯಾನ-ಸ್ತೋತ್ರ-ಪೂಜೆಗಳನ್ನು ಮಾಡುತ್ತ ಕಾಲವನ್ನು ಕಳೆಯುತ್ತಿರುವನು. ತಾರಾ ಎಂಬ ಹೆಸರಿನ ಶಕ್ತಿಗಳು ಲೆಕ್ಕವಿಲ್ಲದಷ್ಟು ಮಂದಿ ಈ ಚಂದ್ರನ ಬಳಿಯಲ್ಲಿಯೇ ಇರುತ್ತಾರೆ. ಈ ತಾರೆಗಳಿಂದಲೇ ಆ ವಾಟಿಕೆಯು ತುಂಬಿಹೋಗಿದೆ.

೬೦-೬೩. ಇನ್ನು, ಈ ಚಂದ್ರಬಿಂಬ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ನಾಲ್ಕು ಯೋಜನಗಳ ಎತ್ತರವಿರುವ ಶೃಂಗಾರವೆಂಬ ಪ್ರಾಕಾರವಿರುವುದು. ಈ ಪ್ರಾಕಾರವು ಶೃಂಗಾರ ರೂಪಗಳಾದ ಕೌಸ್ತುಭ ಮಣಿಗಳಿಂದಲೇ ನಿರ್ಮಿತವಾಗಿದೆ. ಈ ಎರಡೂ ಪ್ರಾಕಾರಗಳ ನಡುವಣ

**ಪರಿಘಾವಲಯೇ ತತ್ರ ಶೃಂಗಾರರಸಪೂರಿತೇ ।**
**ಶೃಂಗಾರಶಕ್ತಯಃ ಸಂತಿ ನಾನಾಭೂಷಣಭಾಸುರಾಃ ॥ ೬೨ ॥**
**ತತ್ರ ನೌಕಾಸಹಸ್ರೇಣ ಸಂಚರಂತ್ಯೋ ಮದೋದ್ಧತಾಃ ।**
**ಉಪಾಸತೇ ಸದಾಮತ್ತಂ ನೌಕಾಸ್ಥಂ ಕುಸುಮಾಯುಧಂ ॥ ೬೩ ॥**
**ಸ ತು ಸಂಮೋಹಯತ್ಯೇವ ವಿಶ್ವಸಂಮೋಹಕಾರಿಭಿಃ ।**
**ವಿಶಿಖೈರಖಿಲಾನ್ ಲೋಕಾನ್ ಲಲಿತಾಜ್ಞಾವಶಂವದಃ ॥ ೬೪ ॥**
**ತತ್ಪ್ರಭಾವೇಣ ಸಂಮೂಢಾ ಮಹಾಪದ್ಮಾಟವೀಸ್ಥಲಮ್ ।**
**ನ ಗಂತುಂ ಪಾರಯತ್ಯೇವ ಸುರಸಿದ್ಧನರಾಸುರಾಃ ॥ ೬೫ ॥**
**ಬ್ರಹ್ಮವಿಷ್ಣುಮಹೇಶಾಸ್ತು ಶುದ್ಧಚಿತ್ತಾಃ ಸ್ವಭಾವತಃ । [ ೬೬ ॥**
**ತಸ್ಯಾಜ್ಞಯಾ ಪರಂ ಯಾಂತಿ ಮಹಾಪದ್ಮಾಟವೀಸ್ಥಲಮ್ ॥**
**ವಿನೀತಾಃ ಶುದ್ಧವೇಷಾಶ್ಚ ಲಲಿತಾಭಕ್ತಿನಿರ್ಭರಾಃ ।**
**ಸಾವಧಾನೇನ ಮನಸಾ ಯಾಂತಿ ಪದ್ಮಾಟವೀಸ್ಥಲಮ್ ॥ ೬೭ ॥**
**ಸಂಸಾರಿಣಶ್ಚ ರಾಗಾಂಧಾಃ ಬಹುಸಂಕಲ್ಪಕಲ್ಪನಾಃ ।**
**ಮೋಹಾಕುಲಾಶ್ಚ ಪುರುಷಾ ವಿಕಲ್ಪಕ್ಷೋಭಧೂಸರಾಃ ॥ ೬೮ ॥**

---

ನೆಲವೇ ಮಹಾಶೃಂಗಾರ ಪರಿಘವು. ಶೃಂಗಾರ ರಸದಿಂದ ತುಂಬಿರುವ ಈ ಪರಿಘ (ಕಂದಕ)ದಲ್ಲಿ ವಿವಿಧಾಭರಣ ಭೂಷಿತೆಯರಾದ ಶೃಂಗಾರ ಶಕ್ತಿದೇವಿಯರಿರುವರು. ಮದೋದ್ಧತೆಯರಾದ ಈ ದೇವಿಯರೆಲ್ಲರೂ ಸಾವಿರಾರು ನೌಕೆಗಳಲ್ಲಿ ಸಂಚರಿಸುತ್ತ ಯಾವಾಗಲೂ ಮದಿಸಿಯೇ ಇರುವ ನೌಕಾಗತನಾದ ಕುಸುಮಾಯುಧನನ್ನು ಸೇವಿಸುತ್ತಿರುವರು.

೬೪–೭೧. ಆ ಮಹಾಮನ್ಮಥನಾದರೋ ಶ್ರೀ ಲಲಿತಾಪರಮೇಶ್ವರಿಯ ಅಪ್ಪಣೆಯನ್ನು ನಡೆಯಿಸುವವನಾಗಿ ಪ್ರಪಂಚವನ್ನೇ ಸಂಮೋಹಗೊಳಿಸುವ ತನ್ನ ಬಾಣಗಳಿಂದ ಎಲ್ಲ ಲೋಕಗಳನ್ನೂ ಮೋಹಗೊಳಿಸುತ್ತಾನೆ. ಆತನ ಪ್ರಭಾವದಿಂದಲೇ ಸುರಸಿದ್ಧನರಾಸುರರೆಲ್ಲರೂ ಬುದ್ಧಿಗೆಟ್ಟು ಆ ಮಹಾಪದ್ಮಾಟವಿಯನ್ನು ಪ್ರವೇಶಿಸಲು ಸಮರ್ಥರಾಗದೇ ಹೋಗುತ್ತಾರೆ. ಬ್ರಹ್ಮವಿಷ್ಣುಮಹೇಶ್ವರರಾದರೋ ಸ್ವಭಾವದಿಂದಲೇ ಪರಿಶುದ್ಧವಾದ ಮನಸ್ಸುಳ್ಳವರಾದ ಕಾರಣ ಆ ಮನ್ಮಥನ ಅನುಜ್ಞೆಯನ್ನು ಪಡೆದು ಮಹಾಪದ್ಮಾಟವಿಯ ತುದಿಯನ್ನೂ ಮುಟ್ಟುತ್ತಾರೆ. ಇಷ್ಟೆಯಲ್ಲದೆ, ವಿನಯಸಂಪನ್ನರೂ, ಶುದ್ಧವಾದ ವೇಷವುಳ್ಳವರೂ, ಯಾವೊಂದು ಕಪಟವೂ ಇಲ್ಲದೆ ಪರಿಶುದ್ಧವಾದ ಮನಸ್ಸುಳ್ಳವರೂ,

**ಪ್ರಭೂತರಾಗಗಹನಃ ಪ್ರೌಢವ್ಯಾಮೋಹದಾಯಿನೀಂ ।**
**ಮಹಾಶೃಂಗಾರಪರಿಖಾಂ ತರಿತುಂ ನ ವಿಚಕ್ಷಣಾಃ ॥ ೬೯ ॥**
**ಯಸ್ಮಾದಜಯ್ಯಸೌಂದರ್ಯಸ್ತ್ರೈಲೋಕ್ಯಜನಮೋಹನಃ ।**
**ಮಹಾಶೃಂಗಾರಪರಿಘಾಧಿಕಾರೀ ವರ್ತತೇ ಸ್ಮರಃ ॥ ೭೦ ॥**
**ತಸ್ಯ ಸತ್ವಮತಿಕ್ರಮ್ಯ ಮಹತಾಮಪಿ ಮೋಹನಂ ।**
**ಮಹಾಪದ್ಮಾಟವೀಂ ಗಂತುಂ ನ ಕೋಽಪಿ ಭವತಿ ಕ್ಷಮಃ ॥ ೭೧ ॥**
**ಅಥ ಶೃಂಗಾರಸಾಲಸ್ಯಾಂತರೇ ಮಾರುತಯೋಜನೇ ।**
**ಚಿಂತಾಮಣಿಗೃಹಂ ನಾಮ ಚಕ್ರರಾಜಮಹಾಲಯಃ ॥ ॥ ೭೨ ॥**
**ತನ್ಮಧ್ಯಭೂಃ ಸಮಸ್ತಾಪಿ ಪರಿತೋ ರತ್ನಭೂಷಿತಾ ।**
**ಮಹಾಪದ್ಮಾಟವೀನಾಮ ಸರ್ವಸೌಭಾಗ್ಯದಾಯಿನೀ ॥ ೭೩ ॥**

---

ಶ್ರೀ ಲಲಿತಾದೇವಿಯಲ್ಲಿ ಪರಮ ಭಕ್ತಿಭರಿತರೂ ಆದ ಮಾನವರೆಲ್ಲರೂ ಸಾವಧಾನಚಿತ್ತದಿಂದ ಆ ಮಹಾಪದ್ಮಾಟವೀಸ್ಥಳವನ್ನು ಹೊಂದುವರು. ಕಾಮದಿಂದ ಕುರುಡರಾದವರೂ, ಅನೇಕ ಸಂಕಲ್ಪಗಳನ್ನು ಮಾಡುವವರೂ, ಮೋಹದಿಂದ ತಳಮಳಗೊಂಡವರೂ, ಇದೋ ಅದೋ ಎಂಬ ಭ್ರಾಂತಿಯಿಂದ ಕಳಂಕಿತರೂ, ಸಂಸಾರಿಗಳೂ ಆದ ಪುರುಷರಾದರೋ ಕಾಮವೇ ಬಹಳವಾಗಿ ತುಂಬಿ ಅತಿಶಯವಾದ ಮೋಹವನ್ನೇ ಉಂಟು ಮಾಡುವ ಆ ಮಹಾಶೃಂಗಾರ ಪರಿಘವನ್ನು ದಾಟಲು ಸಮರ್ಥರಾಗುವುದೇ ಇಲ್ಲ. ಅಯ್ಯಾ ಕುಂಭೋದ್ಭವನೇ! ಯಾರಿಂದಲೂ ಜಯಿಸಲಸದಳವಾದ ಸೌಂದರ್ಯವುಳ್ಳವನೂ, ಮೂರು ಲೋಕಗಳಲ್ಲಿಯೂ ವಾಸವಾಗಿರುವ ಸಮಸ್ತ ಜನರನ್ನೂ ಮೋಹಗೊಳಿಸುವವನೂ ಆದ ಆ ಮನ್ಮಥನು ಮಹಾಶೃಂಗಾರ ಪರಿಘಕ್ಕೆ ಅಧಿಕಾರಿಯಾಗಿರುವುದರಿಂದ, ಮಹಾತ್ಮರಿಗೂ ಮೋಹವನ್ನುಂಟುಮಾಡುವ ಅವನ ಪ್ರಭಾವವನ್ನು ಮೀರಿ ಆ ಮಹಾಪದ್ಮಾಟವಿಯನ್ನು ಪ್ರವೇಶಿಸಲು ಯಾರೊಬ್ಬರೂ ಸಮರ್ಥರಾಗುವುದಿಲ್ಲ.

೭೨-೭೬. ಈ ಶೃಂಗಾರ ಪ್ರಾಕಾರಕ್ಕೆ ಏಳು ಯೋಜನಗಳ ದೂರದಲ್ಲಿ ಶ್ರೀ ಚಿಂತಾಮಣಿ ಗೃಹವೆಂದು ಹೆಸರುಳ್ಳ ಶ್ರೀಚಕ್ರರಾಜ ಮಹಾಮಂದಿರವಿರುವುದು. ಆ ಎರಡೂ ಪ್ರಾಕಾರಗಳ ನಡುವಣಪ್ರದೇಶವೆಲ್ಲವೂ ಸುತ್ತಲೂ ರತ್ನಾಲಂಕೃತವಾಗಿರುವುದು. ಇದೇ ಸಮಸ್ತ ಸೌಭಾಗ್ಯಗಳನ್ನೂ ಕೊಡುವ ಮಹಾಪದ್ಮಾಟವಿಯೆಂಬುದು. ಎಲೈ

ಶೃಂಗಾರಾಖ್ಯಮಹಾಸಾಲಪರ್ಯಂತಂ ಗೋಪುರಂ ಮುನೇ ।
ಚತುರ್ದಿಕ್ಷ್ವಪ್ಯೇವಮೇವ ಗೋಪುರಾಣಾಂ ವ್ಯವಸ್ಥಿತಿಃ ॥ ೭೪ ॥
ಸರ್ವದಿಕ್ಷ್ವಥ ಉಕ್ತಾನಿ ಗೋಪುರಾಣಿ ಶತಂ ಮುನೇ । [ ೭೫ ॥
ಸಾಲಾಸ್ತು ವಿಂಶತಿಃ ಪ್ರೋಕ್ತಾಃ ಪಂಚಸಂಖ್ಯಾಧಿಕಾಃ ಶುಭಾಃ ।
ಸರ್ವೇಷಾಮಪಿ ಸಾಲಾನಾಂ ಮೂಲಂ ಯೋಜನ ಸಂಮಿತಮ್ ।
ಪದ್ಮಾಟವೀಸ್ಥಲಂ ವಕ್ಷ್ಯೇ ಸಾವಧಾನೋ ಮುನೇ ಶೃಣು ॥ ೭೬ ॥
ಸಮಸ್ತ ರತ್ನಖಚಿತೇ ತತ್ರ ಷಡ್ಯೋಜನಾಂತರೇ ।
ಪರಿತಃ ಸ್ಥಲಪದ್ಮಾನಿ ಮಹಾಕಾಂಡಾನಿ ಸಂತಿ ವೈ ॥ ೭೭ ॥
ಕಾಂಡಾಸ್ತು ಯೋಜನಾಯಾಮಾ ಮೃದುಭಿಃ ಕಂಟಕೈರ್ವೃತಾಃ ।
ಪತ್ರಾಣಿ ತಾಲದಶಕಮಾತ್ರಾಯಾಮಾನಿ ಸಂತಿ ವೈ ॥ ೭೮ ॥
ಕೇಸರಾಶ್ಚ ಸರೋಜಾನಾಂ ಪಂಚತಾಲಸಮಾಯುತಾಃ ।
ಕಿಷ್ಕುಶತಸಮುನ್ನಮ್ರಾಃ ಕರ್ಣಿಕಾಃ ಪರಿಕೀರ್ತಿತಾಃ ॥ ೭೯ ॥
ಅತ್ಯಂತಕೋಮಲಾನ್ಯತ್ರ ಸದಾ ವಿಕಸಿತಾನಿ ಚ ।
ನವಸೌರಭಹೃದ್ಯಾನಿ ವಿಶಂಕಟದಳಾನಿ ಚ ॥ ೮೦ ॥
ಬಹುಶಃ ಸಂತಿ ಪದ್ಮಾನಿ ಕೋಟೀನಾಮಪಿ ಕೋಟಿಶಃ ।
ಮಹಾಪದ್ಮಾಟವೀಕಕ್ಷ್ಯಾ ಪೂರ್ವಭಾಗೇ ಘಟೋದ್ಭವ॥ ೮೧ ॥

---

ಮುನಿಯೇ! ಇದರ ಗೋಪುರವು ಶೃಂಗಾರ ಪ್ರಾಕಾರದವರೆಗೂ ಹರಡಿರುತ್ತದೆ. ನಾಲ್ಕು ದಿಕ್ಕುಗಳಲ್ಲಿಯೂ ಹೀಗೆಯೇ ಗೋಪುರಗಳಿರುವುವು. ಈ ಪ್ರದೇಶದಲ್ಲಿ ಮಂಗಳಕರವಾದ ಇಪ್ಪತ್ತೈದು ಪ್ರಾಕಾರಗಳಿರುವುವೆಂದು ಹೇಳಲಾಗಿದೆ. ಈ ಎಲ್ಲ ಪ್ರಾಕಾರಗಳಲ್ಲಿರುವ ನಾಲ್ಕೂ ದಿಕ್ಕುಗಳ ಗೋಪುರಗಳೂ ಸೇರಿ ಇದಕ್ಕೆ ನೂರು ಗೋಪುರಗಳಿರುವುವುವೆಂದು ಹೇಳಿದೆ. ಈ ಪ್ರಾಕಾರಗಳ ಮೂಲ ಪ್ರದೇಶವು ಒಂದೊಂದು ಯೋಜನವಿರುವುದು. ಅಯ್ಯಾ ಮುನಿಯೇ! ಈ ಮಹಾಪದ್ಮಾಟವಿಯ ವಿಷಯವನ್ನು ಹೇಳುವೆನು; ಸಾವಧಾನವಾಗಿ ಕೇಳು:

೭೭-೮೧. ಆರು ಯೋಜನಗಳ ವಿಸ್ತಾರವುಳ್ಳ ರತ್ನಖಚಿತವಾದ ಈ ಮಹಾಪದ್ಮಾಟವಿಯ ಸುತ್ತಲೂ ಮಹಾ ಕಾಂಡಗಳುಳ್ಳ ಸ್ಥಳಪದ್ಮಗಳಿರುವುವು. ಈಪದ್ಮಕಾಂಡಗಳೊಂದೊಂದೂ ಒಂದೊಂದು ಯೋಜನ ದುದ್ದವುಳ್ಳುದಾಗಿ, ಮೆದುವಾಗಿರುವ ಮುಳ್ಳುಗಳಿಂದ ಕೂಡಿರುತ್ತವೆ. ಎಲೆಗಳಾದರೋ ಹತ್ತು ತಾಳ ಪ್ರಮಾಣದಷ್ಟು ಉದ್ದವಾಗಿರುವುವು.

**ಕ್ರೋಶೋನ್ನತೋ ವಹ್ನಿರೂಪೋ ವರ್ತುಲಾಕಾರ ಸಂಸ್ಥಿತಃ ।**
**ಅರ್ಧಯೋಜನ ವಿಸ್ತಾರಃ ಕಲಾಭಿರ್ದಶಭಿರ್ಯುತಃ ॥ ೮೨ ॥**
**ಅರ್ಘ್ಯಪಾತ್ರಮಹಾಧಾರೋ ವರ್ತತೇ ಕುಂಭಸಂಭವ ।**
**ತಸ್ಯಾಧಾರಸ್ಯ ಪರಿತಃ ಶಕ್ತಯೋ ದೀಪ್ತವಿಗ್ರಹಾಃ ॥ ೮೩ ॥**
**ಧೂಮ್ರಾರ್ಚಿಃ ಪ್ರಮುಖಾ ಭಾಂತಿ ಕಲಾ ದಶ ವಿಭಾವಸೋಃ ।**
**ದೀಪ್ತ ತಾರುಣ್ಯಲಕ್ಷ್ಮೀಕಾ ನಾನಾಲಂಕಾರಭೂಷಿತಾಃ ॥ ೮೪ ॥**
**ಆಧಾರರೂಪಂ ಶ್ರೀಮಂತಂ ಭಗವಂತಂ ಹವಿರ್ಭುಜಂ ।**
**ಪರಿಷ್ವಜ್ಯೈವ ಪರಿತೋ ವರ್ತಂತೇ ಮನ್ಮಥಾಲಸಾಃ ॥ ೮೫ ॥**
**ಧೂಮ್ರಾರ್ಚಿರೂಷ್ಮಾ ಜ್ವಲಿನೀ ಜ್ವಾಲಿನೀ ವಿಷ್ಫುಲಿಂಗಿಕಾ ।**
**ಸುಶ್ರೀಃ ಸುರೂಪಾ ಕಪಿಲಾ ಹವ್ಯಕವ್ಯವಹೇ ಅಪಿ ।**
**ಏತಾ ದಶಕಲಾಃ ಪ್ರೋಕ್ತಾ ವಹ್ನೇರಾಧಾರರೂಪಿಣಃ ॥ ೮೬ ॥**

---

ಈ ಕಮಲಗಳ ಕೇಸರಗಳಾದರೋ ಐದು ತಾಳ ಪ್ರಮಾಣದಷ್ಟು ಉದ್ದವಾಗಿರುವುವು. ಇವುಗಳ ಕರ್ಣಿಕೆಗಳು ನೂರು ಕಿಷ್ಕುಗಳೆತ್ತರ ವಿರುತ್ತವೆ. ಬಹಳ ಕೋಮಲಗಳೂ, ಯಾವಾಗಲೂ ಅರಳಿಯೇ ಇರುವುವೂ, ಯಾವಾಗಲೂ ಹೊಸ ಹೊಸತಾದ ಸುಗಂಧವನ್ನು ಸೂಸುತ್ತ ಮನೋಹರಗಳಾಗಿರುವುವೂ, ಇಕ್ಕಟ್ಟಾದ ದಳಗಳನ್ನೊಳಗೊಂಡಿರುವುವೂ ಆದ ಇಂತಹ ಕೋಟ್ಯನುಕೋಟಿ ಕಮಲಗಳು ಆ ಮಹಾ ಪದ್ಮಾಟವಿಯ ಪೂರ್ವದಿಕ್ಕಿನಲ್ಲಿ ವಿರಾಜಿಸುತ್ತಿರುವುವು.

೮೨-೮೫. ಎಲೈ ಕುಂಭಸಂಭವನೇ! ಈ ಮಹಾ ಪದ್ಮಾಟವಿಯ ಪೂರ್ವಭಾಗದಲ್ಲಿಯೇ ಕ್ರೋಶೋನ್ನತವೂ, ವಹ್ನಿರೂಪವೂ ಆಗಿ, ಒಂದು ಯೋಜನದ ವಿಸ್ತಾರದಿಂದೊಪ್ಪಿ ದಶಕಲೆಗಳಿಂದ ಕೂಡಿರುವ ಅರ್ಘ್ಯಪಾತ್ರಮಹಾಧಾರವಿರುವುದು. ಇದರ ಸುತ್ತಲೂ ಪ್ರಜ್ವಲಿಸುತ್ತಿರುವ ದೇಹಗಳುಳ್ಳವರೂ, ವಿಭಾವಸುವಿ (ಸೂರ್ಯ)ನ ದಶಕಲೆಗಳೂ ಆದ ಧೂಮ್ರಾರ್ಚಿಯೇ ಮೊದಲಾದ ಶಕ್ತಿದೇವಿಯರು ವಿರಾಜಿಸುತ್ತಿರುವರು. ಬೆಳಗುತ್ತಿರುವ ಯೌವನಸಂಪತ್ತಿನಿಂದ ಕೂಡಿ, ನಾನಾಲಂಕಾರ ಭೂಷಿತೆಯರಾಗಿರುವ ಈ ದೇವಿಯರೆಲ್ಲರೂ ಅರ್ಘ್ಯಪಾತ್ರಾಧಾರದಲ್ಲಿ ನೆಲಸಿರುವ ಶ್ರೀಮಂತನೂ, ಭಗವಂತನೂ ಆದ ಯಜ್ಞೇಶ್ವರನನ್ನು ಮದಾಲಸೆಯರಾಗಿ ಸುತ್ತಲೂ ಬಿಗಿದಪ್ಪಿ ಕಂಗೊಳಿಸುತ್ತಿದ್ದಾರೆ.

೮೬. ಧೂಮ್ರಾರ್ಚಿ, ಊಷ್ಮಾ, ಜ್ವಲಿನೀ, ಜ್ವಾಲಿನೀ, ವಿಷ್ಫುಲಿಂಗಾ,

ತತ್ರಾಧಾರೇ ಸ್ಥಿತೋ ದೇವಃ ಪಾತ್ರರೂಪಂ ಸಮಾಶ್ರಿತಃ ।
ಸೂರ್ಯಸ್ತ್ರಿಲೋಕೀತಿಮಿರಪ್ರಧ್ವಂಸೀ ಪ್ರಥಿತೋದಯಃ ॥
ಸೂರ್ಯಾತ್ಮಕಂ ತು ತತ್ಪಾತ್ರಂ ಸಾರ್ಧಯೋಜನಮುನ್ನತಮ್ ।
ಯೋಜನಾಮಾತ್ರವಿಸ್ತಾರಂ ಮಹಾಜ್ಯೋತಿಃ ಪ್ರಕಾಶಿತಮ್ ॥
ತತ್ಪಾತ್ರೇ ಪರಿತಃ ಸಕ್ತವಪುಷಃ ಪುತ್ರಿಕಾ ಇವ ।
ವರ್ತಂತೇ ದ್ವಾದಶಕಲಾ ರವೇರ್ಭಾಸ್ವರರೋಚಿಷಃ ॥ ೮೯ ॥
ತಪಿನೀ ತಾಪಿನೀ ಧೂಮ್ರಾ ಮರೀಚಿರ್ಮಾಲಿನೀ ರುಚಿಃ ।
ಸುಷುಮ್ನಾ ಭೋಗದಾ ವಿಶ್ವಾ ಬೋಧಿನೀ ಧಾರಿಣೀ ಕ್ಷಮಾ ॥ ೯೦ ॥
ತಸ್ಮಿನ್ ಪಾತ್ರೇ ಮಹಾನಂದಕಾರಣಂ ಪರಮಾಮೃತಮ್ ।
ಸರ್ವೌಷಧಿರಸಾಢ್ಯಂ ಚ ಹೃದ್ಯಸೌರಭ್ಯಸಂಯುತಮ್ ॥ ೯೧ ॥
ನೀಲೋತ್ಪಲೈಶ್ಚ ಕಹ್ಲಾರೈರಮ್ಲಾನೈರತಿಸೌರಭೈಃ ।
ವಾಸ್ಯಮಾನಂ ಸದಾ ಹೃದ್ಯಂ ಶೀತಲಂ ಲಘು ನಿರ್ಮಲಮ್ ॥ ೯೨ ॥

---

ಸುಶ್ರೀ, ಸುರೂಪಾ, ಕಪಿಲಾ, ಹವ್ಯವಹೆ, ಕವ್ಯವಹೆ ಎಂಬ ಈ ಹತ್ತು ಮಂದಿಯೇ ಅಗ್ನಿದೇವನಿಗೆ ಆಧಾರರೂಪಿಣಿಯರಾದ ಕಲಾ ಶಕ್ತಿ ದೇವಿಯರೆಂದು ಹೇಳಿದೆ.

೮೭-೯೧. ಆ ಅರ್ಘ್ಯಾಧಾರದಲ್ಲಿ ಶ್ರೀ ಸೂರ್ಯದೇವನೇ ಪಾತ್ರ ರೂಪವನ್ನು ತಾಳಿ ಮೂರು ಲೋಕಗಳ ಕತ್ತಲೆಯನ್ನು ಧ್ವಂಸಗೊಳಿಸುವವನೂ, ಪ್ರಸಿದ್ಧವಾದ ಉದಯವುಳ್ಳವನೂ ಆಗಿ ನೆಲಸಿರುವನು. ಸೂರ್ಯರೂಪವಾದ ಆ ಪಾತ್ರೆಯ ಎತ್ತರವು ಅರ್ಧಯೋಜನ. ಅದರ ವಿಸ್ತಾರವು ಒಂದು ಯೋಜನ. ಅದು ಮಹತ್ತರವಾದ ಜ್ಯೋತಿಯಿಂದ ಬೆಳಗುತ್ತಿರುವುದು. ಆ ಪಾತ್ರೆಯ ಸುತ್ತಲೂ ಅಪ್ಪಿ ಗೊಂಬೆಗಳಂತೆ ಶೋಭಿಸುತ್ತಿರುವ ಸೂರ್ಯದೇವನ ಹನ್ನೆರಡು ಮಂದಿ ಕಲಾಶಕ್ತಿದೇವಿಯರಿರುವರು. ಅವರೇ, ತಪಿನೀ ತಾಪಿನೀ, ಧೂಮ್ರಾ, ಮರೀಚಿ, ಮಾಲಿನೀ, ರುಚಿ, ಸುಷುಮ್ನಾ, ಭೋಗದಾ, ವಿಶ್ವಾ, ಬೋಧಿನೀ, ಧಾರಿಣೀ, ಕ್ಷಮಾ ಎಂಬವರು. ಇಷ್ಟೆಯಲ್ಲದೆ ಆ ಪಾತ್ರೆಯಲ್ಲಿ ಮಹಾನಂದಕ್ಕೆ ಕಾರಣಭೂತವಾದ ಸಮಸ್ತ ಓಷಧಿರಸಗಳಿಂದ ತುಂಬಿ, ಮನೋಹರವೂ, ಸುವಾಸನಾಸಹಿತವೂ ಆಗಿರುವ ಪರಮಾಮೃತವಿರುವುದು.

೯೨-೯೩. ಯಾವಾಗಲೂ ಬಾಡದಿರುವುವೂ, ಸುಗಂಧಭರಿತವೂ

**ಚಲದ್ವೀಚಿಶತೋದಾರಂ ಲಲಿತಾಭ್ಯರ್ಚನೋಚಿತಮ್ ।**
**ಸದಾ ಶಬ್ದಾಯಮಾನಂ ಚ ಭಾಸತೇ ಸಿದ್ಧಿಕಾರಣಮ್ ।**
**ತದರ್ಘ್ಯಮಮೃತಂ ಪ್ರೋಕ್ತಂ ನಿಶಾಕರ ಕಲಾಮಯಮ್ ॥೯೩॥**
**ತಸ್ಮಿಂಸ್ತನೀಯಸೀಂ ನೌಕಾಂ ಮಣಿಕ್ಲೃಪ್ತಾಂ ಸಮಾಸ್ಥಿತಾಃ ।**
**ನಿಶಾಕರಕಲಾ ಹೃದ್ಯಾಃ ಕ್ರೀಡಂತಿ ನವಯೌವನಾಃ ॥ ೯೪ ॥**
**ಅಮೃತಾ ಮಾನದಾ ಪೂಷಾ ಪುಷ್ಟಿಸ್ತುಷ್ಟೀ ರತಿರ್ಧೃತಿಃ ।**
**ಶಶಿನೀ ಚಂದ್ರಿಕಾ ಕಾಂತಿರ್ಜ್ಯೋತ್ಸ್ನಾ ಶ್ರೀಃ ಪ್ರೀತಿರಂಗದಾ ॥೯೫॥**
**ಪೂರ್ಣಾ ಪೂರ್ಣಾಮೃತಾ ಚೇತಿ ಕಲಾಃ ಪೀಯೂಷರೋಚಿಷಃ ।**
**ನವಯೌವನಸಂಪೂರ್ಣಾಃ ಸದಾಪ್ರಹಸಿತಾನನಾಃ ॥ ॥ ೯೬ ॥**
**ಸೃಷ್ಟಿರ್ಬುದ್ಧಿಃ ಸ್ಮೃತಿರ್ಮೇಧಾ ಕಾಂತಿರ್ಲಕ್ಷ್ಮೀ ರ್ದ್ಯುತಿಃ ಸ್ಥಿರಾ ।**
**ಸ್ಥಿತಿಃ ಸಿದ್ಧಿರಿತಿ ಪ್ರೋಕ್ತಾಃ ಕ್ರೀಡಂತಿ ಬ್ರಹ್ಮಣಃ ಕಲಾಃ ॥ ೯೭ ॥**

---

ಆದ ನೀಲೋತ್ಪಲಗಳಿಂದಲೂ, ಕಹ್ಲಾರಗಳಿಂದಲೂ, ಸುವಾಸಿತವಾಗಿ ಎಲ್ಲ ಕಾಲಗಳಲ್ಲಿಯೂ ಮನೋಹರವೂ, ಶೀತಳವೂ, ಹಗುರವೂ, ತಿಳಿಯೂ ಆಗಿ ಚಲಿಸುತ್ತಿರುವ ನೂರಾರು ಅಲೆಗಳಿಂದೊಪ್ಪಿ ಶ್ರೀ ಲಲಿತಾದೇವಿಯ ಪೂಜೆಗೆ ತಕ್ಕುದಾಗಿ ಯಾವಾಗಲೂ ದನಿಗೈಯುತ್ತಿರುವುದೂ, ಸರ್ವಸಿದ್ಧಿಗಳಿಗೂ ಕಾರಣವಾದುದೂ ಆದ ಆ ಪರಮಾಮೃತವು ಆ ಆಧಾರಪಾತ್ರೆಯಲ್ಲಿ ವಿರಾಜಿಸುತ್ತಿರುತ್ತದೆ. ಎಲೈ ಅಗಸ್ತ್ಯನೇ! ಚಂದ್ರನ ಸಮಸ್ತ ಕಲೆಗಳಿಂದಲೂ ತುಂಬಿರುವ ಈ ಪರಮಾಮೃತವೇ ಅರ್ಘ್ಯವೆನಿಸುವುದು.

೯೪–೯೬. ನವಯೌವನವತಿಯರೂ, ಸುಂದರಾಂಗಿಯರೂ ಆದ ಚಂದ್ರಕಲಾಶಕ್ತಿಲಲನೆಯರೆಲ್ಲರೂ, ಆ ಪಾತ್ರೆಯಲ್ಲಿ ಮನೋಹರವಾದ ಮಣಿಗಳಿಂದ ನಿರ್ಮಿತವಾದ ಪುಟ್ಟ ನೌಕೆಯೊಂದರಲ್ಲಿ ಕುಳಿತು ಕ್ರೀಡಿಸುತ್ತಿರುತ್ತಾರೆ. ನವಯೌವನಾಂಗಿಯರೂ, ಯಾವಾಗಲೂ ನಗೆಮುಖವುಳ್ಳವರೂ ಆದ ಈ ಅಮೃತಕಿರಣನ ಕಲಾದೇವಿಯರೇ, ಅಮೃತಾ, ಮಾನದಾ, ಪೂಷಾ, ಪುಷ್ಟಿ, ತುಷ್ಟಿ, ರತಿ, ಧೃತಿ, ಶಶಿನೀ, ಚಂದ್ರಿಕಾ, ಕಾಂತಿ, ಜ್ಯೋತ್ಸ್ನಾ, ಶ್ರೀ, ಪ್ರೀತಿ, ಅಂಗದಾ, ಪೂರ್ಣಾ, ಪೂರ್ಣಾಮೃತಾ ಎಂಬುವರು.

೯೭–೯೮. ಅಯ್ಯಾ ಕುಂಭೋದ್ಭವನೇ! ಸೃಷ್ಟಿ, ಬುದ್ಧಿ, ಸ್ಮೃತಿ, ಮೇಧಾ, ಕಾಂತಿ, ಲಕ್ಷ್ಮೀ, ದ್ಯುತಿ, ಸ್ಥಿರಾ, ಸ್ಥಿತಿ, ಸಿದ್ಧಿ ಎಂಬುವರು

**ಜರಾ ಚ ಪಾಲಿನೀ ಶಾಂತಿರೀಶ್ವರೀ ರತಿಕಾಮಿಕೇ ।**
**ವರದಾಹ್ಲಾದಿನೀ ಪ್ರೀತಿರ್ದೀರ್ಘಾಚೇತಿ ಹರೇಃ ಕಲಾಃ ॥ ೯೮ ॥**
**ತೀಕ್ಷ್ಣಾ ರೌದ್ರೀ ಭಯಾ ನಿದ್ರಾ ತಂದ್ರೀ ಕ್ಷುತ್ಕ್ರೋಧಿನೀ ಕ್ರಿಯಾ ।**
**ಉತ್ಕಾರೀ ಮೃತ್ಯುರಪ್ಯೇತಾ ರೌದ್ರಸ್ತತ್ರಸ್ಥಿತಾಃ ಕಲಾಃ ॥ ೯೯ ॥**
**ಈಶ್ವರಸ್ಯ ಕಲಾಃ ಪೀತಾ ಶ್ವೇತಾ ಚೈವಾರುಣಾ ಸಿತಾ ।**
**ಚತಸ್ರ ಏವ ಪ್ರೋಕ್ತಾಸ್ತು ಸದಾಶಿವಕಲಾ ಅಥ ॥ ೧೦೦ ॥**
**ನಿವೃತ್ತಿಶ್ಚ ಪ್ರತಿಷ್ಠಾ ಚ ವಿದ್ಯಾ ಶಾಂತಿಸ್ತಥೈವ ಚ ।**
**ಶುದ್ಧಿಕಾ ದೀಪಿಕಾ ಚೈವ ರೇಚಿಕಾ ಚೈವ ಮೋಚಿಕಾ ॥ ೧೦೧ ॥**
**ಪರಾ ಸೂಕ್ಷ್ಮಾ ಚ ವಿಂಧ್ಯಾರೇ ತಥಾ ಸೂಕ್ಷ್ಮಾಮೃತಾ ಕಲಾ ।**
**ಜ್ಞಾನಾಮೃತಾಪ್ಯಾಯಿನೀ ಚ ವ್ಯಾಪಿನೀ ವ್ಯೋಮರೂಪಿಕಾ ॥ ೧೦೨ ॥**
**ಏತಾಃ ಷೋಡಶ ಸಂಪ್ರೋಕ್ತಾಸ್ತತ್ರ ಕ್ರೀಡಂತಿ ಶಕ್ತಯಃ ।**
**ಕ್ಷುದ್ರಾಂ ನೌಕಾಂ ಸಮಾರೂಢಾಸ್ತತಶ್ಚೇತಶ್ಚ ಚಂಚಲಾಃ ॥**
**ಶಕ್ತಿರೂಪೇಣ ಖೇಲಂತಿ ತತ್ರ ವಿದ್ಯಾಃ ಸಹಸ್ರಶಃ ।**
**ಅರ್ಘ್ಯಸಂಶೋಧನಾರ್ಥಾಯ ಕಲ್ಪಿತಾಃ ಪರಮೇಷ್ಠಿನಾ ॥ ೧೦೪ ॥**

---

ಬ್ರಹ್ಮನ ಕಲಾದೇವಿಯರು. ಜರಾ, ಪಾಲಿನೀ, ಶಾಂತಿ, ಈಶ್ವರೀ, ರತಿ, ಕಾಮಿಕೆ, ವರದೆ, ಆಹ್ಲಾದಿನಿ, ಪ್ರೀತಿ, ದೀರ್ಘಾ ಎಂಬುವರು ಶ್ರೀ ವಿಷ್ಣುವಿನ ಕಲಾದೇವಿಯರು. ಇವರೆಲ್ಲರೂ ಅಲ್ಲಿಯೇ ಕ್ರಿಡಿಸುತ್ತಿರುವರು.

೯೯-೧೦೦. ತೀಕ್ಷ್ಣಾ, ರೌದ್ರೀ, ಭಯಾ, ನಿದ್ರಾ, ತಂದ್ರೀ, ಕ್ಷುತ್, ಕ್ರೋಧಿನೀ, ಕ್ರಿಯಾ, ಉತ್ಕಾರೀ, ಮೃತ್ಯು ಎಂಬಿವರು ರುದ್ರನ ಶಕ್ತಿಕಲಾದೇವಿಯರು. ಪೀತಾ, ಶ್ವೇತಾ, ಅರುಣಾ, ಸಿತಾ ಎಂಬ ನಾಲ್ವರು ಮಾತ್ರವೇ ಈಶ್ವರನ ಕಲಾದೇವಿಯರು. ಇನ್ನು ಸದಾಶಿವಮೂರ್ತಿಯ ಕಲಾದೇವಿಯರನ್ನು ಹೇಳುವೆನು ಕೇಳು :

೧೦೧-೧೦೪. ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶುದ್ಧಿಕಾ, ದೀಪಿಕಾ, ರೇಚಿಕಾ, ಮೋಚಿಕಾ, ಪರಾ, ಸೂಕ್ಷ್ಮಾ, ಸೂಕ್ಷ್ಮಾಮೃತಾ, ಜ್ಞಾನಾಮೃತಾ, ಆಪ್ಯಾಯಿನೀ, ವ್ಯಾಪಿನೀ, ವ್ಯೋಮರೂಪಿಕಾ ಎಂಬ ಸದಾಶಿವನ ಈ ಹದಿನಾರು ಮಂದಿ ಕಲಾಶಕ್ತಿದೇವಿಯರೆಲ್ಲರೂ ಕ್ಷುದ್ರನೌಕೆಯೊಂದನ್ನೇರಿ ಅಲ್ಲಿಂದಿಲ್ಲಿಗೂ, ಇಲ್ಲಿಂದಲ್ಲಿಗೂ ಬಹು ಚಂಚಲೆಯರಾಗಿ ಸಂಚರಿಸುತ್ತಿರುತ್ತಾರೆ. ಎಲೈ ವಿಂಧ್ಯಮರ್ದನನೇ! ಆ ಅರ್ಘ್ಯಾಧಾರಮಹಾಪಾತ್ರೆಯಲ್ಲಿ ಅರ್ಘ್ಯಸಂಶೋಧನಕ್ಕಾಗಿ ಬ್ರಹ್ಮನಿಂದ

ತದರ್ಘ್ಯಮಮೃತಂ ಪೀತ್ವಾ ಸದಾ ಮಾದ್ಯಂತಿ ಶಕ್ತಯಃ ।
ಮಹಾಪದ್ಮಾಟವೀವಾಸಾ ಮಹಾಚಕ್ರಸ್ಥಿತಾ ಅಪಿ ॥ ೧೦೫ ॥
ಮುಹುರ್ಮುಹುಃ ಪೀಯಮಾನಮುಪರ್ಯುಪರಿ ವರ್ಧತೇ ।
ಮುಹುರ್ಮುಹುರ್ನವನವಂ ಮುಹುಶ್ಚಾಬದ್ಧಸೌರಭಂ ॥ ೧೦೬॥
ರತ್ನಕುಂಭಸಹಸ್ರೈಶ್ಚ ಸುವರ್ಣಘುಟಿಕೋಟಿಭಿಃ । [ ೧೦೭ ॥
ಆಪೂರ್ಯಾಪೂರ್ಯ ಸತತಂ ತದರ್ಘ್ಯಮಮೃತಂ ಮಹತ್ ॥
ಚಿಂತಾಮಣಿಗೃಹಸ್ಥಾನಾಂ ಪರಿಚಾರಿಕಶಕ್ತಯಃ । [ ೧೦೮ ॥
ಅಣಿಮಾದಿಕಶಕ್ತೀನಾಮುಪರ್ಯಂತಿ ಮದೋದ್ಧತಾಃ ॥
ಮಹಾಪದ್ಮಾಟವೀಕಕ್ಷ್ಯಾ ಪೂರ್ವಭಾಗೇಽರ್ಘ್ಯಕಲ್ಪನಮ್ ।
ಇತ್ಥಂ ಸಮೀರಿತಂ ಪಶ್ಚಾತ್ತತ್ರಾನ್ಯದಪಿ ಕಥ್ಯತೇ ॥ ೧೦೯ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಏಕೋನತ್ರಿಂಶೋಽಧ್ಯಾಯಃ

---

ನಿರ್ಮಿತವಾದ ಸಾವಿರಾರು ವಿದ್ಯೆಗಳೆಲ್ಲವೂ ಶಕ್ತಿರೂಪವನ್ನು ತಳೆದು ಕ್ರೀಡಿಸುತ್ತಿರುತ್ತವೆ.

೧೦೫-೧೦೯. ಅಯ್ಯಾ ಮುನಿಯೇ! ಮಹಾಪದ್ಮಾಟವಿಯಲ್ಲಿಯೂ, ಶ್ರೀಚಕ್ರದಲ್ಲಿಯೂ ವಾಸವಾಗಿರುವ ಸಮಸ್ತ ಶಕ್ತಿದೇವಿಯರೂ, ಈ ಪರಮಾಮೃತವನ್ನು ಪಾನಮಾಡಿ ಯಾವಾಗಲೂ ಮದಿಸಿರುತ್ತಾರೆ. ಎಷ್ಟುಸಲ ಪಾನಮಾಡಿದರೂ ಅದು ಅಷ್ಟೂ ಅಷ್ಟು ಹೆಚ್ಚುತ್ತಲೇ ಇರುತ್ತದೆ. ಅಡಿಗಡಿಗೂ ಅದು ಹೊಸ ಹೊಸತಾಗಿ, ಸುವಾಸನಾಪೂರಿತವಾಗಿಯೇ ಇರುತ್ತದೆ. ಪರಿಚಾರಕಶಕ್ತಿದೇವಿಯರು ಸಾವಿರಾರು ರತ್ನಕುಂಭಗಳಲ್ಲಿ ಈ ಅರ್ಘ್ಯಾಮೃತವನ್ನು ತುಂಬಿಕೊಂಡುಹೋಗಿ, ಶ್ರೀ ಚಿಂತಾಮಣಿ ಗೃಹದಲ್ಲಿ ನೆಲಸಿರುವ ಅಣಿಮಾದಿ ಮಹಾಶಕ್ತಿದೇವಿಯರೆಲ್ಲರಿಗೂ ಅರ್ಪಿಸುತ್ತಾರೆ. ಹೀಗೆ ಆ ಮಹಾಪದ್ಮಾಟವಿಯ ಪೂರ್ವಭಾಗದಲ್ಲಿ ರಚಿತವಾಗಿರುವ ಅರ್ಘ್ಯವಿಚಾರವನ್ನು ಹೇಳಿಯಾಯಿತು. ಇನ್ನುಮುಂದೆ ಅಲ್ಲಿರುವ ಚಿಂತಾಮಣಿ ಗೃಹಾಂತರವನ್ನು ವರ್ಣಿಸುತ್ತೇನೆ; ಕೇಳು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಂಶೋಽಧ್ಯಾಯಃ

[ಚಿಂತಾಮಣಿಗೃಹಾಂತರವರ್ಣನಂ]

ಚಿಂತಾರತ್ನಮಯಸ್ಯ ದಿವ್ಯಭವನಸ್ಯಾಂತರ್ಬಹಿಶ್ಶಕ್ತಯಃ
ಸರ್ವಾನಂದಮನೋಹರಾಂಗಸಹಿತಾಃ ಸರ್ವಾಂಗರತ್ನಾಕರಾಃ ।
ಅಂಬ ತ್ವಚ್ಚರಣಾರವಿಂದಭಜನೇ ಸಕ್ತಾಂತರಂಗಾಸ್ಸದಾ
ತತ್ವಾಮೇವ ಭಜಾಮಿ ಸರ್ವವರದಾಂ ಶ್ರೀಚಕ್ರರಾಜೇಶ್ವರೀಂ ॥

ಹಯಗ್ರೀವಃ—

**ಚಿಂತಾಮಣಿಗೃಹಸ್ಯಾಗ್ನಿದಿಗ್ಭಾಗೇ ಕುಂಡಮಾನಲಮ್ ।**
**ಯೋಜನಾಮಾತ್ರವಿಸ್ತಾರಂ ಯೋಜನಾಸಮುಖಾತಕಮ್ ॥ ೧ ॥**
**ತತ್ರ ಜ್ವಲತಿ ಚಿದ್ವಹ್ನಿಃ ಸುಧಾಧಾರಾಶತಾರ್ಚಿತಃ ।**
**ಪರಮೈಶ್ವರ್ಯಜನಕಃ ಪಾವನೋ ಲಲಿತಾಜ್ಞಯಾ ॥ ೨ ॥**
**ಅನಿಂಧನೋ ಮಹಾಜ್ವಾಲಃ ಸುಧಯಾ ತರ್ಪಿತಾಕೃತಿಃ ।**
**ಕಂಕೇಲಿ ಪಲ್ಲವಚ್ಛಾಯಸ್ತತ್ರಜ್ವಲತಿ ಚಿಚ್ಛಿಖೀ ॥ ೩ ॥**

---

## ಕನ್ನಡದ ಅನುವಾದ

[ಚಿಂತಾಮಣಿ ಗೃಹಾಂತರ ವರ್ಣನ]

೧-೩. ಎಲೈ ತಪೋಧನನೇ! ಚಿಂತಾಮಣಿಗೃಹದ ಆಗ್ನೇಯ ದಿಗ್ಭಾಗದಲ್ಲಿ ಒಂದು ಯೋಜನದಗಲವೂ, ಒಂದು ಯೋಜನದಾಳವೂ ಇರುವ ಅಗ್ನಿಕುಂಡವು ಶೋಭಿಸುತ್ತಿರುವುದು. ಅದರಲ್ಲಿ ನೂರಾರು ಅಮೃತಧಾರೆಗಳಿಂದ ಪೂಜಿತನಾಗಿ, ಪರಮೈಶ್ವರ್ಯಕ್ಕೆ ಮೂಲ ಕಾರಣನೂ, ಪಾವನನೂ ಆದ ಚಿದಗ್ನಿದೇವನು ಶ್ರೀ ಲಲಿತಾಪರಮೇಶ್ವರಿಯ ಅಪ್ಪಣೆಯಂತೆ ನೆಲೆಗೊಂಡಿರುವನು. ಆತನು ಆ ಕುಂಡದಲ್ಲಿ ಇಂಧನವಿಲ್ಲದೆಯೇ ಪ್ರಜ್ವಲಿಸುತ್ತ, ಸುಧೆಯಿಂದ ತೃಪ್ತಿಗೊಂಡ ದೇಹವುಳ್ಳವನಾಗಿ, ಮಹಾಜ್ವಾಲೆಗಳೊಳಗೂಡಿ ಕಂಕೇಲಿ ವೃಕ್ಷದ ತಳಿರ ಕಾಂತಿಯನ್ನು ತಳೆದು ವಿರಾಜಿಸುತ್ತಿರುವನು.

ತತ್ರ ಹೋತ್ರೀ ಮಹಾದೇವೀ ಹೋತಾ ಕಾಮೇಶ್ವರಃ ಪರಃ ।
ಉಭೌ ತೌ ನಿತ್ಯಹೋತಾರೌ ರಕ್ಷತಃ ಸಕಲಂ ಜಗತ್ ॥ ೪ ॥
ಅನುತ್ತರಪರಾಧೀನಾ ಲಲಿತಾ ಸಂಪ್ರವರ್ತಿಕಾ ।
ಲಲಿತಾಚೋದಿತಃ ಕಾಮಶಂಕರೋಽಪಿ ಪ್ರವರ್ತಕಃ ॥ ೫ ॥
ಚಿಂತಾಮಣಿಗೃಹೇಂದ್ರಸ್ಯ ರಕ್ಷೋಭಾಗಾಂಬುಜಾಟವೌ ।
ಚಕ್ರರಾಜರಥಶ್ರೇಷ್ಠಸ್ತಿಷ್ಠತ್ಯುನ್ನತವಿಗ್ರಹಃ ॥ ೬ ॥
ನವಭಿಃ ಪರ್ವಭಿರ್ಯುಕ್ತಃ ಸರ್ವರತ್ನಮಯಾಕೃತಿಃ ।
ಚತುರ್ಯೋಜನವಿಸ್ತಾರೋ ದಶಯೋಜನಮುನ್ನತಃ ॥ ೭ ॥
ಯಥೋತ್ತರಂ ಹ್ರಾಸಯುಕ್ತಃ ಸ್ಥೂಲತ್ವಕ್ಕೂಪರೋಜ್ವಲಃ ।
ಚತುರ್ವೇದಮಹಾಚಕ್ರಃ ಪುರುಷಾರ್ಥಮಹಾಹಯಃ ॥ ೮ ॥
ಅಲಂಕೃತೋ ಧ್ವಜಶ್ರೇಣ್ಯಾ ಚಾಮರೈರಭಿಮಂಡಿತಃ ।
ಭಂಡಾಸುರಮಹಾಯುದ್ಧೇ ಕೃತಸಾಹಸಿಕಕ್ರಿಯಃ ॥ ೯ ॥
ಪೂರ್ವೋಕ್ತಲಕ್ಷಣೈರ್ಯುಕ್ತೋ ಮುಕ್ತಾಚ್ಛತ್ರೇಣ ಶೋಭಿತಃ ।
ವರ್ತತೇ ರಥಮೂರ್ಧನ್ಯಃ ಶ್ರೀದೇವ್ಯಾಸನಪಾವಿತಃ ॥ ೧೦ ॥

---

೪-೫. ಅಲ್ಲಿ, ಶ್ರೀಲಲಿತಾಮಹಾದೇವಿಯೇ ಹೋತ್ರಿಯು; ಪರಾತ್ಮಕನಾದ ಶ್ರೀ ಕಾಮೇಶ್ವರನೇ ಹೋತೃವು. ಇವರೀರ್ವರೂ ನಿತ್ಯಹೊತೃಗಳಾಗಿ ಸಮಸ್ತ ಜಗತ್ತನ್ನೂ ರಕ್ಷಿಸುತ್ತಿರುವರು. ಅಲ್ಲಿಯೇ ಶ್ರೀ ಲಲಿತಾಪರಮೇಶ್ವರಿಯು ಮತ್ತಾರಿಗೂ ಅಧೀನೆಯಾಗದೆ ಸರ್ವತಂತ್ರ ಸ್ವತಂತ್ರೆಯಾಗಿ ಜಗತ್ತನ್ನು ನಡೆಸುತ್ತಿರುವಳಲ್ಲದೆ, ಶ್ರೀ ಕಾಮಶಂಕರನೂ ಆ ದೇವಿಯಿಂದ ಪ್ರೇರಿತನಾಗಿ ತಾನೂ ಜಗತ್ಪ್ರವರ್ತಕನಾಗಿರುವನು.

೬–೧೦. ಆ ಮಹಾಪದ್ಮಾಟವಿಯಲ್ಲಿ ವಿರಾಜಿಸುತ್ತಿರುವ ಚಿಂತಾಮಣಿಗೃಹದ ಕುಬೇರ ದಿಗ್ಭಾಗದಲ್ಲಿ ಅತ್ಯುನ್ನತವಾದ ಶ್ರೀಚಕ್ರರಾಜ ರಥಶ್ರೇಷ್ಠವು ಕಂಗೊಳಿಸುತ್ತಿರುವುದು. ಒಂಬತ್ತು ಪರ್ವಗಳಿಂದ ಕೂಡಿ, ಸರ್ವರತ್ನಾಲಂಕೃತವಾಗಿ, ನಾಲ್ಕು ಯೋಜನಗಳಗಲವೂ, ಹತ್ತು ಯೋಜನಗಳೆತ್ತರವೂ ಆಗಿ, ಮೇಲಕ್ಕೆ ಹೋದಹೋದಂತೆಲ್ಲ ಅಗಲದಲ್ಲಿ ಕಡಮೆಯಾಗಿ, ದಪ್ಪವಾದ ಹೊದಿಕೆಯೂ, ಕಾಡೀಮರವೂ ಉಳ್ಳುದಾಗಿ, ಚತುರ್ವೇದಗಳೆಂಬ ಮಹಾಚಕ್ರಗಳಿಂದಲೂ, ಧರ್ಮಾದಿ ಪುರುಷಾರ್ಥಗಳೆಂಬ ಕುದುರೆಗಳಿಂದಲೂ, ಧ್ವಜಗಳ ಸಾಲುಗಳಿಂದಲೂ, ಚಾಮರಗಳಿಂದಲೂ ಅಲಂಕೃತವಾಗಿ ಭಂಡಾಸುರನೊಡನೆಸಗಿದ ಮಹಾ

ಚಿಂತಾಮಣಿಗೃಹೇಂದ್ರಸ್ಯ ವಾಯುಭಾಗಾಂಬುಜಾಟವೌ ।
ಗೇಯಚಕ್ರರಥೇಂದ್ರಸ್ತು ಮಂತ್ರಿಣ್ಯಾಃ ಪ್ರತಿತಿಷ್ಠತಿ ॥ ೧೧ ॥
ಚಿಂತಾಮಣಿಗೃಹೇಂದ್ರಸ್ಯ ರುದ್ರಭಾಗಾಂಬುಜಾಟವೌ ।
ವಲ್ಲಭೋ ದಂಡನಾಥಾಯಾಃ ಕಿರಿಚಕ್ರಮಹಾರಥಃ ॥ ೧೨ ॥
ಏತದ್ರಥತ್ರಯಂ ಸರ್ವಕ್ಷೇತ್ರಶ್ರೀಪುರಪಂಕ್ತಿಷು ।
ಸಮಾನಮೇವ ವಿಜ್ಞೇಯಮಂತಸ್ಥಾ ದೇವತಾ ಯಥಾ ॥ ೧೩ ॥
ಅನಲಂ ಕುಂಡಮಾಗ್ನೇಯೇ ಯತ್ತಿಷ್ಠತಿ ಸದಾ ಜ್ವಲತ್ ।
ತತ್ಪಶ್ಚಿಮೇ ತು ಗಾಯತ್ರೀ ತತ್ಪಶ್ಚಾದಭಯಂಕರಃ ॥ ೧೪ ॥
ಘೃಣಿಃ ಸೂರ್ಯಶ್ಚ ತತ್ಪಶ್ಚಾದೋಂಕಾರಸ್ಯ ಚ ಮಂದಿರಮ್ ।
ದೇವೀ ತುರೀಯಗಾಯತ್ರೀ ಚಕ್ಷುಷ್ಮತ್ಯಪಿ ತಾಪಸ .॥ ೧೫ ॥

---

ಯುದ್ಧದಲ್ಲಿ ಸಾಹಸ ಕಾರ್ಯವನ್ನು ಸಾಧಿಸಿದುದಾಗಿಯೂ, ಹಿಂದೆ ನಿರೂಪಿಸಿದ ಸಮಸ್ತ ಲಕ್ಷಣಗಳಿಂದಲೂ ಕೂಡಿದುದಾಗಿಯೂ, ಮುತ್ತಿನ ಸತ್ತಿಗೆ ಯಿಂದೊಪ್ಪಿ ವಿರಾಜಿಸುತ್ತಿರುವುದೂ ಆದ ಶ್ರೀ ಲಲಿತಾಮಹಾ ದೇವಿಯ ಸಿಂಹಾಸನದಿಂದ ಪವಿತ್ರಗೊಂಡ ಆ ರಥಶ್ರೇಷ್ಠವು ಅಲ್ಲಿಯೇ ನೆಲೆಗೊಂಡಿರುವುದು.

೧೧–೧೩. ಅದೇ ಪದ್ಮಾಟವಿಯ ಚಿಂತಾಮಣಿಗೃಹಕ್ಕೆ ವಾಯವ್ಯ ದಿಗ್ಭಾಗದಲ್ಲಿ ಶ್ರೀ ಮಂತ್ರಿಣೀದೇವಿಯ ಗೇಯಚಕ್ರಮಹಾರಥವೂ, ಅದರ ಈಶಾನ್ಯಭಾಗದಲ್ಲಿ ಶ್ರೀ ದಂಡನಾಥಾದೇವಿಗೆ ಅತ್ಯಂತ ಪ್ರಿಯಕರ ವಾದ ಕಿರಿಚಕ್ರಮಹಾರಥವೂ ಶೋಭಿಸುತ್ತಿರುವುವು. ಎಲೈ ಮುನಿಯೇ! ಎಲ್ಲಾ ಶ್ರೀಪುರ ಕ್ಷೇತ್ರಗಳಲ್ಲಿಯೂ ಒಳಗಿರುವ ದೇವತೆಗಳಂತೆಯೇ ಹೊರಗೂ ಈ ರೀತಿ ಶ್ರೀ ಚಕ್ರಮಹಾರಥತ್ರಯವು ಸಮಾನವಾಗಿಯೇ ಇರುತ್ತವೆಯೆಂದು ತಿಳಿಯಬೇಕು.

೧೪-೧೫. ಮಹಾ ಪದ್ಮಾಟವಿಯ ಆಗ್ನೇಯ ದಿಗ್ಭಾಗದಲ್ಲಿ ಯಾವಾಗಲೂ, ಪ್ರಜ್ವಲಿಸುತ್ತಿರುವ ಅಗ್ನಿಕುಂಡವಾವುದಿರುವುದೋ ಅದಕ್ಕೆ ಪಶ್ಚಿಮದಲ್ಲಿ ಗಾಯತ್ರೀ ದೇವಿಯೂ, ಆ ದೇವಿಯ ಹಿಂದೆಯೇ ಅಭಯಂಕರನೂ, ಆ ಬಳಿಕ ಘೃಣಿ, ಸೂರ್ಯರೂ, ಇವರಾದ ಬಳಿಕ ಓಂಕಾರ ಮಂದಿರವೂ, ಅದಾದಮೇಲೆ ತುರೀಯ ಗಾಯತ್ರೀದೇವಿಯೂ, ಚಕ್ಷುಷ್ಮತೀ ದೇವಿಯೂ ನೆಲಸಿರುತ್ತಾರೆ.

ಅಥ ಗಂಧರ್ವರಾಜಶ್ಚ ಪಥಿ ಷಡ್ರುದ್ರ ಏವ ಚ ।
ತಾರಾಂಬಿಕಾ ಭಗವತೀ ತತ್ಪಶ್ಚಾದ್ಭಾಗತಃ ಸ್ಥಿತಾ ॥ ೧೬ ॥
ಚಿಂತಾಮಣಿ ಗೃಹೇಂದ್ರಸ್ಯ ರಕ್ಷೋಭಾಗಂ ಸಮಾಶ್ರಿತಃ ।
ನಾಮತ್ರಯಮಹಾಮಂತ್ರ ವಾಚ್ಯೋಽಸ್ತಿ ಭಗವಾನ್ ಹರಿಃ ॥೧೭॥
ಮಹಾಗಣಪತಿಸ್ತಸ್ಯೋತ್ತರೇ ಕೃತನಿಕೇತನಃ ।
ಪಂಚಾಕ್ಷರೀ ಮಂತ್ರವಾಚ್ಯಸ್ತಸ್ಯ ಚಾಪ್ಯುತ್ತರೇ ಶಿವಃ ॥ ೧೮ ॥
ಅಥ ಮೃತ್ಯುಂಜಯೇಶಶ್ಚ ವಾಚ್ಯಸ್ತ್ರ್ಯಕ್ಷರ ಮಂತ್ರತಃ ।
ಧಾರಣಾಖ್ಯಾ ಸರಸ್ವತ್ಯಪ್ಯಸ್ಯ ಚೋತ್ತರವಾಸಿನೀ ॥ ೧೯ ॥
ಅಕಾರಾದಿ ಕ್ಷಕಾರಾಂತ ವರ್ಣಮೂರ್ತೇಽಸ್ತು ಮಂದಿರಮ್ ।
ಮಾತೃಕಾಯಾ ಉತ್ತರತಸ್ತಸ್ಯಾ ವಿಂಧ್ಯನಿಷೂದನ ॥ ೨೦ ॥
ತದುತ್ತರೇ ಸಂಪದೇಶೀ ಕಾಲಸಂಕರ್ಷಿಣೀ ತಥಾ ।
ಶ್ರೀ ಮಹಾಶಂಭುನಾಥಶ್ಚ ಲಲಿತೋತ್ಪತ್ತಿಕಾರಣಂ ॥ ೨೧ ॥
ಶ್ರೀಪರಾಂಬಾ ಚ ವಿಶದಜ್ಯೋತ್ಸ್ನಾ ನಿರ್ಮಲವಿಗ್ರಹಾ ।
ಉತ್ತರೋತ್ತರಮೇತಾಸ್ತು ದೇವತಾಃ ಕೃತಮಂದಿರಾಃ ॥ ೨೨ ॥

---

೧೬-೧೮. ಇವರಾದ ಬಳಿಕ ಗಂಧರ್ವರಾಜನೂ, ದಾರಿಯಲ್ಲಿಯೇ ಷಡ್ರುದ್ರಮೂರ್ತಿಯೂ, ಆತನ ಹಿಂಭಾಗದಲ್ಲಿಯೇ ಭಗವತಿಯಾದ ತಾರಾಂಬಿಕೆಯೂ ನೆಲಸಿರುವರು. ಬಳಿಕ ಆ ಗೃಹಶ್ರೇಷ್ಠದ ಈಶಾನ್ಯ ಭಾಗದಲ್ಲಿಯೇ ನಾಮತ್ರಯ (ಅಚ್ಯುತಾನಂತ ಗೋವಿಂದ) ಮಹಾ ಮಂತ್ರ ವಾಚ್ಯನಾದ ಶ್ರೀ ಹರಿಯು ನೆಲಸಿರುವನು. ಅಲ್ಲಿಗೆ ಉತ್ತರಕ್ಕೆ ಮಹಾಗಣಪತಿಯೂ, ಆತನ ಉತ್ತರ ದಿಗ್ಭಾಗದಲ್ಲಿ ಶ್ರೀ ಪಂಚಾಕ್ಷರೀ ಮಂತ್ರವಾಚ್ಯನಾದ ಶ್ರೀ ಶಿವನೂ ನೆಲಸಿರುವರು.

೧೯-೨೨. ಆಮೇಲೆ, ತ್ರ್ಯಕ್ಷರ ಮಂತ್ರವಾಚ್ಯನಾದ ಮೃತ್ಯುಂಜಯೇಶ್ವರನೂ, ಈತನ ಉತ್ತರ ಭಾಗದಲ್ಲಿ ಧಾರಣಾದೇವಿ ಸರಸ್ವತೀದೇವಿಯರೂ ಇರುತ್ತಾರೆ. ಅದಕ್ಕೂ ಉತ್ತರದಲ್ಲಿ ಅಕಾರಾದಿ ಕ್ಷಕಾರಾಂತ ವರ್ಣಮೂರ್ತಿಯಾದ ಮಾತೃಕಾದೇವಿಯ ಮಂದಿರವಿರುವುದು. ಅದಕ್ಕೆ ಉತ್ತರದಲ್ಲಿ ಸಂಪದೇಶ್ವರೀ ಕಾಲಸಂಕರ್ಷಿಣೀ ದೇವಿಯರೂ, ಶ್ರೀಲಲಿತಾ ದೇವಿಯ ಉತ್ಪತ್ತಿಗೆ ಕಾರಣನಾದ ಶ್ರೀ ಶಂಭುನಾಥಸ್ವಾಮಿಯೂ ನೆಲಸಿರುತ್ತಾರೆ. ಇದಾದಮೇಲೆ ವಿಶದಜ್ಯೋತ್ಸ್ನೆಯೂ, ನಿರ್ಮಲ ವಿಗ್ರಹೆಯೂ ಆದ ಶ್ರೀ ಪರಾಂಬಿಕೆಯ ಮಂದಿರ, ಹೀಗೆ ಈ ದೇವತಾ ಮಂದಿರಗಳು ಒಂದಾದಮೇಲೊಂದು ನೆಲಗೊಂಡಿರುತ್ತವೆ.

**ಬಾಲಾಚೈವಾಽನ್ನಪೂರ್ಣಾ ಚ ಹಯಾರೂಢಾ ತಥೈವ ಚ ।**
**ಶ್ರೀಪಾದುಕಾ ಚ ತತ್ರಸ್ಥಾ ಉತ್ತರೋತ್ತರಮಂದಿರಾಃ ॥ ೨೩ ॥**
**ಚಿಂತಾಮಣಿಗೃಹೇಂದ್ರಸ್ಯ ಪಶ್ಚಿಮದ್ವಾರಭಾಗತಃ ।**
**ಉತ್ತರೋತ್ತರವಾಸಿನ್ಯೋ ದೇವತಾ ಅಪರಾ ಮುನೇ ॥ ೨೪ ॥**
**ಲಘುಶ್ಯಾಮಾ ಚ ವಾಗ್ವಾದಿನ್ಯಥ ಶ್ರೀನಕುಲಾಂಬಿಕಾ ।**
**ಶ್ಯಾಮಾ ಪರಾಚ ತಸ್ರಸ್ಥಾ ವಾಯುವ್ಯಾಂತಂ ಸಮಾಶ್ರಿತಾಃ ॥ ೨೫ ॥**
**ಚಿಂತಾಮಣಿಗೃಹೇಂದ್ರಸ್ಯ ವಾಯುವ್ಯವಸುಧಾದಿತಃ ।**
**ಮಹಾಪದ್ಮಾಟವೌ ತ್ವನ್ಯಾ ದೇವತಾಃ ಕೃತಮಂದಿರಾಃ ॥ ೨೬ ॥**
**ಉನ್ಮತ್ತಭೈರವೀ ಚೈವ ಸ್ವಪ್ನವಾರಾಹಿಕಾ ಪರಾ ।**
**ತಿರಸ್ಕರಿಣಿಕಾಂಬಾ ಚ ತಥಾನ್ಯಾ ಪಂಚಮೀ ಪರಾ ।**
**ಯಥಾ ಪೂರ್ವಂ ಕೃತಗೃಹಾ ಏತಾ ದೇವ್ಯೋ ಮಹೋದಯಾಃ॥ ೨೭॥**
**ಶ್ರೀಪೂರ್ತಿಶ್ಚ ಮಹಾದೇವೀ ಶ್ರೀಮಹಾಪಾದುಕಾಪಿ ಚ ।**
**ಯಥಾ ಪೂರ್ವಂ ಕೃತಗೃಹೇ ಏತೇ ದ್ವೇ ದೇವತೋತ್ತಮೇ ॥ ೨೮ ॥**
**ಶಂಕರೇಣ ಷಡಾಮ್ನಾಯಸಾಗರೇ ಪ್ರತಿಪಾದಿತಾಃ ।**
**ಯಾ ವಿದ್ಯಾಸ್ತಾ ಸಮಸ್ತಾಶ್ಚ ಮಹಾಪದ್ಮಾಟವೀಸ್ಥಲೇ ॥ ೨೯ ॥**
**ಇತ್ಥಂ ಶ್ರೀರಶ್ಮಿಮಾಲಾಯಾ ಮಣಿಕ್ಲ್ಪಸ್ತಾ ಮಹಾಗೃಹಾಃ ।**
**ಉಚ್ಚಧ್ವಜಾಃ ಸಸಾಲಾಶ್ಚ ಸೋದ್ಯಾನಾಶ್ಚ ತಪೋಧನ ॥ ೩೦ ॥**

---

೨೩-೨೫. ಬಾಲಾ, ಅನ್ನಪೂರ್ಣಾ, ಹಯಾರೂಢಾ, ಶ್ರೀ ಪಾದುಕಾ ಎಂಬ ದೇವಿಯರು ಉತ್ತರೋತ್ತರ ಕ್ರಮದಲ್ಲಿರುವ ಶ್ರೀಮಂದಿರಗಳಲ್ಲಿ ನೆಲಸಿ ಕಂಗೊಳಿಸುತ್ತಿರುವರು. ಪಶ್ಚಿಮ ಭಾಗದಲ್ಲಿ ಲಘುಶ್ಯಾಮಾ, ವಾಗ್ವಾದಿನೀ, ನಕುಲಾಂಬಾ, ಶ್ಯಾಮಾ ಎಂಬ ನಾಲ್ವರು ದೇವಿಯರು ವಾಯುವ್ಯಾಂತದವರೆಗೂ ವಾಸವಾಗಿರುತ್ತಾರೆ.

೨೬-೨೭. ಎಲೈ ಅಗಸ್ತ್ಯನೇ! ಆ ಮಹಾಪದ್ಮಾಟವಿಯ ಚಿಂತಾಮಣಿ ಗೃಹಶ್ರೇಷ್ಠದ ವಾಯುವ್ಯಪ್ರದೇಶದಲ್ಲಿ ಉನ್ಮತ್ತಭೈರವೀ, ಸ್ವಪ್ನವಾರಾಹೀ, ತಿರಸ್ಕರಿಣಿಕಾಂಬಾ, ಪಂಚಮೀ ಎಂಬ ಮಹೋದಯೆಯರಾದ ದೇವಿಯರು ಕ್ರಮವಾಗಿ ಮಂದಿರಗಳನ್ನು ಮಾಡಿಕೊಂಡು ನೆಲಸಿರುವರು.

೨೮-೩೦. ಮಹಾದೇವಿಯಾದ ಶ್ರೀಪೂರ್ತಿಯೂ ಶ್ರೀಮಹಾಪಾದುಕಾದೇವಿಯೂ ಹಿಂದಿನಂತೆಯೇ ಮಂದಿರಗಳನ್ನು ಮಾಡಿಕೊಂಡು ಅಲ್ಲಿಯೇ ನೆಲಸಿರುವರು. ಇದುಮಾತ್ರವಲ್ಲದೆ ಆ ಮಹಾಪದ್ಮಾಟವೀ

**ಚಿಂತಾಮಣಿಗೃಹೇಂದ್ರಸ್ಯ ಪೂರ್ವದ್ವಾರಸ್ಯ ಸಿಂಧುಪ । [ ೩೧ ॥**
**ದಕ್ಷಿಣೇ ಪಾರ್ಶ್ವಭಾಗೇ ತು ಮಂತ್ರಿನಾಥಾಗೃಹಂ ಮಹತ್ ॥**
**ವಾಮಭಾಗೇ ದಂಡನಾಥಾಭವನಂ ರತ್ನನಿರ್ಮಿತಮ್ ।**
**ಬ್ರಹ್ಮವಿಷ್ಣುಮಹೇಶಾನಾಮರ್ಘ್ಯಸ್ಥಾನಸ್ಯ ಪೂರ್ವತಃ ॥ ೩೨ ॥**
**ಭವನಂ ದೀಪಿತಾಶೇಷದಿಕ್ಚಕ್ರಂ ರತ್ನರಾಶಿಭಿಃ ।**
**ಸಮಸ್ತಾ ದೇವತಾ ಏತಾ ಲಲಿತಾಭಕ್ತಿನಿರ್ಭರಾಃ ॥ ೩೩ ॥**
**ಲಲಿತಾಮಂತ್ರಜಪ್ಯಾಶ್ಚ ಶ್ರೀದೇವೀಂ ಸಮುಪಾಸತೇ ।**
**ಪೂರ್ವೋಕ್ತಮರ್ಘ್ಯಸ್ಥಾನಂ ಚ ಪೂರ್ವೋಕ್ತಂ ಚಾರ್ಘ್ಯಕಲ್ಪನಂ ।**
**ಯಾಮ್ಯದ್ವಾರಪ್ರಭೃತಿಷು ಸರ್ವೇಷ್ವಪಿ ಸಮಂ ಸ್ಮೃತಮ್ ॥ ೩೪ ॥**
**ಅಥ ಚಿಂತಾಮಣಿಗೃಹಂ ವಕ್ಷ್ಯೇ ಶೃಣು ಮಹಾಮುನೇ ।**
**ಶ್ರೀಪತ್ತನಸ್ಯ ಮಧ್ಯಸ್ಥಂ ಯೋಜನದ್ವಯವಿಸ್ತೃತಮ್ ॥ ೩೫ ॥**

---

ಸ್ಥಳದಲ್ಲಿ ಶ್ರೀ ಶಂಕರನಿಂದ ಷಡಾಮ್ನಾಯ ಮಹಾಸಾಗರದಲ್ಲಿ ಯಾವ ಯಾವ ವಿದ್ಯಾದೇವಿಯರು ಪ್ರತಿಪಾದಿತೆಯರಾಗಿರುವರೋ ಅವರೆಲ್ಲರೂ ಅಲ್ಲಿಯೇ ವಾಸವಾಗಿರುವರು. ಎಲೈ ತಪೋಧನನಾದ ಅಗಸ್ತ್ಯನೇ! ಹೀಗೆ ಶ್ರೀರಶ್ಮಿಮಾಲಿನೀದೇವಿಯ ರತ್ನಖಚಿತವಾದ ಆ ದಿವ್ಯ ಮಂದಿರಗಳೆಲ್ಲವೂ ಬಹು ಎತ್ತರವಾದ ಧ್ವಜಗಳುಳ್ಳವಾಗಿ, ಪ್ರಾಕಾರಗಳಿಂದಲೂ, ಉದ್ಯಾನಗಳಿಂದಲೂ ಅಲಂಕೃತಗಳಾಗಿ ವಿರಾಜಿಸುತ್ತಿರುವುವು.

೩೧-೩೪. ಎಲೈ ಸಿಂಧುಪನೇ! ಶ್ರೀ ಚಿಂತಾಮಣಿಗೃಹದ ಪೂರ್ವದ್ವಾರದ ಬಲಭಾಗದಲ್ಲಿ ಶ್ರೀ ಮಂತ್ರಿನಾಥಾದೇವಿಯ ಮಹಾಮಂದಿರವೂ ಎಡಭಾಗದಲ್ಲಿ ರತ್ನನಿರ್ಮಿತವಾದ ಶ್ರೀ ದಂಡನಾಥಾದೇವಿಯ ಭವನವೂ ಶೋಭಿಸುತ್ತಿರುವುವು. ಬ್ರಹ್ಮವಿಷ್ಣುಮಹೇಶ್ವರರ ಭವನಗಳು ಅರ್ಘ್ಯಸ್ಥಾನಕ್ಕೆ ಪೂರ್ವದಲ್ಲಿ ರತ್ನರಾಶಿಗಳಿಂದ ತುಂಬಿ, ಸಮಸ್ತ ದಿಕ್ಕುಗಳನ್ನೂ ಬೆಳಗಿಸುತ್ತ ನೆಲಸಿರುವುವು. ಈ ಸಮಸ್ತ ದೇವತೆಗಳೂ ಶ್ರೀ ಲಲಿತಾದೇವಿಯಲ್ಲಿ ಪರಮಭಕ್ತಿ ಸಂಪನ್ನರಾಗಿ ಆಕೆಯ ಮಂತ್ರವನ್ನೇ ಜಪಿಸುತ್ತ ಆಕೆಯನ್ನೇ ಉಪಾಸಿಸುತ್ತಿರುವರು. ಹಿಂದೆ ಹೇಳಿದ ಅರ್ಘ್ಯಸ್ಥಾನವೂ ಅರ್ಘ್ಯಕಲ್ಪನವೂ, ಯಾಮ್ಯವೇ ಮೊದಲಾದ ದ್ವಾರಗಳಲ್ಲೆಲ್ಲ ಒಂದೇ ರೀತಿಯಾಗಿರುತ್ತವೆ.

೩೫-೩೭. ಎಲೈ ಮಹಾಮುನಿಯೇ! ಇನ್ನು ಶ್ರೀಚಿಂತಾಮಣಿ ಗೃಹದ ವಿಷಯವನ್ನು ಹೇಳುವೆನು ಕೇಳು. ಈ ಮಹಾಚಿಂತಾಮಣಿ

**ತಸ್ಯ ಚಿಂತಾಮಣಿಮಯೀ ಭಿತ್ತಿಃ ಕ್ರೋಶ ಸುವಿಸ್ಮೃತಾ ।**
**ಚಿಂತಾಮಣಿ ಶಿಲಾಭಿಶ್ಚ ಛಾಧಿನೀಭಿಸ್ತಥೋಪರಿ ॥ ೩೬ ॥**
**ಸಂವೃತಾ ಕೂಟರೂಪೇಣ ತತ್ರ ಸ್ಥೂಪಿಸಮಾವೃತಾ ।**
**ಗೃಹಭಿತ್ತಿಸ್ತಥೋನ್ನಮ್ರಾ ಚತುರ್ಯೋಜನದೂರತಃ ॥ ೩೭ ॥**
**ವಿಂಶತಿರ್ಯೋಜನಂ ತಸ್ಯ ಚೋನ್ನಮ್ರಾಸ್ಥೂಪಿರುಚ್ಯತೇ ।**
**ಯಥೋರ್ಧ್ವಹ್ರಾಸಸಂಯುಕ್ತಸ್ಥೌಲ್ಯಾತ್ರಿಮಕುಟೋಜ್ವಲಾ ॥**
**ಸ್ಥಿತಾನೀಚ್ಛಾಕ್ರಿಯಾಜ್ಞಾನರೂಪಾಣಿ ಮಕುಟಾನ್ಯಪೇ ।**
**ಸದಾ ದೇದೀಪ್ಯಮಾನಾನಿ ಚಿಂತಾಮಣಿಮಯಾನಿ ಚ ॥ ೩೯ ॥**
**ಚಿಂತಾಮಣಿಗೃಹೇ ಸರ್ವಂ ಚಿಂತಾಮಣಿಮಯಂ ಸ್ಮೃತಮ್ ।**
**ತಸ್ಯ ದ್ವಾರಾಣಿ ಚತ್ವಾರಿ ಕ್ರೋಶಾರ್ಧಾಯಾಮಭಾಂಜಿ ಚ ॥೪೦॥**
**ಕ್ರೋಶಾರ್ಧಾರ್ಧಂ ಚ ವಿಸ್ತಾರೋ ದ್ವಾರಾಣಾಂ ಕಥಿತಾ ಮುನೇ।**
**ದ್ವಾರೇಷು ಸರ್ವೇಷ್ವಪಿ ಚ ಚಿಂತಾಮಣಿಗೃಹಾಂತರೇ ॥ ೪೧ ॥**
**ಪಿಂಡಿತಾ ಲಲಿತಾದೇವ್ಯಾ ದೇಹಲೌಹಿತ್ಯಸಿಂಧವಃ ।**
**ತರುಣಾರ್ಕ ಸಹಸ್ರಾಭಾಶ್ಚಂದ್ರವಚ್ಛೀತಲಾ ಅಪಿ ।**
**ಮುಹುಃ ಪ್ರವಾಹರೂಪೇಣ ಪ್ರಸರಂತಿ ಮಹಾಮುನೇ ॥ ೪೨ ॥**

---

ಗೃಹವು ಶ್ರೀನಗರದ ಮಧ್ಯಭಾಗದಲ್ಲಿ ಎರಡು ಯೋಜನಗಳ ವಿಸ್ತಾರವುಳ್ಳದಾಗಿ ನೆಲೆಗೊಂಡಿರುವುದು. ಚಿಂತಾಮಣಿಮಯವಾದ ಅದರ ಗೋಡೆಯು ಒಂದು ಕ್ರೋಶದಗಲವಿರುವುದು. ಅದು ಸ್ಥೂಪದಿಂದ ಕಂಗೊಳಿಸಿ ಮಂದಿರದ ಸುತ್ತಲೂ ಶಿಖರರೂಪದಲ್ಲಿ ಹರಡಿರುತ್ತದೆ. ಗೃಹಭಿತ್ತಿಯು ನಾಲ್ಕು ಯೋಜನಗಳಷ್ಟು ಎತ್ತರವಾಗಿರುವುದು.

೩೮–೩೯. ಅದರ ಮೇಲೆ ಕಂಗೊಳಿಸುತ್ತಿರುವ ಸ್ಥೂಪದ ಪ್ರಮಾಣವು ಇಪ್ಪತ್ತು ಯೋಜನಗಳು. ಅದು ಮೇಲೆ ಮೇಲಕ್ಕೆ ಹೋಗುತ್ತ ಹೋಗುತ್ತ ಕ್ರಮವಾಗಿ ಕಡಮೆಯಾಗುತ್ತ ಬಂದಿರುವುವು; ಚಿಂತಾಮಣಿ ಶಿಲೆಗಳಿಂದ ರಚಿತವಾಗಿ ಇಚ್ಛಾಶಕ್ತಿ, ಕ್ರಿಯಾಶಕ್ತಿ, ಜ್ಞಾನಶಕ್ತಿ ರೂಪಗಳಾದ ಈ ಮೂರು ಶಿಖರಗಳು ಯಾವಾಗಲೂ ದೇದೀಪ್ಯಮಾನಗಳಾಗಿ ಶೋಭಿಸುತ್ತಿರುವುವು.

೪೦–೪೨. ಈ ಚಿಂತಾಮಣಿ ಗೃಹದಲ್ಲಿ ಸಮಸ್ತವೂ ಚಿಂತಾಮಣಿ ಮಯವಾದುವೇ ಎಂದು ತಿಳಿಯಲಾಗಿದೆ. ಅದಕ್ಕೆ ನಾಲ್ಕು ದ್ವಾರಗಳೂ ಒಂದೊಂದು ದ್ವಾರದ ಉದ್ದವು ಅರ್ಧಕ್ರೋಶ. ಆಗಲವೂ ಕಾಲು

**ಪೂರ್ವಾಮ್ನಾಯಮಯಂಚೈವ ಪೂರ್ವದ್ವಾರಂ ಪ್ರಕೀರ್ತಿತಮ್ ।**
**ದಕ್ಷಿಣದ್ವಾರದೇಶಸ್ತು ದಕ್ಷಿಣಾಮ್ನಾಯಲಕ್ಷಣಃ ॥ ೪೩ ॥**
**ಪಶ್ಚಿಮದ್ವಾರದೇಶಸ್ತು ಪಶ್ಚಿಮಾಮ್ನಾಯಲಕ್ಷಣಃ ।**
**ಉತ್ತರದ್ವಾರದೇಶಃ ಸ್ಯಾದುತ್ತರಾಮ್ನಾಯಲಕ್ಷಣಃ ॥ ೪೪ ॥**
**ಗೃಹರಾಜಸ್ಯಾಂತರಾಲೇ ಭಿತ್ತೌ ಖಚಿತದಂಡಕಾಃ ।**
**ರತ್ನಪ್ರದೀಪಾ ಭಾಸ್ವಂತಃ ಕೋಟ್ಯರ್ಕಸದೃಶತ್ವಿಷಃ ।**
**ಪರಿತಸ್ತತ್ರ ವರ್ತಂತೇ ಭಾಸಯಂತೋ ಗೃಹಾಂತರಮ್ ॥ ೪೫ ॥**
**ಚಿಂತಾಮಣಿಗೃಹಸ್ಯಾಸ್ಯ ಮಧ್ಯಸ್ಥಾನೇ ಮಹೀಯಸಿ ।**
**ಅತ್ಯುಚ್ಚೇ ವೇದಿಕಾಭಾಗೇ ಬಿಂದುಚಕ್ರಂ ಮಹತ್ತರಮ್ ॥ ೪೬ ॥**
**ಚಿಂತಾರತ್ನಗೃಹೋತ್ತುಂಗಂ ಭಿತ್ತೇರ್ಬಿಂದೋಶ್ಚ ಮಧ್ಯಭೂಃ ।**
**ಭಿತ್ತಿಕ್ರೋಶಂ ಪರಿತ್ಯಜ್ಯ ಕ್ರೋಶತ್ರಯಮುದಾಹೃತಮ್ ॥ ೪೭ ॥**
**ತತ್ರ ಕ್ರೋಶತ್ರಯೇ ಸ್ಥಾನಮಣಿಮಾದ್ಯಾತ್ಮರೋಚಿಷಾಮ್ ।**
**ಕ್ರೋಶತ್ರಯಂ ಸಮಸ್ತಂ ತದ್ಧಸ್ತಸಂಖ್ಯಾಪ್ರಕಾರತಃ ॥ ೪೮ ॥**

---

ಕ್ರೋಶವೂ ಇರುತ್ತದೆ. ಎಲೈ ಅಗಸ್ತ್ಯನೇ! ಈ ಚಿಂತಾಮಣಿ ಗೃಹದ ಎಲ್ಲ ದ್ವಾರಗಳಲ್ಲಿಯೂ ಸಾವಿರಾರು ಬಾಲಸೂರ್ಯರ ತೇಜಸ್ಸುಳ್ಳುವಾಗಿಯೂ, ಚಂದ್ರನಂತೆ ಬಹು ಶೀತಲಗಳಾಗಿಯೂ ಇರುವ ಶ್ರೀ ಲಲಿತಾಂಬಿಕೆಯ ದೇಹಲಾಹಿತ್ಯನದಿಗಳು ನೆಲಸಿರುತ್ತವೆ. ಇವು ಅಡಿಗಡಿಗೂ ಪ್ರವಾಹರೂಪವಾಗಿಯೂ ಪ್ರವಹಿಸುತ್ತವೆ.

೪೩-೪೪. ಈ ಮಹಾಗೃಹದ ಪೂರ್ವಪಶ್ಚಿಮ ದಕ್ಷಿಣೋತ್ತರ ದ್ವಾರಗಳೂ ಸಹ ಪೂರ್ವ ಪಶ್ಚಿಮ ದಕ್ಷಿಣೋತ್ತರಾಮ್ನಾಯಮಯಗಳಾಗಿರುತ್ತವೆ.

೪೫. ಈ ಗೃಹರಾಜದೊಳಗೆ ಗೋಡೆಗಳಿಗೆ ಕೀಲಿಸಿರುವ ಹಿಡಿಗಳುಳ್ಳ ರತ್ನಪ್ರದೀಪಗಳು ಕೋಟಿಸೂರ್ಯರಿಗೆ ಸಮಾನವಾದ ಕಾಂತಿಯಿಂದ ಗೃಹಾಂತರವೆಲ್ಲವನ್ನೂ ಸುತ್ತಲೂ ಬೆಳಗಿಸಿ ವಿರಾಜಿಸುತ್ತಿರುವುವು.

೪೬. ಈ ಗೃಹದ ಮಹತ್ತರವಾದ ಮಧ್ಯಪ್ರದೇಶದಲ್ಲಿ ಅತ್ಯುನ್ನತವಾದ ವೇದಿಕೆಯಮೇಲೆ ಮಹತ್ತರವಾದ ಬಿಂದುಚಕ್ರವು ಕಂಗೊಳಿಸುತ್ತಿದೆ.

೪೭-೪೯. ಚಿಂತಾಮಣಿಗೃಹದ ಉನ್ನತವಾದ ಭಿತ್ತಿಗೂ, ಬಿಂದುಪೀಠಕ್ಕೂ ನಡುವಣ ನೆಲವು ಆ ಭಿತ್ತಿಯ ಒಂದು ಕ್ರೋಶವನ್ನು

**ಚತುರ್ವಿಂಶತಿಸಾಹಸ್ರೈಃ ಸಂಮಿತಮುಚ್ಯತೇ ।**
**ಬಿಂದುಪೀಠೇಶಪರ್ಯಂತಂ ಚತುರ್ದಶವಿಭೇದತಃ ॥ ೪೯ ॥**
**ಅಂತರೇ ಭೇದಿತೇ ಜಾತೇ ಹಸ್ತಸಂಖ್ಯಾ ಮಯೋಚ್ಯತೇ ।**
**ಪದ್ಮಾಟವೀ ಸ್ಥಲಾಚ್ಚಿಂತಾಮಣಿವೇಶ್ಮಾಂತರಂ ಮುನೇ ॥ ೫೦ ॥**
**ಹಸ್ತವಿಂಶತಿಮುನ್ನಮ್ರಂ ತತ್ರಸ್ಯುರಣಿಮಾದಯಃ ।**
**ಅಣಿಮಾಂತರವಿಸ್ತಾರಶ್ಚತುರ್ನಲ್ವ ಸಮನ್ವಿತಃ ॥ ॥ ೫೧ ॥**
**ಕಿಷ್ಕುಚತುಶ್ಶತೀ ನಲ್ವಃ ಕಿಷ್ಕುರ್ಹಸ್ತ ಇತೀರ್ಯತೇ ।**
**ತತ್ರಾಂತರೇಽಣಿಮಾದ್ಯಾಸ್ತು ಪೂರ್ವಾದಿಕೃತಮಂದಿರಾಃ ॥ ೫೨ ॥**
**ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ।**
**ಈಶಿತ್ವಂ ಚ ವಶಿತ್ವಂ ಚ ಪ್ರಾಕಾಮ್ಯಂ ಭುಕ್ತಿರೇವ ಚ ॥ ॥ ೫೩ ॥**
**ಇಚ್ಛಾ ಪ್ರಾಪ್ತಿಃ ಸರ್ವಕಾಮೇತ್ಯೇತಾಃ ಸಿದ್ಧಯ ಉತ್ತಮಾಃ ।**
**ರಸಸಿದ್ಧಿರ್ಮೋಕ್ಷಸಿದ್ಧಿರ್ಬಲಸಿದ್ಧಿಸ್ತಥೈವ ಚ ॥ ೫೪ ॥**

---

ಬಿಟ್ಟು ಮೂರು ಕ್ರೋಶಗಳಿರುತ್ತವೆಯೆಂದು ಹೇಳಲಾಗಿದೆ. ಆ ಮೂರು ಕ್ರೋಶಗಳ ಅಗಲವಾದ ಪ್ರದೇಶದಲ್ಲಿ ತಮ್ಮ ದೇಹಕಾಂತಿಯಿಂದಲೇ ಬೆಳಗುತ್ತಿರುವ ಅಣಿಮಾ ಮೊದಲಾದ ಇಪ್ಪತ್ತನಾಲ್ಕು ಸಾವಿರ ಮಂದಿ ಶಕ್ತಿದೇವಿಯರು ಹಸ್ತಕ್ರಮದಲ್ಲಿ ಬಿಂದುಪೀಠದ ಈಶಾನ್ಯ ಭಾಗದವರೆಗೂ ಹದಿನಾಲ್ಕು ಪ್ರಕಾರವಾಗಿ ನೆಲಸಿರುತ್ತಾರೆ.

೫೦-೫೨. ಅಯ್ಯಾ ಕುಂಭಸಂಭವನೇ! ಇವುಗಳ ನಡುವಣ ದೂರವನ್ನು ವಿಭಾಗಿಸಿದರೆ ಆಗುವ ಹಸ್ತಸಂಖ್ಯೆಯನ್ನೀಗ ಹೇಳುವೆನು; ಕೇಳು. ಮಹಾಪದ್ಮಾಟವೀಸ್ಥಲದಿಂದ ಚಿಂತಾಮಣಿ ಗೃಹದವರೆಗೂ ಇಪ್ಪತ್ತು ಹಸ್ತಗಳು ಎತ್ತರವಿರುತ್ತದೆ. ಅಲ್ಲಿಯೇ ಅಣಿಮಾದಿ ಸಿದ್ಧಿದೇವಿಯರು ನೆಲಸಿರುತ್ತಾರೆ. ಅಣಿಮಾಂತರ ವಿಸ್ತಾರವು ನಾಲ್ಕು ನಲ್ವಗಳು. ನಾನ್ನೂರು ಹಸ್ತಗಳು ಒಂದು ನಲ್ವವೆನಿಸುತ್ತದೆ. ಕಿಷ್ಕುವೆಂದರೆ ಹಸ್ತವೆಂದರ್ಥ. ಆ ಪ್ರದೇಶದಲ್ಲಿಯೇ ಅಣಿಮಾದಿಗಳು ಪೂರ್ವವೇ ಮೊದಲಾದ ದಿಕ್ಕುಗಳಲ್ಲಿ ಮಂದಿರಗಳನ್ನು ಏರ್ಪಡಿಸಿಕೊಂಡು ವಾಸವಾಗಿರುವರು.

೫೩-೫೫. ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಈಶಿತ್ವಾ, ವಶಿತ್ವಾ, ಪ್ರಾಕಾಮ್ಯಾ, ಭುಕ್ತಿ, ಇಚ್ಛಾ, ಪ್ರಾಪ್ತಿ, ಸರ್ವಕಾಮಾ ಎಂಬ ಈ ಸಿದ್ಧಿಗಳು ಉತ್ತಮವಾದುವು. ರಸಸಿದ್ಧಿ, ಮೋಕ್ಷಸಿದ್ಧಿ,

ಖಡ್ಗಸಿದ್ಧಿಃ ಪಾದುಕಾಯಾಃ ಸಿದ್ಧಿರಂಜನಸಿದ್ಧಿಕಾ ।
ವಾಕ್ಸಿದ್ಧಿರ್ಲೋಹಸಿದ್ಧಿಶ್ಚ ದೇಹಸಿದ್ಧಿರನಂತರಮ್ ।
ಏತಾದೃಶ್ಯಃ ಸಿದ್ಧಯಸ್ತು ಬಹ್ವ್ಯೋಽನ್ಯಾ ಯೋಗಿಸಮ್ಮತಾಃ ॥ ೫೫ ॥
ಅತ್ರಾಂತರೇ ತು ಪರಿತಃ ಸೇವಂತೇ ಪರಮೇಶ್ವರೀಂ ।
ಕೋಟಿಶಃ ಸಿದ್ಧಯಸ್ತಸ್ಮಿನ್ನಣಿಮಾದ್ಯಂತರೇ ಶುಭೇ ॥ ೫೬ ॥
ನವಲಾವಣ್ಯಸಂಪೂರ್ಣಾಃ ಸ್ಮಯಮಾನ ಮುಖಾಂಬುಜಾಃ ।
ಜ್ವಲಚ್ಚಿಂತಾಮಣಿಕರಾಃ ಸದಾ ಷೋಡಶವಾರ್ಷಿಕಾಃ ।
ಅತ್ಯುದಾರಪ್ರಕೃತಯಃ ಖೇಲಂತಿ ಮದವಿಹ್ವಲಾಃ ॥ ೫೭ ॥
ತಸ್ಯಾಣಿಮಾದ್ಯಂತರಸ್ಯೋಪರಿಷ್ಟಾತ್ಸುಮನೋಹರಮ್ ।
ಹಸ್ತವಿಂಶತಿಮುನ್ನಮ್ರಂ ಚತುರ್ನಲ್ವಪ್ರವಿಸ್ತರಮ್ ॥ ೫೮ ॥
ಚತುರ್ದಿಕ್ಷು ಚ ಸೋಪಾನಪಂಕ್ತಿಭಿಃ ಸುಮನೋಹರಮ್ ।
ಬ್ರಾಹ್ಮ್ಯಂದ್ಯಂತರ ಧಿಷ್ಣ್ಯಂ ಸ್ಯಾತ್ತತ್ರ ದೇವೀಃ ಸ್ಥಿತಾಃ ಶೃಣು ॥

---

ಬಲಸಿದ್ಧಿ, ಖಡ್ಗಸಿದ್ಧಿ, ಪಾದುಕಾಸಿದ್ಧಿ, ಅಂಜನಸಿದ್ಧಿ, ವಾಕ್ಸಿದ್ಧಿ, ಲೋಹಸಿದ್ಧಿ, ದೇಹಸಿದ್ಧಿ ಎಂಬಿವೂ, ಇನ್ನೂ ಇಂತಹ ಅನೇಕ ಸಿದ್ಧಿಗಳೂ ಯೋಗಿಗಳಿಗೆ ಸಮ್ಮತವಾದವುಗಳು.

೫೬-೫೭. ಇಂತಹ ಕೋಟ್ಯಂತರ ಸಂಖ್ಯೆಯ ಸಿದ್ಧಿದೇವಿಯರೆಲ್ಲರೂ ಮಂಗಳಕರವಾದ ಅಣಿಮಾದಿಗಳ ಗೃಹದಲ್ಲಿ ಸುತ್ತಲೂ ನೆಲಸಿ ಶ್ರೀಲಲಿತಾ ಪರಮೇಶ್ವರಿಯನ್ನು ಓಲೈಸುತ್ತಿರುವರು. ನವಲಾವಣ್ಯವತಿಯರೂ, ಸ್ಮಿತಮುಖಿಯರೂ, ಪ್ರಜ್ವಲಿಸುತ್ತಿರುವ ಚಿಂತಾಮಣಿ ಕರಕಮಲೆಯರೂ ಆಗಿರುತ್ತಾರೆ, ಯಾವಾಗಲೂ ಹದಿನಾರು ವರ್ಷದ ಯುವತಿಯರಾಗಿ, ಉದಾರವಾದ ಸ್ವಭಾವಗಳುಳ್ಳ ಈ ಸಿದ್ಧಿದೇವಿಯರೆಲ್ಲರೂ ಆ ಗೃಹಗಳಲ್ಲಿ ಯಾವಾಗಲೂ ಮದವಿಹ್ವಲೆಯರಾಗಿ ಕ್ರೀಡಿಸುತ್ತಿರುತ್ತಾರೆ.

೫೮-೫೯. ಈ ಅಣಿಮಾಮಹಿಮಾ ಮೊದಲಾದ ಸಿದ್ಧಿಲಲನೆಯರ ಮಂದಿರಗಳ ಮೇಲ್ಭಾಗದಲ್ಲಿ ಇಪ್ಪತ್ತು ಹಸ್ತಗಳ ಎತ್ತರವೂ, ನಾಲ್ಕು ನಲ್ವಗಳ ವಿಸ್ತಾರವೂ ಉಳ್ಳುದಾಗಿ ನಾಲ್ಕು ದಿಕ್ಕುಗಳಲ್ಲಿಯೂ ಸೋಪಾನ ಪಂಕ್ತಿಗಳಿಂದ ಮನೋಹರವಾಗಿರುವ ಬ್ರಾಹ್ಮ್ಯಾದಿ ದೇವಿಯರ ಮಂದಿರವು ವಿರಾಜಿಸುತ್ತಿರುವುದು. ಈ ದಿವ್ಯ ಮಂದಿರದಲ್ಲಿ ನೆಲಸಿರುವ ದೇವಿಯರ ಹೆಸರುಗಳನ್ನು ಕೇಳು.

**ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ।**
**ವಾರಾಹೀ ಚೈವ ಮಾಹೇಂದ್ರಿ ಚಾಮುಂಡಾ ತ್ವಥ ಸಪ್ತಮೀ ॥೬೦॥**
**ಮಹಾಲಕ್ಷ್ಮೀರಷ್ಟಮೀ ತು ತತ್ರೈತಾಃ ಕೃತಮಂದಿರಾಃ ।**
**ನಾನಾವಿಧಾಯುಧಾಢ್ಯಾಶ್ಚ ನಾನಾಶಕ್ತಿಪರಿಚ್ಛದಾಃ ।**
**ಪೂರ್ವಾದಿದಿಶಮಾರಭ್ಯ ಪ್ರದಕ್ಷಿಣಕೃತಾಲಯಾಃ ॥ ೬೧ ॥**
**ಅಥ ಬ್ರಾಹ್ಮ್ಯಾದ್ಯಂತರಸ್ಯೋಪರಿಷ್ಟಾತ್ಕುಂಭಸಂಭವ ।**
**ಹಸ್ತವಿಂಶತಿಮುನ್ನಮ್ರಂ ಚತುರ್ನಲ್ವಪ್ರವಿಸ್ತರಮ್ ॥ ೬೨ ॥**
**ಮುದ್ರಾಂತರಮಿತಿ ಜ್ಞೇಯಂ ತತ್ರಮುದ್ರಾಃ ಕೃತಾಲಯಾಃ ।**
**ಸಂಕ್ಷೋಭದ್ರಾವಣಾಕರ್ಷವಶ್ಯೋನ್ಮಾದಮಹಾಂಕುಶಾಃ ॥೬೩॥**
**ಖೇಚರೀ ಬೀಜಯೋನ್ಯಾಖ್ಯಾಸ್ತ್ರಿಖಂಡಾ ದಶಮೀ ಪುನಃ ।**
**ಪೂರ್ವಾದಿ ದಿಶಮಾರಭ್ಯ ಮುದ್ರಾ ಏತಾಃ ಪ್ರತಿಷ್ಠಿತಾಃ ॥ ೬೪ ॥**
**ಅತ್ಯಂತಸುಂದರಾಕಾರಾ ನವಯೌವನವಿಹ್ವಲಾಃ ।**
**ಕಾಂತಿಭಿಃ ಕಮನೀಯಾಭಿಃ ಪೂರಯಂತ್ಯೋ ಗೃಹಾಂತರಮ್ ।**
**ಸೇವಂತೇ ಮುನಿಶಾರ್ದೂಲ ಲಲಿತಾಪರಮೇಶ್ವರೀಮ್ ॥ ೬೫ ॥**

---

೬೦-೬೧. ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಮಾಹೇಂದ್ರೀ, ಚಾಮುಂಡಾ, ಮಹಾಲಕ್ಷ್ಮೀ ಎಂಬ ಈ ದೇವಿಯರು ಆ ಪ್ರದೇಶದ ಪೂರ್ವಾದಿ ದಿಕ್ಕುಗಳಲ್ಲಿ ಪ್ರದಕ್ಷಿಣಾಕಾರವಾಗಿ ಮಂದಿರಗಳನ್ನೇರ್ಪಡಿಸಿಕೊಂಡು ವಿವಿಧಾಯುಧ ಧಾರಿಣಿಯರಾಗಿ ನೆಲಸಿರುತ್ತಾರೆ.

೬೨-೬೫. ಎಲೈ ಕುಂಭಸಂಭವನೇ! ತರುವಾಯ ಆ ಬ್ರಾಂಹ್ಮ್ಯಾದಿ ಮಂದಿರಗಳ ಮೇಲ್ಭಾಗದಲ್ಲಿ ಇಪ್ಪತ್ತು ಹಸ್ತಗಳೆತ್ತರವೂ ನಾಲ್ಕು ನಲ್ವಗಳ ವಿಸ್ತಾರವೂ ಉಳ್ಳ ಮುದ್ರಾಮಂದಿರವು ಕಂಗೊಳಿಸುತ್ತಿರುವುದೆಂದು ತಿಳಿಯಬೇಕು. ಅಲ್ಲಿಯೇ ಮುದ್ರಾದೇವಿಯರು ವಾಸವಾಗಿರುವರು. ಸಂಕ್ಷೋಭೋಣೀ, ವಿದ್ರಾವಿಣೀ, ಆಕರ್ಷಣೀ, ವಶ್ಯಾ, ಉನ್ಮಾದಾ, ಮಹಾಂಕುಶಾ, ಖೇಚರೀ, ಬೀಜಾ, ಯೋನಿ, ತ್ರಿಖಂಡಿಕಾ ಎಂಬ ಈ ದಶಮುದ್ರಾದೇವಿಯರು ಅಲ್ಲಿ ಸುಪ್ರತಿಷ್ಠಿತೆಯರಾಗಿರುವರು. ಅತ್ಯಂತ ಸುಂದರರೂಪಿಣಿಯರೂ, ನವಯೌನಶಾಲಿನಿಯರೂ, ಮನೋಹರವಾದ ತಮ್ಮ ಕಾಂತಿಯಿಂದ ಆ ಭವನವೆಲ್ಲವನ್ನೂ ಬೆಳಗುತ್ತಿರುವವರೂ ಆಗಿ ಈ ಮುದ್ರಾದೇವಿಯರೆಲ್ಲರೂ ಶ್ರೀ ಲಲಿತಾಪರಮೇಶ್ವರಿಯನ್ನೇ ಓಲೈಸುತ್ತಿರುವರು.

**ಅಂತರತ್ರಯಮೇತತ್ತು ಚಕ್ರಂ ತ್ರೈಲೋಕ್ಯಮೋಹನಂ ।**
**ಏತಸ್ಮಿನ್ ಶಕ್ತಯೋ ಯಾಸ್ತು ತಾ ಉಕ್ತಾ ಪ್ರಕಟಾಭಿಧಾಃ ॥೬೬॥**
**ಏತಾಸಾಂ ಸಮಧಿಷ್ಠಾತ್ರೀ ತ್ರಿಪುರಾ ಚಕ್ರನಾಯಿಕಾ ।**
**ತಚ್ಚಕ್ರಪಾಲನಕರೀ ಮುದ್ರಾ ಸಂಕ್ಷೋಭಣಾತ್ಮಿಕಾ ॥ ೬೭ ॥**
**ಅಥ ಮುದ್ರಾಂತರಸ್ಯೋರ್ಧ್ವಂ ಪ್ರೋಕ್ತಂ ನಿತ್ಯಾಕಲಾಂತರಮ್ ।**
**ಹಸ್ತವಿಂಶತಿಮುನ್ನಮ್ರಂ ಚತುರ್ನಲ್ವಪ್ರವಿಸ್ತರಮ್ ॥ ೬೮ ॥**
**ಪೂರ್ವವಚ್ಚೈವ ಸೋಪಾನಮುತ್ತರೋತ್ತರ ಮಿಷ್ಯತೇ ।**
**ನಿತ್ಯಾಕಲಾಂತರೇ ತಸ್ಮಿನ್ ಕಾಮಾಕರ್ಷಿಣಿಕಾಮುಖಾಃ ॥ ೬೯ ॥**
**ಪರಿತಃ ಕೃತಸಂಸ್ಥಾನಾಃ ಷೋಡಶೇಂದುಕಲಾತ್ಮಿಕಾಃ । [ ೭೦ ॥**
**ತರ್ಪಯಂತ್ಯೋ ದಿಶಾಂ ಚಕ್ರಂ ಸುಧಾಸ್ಯಂದೈಃ ಸುಶೀತಲೈಃ ॥**
**ತಾಸಾಂ ನಾಮಾನಿ ಮತ್ತಸ್ತ್ವಮವಧಾರಯ ಕುಂಭಜ ।**
**ಕಾಮಾಕರ್ಷಿಣಿಕಾ ನಿತ್ಯಾ ಬುದ್ಧ್ಯಾಕರ್ಷಿಣಿಕಾ ಪರಾ ॥ ೭೧ ॥**

---

೬೬-೬೭. ಈ ಮೂರು ಮಂದಿರಗಳೂ ಸೇರಿ ತ್ರೈಲೋಕ್ಯಮೋಹನ ಚಕ್ರವೆನಿಸುವುದು. ಈ ಚಕ್ರದಲ್ಲಿ ವಾಸವಾಗಿರುವ ಶಕ್ತಿದೇವಿಯರ ಹೆಸರುಗಳೆಲ್ಲವನ್ನೂ ಆಗಲೇ ಹೇಳಿಯಾಗಿದೆ. ಇವರೆಲ್ಲರಿಗೂ ಒಡತಿಯು ಚಕ್ರನಾಯಿಕೆಯಾದ ಶ್ರೀ ತ್ರಿಪುರಾಂಬಿಕೆಯು. ಪಾಲನಕರ್ತ್ರಿಯು ಮುದ್ರಾದೇವಿಯಾದ ಸಂಕ್ಷೋಭಿಣಿಯು.

೬೮-೭೦. ಇನ್ನು, ಈ ಮುದ್ರಾಮಂದಿರದ ಮೇಲ್ಭಾಗದಲ್ಲಿ ನಿತ್ಯಕಲಾದೇವಿಯರ ಮಂದಿರವಿರುವುದೆಂದು ಹೇಳಿದೆ. ಇದು ಇಪ್ಪತ್ತು ಹಸ್ತಗಳೆತ್ತರವೂ, ನಾಲ್ಕು ನಲ್ವಗಳಗಲವೂ ಇದ್ದು ಹಿಂದಿನ ಮಂದಿರದಂತೆಯೇ ಮೇಲೆ ಮೇಲೆ ಸೋಪಾನಗಳಿಂದ ಕೂಡಿರುತ್ತದೆ. ಈ ಮಂದಿರದಲ್ಲಿ ಕಾಮಾಕರ್ಷಿಣಿಯೇ ಮೊದಲಾದ ಚಂದ್ರಕಲಾತ್ಮಿಕೆಯರಾದ ಹದಿನಾರು ಮಂದಿ ಕಲಾಶಕ್ತಿದೇವಿಯರು ಸುತ್ತಲೂ ಮಂದಿರಗಳನ್ನು ಮಾಡಿಕೊಂಡು ಶೀತಳ ಸುಧೆಯನ್ನು ಸೂಸುತ್ತ ದಶದಿಶೆಗಳನ್ನೂ ತೃಪ್ತಿಗೊಳಿಸುವವರಾಗಿ ವಾಸಿಸುತ್ತಿರುವರು.

೭೧-೭೬. ಅಯ್ಯಾ ಕುಂಭಸಂಭವನೇ! ಇವರ ಹೆಸರುಗಳನ್ನು ನನ್ನಿಂದ ಕೇಳಿ ತಿಳಿದುಕೊಳ್ಳುವವನಾಗು. ಕಾಮಾಕರ್ಷಿಣೀ, ಬುದ್ಧ್ಯಾಕರ್ಷಿಣೀ, ಅಹಂಕಾರಾಕರ್ಷಿಣೀ, ಶಬ್ದಾಕರ್ಷಿಣೀ, ಸ್ಪರ್ಶಾಕರ್ಷಿಣೀ, ರೂಪಾಕರ್ಷಿಣೀ, ರಸಾಕರ್ಷಿಣೀ, ಗಂಧಾಕರ್ಷಿಣೀ,

**ಅಹಂಕಾರಾಕರ್ಷಿಣೀ ಚ ಶಬ್ದಾಕರ್ಷಿಣಿಕಾ ತಥಾ ।**
**ಸ್ಪರ್ಶಾಕರ್ಷಿಣಿಕಾ ನಿತ್ಯಾ ರೂಪಾಕರ್ಷಿಣಿಕಾ ತಥಾ ॥ ೭೨ ॥**
**ರಸಾಕರ್ಷಿಣಿಕಾ ನಿತ್ಯಾ ಗಂಧಾಕರ್ಷಿಣಿಕಾ ಕಲಾ ।**
**ಚಿತ್ತಾಕರ್ಷಿಣಿಕಾ ನಿತ್ಯಾ ಧೈರ್ಯಾಕರ್ಷಿಣಿಕಾ ಕಲಾ ॥ ೭೩ ॥**
**ಸ್ಮೃತ್ಯಾಕರ್ಷಿಣಿಕಾ ನಿತ್ಯಾ ನಾಮಾಕರ್ಷಿಣಿಕಾ ಕಲಾ ।**
**ಬೀಜಾಕರ್ಷಿಣಿಕಾ ನಿತ್ಯಾ ಚಾತ್ಮಾಕರ್ಷಿಣಿಕಾ ಕಲಾ ॥ ೭೪ ॥**
**ಅಮೃತಾಕರ್ಷಿಣೀ ನಿತ್ಯಾ ಶರೀರಾಕರ್ಷಿಣೀ ಕಲಾ ।**
**ಏತಾಸ್ತು ಗುಪ್ತಯೋಗಿನ್ಯಸ್ತ್ರಿಪುರೇಶೀ ಚ ಚಕ್ರಿಣೀ ॥ ೭೫ ॥**
**ಸರ್ವಾಶಾಪೂರಕಾಭಿಖ್ಯ ಚಕ್ರಾಧಿಷ್ಠಾನ ದೇವತಾ ।**
**ಏತಚ್ಚಕ್ರೇ ಪಾಲಿಕಾ ತು ಮುದ್ರಾದ್ರಾವಿಣಿಕಾಭಿದಾ ॥ ೭೬ ॥**
**ನಿತ್ಯಾಕಲಾಂತರಾದೂರ್ಧ್ವಂ ದಿಷ್ಣ್ಯಮತ್ಯಂತಸುಂದರಮ್ ।**
**ಹಸ್ತವಿಂಶತಿಮುನ್ನಮ್ರಂ ಚತುರ್ನಲ್ವಪ್ರವಿಸ್ತರಮ್ ॥ ೭೭ ॥**
**ಪ್ರಾಗ್ವತ್ಸೋಪಾನ ಸಂಯುಕ್ತಂ ಸರ್ವಸಂಕ್ಷೋಭಣಾಭಿಧಮ್ ।**
**ತತ್ರಾಷ್ಟೌ ಶಕ್ತಯಸ್ತೀವ್ರಾ ಮದಾರುಣವಿಲೋಚನಾಃ ।**
**ನವತಾರುಣ್ಯಮತ್ತಾಶ್ಚ ಸೇವಂತೇ ಪರಮೇಶ್ವರೀಮ್ ॥ ೭೮ ॥**

---

ಚಿತ್ತಾಕರ್ಷಿಣೀ, ಧೈರ್ಯಾಕರ್ಷಿಣೀ, ಸ್ಮೃತ್ಯಾಕರ್ಷಿಣೀ, ನಾಮಾಕರ್ಷಿಣೀ, ಬೀಜಾಕರ್ಷಿಣೀ, ಆತ್ಮಾಕರ್ಷಿಣೀ, ಅಮೃತಾಕರ್ಷಿಣೀ, ಶರೀರಾಕರ್ಷಿಣೀ ಎಂಬ ಈ ಹದಿನಾರು ಮಂದಿ ನಿತ್ಯಕಲಾದೇವಿಯರೆಲ್ಲರೂ ಗುಪ್ತಯೋಗಿನಿಯರೆನಿಸುವರು. ಇವರೆಲ್ಲರಿಗೂ ಶ್ರೀಚಕ್ರನಾಯಕಿಯಾದ ಶ್ರೀ ತ್ರಿಪುರೇಶ್ವರಿಯು ನಾಯಿಕೆಯು. ಅಧಿಷ್ಠಾನ ದೇವತೆಯು ಸರ್ವಾಶಾಪೂರಿಕೆಯು. ಈ ಚಕ್ರಸಂರಕ್ಷಕಿಯಾದರೋ ಮುದ್ರಾದ್ರವಿಣಿಕಾದೇವಿಯು.

೭೭-೭೮. ಈ ನಿತ್ಯಾಕಲಾದೇವಿಯರ ಮಂದಿರಕ್ಕೂ ಮೇಲ್ಭಾಗದಲ್ಲಿ ಇಪ್ಪತ್ತು ಹಸ್ತಗಳೆತ್ತರವೂ, ನಾಲ್ಕು ನಲ್ವಗಳ ವಿಸ್ತಾರವೂ ಉಳ್ಳದಾಗಿ ಹಿಂದಿನಂತೆಯೇ ಸೋಪಾನಗಳಿಂದ ಕೂಡಿರುವ ಸರ್ವಸಂಕ್ಷೋಭಣವೆಂಬ ಸುಂದರ ಮಂದಿರವು ಕಂಗೊಳಿಸುತ್ತಿರುವುದು. ಈ ಮಂದಿರದಲ್ಲಿ ಮದಾರುಣವಿಲೋಚನೆಯರೂ, ತೀಕ್ಷ್ಣಸ್ವಭಾವವುಳ್ಳವರೂ, ನವಯೌವನದಿಂದ ಮದಿಸಿರುವವರೂ ಆದ ಎಂಟು ಮಂದಿ ಶಕ್ತಿದೇವಿಯರು ನೆಲಸಿ ಶ್ರೀ ಲಲಿತಾಪರಮೇಶ್ವರಿಯನ್ನು ಸೇವಿಸುತ್ತಿರುವರು.

**ಕುಸುಮಾ ಮೇಖಲಾಚೈವ ಮದನಾ ಮದನಾತುರಾ ।**
**ರೇಖಾ ವೇಗಿನ್ಯಂಕುಶಾ ಚ ಮಾಲಿನ್ಯಷ್ಟೌ ಚ ಶಕ್ತಯಃ ॥ ೭೯ ॥**
**ಕೋಟಿಶಸ್ತತ್ಪರೀವಾರಾಃ ಶಕ್ತಯೋಽನಂಗ ಪೂರ್ವಿಕಾಃ ।**
**ಸರ್ವಸಂಕ್ಷೋಭಣಮಿದಂ ಚಕ್ರಂ ತತ್ರ ತು ಚಕ್ರಿಣೀ ॥ ೮೦ ॥**
**ಸುಂದರೀನಾಮ ವಿಜ್ಞೇಯಾ ನಾಮ್ನಾ ಗುಪ್ತತರಾ ಸ್ಮೃತಾ ।**
**ತಚ್ಚಕ್ರ ಪಾಲನಕರೀ ಮುದ್ರಾಕರ್ಷಿಣಿಕಾ ಸ್ಮೃತಾ ॥ ೮೧ ॥**
**ಅನಂಗಶಕ್ತ್ಯಂತರಸ್ಯೋಪರಿಷ್ಟಾತ್ಕುಂಭಸಂಭವ ।**
**ಹಸ್ತವಿಂಶತಿಮುನ್ನಮ್ರಂ ಚತುರ್ನಲ್ವ ಪ್ರವಿಸ್ತರಮ್ ॥ ೮೨ ॥**
**ಸಂಕ್ಷೋಭಿಣ್ಯಾದ್ಯಂತರಂ ಸ್ಯಾತ್ಸರ್ವಸೌಭಾಗ್ಯದಾಯಕಮ್ ।**
**ಸರ್ವಸಂಕ್ಷೋಭಿಣೀಮುಖ್ಯಾಸ್ತತ್ರಶಕ್ತಯ ಉದ್ಧತಾಃ ।**
**ಚತುರ್ದಶಮಸಂತ್ಯೇವ ತಾಸಾಂ ನಾಮಾನಿ ಮಚ್ಛೃಣು ॥ ೮೩ ॥**
**ಸರ್ವಸಂಕ್ಷೋಭಿಣೀ ಶಕ್ತಿಃ ಸರ್ವವಿದ್ರಾವಿಣೀ ತಥಾ ।**
**ಸರ್ವಾಕರ್ಷಿಣಿಕಾ ಶಕ್ತಿಃ ಸರ್ವಾಹ್ಲಾದನಿಕಾ ತಥಾ ॥ ೮೪ ॥**

---

೭೯-೮೧. ಇವರೇ ಕುಸುಮಾ, ಮೇಖಲಾ, ಮದನಾ, ಮದನಾತುರಾ, ರೇಖಾ, ವೇಗಿನೀ, ಅಂಕುಶಾ, ಮಾಲಿನೀ ಎಂಬವರು. ಇವರೇ ಎಂಟು ಮಂದಿ ಅನಂಗಶಕ್ತಿದೇವಿಯರು. ಇವರಿಗೆ ಅನಂಗ ಪೂರ್ವಿಕೆಯರಾದ ಕೋಟ್ಯನುಕೋಟಿ ಪರಿವಾರ ಶಕ್ತಿದೇವಿಯರಿರುತ್ತಾರೆ. ಇದೇ ಸರ್ವಸಂಕ್ಷೋಭಣ ಚಕ್ರವು. ಈ ಚಕ್ರನಾಯಕಿಯು ಅತ್ಯಂತ ಗುಪ್ತೆಯಾದ ಸುಂದರಿಯೆಂದು ತಿಳಿಯಬೇಕು. ಈ ಚಕ್ರವನ್ನು ಪಾಲಿಸುತ್ತಿರುವಾಕೆಯು ಮುದ್ರಾಕರ್ಷಿಣೀದೇವಿಯು.

೮೨-೮೩. ಎಲೈ ಕುಂಭಸಂಭವನೇ! ಈ ಅನಂಗಶಕ್ತಿದೇವೀ ಮಂದಿರಕ್ಕೂ ಮೇಲ್ಭಾಗದಲ್ಲಿ ಇಪ್ಪತ್ತು ಹಸ್ತಗಳೆತ್ತರವೂ, ನಾಲ್ಕು ನಲ್ವಗಳ ವಿಸ್ತಾರವೂ ಉಳ್ಳುದಾಗಿ ಸಮಸ್ತ ಸೌಭಾಗ್ಯಗಳನ್ನೂ ಕೊಡುವುದಾದ ಸಂಕ್ಷೋಭಿಣಿಯೇ ಮೊದಲಾದ ದೇವಿಯರ ಮಂದಿರವು ನೆಲೆಗೊಂಡಿರುವುದು. ಇಲ್ಲಿ ಸರ್ವಸಂಕ್ಷೋಭಿಣಿಯೇ ಮೊದಲಾದ ಹದಿನಾಲ್ಕು ಮಂದಿ ಉದ್ಧತ ಶಕ್ತಿದೇವಿಯರು ವಾಸವಾಗಿರುವರು. ಇವರ ಹೆಸರುಗಳನ್ನು ಕೇಳು.

೮೪-೮೮. ಸರ್ವಸಂಕ್ಷೋಭಿಣೀ, ಸರ್ವವಿದ್ರಾವಿಣೀ, ಸರ್ವಾಕರ್ಷಿಣಿಕಾ, ಸರ್ವಾಹ್ಲಾದಿನೀ, ಸರ್ವಸಂಮೋಹಿನೀ, ಸರ್ವಸ್ತಂಭಿನೀ,

**ಸರ್ವಸಂಮೋಹಿನೀ ಶಕ್ತಿಃ ಸರ್ವಸ್ತಂಭನಶಕ್ತಿಕಾ ।**
**ಸರ್ವಜಂಭನಶಕ್ತಿಶ್ಚ ತಥಾ ಸರ್ವವಶಂಕರೀ ॥ ೮೫ ॥**
**ಸರ್ವರಂಜನಶಕ್ತಿಶ್ಚ ಸರ್ವೋನ್ಮಾದನಶಕ್ತಿಕಾ ।**
**ಸರ್ವಾರ್ಥಸಾಧನೀ ಶಕ್ತಿಃ ಸರ್ವಸಂಪತ್ತಿಪೂರಿಣೀ ॥ ೮೬ ॥**
**ಸರ್ವಮಂತ್ರಮಯೀ ಶಕ್ತಿಃ ಸರ್ವದ್ವಂದ್ವ ಕ್ಷಯಂಕರೀ ।**
**ಏತಾಶ್ಚ ಸಂಪ್ರದಾಯಾಖ್ಯಾಶ್ಚಕ್ರಿಣೀ ಪುರವಾಸಿನೀ ॥ ೮೭ ॥**
**ಮುದ್ರಾ ಚ ಸರ್ವವಶ್ಯಾಖ್ಯಾ ತಚ್ಚಕ್ರೇ ರಕ್ಷಿಕಾ ಮತಾ ।**
**ಕೋಟಿಶಃ ಶಕ್ತಯಸ್ತತ್ರ ತಾಸಾಂ ಕಿಂಕರ್ಯ ಉದ್ಧತಾಃ ॥ ೮೮ ॥**
**ಸಂಕ್ಷೋಭಿಣ್ಯಾದ್ಯಂತರಸ್ಯೋಪರಿಷ್ಟಾತ್ಕುಂಭಸಂಭವ ।**
**ಹಸ್ತವಿಂಶತಿಮುನ್ನಮ್ರಂ ಚತುರ್ನಲ್ವಪ್ರವಿಸ್ತರಮ್ ॥ ೮೯ ॥**
**ಸರ್ವಸಿದ್ಧ್ಯಾದಿಕಾನಾಂ ತು ಮಂದಿರಂ ಧಿಷ್ಣ್ಯಮುಚ್ಯತೇ ।**
**ಸರ್ವಸಿದ್ಧಿಪ್ರದಾಚೈವ ಸರ್ವಸಂಪತ್ಪ್ರದಾ ತಥಾ ॥ ೯೦ ॥**
**ಸರ್ವಪ್ರಿಯಂಕರೀ ಶಕ್ತಿಃ ಸರ್ವಮಂಗಲಕಾರಿಣೀ ।**
**ಸರ್ವಕಾಮಪ್ರದಾ ದೇವೀ ಸರ್ವದುಃಖವಿಮೋಚಿನೀ ॥ ೯೧ ॥**
**ಸರ್ವಮೃತ್ಯುಪ್ರಶಮನೀ ಸರ್ವವಿಘ್ನನಿವಾರಿಣೀ ।**
**ಸರ್ವಾಂಗಸುಂದರೀ ದೇವೀ ಸರ್ವಸೌಭಾಗ್ಯದಾಯಿನೀ ॥ ೯೨ ॥**

---

ಸರ್ವಜಂಭನೀ, ಸರ್ವವಶಂಕರೀ, ಸರ್ವರಂಜಿನೀ, ಸರ್ವೋನ್ಮಾದಿನೀ, ಸರ್ವಾರ್ಥಸಾಧನೀ, ಸರ್ವಸಂಪತ್ತಿಪೂರಿಣೀ, ಸರ್ವಮಂತ್ರಮಯೀ, ಸರ್ವದ್ವಂದ್ವಕ್ಷಯಂಕರೀ ಎಂಬ ಈ ಶಕ್ತಿದೇವಿಯರೆಲ್ಲರೂ ಸಂಪ್ರದಾಯ ದೇವಿಯರೆಂದು ಹೆಸರಾದವರು. ಈ ಚಕ್ರಕ್ಕೆ ಅಧಿಷ್ಠಾತ್ರಿಯು ಶ್ರೀ ಪುರವಾಸಿನಿಯು. ಸರ್ವವಶ್ಯಾಮುದ್ರಾದೇವಿಯು ಇದರ ರಕ್ಷಕಿಯು. ಈ ದೇವಿಯರಿಗೆಲ್ಲ ಕೋಟ್ಯಂತರ ಮಂದಿ ಉದ್ಧತೆಯರಾದ ಶಕ್ತಿ ದೇವಿಯರು ಕಿಂಕರಿಯರಾಗಿರುತ್ತಾರೆ.

೮೯-೯೩. ಎಲೈ ಕುಂಭಸಂಭವನೇ! ಈ ಸಂಕ್ಷೋಭಿಣೀದೇವಿಯರ ಮಂದಿರದ ಮೇಲ್ಭಾಗದಲ್ಲಿ ಇಪ್ಪತ್ತು ಹಸ್ತಗಳೆತ್ತರವೂ, ನಾಲ್ಕು ನಲ್ವಗಳ ಅಗಲವೂ ಉಳ್ಳುದಾಗಿರುವ ಸರ್ವಸಿದ್ಧಿಯೇ ಮೊದಲಾದವರ ಮಂದಿರ ವಿರುವುದೆಂದು ಹೇಳಿದೆ. ಸರ್ವಸಿದ್ಧಿಪ್ರದಾ, ಸರ್ವಸಂಪತ್ಪ್ರದಾ, ಸರ್ವ ಪ್ರಿಯಂಕರೀ, ಸರ್ವಮಂಗಲಕಾರಿಣೀ, ಸರ್ವಕಾಮಪ್ರದಾ, ಸರ್ವ ದುಃಖವಿಮೋಚಿನೀ, ಸರ್ವಮೃತ್ಯುಪ್ರಶಮನೀ, ಸರ್ವವಿಘ್ನನಿವಾರಿಣೀ,

**ಏತಾದೇವ್ಯಃ ಕುಲೋತ್ತೀರ್ಣಾ ಯೋಗಿನ್ಯೋ ನಾಮತಃ ಸ್ಮೃತಾಃ ।**
**ಚಕ್ರಿಣೀ ಚ ಶ್ರೀಶ್ಚ ವಿಜ್ಞೇಯಾ ಚಕ್ರಂ ಸರ್ವಾರ್ಥಸಾಧಕಮ್ ।**
**ಸರ್ವೋನ್ಮಾದನಮುದ್ರಾಸ್ಯ ಚಕ್ರಸ್ಯ ಪರಿಪಾಲಿಕಾ ॥ ೯೩ ॥**
**ಸರ್ವಸಿದ್ಧ್ಯಾದ್ಯಂತರಸ್ಯೋಪರಿಷ್ಟಾತ್ಕುಂಭಸಂಭವ ।**
**ಹಸ್ತವಿಂಶತಿಮುನ್ನಮ್ರಂ ಚತುರ್ನಲ್ವಪ್ರವಿಸ್ತರಮ್ ॥ ೯೪ ॥**
**ಸರ್ವಜ್ಞಾದ್ಯಂತರಂ ನಾಮ್ನಾ ಸರ್ವರಕ್ಷಾಕರಂ ಪರಮ್ ।**
**ಚಕ್ರಂ ಮಹತ್ತತ್ರದೇವ್ಯಃ ಸರ್ವಜ್ಞಾದ್ಯಾಃ ಪ್ರಕೀರ್ತಿತಾಃ ॥ ೯೫ ॥**
**ಸರ್ವಜ್ಞಾ ಸರ್ವಶಕ್ತಿಶ್ಚ ಸರ್ವೈಶ್ವರ್ಯಪ್ರದಾಯಿನೀ ।**
**ಸರ್ವಜ್ಞಾನಮಯೀ ದೇವೀ ಸರ್ವವ್ಯಾಧಿವಿನಾಶಿನೀ ॥ ೯೬ ॥**
**ಸರ್ವಾಧಾರಸ್ವರೂಪಾಚ ಸರ್ವಪಾಪಹರಾ ತಥಾ ।**
**ಸರ್ವಾನಂದಮಯೀ ದೇವೀ ಸರ್ವರಕ್ಷಾಸ್ವರೂಪಿಣೀ ॥ ೯೭ ॥**

---

ಸರ್ವಾಂಗಸುಂದರೀ, ಸರ್ವಸೌಭಾಗ್ಯದಾಯಿನೀ ಎಂದು ಈ ಶಕ್ತಿ ದೇವಿಯರ ಹೆಸರುಗಳು. ಇವರೆಲ್ಲರೂ ಕುಲೋತ್ತೀರ್ಣಯೋಗಿನಿಯರೆನಿಸುತ್ತಾರೆ. ಈ ಚಕ್ರದ ನಾಯಕಿಯು ಶ್ರೀ ದೇವಿಯು. ಇದಕ್ಕೆ ಸರ್ವಾಥಸಾಧಕ ಚಕ್ರವೆಂದು ಹೆಸರು. ಇದರ ಸಂರಕ್ಷಕಿಯು ಸರ್ವೋನ್ಮಾದನ ಮುದ್ರಾದೇವಿಯು.

೯೪-೯೭. ಸರ್ವಸಿದ್ಧಿ ಮಂದಿರದ ಮೇಲ್ಭಾಗದಲ್ಲಿ ಇಪ್ಪತ್ತು ಹಸ್ತಗಳೆತ್ತರವೂ, ನಾಲ್ಕು ನಲ್ವಗಳ ವಿಸ್ತಾರವೂ ಆದ ಸರ್ವಜ್ಞಾ ಮೊದಲಾದ ದೇವಿಯರ ಮಂದಿರವಿರುವುದು. ಇದಕ್ಕೆ ಸರ್ವರಕ್ಷಾಕರಚಕ್ರವೆಂದು ಹೆಸರು. ಮಹತ್ತರವಾದ ಈ ಚಕ್ರದಲ್ಲಿ ಸರ್ವಜ್ಞಾ ಮೊದಲಾದ ದೇವಿಯರಿರುವರೆಂದು ಹೇಳಲಾಗಿರುವುದು. ಸರ್ವಜ್ಞಾ, ಸರ್ವಶಕ್ತಿ, ಸರ್ವೈಶ್ವರ್ಯಪ್ರದಾಯಿನೀ, ಸರ್ವಜ್ಞಾನಮಯೀ, ಸರ್ವವ್ಯಾಧಿವಿನಾಶಿನೀ, ಸರ್ವಾಧಾರಸ್ವರೂಪಾ, ಸರ್ವಪಾಪಹರಾ, ಸರ್ವಾನಂದಮಯೀ, ಸರ್ವರಕ್ಷಾಸ್ವರೂಪಿಣೀ, ಸರ್ವೇಪ್ಸಿತಪ್ರದಾ ಎಂಬ ಹೆಸರಿನ ಈ ಶಕ್ತಿದೇವಿಯರೆಲ್ಲರೂ ನಿಗರ್ಭಯೋಗಿನೀಶ್ವರಿಯರು. ಈ ಚಕ್ರಾಧಿನಾಯಕಿಯು ಮಾಲಿನಿಯು. ಪಾಲಿನಿಯು ಸರ್ವಮಹಾಂಕುಶ ಮುದ್ರಾದೇವಿಯು. ಎಲೈ ಕುಂಭೋದ್ಭವನೇ! ಈ ರೀತಿ ಶ್ರೀ ಚಿಂತಾಮಣಿಗೃಹದಲ್ಲಿ ಸರ್ವಜ್ಞಾದಿ ದೇವಿಯರು ನೆಲಸಿರುವ ಸರ್ವರಕ್ಷಾಕರ ಚಕ್ರದ

**ಸರ್ವೇಪ್ಸಿತಪ್ರದಾಚ್ಚೈತಾ ನಿಗರ್ಭಾ ಯೋಗಿನೀಶ್ವರಾಃ ।**
**ಮಾಲಿನೀ ಚಕ್ರಿಣೀ ಪ್ರೋಕ್ತಾ ಮುದ್ರಾ ಸರ್ವಮಹಾಂಕುಶಾ ॥೯೮॥**
**ಇತಿ ಚಿಂತಾಮಣಿಗೃಹೇ ಸರ್ವಜ್ಞಾದ್ಯಂತರಾವಧಿ ।**
**ಚಕ್ರಾಣಿ ಕಾನಿಚಿತ್ಪ್ರೋಕ್ತಾನ್ಯನ್ಯಾನ್ಯಪಿ ಮುನೇ ಶೃಣು ॥ ೯೯ ॥**

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ತ್ರಿಂಶೋಽಧ್ಯಾಯಃ

---

ವರೆಗೆ ವಿರಾಜಿಸುತ್ತಿರುವ ಕೆಲವು ಶಕ್ತಿದೇವತಾಚಕ್ರಗಳನ್ನು ಮಾತ್ರ ನಿನಗೆ ತಿಳಿಸಿದುದಾಯಿತು. ಇನ್ನು ಇತರ ಚಕ್ರಗಳನ್ನೂ ಹೇಳುತ್ತೇನೆ; ಕೇಳು.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕತ್ರಿಂಶೋಽಧ್ಯಾಯಃ

[ಗೃಹರಾಜಾಂತರ ವರ್ಣನಂ]

ಚಿಂತಾರತ್ನವಿನಿರ್ಮಿತಾಂತರಗೃಹೇ ಶ್ರೀಚಕ್ರರಾಜೋತ್ತಮೇ
ಪಂಚಬ್ರಹ್ಮಮಯೇ ಮಹಾರ್ಹವಿಭವೇ ಮಂಚೇ ಪರಂಜ್ಯೋತಿಷಿ ।
ದಿವ್ಯೈರದ್ಭುತ ಶಕ್ತಿಭಿಃ ಪರಿವೃತಾಂ ಶ್ರೀಕಾಮರಾಜಾಂಕಗಾಂ
ಧ್ಯಾಯೇ ತ್ವಾಂ ಲಲಿತಾಂಬಿಕಾಂ ಭಗವತೀಂ ಶ್ರೀಮೀನನೇತ್ರಾಂ ಶುಭಾಂ॥

**ಅಗಸ್ತ್ಯ ಉವಾಚ:—**

**ಸರ್ವಜ್ಞಾದ್ಯಂತರಾಲಸ್ಥೋಽಪರಿಷ್ಟಾತ್ಕುಂಭಸಂಭವ ।**
**ಹಸ್ತವಿಂಶತಿಮುನ್ನಮ್ರಂ ಚತುರ್ನಲ್ವಪ್ರವಿಸ್ತರಮ್ ॥ ೧ ॥**
**ವಶಿನ್ಯಾದ್ಯಂತರಂ ಜ್ಞೇಯಂ ಪ್ರಾಗ್ವತ್ಸೋಪಾನಮಂಡಿತಮ್ ।**
**ಸರ್ವರೋಗಹರಂ ನಾಮ್ನಾ ತಚ್ಚಕ್ರಂ ಭುವಿ ವಿಶ್ರುತಮ್ ॥ ೨ ॥**
**ವಶಿನ್ಯಾದ್ಯಸ್ತತ್ರ ದೇವ್ಯಃ ಪೂರ್ವಾದಿದಿಗನುಕ್ರಮಾತ್ ।**
**ಸ್ವರೈಸ್ತು ಸಹಿತಾಸ್ತತ್ರ ಪ್ರಥಮಾ ವಶಿನೀಶ್ವರೀ ॥ ೩ ॥**
**ಕವರ್ಗಸಹಿತಾ ತತ್ರ ಕಾಮೇಶ್ವರ್ಯಾಖ್ಯವಾಙ್ಮಯೀ ।**
**ಚವರ್ಗಜುಷ್ಟಾ ವಾಗೀಶೀ ಮೋದಿನ್ಯಾಖ್ಯಾ ತೃತೀಯಕಾ ॥ ೪ ॥**

---

## ಕನ್ನಡದ ಅನುವಾದ

[ಗೃಹರಾಜಾಂತರವರ್ಣನ]

೧–೨. ಶ್ರೀ ಹಯಗ್ರೀವ ಮುನಿಯು ಹೇಳುತ್ತಾನೆ:—ಎಲೈ ಕುಂಭಸಂಭವನೇ! ಶ್ರೀ ಸರ್ವಜ್ಞಾದಿಗಳ ಮಂದಿರಕ್ಕೆ ಮೇಲ್ಭಾಗದಲ್ಲಿ ಇಪ್ಪತ್ತು ಹಸ್ತಗಳೆತ್ತರವೂ, ನಾಲ್ಕು ನಲ್ವಗಳಗಲವೂ ಇರುವುದು ವಶಿನಿಯೇ ಮೊದಲಾದ ಶಕ್ತಿದೇವಿಯರ ಮಂದಿರವು. ಇದೂ ಹಿಂದಿನ ಮಂದಿರಗಳಂತೆಯೇ ಸೋಪಾನಗಳಿಂದಲಂಕೃತವಾಗಿರುತ್ತದೆ. ಇದು ಸರ್ವರೋಗಹರಚಕ್ರವೆಂದು ಹೆಸರುಗೊಂಡಿರುತ್ತದೆ.

೩–೯. ಎಲೈ ಅಗಸ್ತ್ಯ ಮುನಿಯೇ! ಈ ಸರ್ವರೋಗಹರಚಕ್ರ ಮಂದಿರದಲ್ಲಿ ವಶಿನಿಯೇ ಮೊದಲಾದ ಶಕ್ತಿದೇವಿಯರು ಪೂರ್ವವೇ ಮೊದಲಾದ ದಿಶೆಗಳಲ್ಲಿ ಕ್ರಮವಾಗಿ ವಾಸವಾಗಿರುತ್ತಾರೆ. ಇವರೆಲ್ಲರೂ ವಾಙ್ಮಯಶಕ್ತಿದೇವಿಯರು. ಇವರಲ್ಲಿ ಸ್ವರಾಕ್ಷರಸಹಿತೆಯಾದ ವಶಿನೀ

ಟವರ್ಗಮಂಡಿತಾ ತಾರಾ ವಿಮಲಾಖ್ಯಾ ಸರಸ್ವತೀ ।
ತವರ್ಗೇಣ ತತೋಪಾಂತಾ ಪಂಚಮೀ ವಾಗಥಾರುಣಾ ॥ ೫ ॥
ಪವರ್ಗೇಣ ಪರಿಸ್ಫೀತಾ ಷಷ್ಠೀತು ಜಯಿನೀ ಮತಾ ।
ಯಾದಿವರ್ಣ ಚತುಷ್ಕೇಣ ಸರ್ವೈಶ್ವರ್ಯಾಖ್ಯ ವಾಙ್ಮಯೀ ॥ ೬ ॥
ಶಾದಿಕಾಕ್ಷರ ಷಟ್ಕೇನ ಕೌಲಿನೀತ್ವಷ್ಟಮೀ ಮತಾ ।
ಏತಾ ದೇವ್ಯೋ ಜಪಾರಕ್ತಾ ಮುಕ್ತಾಭರಣಮಂಡಿತಾಃ ॥ ೭ ॥
ಸದಾಸ್ಫುರದ್ಗದ್ಯಪದ್ಯಲಹರೀ ಲಲಿತಾನನಾಃ ।
ಕಾವ್ಯೈಶ್ಚ ನಾಟಕೈಶ್ಚೈವ ವೇದಾಂತಾರ್ಥೈಸ್ತ್ವವೋತ್ತಮೈಃ ॥ ೮ ॥
ಅಲಂಕಾರಾದಿ ಶಬ್ದೈಶ್ಚ ಮಧುರೈಃ ಕರ್ಣಹಾರಿಭಿಃ ।
ವಿನೋದಯಂತ್ಯಃ ಶ್ರೀದೇವೀಂ ವರ್ತಂತೇ ಕುಂಭಸಂಭವ ॥ ೯ ॥
ಏತಾ ರಹಸ್ಯನಾಮ್ನ್ಯೈವ ಖ್ಯಾತಾ ವಾತಾಪಿತಾಪನ ।
ನಾಯಿಕಾತ್ವಸ್ಯ ಚಕ್ರಸ್ಯ ಸಿದ್ಧಾ ನಾಮ್ನಾ ಪ್ರಕೀರ್ತಿತಾ ॥
ಅಸ್ಯ ಚಕ್ರಸ್ಯ ಸಂರಕ್ಷಾಕಾರಿಣೀ ಖೇಚರೀ ಮತಾ ॥ ೧೦ ॥

---

ದೇವಿಯು ಮೊದಲನೆಯವಳು. ಎರಡನೆಯವಳು ಕವರ್ಗಸಹಿತೆಯಾದ ಕಾಮೇಶ್ವರಿ. ಮೂರನೆಯಾಕೆಯು ಚವರ್ಗಸಹಿತೆಯಾದ ಮೇದಿನಿ. ತರುವಾಯ ನಾಲ್ಕನೆಯಾಕೆಯೇ ಟವರ್ಗಮಂಡಿತೆಯಾದ ವಿಮಲೆಯೆಂಬ ಸರಸ್ವತೀದೇವಿಯು. ತವರ್ಗಸಹಿತೆಯಾದ ಅರುಣಾಂಬಿಕೆಯು ಐದನೆಯವಳು. ಪವರ್ಗಸಹಿತೆಯಾದ ಜಯಿನಿಯು ಆರನೆಯವಳು. ಯ ರ ಲ ವ ಗಳೆಂಬ ನಾಲ್ಕಕ್ಷರಗಳಿಂದ ಕೂಡಿದ ಸರ್ವೈಶ್ವರ್ಯಾದೇವಿಯು ಏಳನೆಯಾಕೆಯು; ಎಂಟನೆಯಾಕೆಯೇ ಶ ಷ ಸ ಹ ಳ ಕ್ಷ ಗಳೆಂಬ ಆರು ಅಕ್ಷರಗಳಿಂದ ಕೂಡಿದ ಕೌಲಿನಿ. ಈ ದೇವಿಯರೆಲ್ಲರೂ ಜಪಾಪುಷ್ಪದಂತೆ ರಕ್ತವರ್ಣೆಯರಾಗಿ, ಮುಕ್ತಾಭರಣಗಳಿಂದಲಂಕೃತರಾಗಿರುತ್ತಾರೆ. ಅಲ್ಲದೆ ಎಲ್ಲಾ ಕಾಲಗಳಲ್ಲಿಯೂ ಸ್ಫುರಿಸುತ್ತಿರುವ ಗದ್ಯ ಪದ್ಯ ಪ್ರವಾಹಗಳಿಂದ ಸುಂದರವಾದ ಮುಖಗಳುಳ್ಳವರಾಗಿ, ಕಾವ್ಯಗಳಿಂದಲೂ, ನಾಟಕಗಳಿಂದಲೂ, ಸರ್ವೋತ್ತಮವಾದ ವೇದಾಂತಾರ್ಥ ನಿರೂಪಣದಿಂದಲೂ, ಮಧುರಗಳೂ, ಕೇಳುವುದಕ್ಕೆ ರಮಣೀಯಗಳೂ ಆದ ಅಲಂಕಾರಗರ್ಭಿತವಾದ ಶಬ್ದಗಳಿಂದಲೂ ಶ್ರೀಲಲಿತಾ ಪರಮೇಶ್ವರಿಯನ್ನು ವಿನೋದಗೊಳಿಸುತ್ತಿರುತ್ತಾರೆ.

೧೦. ಎಲೈ ವಾತಾಪಿ ತಾಪನನೇ! ಇವರೆಲ್ಲರೂ ರಹಸ್ಯದೇವಿಯರೆಂದು ಹೆಸರುಗೊಂಡಿರುವರು. ಈ ಸರ್ವರೋಗಹರಚಕ್ರಕ್ಕೆ ಸಿದ್ಧಾಂಬಿಕೆ

**ವಶಿನ್ಯಾದ್ಯಂತರಾಲಸ್ಯೋಪರಿಷ್ಟಾದ್ವಿಂಧ್ಯತಾಪನ ।**
**ಹಸ್ತವಿಂಶತಿಮುನ್ನಮ್ರಂ ಚತುರ್ನಲ್ವಪ್ರವಿಸ್ತರಮ್ ॥ ೧೧ ॥**
**ಅಸ್ತ್ರಚಕ್ರಮಿತಿ ಜ್ಞೇಯಂ ತತ್ರ ಬಾಣಾಧಿದೇವತಾಃ ।**
**ಪಂಚಕಾಮೇಶ್ವರೀ ಬಾಣಾಃ ಪಂಚಕಾಮೇಶ್ವರಾನುಗಾಃ ॥ ೧೨ ॥**
**ಅಂಕುಶದ್ವಿತಯಂ ದೀಪ್ತಮಾದಿಸ್ತ್ರೀಪುಂಸಯೋರ್ದ್ವಯೋಃ ।**
**ಧನುರ್ದ್ವಯಂ ಚ ವಿಂಧ್ಯಾರೇ ನವಪುಂಡ್ರೇಕ್ಷುಕಲ್ಪಿತಮ್ ॥ ೧೩ ॥**
**ಪಾಶದ್ವಯಂ ಚ ದೀಪ್ತಾಂಗಂ ಚತ್ವಾರ್ಯಸ್ತ್ರಾಣಿ ಕುಂಭಜ ।**
**ಕಾಮೇಶ್ವರ್ಯಾಸ್ತು ಚತ್ವಾರಿ ಚತ್ವಾರಿ ಶ್ರೀಮಹೇಶಿತುಃ ॥ ೧೪ ॥**
**ಆಹತ್ಯಾಷ್ಟಾವಮಾಯುಧಾನಿ ಪ್ರಜ್ವಲದ್ದೀಪ್ತಿಭಾಂಜಿ ಚ ।**
**ಭಂಡಾಸುರ ಮಹಾಯುದ್ಧೇ ದುಷ್ಟದಾನವ ಶೋಣಿತೈಃ ।**
**ಪೀತೈರತೀವ ತೃಪ್ತಾನಿ ದಿವ್ಯಾಸ್ತ್ರಾಣ್ಯತ್ರ ಜಾಗ್ರತಿ ॥ ೧೫ ॥**
**ಏತೇಷಾಮಾಯುಧಾನಾಂತು ಪರಿವಾರಾಯುಧಾನ್ಯಲಮ್ ।**
**ವರ್ತಂತೇಽಸ್ತ್ರಾಂತರೇ ತತ್ರ ತೇಷಾಂ ಸಂಖ್ಯಾತು ಕೋಟಿಶಃ ॥೧೬॥**

---

ಯೆಂದು ಹೆಸರಾದ ಮಹಾ ಶಕ್ತಿದೇವಿಯು ನಾಯಕಿಯು. ಖೇಚರೀ ದೇವಿಯು ಈ ಚಕ್ರದ ಸಂರಕ್ಷಕಿಯು.

೧೧-೧೫. ಎಲೈ ವಿಂಧ್ಯತಾಪನನೇ! ಈ ವಶಿನ್ಯಾದಿಮಂದಿರದ ಮೇಲ್ಭಾಗದಲ್ಲಿ ಇಪ್ಪತ್ತು ಹಸ್ತಗಳೆತ್ತರವೂ, ನಾಲ್ಕು ನಲ್ವಗಳಗಲವೂ ಇರುವ ಮಂದಿರವು ಅಸ್ತ್ರಚಕ್ರವೆಂದು ತಿಳಿಯಬೇಕು. ಇಲ್ಲಿರುವ ದೇವತೆಗಳೆಲ್ಲರೂ ಬಾಣಾಧಿದೇವತೆಗಳು. ಶ್ರೀ ಕಾಮೇಶ್ವರಿಯ ಐದು ಅಸ್ತ್ರಗಳೂ, ಶ್ರೀ ಕಾಮೇಶ್ವರನ ಐದು ಅಸ್ತ್ರಗಳೂ ಇಲ್ಲಿಯೇ ಇರುತ್ತವೆ. ಪ್ರಜ್ವಲಿಸುತ್ತಿರುವ ಅಂಕುಶಗಳೆರಡು, ಪುಂಡ್ರೇಕ್ಷುಕಲ್ಪಿತವಾದ ಧನುಸ್ಸುಗಳೆರಡು, ಎರಡು ಪಾಶಗಳು, ಹೀಗೆ ಆದಿಸ್ತ್ರೀಪುರುಷರಾದ ಶ್ರೀ ಕಾಮೇಶ್ವರೀಕಾಮೇಶ್ವರರ ನಾಲ್ಕು ನಾಲ್ಕು ಅಸ್ತ್ರಗಳೂ ಸೇರಿ ಎಂಟು ಅಸ್ತ್ರಗಳು ದಿವ್ಯವಾಗಿ ಪ್ರಜ್ವಲಿಸುತ್ತ ದಿವ್ಯಕಾಂತಿಯೊಡಗೂಡಿ, ಹಿಂದೆ ನಡೆದ ಭಂಡಾಸುರ ಮಹಾಯುದ್ಧದಲ್ಲಿ, ದುರುಳರಾದ ದಾನವರ ರಕ್ತವನ್ನು ಚೆನ್ನಾಗಿ ಕುಡಿದು ತಣಿದು ವಿರಾಜಿಸುತ್ತಿವೆ.

೧೬-೧೮. ಈ ಆಯುಧಗಳಿಗೆ ಪರಿವಾರಾಯುಧಗಳು ಅಸ್ತ್ರಮಂದಿರ ದಲ್ಲಿ ಕೋಟ್ಯನುಕೋಟಿಗಳಿರುತ್ತವೆ. ವಜ್ರ, ಶಕ್ತಿ, ಶತಘ್ನಿ, ಭುಸುಂಡಿ, ಮುಸಲ, ಕಣೆಗಳು, ಪಟ್ಟಸ, ಮುದ್ಗರ, ಭಿಂಡಿಪಾಲ ಮೊದಲಾದ

ವಜ್ರಂ ಶಕ್ತಿಃ ಶತಘ್ನೀ ಚ ಭುಸುಂಡೀ ಮುಸಲಂ ತಥಾ ।
ಕಣಯಃ ಪಟ್ಟಿಸಂ ಚೈವ ಮುದ್ಗರಂ ಭಿಂಡಿಪಾಲಕಮ್ ॥ ೧೭ ॥
ಏವಮಾದೀನಿ ಶಸ್ತ್ರಾಣಿ ಸಹಾಸ್ತ್ರಾಣಾಂ ಸಹಸ್ರಶಃ ।
ಅಷ್ಟಾಯುಧ ಮಹಾಶಕ್ತೀಃ ಸೇವಂತೇ ಮದವಿಹ್ವಲಾಃ ॥ ೧೮ ॥
ಅಥ ಶಸ್ತ್ರಾಂತರಾಲಸ್ಯೋಪರಿ ವಾತಾಪಿತಾಪನ ।
ಹಸ್ತವಿಂಶತಿಮುನ್ನಮ್ರಂ ಚತುರ್ನಲ್ವಪ್ರವಿಸ್ತರಮ್ ॥ ೧೯ ॥
ದಿಷ್ಣ್ಯಂತು ಸಮಯೇಶೀನಾಂ ಸ್ಥಾನಂ ಚತಸೃಣಾಂ ಮತಮ್ ।
ಕಾಮೇಶ್ಯಾದ್ಯಾಸ್ತತ್ರ ದೇವ್ಯಸ್ತಿಸ್ರೋಽನ್ಯಾತು ಚತುರ್ಥಿಕಾ ।
ಸೈವ ನಿಃಶೇಷವಿಶ್ವಾಸಾಂ ಸವಿತ್ರೀ ಲಲಿತೇಶ್ವರೀ ॥ ೨೦ ॥
ತಿಸೃಣಾಂ ಶೃಣು ನಾಮಾನಿ ಕಾಮೇಶೀ ಪ್ರಥಮಾ ಮತಾ ।
ವಜ್ರೇಶೀ ಭಗಮಾಲಾ ಚ ತಾಃ ಸೇವಂತೇ ಸಹಸ್ರಶಃ ॥ ೨೧ ॥
ಸರ್ವೇಷಾಂ ದರ್ಶನಾನಾಂ ಚ ಯಾದೇವ್ಯೋ ವಿವಿಧಾ ಸ್ಮೃತಾಃ ।
ತಾಃ ಸರ್ವಾಸ್ತತ್ರ ಸೇವಂತೇ ಕಾಮೇಶ್ಯಾದೀರ್ಮಹೋದಯಾಃ ॥
ಏತಾಸಾಂ ಚ ಪ್ರಸಂಗೇಷು ನಿತ್ಯಾನಾಂ ಚ ಪ್ರಸಂಜನೇ ।
ಚಕ್ರಿಣೀನಾಂ ಯೋಗಿನೀನಾಂ ಶ್ರೀದೇವೀ ಪೂರಣಾತ್ಮಿಕಾ ॥ ೨೩ ॥

---

ಸಾವಿರಾರು ಶಸ್ತ್ರಶಕ್ತಿಗಳು ಮೇಲೆ ನಿರೂಪಿಸಿದ ಅಷ್ಟಾಯುಧ ಮಹಾ ಶಕ್ತಿದೇವಿಯರನ್ನು ಮದವಿಹ್ವಲೆಯರಾಗಿ ಸೇವಿಸುತ್ತಿರುತ್ತಾರೆ.

೧೯-೨೦. ಈ ಶಸ್ತ್ರಮಂದಿರದ ಮೇಲ್ಭಾಗದಲ್ಲಿಯೇ ಇಪ್ಪತ್ತು ಹಸ್ತಗಳೆತ್ತರವೂ, ನಾಲ್ಕು ನಲ್ವಗಳಗಲವೂ ಇರುವ ಸಮಯೇಶ್ವರಿಯೇ ಮೊದಲಾದ ನಾಲ್ವರು ದೇವಿಯರ ಮಂದಿರವು ಕಂಗೊಳಿಸುತ್ತಿರುವುದು. ಇವರಲ್ಲಿ ಕಾಮೇಶ್ವರಿಯಾದಿಯಾದ ದೇವಿಯರು ಮೂವರು. ಸಮಸ್ತ ಪ್ರಪಂಚಕ್ಕೂ ಜನನಿಯಾದ ಶ್ರೀ ಲಲಿತಾಪರಮೇಶ್ವರಿಯೇ ನಾಲ್ಕನೆಯವಳು.

೨೧-೨೪. ಈ ಮೂವರ ಹೆಸರುಗಳನ್ನು ಹೇಳುವೆನು ಕೇಳು. ಮೊದಲನೆಯವಳು ಕಾಮೇಶ್ವರಿ. ವಜ್ರೇಶ್ವರಿಯು ಎರಡನೆಯವಳು. ಮೂರನೆಯವಳೇ ಭಗಮಾಲಿನಿಯು. ಈ ದೇವಿಯರನ್ನು ಸಾವಿರಾರು ಮಂದಿ ಶಕ್ತಿದೇವಿಯರು ಸೇವಿಸುತ್ತಿರುತ್ತಾರೆ. ಸಮಸ್ತ ದರ್ಶನಗಳಿಗೂ ಬೇರೆಬೇರೆಯಾಗಿ ಯಾವ ದೇವಿಯರಿರುತ್ತಾರೆಯೋ ಅವರೆಲ್ಲರೂ ಕಾಮೇಶ್ವರಿಯೇ ಮೊದಲಾದ ಈ ಮೂವರು ದೇವಿಯರನ್ನು ಸೇವಿಸು

**ಯಾ ಕಾಮೇಶ್ವರ ವಾಮಾಂಕಕಲಿತಾ ಲಲಿತಾಂಬಿಕಾ ।**
**ಕಾಮೇಶ್ಯಾದಿ ಚತುರ್ಥೀ ಸಾ ನಿತ್ಯಾನಾಂ ಷೋಡಶೀ ಮತಾ ।**
**ಯೋಗಿನೀಚಕ್ರದೇವೀನಾಂ ನವಮೀ ಪರಿಪೂರ್ತಿಕಾ ॥ ೨೪ ॥**
**ಸಮಯೇಶ್ಯಂತರಾಲಸ್ಯೋಪರಿಷ್ಟಾದಿಲ್ವಲಾಂತಕ ।**
**ನಾಥಾಂತರಮಿತಿ ಪ್ರೋಕ್ತಂ ಹಸ್ತವಿಂಶತಿಮುನ್ನತಮ್ ॥ ೨೫ ॥**
**ಚತುರ್ನಲ್ವಪ್ರವಿಸ್ತಾರಂ ಪ್ರಾಗ್ವತ್ಸೋಪಾನಮಂಡಿತಮ್ ।**
**ತತ್ರ ನಾಥಾ ಮಹಾದೇವ್ಯಾ ಯೋಗಶಾಸ್ತ್ರಪ್ರವರ್ತಕಾಃ ॥ ೨೬ ॥**
**ಸರ್ವೇಷಾಂ ಮಂತ್ರಗುರವಃ ಸರ್ವವಿದ್ಯಾಮಹಾರ್ಣವಾಃ ।**
**ಚತ್ವಾರೋ ಯುಗನಾಥಾಸ್ತು ಲೋಕಾನಾಮಭಿಗುಪ್ತಯೇ ॥೨೭॥**
**ಸೃಷ್ಟಾ ಕಾಮೇಶದೇವೇನ ತೇಷಾಂ ನಾಮಾನಿ ಮಚ್ಛೃಣು ।**
**ಮಿತ್ರೇಶೋಡ್ಡೀಶ ಷಷ್ಠೀಶ ಚರ್ಯಾಖ್ಯಾಃ ಕುಂಭಸಂಭವ ॥೨೮॥**
**ತೈಃ ಸೃಷ್ಟಾ ಬಹವೋಲೋಕಾ ರಕ್ಷಾರ್ಥಂ ಪಾದುಕಾತ್ಮಕಾಃ ।**
**ದಿವ್ಯೌಘಾ ಮಾನವೌಘಾಶ್ಚ ಸಿದ್ಧೌಘಾಃ ಸುರತಾಪಸಾಃ ॥ ೨೯ ॥**
**ಪ್ರಾಪ್ತಸಾಲೋಕ್ಯ ಸಾರೂಪ್ಯ ಸಾಯುಜ್ಯಾದಿಕಸಿದ್ಧಯಃ । [೩೦॥**
**ಮಹಾಂತೋ ಗುರವಸ್ತಾಂಸ್ತು ಸೇವಂತೇ ಚತುರೋ ಗುರೂನ್ ॥**

---

ತ್ರಿರುತ್ತಾರೆ. ಇವರ ಪ್ರಸಂಗದಲ್ಲಿಯೂ, ನಿತ್ಯಾ, ಚಕ್ರಿಣೀ ಮತ್ತು ಯೋಗಿನೀದೇವಿಯರ ಪ್ರಸಂಗದಲ್ಲಿಯೂ ಶ್ರೀ ಕಾಮೇಶ್ವರ ವಾಮಾಂಕ ವಾಸಿನಿಯಾದ ಶ್ರೀ ಲಲಿತಾಂಬಿಕೆಯೇ ಸಮಸ್ತ ಇಷ್ಟಾರ್ಥಗಳನ್ನೂ ಪೂರಣಮಾಡುವವಳಾಗಿ ಕಾಮೇಶ್ವರಿಯೇ ಮೊದಲಾದವರಿಗೆ ನಾಲ್ಕನೆ ಯವಳಾಗಿ, ನಿತ್ಯಾದೇವಿಯರಿಗೆ ಹದಿನಾರನೆಯವಳಾಗಿ ಯೋಗಿನೀಚಕ್ರ ದೇವಿಯರಿಗೆ ಒಂಬತ್ತನೆಯವಳಾಗಿ ಆ ಆ ಚಕ್ರಗಳಿಗೆ ಪರಿಪೂರಣ ಕರ್ತ್ರಿಯಾಗಿರುವಳು.

೨೫-೩೦. ಎಲೈ ಇಲ್ವಲಾಂತಕನಾದ ಅಗಸ್ತ್ಯಮುನಿಯೇ! ಈ ಸಮಯೇಶ್ವರಿಯರ ದಿವ್ಯಮಂದಿರದ ಮೇಲ್ಭಾಗದಲ್ಲಿ ಇಪ್ಪತ್ತು ಹಸ್ತ ಗಳೆತ್ತರವೂ, ನಾಲ್ಕು ನಲ್ವಗಳಗಲವೂ ಉಳ್ಳುದಾಗಿ ಹಿಂದಿನ ಮಂದಿರ ಗಳಂತೆಯೇ ಸೋಪಾನಾಲಂಕೃತವಾಗಿರುವ ಮಂದಿರವು ಶ್ರೀನಾಥಾದಿಗಳ ಮಂದಿರವೆಂದು ತಿಳಿಯಬೇಕು. ಅಲ್ಲಿ ಶ್ರೀಲಲಿತಾಮಹಾದೇವಿಯ ಯೋಗಶಾಸ್ತ್ರವನ್ನು ನಿರ್ಮಿಸಿ ನಡೆಸುವವರೂ, ಸಮಸ್ತರಿಗೂ ಗುರು ಗಳೂ, ಸಮಸ್ತ ವಿದ್ಯೆಗಳಿಗೂ ಸಾಗರ ಸ್ವರೂಪರೂ, ಸಮಸ್ತ ಲೋಕಗಳ

ಅಥ ನಾಥಾಂತರಾಲಸ್ಯೋಪರಿಷ್ಟಾದ್ಧಿಷ್ಣ್ಯಮುತ್ತಮಮ್ ।
ಹಸ್ತವಿಂಶತಿಮುನ್ನಮ್ರಂ ಚತುರ್ನಲ್ವಪ್ರವಿಸ್ತರಮ್ ॥ ೩೧ ॥
ನಿತ್ಯಾಂತರಮಿತಿಪ್ರೋಕ್ತಂ ನಿತ್ಯಾಃ ಪಂಚದಶಾತ್ರ ವೈ ।
ಅಥ ಕಾಮೇಶ್ವರೀ ನಿತ್ಯಾ ನಿತ್ಯಾ ಚ ಭಗಮಾಲಿನೀ ॥ ೩೨ ॥
ನಿತ್ಯಕ್ಲಿನ್ನಾಪಿ ಚ ತಥಾ ಭೇರುಂಡಾವಹ್ನಿವಾಸಿನೀ ।
ಮಹಾವಿದ್ಯೇಶ್ವರೀ ದೂತೀ ತ್ವರಿತಾ ಕುಲಸುಂದರೀ ॥ ೩೩ ॥
ನಿತ್ಯಾ ನೀಲಪತಾಕಾ ಚ ವಿಜಯಾ ಸರ್ವಮಂಗಲಾ ।
ಜ್ವಾಲಾಮಾಲಿನಿಕಾ ಚಿತ್ರೇತ್ಯಾತಾಃ ಪಂಚದಶೋದಿತಾಃ ।
ಏತಾ ದೇವೀಸ್ವರೂಪಾಃ ಸ್ಯುರ್ಮಹಾಬಲಪರಾಕ್ರಮಾಃ ॥ ೩೪ ॥

---

ಪರಿಪಾಲನೆಗಾಗಿ ಶ್ರೀ ಕಾಮೇಶ್ವರ ದೇವನು ನಿರ್ಮಿಸಿದವರೂ ಆದ ನಾಲ್ವರು ಶ್ರೀನಾಥಮೂರ್ತಿಗಳು ನೆಲಗೊಂಡಿರುತ್ತಾರೆ. ಅವರ ಹೆಸರುಗಳನ್ನು ಹೇಳುತ್ತೇನೆ, ಕೇಳು: ಮಿತ್ರೇಶ, ಉಡ್ಡೀಶ, ಷಷ್ಠೀಶ, ಚರ್ಯ ಎಂಬಿವೇ ಅವರ ನಾಮಧೇಯಗಳು. ಆ ನಾಲ್ವರೂ ಸಹ ಲೋಕ ರಕ್ಷಣೆಗಾಗಿ ಪಾದುಕಾತ್ಮಕರಾದ ಅನೇಕ ದೇವ, ಮಾನವ, ಸಿದ್ಧಸಮೂಹಗಳನ್ನೂ, ದೇವರ್ಷಿಗಳನ್ನೂ ಸೃಜಿಸಿದರು. ಎಲೈ ಕುಂಭೋದ್ಭವನೇ! ಪ್ರಪಂಚದಲ್ಲಿ ಶ್ರೀ ದೇವಿಯ ಸಾಲೋಕ್ಯ, ಸಾರೂಪ್ಯ, ಸಾಯುಜ್ಯಗಳ ಸಿದ್ಧಿಗಳನ್ನು ಪಡೆದಿರುವ ಶ್ರೀ ವಿದ್ಯಾ ಮಹಾಗುರುಗಳೆಲ್ಲರೂ ಶ್ರೀನಾಥಾದಿಗಳಾದ ಆ ನಾಲ್ವರು ಗುರುಗಳನ್ನು ಸೇವಿಸುತ್ತಾರೆ.

೩೧–೩೪. ಇನ್ನು ಈ ಶ್ರೀನಾಥಮಂದಿರದ ಮೇಲ್ಭಾಗದಲ್ಲಿ ಇಪತ್ತು ಹಸ್ತಗಳೆತ್ತರವೂ, ನಾಲ್ಕು ನಲ್ವಗಳಗಲವೂ ಉಳ್ಳದಾಗಿ ಕಂಗೊಳಿಸುತ್ತಿರುವುದು ಶ್ರೀ ನಿತ್ಯಾದೇವಿಯರ ಉತ್ತಮ ಮಂದಿರವು. ಈ ನಿತ್ಯಾದೇವಿಯರು ಹದಿನೈದು ಮಂದಿ: ಕಾಮೇಶ್ವರೀ, ಭಗಮಾಲಿನೀ, ನಿತ್ಯಕ್ಲಿನ್ನಾ, ಭೇರುಂಡಾ, ವಹ್ನಿವಾಸಿನೀ, ಮಹಾವಿದ್ಯೇಶ್ವರೀ, ದೂತೀ, ತ್ವರಿತಾ, ಕುಲಸುಂದರೀ, ನಿತ್ಯಾ, ನೀಲಪತಾಕಾ, ವಿಜಯಾ, ಸರ್ವಮಂಗಲಾ, ಜ್ವಾಲಾಮಾಲಿನಿಕಾ, ಚಿತ್ರಾ ಎಂಬ ಈ ಹದಿನೈದು ಮಂದಿ ದೇವಿಯರೂ ಶ್ರೀ ಲಲಿತಾಸ್ವರೂಪಿಣಿಯರೂ, ಮಹಾಬಲ ಪರಾಕ್ರಮವತಿಯರೂ ಆಗಿರುತ್ತಾರೆ.

ಪ್ರಥಮಾ ಮುಖ್ಯತಿಥಿತಾಂ ಗತಾ ವ್ಯಾಪ್ತಜಗತ್ರಯಾಃ ।
ಕಾಲರೂಪಾ ವರ್ತಮಾನಾಃ ಕಾಲಗ್ರಾಸವಿಚಕ್ಷಣಾಃ ॥ ೩೫ ॥
ಬ್ರಹ್ಮಾದೀನಾಮಶೇಷಾಣಾಂ ಚಿರಕಾಲಮುಪೇಯುಷಾಮ್ ।
ತತ್ತತ್ಕಾಲಶತಾಯುಷ್ಯರೂಪಾ ದೇವ್ಯಾಜ್ಞಯಾ ಸ್ಥಿತಾಃ ॥ ೩೬ ॥
ನಿತ್ಯೋದ್ಯತಾ ನಿರಾತಂಕಾ ಶ್ರೀದೇವ್ಯಂಗಸ್ಯ ರಕ್ಷಕಾಃ ।
ಸೇವಂತೇ ಜಗತಾಮೃದ್ಧ್ಯೈ ಲಲಿತಾಂ ಸ್ವೈಕ್ಯರೂಪಿಣೀಂ ॥ ೩೭ ॥
ತಾಸಾಂ ಭವನತಾಂ ಪ್ರಾಪ್ತಾ ದೀಪ್ತಾ ಪಂಚದಶಸ್ವರಾಃ ।
ವಿಸೃಷ್ಟಬಿಂದುಚಕ್ರೇ ತು ಷೋಡಶ್ಯಾ ಭವನಂ ಮತಂ ॥ ೩೮ ॥
ಅಥ ನಿತ್ಯಾಂತರಾಲಸ್ಯೋಪರಿಷ್ಟಾತ್ಕುಂಭಸಂಭವ ।
ಅಂಗದೇವ್ಯಂತರಂ ಪ್ರೋಕ್ತಂ ಹಸ್ತವಿಂಶತಿಮುನ್ನತಮ್ ॥ ೩೯ ॥
ಚತುರ್ನಲ್ವಪ್ರವಿಸ್ತಾರಂ ಪ್ರಾಗ್ವತ್ಸೋಪಾನಮಂಡಿತಮ್ ।
ತಸ್ಮಿನ್ ಹೃದಯದೇವ್ಯಾದ್ಯಾಃ ಶಕ್ತಯಃ ಸಂತಿ ವೈ ಮುನೇ ॥ ೪೦ ॥

---

೩೫–೩೮. ಈ ಹದಿನೈದು ಮಂದಿ ನಿತ್ಯಾದೇವಿಯರೆಲ್ಲರೂ ಪ್ರಥಮಾ ಮೊದಲುಗೊಂಡು ಪೂರ್ಣಿಮಾವರೆಗಣ ಹದಿನೈದು ತಿಥಿಗಳ ರೂಪಿಣಿಯರಾಗಿ ಜಗತ್ತೆಲ್ಲವನ್ನೂ ವ್ಯಾಪಿಸಿ ಕಾಲರೂಪಿಣಿಯರೂ, ಕಾಲವನ್ನು ಕಬಳಿಸುವುದರಲ್ಲಿ ವಿಚಕ್ಷಣೆಯರೂ, ತಮ್ಮನ್ನು ಬಹುಕಾಲದಿಂದಲೂ ಸೇವಿಸುತ್ತಿರುವ ಬ್ರಹ್ಮಾದಿ ದೇವತೆಗಳಿಗೆ ಆಯಾ ಕಾಲದಲ್ಲಿ ಶತಾಯುಷ್ಯವನ್ನು ದಯೆಗೈಯುವವರೂ ಆಗಿ ಶ್ರೀದೇವಿಯ ಆಣತಿಯನ್ನು ಪಡೆದು ಆ ಮಂದಿರದಲ್ಲಿ ವಾಸವಾಗಿರುತ್ತಾರೆ. ಎಲ್ಲ ಕಾಲಗಳಲ್ಲಿಯೂ ಸರ್ವಸಿಧ್ಧರೂ, ಯಾವೊಂದು ಆತಂಕವೂ ಇಲ್ಲದವರೂ ಆದ ಈ ಹದಿನೈದು ಮಂದಿಯೂ ಶ್ರೀ ದೇವಿಯ ಅಂಗರಕ್ಷಕಿಯರಾಗಿ, ಜಗತ್ತಿನ ಅಭ್ಯುದಯಕ್ಕಾಗಿ ತಮ್ಮಲ್ಲಿಯೇ ಒಂದಾಗಿರುವ ಶ್ರೀ ಲಲಿತಾಪರಮೇಶ್ವರಿಯನ್ನು ಸೇವಿಸುತ್ತಿರುತ್ತಾರೆ. ಸ್ವರಾಕ್ಷರಗಳೆಲ್ಲವೂ ಈ ಹದಿನೈದು ಮಂದಿ ದೇವಿಯರಿಗೆ ಭವನಗಳಾಗಿ ಏರ್ಪಟ್ಟಿರುತ್ತವೆ. ಎಲೈ ಮುನಿಯೇ! ಈ ಸಂದರ್ಭದಲ್ಲಿ ಹೇಳದೆ ಬಿಟ್ಟಿರುವ ಬಿಂದುಚಕ್ರವೇ ಷೋಡಶಿಯಾದ ಶ್ರೀಲಲಿತಾಪರಮೇಶ್ವರಿಯ ಭವನವೆಂದು ಅಭಿಪ್ರಾಯವು.

೩೯-೪೪. ಇನ್ನು, ಈ ನಿತ್ಯಾಮಂದಿರದ ಮೇಲ್ಭಾಗದಲ್ಲಿ ಇಪ್ಪತ್ತು ಹಸ್ತಗಳೆತ್ತರವೂ, ನಾಲ್ಕು ನಲ್ವಗಳಗಲವೂ ಇರುವುದಾಗಿ ಹಿಂದಿನ ಮಂದಿರಗಳಂತೆಯೇ ಸೋಪಾನಾಲಂಕೃತವಾಗಿರುವ ಅಂಗದೇವಿಯರ

**ಹೃದ್ದೇವೀ ಚ ಶಿರೋದೇವೀ ಶಿಖಾದೇವೀ ತಥೈವ ಚ ।**
**ಮರ್ಮದೇವೀ ನೇತ್ರದೇವೀ ಶಸ್ತ್ರದೇವೀ ಷಡೀರಿತಾಃ ॥ ೪೨ ॥**
**ಅತ್ಯಂತಸನ್ನಿಕೃಷ್ಟಾಂಸ್ತಾಃ ಶ್ರೀಕಾಮೇಶ್ವರಸುಭ್ರುವಃ ।**
**ನವಲಾವಣ್ಯಪೂರ್ಣಾಂಗ್ಯಃ ಸಾವಧಾನಾ ಧೃತಾಯುಧಾಃ ॥ ೪೩ ॥**
**ಪರಿತೋ ಬಿಂದುಪೀಠಸ್ಯ ಭ್ರಾಮ್ಯಂತ್ಯೋ ದೀಪ್ತಮೂರ್ತಯಃ ।**
**ಲಲಿತಾಂಬಾಂಗರಕ್ಷಿಣ್ಯೋ ವರ್ತಂತೇ ವಶಿನಾಂವರ ॥ ೪೪ ॥**
**ತಥಾಂಗದೇವ್ಯಂತರಾಲಸ್ಯೋಪರಿಷ್ಟಾನ್ಮಂಡಲಾಕೃತಿ ।**
**ಬಿಂದುನಾಮ ಮಹಾಪೀಠಂ ದಶಹಸ್ತಸಮುನ್ನತಮ್ ॥ ೪೫ ॥**
**ನಲ್ವಾಷ್ಟಕಪ್ರವಿಸ್ತಾರಮುದ್ಯದಾದಿತ್ಯಸನ್ನಿಭಮ್ ।**
**ಬಿಂದುಪೀಠಮಿತಿ ಜ್ಞೇಯಂ ಶ್ರೀಪೀಠಮಿತಿ ಘುಷ್ಯತೇ ॥ ೪೬ ॥**
**ಮಹಾಪೀಠಮಪಿ ಜ್ಞೇಯಂ ವಿದ್ಯಾಪೀಠಮಪೀಷ್ಯತೇ ।**
**ಆನಂದಪೀಠಮಪಿ ಚ ಪಂಚಾಶತ್ಪೀಠರೂಪಧೃತ್ ॥ ೪೭ ॥**
**ತತ್ರ ಶ್ರೀಲಲಿತಾದೇವ್ಯಾಃ ಪಂಚಬ್ರಹ್ಮಮಯಂ ಮಹತ್ ।**
**ಜಾಗರ್ತಿ ಮಂಚರತ್ನಂ ತು ಪ್ರಪಂಚತ್ರಯಮೂಲಕಮ್ ॥ ೪೮ ॥**

---

ಮಂದಿರವು ಕಂಗೊಳಿಸುತ್ತಿರುವುದು. ಎಲೈ ಮುನಿಯೇ! ಈ ಮಂದಿರದಲ್ಲಿ ಹೃದಯದೇವಿಯೇ ಮೊದಲಾದ ಶಕ್ತಿದೇವಿಯರು ವಾಸವಾಗಿರುವರು. ಹೃದಯದೇವಿ, ಶಿರೋದೇವಿ, ಶಿಖಾದೇವಿ, ಮರ್ಮದೇವಿ, ನೇತ್ರದೇವಿ, ಶಸ್ತ್ರದೇವಿ ಎಂಬುದಾಗಿ ಈ ದೇವಿಯರು ಆರು ಮಂದಿಯೆಂದು ಹೇಳಿದೆ. ಇವರೆಲ್ಲರೂ ಶ್ರೀ ಕಾಮೇಶ್ವರನ ನಲ್ಲೆಯಾದ ಶ್ರೀ ಲಲಿತಾಂಬಿಕೆಗೆ ಬಹಳ ಸಮೀಪದಲ್ಲಿಯೇ ಇರುತ್ತಾರೆ; ಇವರು ನವಲಾವಣ್ಯವತಿಯರು; ಸಾವಧಾನೆಯರು; ಆಯುಧಗಳನ್ನು ಧರಿಸಿ ಇವರೆಲ್ಲರೂ ಬಿಂದುಪೀಠದ ಸುತ್ತಲೂ ಸಂಚರಿಸಿ ಕಂಗೊಳಿಸುತ್ತ, ಶ್ರೀ ದೇವಿಯ ಅಂಗರಕ್ಷಕಿಯರಾಗಿರುತ್ತಾರೆ.

೪೫-೪೮. ಈ ಅಂಗದೇವಿಯರ ಮಂದಿರವಾದ ಬಳಿಕ ಇದರ ಮೇಲ್ಭಾಗದಲ್ಲಿ ಹತ್ತು ಹಸ್ತಗಳೆತ್ತರವೂ ಎಂಟು ನಲ್ವಗಳಗಲವೂ ಇದ್ದು ಮಂಡಲಾಕೃತಿಯುಳ್ಳುದಾಗಿ ಆಗತಾನೆ ಉದಿಸುತ್ತಿರುವ ಸೂರ್ಯನ ಕಾಂತಿಯನ್ನೊಳಗೊಂಡಿರುವ ಬಿಂದುಮಹಾಪೀಠವು ವಿರಾಜಿಸುತ್ತಿರುವುದು. ಇದೇ ಇಪ್ಪತ್ತೈದು ಮಹಾಪೀಠಗಳ ಸ್ವರೂಪವಾದ ಬಿಂದುಪೀಠವೆಂದೂ, ಶ್ರೀಪೀಠವೆಂದೂ, ಮಹಾಪೀಠವೆಂದೂ, ಶ್ರೀ ವಿದ್ಯಾಪೀಠ

**ತಸ್ಯ ಮಂಚಸ್ಯ ಪಾದಾಸ್ತು ಚತ್ವಾರಃ ಪರಿಕೀರ್ತಿತಾಃ ।**
**ದಶಹಸ್ತಸಮುನ್ನಮ್ರಾ ಹಸ್ತತ್ರಿತಯವೇಷ್ಟನಾಃ ॥ ೪೯ ॥**
**ಬ್ರಹ್ಮವಿಷ್ಣುಮಹೇಶಾನೇಶ್ವರರೂಪತ್ವಮಾಗತಾಃ ।**
**ಶಕ್ತಿಭಾವಮನುಪ್ರಾಪ್ತಾಃ ಸದಾ ಶ್ರೀಧ್ಯಾನಯೋಗತಃ ॥ ೫೦ ॥**
**ಏಕಸ್ತು ಮಂಚಪಾದಃ ಸ್ಯಾಜ್ಜಪಾಕುಸುಮಭಾಸುರಃ ।**
**ಬ್ರಹ್ಮಾತ್ಮಕಃ ಸ ವಿಜ್ಞೇಯೋ ವಹ್ನಿದಿಗ್ಭಾಗಮಾಸ್ಥಿತಃ ॥ ೫೧ ॥**
**ದ್ವಿತೀಯೋ ಮಂಚಪಾದಸ್ತು ಮಹಾನೀಲೋಪಲಪ್ರಭಃ ।**
**ವಿಷ್ಣ್ವಾತ್ಮಕಸ್ಯ ವಿಜ್ಞೇಯೋ ರಕ್ಷೋ ದಿಗ್ಭಾಗಮಾಶ್ರಿತಃ ॥ ೫೨ ॥**
**ತೃತೀಯೋ ಮಂಚಪಾದಸ್ತು ಶುದ್ಧಸ್ಫಟಿಕನಿರ್ಮಲಃ ।**
**ರುದ್ರಾತ್ಮಕಃ ಸವಿಜ್ಞೇಯೋ ವಾಯುದಿಗ್ಭಾಗಮಾಶ್ರಿತಃ ॥ ೫೩ ॥**
**ಚತುರ್ಥೋ ಮಂಚಪಾದಸ್ತು ಕರ್ಣಿಕಾರಕಡಾರರುಕ್ ।**
**ಈಶ್ವರಾತ್ಮಾ ಸ ವಿಜ್ಞೇಯ ಈಶದಿಗ್ಭಾಗಮಾಶ್ರಿತಃ ॥ ೫೪ ॥**

---

ವೆಂದೂ, ಆನಂದಪೀಠವೆಂದೂ ಘೋಷಿತವಾಗಿದೆ. ಈ ಮಹಾಪೀಠದಲ್ಲಿ ಪಂಚ ಬ್ರಹ್ಮಮಯವೂ, ಮಹತ್ತರವೂ, ಮೂರು ಲೋಕಗಳಿಗೆ ಆದಿ ಕಾರಣವೂಆದ ಶ್ರೀ ದೇವಿಯ ಮಂಚರತ್ನವು ವಿರಾಜಿಸುತ್ತಿರುವುದು.

೪೯-೫೦. ಆ ಮಂಚಕ್ಕೆ ಹತ್ತು ಹಸ್ತಗಳೆತ್ತರವೂ, ಮೂರು ಹಸ್ತಗಳ ಸುತ್ತಳತೆಯೂ ಉಳ್ಳ ನಾಲ್ಕು ಪಾದಗಳಿರುತ್ತವೆಯೆಂದು ಹೇಳಿದೆ. ಬ್ರಹ್ಮ, ವಿಷ್ಣು, ಮಹೇಶ್ವರ, ಈಶ್ವರರೇ, ತಾವು ಯಾವಾಗಲೂ ಶ್ರೀ ದೇವಿಯನ್ನು ಕುರಿತು ಧ್ಯಾನಮಾಡಿದುದರ ಯೋಗಬಲದಿಂದ ಶಕ್ತಿಭಾವವನ್ನು ಪಡೆದು ಈ ಮಂಚದ ಪಾದಗಳ ರೂಪವನ್ನು ಹೊಂದಿರುತ್ತಾರೆ.

೫೧-೫೪. ಆ ಮಂಚದ ಮೊದಲನೆಯ ಪಾದವು ಜಪಾಕುಸುಮದ ಕಾಂತಿಯನ್ನೊಳಕೊಂಡಿರುವುದು. ಇದು ಬ್ರಹ್ಮಾತ್ಮಕವೆಂದು ತಿಳಿಯಬೇಕು. ಈ ಪಾದವು ಆಗ್ನೇಯದಿಗ್ಭಾಗದಲ್ಲಿರುವುದು. ಎರಡನೆಯ ಪಾದವು ಮಹಾನೀಲಮಣಿಯ ಕಾಂತಿಯಿಂದ ಕಂಗೊಳಿಸುತ್ತಿರುವುದು. ಇದು ವಿಷ್ಣ್ವಾತ್ಮಕವೆಂದರಿಯಬೇಕು. ಇದು ಕುಬೇರದಿಶೆಯಲ್ಲಿರುತ್ತದೆ. ಮೂರನೆಯದು ಶುದ್ಧಸ್ಫಟಿಕಕಾಂತಿಯನ್ನು ತಳೆದಿರುತ್ತದೆ. ಇದೇ ರುದ್ರಾತ್ಮಕವು. ಈ ಪಾದವು ವಾಯುವ್ಯದಿಶೆಯಲ್ಲಿರುವುದು. ನಾಲ್ಕನೆಯ ಪಾದವೇ ಈಶ್ವರಾತ್ಮಕವಾದುದು. ಈ ಪಾದವು ಈಶಾನ್ಯದಿಶೆಯಲ್ಲಿರುತ್ತದೆಯಲ್ಲದೆ ಕರ್ಣಿಕಾರ ಕುಸುಮದ ನಸುಗೆಂಪಿನ ಕಾಂತಿಯಿಂದೊಪ್ಪುತ್ತಿರುವುದು.

**ಏತೇ ಸರ್ವೇ ಸಾಯುಧಾಶ್ಚ ಸರ್ವಾಲಂಕಾರಭೂಷಿತಾಃ ।**
**ಉಪರ್ಯಧಃ ಸ್ತಂಭರೂಪಾ ಮಧ್ಯೇ ಪುರುಷರೂಪಿಣಃ ॥ ೫೫ ॥**
**ಶ್ರೀಧ್ಯಾನನಿಮೀಲಿತಾಕ್ಷಾಶ್ಚ ಶ್ರೀಧ್ಯಾನಾನ್ನಿಶ್ಚಲಾಂಗಕಾಃ ।**
**ತೇಷಾಮುಪರಿ ಮಂಚಸ್ಯ ಫಲಕಸ್ತು ಸದಾಶಿವಃ ॥ ೫೬ ॥**
**ವಿಕಾಸಿ ದಾಡಿಮಚ್ಛಾಯಶ್ಚತುರ್ನಲ್ವಪ್ರವಿಸ್ತರಃ ।**
**ನಲ್ವಷಟ್ಕಾಯಾಮವಾಂಶ್ಚ ಸದಾ ಭಾಸ್ವರಮೂರ್ತಿಮಾನ್ ॥ ೫೭ ॥**
**ಅಂಗದೇವ್ಯಂತರಾರಂಭಾನ್ಮಂಚಸ್ಯ ಫಲಕಾವಧಿ ।**
**ಚಿಂತಾಮಣಿಮಯಾಂಗಾನಿ ತತ್ವರೂಪಾಣಿ ತಾಪಸ ॥ ೫೮ ॥**
**ಸೋಪಾನಾನಿ ವಿಭಾಸಂತೇ ಷಟ್ತ್ರಿಂಶತ್ತಾನಿವೇಶನೈಃ ।**
**ಆರೋಹಸ್ಯ ಕ್ರಮೇಣೈವ ಸೋಪಾನಾನಭಿದಧ್ಮಹೇ ॥ ೫೯ ॥**
**ಭೂಮಿರಾಪೋಽನಲೋ ವಾಯುರಾಕಾಶೋ ಗಂಧ ಏವ ಚ ।**
**ರಸೋ ರೂಪಂ ಸ್ಪರ್ಶಶಬ್ದೋಪಸ್ಥಾಪಾಯುಪದಾನಿ ಚ ॥ ೬೦ ॥**
**ಪಾಣಿವಾಗ್ಘ್ರಾಣಜಿಹ್ವಾಶ್ಚ ಚಕ್ಷುಸ್ತ್ವಕ್ಶ್ರೋತ್ರಮೇವ ಚ ।**
**ಅಹಂಕಾರಶ್ಚ ಬುದ್ಧಿಶ್ಚ ಮನಃ ಪ್ರಕೃತಿಪೂರುಷೌ ॥ ೬೧ ॥**

---

೫೫-೫೯. ಬ್ರಹ್ಮವಿಷ್ಣು ರುದ್ರೇಶ್ವರರಾದ ಈ ನಾಲ್ವರೂ ಸರ್ವಾಯುಧ ಸಹಿತರೂ, ಸರ್ವಾಲಂಕಾರ ಭೂಷಿತರೂ ಆಗಿ ಆ ಮಂಚದ ಪಾದಗಳ ರೂಪವನ್ನು ತಾಳಿ ಮೇಲೂ ಕೆಳಗೂ ಸ್ತಂಭರೂಪರಾಗಿಯೂ, ಮಧ್ಯದಲ್ಲಿ ಮಾತ್ರ ಪುರುಷರೂಪರಾಗಿಯೂ ಕಂಗೊಳಿಸುತ್ತಿರುವರು. ಇವರೆಲ್ಲರೂ ಶ್ರೀ ದೇವಿಯ ಧ್ಯಾನದಲ್ಲಿ ತೊಡಗಿ ನಿಮೀಲಿತಾಕ್ಷರೂ, ನಿಶ್ಚಲಾಂಗರೂ ಆಗಿರುತ್ತಾರೆ. ಇವರ ಮೇಲೆಯೇ ಸದಾಶಿವನು ಹಲಗೆಯ ರೂಪವನ್ನು ತಾಳಿ ನೆಲಸಿರುತ್ತಾನೆ. ಬಿರಿದ ದಾಳಿಂಬರೆಯ ಬಣ್ಣದ ಕಾಂತಿಯಿಂದೊಪ್ಪಿ ಮೆರೆಯುತ್ತಿರುವ ಈ ಹಲಗೆಯಗಲವು ನಾಲ್ಕು ನಲ್ವಗಳು; ಉದ್ದವು ಆರು ನಲ್ವಗಳು. ಮಂಚದ ಹಲಗೆಯವರೆಗೆ ಮಾತ್ರ ಅಂಗದೇವಿಯರ ಮಂದಿರವಿರುತ್ತದೆ. ಆ ಮಂಚಕ್ಕೆ ಚಿಂತಾಮಣಿಮಯವೂ, ತತ್ವರೂಪಗಳೂ ಆದ ಮೂವತ್ತಾರು ಮೆಟ್ಟಲುಗಳಿರುತ್ತವೆ. ಆರೋಹಣಕ್ರಮದಲ್ಲಿಯೇ ಅವುಗಳ ಹೆಸರುಗಳನ್ನು ಹೇಳುವೆನು ಕೇಳು.

೬೦-೬೫. ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಗಂಧ, ರಸ, ರೂಪ, ಸ್ಪರ್ಶ, ಶಬ್ದ, ಉಪಸ್ಥ, ಪಾಯು, ಪಾದ, ಪಾಣಿ, ವಾಕ್ಕು,

**ನಿಯತಿಃ ಕಾಲರಾಗೌ ಚ ಕಲಾ ವಿದ್ಯಾ ಚ ಮಾಯಯಾ ।**
**ಶುದ್ಧವಿದ್ಯೇಶ್ವರ ಸದಾಶಿವ ಶಕ್ತಿಶಿವಾ ಇತಿ ॥ ೬೨ ॥**
**ಏತಾಃ ಷಟ್ತ್ರಿಂಶದಾಖ್ಯಾತಾಸ್ತತ್ವಸೋಪಾನಪಂಕ್ತಯಃ ।**
**ಏಷಾ ಸೋಪಾನಪಂಕ್ತಿಶ್ಚ ಮಂಚಪೂರ್ವದಿಶಂ ಶ್ರಿತಾ ॥ ೬೩ ॥**
**ಮಂಚಸ್ಯ ಪಾದನಿಕಟೇ ಸೂರ್ಯಕೋಟಿಸಮಪ್ರಭಾ ।**
**ಮಧ್ಯೇ ಮಧ್ಯೇ ಧಗಧಗತ್ಕಾರ್ತಸ್ವರವಿರಾಜಿತಾ ॥ ೬೪ ॥**
**ಮುಕ್ತಾಗುಲುಚ್ಛಕಲಿತ ಶಿರೋಭಾಗೇನ ಭಾಸುರಾ ।**
**ನಾನಾರತ್ನಮಯೀ ದೃಶ್ಯಾ ತಾಂಬೂಲದ್ರವವಾಸಿತಾ ।**
**ಧುರ್ಧೂರಕುಸುಮಾಕಾರಾ ಕಲಾಚೀ ವರ್ತತೇಽಬ್ಧಿಪ ॥ ೬೫ ॥**
**ಅಥ ಮಂಚಸ್ಯೋಪರಿಷ್ಟಾದ್ಧಂಸತೂಲಿಕತಲ್ಪಕಮ್ ।**
**ಹಸ್ತತ್ರಯಸಮುನ್ನಮ್ರಂ ಚತುರ್ನಲ್ವಪ್ರವಿಸ್ತರಮ್ ॥ ೬೬ ॥**
**ಪಾದೋಪಧಾನಮೂರ್ಧೋಪಧಾನದ್ವಂದ್ವವಿರಾಜಿತಮ್ ।**
**ಗಂಡೂಕಾನಾಂ ಚತುಷ್ಕ್ಯಾತು ಶೋಭಿತಂ ಪಾಟಲತ್ವಿಷಾ ॥ ೬೭ ॥**
**ತಸ್ಯೋಪರಿಷ್ಟಾತ್ಕೌಸುಂಭವಸನೇನೋತ್ತರಚ್ಛದಃ ।**
**ಶುಚಿನಾ ಮೃದುನಾ ಕ್ಲೃಪ್ತಃ ಪದ್ಮರಾಗಮಣಿತ್ವಿಷಾ ॥ ೬೮ ॥**

---

ಘ್ರಾಣ, ಜಿಹ್ವೆ, ಚಕ್ಷುಸ್ಸು, ತ್ವಕ್ಕು, ಶ್ರೋತ್ರ, ಅಹಂಕಾರ, ಬುದ್ಧಿ, ಮನಸ್ಸು, ಪ್ರಕೃತಿ, ಪುರುಷ, ನಿಯತಿ, ಕಾಲ, ರಾಗ, ಕಲೆ, ವಿದ್ಯೆ, ಮಾಯೆ, ಶುದ್ಧವಿದ್ಯೆ, ಈಶ್ವರ, ಸದಾಶಿವ, ಶಕ್ತಿ, ಶಿವ ಎಂಬಿವೇ ಆ ಮೂವತ್ತಾರು ತತ್ವಸೋಪಾನಗಳು. ಈ ಸೋಪಾನ ಪಂಕ್ತಿಯು ಮಂಚದ ಪೂರ್ವ ದಿಕ್ಕಿನಲ್ಲಿರುವುದು. ಮಂಚದ ಪಾದದ ಬಳಿಯಲ್ಲಿ ಕೋಟಿ ಸೂರ್ಯರ ತೇಜಸ್ಸಿನಿಂದ ಕೂಡಿ ಮಧ್ಯೆ ಮಧ್ಯೆ ಫಳಫಳನೆ ಹೊಳೆಯುತ್ತಿರುವ ಸ್ವರ್ಣಕಾಂತಿಯಿಂದ ವಿರಾಜಿತವಾಗಿ, ಶಿರೋಭಾಗದಲ್ಲಿ ಮುತ್ತಿನ ಮುಚ್ಚಳದಿಂದೊಪ್ಪಿ, ನಾನಾ ರತ್ನಾಲಂಕೃತವಾಗಿಯೂ, ತಾಂಬೂಲರಸದಿಂದ ಸುವಾಸನೆಯುಳ್ಳುದಾಗಿಯೂ, ದತ್ತೂರಿಯ ಹೂವಿನ ಆಕಾರವುಳ್ಳುದಾಗಿಯೂ ಇರುವ ಕಳಾಚಿಕೆಯು ಕಂಗೊಳಿಸುತ್ತಿರುವುದು.

೬೬-೬೮. ಅಯ್ಯಾ ಕುಂಭಸಂಭವನೇ! ಆ ಮಂಚದ ಮೇಲ್ಭಾಗದಲ್ಲಿ ಮೂರು ಹಸ್ತಗಳೆತ್ತರವೂ, ನಾಲ್ಕು ನಲ್ವಗಳಗಲವೂ ಉಳ್ಳುದಾಗಿ, ಕಾಲ್ದಿಂಬು ತಲೆದಿಂಬುಗಳಿಂದೊಪ್ಪಿ ಮೃದುವಾದ ನಾಲ್ಕು ದಿಂಡುಗಳಿಂದ

ತಸ್ಯೋಪರಿ ವಸನ್ ಪೂರ್ವದಿಙ್ಮುಖೋ ದಯಯಾನ್ವಿತಃ ।
ಶೃಂಗಾರವೇಷರುಚಿರಃ ಸದಾ ಷೋಡಶವಾರ್ಷಿಕಃ ॥ ೬೯ ॥
ಉದ್ಯದ್ಭಾಸ್ಕರ ಬಿಂಬಾಭಶ್ಚತುರ್ಹಸ್ತ ಸ್ತ್ರಿಲೋಚನಃ ।
ಹಾರಕೇಯೂರಮುಕುಟಕಟಕಾದ್ಯೈರಲಂಕೃತಃ ॥ ೭೦ ॥
ಕಮನೀಯ ಸ್ಮಿತ ಜ್ಯೋತ್ಸ್ನಾ ಪರಿಪೂರ್ಣಕಪೋಲಭೂಃ ।
ಜಾಗರ್ತಿ ಭಗವಾನಾದಿದೇವಃ ಕಾಮೇಶ್ವರಃ ಪರಃ ॥ ೭೧ ॥
ತಸ್ಯೋಂತ್ಸಂಗೇ ಸಮಾಸೀನಾ ತರುಣಾದಿತ್ಯಪಾಟಲಾ ।
ಸದಾ ಷೋಡಶವರ್ಷಾ ಚ ನವಯೌವನದರ್ಪಿತಾ ॥ ೭೨ ॥
ಆಮೃಷ್ಟಪದ್ಮರಾಗಾಭ ಚರಣಾಬ್ಜನಖಚ್ಛಟಾ ।
ಯಾವಕಶ್ರೀನಿರ್ವ್ಯಪೇಕ್ಷಪಾದಲೌಹಿತ್ಯವಾಹಿನೀ ॥ ೭೩ ॥
ಕಲಾನಿಃ ಸ್ವನಮಂಜೀರಪತ್ಕಂಕಣಮನೋಹರಾ ।
ಅನಂಗವೀರತೂಣೀರ ದರ್ಪೋನ್ಮಥನಜಂಘಿಕಾ ॥ ೭೪ ॥
ಕರಿಶುಂಡಾಕದಲಿಕಾ ಕಾಂತಿತುಲ್ಯೋರುಶೋಭಿನೀ ।
ಅರುಣೇನ ದುಕೂಲೇನ ಸುಸ್ಪರ್ಶೇನ ತನೀಯಸಾ ॥ ೭೫ ॥

---

ಕೂಡಿ ಪಾಟಲಕಾಂತಿಯಿಂದ ವಿರಾಜಿಸುತ್ತಿರುವ ಹಂಸತೂಲಿಕಾತಲ್ಪವಿರುತ್ತದೆ. ಅದರ ಮೇಲೆ ನಿರ್ಮಲವೂ, ಮೃದುವೂ, ಪದ್ಮರಾಗಮಣಿಕಾಂತಿಯುತವೂ ಆದ ಕೌಸುಂಭವಸನದ ಮೇಲ್ ಹೊದಿಕೆಯು ಕಂಗೊಳಿಸುತ್ತಿರುವುದು.

೬೯-೭೧. ಆ ಹಂಸತೂಲಿಕಾ ತಲ್ಪದಲ್ಲಿ ಪೂರ್ವದಿಕ್ಕಿಗೆ ತಿರುಗಿ, ದಯಾನ್ವಿತನೂ, ಶೃಂಗಾರ ವೇಷದಿಂದ ಸುಂದರನೂ ಆಗಿ, ಯಾವಾಗಲೂ ಹದಿನಾರೇ ವರ್ಷ ವಯಸ್ಸಿನಿಂದೊಪ್ಪಿ, ಉದಯಾದಿತ್ಯ ಬಿಂಬದಂತೆ ಕಾಂತಿಸಮನ್ವಿತನಾಗಿ ತ್ರಿಲೋಚನನೂ, ಹಾರ, ಕೇಯೂರ, ಕಟಕ, ಕಿರೀಟಾದಿಗಳಿಂದಲಂಕೃತನೂ, ಮನೋಹರವಾದ ನಸುನಗೆಯೆಂಬ ಬೆಳುದಿಂಗಳು ತುಂಬಿದ ಕೆನ್ನೆಗಳಿಂದ ಮೆರೆಯುತ್ತಿರುವವನೂ, ಷಡ್ಗುಣೈಶ್ವರ್ಯ ಸಂಪನ್ನನೂ, ಆದಿದೇವನೂ ಆದ ಶ್ರೀ ಕಾಮೇಶ್ವರಸ್ವಾಮಿಯು ಕಂಗೊಳಿಸುತ್ತಿರುವನು.

೭೨-೮೮. ಅಯ್ಯಾ ಅಗಸ್ತ್ಯಮುನಿಯೇ! ಆ ಕಾಮೇಶ್ವರನ ತೊಡೆಯಮೇಲೆಯೇ ಬಾಲಸೂರ್ಯನ ಕಾಂತಿಯಿಂದೊಪ್ಪಿ, ಯಾವಾಗಲೂ ಹದಿನಾರೇ ವರ್ಷದವಳಾಗಿ, ನವಯೌವನದಿಂದ ಬೀಗು

ಅಲಂಕೃತನಿತಂಬಾಢ್ಯಾ ಜಘನಾಭೋಗಭಾಸುರಾ ।
ಅರ್ಧೋರ್ವೀರುಕಗ್ರಂಥಿಮತೀ ರತ್ನಕಾಂತೀ ವಿರಾಜಿತಾ ॥ ೭೬ ॥
ನತನಾಭಿಮಹಾವರ್ತ ತ್ರಿವಲ್ಯೂರ್ಮಿಪ್ರಭಾಸ್ಫುರೀ ।
ಸ್ತನಕುಟ್ಮಲಹಿಂದೋಲ ಮುಕ್ತಾದಾಮಶತಾವೃತಾ ॥ ೭೭ ॥
ಅತಿಪೀವರವಕ್ಷೋಜ ಭಾರಭಂಗುರಮಧ್ಯಭೂಃ ।
ಶಿರೀಷದಾಮಕೌಮಲ್ಯಶಾಲಿನಶ್ಚತುರೋ ಭುಜಾನ್ ॥ ೭೮ ॥
ಕೇಯೂರಕಂಕಣಶ್ರೇಣಿಮಂಡಿತಾನ್ ಸೋರ್ಮಿಕಾಂಗುಲೀನ್ ।
ವಹಂತೀ ಪರಿಸಂಮೃಷ್ಟಶಂಖಸುಂದರಕಂಧರಾ ॥ ೭೯ ॥
ಮುಖದರ್ಪಣವೃಂತಾಭ ಚುಬುಕಾ ಪಾಟಲಾಧರಾ ।
ಶುಚಿಭಿಃ ಪಂಕ್ತಿಬದ್ಧೈಶ್ಚ ವಿದ್ಯಾರೂಪೈರ್ವಿಭಾಸ್ವರೈಃ ॥ ೮೦ ॥
ಕುಂದಕುಟ್ಮಲಸಚ್ಛಾಯೈರ್ದಂತೈರ್ದರ್ಶಿತಚಂದ್ರಿಕಾ ।
ಸ್ಥೂಲಮೌಕ್ತಿಕ ಸನ್ನದ್ಧ ನಾಸಾಭರಣಭಾಸುರಾ ॥ ೮೧ ॥
ಕೇತಕಾಂತರ್ದಲದ್ರೋಣೀ ದೀರ್ಘದೀರ್ಘವಿಲೋಚನಾ ।
ಅರ್ಧೇಂದುತುಲಿತೇ ಫಾಲೇ ಸಮ್ಯಕ್ಕ್ಲೃಪ್ತಾಲಕಚ್ಛಟಾ ॥ ೮೨ ॥

---

ತ್ತಿರುವ ಶ್ರೀ ಲಲಿತಾಂಬಿಕೆಯು ಕುಳಿತಿರುವಳು. ತೊಳೆದು ಬೆಳ್ಳನೆ ಬಳಗುತ್ತ ಪದ್ಮರಾಗಮಣಿಕಾಂತಿಯಿಂದೊಪ್ಪುತ್ತಿರುವ ಅಡಿದಾವರೆಯ ಉಗುರುಗಳ ಕಾಂತಿ; ಅರಗಿನ ಬಣ್ಣವೇ ಬೇಕಿಲ್ಲದೆ ಸಹಜವಾಗಿಯೇ ಕೆಂಪೊಗೆಯುತ್ತಿರುವ ಪಾದಗಳು; ಇನಿದನಿಗೈಯುತ್ತ ಮನೋಹರವಾಗಿ ಕಂಗೊಳಿಸುತ್ತಿರುವ ಕಾಲಂದುಗೆಗಳು; ಅನಂಗನ ಬಲವತ್ತರವಾದ ಬತ್ತಳಿಕೆಯ ಬಲ್ಪನ್ನೂ ಬಡಿದು ಕೆಡಹುವ ಜಂಘೆ; ಆನೆಯ ಸೊಂಡಿಲ, ಬಾಳೆಯ ಕಂಬದ ಕಾಂತಿಯನ್ನು ಹೋಲಿ ಮೆರೆಯುವ ತೊಡೆಗಳು; ಮೆದುವಾಗಿಯೂ, ತೆಳುವಾಗಿಯೂ ಇರುವ ಅರುಣದುಕೂಲದಿಂದ ಅಲಂಕೃತವಾದ ನಿತಂಬದಿಂದೊಪ್ಪಿ ಮೆರೆಯುವ ನಡುವು; ಅರೆದೊಡೆಯ ವರೆಗೂ ಗ್ರಂಥಿಗಳನ್ನೊಳಕೊಂಡ ರತ್ನಗಳ ಕಾಂತಿಯಿಂದ ವಿರಾಜಿಸಿ, ಆಳವಾದ ಹೊಕ್ಕಳೆಂಬ ಮಡುವಿನಿಂದ ಸುಳಿಸುಳಿಯಾಗಿ ಹೊರಟಿರುವ ತ್ರಿವಳಿಗಳೆಂಬ ಅಲೆಗಳ ಕಾಂತಿಪ್ರವಾಹ; ತಾವರೆಯ ಮೊಗ್ಗಿನಂತೆ ಕಂಗೊಳಿಸುತ್ತಿರುವ ಸ್ತನಗಳಮೇಲೆ ಜೋಲಾಡುತ್ತಿರುವ ನೂರಾರು ಮುತ್ತಿನ ಮಾಲೆಗಳ ಸೊಗಸು; ಬಹು ದಪ್ಪವಾದ ಆ ಸ್ತನಗಳ ಭಾರದಿಂದಲೇ ನಸುಬಾಗಿದ ಮಧ್ಯಪ್ರದೇಶ; ಶಿರೀಷ ಕುಸುಮಮಾಲೆಗಳ

**ನಾಲೀನತಂಸಮಾಣಿಕ್ಯ ಕುಂಡಲಾಮಂಡಿತಶ್ರುತಿಃ ।**
**ನವಕರ್ಪೂರಕಸ್ತೂರೀ ಸದಾಮೋದಿತವೀಟಿಕಾ ॥ ೮೩ ॥**
**ಶರಚ್ಚಾರುನಿಶಾನಾಥಮಂಡಲೀ ಮಧುರಾನನಾ ।**
**ಚಿಂತಾಮಣೀನಾಂ ಸಾರೇಣ ಕ್ಲೃಪ್ತಚಾರುಕಿರೀಟಿಕಾ ॥ ೮೪ ॥**
**ಸ್ಫುರತ್ತಿಲಕರತ್ನಾಭ ಫಾಲನೇತ್ರವಿರಾಜಿತಾ ।**
**ಗಾಢಾಂಧಕಾರನಿಬಿಡಶ್ಯಾಮಕುಂತಲಸಂಹತಿಃ ॥ ೮೫ ॥**
**ಸೀಮಂತರೇಖಾವಿನ್ಯಸ್ತ ಸಿಂದೂರಶ್ರೇಣಿಭಾಸುರಾ ।**
**ಸ್ಫುರಚ್ಚಂದ್ರಕಲೋತ್ತಂಸಾ ಮದಾಲೋಲವಿಲೋಚನಾ ॥ ೮೬ ॥**
**ಸರ್ವಶೃಂಗಾರವೇಷಾಢ್ಯಾ ಸರ್ವಾಭರಣ ಮಂಡಿತಾ ।**
**ಸಮಸ್ತಲೋಕಮಾತಾ ಚ ಸದಾನಂದವಿವರ್ಧಿನೀ ॥ ೮೭ ॥**

---

ಕೋಮಲತೆಯನ್ನು ಒಳಕೊಂಡು ಕಂಕಣ ಕೇಯೂರಗಳ ಸಾಲುಗಳಿಂದ ಅಲಂಕೃತವಾಗಿ ಬೆರಳುಂಗುರಗಳಿಂದ ಕಂಗೊಳಿಸುವ ನಾಲ್ಕು ಭುಜಗಳು; ಚೆನ್ನಾಗಿ ತೊಳೆದ ಶಂಖದಂತೆ ಸುಂದರವಾದ ಕಂಧರ; ಗುಂಡುಕನ್ನಡಿ ಗುಂಡುಬೀಸಣಿಗೆಗಳನ್ನು ಹೋಲಿ ಗುಂಡಾಗಿರುವ ಗಲ್ಲ; ಕೆಂದುಟಿಗಳು; ವಿದ್ಯಾರೂಪಗಳಾಗಿ ನಿರ್ಮಲವಾಗಿ ಬೆಳಗುತ್ತ ಮೊಲ್ಲೆಯ ಮೊಗ್ಗುಗಳ ಕಾಂತಿಯನ್ನು ತಳೆದಿರುವ ರದನಪಂಕ್ತಿ; ಅದರಿಂದ ಹೊರಚೆಲ್ಲಿ ಕಂಗೊಳಿಸುವ ಬೆಳುದಿಂಗಳನ್ನು ಸೂಸಿ, ಹೆಮ್ಮುತ್ತಿನ ಮೂಗುತಿಯಿಂದೊಪ್ಪಿರುವ ನಾಸಿಕೆ; ತಾಳೆಯ ಹೂವಿನೊಳಗಿನ ದೋಣಿಯಂತೆ ದೀರ್ಘದೀರ್ಘವಾದ ಬೊಗಸೆಗಂಗಳು; ಅರ್ಧಚಂದ್ರನನ್ನು ಹೋಲುವ ಹಣೆಯಲ್ಲಿ ಬಹು ಚೆನ್ನಾಗಿ ನೇರ್ಪಡಿಸಿ ಕಂಗೊಳಿಸುವ ಮುಂಗೂದಲು; ನಾಗಸರ್ಪದ ಹೆಡೆಯ ಮಾಣಿಕ್ಯಗಳು ಕೆತ್ತಿದ ಓಲೆಗಳಿಂದ ಅಲಂಕೃತವಾದ ಕಿವಿಗಳು, ಹೊಸತಾದ ಕರ್ಪೂರ ಕಸ್ತೂರಿಗಳಿಂದ ವಾಸನೆಕಟ್ಟಿದ ತಂಬುಲವನ್ನು ಮೆಲ್ಲುತ್ತಿರುವ ಶರಚ್ಚಂದ್ರಬಿಂಬಸುಂದರವಾದ ಮುಖ; ಚಿಂತಾಮಣಿಮಯವಾದ ಕಿರೀಟ; ರತ್ನದಂತೆ ಹೊಳೆವ ಹಣೆಗಣ್ಣು; ಕಗ್ಗತ್ತಲೆದುಂಬಿದಂತೊಪ್ಪಿರುವ ಕರಿಗೂದಲರಾಶಿ; ಸೀಮಂತರೇಖೆಯಲ್ಲಿಟ್ಟ ಚಂದ್ರದರೇಖೆ; ಬೆಳಗುತ್ತಿರುವ ಚಂದ್ರಕಲೆಯನ್ನು ತಳೆದು ಶೋಭಿಸುವ ಕಿರೀಟ; ಮದದಿಂದಾಲುತ್ತಿರುವ ಕಂಗಳು. ಈ ರೀತಿ ಸರ್ವಶೃಂಗಾರವೇಷಪೂರಿತೆಯಾಗಿ, ಸರ್ವಾಭರಣಾಲಂಕೃತೆಯೂ, ಸರ್ವಲೋಕಜನನಿಯೂ, ಸರ್ವಕಾಲಗಳಲ್ಲಿಯೂ ಆನಂದವನ್ನು

**ಬ್ರಹ್ಮವಿಷ್ಣುಗಿರೀಶೇಶಸದಾಶಿವ ನಿದಾನಭೂಃ ।**
**ಅಪಾಂಗರಿಂಖತ್ಕರುಣಾನಿರ್ಝರೀತರ್ಪಿತಾಖಿಲಾ ।**
**ಭಾಸತೇ ಸಾ ಭಗವತೀ ಪಾಪಘ್ನೀ ಲಲಿತಾಂಬಿಕಾ ॥ ೮೮ ॥**
**ಅನ್ಯದೈವತ ಪೂಜಾನಾಂ ಯಸ್ಯಾಃ ಪೂಜಾಫಲಂ ವಿದುಃ । [ ೮೯ ॥**
**ಯಸ್ಯಾಃ ಪೂಜಾಫಲಂ ಪ್ರಾಹುರ್ಯಸ್ಯಾ ಏವ ಹಿ ಪೂಜನಮ್ ॥**
**ತಸ್ಯಾಃ ಶ್ರೀಲಲಿತಾದೇವ್ಯಾ ವರ್ಣಯಾಮಿ ಕಥಂ ವಪುಃ ।**
**ವರ್ಷಕೋಟಿಸಹಸ್ರೇಣಾಪ್ಯೇಕಾಂಶೋ ನಹಿ ವರ್ಣ್ಯತೇ ॥ ೯೦ ॥**
**ವರ್ಣನಾನಾಮ ವಾಗ್ರೂಪಾ ವಾಚಸ್ತಸ್ಯಾಂ ಕುತೋ ಗತಿಃ ।**
**ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ॥ ೯೧ ॥**
**ಬಹುನಾ ಕಿಮಿಹೋಕ್ತೇನ ತತ್ವಭೂತಮಿದಂ ಶೃಣು ।**
**ನಪಕ್ಷಪಾತಾನ್ನ ಸ್ನೇಹಾನ್ನ ಮೋಹಾದ್ವಾ ಮಯೋಚ್ಯತೇ ॥ ೯೨ ॥**

---

ವರ್ಧಿಸುತ್ತಿರುವಾಕೆಯೂ, ಬ್ರಹ್ಮ ವಿಷ್ಣು ಶಿವ ಸದಾಶಿವರಿಗೆ ಮೂಲ ಕಾರಣಿಯೂ ಕುಡಿಗಣ್ಣೋಟದ ಹೊಳೆಯಿಂದಲೇ ಎಲ್ಲರನ್ನೂ ತೃಪ್ತಿಗೊಳಿಸುವಾಕೆಯೂ, ಪಾಪ ಹರೆಯೂ, ಷಡ್ಗುಣೈಶ್ವರ್ಯ ಸಂಪನ್ನೆಯೂ ಆಗಿ ವಿರಾಜಿಸುತ್ತಿರುವ ಶ್ರೀ ಲಲಿತಾಂಬಿಕೆಯು ಆ ಕಾಮೇಶ್ವರನ ತೊಡೆಯ ಮೇಲೆ ಸುಖಾಸೀನೆಯಾಗಿರುವಳು.

೮೯-೯೧. ಅಯ್ಯಾ ಕಲಶೋದ್ಭವನೇ! ಇತರ ದೇವತೆಗಳ ಪೂಜೆಗಳಿಗೆಲ್ಲಕ್ಕೂ ಯಾವ ದೇವಿಯು ಪೂಜೆಯೇ ಪೂಜಾಫಲವೆಂದು ಹೇಳುವರೋ, ಯಾವಾಕೆಯ ಪೂಜೆಗೆ ಆಕೆಯನ್ನು ಪೂಜಿಸುವುದೇ ಫಲವಾಗಿ ಇರುವುದೋ ಅಂತಹ ಶ್ರೀಲಲಿತಾದೇವಿಯ ರೂಪವನ್ನು ನಾನೆಂತು ವರ್ಣಿಸಲಿ! ಒಂದು ಕೋಟಿ ಸಹಸ್ರ ವರ್ಷಗಳ ವರೆಗೆ ವರ್ಣಿಸಿದರೂ ಆ ದೇವಿಯ ರೂಪದಲ್ಲಿ ಒಂದಂಶವನ್ನೂ ವರ್ಣಿಸಲು ಸಾಧ್ಯವಾಗುವುದಿಲ್ಲ. ಎಲೈ ಮುನಿಯೇ! ವರ್ಣನೆಯೆಂಬುದು ಮಾತಿನ ರೂಪವಾದುದಷ್ಟೇ! ಆ ದೇವಿಯ ಸೌಂದರ್ಯ ವರ್ಣನದಲ್ಲಿ ಮಾತಿಗೆಡೆಯುಂಟೆ. "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಎಂದು ಶ್ರುತಿಯಿರುವುದಾದಕಾರಣ ಮಾತಿಗೂ, ಮನಸ್ಸಿಗೂ ನಿಲುಕದ ಆ ದೇವಿಯ ರೂಪವನ್ನು ವರ್ಣಿಸುವುದು ತಾನೆ ಹೇಗೆ?

೯೨-೯೬. ಎಲೈ ತಪೋಧನನೇ! ಸುಮ್ಮನೆ ಹೆಚ್ಚಾಗಿ ಹೇಳುವುದರಿಂದೇನು ಫಲ. ಸಾರಭೂತವಾದ ಈ ಮಾತನ್ನು ಕೇಳು. ಕಲ್ಪ

**ಸಂತು ಕಲ್ಪತರೋಃ ಶಾಖಾ ಲೇಖಿನ್ಯಸ್ತ್ವಪಸಾಂನಿಧೇ ।**
**ಮಷೀಪಾತ್ರಾಣಿ ಸರ್ವೇಽಪಿ ಸಪ್ತ ಸಂತು ಮಹಾರ್ಣವಾಃ ॥ ೯೩ ॥**
**ಪಂಚಾಶತ್ಕೋಟಿವಿಸ್ತೀರ್ಣೋ ಭೂಮಿಃ ಪತ್ರತ್ವಮೃಚ್ಛತು ।**
**ತಸ್ಯ ಲೇಖನಕಾಲೋಽಸ್ತು ಪರಾರ್ಧಾಧಿಕವತ್ಸರೈಃ ॥ ೯೪ ॥**
**ಲಿಖಂತು ಸರ್ವೇಲೋಕಾಸ್ತು ಪ್ರತ್ಯೇಕಂ ಕೋಟಿಬಾಹವಃ ।**
**ಸರ್ವೇ ಬೃಹಸ್ಪತಿಸಮಾ ವಕ್ತಾರೋ ಯದಿ ಕುಂಭಜ ॥ ೯೫ ॥**
**ಅಥಾಪಿ ತಸ್ಯಾಃ ಶ್ರೀ ದೇವ್ಯಾಃ ಪಾದಸ್ಯೈಕಾಂಗುಲೀದ್ಯುತೇಃ ।**
**ಸಹಸ್ರಾಂಶೇಷ್ವೇಕಕಾಂಶವರ್ಣನಾ ನಹಿ ಜಾಯತೇ ।**
**ಅತೋ ವಾಗ್ವೃತ್ತಿರಖಿಲಾ ನಿಷ್ಫಲಾ ತದ್ಗುಣಸ್ತುತೌ ॥ ೯೬ ॥**
**ಬಿಂದುಪೀಠಸ್ಯ ಪರಿತಶ್ಚತುರಶ್ರತಯಾಸ್ಥಿತಾ ।**
**ಮಹಾಮಾಯಾ ಯವನಿಕಾ ಲಂಬತೇ ಮೇಚಕಪ್ರಭಾ ॥ ೯೭ ॥**
**ದೇವ್ಯಾ ಉಪರಿಹಸ್ತಾನಾಂ ವಿಂಶದ್ವಿತಯೋದ್ಧತಮ್ ।**
**ಇಂದ್ರಗೋಪವಿತಾನಂ ತು ಬದ್ಧಂ ತ್ರೈಲೋಕ್ಯದುರ್ಲಭಮ್ ॥೯೮॥**

---

ವೃಕ್ಷದ ಕೊಂಬೆಗಳೇ ಲೇಖನಿಗಳಾಗಲಿ. ಸಪ್ತ ಮಹಾ ಸಾಗರಗಳೇ ಶಾಯಿ ಕುಡಿಕೆಗಳಾಗಲಿ. ಐವತ್ತು ಕೋಟಿ ಯೋಜನಗಳ ವಿಸ್ತಾರವಾದ ಈ ಭೂಮಿಯೇ ಹಾಳೆಯಾಗಲಿ. ಬರೆಯುವ ಸಮಯವು ಅದಕ್ಕೆ ಒಂದೂವರೆಗಿಂತಲೂ ಹೆಚ್ಚಾಗಲಿ. ಎಲ್ಲ ಲೋಕಗಳಲ್ಲಿಯೂ ವಾಸ ಮಾಡುವ ಮಹಾಜನರೆಲ್ಲರೂ ಒಂದು ಕೋಟಿ ಭುಜಗಳುಳ್ಳವರಾಗಿ ಬರೆಯಲಿ. ವರ್ಣಿಸುವವರು ಸಾಕ್ಷಾತ್ ಬೃಹಸ್ಪತ್ಯಾಚಾರ್ಯನಿಗೆ ಸಮಾನರೇ ಆಗಲಿ. ಇಷ್ಟಾದರೂ ಅವರು ಆ ಪರಮೇಶ್ವರಿಯ ಪಾದಾರವಿಂದದ ಬೆರಳ ಕಾಂತಿಯ ಸಹಸ್ರಾಂಶದಲ್ಲಿ ಒಂದಂಶವನ್ನಾದರೂ ವರ್ಣಿಸಲಾರರು. ಆದುದರಿಂದ ಬರಿಯ ಮಾತುಗಳನ್ನು ಬೆಳಸುವುದು ವ್ಯರ್ಥ. ಅದೆಲ್ಲವೂ ಆಕೆಯ ರೂಪ ವರ್ಣನೆಯಲ್ಲಿ ನಿಷ್ಫಲವೇ ಆಗುವುದು.

೯೭-೯೮. ಎಲೈ ತಾಪಸನೇ! ಬಿಂದು ಪೀಠದ ಸುತ್ತಲೂ ಚಚ್ಚೌಕ ವಾಗಿ, ನವಿಲುಗರಿಯ ಕಾಂತಿಯನ್ನು ತಳೆದಿರುವ ಮಾಯಾಯವನಿಕೆ (ತೆರೆ)ಯು ಕಂಗೊಳಿಸುತ್ತಿರುವುದು. ಶ್ರೀದೇವಿಯ ಮೇಲ್ಭಾಗದಲ್ಲಿ ಯಾದರೋ ನಲವತ್ತು ಹಸ್ತಗಳೆತ್ತರದಲ್ಲಿ ಮೂರು ಲೋಕಗಳಲ್ಲಿಯೂ ದೊರಕದ ಇಂದ್ರಗೋಪ ವಿತಾನ (ಮೇಲ್ ಕಟ್ಟು)ವು ಶೋಭಿಸುತ್ತಿದೆ.

**ತತ್ರಾಲಂಕಾರಜಾಲಂ ತು ವರ್ತಮಾನಂ ಮನೋಹರಮ್ ।**
**ಮದ್ವಾಣೀ ವರ್ಣಯಿಷ್ಯಂತೀ ಕಂಠ ಏವ ಹ್ರಿಯಾಹತಾ ॥ ೯೯ ॥**
**ಸೈವ ಜಾನಾತಿ ತತ್ಸರ್ವಂ ತತ್ರತ್ಯಮತುಲಂ ಗುಣಮ್ ।**
**ಮನಸೋಽಪಿ ಹಿ ದೂರೇ ತತ್ಸೌಭಾಗ್ಯಂ ಕೇನ ವರ್ಣ್ಯತೇ ॥ ೧೦೦ ॥**
**ಇತ್ಥಂ ಭಂಡಮಹಾದೈತ್ಯವಧಾಯ ಲಲಿತಾಂಬಿಕಾ ।**
**ಆವಿರ್ಭೂತಾ ಚಿದನಲಾದ್ಧತನಿಃಶೇಷದಾನವಾ ॥ ೧೦೧ ॥**
**ದಿವ್ಯಶಿಲ್ಪಿಜನೈಃ ಕ್ಲೃಪ್ತಂ ಷೋಡಶಕ್ಷೇತ್ರವೇಶ್ಮಿಕಮ್ ।**
**ಅಧಿಷ್ಠಾಯ ಶ್ರೀನಗರಂ ಸದಾ ರಕ್ಷತಿ ವಿಷ್ಟಪಮ್ ॥ ೧೦೨ ॥**
**ಇತ್ಥಮೇವ ಪ್ರಕಾರೇಣ ಶ್ರೀಪುರಾಣ್ಯನ್ಯಕಾನ್ಯಪಿ ।**
**ನ ಭೇದಃ ಕೋಽಪಿ ವಿನ್ಯಾಸೇ ನಾಮಮಾತ್ರೇ ಪುರಾಂ ಭಿದಾ ॥ ೧೦೩ ॥**
**ಶ್ರೀ ಪುರಾಣ್ಯಖಿಲಾನ್ಯೇವ ನಿತ್ಯಾನಿ ಲಲಿತೇಚ್ಛಯಾ ।**

---

೯೯-೧೦೦. ಅಲ್ಲಿ ಕಂಗೊಳಿಸುತ್ತಿರುವ ಸುಂದರವಾದ ಅಲಂಕಾರ ಸಮೂಹವನ್ನು ನನ್ನ ವಾಣಿಯು ವರ್ಣಿಸುವುದೇನು? ಕಂಠವೇ ನಾಚಿಕೆಯಿಂದ ಹತವಾಗಿ ಹೋಗಿರುವುದು. ಸಾಕ್ಷಾತ್ ಶ್ರೀ ಲಲಿತಾಂಬಿಕೆಯೇ ಅಲ್ಲಿರುವ ಸಮಸ್ತ ಗುಣಜಾಲವನ್ನೂ ಬಲ್ಲಳಾಗಲಿ, ಮನಸ್ಸಿಗೂ ದೂರವಾದ ಆ ಸೌಭಾಗ್ಯವನ್ನು ವರ್ಣಿಸಲು ಯಾರುತಾನೆ ಶಕ್ತರಾದಾರು?

೧೦೧-೧೦೨. ಹೀಗೆ ಶ್ರೀ ಲಲಿತಾಂಬಿಕೆಯು ಮಹಾದೈತ್ಯನಾದ ಭಂಡಾಸುರನನ್ನು ಸಂಹರಿಸಲೋಸುಗ ಚಿದಗ್ನಿಕುಂಡದಿಂದಾವಿರ್ಭವಿಸಿದಳು. ಆ ದೇವಿಯು ಸಮಸ್ತ ದಾನವರನ್ನೂ ಸಂಹರಿಸಿದ ತರುವಾಯ, ದೇವ ಶಿಲ್ಪಿಗಳಿಂದ ಷೋಡಶ ಕ್ಷೇತ್ರ ಸಹಿತವಾಗಿ ಕಂಗೊಳಿಸುವಂತೆ ನಿರ್ಮಿತವಾದ ಶ್ರೀ ಪುರದಲ್ಲಿ ನೆಲಸಿ ಯಾವಾಗಲೂ ಪ್ರಪಂಚವನ್ನು ಪರಿಪಾಲಿಸುತ್ತಿರುವಳು.

೧೦೩-೧೦೭. ಎಲೈ ಅಗಸ್ತ್ಯ ಮುನಿಯೇ! ಇತರ ಶ್ರೀಪುರಗಳೂ ಈ ಪ್ರಕಾರವಾಗಿಯೇ ಇರುತ್ತವೆ. ಅವುಗಳ ರಚನೆಯಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ. ಆದರೆ ಹೆಸರುಗಳು ಮಾತ್ರ ಬೇರೆ ಬೇರೆ. ಶ್ರೀ ಲಲಿತಾಪರಮೇಶ್ವರಿಯ ಇಚ್ಛೆಯಿಂದ ಈ ಶ್ರೀಪುರಗಳೆಲ್ಲವೂ ಶಾಶ್ವತಗಳಾಗಿರುತ್ತ ಅನಂತ ಭಕ್ತಜನರಿಗೆ ದರ್ಶನಾದಿಗಳಿಗೆ ಅವಕಾಶವನ್ನು ಕಲ್ಪಿಸಿಕೊಟ್ಟಿರುತ್ತವೆ. ಅಯ್ಯಾ ತಪಸ್ವಿಯೇ! ನಾನಾ ವೃಕ್ಷ

ಅವಕಾಶಮನಂತಾನಾಂ ಭಕ್ತಾನಾಂ ಚ ವಿತನ್ವತೇ ॥ ೧೦೪ ॥
ನಾನಾವೃಕ್ಷಮಹೋದ್ಯಾನಮಾರಭ್ಯೇತಿಕ್ರಮೇಣ ಯೇ ।
ವದಂತಿ ಶ್ರೀಪುರಕಥಾಂ ತೇ ಯಾಂತಿ ಪರಮಾಂ ಗತಿಂ ॥ ೧೦೫ ॥
ಆಕರ್ಣಯಂತಿ ಪೃಚ್ಛಂತಿ ವಿತನ್ವಂತಿ ಚ ಯೇ ನರಾಃ ।
ಯೇ ಪುಸ್ತಕೇ ಧಾರಯಂತಿ ತೇ ಯಾಂತಿ ಪರಮಾಂ ಗತಿಂ ॥ ೧೦೬ ॥
ಯೇ ಶ್ರೀಪುರಪ್ರಕಾರೇಣ ತತ್ತತ್ಸಾಲಾನ್ವಿಭೇದತಃ ।
ಕೃತ್ವಾ ಶಿಲ್ಪಿಜನೈರ್ದಿವ್ಯಂ ಶ್ರೀ ದೇವ್ಯಾಯತನಂ ಮಹತ್ ।
ಸಂಪಾದಯಂತಿ ಸದ್ಭಕ್ತಾಸ್ತೇ ಯಾಂತಿ ಪರಮಾಂ ಗತಿಂ ॥೧೦೭॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ಏಕತ್ರಿಂಶೋಽಧ್ಯಾಯಃ

---

ಮಹೋದ್ಯಾನದ ವರ್ಣನೆಯನ್ನು ಮೊದಲುಗೊಂಡು ಶ್ರೀಪುರದ ವರ್ಣನ ಕಥನದವರೆಗೂ ಯಾರು ಕ್ರಮವಾಗಿ ಇದನ್ನು ಹೇಳುತ್ತಾರೆಯೋ ಅವರು ಪರಮಪದವಿಯನ್ನು ಹೊಂದುತ್ತಾರೆ. ಯಾರು ಇದನ್ನು ಕೇಳುತ್ತಾರೆಯೋ, ಪ್ರಶ್ನಿಸುತ್ತಾರೆಯೋ ಅವರೆಲ್ಲರೂ ಪರಮಪದವಿಯನ್ನು ಪಡೆಯುವರು. ಅಲ್ಲದೆ, ಶ್ರೀಪುರದ ರೀತಿಯಲ್ಲಿಯೇ ಆ ಆ ಪ್ರಾಕಾರಗಳನ್ನು ವಿಭಾಗಿಸಿಕೊಂಡು ಶಿಲ್ಪಿಗಳಿಂದ ದಿವ್ಯವಾಗಿ ಶ್ರೀದೇವಿಯ ಮಂದಿರಗಳನ್ನು ಯಾರು ರಚನೆಮಾಡಿಸುತ್ತಾರೆಯೋ ಆ ಸದ್ಭಕ್ತರು ಪರಮಪದವಿಯನ್ನು ಸಂಪಾದಿಸುತ್ತಾರೆಯೆಂಬುದರಲ್ಲಿ ಸಂದೇಹವೇ ಇರುವುದಿಲ್ಲ.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾತ್ರಿಂಶೋಽಧ್ಯಾಯಃ

[ ಶ್ರೀಮಂತ್ರರಾಜವರ್ಣನಂ— ತತ್ ಸಾಧನ ಪ್ರಕಾರ ನಿರೂಪಣಂ ]

ವಿಷ್ಣ್ವೀಶಾದಿ ಸಮಸ್ತಮಂತ್ರ ನಿಕರಾದ್ಯದ್ಯತ್ಫಲಂ ಪ್ರಾಪ್ಯತೇ
ತಸ್ಮಾದಪ್ಯಧಿಕಂ ಹಿ ವೈವಿಗುಣಿತಂ ಯನ್ಮಂತ್ರ ರಾಜೋದ್ಭವಂ ।
ಪ್ರಾಪುರ್ದಿವ್ಯ ಫಲಂ ಪ್ರಶಾಂತಮತಿಭಿರ್ಬ್ರಂಹೇಶವಿಷ್ಣ್ವಾದಿಭಿ- ।
ರ್ನಿತ್ಯಂ ತ್ವಾಂ ಲಲಿತಾಂಬಿಕಾಂಪರಶಿವಾಂ ಶ್ರೀಮೀನನೇತ್ರಾಂ ಭಜೇ ॥

ಅಗಸ್ತ್ಯಃ—

**ಶ್ರುತಮೇತನ್ಮಹಾವೃತ್ತಮಾವಿರ್ಭಾವಾದಿಕಂ ಮಹತ್ ।**
**ಭಂಡಾಸುರವಧಶ್ಚೈವ ದೇವ್ಯಾಃ ಶ್ರೀನಗರಸ್ಥಿತಿಃ ॥ ೧ ॥**
**ಇದಾನೀಂ ಶ್ರೋತುಮಿಚ್ಛಾಮಿ ತಸ್ಯಾ ಮಂತ್ರಸ್ಯ ಸಾಧನಮ್ ।**
**ತದ್ಭಕ್ತಾನಾಂ ಲಕ್ಷಣಂ ಚ ಸರ್ವಮೇತನ್ನಿವೇದಯ ॥ ೨ ॥**

ಶ್ರೀಹಯಗ್ರೀವಃ—

**ಸರ್ವೇಭ್ಯೋಽಪಿ ಪದಾರ್ಥೇಭ್ಯಃ ಶಾಬ್ದಂ ವಸ್ತು ಮಹತ್ತರಮ್ ।**
**ಸರ್ವೇಭ್ಯೋಽಪಿ ಹಿ ಶಬ್ದೇಭ್ಯೋ ವೇದರಾಶಿರ್ಮಹಾಮುನೇ ॥ ೩ ॥**
**ಸರ್ವೇಭ್ಯೋಽಪಿ ಹಿ ವೇದೇಭ್ಯೋ ವೇದಮಂತ್ರಾ ಮಹತ್ತರಾಃ ।**
**ಸರ್ವೇಭ್ಯೋ ವೇದಮಂತ್ರೇಭ್ಯೋ ವಿಷ್ಣುಮಂತ್ರಾ ಮಹತ್ತರಾಃ ॥**

---

### ಕನ್ನಡದ ಅನುವಾದ

[ಶ್ರೀಮಂತ್ರರಾಜವರ್ಣನ— ಮತ್ತು ಅದನ್ನು ಸಾಧಿಸುವ ಕ್ರಮದ ನಿರೂಪಣೆ]

೧-೨. ಅಗಸ್ತ್ಯನು ಕೇಳುತ್ತಾನೆ:—ಎಲೈ ಹಯಗ್ರೀವಮೂರ್ತಿಯೇ! ಶ್ರೀ ಲಲಿತಾಪರಮೇಶ್ವರಿಯ ಆವಿರ್ಭಾವವೇ ಮೊದಲಾದ ಮಹತ್ತರ ವಿಚಾರಗಳನ್ನೂ, ಭಂಡಾಸುರನ ವಧೆಯನ್ನೂ, ಶ್ರೀದೇವಿಯ ಶ್ರೀನಗರದ ರಚನಾರೀತಿಯನ್ನೂ ಕೇಳಿದುದಾಯಿತು. ಈಗ ಆ ದೇವಿಯ ಶ್ರೀ ಮಂತ್ರವನ್ನು ಸಾಧಿಸುವ ಬಗೆಯನ್ನೂ, ಆಕೆಯ ಭಕ್ತರ ಲಕ್ಷಣವನ್ನೂ ಕೇಳಲಪೇಕ್ಷಿಸುವೆನು. ಈ ವಿಷಯವೆಲ್ಲವನ್ನೂ ನನಗೆ ಅಪ್ಪಣೆಕೊಡಿಸಬೇಕು.

೩-೪. ಶ್ರೀ ಹಯಗ್ರೀವಮುನಿಯು ಹೇಳುತ್ತಾನೆ:—ಎಲೈ ಮಹಾಮುನಿಯೇ! ಜಗತ್ತಿನಲ್ಲಿರುವ ಎಲ್ಲ ಪದಾರ್ಥಗಳಿಗಿಂತಲೂ ಶಾಬ್ದವೆಂಬ ವಸ್ತುವು ಬಹು ದೊಡ್ಡದು. ಎಲ್ಲ ಶಬ್ದಗಳಿಗಿಂತಲೂ ವೇದರಾಶಿಯು

**ತೇಭ್ಯೋಽಪಿ ದುರ್ಗಾ ಮಂತ್ರಾಸ್ತು ಮಹಾಂತೋ ಮುನಿಪುಂಗವ।**
**ತೇಭ್ಯೋಽಪಿ ಗಾಣಾಪತ್ಯಾಸ್ತು ಮಂತ್ರಾ ದಿವ್ಯಾ ಮಹತ್ತರಾಃ ॥೫॥**
**ತೇಭ್ಯೋಽಪ್ಯರ್ಕಸ್ಯ ಮಂತ್ರಾಸ್ತು ತೇಭ್ಯಃ ಶೈವಾ ಮಹತ್ತರಾಃ।**
**ತೇಭ್ಯೋಽಪಿ ಲಕ್ಷ್ಮೀಮಂತ್ರಾಸ್ತು ತೇಭ್ಯಃ ಸಾರಸ್ವತಾ ವರಾಃ ॥**
**ತೇಭ್ಯೋಽಪಿ ಗಿರಿಜಾಮಂತ್ರಾಸ್ತೇಭ್ಯಶ್ಚಾಮ್ನಾಯಭೇದಜಾಃ।**
**ಸರ್ವಾಮ್ನಾಯಮನುಭ್ಯೋಽಪಿ ವಾರಾಹೀಮನವೋ ವರಾಃ ॥೭॥**
**ತೇಭ್ಯಃ ಶ್ಯಾಮಾ ಮನುವರಾ ವರಿಷ್ಠಾ ಇಲ್ವಲಾಂತಕ।**
**ತೇಭ್ಯೋಽಪಿ ಲಲಿತಾಮಂತ್ರಾ ದಶಭೇದವಿಭೇದಿತಾಃ ॥ ೮ ॥**
**ತೇಷು ದ್ವೌ ಮನುರಾಜೌ ತು ವರಿಷ್ಠೌ ವಿಂಧ್ಯಮರ್ದನ।**
**ಲೋಪಾಮುದ್ರಾಕಾಮರಾಜಾವಿತಿ ಖ್ಯಾತಿಮುಪಾಗತೌ ॥ ೯ ॥**
**ಹಾದಿಸ್ತು ಲೋಪಾಮುದ್ರಾಸ್ಯಾತ್ಕಾಮರಾಜಸ್ತು ಕಾದಿಕಃ।**
**ಹಂಸಾದೇರ್ವಾಚ್ಯತಾಂ ಯಾತಃ ಕಾಮರಾಜಮಹೇಶ್ವರಃ ॥**
**ಸ್ಮರಾದೇರ್ವಾಚ್ಯತಾಂ ಯಾತಾ ದೇವೀಶ್ರೀ ಲಲಿತಾಂಬಿಕಾ ॥೧೦॥**

---

ದೊಡ್ಡದು. ಎಲ್ಲ ವೇದಗಳಿಗಿಂತಲೂ ವೇದಮಂತ್ರಗಳು ಬಹು ದೊಡ್ಡವು. ಆ ವೇದಮಂತ್ರಗಳೆಲ್ಲಕ್ಕಿಂತಲೂ ವಿಷ್ಣು ಮಂತ್ರಗಳು ಮಹತ್ತರಗಳಾದುವು.

೫-೭. ಆ ವಿಷ್ಣು ಮಂತ್ರಗಳಿಗಿಂತಲೂ ದುರ್ಗಾಮಂತ್ರಗಳು ಮಹತ್ತರಗಳಾದುವು. ಅವುಗಳಿಗಿಂತಲೂ ಗಣಪತಿ ಮಂತ್ರಗಳೂ, ಅವುಗಳಿಗಿಂತಲೂ ಶೈವ ಮಂತ್ರಗಳೂ ಶ್ರೇಷ್ಠಗಳಾದುವು. ಈ ಶೈವ ಮಂತ್ರಗಳಿಗಿಂತಲೂ ಲಕ್ಷ್ಮೀ ಮಂತ್ರಗಳೂ, ಅವಕ್ಕಿಂತಲೂ ಸರಸ್ವತೀ ಮಂತ್ರಗಳೂ, ಅವಕ್ಕಿಂತಲೂ ಆಮ್ನಾಯ ಭೇದಗಳಿಂದುದಿಸಿದ ಮಂತ್ರ ಗಳೂ, ಆಸರ್ವಾಮ್ನಾಯ ಮಂತ್ರಗಳಿಗಿಂತಲೂ ವಾರಾಹೀ ಮಂತ್ರಗಳೂ ಶ್ರೇಷ್ಠವಾದುವು.

೮-೧೦. ಅವುಗಳಿಗಿಂತಲೂ ಶ್ರೀ ಶ್ಯಾಮಾದೇವಿಯನ್ನು ಕುರಿತ ಮಂತ್ರಗಳು ಶ್ರೇಷ್ಠತರಗಳು. ಅವುಗಳಿಗಿಂತಲೂ, ಹತ್ತು ಬಗೆಗಳಾಗಿ ವಿಂಗಡಿಸಿರುವ ಶ್ರೀಲಲಿತಾಮಂತ್ರಗಳೂ, ಆ ಲಲಿತಾಮಂತ್ರ ಗಳಲ್ಲಿಯೂ, ಎರಡು ಮಂತ್ರರಾಜಗಳು ಉತ್ತಮವಾದುವು. ಅವೇ ಲೋಪಾಮುದ್ರಾ, ಕಾಮರಾಜಗಳೆಂದು ಪ್ರಸಿದ್ಧಿಹೊಂದಿವೆ. ಅವುಗಳಲ್ಲಿ ಹಾದಿವಿದ್ಯೆಯು ಲೋಪಾಮುದ್ರಾ ಎಂತಲೂ, ಕಾದಿವಿದ್ಯೆಯು ಕಾಮ

ಹಾದಿಕಾದ್ಯೋರ್ಮಂತ್ರಯೋಸ್ತು ಭೇದೋ ವರ್ಣತ್ರಯೋದ್ಭವಃ ।
ತಯೋಸ್ತು ಕಾಮರಾಜೋಽಯಂ ಸಿದ್ಧಿದೋ ಭಕ್ತಿಶಾಲಿನಾಮ್ ॥
ಶಿವೇನ ಶಕ್ತ್ಯಾ ಕಾಮೇನ ಶಕ್ತ್ಯಾ ಚೈವ ತು ಮಾಯಯಾ ।
ಹಂಸೇನ ಭೃಗುಣಾಚೈವ ಕಾಮೇನ ಶಶಿಮೌಲಿನಾ ॥ ೧೨ ॥
ಶಕ್ರೇಣ ಭುವನೇಶೇನ ಚಂದ್ರೇಣ ಚ ಮನೋಭುವಾ ।
ಕ್ಷಿತ್ಯಾ ಹೃಲ್ಲೇಖಯಾ ಚೈವ ಪ್ರೋಕ್ತೋ ಹಂಸಾದಿಮಂತ್ರರಾಟ್॥
ಕಾಮಾದಿ ಮಂತ್ರರಾಜಸ್ತು ಸ್ಮರಯೋನಿಶ್ರಿಯೋ ಮುಖೇ ॥ ೧೩ ॥
ಪಂಚತ್ರಿಕಮಹಾವಿದ್ಯಾಂ ಲಲಿತಾಂಬಾಪ್ರಮಾದಿಕಾಮ್ ।
ಯೇ ಜಪಂತಿ ಮಹಾಭಾಗಾಸ್ತೇಷಾಂ ಸರ್ವತ್ರ ಸಿದ್ಧಯಃ ॥ ೧೪ ॥
ಸದ್ಗುರೋಸ್ತು ಮನುಂ ಪ್ರಾಪ್ಯತ್ರಿಪಂಚಾರ್ಣಪರಿಷ್ಕೃತಮ್ ।
ಸಮ್ಯಕ್ಸಂಸಾಧಯೇದ್ವಿದ್ವಾನ್ ವಕ್ಷ್ಯಮಾಣ ಪ್ರಕಾರತಃ ।
ತತ್ಕ್ರಮಂ ತು ಪ್ರವಕ್ಷ್ಯಾಮಿ ಸಾವಧಾನೋ ಮುನೇ ಶೃಣು ॥೧೫॥

---

ರಾಜವೆಂತಲೂ ತಿಳಿಯಬೇಕು. ಕಾಮರಾಜವು ಹಂಸಾದಿವಾಚ್ಯವು. ಸ್ಮರಾದಿ ವಾಚ್ಯವಾದುದು ಶ್ರೀ ಲಲಿತಾಂಬಾ ಮಂತ್ರವು.

೧೧-೧೩. ಎಲೈ ಮುನಿಯೇ! ಈ ಹಾದಿ ಕಾದಿ ಮಂತ್ರಗಳಿಗಿರುವ ಭೇದವು ಮೂರು ವರ್ಣಗಳಿಂದುಂಟಾಗಿದೆ. ಅವೆರಡರಲ್ಲಿ ಕಾಮರಾಜ ಮಂತ್ರವು ಭಕ್ತಿಶಾಲಿಗಳಾದವರಿಗೆ ಸಿದ್ಧಿಪ್ರದವಾದುದು. ಶಿವ-ಶಕ್ತಿ, ಕಾಮ-ಶಕ್ತಿ, ಮಾಯಾ, ಹಂಸ, ಭೃಗು, ಕಾಮ, ಶಶಿಮೌಳಿ, ಶಕ್ರ, ಭುವನೇಶ, ಚಂದ್ರ, ಮನೋಭೂ, ಕ್ಷಿತಿ, ಹೃಲ್ಲೇಖಾ—ಇವುಗಳಿಂದ ಕೂಡಿ ಹಂಸಾದಿಯಾಗಿರುವುದೇ ಹಾದಿವಿದ್ಯೆಯ ಪ್ರಕಾರವು. ಕಾಮಾದಿ ಮಂತ್ರರಾಜವಾದ ಕಾದಿವಿದ್ಯೆಯಾದರೋ ಸ್ಮರಯೋನಿ, ಶ್ರಿಯೋ ಮುಖವಾದುದು.

೧೪-೧೫. ಯಾವ ಪುಣ್ಯಾತ್ಮರು, ಶ್ರೀ ಲಲಿತಾದೇವಿಯ ಪ್ರಮಾದಿ ಗಳಿಂದ ಕೂಡಿದ ಪಂಚದಶೀಮಹಾವಿದ್ಯೆಯನ್ನು ಜಪಿಸುತ್ತಾರೆಯೋ ಅವರಿಗೆ ಎಲ್ಲೆಡೆಗಳಲ್ಲಿಯೂ ಎಲ್ಲ ಸಿದ್ಧಿಗಳೂ ತಾವಾಗಿಯೇ ಲಭಿಸುತ್ತವೆ. ವಿದ್ವಾಂಸನಾದವನು ಪಂಚದಶವರ್ಣಸಮನ್ವಿತವಾದ ಈ ಮಹಾಮಂತ್ರ ವನ್ನು ಸದ್ಗುರುವಿನಿಂದ ಪಡೆದು ಮುಂದೆ ಹೇಳುವ ಕ್ರಮದಲ್ಲಿ ಅದನ್ನು ಚೆನ್ನಾಗಿ ಸಾಧನೆಮಾಡಬೇಕು. ಎಲೈ ಮುನಿಯೇ! ಆ ಸಾಧನೆಯ ಕ್ರಮವನ್ನು ಹೇಳುವೆನು. ಸಾವಧಾನವಾಗಿ ಕೇಳು:

ಪ್ರಾತರುತ್ಥಾಯ ಶಿರಸಿ ಸ್ಮೃತ್ವಾ ಕಮಲ ಮುಜ್ಜ್ವಲಮ್ ।
ಸಹಸ್ರಪತ್ರಶೋಭಾಢ್ಯಂ ಸಕೇಸರ ಸುಕರ್ಣಿಕಾಮ್ ॥ ೧೬ ॥
ತತ್ರ ಶ್ರೀಮದ್ಗುರುಂ ಧ್ಯಾತ್ವಾ ಪ್ರಸನ್ನಂ ಕರುಣಾಮಯಮ್ ।
ತತೋ ಬಹಿರ್ವಿನಿರ್ಗತ್ಯ ಕುರ್ಯಾ ಚ್ಛೌಚಾದಿಕಾಃ ಕ್ರಿಯಾಃ ।
ಅಥಾಗತ್ಯ ಚ ತೈಲೇನ ಸಾಮೋದೇನ ವಿಲೇಪಿತಃ ।
ಉದ್ವರ್ತಿತಶ್ಚ ಸುಸ್ನಾತಃ ಶುದ್ಧೇನೋಷ್ಣೇನ ವಾರಿಣಾ ॥ ೧೮ ॥
ಆಪಃ ಸ್ವಭಾವತೋ ಮೇಧ್ಯಾಃ ಕಿಂಪುನರ್ವಹ್ನಿ ಸಂಯುತಾಃ ।
ತಸ್ಮಾದುಷ್ಣೋದಕೇ ಸ್ನಾಯಾತ್ತದಭಾವೇ ಯಥೋದಕಮ್ ।
ಪರಿಧಾಯ ಪಟೌ ಶುದ್ಧೌ ಕೌಸುಂಭೌ ವಾಥವಾರುಣೌ । ॥ ೨೦॥
ಆಚಮ್ಯ ಪ್ರಯತೋ ವಿದ್ವಾನ್ ಹೃದಿ ಧ್ಯಾಯನ್ ಪರಾಂಬಿಕಾಮ್॥
ಊರ್ಧ್ವಪುಂಡ್ರಂ ತ್ರಿಪುಂಡ್ರಂ ವಾ ಪಟ್ಟವರ್ಧನಮೇವ ವಾ ।
ಅಗಸ್ತ್ಯಪತ್ರಾಕಾರಂ ವಾ ಧೃತ್ವಾ ಫಾಲೇ ಯಥೋಚಿತಮ್॥ ೨೧ ॥

---

೧೬-೧೭. ಸಾಧಕನಾದವನು ಪ್ರಾತಃಕಾಲದಲ್ಲೆದ್ದು ಸಹಸ್ರದಳ ಸಹಿತವಾದುದುದೂ, ಕೇಸರ ಕರ್ಣಿಕೆಗಳೊಡಗೂಡಿದುದೂ ಆಗಿ ಶಿರಸ್ಸಿನಲ್ಲಿ ನೆಲಸಿರುವ ಉಜ್ವಲ ಕಮಲವನ್ನು ಧ್ಯಾನಿಸಿ ಆ ತರುವಾಯ ಪ್ರಸನ್ನನೂ ಕರುಣಾಮಯನೂ ಆದ ಶ್ರೀ ಸದ್ಗುರುವಿನ ಧ್ಯಾನವನ್ನು ಮಾಡಿ ಆ ಬಳಿಕ ಹೊರಗೆ ಬಂದು ಶೌಚಾದಿಕ್ರಿಯೆಗಳನ್ನು ಮಾಡತಕ್ಕುದು.

೧೮-೧೯. ಹೀಗೆ ಶೌಚಾದಿ ಕ್ರಿಯೆಗಳನ್ನು ಮುಗಿಸಿ ಬಂದು ಪರಿಮಳ ತೈಲವನ್ನು ಮೈಗೆ ಲೇಪಿಸಿ ಉದ್ವರ್ತನೆಮಾಡಿಕೊಂಡು ಶುದ್ಧವೂ, ಬಿಸಿಯೂ ಆದ ನೀರಿನಿಂದ ಸ್ನಾನಮಾಡಬೇಕು. ಎಲೈ ಮುನಿಯೇ! ಜಲವು ಸ್ವಾಭಾವಿಕವಾಗಿಯೇ ಪರಿಶುದ್ಧವಾದುದು. ಅದು ಅಗ್ನಿಯೊಡಗೂಡಿದರೆ ಹೇಳತಕ್ಕುದೇನಿದೆ. ಆದುದರಿಂದಲೇ ಬಿಸಿನೀರಿನಲ್ಲಿ ಸ್ನಾನಮಾಡಬೇಕು. ಅದಿಲ್ಲದಿದ್ದರೆ ತಣ್ಣೀರೇ ಆಗಬಹುದು.

೨೦-೨೩. ಆಮೇಲೆ ಪರಿಶುದ್ಧವಾದ ಕೌಸುಂಭವಸ್ತ್ರಗಳನ್ನೋ, ಅರುಣ ದುಕೂಲಗಳನ್ನೋ ಉಟ್ಟುಕೊಂಡು ಸ್ಥಿರಚಿತ್ತನಾಗಿ ಭಕ್ತಿಯಿಂದ ಪರಾಂಬಿಕೆಯನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ, ಊರ್ಧ್ವಪುಂಡ್ರವನ್ನೋ, ತ್ರಿಪುಂಡವನ್ನೋ ಅಥವ ಪಟ್ಟವರ್ಧನವನ್ನೋ ಅಥವಾ ಅಗಸ್ತ್ಯ ಪತ್ರಾಕಾರವಾಗಿಯೋ ಫಾಲದಲ್ಲಿ ಭಸ್ಮವನ್ನು ತಾಳಿ, ಕರ್ಪೂರ ಕಸ್ತೂರೀ ಚಂದನವನ್ನು ಲೇಪಿಸಿಕೊಂಡು, ಆಭರಣಾಲಂಕೃತನಾಗಿ, ರಮಣೀಯ

**ಚಾರು ಕರ್ಪೂರ ಕಸ್ತೂರೀ ಚಂದನಾದಿ ವಿಲೇಪಿತಃ ।**
**ಭೂಷಣೈರ್ಭೂಷಿತಾಂಗಶ್ಚ ಚಾರುಶೃಂಗಾರವೇಷಧೃಕ್ ॥ ೨೨ ॥**
**ಆಮೋದಕುಸುಮಸ್ರಗ್ಭಿರವತಂಸಿತಕುಂತಲಃ ।**
**ಸಂಕಲ್ಪಭೂಷಣೋ ವಾಥ ಯಥಾ ವಿಭವಭೂಷಣಃ ॥**
**ಅಂತರ್ಬಹಿಶ್ಚ ಶುದ್ಧಾತ್ಮಾ ಸಂಧ್ಯಾವಂದನಮಾಚರೇತ್ ॥ ೨೩ ॥**
**ಅಶ್ವತ್ಥಪತ್ರಾಕಾರೇಣ ಪಾತ್ರೇಣ ಸಕುಶಾಕ್ಷತಮ್ [೨೪ ॥**
**ಸಪುಷ್ಪಚಂದನಂ ಚಾರ್ಘ್ಯಂ ಮಾರ್ತಾಂಡಾಯ ಸಮುತ್ಕ್ಷಿಪೇತ್ ॥**
**ತಥಾರ್ಘ್ಯಂ ಭಾನವೇ ದತ್ವಾ ಲಲಿತಾಯಾಸ್ತ್ರಿರರ್ಘ್ಯಕಮ್ ।**
**ತರ್ಪಯಿತ್ವಾ ಯಥಾಶಕ್ತಿಮೂಲೇನ ಲಲಿತೇಶ್ವರೀಮ್ ॥ ೨೫ ॥**
**ದೇವರ್ಷಿಪಿತೃವರ್ಗಾಂಶ್ಚ ತರ್ಪಯಿತ್ವಾ ವಿಧಾನತಃ ।**
**ಮೌನೀ ವಿಶುದ್ಧಹೃದಯಃ ಪ್ರವಿಶ್ಯಮುಖಮಂದಿರಮ್ ॥ ೨೬ ॥**
**ನ್ಯಾಸಖಂಡೇ ವಕ್ಷ್ಯಮಾಣಾನ್ ಕೃತ್ವಾ ನ್ಯಾಸಾನನುಕ್ರಮಾತ್ ।**
**ಮೃದ್ವಾಸನೇ ಸಮಾಸೀನೋ ಧ್ಯಾಯೇಚ್ಛ್ರೀನಗರಂ ಮಹತ್ ॥ ೨೭ ॥**
**ನಾನಾವೃಕ್ಷಮಹೋದ್ಯಾನಮಾರಭ್ಯ ಲಲಿತಾವಧಿ ।**
**ಧ್ಯಾಯೇಚ್ಛ್ರೀನಗರಂ ದಿವ್ಯಮಬಹಿರ್ಮಾನಸಃ ಶುಚಿಃ ॥ ೨೮ ॥**

---

ವಾದ ಶೃಂಗಾರವೇಷವುಳ್ಳವನಾಗಿ, ಸುವಾಸನಾಭರಿತವಾದ ಕುಸುಮಗಳನ್ನು ಮುಡಿಯಲ್ಲಿ ಮುಡಿದುಕೊಳ್ಳಬೇಕು. ಸಾಧಕನು ತನ್ನ ಸಂಕಲ್ಪದಂತೆಯಾದರೂ ಭೂಷಣಗಳನ್ನು ತಾಳಬಹುದು. ಇದಾದ ತರುವಾಯ ಒಳಗೂ ಹೊರಗೂ ಪರಿಶುದ್ಧನಾಗಿ ಶುದ್ಧ ಮನಸ್ಸಿನಿಂದ ಸಂಧ್ಯಾವಂದನೆಯನ್ನು ಆಚರಿಸಬೇಕು.

೨೪-೨೮. ಆ ಬಳಿಕ, ಅಶ್ವತ್ಥಪತ್ರದ ಆಕಾರವಿರುವ ಪಾತ್ರೆಯಲ್ಲಿ, ಕುಶ, ಅಕ್ಷತೆ, ಪುಷ್ಪ, ಚಂದನಗಳಿಂದ ಮಿಶ್ರವಾದ ಅರ್ಘ್ಯವನ್ನು ಸೂರ್ಯನಿಗೆ ಕೊಡತಕ್ಕುದು. ಇದಾದಮೇಲೆ ಮೂಲ ಮಂತ್ರದಿಂದ ಯಥಾಶಕ್ತಿಯಾಗಿ ಮೂರಾವೃತ್ತಿ ಶ್ರೀ ಲಲಿತಾಪರಮೇಶ್ವರಿಗೆ ಅರ್ಘ್ಯವನ್ನಿತ್ತ ತರುವಾಯ ಶಾಸ್ತ್ರೋಕ್ತವಾಗಿ ದೇವ, ಋಷಿ, ಪಿತೃಗಳಿಗೆ ತರ್ಪಣವನ್ನು ಕೊಟ್ಟು ಮೌನಿಯೂ, ಪರಿಶುದ್ಧಮಾನಸನೂ ಆಗಿ ಜಪಗೃಹಕ್ಕೆ ಹೋಗಿ ನ್ಯಾಸಖಂಡದಲ್ಲಿ ಹೇಳಿರುವ ನ್ಯಾಸಗಳೆಲ್ಲವನ್ನೂ ಕ್ರಮವಾಗಿ ಮಾಡಿದ ಬಳಿಕ ಮೃದುವಾದ ಆಸನದಲ್ಲಿ ಕುಳಿತು ಮಹತ್ತರವಾದ ಶ್ರೀನಗರವನ್ನು ಧ್ಯಾನಿಸಬೇಕು. ಅಯ್ಯಾ ಮುನಿಯೇ! ಸಾಧಕನು

ಪೂಜಾಖಂಡೋಕ್ತಮಾರ್ಗೇಣ ಪೂಜಾಂ ಕೃತ್ವಾ ವಿಚಕ್ಷಣಃ ।
ಅಕ್ಷಮಾಲಾಂ ಸಮಾದಾಯ ಚಂದ್ರಕಸ್ತೂರಿವಾಸಿತಾಮ್ ॥೨೯॥
ಉದಙ್ಮುಖಃ ಪ್ರಾಙ್ಮುಖೋ ವಾ ಜಪೇತ್ ಸಿಂಹಾಸನೇಶ್ವರೀಮ್ ।
ಷಟ್ತ್ರಿಂಶಲ್ಲಕ್ಷಸಂಖ್ಯಾ ತು ಜಪೇದ್ವಿದ್ಯಾಂ ವಿಚಕ್ಷಣಃ ॥ ೩೦ ॥
ತದ್ದಶಾಂಶಸ್ತು ಹೋಮಃ ಸ್ಯಾತ್ತದ್ದಶಾಂಶಸ್ತು ತರ್ಪಣಮ್ ।
ತದ್ದಶಾಂಶಂ ಬ್ರಾಹ್ಮಣಾನಾಂ ಭೋಜನಂ ಸಮುದೀರಿತಂ ॥ ೩೧ ॥
ಏವಂ ಸಂಸಿದ್ಧಮಂತ್ರಸ್ತು ಕುರ್ಯಾತ್ಕಾಮ್ಯಜಪಂ ಪುನಃ ।
ಲಕ್ಷಮಾತ್ರಂ ಜಪಿತ್ವಾ ತು ಮನುಷ್ಯಾನ್ ವಶ್ಯಮಾನಯೇತ್ ॥೩೨॥
ಲಕ್ಷದ್ವಿತಯಜಾಪೇನ ನಾರೀಃ ಸರ್ವಾ ವಶಂ ನಯೇತ್ ।
ಲಕ್ಷತ್ರಿತಯಜಾಪೇನ ಸರ್ವಾನ್ವಶಯತೇ ನೃಪಾನ್ ॥ ೩೩ ॥
ಚತುರ್ಲಕ್ಷ ಜಪೇ ಜಾತೇ ಕ್ಷುಭ್ಯಂತಿ ಫಣಿಕನ್ಯಕಾಃ ।
ಪಂಚಲಕ್ಷಜಪೇ ಜಾತೇ ಸರ್ವೇ ಪಾತಾಲಯೋಷಿತಃ ॥ ೩೪ ॥

---

ಪರಿಶುದ್ಧನಾಗಿ ತದೇಕಾಯತ್ತಚಿತ್ತದಿಂದ, ನಾನಾವೃಕ್ಷೋದ್ಯಾನ ಮೊದಲುಗೊಂಡು ಶ್ರೀಲಲಿತಾದೇವಿಯವರೆಗೂ ದಿವ್ಯವಾದ ಶ್ರೀನಗರವನ್ನು ಧ್ಯಾನಿಸತಕ್ಕದ್ದು.

೨೯-೩೧. ಹೀಗೆ ಧ್ಯಾನಿಸಿದ ಮೇಲೆ, ಪೂಜಾಖಂಡದಲ್ಲಿ ಹೇಳಿರುವ ಪ್ರಕಾರ ಶ್ರೀಮಹಾದೇವಿಯನ್ನರ್ಚಿಸಿ, ಬಳಿಕ ಕಸ್ತೂರೀಚಂದನಗಳಿಂದ ಸುವಾಸಿತವಾದ ಅಕ್ಷಮಾಲಿಕೆಯನ್ನು ತೆಗೆದುಕೊಂಡು ಉತ್ತರಾಭಿಮುಖವಾಗಿಯೋ, ಪೂರ್ವಾಭಿಮುಖವಾಗಿಯೋ ಕುಳಿತು ಶ್ರೀಮತ್ಸಿಂಹಾಸನೇಶ್ವರಿಯ ಮೂಲಮಂತ್ರವನ್ನು ಮೂವತ್ತಾರು ಲಕ್ಷ ಸಲ ಜಪಿಸತಕ್ಕದು. ಅದರಲ್ಲಿ ಹತ್ತನೆಯ ಒಂದು ಭಾಗವು ಹೋಮವೆಂತಲೂ, ಅದರಲ್ಲಿ ಹತ್ತನೆಯ ಒಂದು ಭಾಗವು ತರ್ಪಣವೆಂತಲೂ, ಅದರಲ್ಲಿ ಹತ್ತನೆಯ ಒಂದು ಭಾಗವು ಬ್ರಾಹ್ಮಣ ಭೋಜನವೆಂತಲೂ ಹೇಳಿದೆ.

೩೨-೩೪. ಹೀಗೆ ಜಪವೆಸಗಿದ ತರುವಾಯ ಮಂತ್ರಸಿದ್ಧಿಯಾದ ಸಾಧಕನು ಕಾಮ್ಯ (ಫಲಕ್ಕಾಗಿ) ಜಪವನ್ನು ಮಾಡಬೇಕು. ಒಂದು ಲಕ್ಷ ಜಪವನ್ನು ಮಾಡಿದರೆ ಜಾಪಕನು ಮನುಷ್ಯರೆಲ್ಲರನ್ನೂ ವಶಪಡಿಸಿಕೊಳ್ಳುತ್ತಾನೆ. ಎರಡು ಲಕ್ಷ ಜಪಮಾಡಿದರೆ ಸ್ತ್ರೀಯರೆಲ್ಲರನ್ನೂ ವಶಪಡಿಸಿಕೊಳ್ಳುವನು. ಮೂರು ಲಕ್ಷ ಜಪಿಸಿದರೆ ನಾಗಕನ್ನಿಕೆಯರೆಲ್ಲರೂ

**ಭೂಲೋಕಸುಂದರೀವರ್ಗೋ ವಶ್ಯಃ ಷಲ್ಲಕ್ಷಜಾಪತಃ ।**
**ಕ್ಷುಭ್ಯಂತಿ ಸಪ್ತಲಕ್ಷೇಣ ಸ್ವರ್ಗಲೋಕಮೃಗೀದೃಶಃ ॥ ೩೫ ॥**
**ದೇವಯೋನಿಭವಾಃ ಸರ್ವೇಽಪ್ಯಷ್ಟಲಕ್ಷ ಜಪಾದ್ವಶಾಃ ।**
**ನವಲಕ್ಷೇಣ ಗೀರ್ವಾಣಾನಖಿಲಾನ್ವಶಮಾನಯೇತ್ ॥ ೩೬ ॥**
**ದಶಲಕ್ಷೇಣ ಶಕ್ರಾದಿ ದಿಕ್ಪಾಲಾನ್ವಶಮಾನಯೇತ್ ।**
**ಲಕ್ಷೈಕಾದಶ ಜಾಪೇನ ಬ್ರಹ್ಮ ವಿಷ್ಣು ಮಹೇಶ್ವರಾನ್ ॥ ೩೭ ॥**
**ಲಕ್ಷದ್ವಾದಶಜಾಪೇನ ಸಿದ್ಧೀರಷ್ಟೌ ವಶಂ ನಯೇತ್ ।**
**ಇಂದ್ರಸ್ಯೇಂದ್ರತ್ವಮೇತೇನ ಮಂತ್ರೇಣ ಹ್ಯಭವತ್ಪುರಾ ॥ ೩೮ ॥**
**ವಿಷ್ಣೋರ್ವಿಷ್ಣುತ್ವಮೇತೇನ ಶಿವಸ್ಯ ಶಿವತಾಮುನಾ ।**
**ಇಂದೋಶ್ಚಂದ್ರತ್ವಮೇತೇನ ಭಾನೋರ್ಭಾಸ್ವರತಾ ಮುನೇ ॥ ೩೯ ॥**
**ಸರ್ವೇಷಾಮಪಿ ದೇವಾನಾಂ ತಾಸ್ತಾಃ ಸಿದ್ಧಯ ಉಜ್ಜ್ವಲಾಃ ।**
**ಅನೇನ ಮಂತ್ರರಾಜೇನ ಜಾತಾ ಇತ್ಯವಧಾರಯ ॥ ೪೦ ॥**

---

ಕ್ಷೋಭೆಗೊಳ್ಳುವರು. ಐದು ಲಕ್ಷ ಜಪಿಸಿದರೆ ಪಾತಾಳಲೋಕವಾಸಿಗಳಾದ ಸ್ತ್ರೀಯರೆಲ್ಲರೂ ವಶರಾಗುತ್ತಾರೆ.

೩೫-೩೬. ಆರು ಲಕ್ಷ ಜಪವೆಸಗಿದಲ್ಲಿ ಭೂಲೋಕ ಸುಂದರಿಯರ ಸಮೂಹವೆಲ್ಲವೂ ವಶವಾಗುವುದು. ಏಳು ಲಕ್ಷ ಜಪದಿಂದ ಸ್ವರ್ಗ ಸುಂದರಿಯರೆಲ್ಲರೂ ಕ್ಷೋಭೆಗೊಳ್ಳುವರು. ಎಂಟು ಲಕ್ಷ ಜಪ ಮಾಡಿದರೆ ದೇವ ಯೋನಿಗಳಾದ ನಾರಿಯರೆಲ್ಲರೂ ವಶವಾಗುತ್ತಾರೆ. ಒಂಬತ್ತು ಲಕ್ಷ ಜಪ ಮಾಡಿದುದಾದರೆ ಸಮಸ್ತ ದೇವತೆಗಳನ್ನೂ ವಶಪಡಿಸಿಕೊಳ್ಳಬಹುದು.

೩೭-೪೦. ಹತ್ತು ಲಕ್ಷ ಜಪವನ್ನು ಮಾಡುವುದರಿಂದ ಸಾಧಕನು ಇಂದ್ರನೇ ಮೊದಲಾದ ದಿಕ್ಪಾಲಕರನ್ನು ವಶಪಡಿಸಿಕೊಳ್ಳುವನು. ಹನ್ನೊಂದು ಲಕ್ಷ ಜಪದಿಂದ ಬ್ರಹ್ಮ ವಿಷ್ಣು ಮಹೇಶ್ವರರನ್ನು ವಶಪಡಿಸಿಕೊಳ್ಳಬಹುದು. ಹನ್ನೆರಡು ಲಕ್ಷ ಜಪ ಮಾಡುವುದರಿಂದ ಅಷ್ಟಸಿದ್ಧಿಗಳೂ ವಶವಾಗುತ್ತವೆ. ಅಯ್ಯಾ ಮುನಿಯೇ! ಈ ಮಂತ್ರ ಜಪದ ಫಲವಾಗಿಯೇ ಇಂದ್ರನಿಗೆ ಇಂದ್ರತ್ವವು ಲಭಿಸಿತು. ವಿಷ್ಣುವು ವಿಷ್ಣುತ್ವವನ್ನು ಪಡೆದುದೂ ಇದರಿಂದಲೇ. ಇದರಿಂದಲೇ ಶಿವನೂ ಶಿವತ್ವವನ್ನು ಪಡೆದನು. ಇಷ್ಟೇಯಲ್ಲದೆ ಸಮಸ್ತ ದೇವತೆಗಳಿಗೂ ಆಯಾ ಉಜ್ವಲ ಸಿದ್ಧಿಗಳು ಲಭಿಸಿದುದೂ ಈ ಮಂತ್ರರಾಜದ ಜಪದಿಂದಲೇ ಎಂದು ತಿಳಿ.

ಯ ಏತನ್ಮಂತ್ರಜಾಪೀ ತು ಸರ್ವಪಾಪವಿವರ್ಜಿತಃ ।
ತ್ರೈಲೋಕ್ಯಸುಂದರಾಕಾರೋ ಮನ್ಮಥೇನ ಸಮಾಕೃತಿಃ ॥ ೪೧ ॥
ಸರ್ವಾಭಿಃ ಸಿದ್ಧಿಭಿರ್ಯುಕ್ತಃ ಸರ್ವಜ್ಞಃ ಸರ್ವಪೂಜಿತಃ ।
ದರ್ಶನಾದೇವ ಸರ್ವೇಷಾಮಂತರಾನಂದಪೂರಕಃ ॥ ೪೨ ॥
ವಾಚಾ ವಾಚಸ್ಪತಿಸಮಃ ಶ್ರಿಯಾ ಶ್ರೀಪತಿಸನ್ನಿಭಃ ।
ಬಲೇ ಮರುತ್ಸಮಾನಃ ಸ್ಯಾತ್ ಸ್ಥಿರತ್ವೇ ಹಿಮವಾನಿವ ॥ ೪೩ ॥
ಔನ್ನತ್ಯೇ ಮೇರುತುಲ್ಯಃ ಸ್ಯಾದ್ಗಾಂಭೀರ್ಯೇಣ ಮಹಾರ್ಣವಃ ।
ಕ್ಷಣಾತ್ ಕ್ಷೋಭಕರೋ ಮರ್ತ್ಯಾ ಗ್ರಾಮಪಲ್ಲೀಪುರಾದಿಷು ॥
ಈಷದ್ಭ್ರೂಭಂಗಮಾತ್ರೇಣ ಸ್ತಂಭಕೋ ಜೃಂಭಕಸ್ತಥಾ ।
ಉಚ್ಚಾಟಕೋ ಮೋಹಕಶ್ಚ ಮಾರಕೋ ದುಷ್ಟಚೇತಸಾಮ್ ।
ಕ್ರುದ್ಧಃ ಪ್ರಸೀದತಿ ಹಠಾತ್ತಸ್ಯದರ್ಶನಹರ್ಷಿತಃ ॥ ೪೫ ॥

---

೪೧-೪೪. ಯಾವನು ಈ ಮಂತ್ರವನ್ನು ಜಪಿಸಿ ಸಿದ್ಧಿಯನ್ನು ಪಡೆದಿರುತ್ತಾನೆಯೋ ಅವನು ಎಲ್ಲ ಪಾಪಗಳಿಂದಲೂ ಬಿಡುಗಡೆಯಾಗಿ ಮೂರು ಲೋಕಗಳಿಗೂ ಸುಂದರಾಕಾರನಾಗಿ, ಮನ್ಮಥನಿಗೆ ಸಮಾನವಾದ ಆಕೃತಿಯುಳ್ಳವನಾಗುತ್ತಾನೆ. ಅವನು ಸಮಸ್ತ ಸಿದ್ಧಿಗಳನ್ನೂ ಪಡೆದು ಸರ್ವಜ್ಞನೂ, ಸರ್ವಪೂಜಿತನೂ ಆಗಿ, ನೋಡಿದ ಮಾತ್ರದಿಂದಲೇ ಎಲ್ಲರ ಮನಸ್ಸಿಗೂ ಆನಂದವನ್ನು ತುಂಬುವವನಾಗುವನು. ಇಷ್ಟೆಯಲ್ಲದೆ ಮಾತಿನಲ್ಲಿ ಬೃಹಸ್ಪತಿಗೂ, ಸಂಪತ್ತಿನಲ್ಲಿ ಶ್ರೀಪತಿಗೂ, ಬಲದಲ್ಲಿ ದೇವೇಂದ್ರನಿಗೂ, ಸ್ಥೈರ್ಯದಲ್ಲಿ ಹಿಮವಂತನಿಗೂ, ಔನ್ನತ್ಯದಲ್ಲಿ ಮೇರುಪರ್ವತಕ್ಕೂ, ಗಾಂಭೀರ್ಯದಲ್ಲಿ ಮಹಾಸಮುದ್ರಕ್ಕೂ, ಸಮಾನನಾಗುವುದಲ್ಲದೆ ಗ್ರಾಮ, ಹಳ್ಳಿ, ಪಟ್ಟಣ ಮುಂತಾದ ಯಾವ ಪ್ರದೇಶಕ್ಕೆ ಹೋದರೂ ಅಲ್ಲಿಯವರನ್ನು ತನ್ನ ರೂಪಿನಿಂದಲೇ ಒಂದು ಕ್ಷಣಮಾತ್ರದಲ್ಲಿ ವಶಪಡಿಸಿಕೊಳ್ಳುತ್ತಾನೆ.

೪೫. ಅಯ್ಯಾ ತಪೋಧನನೇ! ಶ್ರೀಮಂತ್ರಜಾಪಕನಾದವನು ಒಂದು ಸಲ ಹುಬ್ಬುಕೊಂಕಿಸುವುದರಿಂದಲೇ ಸಮಸ್ತ ದುಷ್ಟಪ್ರಾಣಿಗಳನ್ನೂ ಭೂತಪ್ರೇತ ಪಿಶಾಚಗಳನ್ನೂ ಸ್ತಂಭನಗೊಳಿಸುವವನೂ, ಜೃಂಭನಗೊಳಿಸುವವನೂ, ಹೊಡೆದಟ್ಟುವವನೂ, ಮೂರ್ಛೆಗೊಳಿಸುವವನೂ, ಮೃತಿಯೊಂದಿಸುವವನೂ ಆಗುತ್ತಾನೆ. ಕನಲಿರುವ ಯಾವನಾದರೂ ಸರಿಯೇ ಆತನನ್ನು ಕಂಡೊಡನೆಯೇ ಪ್ರಸನ್ನನಾಗುತ್ತಾನೆ.

**ಅಷ್ಟಾದಶಸು ವಿದ್ಯಾಸು ನಿರೂಢಿಮಧಿಗಚ್ಛತಿ ।**
**ಮಂದಾಕಿನೀಪಯಃಪೂರ ಮಧುರಾ ತಸ್ಯ ಭಾರತೀ ॥ ೪೬ ॥**
**ನತಸ್ಯಾವಿದಿತಂ ಕಿಂಚಿತ್ಸರ್ವಶಾಸ್ತ್ರೇಷು ಕುಂಭಜ ।**
**ದರ್ಶನಾನಿ ಚ ಸರ್ವಾಣಿ ಕರ್ತುಂ ಖಂಡಯಿತುಂ ಪಟುಃ ॥**
**ತತ್ವಂ ಜಾನಾತಿ ನಿಖಿಲಂ ಸಾರ್ವಜ್ಞಂ ಚಾಧಿಗಚ್ಛತಿ ॥ ೪೭ ॥**
**ಸದಾ ದಯಾರ್ದ್ರಂ ಹೃದಯಂ ತಸ್ಯ ಸರ್ವೇಷು ಜಂತುಷು ।**
**ತತ್ಕೋಪಾಗ್ನೇರ್ವಿಷಯತಾಂ ಗಂತುಂನಾಲಂ ಜಗತ್ರಯಮ್॥ ೪೮॥**
**ಅರಣ್ಯೇ ಪತ್ತನೇ ವಾಪಿ ದೇವಾಲಯಮಠೇಷು ವಾ ।**
**ಯತ್ರ ಕುತ್ರಾಪಿ ತಿಷ್ಠಂತಂ ತಂ ಧಾವಂತಿ ಮೃಗೀದೃಶಃ ॥ ೪೯ ॥**
**ವಾತ್ಯಾಹತಂ ಯಥಾ ಪಾಂಡು ಪತ್ರಂ ಭ್ರಮತಿ ಭೂತಲೇ ।**
**ತದ್ವದ್ಭ್ರಮಂತಿ ಚಿತ್ತಾನಿ ದರ್ಶನೇ ತಸ್ಯ ಸುಭ್ರುವಾಮ್ ॥ ೫೦ ॥**

---

೪೬-೪೭. ಶ್ರೀಮಂತ್ರಜಾಪಕನು ಹದಿನೆಂಟು ವಿದ್ಯೆಗಳಲ್ಲಿಯೂ ಪ್ರೌಢಿಮೆಯನ್ನು ಪಡೆಯುತ್ತಾನೆ. ಅವನ ಮಾತುಗಳು ಮಂದಾಕಿನೀ (ಗಂಗಾ) ನದಿಯ ಜಲಪ್ರವಾಹದಂತೆ ಬಹು ಮಧುರವಾಗಿರುತ್ತವೆ. ಅವನಿಗೆ ಎಲ್ಲ ಶಾಸ್ತ್ರಗಳಲ್ಲಿಯೂ ತಿಳಿಯದಿರುವುದು ಏನೂ ಇರುವುದಿಲ್ಲ. ಅವನು ಸಮಸ್ತ ದರ್ಶನ (ಶಾಸ್ತ್ರ)ಗಳನ್ನು ನಿರ್ಮಾಣಮಾಡುವುದಕ್ಕೂ, ಅವುಗಳನ್ನು ಖಂಡಿಸುವುದಕ್ಕೂ ಸಮರ್ಥನಾಗಿರುತ್ತಾನೆಯಲ್ಲದೆ ಅವನಿಗೆ ಎಲ್ಲ ತತ್ವಗಳೂ ಗೊತ್ತಿರುತ್ತವೆ; ಅವನು ಸರ್ವಜ್ಞತ್ವವನ್ನೂ ಪಡೆಯುತ್ತಾನೆ.

೪೮-೫೦. ಅಯ್ಯಾ ಕುಂಭೋದ್ಭವನೇ! ಶ್ರೀ ವಿದ್ಯೋಪಾಸಕನ ಮನಸ್ಸು ಸಮಸ್ತ ಪ್ರಾಣಿಗಳ ವಿಷಯದಲ್ಲಿಯೂ ದಯೆಯೊಡಗೂಡಿರುತ್ತದೆ. ಅವನ ಕೋಪಾಗ್ನಿಗೆ ಸಿಕ್ಕಿ ಮೂರು ಲೋಕಗಳಾದರೂ ತಪ್ಪಿಸಿಕೊಳ್ಳಲಾರವು. ಅವನು ಅರಣ್ಯದಲ್ಲಿಯೋ, ಪಟ್ಟಣದಲ್ಲಿಯೋ, ದೇವಾಲಯದಲ್ಲಿಯೋ, ಮಠದಲ್ಲಿಯೋ ಎಲ್ಲಿಯೇ ಇರಲಿ; ಅವನನ್ನು ಸುಂದರಿಯರಾದ ಲಲನೆಯರು ಹುಡುಕಿಕೊಂಡು ಬರುತ್ತಾರೆ. ಗಾಳಿಗೆ ಹೊಡೆದುಕೊಂಡು ಬಂದು ಗಿರ್ರನೆ ತಿರುತಿರುಗುವ ಹಣ್ಣೆಲೆಯಂತೆ ಲಲನಾಮಣಿಯರ ಮನಸ್ಸು ಅವನನ್ನು ಕಂಡೊಡನೆಯೇ ತಳಮಳಿಸಿ ಹೋಗುತ್ತದೆ.

ವನಿತಾನನವನೀತಾನಾಂ ವಿದ್ರಾವಣಮಹಾನಲಮ್ ।
ತಂ ಸೇವಂತೇ ಸಮಸ್ತಾನಾಂ ವಿದ್ಯಾನಾಮಪಿ ಪಂಕ್ತಯಃ ॥ ೫೧ ॥
ಚಂದ್ರಾರ್ಕಮಂಡಲದ್ವಂದ್ವ ಕುಚಮಂಡಲಶೋಭಿನೀ ।
ತ್ರಿಲೋಕೀ ಲಲನಾ ತಸ್ಯ ದರ್ಶನಾದನುರಜ್ಯತೇ ।
ಅನ್ಯಾಸಾಂ ತು ವರಾಕೀಣಾಂ ಕಿಂ ವಕ್ತವ್ಯಂ ತಪೋಧನ ॥ ೫೨ ॥
ಪಟ್ಟಣೇಷು ಚ ವೀಥೀಷು ಪಾನಗೋಷ್ಠೀಷು ವೇಶ್ಮಸು ।
ಧಿಷ್ಣ್ಯೇಷು ದೇವವಾಸೇಷು ಮಠೇಷ್ವಾಶ್ರಮಧಾಮಸು ॥ ೫೩ ॥
ಅಂತಃಪುರೇಷು ಮಾರ್ಗೇಷು ಸುಪರ್ವೋಪವನೇಷು ಚ ।
ತೀರ್ಥೇಷು ಗಿರಿಕೂಟೇಷು ಗಂಗ್ಯಾದ್ಯಾಸು ನದೀಷು ಚ ॥ ೫೪ ॥
ತತ್ಕೀರ್ತಿಘೋಷಣಾ ಪುಣ್ಯಾ ಸದಾ ಘುಮಘುಮಾಯತೇ ।
ತಸ್ಯ ದರ್ಶನತಃ ಪಾಪಜಾಲಂ ನಶ್ಯತಿ ಪಾಪಿನಾಮ್ ।
ತದ್ಗುಣಾ ಏವ ಘುಷ್ಯಂತೇ ಸರ್ವತ್ರ ಕವಿ ಪುಂಗವೈಃ ॥ ೫೫ ॥
ಭಿನ್ನೈರ್ವರ್ಣೈರಾಯುಧೈಶ್ಚ ಭಿನ್ನೈರ್ವಾಹನಲಕ್ಷಣೈಃ । [ ೫೬ ॥
ಯೇ ಧ್ಯಾಯಂತಿ ಮಹಾದೇವೀಂ ತಾಸ್ತಾಃ ಸಿದ್ಧೀರ್ಭಜಂತಿ ತೇ ॥

---

೫೧-೫೨. ಅಯ್ಯಾ ತಪೋಧನನೇ! ವನಿತೆಯರೆಂಬ ಬೆಣ್ಣೆಗೆ ಬೆಂಕಿಯೋಪಾದಿಯಲ್ಲಿರುವ ಅವನನ್ನು ಸಮಸ್ತ ವಿದ್ಯೆಗಳೂ ತಾವಾಗಿಯೇ ಸೇವಿಸುತ್ತವೆ. ಅವನ ದರ್ಶನಮಾತ್ರದಿಂದ ಸೂರ್ಯಚಂದ್ರರೆಂಬ ಸ್ತನದ್ವಯವುಳ್ಳ ಜಗತ್ತ್ರಯ ಲಲನೆಯೇ ಅವನಲ್ಲಿ ಅನುರಕ್ತೆಯಾಗುವಳೆಂದ ಬಳಿಕ ಸಾಮಾನ್ಯರಾದ ಅಬಲೆಯರ ವಿಷಯದಲ್ಲಿ ಹೇಳತಕ್ಕುದೇನಿದೆ?

೫೩-೫೫. ಪಟ್ಟಣಗಳಲ್ಲಿ, ಬೀದಿಗಳಲ್ಲಿ, ಪಾನಗೋಷ್ಠಿಗಳಲ್ಲಿ, ಮನೆಗಳಲ್ಲಿ, ಅರಮನೆಗಳಲ್ಲಿ, ದೇವಾಲಯಗಳಲ್ಲಿ ಮಠಗಳಲ್ಲಿ, ಆಶ್ರಮಪ್ರದೇಶಗಳಲ್ಲಿ, ಅಂತಃಪುರಗಳಲ್ಲಿ, ರಾಜಮಾರ್ಗಗಳಲ್ಲಿ, ವನೋಪವನಗಳಲ್ಲಿ, ತೀರ್ಥ ಕ್ಷೇತ್ರಗಳಲ್ಲಿ, ಪರ್ವತಶಿಖರಗಳಲ್ಲಿ, ಗಂಗಾದಿ ನದಿಗಳಲ್ಲಿ ಎಲ್ಲೆಲ್ಲಿಯೂ ಅವನ ಕೀರ್ತಿಯ ಘೋಷವು ಯಾವಾಗಲೂ ಘುಮಘುಮಿಸುತ್ತಿರುತ್ತದೆ. ಅಯ್ಯಾ ಮುನಿಯೇ! ಅವನ ದರ್ಶನದಿಂದ ಪಾಪಿಗಳ ಪಾಪಗಳೆಲ್ಲವೂ ನಾಶವಾಗುತ್ತವೆ. ಕವಿ ಪುಂಗವರೂ ಅವನ ಸದ್ಗುಣಗಳನ್ನೇ ಕೊಂಡಾಡಿ ಮುಕ್ತಕಂಠದಿಂದ ಘೋಷಿಸುತ್ತಾರೆ.

೫೬. ಬೇರೆ ಬೇರೆ ವರ್ಣಗಳಿಂದಲೂ, ಆಯುಧಗಳಿಂದಲೂ,

**ಮನೋರಾದಿಮಖಂಡಸ್ತು ಕುಂದೇಂದುಧವಳದ್ಯುತಿಃ ।**
**ಆಹೃಚ್ಚಕ್ರಂ ಜ್ವಲಜ್ಜ್ವಾಲಶ್ಚಿಂತನೀಯಸ್ತು ಮೂಲಕೇ ॥ ೫೭ ॥**
**ಇಂದ್ರಗೋಪಕಸಂಕಾಶೋ ದ್ವಿತೀಯೋ ಮನುಖಂಡಕಃ ।**
**ವಿಭಾವನೀಯೋ ಹೃಚ್ಚಕ್ರ ಆಫಾಲಾಂತಜ್ವಲಚ್ಛಿಖಃ ॥ ೫೮ ॥**
**ಅಥ ಲಾಲಾಟಪಟ್ಟಸ್ಥದ್ವಿದಳಾಂಬುಜಕೋಟರೇ ।**
**ವಿಭಾವನೀಯಸ್ತಾರ್ತೀಯಃ ಖಂಡೋ ದುರಿತಖಂಡಕಃ ॥ ೫೯ ॥**
**ಮುಕ್ತ್ಯೈ ಧ್ಯೇಯಾ ಶಶಿಜ್ಯೋತ್ಸ್ನಾ ಧವಲಾಕೃತಿರಂಬಿಕಾ ।**
**ರಕ್ತಸಂಧ್ಯಕರೋಚಿಃ ಸ್ಯಾದ್ವಶೀಕರಣಕರ್ಮಣಿ ॥ ೬೦ ॥**
**ಕವಿತ್ವೇ ವಿಶದಾಕಾರಾ ಸ್ಫಟಿಕೋಪಲನಿರ್ಮಲಾ ।**
**ಧನಲಾಭೇ ಸುವರ್ಣಾಭಾ ಚಿಂತ್ಯತೇ ಲಲಿತಾಂಬಿಕಾ ॥ ೬೧ ॥**
**ಸರ್ವಸಂಪತ್ತಿಲಾಭೇ ತು ಶ್ಯಾಮಲಾಂಗೀ ವಿಚಿಂತ್ಯತೇ ।**
**ನೀಲಾ ಚ ಮೂಕೀಕರಣೇ ಪೀತಾ ಸ್ತಂಭನಕರ್ಮಣಿ ॥ ೬೨ ॥**
**ಆಮೂಲಮಾಬ್ರಹ್ಮಬಿಲಂ ಜ್ವಲನ್ಮಾಣಿಕ್ಯದೀಪವತ್ । [೬೩ ॥**
**ಯೇ ಧ್ಯಾಯಂತಿ ಮಹಃಪುಂಜಂ ತೇಸ್ಯುಃ ಸಂಸಿದ್ಧ ಸಿದ್ಧಯಃ ॥**

---

ಲಕ್ಷಣಗಳಿಂದಲೂ ಕೂಡಿದ ಶ್ರೀ ಲಲಿತಾಮಹಾದೇವಿಯನ್ನು ಯಾರು ಧ್ಯಾನಮಾಡುತ್ತಾರೆಯೋ ಅವರು ಆಯಾ ಸಿದ್ಧಿಗಳನ್ನು ಪಡೆಯುತ್ತಾರೆ.

೫೭-೫೯. ಶ್ರೀ ಲಲಿತಾಮಹಾಮಂತ್ರರಾಜದ ಮೊದಲನೆಯ ಖಂಡವು ಕುಂದ ಕುಸುಮದಂತೆ ಧವಳಕಾಂತಿಯುಳ್ಳುದು. ಜ್ವಲಿಸುತ್ತಿರುವ ಜ್ವಾಲೆಯುಳ್ಳ ಆ ಖಂಡವನ್ನು ಮೂಲಾಧಾರಚಕ್ರದಿಂದ ಮೊದಲುಗೊಂಡು ಹೃಚ್ಚಕ್ರದವರೆಗೂ ಭಾವಿಸಬೇಕು. ಜ್ವಲಿಸುತ್ತಿರುವ ಜ್ವಾಲೆಯುಳ್ಳ ಮಂತ್ರರಾಜದ ಎರಡನೆಯ ಖಂಡವು ಇಂದ್ರಗೋಪ ಕಾಂತಿಯುಳ್ಳುದು. ಇದನ್ನು ಹೃಚ್ಚಕ್ರದಿಂದ ಫಾಲಾಂತದವರೆಗೂ ವಿಭಾವಿಸತಕ್ಕುದು. ಇದಾದ ಬಳಿಕ ಮೂರನೆಯ ಖಂಡವು ದುರಿತ ಖಂಡವು. ಇದನ್ನು ಲಲಾಟಪಟ್ಟಣದಲ್ಲಿ ಕಂಗೊಳಿಸುತ್ತಿರುವ ದ್ವಿದಳ ಪದ್ಮದ ಕೋಟರದಲ್ಲಿ ವಿಭಾವಿಸಬೇಕು.

೬೦-೬೪. ಮುಕ್ತಿಯನ್ನು ಪಡೆಯಬೇಕಾಗಿದ್ದಲ್ಲಿ ಧವಳಾಕೃತಿಯಿಂದೊಪ್ಪಿ, ಬೆಳುದಿಂಗಳಿನ ಕಾಂತಿಯುಳ್ಳ ಶ್ರೀ ಲಲಿತಾಂಬಿಕೆಯನ್ನು ಧ್ಯಾನಿಸಬೇಕು. ವಶೀಕರಣ ಕಾರ್ಯದಲ್ಲಿ ಕಹ್ಲಾರಪುಷ್ಪಕಾಂತಿಯುಳ್ಳವಳನ್ನಾಗಿಯೂ, ಕವಿತ್ವವಿಷಯದಲ್ಲಿ ವಿಶದಾಕಾರದಿಂದೊಪ್ಪಿ ಸ್ಫಟಿಕಮಣಿಯಂತೆ ನಿರ್ಮಲವಾಗಿರುವಂತೆಯೂ ಆ ಮಹಾ

**ಏವಂ ಬಹುಪ್ರಕಾರೇಣ ಧ್ಯಾನಭೇದೇನ ಕುಂಭಜ । [೬೪ ॥**
**ವಿಭಾವಯಂತಃ ಶ್ರೀದೇವೀಂ ಭಜಂತೇ ಮಹತೀಂ ಶ್ರೀಯಮ್ ॥**
**ಯೈಸ್ತು ತಪ್ತಂ ತಪಸ್ತ್ರೀವಂ ತೈರೇಷಾತ್ಮನಿ ಧೀಯತೇ ।**
**ಯಸ್ಯ ನೋ ಪಶ್ಚಿಮಂ ಜನ್ಮ ಸ್ವಯಂ ಯೋ ವಾ ನ ಶಂಕರಃ ॥೬೫॥**
**ನತೇನ ಲಭ್ಯತೇ ವಿದ್ಯಾ ಲಲಿತಾ ಪರಮೇಶ್ವರೀ ।**
**ವಂಶೇ ತು ಯಸ್ಯ ಕಸ್ಯಾಪಿ ಭವೇದೇಷ ಮನುರ್ಯದಿ ।**
**ತದ್ವಂಶ್ಯಾಃ ಸರ್ವ ಏವ ಸ್ಯುರ್ಮುಕ್ತಾಸ್ತೃಪ್ತಾಸ್ತು ಕುಂಭಜ ॥೬೬॥**
**ಗುಪ್ತಾದ್ಗುಪ್ತತರೈವೈಷಾ ಸರ್ವಶಾಸ್ತ್ರೇಷು ನಿಶ್ಚಿತಾ ।**
**ವೇದಾಃ ಸಮಸ್ತಾಃ ಶಾಸ್ತ್ರಾಣಿ ವದಂತಿ ಲಲಿತೇಶ್ವರೀಮ್ ॥ ೬೭ ॥**

---

ದೇವಿಯನ್ನು ಧ್ಯಾನಿಸತಕ್ಕುದು. ಧನಲಾಭಕ್ಕಾಗಿ ಶ್ರೀ ಲಲಿತಾಂಬಿಕೆಯನ್ನು ಸುವರ್ಣ ಪ್ರಭೆಯುಳ್ಳವಳನ್ನಾಗಿ ಧ್ಯಾನಿಸಬೇಕು. ಸರ್ವೈಶ್ವರ್ಯವನ್ನು ಪಡೆಯಬೇಕಾದಲ್ಲಿ ಆಕೆಯನ್ನು ಶ್ಯಾಮಲಾಂಗಿಯನ್ನಾಗಿ ವಿಭಾವಿಸಬೇಕು. ಇತರರನ್ನು ಮೂಗುಗೊಳಿಸಬೇಕಾಗಿದ್ದಲ್ಲಿ ನೀಲವರ್ಣದಿಂದೊಪ್ಪಿ ಸ್ತಂಭನಕಾರಿಣಿಯಾಗಿ ಮೆರೆಯುವ ಆ ದೇವಿಯನ್ನು ಧ್ಯಾನಿಸತಕ್ಕುದು. ಆಮೂಲದಿಂದ ಬ್ರಹ್ಮನವರೆಗೆ ಗೋಚರವಾಗುವ ಸಮಸ್ತ ಪ್ರದೇಶದಲ್ಲಿಯೂ ಪ್ರಜ್ವಲಿಸುತ್ತಿರುವ ಮಾಣಿಕ್ಯದೀಪವನ್ನಾಗಿ ಮಹಾತೇಜಃಪುಂಜರೂಪಿಣಿಯಾದ ಆ ಮಹಾದೇವಿಯನ್ನು ಯಾರು ಧ್ಯಾನಿಸುವರೋ ಅವರು ಸರ್ವಸಿದ್ಧಿಗಳನ್ನೂ ಪಡೆಯುತ್ತಾರೆ. ಹೀಗೆ ಅನೇಕ ಧ್ಯಾನ ಭೇದಗಳಿಂದ ಸಾಧಕರು ಶ್ರೀದೇವಿಯನ್ನು ಧ್ಯಾನಿಸಿ ಮಹತ್ತರವಾದ ಸಂಪತ್ತನ್ನು ಪಡೆಯುತ್ತಾರೆ.

೬೫-೬೬. ಅಯ್ಯಾ ಅಗಸ್ತ್ಯಮುನಿಯೇ! ಯಾರು ಮಹತ್ತರವಾದ ತಪಸ್ಸನ್ನು ಮಾಡಿರುತ್ತಾರೆಯೋ ಅಂಥವರ ಹೃದಯದಲ್ಲಿ ಈ ಲಲಿತಾ ಮಂತ್ರವು ನಿಲ್ಲುತ್ತದೆ. ಇದು ಲಭ್ಯವಾಗಬೇಕಾಗಿದ್ದರೆ ಮಾನವನಿಗೆ ಜನ್ಮವು ಕಳೆದಿರಬೇಕು. ಅಥವಾ ಅವನು ಸಾಕ್ಷಾತ್ ಶಂಕರನೇ ಆಗಿರಬೇಕು. ಅಂಥವನಿಗೆ ಮಾತ್ರವೇ ಇದು ಲಭ್ಯವಾಗುತ್ತದೆ. ಯಾವನ ವಂಶದಲ್ಲಿ ಯಾದರೂ ಸರಿಯೇ, ಒಬ್ಬನಲ್ಲಿ ಈ ಮಹಾಮಂತ್ರವಿದ್ದುದೇ ಆದರೆ ಆ ವಂಶದವರೆಲ್ಲರೂ ಮುಕ್ತರೂ, ತೃಪ್ತರೂ ಆಗುತ್ತಾರೆ.

೬೭-೬೯. ಈ ಮಹಾವಿದ್ಯೆಯು ಅತ್ಯಂತ ರಹಸ್ಯವಾದುದೆಂದು ಎಲ್ಲ ಶಾಸ್ತ್ರಗಳಲ್ಲಿಯೂ ನಿಶ್ಚಿತವಾಗಿರುತ್ತದೆ. ವೇದಗಳೂ, ಸಕಲ ಶಾಸ್ತ್ರ

ಇಯಮೇವಾತ್ಮವಿದ್ಯಾ ಸ್ಯಾದಿಯಮೇವ ಪರಾ ಗತಿಃ ।
ಇಯಮೇವ ಮಹತ್ತೀರ್ಥಮಿಯಮೇವ ಪರಾಗತಿಃ ॥ ೭೮ ॥
ಇಮಾಂ ಧ್ಯಾಯಂತಿ ಮುನಯೋ ಧ್ಯಾಯಂತೀಮಾಂ ಚ ಯೋಗಿನಃ ।
ಅರ್ಚಯಂತಿ ಸುರಶ್ರೇಷ್ಠಾಃ ಸರ್ವದಾ ಸರ್ವ ಸಿದ್ಧಿದಾಮ್ ॥೭೯॥
ನ ಪ್ರಾಪ್ಯತೇ ಕುಚಾರಿತ್ರೈಃ ಕುತ್ಸಿತ್ರೈಃ ಕುಟಿಲಾಶಯೈಃ ।
ವೇದಬಾಹ್ಯೈರ್ವೃಥಾತರ್ಕೈರ್ವೃಥಾವಿಭ್ರಾಂತಬುದ್ಧಿಭಿಃ ॥ ೭೦ ॥
ನಷ್ಟೈರಶೀಲೈರುಚ್ಛಿಷ್ಟೈಃ ಕುಲಭ್ರಷ್ಟೈಶ್ಚ ನಿಷ್ಠುರೈಃ ।
ದರ್ಶನದ್ವೇಷಿಭಿಃ ಪಾಪಶೀಲೈರಾಚಾರನಿಂದಕೈಃ ॥ ೭೧ ॥
ಚಾರ್ವಾಕಮತನಿಷ್ಣಾತೈರ್ಗರ್ವಿತೈಃ ಪರದೂಷಕೈಃ ।
ಅನಾತ್ಮಜ್ಞೈರನಲ್ಪೇರ್ಷ್ಯೈಃ ಕ್ರೋಧನೈರ್ಗುರುಭಾಧಕೈಃ ॥ ೭೨ ॥
ಉದ್ಧತೈರುದ್ಧತಾಲಾಪೈರ್ದಾಂಭಿಕೈರತಿಮಾನಿಭಿಃ ।
ಏತಾದೃಶಾನಾಂ ಮರ್ತ್ಯಾನಾಮಿಯಮತ್ಯಂತದುರ್ಲಭಾ ।
ಕಥಂಚಿದಪಿ ಲಬ್ಧಾಪಿ ವಿದ್ಯಾ ತೇಷು ಪರಾಙ್ಮುಖೀ ॥ ೭೩ ॥

---

ಗಳೂ, ಶ್ರೀ ಲಲಿತಾಪರಮೇಶ್ವರಿಯ ವಿಷಯನ್ನೇ ಪ್ರತಿಪಾದಿಸಿರುತ್ತವೆ. ಈ ವಿದ್ಯೆಯೇ ಆತ್ಮವಿದ್ಯೆಯು; ಇದೇ ಪರಮಗತಿಯು; ಇದೇ ಮಹಾ ಪವಿತ್ರವಾದ ತೀರ್ಥವು; ಮುನಿಗಳೂ, ಯೋಗಿಗಳೂ, ಸಮಸ್ತ ಸುರ ಶ್ರೇಷ್ಠರೂ ಸರ್ವಸಿದ್ಧಿಪ್ರದಾಯಕಿಯಾದ ಈ ಮಹಾದೇವಿಯನ್ನೇ ಯಾವಾಗಲೂ ಧ್ಯಾನಿಸುತ್ತಿರುತ್ತಾರೆ.

೭೦-೭೩. ಅಯ್ಯಾ ತಪಸ್ವಿಯೇ! ಕೆಟ್ಟ ನಡತೆಯುಳ್ಳವರು, ಕೆಡುಕರು, ಕೆಟ್ಟಮನಸ್ಸುಳ್ಳವರು, ವೇದಬಾಹಿರರು, ತರ್ಕವಿತರ್ಕಗಳನ್ನು ಮಾಡುವವರು, ಚಂಚಲ ಬುದ್ಧಿಯುಳ್ಳವರು, ಗುಣವಿಲ್ಲದವರು, ಉಚ್ಛಿಷ್ಟರು, ಕುಲಭ್ರಷ್ಟರು, ನಿಷ್ಠುರರು, ಶಾಸ್ತ್ರವಿರೋಧಿಗಳು, ಪಾಪಿಷ್ಠರು, ಸದಾಚಾರವನ್ನು ನಿಂದಿಸುವವರು, ಚಾರ್ವಾಕಮತದಲ್ಲಿ ಪಂಡಿತರಾದವರು, ದುರಹಂಕಾರಿಗಳು, ಪರದೂಷಕರು, ಅವಿವೇಕಿಗಳು, ಅಸೂಯೆಯಿರುವವರು, ಕೋಪಿಷ್ಠರು, ಗುರುಘಾತಕರು, ಉದ್ಧತರು, ಪೆಗ್ಗೆಯಿಂದ ಮಾತನಾಡುವವರು, ಬಹು ಜಂಭದವರು, ಅತಿ ಗಂಭೀರವನ್ನು ಮೆರೆಯುವವರು ಇವರೇ ಮೊದಲಾದವರಿಗೆ ಈ ಶ್ರೀವಿದ್ಯೆಯು ದೊರೆಯುವುದು ಕಷ್ಟ; ಅಕಸ್ಮಾತ್ತಾಗಿ ದೊರೆತರೂ ಅವರಿಗೆ ಸುಮುಖವಾಗದೆ ಪರಾಙ್ಮುಖವೇ ಆಗುತ್ತದೆ.

ಇತಿ ಪೃಷ್ಟಂ ತ್ವಯಾಖ್ಯಾತಂ ಸರ್ವಪೂಜ್ಯಾ ಮಯೇರಿತಾ ।
ದೇವತಾನಾಂ ಚ ಪೂಜ್ಯತ್ವಮಸ್ಯಾಃ ಪ್ರೋಕ್ತಂ ಘಟೋದ್ಭವ ॥೭೪॥
ಭಂಡಾಸುರವಧಾಯೈಷಾ ಪ್ರಾದುರ್ಭೂತಾ ಚಿದಗ್ನಿತಃ ।
ಮಹಾತ್ರಿಪುರಸುಂದರ್ಯಾ ಮೂರ್ತಿಸ್ತೇಜೋ ವಿಜೃಂಭಿತಾ ॥ ೭೫ ॥
ಕಾಮಾಕ್ಷೀ ಚ ವಿಧಾತ್ರಾ ತು ಪ್ರಸ್ತುತಾ ಲಲಿತೇಶ್ವರೀ ।
ಧ್ಯಾಯತಃ ಪರಯಾ ಭಕ್ತ್ಯಾತಾಂ ಪರಾಂ ಲಲಿತಾಂಬಿಕಾಂ ॥ ೭೬ ॥
ಸದಾಶಿವಸ್ಯ ಮನಸೋ ಲಾಲನಾಲ್ಲಲಿತಾಭಿಧಾ ।
ಯದ್ಯತ್ಕೃತವತೀ ಕೃತ್ಯಂ ತತ್ಸರ್ವಂ ವಿನಿವೇದಿತಮ್ ॥ ೭೭ ॥
ಪೂಜಾವಿಧಾನಮಖಿಲಂ ಶಾಸ್ತ್ರೋಕ್ತೇನೈವ ವರ್ತ್ಮನಾ ।
ಖಂಡಾಂತರೇ ವದಿಷ್ಯಾಮಿ ತದ್ವಿಲಾಸಂ ಮಹಾದ್ಭುತಮ್ ॥ ೭೮ ॥

ಅಥ ಫಲಶ್ರುತಿಃ

ಯ ಇದಂ ಶೃಣುಯಾದ್ದಿವ್ಯಮಾಖ್ಯಾನಂ ಕುಂಭಸಂಭವ ।
ತಸ್ಯ ಸಿದ್ಧಿಃ ಕರಸ್ಥೈವ ನ ಸ ಭೂಯೋಽಭಿಜಾಯತೇ ॥ ೧ ॥

---

೭೪-೭೮. ಅಯ್ಯಾ ಘಟೋದ್ಭವನೇ! ಹೀಗೆ ನೀನು ನನ್ನನ್ನು ಪ್ರಶ್ನಿಸಿದ ವಿಷಯವೆಲ್ಲವನ್ನೂ ತಿಳಿಸಿದುದಾಯಿತು. ಸರ್ವಪೂಜ್ಯವಾದ ಶ್ರೀಲಲಿತಾಚರಿತ್ರವನ್ನು ನಾನು ನಿನಗೆ ಹೇಳಿದೆನು. ಶ್ರೀಲಲಿತಾಂಬಿಕೆಯು ದೇವತೆಗಳಿಂದಲೂ ಪೂಜೆಯನ್ನು ಕೈಕೊಳ್ಳುವಾಕೆಯೆಂದು ಹೇಳಿದೆ. ಭಂಡಾಸುರನವಧೆಗಾಗಿ ಚಿದಗ್ನಿಕುಂಡದಿಂದ ಶ್ರೀ ಮಹಾತ್ರಿಪುರತೇಜೋಮೂರ್ತಿಯು ಆವಿರ್ಭವಿಸಿತು. ಶ್ರೀಲಲಿತಾಪರಮೇಶ್ವರಿಯೇ ಕಾಮಾಕ್ಷಿಯೆಂದೂ, ವಿಧಾತ್ರಿಯೆಂದೂ ಸಂಸ್ತುತೆಯಾಗಿರುತ್ತಾಳೆ. ಶ್ರೀಸದಾಶಿವನು ಈ ಪರಾಂಬಿಕೆಯನ್ನು ಭಕ್ತಿಯಿಂದ ಧ್ಯಾನಿಸುತ್ತಿರಲು ಈಕೆಯು, ಆತನ ಮನಸ್ಸಿನ ಲಾಲನೆಯಿಂದ ಶ್ರೀಲಲಿತಾಂಬಿಕೆಯಾಗಿ ಆವಿರ್ಭವಿಸಿದಳು. ಈ ಮಹಾದೇವಿಯ ಪೂಜಾವಿಧಾನವೆಲ್ಲವೂ ಶಾಸ್ತ್ರೋಕ್ತವಾದ ಮಾರ್ಗದಿಂದಲೇ ಎಂದು ತಿಳಿ. ಅದನ್ನು ಬೇರೆ ಖಂಡದಲ್ಲಿ ಹೇಳುವೆನು. ಅದರ ವಿಲಾಸವು ಪರಮಾದ್ಭುತವಾಗಿರುತ್ತದೆ.

ಫಲಶ್ರುತಿ

೧-೨. ಎಲೈ ಅಗಸ್ತ್ಯಮುನಿಯೇ! ದೇವತಾಸಂಬಂಧವಾದ ಈ ಉಪಾಖ್ಯಾನವನ್ನು ಯಾವನು ಕೇಳುತ್ತಾನೆಯೋ ಅವನಿಗೆ ಸಿದ್ಧಿಯು

**ಆಖ್ಯಾನಂ ಲಲಿತಾದೇವ್ಯಾಃ ಪಠೇದ್ಯಃ ಶೃಣುಯಾದಪಿ ।**
**ವಿಧೂಯ ಸರ್ವಪಾಪಾನಿ ದೇವಲೋಕೇ ಮಹೀಯತೇ ॥ ೨ ॥**
**ಕನ್ಯಾರ್ಥೀ ಲಭತೇ ಕನ್ಯಾಂ ಜಯಾರ್ಥೀ ಜಯಮಾಪ್ನುಯಾತ್ । [ತ್**
**ಮೋಕ್ಷಾರ್ಥೀ ಲಭತೇ ಮೋಕ್ಷಂ ಧರ್ಮಾರ್ಥೀ ಧರ್ಮಮಾಪ್ನುಯಾ**
**ಅರ್ಥಕಾಮೋ ಲಭೇದರ್ಥಂ ಪುತ್ರಕಾಮೋ ಬಹೂನ್ ಸುತಾನ್ ।**
**ವಿದ್ಯಾರ್ಥೀ ಲಭತೇ ವಿದ್ಯಾಂ ಯೋಗಾರ್ಥೀ ಯೋಗಮಾಪ್ನುಯಾತ್**
**ರಾಜ್ಯಾರ್ಥೀ ಲಭತೇ ರಾಜ್ಯಂ ಗ್ರಾಮಾರ್ಥೀ ಗ್ರಾಮಮಾಪ್ನುಯಾತ್ ।**
**ಗರ್ಭಿಣೀ ಲಭತೇ ಪುತ್ರಂ ಕನ್ಯಾ ವಿಂದತಿ ಸತ್ಪತಿಮ್ ॥ ೫ ॥**
**ಯೋಽನ್ಯಾನ್ಕಾಮಯತೇ ಕಾಮಾನ್ಮಾನವಃ ಶ್ರವಣಾದಿಹ । [ ೬ ॥**
**ತತ್ಸರ್ವಂ ಶೀಘ್ರಮಾಪ್ನೋತಿ ದೇವಾನಾಂ ಚ ಪ್ರಿಯೋ ಭವೇತ್ ॥**

---

ಕರಗತವೇ ಆಗುತ್ತದೆ. ಅಲ್ಲದೆ, ಅವನಿಗೆ ಪುನರ್ಜನ್ಮವೇ ಇರುವುದಿಲ್ಲ. ಶ್ರೀ ಲಲಿತಾದೇವಿಯ ಈ ಉಪಾಖ್ಯಾನವನ್ನು ಯಾವನು ಓದುತ್ತಾನೆಯೋ, ಯಾವನು ಕೇಳುತ್ತಾನೆಯೋ ಅವನು ಎಲ್ಲ ಪಾಪಗಳನ್ನೂ ಕೊಡವಿ ಸ್ವರ್ಗಲೋಕದಲ್ಲಿ ವಿರಾಜಿಸುತ್ತಾನೆ.

೩-೪. ಈ ಉಪಾಖ್ಯಾನದ ಪಠನ ಶ್ರವಣಗಳಿಂದ ಕನ್ಯೆಯನ್ನಪೇಕ್ಷಿಸುವವನು ಕನ್ಯೆಯನ್ನೂ, ಜಯವನ್ನು ಕೋರುವವನು ಜಯವನ್ನೂ, ಮೋಕ್ಷವನ್ನು ಬಯಸುವವನು ಮೋಕ್ಷವನ್ನೂ, ಧರ್ಮವನ್ನು ಬಯಸುವವನು ಧರ್ಮವನ್ನೂ, ಹಣ ಬಯಸುವವನು ಹಣವನ್ನೂ, ಪುತ್ರಾಪೇಕ್ಷೆಯುಳ್ಳವನು ಅನೇಕ ಮಂದಿ ಪುತ್ರರನ್ನೂ ಪಡೆಯುತ್ತಾರೆ. ವಿದ್ಯಾರ್ಥಿಯು ವಿದ್ಯೆಯನ್ನು ಪಡೆಯುತ್ತಾನೆ. ಯೋಗವನ್ನು ಸಾಧಿಸಬಯಸುವವನು ಸಮಸ್ತ ಯೋಗಗಳನ್ನೂ ಪಡೆಯುವನು.

೫-೬. ರಾಜ್ಯಾರ್ಥಿಯು ರಾಜ್ಯವನ್ನೂ, ಗ್ರಾಮಾರ್ಥಿಯು ಗ್ರಾಮವನ್ನೂ ಪಡೆಯುತ್ತಾರೆ. ಅಲ್ಲದೆ ಗರ್ಭಿಣಿಯು ಗಂಡುಮಗುವನ್ನೇ ಪಡೆಯುತ್ತಾಳೆ. ಕನ್ಯೆಯು ಅನುರೂಪನಾದ ಪತಿಯನ್ನು ಹೊಂದುತ್ತಾಳೆ. ಹೀಗೆಯೇ ಈ ಉಪಾಖ್ಯಾನವನ್ನು ಕೇಳಿದ ಮಾನವರು ಯಾರಾರು ಏನೇನನ್ನು ಬಯಸುತ್ತಾರೆಯೋ ಅದೆಲ್ಲವನ್ನೂ ಬಹು ಜಾಗ್ರತೆಯಾಗಿಯೇ ಪಡೆಯುತ್ತಾರೆಯಲ್ಲದೆ, ಅವರೆಲ್ಲರೂ ಸಮಸ್ತ ದೇವತೆಗಳಿಗೂ ಬಹಳ ನಚ್ಚಿನವರಾಗುತ್ತಾರೆ.

ಶ್ರುತ್ವಾ ಚರಿತ್ರಂ ಶ್ರೀ ದೇವ್ಯಾಃ ಸಂಗ್ರಾಮಂ ಪ್ರವಿಶೇನ್ನೃಪಃ ।
ಸ ನಿರ್ಜಿತ್ಯ ಭಯಂ ಶತ್ರೂನ್ ಕಲ್ಯಾಣೈಃ ಪರಿಪೂರ್ಯತೇ ॥ ೭ ॥
ಸರ್ವವ್ಯಾಧಿವಿನಿರ್ಮುಕ್ತಃ ಪುತ್ರಪೌತ್ರೈಃ ಪ್ರತಿಷ್ಠಿತಃ ।
ಲಲಿತಾಯಾ ಉಪಾಖ್ಯಾನಂ ಯಮುದ್ದಿಶ್ಯ ಪಠೇತ್ಸಕೃತ್ ।
ತಸ್ಯ ರೋಗಾ ನಬಾಧಂತೇ ವಾತಪಿತ್ತಾದಿಸಂಭವಾಃ ॥ ೮ ॥
ನಾಕಾಲಮರಣಂ ತಸ್ಯ ನಸರ್ಪೈಶ್ಚಾಪಿ ದಶ್ಯತೇ ।
ವಿಷಂ ನಾಕ್ರಮತೇ ದೇಹೇ ನ ಜಡತ್ವಂ ನ ಮೂಕತಾ ॥ ೯ ॥
ನೋಪಸರ್ಗಭಯಂ ತಸ್ಯ ನ ಚೋತ್ಪಾತಭಯಂ ತಥಾ ।
ನಾಭಿಚಾರ ಕೃತ್ಯೈರ್ದೋಷೈರ್ಲಿಪ್ಯತೇ ಸ ಕದಾಚನ ॥ ೧೦ ॥
ಸರ್ವಕಾಮಸಮೃದ್ಧ್ಯರ್ಥೋ ಯಃ ಪಠೇತ್ತು ದಿನೇ ದಿನೇ ।
ನಿತ್ಯಮೂರ್ಜಿತಭಕ್ತ್ಯಾಚ ದುರ್ವ್ಯಾಘಾತಾದಿ ವರ್ಜಿತಃ ॥ ೧೧ ॥
ಯತ್ಪುಣ್ಯಂ ಸರ್ವತೀರ್ಥಾನಾಂ ಗಂಗಾದೀನಾಂ ವಿಶೇಷತಃ ।
ತತ್ಪುಣ್ಯಂ ಕೋಟಿಗುಣಿತಂ ಪ್ರಾಪ್ನೋತಿ ಶ್ರವಣಾದಿಹ ॥ ೧೨ ॥

---

೭-೮. ದೊರೆಯಾದವನು ಶ್ರೀದೇವಿಯ ಈ ಚರಿತ್ರವನ್ನು ಕೇಳಿ ರಣ ಭೂಮಿಗೆ ತೆರಳಿದುದೇ ಆದರೆ ಯಾವೊಂದು ಭಯವೂ ಇಲ್ಲದೆ, ಶತ್ರುಗಳೆಲ್ಲರನ್ನೂ ಗೆದ್ದು ಸಮಸ್ತ ಸನ್ಮಂಗಳಗಳನ್ನೂ ಪಡೆಯುತ್ತಾನೆ. ಶ್ರೀ ಲಲಿತೋಪಾಖ್ಯಾನವನ್ನು ಯಾವನನ್ನಾದರೂ ಉದ್ದೇಶಿಸಿ ಒಂದಾವೃತ್ತಿ ಪಠಿಸಿದರೂ ಅವನು ಎಲ್ಲ ರೋಗಗಳಿಂದಲೂ ಬಿಡುಗಡೆಹೊಂದಿ ಮಕ್ಕಳು ಮೊಮ್ಮಕ್ಕಳೊಡಗೂಡಿ ದೀರ್ಘಾಯುಷ್ಯವಂತನಾಗುತ್ತಾನೆ. ವಾತ ಪಿತ್ತವೇ ಮೊದಲಾದವುಗಳಿಂದುಂಟಾದ ರೋಗಗಳು ಅವನನ್ನು ಪೀಡಿಸುವುದಿಲ್ಲ.

೯-೧೧. ಅಯ್ಯಾ ತಪೋಧನನೇ! ಯಾವಾಗಲೂ ದೃಢಭಕ್ತಿಯುಳ್ಳವನಾಗಿ ಯಾವನು ಪ್ರತಿನಿತ್ಯವೂ ಈ ಉಪಾಖ್ಯಾನವನ್ನು ಪಠಿಸುವನೋ ಅವನು ಅಕಾಲಮರಣಕ್ಕೆ ತುತ್ತಾಗುವುದಿಲ್ಲ; ಅವನನ್ನು ಸರ್ಪಗಳು ಕಚ್ಚುವುದಿಲ್ಲ. ಹಾಗೊಂದುವೇಳೆ ಕಡಿದರೂ ವಿಷವು ಮೈಗೇರುವುದಿಲ್ಲ; ಜಡತೆಯಾಗಲಿ, ಮೂಕತನವಾಗಲಿ ಅವನಿಗೆ ಉಂಟಾಗುವುದಿಲ್ಲ. ಉಪಸರ್ಗ ಮತ್ತು ಉತ್ಪಾತಗಳ ಹೆದರಿಕೆಯು ಅವನಿಗಿರುವುದಿಲ್ಲವು. ಶತ್ರುಗಳು ಮಾಡಿದ ಮಾಟ ಮೊದಲಾದವುಗಳು ಅವನ ಬಳಿ ಸುಳಿಯುವುದೇ

**ದಶಾನಾಂ ರಾಜಸೂಯಾನಾಮಗ್ನಿಷ್ಟೋಮಶತಸ್ಯ ಚ ।**
**ಶ್ರವಣಾತ್ಫಲಮಾಪ್ನೋತಿ ಕೋಟಿಕೋಟಿ ಗುಣೋತ್ತರಮ್ ॥೧೩॥**
**ಅವಧ್ಯಃ ಸರ್ವಭೂತಾನಾಮನ್ಯೇಷಾಂ ಚ ವಿಶೇಷತಃ ।**
**ಜೀವೇದ್ವರ್ಷಶತಂ ಸಾಗ್ರಂ ಸರ್ವವ್ಯಾಧಿ ವಿವರ್ಜಿತಃ ॥ ೧೪ ॥**
**ಗೋಘ್ನಶ್ಚೈವ ಕೃತಘ್ನಶ್ಚ ಭ್ರೂಣಹಾ ಗುರುತಲ್ಪಗಃ ।**
**ಶರಣಾಗತಘಾತೀ ಚ ಮಿತ್ರವಿಶ್ವಾಸಘಾತಕಃ ॥ ೧೫ ॥**
**ದುಷ್ಟಃ ಪಾಪಸಮಾಚಾರೋ ಮಾತೃಹಾ ಪಿತೃಹಾ ತಥಾ ।**
**ಶ್ರವಣಾದಸ್ಯ ಭಾವೇನ ಮುಚ್ಯತೇ ಸರ್ವಪಾತಕೈಃ ॥ ೧೬ ॥**
**ತೀರ್ಥೇಷು ಪೂಜಾವೇಲಾಸು ವಿಷುವತ್ಯಯನೇಪಿ ಚ ।**
**ಪಂಚಪರ್ವಸು ಜನ್ಮರ್ಕ್ಷೇ ಪುಣ್ಯೇಷ್ವಾಯತನೇಷು ಚ ॥ ೧೭ ॥**

---

ಇಲ್ಲ. ಅವನು ಸಮಸ್ತ ಇಷ್ಟಾರ್ಥಗಳೂ ಈಡೇರಿದವನಾಗಿ, ಮಹದೈಶ್ವರ್ಯ ಸಂಪನ್ನನಾಗಿರುತ್ತಾನೆ.

೧೨-೧೪. ಎಲೈ ಕುಂಭಸಂಭವನೇ! ಮಾನವನು, ಗಂಗಾದಿ ಸಕಲ ತೀರ್ಥಗಳಿಂದಲೂ ಯಾವ ವಿಶೇಷವಾದ ಪುಣ್ಯವನ್ನು ಸಂಪಾದಿಸುವನೋ ಅದಕ್ಕಿಂತಲೂ ಕೋಟಿಪಾಲು ಅಧಿಕವಾದ ಪುಣ್ಯವನ್ನು ಈ ಉಪಾಖ್ಯಾನ ವನ್ನು ಕೇಳುವುದರಿಂದಲೇ ಸಂಪಾದಿಸುತ್ತಾನೆ. ಈ ಪುಣ್ಯೋಪಾಖ್ಯಾನ ವನ್ನು ಕೇಳಿದ ಮಾನವನು ಹತ್ತು ರಾಜಸೂಯ ಯಾಗಗಳು ಮತ್ತು ನೂರು ಅಗ್ನಿಷ್ಟೋಮಗಳಿಗಿಂತಲೂ ಕೋಟಿ ಕೋಟಿ ಪಾಲು ಅಧಿಕವಾದ ಫಲವನ್ನು ಹೊಂದುತ್ತಾನೆ. ಇಷ್ಟೆಯಲ್ಲದೆ ಅವನು ಸಮಸ್ತ ಭೂತ ಗಳಿಗೂ ಅವಧ್ಯನಾಗಿ ಅದರಲ್ಲಿಯೂ ಶತ್ರುಗಳಿಗೆ ಅಸಾಧ್ಯನಾಗಿ ಯಾವ ರೋಗ ರುಜಿನಗಳೂ ಇಲ್ಲದೆ ಸಂಪೂರ್ಣವಾಗಿ ನೂರು ಸಂವತ್ಸರಗಳ ಕಾಲ ಸುಖವಾಗಿ ಬಾಳಿ ಬದುಕುತ್ತಾನೆ.

೧೫-೧೬. ಗೋಹತ್ಯೆ ಮಾಡಿದವನು, ಮಾಡಿದ ಉಪಕಾರವನ್ನು ಮರೆತವನು, ಭ್ರೂಣಹತ್ಯೆ ಮಾಡಿದವನು, ಗುರುಪತ್ನೀಗಮನ ಮಾಡಿದವನು, ನೀನೇ ಗತಿಯೆಂದು ಬಂದವನನ್ನು ಕೊಂದವನು, ಗೆಳೆಯನ ನಂಬಿಕೆಯನ್ನು ಕೆಡಿಸುವವನು, ದುಷ್ಟ, ಪಾಪಿಷ್ಠ, ತಾಯಿ ತಂದೆಗಳನ್ನು ಕೊಂದವನು ಇವರೆಲ್ಲರೂ ಈ ಉಪಾಖ್ಯಾನದ ಶ್ರವಣಫಲದಿಂದ ಆಯಾ ಪಾಪಗಳಿಂದ ಬಿಡುಗಡೆಹೊಂದುತ್ತಾರೆ.

೧೭-೧೮. ತೀರ್ಥಕ್ಷೇತ್ರಗಳಲ್ಲಿಯೂ, ಪೂಜೆಯ ಸಮಯಗಳಲ್ಲಿಯೂ, ವಿಷುವತ್ಪುಣ್ಯಕಾಲಗಳಲ್ಲಿಯೂ, ಉತ್ತರಾಯಣ ದಕ್ಷಿಣಾಯನ

ರಾಜ್ಯಕ್ಷೋಭೇ ರೋಗಭಯೇ ಮಾರೀಚೋರಭಯಾದಿಷು ।
ಯೇ ಪಠಂತೀದಮಾಖ್ಯಾನಂ ತೇ ಸಂಸಿದ್ಧಿಮವಾಪ್ನುಯುಃ ॥ ೧೮ ॥
ಯತ್ರೇದಂ ಲಿಖಿತಂ ಪುಸ್ತಂ ವರ್ತತೇ ಕುಂಭಸಂಭವ ।
ತಸ್ಮಿನ್ ದೇಶೇ ನರೋಗಶ್ಚ ನ ಚ ದುರ್ಭಿಕ್ಷಸಂಭವಃ ॥ ೧೯ ॥
ಪೂಜಾವಿಧಾನಮಖಿಲಂ ಶಾಸ್ತ್ರೋಕ್ತೇನೈವ ವರ್ತ್ಮನಾ ।
ಖಂಡಾಂತರೇ ವದಿಷ್ಯಾಮಿ ತದಾಕರ್ಣಯ ಕುಂಭಜ ॥ ೨೦ ॥
ದ್ವಾತ್ರಿಂಶಲ್ಲಲಿತಾಖ್ಯಾನಮಮೃತಂ ದಿವ್ಯದರ್ಶನಮ್ ।
ದೇವೀಮಾಹಾತ್ಮ್ಯಮಪಿ ಚ ಪರ್ಯಾಯಃ ಕುಂಭಸಂಭವ ॥ ೨೧ ॥
ತಸ್ಮಾದ್ದ್ವಾತ್ರಿಂಶಿಕಾಶಾಸ್ತ್ರಂ ಬ್ರಹ್ಮಾಂಡೋತ್ತರ ಕೀರ್ತಿತಮ್ ।
ದೇವೀ ಸಮುತ್ಸವೇ ಜಾತೇ ಪಠಿತವ್ಯಂ ಪ್ರಯತ್ನತಃ ॥ ೨೨ ॥
ದೇವ್ಯಃ ಸಮಸ್ತಾಸ್ತ್ರೈಲೋಕ್ಯೇ ಯತಃ ಶ್ರೀ ಲಲಿತಾಂಬಿಕಾ ।
ಅತಸ್ತಾಃ ಸ್ವಸ್ವಪೂಜಾಸು ಕುಪ್ಯಂತ್ಯಸ್ಯಾ ಅಪಾಠನಾತ್ ॥ ೨೩ ॥

---

ಗಳಲ್ಲಿಯೂ, ಪಂಚಪರ್ವಗಳಲ್ಲಿಯೂ, ಜನ್ಮನಕ್ಷತ್ರಗಳಲ್ಲಿಯೂ, ಪುಣ್ಯ ದಿನಗಳಲ್ಲಿಯೂ, ದೇವಾಲಯಾದಿಗಳಲ್ಲಿಯೂ, ರಾಜ್ಯಕ್ಷೋಭೆ, ರೋಗ ಭಯ, ಮಾರೀ ಚೋರಾದಿ ಭಯಗಳ ಸಮಯಗಳಲ್ಲಿಯೂ ಯಾರು ಇದನ್ನು ಪಠಿಸುವರೋ ಅವರು ಸಿದ್ಧಿಯನ್ನು ಪಡೆಯುತ್ತಾರೆ.

೧೯. ಎಲೈ ಕುಂಭಸಂಭವನೇ! ಯಾವ ದೇಶದಲ್ಲಿ ಈ ಪುಸ್ತಕ ವಿರುತ್ತದೆಯೋ ಆ ದೇಶದಲ್ಲಿ ರೋಗವಾಗಲಿ, ಕ್ಷಾಮ ಡಾಮರಗಳಾಗಲಿ ಇರುವುದಿಲ್ಲ.

೨೦. ಪೂಜಾ ವಿಧಾನವೆಲ್ಲವೂ ಶಾಸ್ತ್ರೋಕ್ತವಾದ ಮಾರ್ಗದಿಂದಲೇ ನಡೆಯತಕ್ಕುದು. ಅದನ್ನು ಬೇರೆ ಖಂಡದಲ್ಲಿ ಹೇಳುವೆನು. ಆಗ ನೀನದನ್ನು ಕೇಳುವೆ.

೨೧-೨೨. ದಿವ್ಯ (ದೇವತಾಸಂಬಂಧವಾದ) ದರ್ಶನ (ಶಾಸ್ತ್ರ)ವೂ, ಅಮೃತಪ್ರಾಯವೂ ಆದ ಶ್ರೀಲಲಿತೋಪಾಖ್ಯಾನವು (ದ್ವಾತ್ರಿಂಶತ್) ಮೂವತ್ತೆರಡು ಅಧ್ಯಾಯಗಳುಳ್ಳುದಾಗಿರುವುದು. ದೇವೀ ಮಹಾತ್ಮ್ಯವೂ ಇದಕ್ಕೆ ಪರ್ಯಾಯವಾದುದೇ. ಆದುದರಿಂದಲೇ ಇದನ್ನು ಶ್ರೀ ಬ್ರಹ್ಮಾಂಡಪುರಾಣದ ಉತ್ತರ ಖಂಡದಲ್ಲಿ ದ್ವಾತ್ರಿಂಶಿಕಾಶಾಸ್ತ್ರವಾಗಿ ಹೇಳಲಾಗಿರುವುದು. ಶ್ರೀ ದೇವೀ ಮಹೋತ್ಸವದಲ್ಲಿ (ನವರಾತ್ರಿಯ ಕಾಲದಲ್ಲಿ) ಇದನ್ನು ಪ್ರಯತ್ನಪೂರ್ವಕವಾಗಿ ಪಠಿಸಬೇಕು.

೨೩-೨೫. ಅಯ್ಯಾ ಕಲಶೋದ್ಭವನೇ! ಮೂರು ಲೋಕಗಳಲ್ಲಿರುವ ಸಮಸ್ತ ದೇವಿಯರೂ ಶ್ರೀಲಲಿತಾದೇವಿಯೊಡನೆಯೇ ಇರುತ್ತಾರೆ

ವಿಶೇಷತಸ್ತು ದುರ್ಗಾಯಾಃ ಸಂಪ್ರಾಪ್ತೇತು ಮಹೋತ್ಸವೇ ।
ಬ್ರಾಹ್ಮಣಂ ವರಯೇದ್ದೇವ್ಯೈದ್ವಾತ್ರಿಂಶತ್ಪಾಠಕರ್ಮಣಿ ॥ ೨೪ ॥
ಸ್ವಯಂ ವಾಪಿ ಪಠೇದ್ದುರ್ಗಾಸನ್ನಿಧೌ ದೃಢಮಾನಸಃ ।
ಏಕವಾರಂ ದ್ವಿವಾರಂ ವಾ ತ್ರಿವಾರಂ ವಾ ಪ್ರಯತ್ನತಃ ॥ ೨೫ ॥
ಲಲಿತಾಖ್ಯಾನಪಾಠಸ್ತು ಸರ್ವಸಿದ್ಧಿಪ್ರದಾಯಕಃ ।
ತ್ರೈಲೋಕ್ಯ ಜಂತುಜಾಲಾಢ್ಯಬಲೇಃ ಕರಣತೋ ಯಥಾ ॥ ೨೬ ॥
ಲಲಿತಾಖ್ಯೇನಪಾಠೇನ ತಥಾ ದುರ್ಗಾ ಪ್ರಸೀದತಿ ।
ಅಶುಚಿರ್ವಾ ಶುಚಿರ್ವಾಪಿ ಯಾದೃಕ್ತಾದೃಗವಸ್ಥಿತಃ ॥ ೨೭ ॥
ಪಠನ್ ದ್ವಾತ್ರಿಂಶಿಕಾಪಾಠಂ ಸರ್ವಪಾಪೈಃ ಪ್ರಮುಚ್ಯತೇ ।
ಪ್ರತ್ಯಬ್ದಮುತ್ಸವೇ ದೌರ್ಗೇ ಪಾಠಯೇದ್ಭೂಮಿವಲ್ಲಭಃ ॥ ೨೮ ॥
ಇದಂ ದ್ವಾತ್ರಿಂಶದಧ್ಯಾಯಸಂಮಿತಂ ದರ್ಶನೋತ್ತಮಮ್ ।
ಕಾರಣಂ ಸರ್ವಸಿದ್ಧೀನಾಂ ನಾಸ್ಮಾತ್ಪರತರಂ ಮಹತ್ ॥ ೨೯ ॥
ದ್ವಾತ್ರಿಂಶಿಕಾಯಾ ಅಸ್ಯಾಸ್ತು ಸಕೃದಾವರ್ತನಾದಪಿ ।
ಚಂಡಿಕಾಕೋಟಿಪಾಠಸ್ಯ ಸದೃಶಂ ಫಲಮುದ್ಭವೇತ್ ॥ ೩೦ ॥

---

ಯಾದುದರಿಂದ ತಂತಮ್ಮ ಪೂಜೆಗಳ ವೇಳೆಗಳಲ್ಲಿ ಈ ಶ್ರೀಲಲಿತೋಪಾಖ್ಯಾನವನ್ನು ಪಠಿಸದಿದ್ದರೆ ಕೋಪಗೊಳ್ಳುತ್ತಾರೆ. ಅದರಲ್ಲಿಯೂ ದುರ್ಗಾಪೂಜೆಯ ಮಹೋತ್ಸವದಲ್ಲಿ ಈ ದ್ವಾತ್ರಿಂಶಿಕಾಶಾಸ್ತ್ರದ ಪಠನಕ್ಕಾಗಿ ಒಬ್ಬ ಬ್ರಾಹ್ಮಣನಿಗೆ ವರಣವನ್ನು ಕೊಟ್ಟು ಅವನಿಂದಲಾದರೂ ಓದಿಸಬೇಕು. ಸ್ಥಿರಚಿತ್ತನಾಗಿ ತಾನೇ ಕುಳಿತು ಒಂದು, ಎರಡು ಅಥವಾ ಮೂರಾವೃತ್ತಿ ಇದನ್ನು ದುರ್ಗಾದೇವಿಯ ಸನ್ನಿಧಿಯಲ್ಲಿ ಪಠಿಸತಕ್ಕುದು.

೨೬-೩೧. ಅಯ್ಯಾ ಕುಂಭೋದ್ಭವ ಮುನಿಯೇ! ಶ್ರೀ ಲಲಿತೋಪಾಖ್ಯಾನವು ಸರ್ವ ಸಿದ್ಧಿಪ್ರದಾಯಕವಾದುದು. ಶ್ರೀ ದುರ್ಗಾದೇವಿಯು ಮೂರು ಲೋಕಗಳ ಜೀವರಾಶಿಯನ್ನೊಳಗೊಂಡ ಬಲಿಯಿಂದ ಹೇಗೆಯೋ ಹಾಗೆಯೇ ಈ ಉಪಾಖ್ಯಾನದ ಪಠನದಿಂದ ಪ್ರಸನ್ನೆಯಾಗುತ್ತಾಳೆ. ಶುಚಿಯಾಗಿರಲಿ, ಅಶುಚಿಯಾಗಿರಲಿ, ಹೇಗೇ ಇರಲಿ ದ್ವಾತ್ರಿಂಶಿಕಾಶಾಸ್ತ್ರವಾದ ಈ ಲಲಿತೋಪಾಖ್ಯಾನವನ್ನು ಪಠಿಸಿದವನು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಭೂಮಿಾಶ್ವರನಾದ ರಾಜನು ಉತ್ತಮವೂ, ದ್ವಾತ್ರಿಂಶಿಕಾಧ್ಯಾಯ ಸಮನ್ವಿತವೂ, ಸಮಸ್ತ ಸಿದ್ಧಿಗಳ ಲಾಭಕ್ಕೆ ಕಾರಣವೂ ಆದ ಈ ಶ್ರೀ ಲಲಿತೋಪಾಖ್ಯಾನವನ್ನು

ಆಖ್ಯಾನಮೇತದವದಾತ ಗುಣಾಃ ಪಠಂತಃ
ಸತ್ಸಂಪ್ರದಾಯಕಮುಪಾಕೃತ ಸರ್ವದುಃಖಮ್ ।
ವಿಜ್ಞಾನ ದೀಪ್ತಿಕಲಿತಾಂ ಲಲಿತಾಮಹೇಶೀ
ಮಾಸಾದ್ಯ ಚೇತಸಿ ವಹಂತಿ ಸದಾಭಿತೃಪ್ತಿಂ ॥ ೩೧ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಖಂಡೇ ಹಯಗ್ರೀವಾಗಸ್ತ್ಯ
ಸಂವಾದೇ ಶ್ರೀ ಲಲಿತೋಪಾಖ್ಯಾನೇ
ದ್ವಾತ್ರಿಂಶೋಽಧ್ಯಾಯಃ

---

ಪ್ರತಿ ವರ್ಷದ ದುರ್ಗಾಮಹೋತ್ಸವದಲ್ಲಿಯೂ ಪಠನ ಮಾಡಿಸತಕ್ಕುದು. ಇದಕ್ಕಿಂತ ಹೆಚ್ಚಿನದಾವುದೂ ಇಲ್ಲವು. ಈ ದ್ವಾತ್ರಿಂಶಿಕಾಶಾಸ್ತ್ರವನ್ನು ಒಂದುಸಲ ತಿರುವಿಹಾಕುವುದರಿಂದಲೇ ಚಂಡಿಕಾಸ್ತೋತ್ರವನ್ನು ಕೋಟಿ ಸಲ ಪಠಿಸಿದುದಕ್ಕೆ ಸಮಾನವಾದ ಫಲವು ದೊರಕುತ್ತದೆ. ಒಳ್ಳೆಯ ಸಂಪ್ರದಾಯಗಳನ್ನೊಳಗೊಂಡು, ಎಲ್ಲ ದುಃಖಗಳನ್ನೂ ದೂರಮಾಡುವುದಾಗಿರುವ ಈ ಶ್ರೀ ಲಲಿತೋಪಾಖ್ಯಾನವನ್ನು ಉದಾರಗುಣವುಳ್ಳ ಯಾವ ಮಾನವರು ಪಠಿಸುತ್ತಾರೆಯೋ ಅವರು ವಿಜ್ಞಾನಜ್ಯೋತೀಯಿಂದ ಕೂಡಿದ ಶ್ರೀಲಲಿತಾಪರಮೇಶ್ವರಿಯನ್ನು ಹೊಂದಿ ಯಾವಾಗಲೂ ಮನಸ್ತೃಪ್ತಿಯನ್ನು ಪಡೆಯುತ್ತಾರೆ.

ಇಲ್ಲಿಗೆ ಶ್ರೀ ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿ ಹಯಗ್ರೀವಾಗಸ್ತ್ಯ
ಸಂವಾದರೂಪವಾದ ಶ್ರೀ ಲಲಿತೋಪಾಖ್ಯಾನದ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು

## ಶ್ರೀಲಲಿತೋಪಾಖ್ಯಾನಂ ಸಂಪೂರ್ಣಂ

ಮಹಾಕಾಮೇಶವಾಮಾಂಗವಾಸಿನೀ ಲಲಿತಾಂಬಿಕೇ ।
ತ್ವತ್ಪಾದಪಂಕಜದ್ವಂದ್ವೇ ಸ್ಯಾದರ್ಪಿತಮಿದಂಶಿವೇ ॥

ಕರಕೃತಮಪರಾಧಂ ಕ್ಷಂತುಮರ್ಹಂತಿ ಸಂತಃ

ಓಂ ತತ್ಸತ್

152—43. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು

